# ಶ್ರೀಮದ್ವಾಲ್ಮೀಕಿ ರಾಮಾಯಣಮ್

# ಉತ್ತರಕಾಂಡಃ

(ಕನ್ನಡ ಅನುವಾದ ಸಹಿತ)

ಮುನ್ನುಡಿ

**ಡಾ|| ಡಿ. ವಿ. ಗುಂಡಪ್ಪನವರಿಂದ**

ಅನುವಾದಕರು

**ವಿದ್ವಾನ್ ಎನ್. ರಂಗನಾಥಶರ್ಮಾ**

ಪ್ರಕಾಶಕರು

ರಾಮಾಯಣ ಪ್ರಕಾಶನ ಸಮಿತಿ

ನರಸಿಂಹರಾಜ ಕಾಲೊನಿ, ಬೆಂಗಳೂರು-೧೯

# ಬಿನ್ನಹ

ಶ್ರೀ ಸೀತಾರಾಮಚಂದ್ರರ ಅನುಗ್ರಹದಿಂದ ನಮ್ಮ ರಾಮಾಯಣ ಪ್ರಕಾಶನ ಸಮಿತಿಯು ಕೈಗೊಂಡ ಈ ಪ್ರಕಟನಕಾರ್ಯವು ಸಂಪೂರ್ಣ ವಾಯಿತು

ಸುಂದರಕಾಂಡವನ್ನು ಮೊದಲು ಪ್ರಕಟಿಸಿದಾಗ ಇಷ್ಟೊಂದು ಕಾರ್ಯವು ಸುಗಮವಾಗಿ ನೆರವೇರುತ್ತದೆ ಎಂಬ ಭರವಸೆ ಇರಲಿಲ್ಲ ಮುಖ್ಯ ವಾಗಿ ರಾಮಾಯಣ ಭಕ್ತರಾದ ಕನ್ನಡಿಗರ ಅಮೂಲ್ಯವಾದ ಪ್ರೋತ್ಸಾಹ ನಮಗೆ ದೊರಕಿತು. ಅವರ ಬೆಂಬಲವೇ ಈ ಕಾರ್ಯದ ಯಶಸ್ಸಿಗೆ ಕಾರಣ ವಾಗಿದೆ

ಮಾನ್ಯರಾದ ಡಾ|| ಡಿ ವಿ ಗುಂಡಪ್ಪನವರು ಆರಂಭದಿಂದಲೂ ಈ ಪ್ರಕಾಶನಕಾರ್ಯವನ್ನು ಹರಸಿ ಪ್ರತಿಯೊಂದು ಸಂಪುಟಕ್ಕೂ ಪ್ರಶಂಸ ನೀಯವಾದ ಮುನ್ನುಡಿಗಳನ್ನು ಬರದುಕೊಟ್ಟು ಪ್ರೋತ್ಸಾಹಿಸಿದ್ದಾರೆ ಆ ಮುನ್ನುಡಿಗಳನ್ನೇ ಪ್ರತ್ಯೇಕವಾಗಿ ಪ್ರಕಟಿಸಿದರೆ ಒಂದು ಉತ್ತಮವಾದ ಸ್ವತಂತ್ರ ಗ್ರಂಥವೇ ಆದೀತು ಈ ವಾರ್ಧಕ್ಯದಲ್ಲಿಯೂ ತುಂಬ ಶ್ರಮವಹಿಸಿ ಈ ಉತ್ತರಕಾಂಡಕ್ಕೆ ಶ್ರೇಷ್ಠವಾದ ಮುನ್ನುಡಿಯನ್ನು ಅನುಗ್ರಹಿಸಿದ್ದಾರೆ ಅದಕ್ಕಾಗಿ ಸಮಿತಿಯು ಅವರಿಗೆ ತನ್ನ ಕೃತಜ್ಞತಾಪೂರ್ವಕವಾದ ವಂದನೆ ಗಳನ್ನು ಅರ್ಪಿಸುತ್ತದೆ

ವಿದ್ವಾನ್ ಶ್ರೀ ಎನ್. ರಂಗನಾಥಶರ್ಮರು ಈ ರಾಮಾಯಣದ ಎಲ್ಲ ಏಳುಕಾಂಡಗಳಿಗೂ ಕನ್ನಡ ಅನುವಾದವನ್ನೂ ಅನುಬಂಧಗಳನ್ನೂ ಬರೆದು ಕೊಟ್ಟು ಉಪಕರಿಸಿದ್ದಾರೆ. ಇವರ ಅನುವಾದವು ಮೊದಲಿನಿಂದ ಜನಪ್ರಿಯ ವಾದ್ದರಿಂದಲೇ ಎಲ್ಲ ಕಾಂಡಗಳನ್ನೂ ಪ್ರಕಟಿಸಲು ಸಮಿತಿಗೆ ಆಸಕ್ತಿಯುಂಟಾ ಯಿತು ಪ್ರಭಾ ಮುದ್ರಣಾಲಯದ ಶ್ರೀ ಡಿ ಎಸ್ ಕೃಷ್ಣಾಚಾರ್ಯರು ವಿಶೇಷವಾದ ಶ್ರದ್ಧೆಯನ್ನು ವಹಿಸಿ ಈ ಉತ್ತರಕಾಂಡವನ್ನೂ ಇತರ ಕಾಂಡ ಗಳನ್ನೂ ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯವರು ಲವಕುಶರ ರಾಮಾಯಣಗಾನ ಚಿತ್ರದ ಬ್ಲಾಕನ್ನು ಕೃಪೆಯಿಟ್ಟು ಒದಗಿಸಿದ್ದಾರೆ. ಇವರೆಲ್ಲರಿಗೂ ಸಮಿತಿಯು ಕೃತಜ್ಞವಾಗಿದೆ

ಸಮಿತಿಯ ಈ ಪ್ರಕಾಶನ ಕಾರ್ಯಕ್ಕೆ ಆಸ್ತಿಕಮಹಾಶಯರು ಅನೇಕ ವಿಧಗಳಲ್ಲಿ ಪ್ರೋತ್ಸಾಹವನ್ನಿತ್ತು ನೆರವಾಗಿದ್ದಾರೆ ಮಾರಾಟಗಾರರು ಪೂರ್ಣ ಸಹಕಾರವನ್ನು ಕೊಟ್ಟಿದ್ದಾರೆ ಇವರೆಲ್ಲರನ್ನೂ ಅನುಗ್ರಹಿಸಲೆಂದು ಸಮಿತಿಯು ಶ್ರೀರಾಮನನ್ನು ಪ್ರಾರ್ಥಿಸುತ್ತದೆ

ಕಾಗದ ಮುಂತಾದ ಮುದ್ರಣ ಸಾಮಗ್ರಿಗಳ ಬೆಲೆ ಅತ್ಯಧಿಕವಾಗಿ ಏರಿದ ಪ್ರಯುಕ್ತ ಉತ್ತರಕಾಂಡದ ಬೆಲೆಯನ್ನು ಅನಿವಾರ್ಯವಾಗಿ ಹೆಚ್ಚಾಗಿ ಇಡಬೇಕಾಗಿ ಬಂದಿತು ಇದಕ್ಕಾಗಿ ಸಮಿತಿಯು ವಾಚಕರ ಕ್ಷಮೆಯನ್ನು ಯಾಚಿಸುತ್ತದೆ

ಬೆಂಗಳೂರು
30–1–1974

ಡಿ. ಸಿ. ಅನಂತರಾಮಯ್ಯ
ಕಾರ್ಯದರ್ಶಿ



## ರಾಮಾಯಣ ಪ್ರಕಾಶನ ಸಮಿತಿ

### ಸದಸ್ಯರು

ಶ್ರೀಯುತರಾದ

ಎಚ್. ಎಸ್. ಕೃಷ್ಣಸ್ವಾಮಿ
ಎಸ್ ಎನ್ ಮೂರ್ತಿ
ಎಚ್ ಸಿ ನಂಜುಂಡಭಟ್ಟ
ಬಿ ಕೆ ಅನಂತರಾಮಯ್ಯ
ಟಿ ಆರ್ ಶಾಮಣ್ಣ
ಎಚ್ ವಿ ಅಪ್ರಮೇಯ
ಕೆ ಸಿ ಎಸ್ ರಾಮನ್
ಎನ್ ರಂಗನಾಥಶರ್ಮಾ
ಡಿ. ಸಿ. ಅನಂತರಾಮಯ್ಯ (ಕಾರ್ಯದರ್ಶಿ)

# ಮುನ್ನುಡಿ

ಶ್ರೀ ಸೀತಾರಾಮ ಭಗವಂತನ ಕೃಪೆಯಿಂದ ಸನ್ಮಿತ್ರರಾದ ಶ್ರೀಮಾನ್ ಡಿ. ಸಿ ಅನಂತರಾಮಯ್ಯನವರೂ ಅವರ ಸ್ನೇಹಿತರೂ ಶ್ರೀಮದ್ರಾಮಾಯಣ ಪ್ರಕಾಶನ ಸಮಿತಿಯ ಮೂಲಕ ಪ್ರಾರಂಭಮಾಡಿದ ಮಹಾಕಾರ್ಯವು ಈಗ ನಾಂಗವಾಗಿ ನೆರವೇರಿತು ಈ ಉತ್ತರಕಾಂಡದ ಪ್ರಕಟನೆಯಿಂದ ಅದು ಸಾರ್ಥಕವಾಗಿ ಸಮಾಪ್ತಿಪಡೆದಿದೆ. ಇದಕ್ಕಾಗಿ ಸಮಿತಿಯವರಿಗೆ ಕನ್ನಡ ಮಹಾಜನರ ಅಭಿನಂದನೆ, ಕೃತಜ್ಞತೆಗಳು ಸಲ್ಲುತ್ತವೆ. ಭಗವಂತನು ಶ್ರೀಮದ್ರಾಮಾಯಣ ಪ್ರಕಾಶನ ಸಮಿತಿಯವರಿಗೆ ಆಯುರಾರೋಗ್ಯ ಐಶ್ವರ್ಯಾದಿ ಸಕಲ ಶುಭಗಳನ್ನೂ ಅನುಗ್ರಹಿಸಲಿ

ವಿದ್ವನ್ಮಿತ್ರರಾದ ಶ್ರೀ ರಂಗನಾಥ ಶರ್ಮಾರವರ ಉಪಕಾರವನ್ನು ಇಲ್ಲಿ ಸ್ಮರಿಸುವುದು ಕರ್ತವ್ಯವಾಗಿದೆ ಬೇರೆ ಸಂದರ್ಭವೊಂದು ನಡೆಯದಿದ್ದರೆ, ನಮ್ಮ ಸಂತೋಷವನ್ನೂ ಕೃತಜ್ಞತೆಯನ್ನೂ ಅರ್ಪಿಸುವುದರಲ್ಲಿ ಗಂಟಲು ಕಟ್ಟುತ್ತಿರಲಿಲ್ಲ ಅವರಿಗೆ ಈಚೆಗೆ ಉಂಟಾಗಿರುವ ನಷ್ಟ ಬಹು ದೊಡ್ಡದು ಅವರ ಪತ್ನಿಯವರು ವಾಸ್ತವವಾಗಿ ಈ ಸಾರಸ್ವತ ಕಾರ್ಯದಲ್ಲಿ ಅವರಿಗೆ ನೆರವಾಗಿ ಸಹಧರ್ಮಿಣಿ ಎಂಬ ವಿಶೇಷಣವನ್ನು ಸಾರ್ಥಕಮಾಡುವವರಾಗಿದ್ದ ರೆಂಬುದನ್ನು ನಾನು ವೈಯಕ್ತಿಕವಾಗಿ ಬಲ್ಲೆ ದೈವವು ಇಂಥ ವಿದ್ವಾಂಸರನ್ನೂ ಪರಿಶುದ್ಧ ಚರಿತ್ರರನ್ನೂ ಕೂಡ ಬಿಟ್ಟಿಲ್ಲವಲ್ಲ—ಎಂಬುದು ನನ್ನ ಕೊರತೆ

ಆದರೆ, ದೈವವು ಯಾರನ್ನು ಬಿಟ್ಟಿದೆ? ಶ್ರೀರಾಮನನ್ನೂ ಶ್ರೀಕೃಷ್ಣ ನನ್ನೂ ಸಹ ಅದು ಪರೀಕ್ಷಿಸದೆ ಬಿಟ್ಟಿಲ್ಲ ಶ್ರೀರಾಮನಿಗೆ ಎರಡು ಸಲ ವಿರಹಪ್ರಾಪ್ತಿಯಾದದ್ದೂ, ಇತರ ಕಷ್ಟಗಳು ಒದಗಿದ್ದೂ ಪ್ರಸಿದ್ಧವಾಗಿವೆ. ಶ್ರೀಕೃಷ್ಣನೂ ಸಹ ರೋಗ ಪೀಡಿತನಾಗಿದ್ದದ್ದು, ಆಂಗಿರಸ ಮಹರ್ಷಿಯು ಆತನನ್ನು ಕಂಡು ಹಿತೋಪದೇಶಮಾಡಿದ್ದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ.

ಹೀಗೆ ಸತ್ತ್ವಪರೀಕ್ಷೆ ಮಾಡುವುದು ದೈವದ ಕಾರ್ಯ

ಶ್ರೀಮಾನ್ ರಂಗನಾಥ ಶರ್ಮಾ ಅವರು ಇಂಥ ನಿಷ್ಠುರ ಪ್ರಸಂಗವನ್ನು ಮನಸ್ಸಿಗೆ ತಂದುಕೊಳ್ಳದೆ ಧೈರ್ಯವನ್ನವಲಂಬಿಸಬೇಕೆಂದು ನನ್ನ ವಿಜ್ಞಾಪನೆ.

# II

ಈಗ ಗ್ರಂಥವಿಚಾರ

ಶ್ರೀಮದ್ರಾಮಾಯಣದ 'ಉತ್ತರಕಾಂಡ'ವೆಂಬುದು ಪ್ರಕ್ಷಿಪ್ತಭಾಗವೆ? ವಾಲ್ಮೀಕಿ ಮಹರ್ಷಿಗಳು ರಚಿಸಿದ್ದಲ್ಲವೆ?—ಈ ಪ್ರಶ್ನೆಯನ್ನು ಎಷ್ಟೋ ಮಂದಿ ಹಾಕಿದ್ದಾರೆ ನಮ್ಮ ಹೈಕೋರ್ಟಿನ ಜಡ್ಜಿಯಾಗಿದ್ದ ಒಬ್ಬ ಸ್ನೇಹಿತರು ಈ ಪ್ರಶ್ನೆಯನ್ನು ಕೇಳಿದರು ಅವರ ಶಂಕೆಗೆ ಕಾರಣವೇನೆಂದು ವಿಚಾರಿಸಲಾಗಿ

"(೧) ಉತ್ತರಕಾಂಡದಲ್ಲಿ ಶ್ರೀರಾಮನು ಶ್ರೀ ಸೀತಾದೇವಿಯ ವಿಷಯದಲ್ಲಿ ಅಷ್ಟು ನಿಷ್ಕರುಣಿಯಾಗಿ ನಡೆದುಕೊಂಡಿದ್ದಾನೆ—ಎಂದು ಹೇಳಿದೆ

(೨) ಅದಲ್ಲದೆ ಯಾವ-ಯಾವ ಕಥೆಗಳೋ ಉತ್ತರಕಾಂಡದಲ್ಲಿ ಸೇರಿಕೊಂಡಿವೆ

(೩) ಗ್ರಂಥದ ಶೈಲಿ ಕೂಡ ವಾಲ್ಮೀಕಿಗಳದಾಗಿಲ್ಲ

—ಈ ಕಾರಣಗಳಿಂದ ಶಂಕೆ" ಎಂದು ಹೇಳಿದರು ಅವರು

ಈ ಮೇಲೆ ಹೇಳಿದ ಸ್ನೇಹಿತರು ಸಂಸ್ಕೃತದ ಮೂಲಗ್ರಂಥವನ್ನು ನೋಡಿದವರಲ್ಲ, ಇಂಗ್ಲಿಷಿನಲ್ಲಿ ಯಾರು-ಯಾರೋ ಬರೆದಿದ್ದ ಟೀಕೆಗಳನ್ನು ಮಾತ್ರ ಓದಿದ್ದವರು ಇದರ ನ್ಯೂನತೆಯನ್ನು ನಾನು ಅವರಿಗೆ ತೋರಿಸಿಕೊಟ್ಟೆ ಆ ಚರ್ಚೆಯ ಮಾತು ಹಾಗಿರಲಿ

# III

(೧) ಶ್ರೀಮದ್ರಾಮಾಯಣದ ಮುಖ್ಯಪಾತ್ರಗಳಲ್ಲಿ ಸೀತಾದೇವಿಯೊಬ್ಬಳಷ್ಟೆ ಶ್ರೀರಾಮನ ತರುವಾಯ ಮುಖ್ಯತೆ ಸಲ್ಲತಕ್ಕದ್ದು ಆಕೆಗೆ ಇದನ್ನು .

ಸೀತಾಯಾಶ್ಚರಿತಂ ಮಹತ್

—ಬಾಲಕಾಂಡ, ೪-೭, ಪು ३೭

[ಮಹತ್ವಪೂರ್ಣವಾದ ಸೀತಾದೇವಿಯ ಚರಿತ್ರೆ]

—ಎಂಬ ವಾಲ್ಮೀಕಿ ವಚನವೇ ಸ್ಪಷ್ಟಪಡಿಸುತ್ತದೆ ಬ್ರಹ್ಮದೇವನು ವಾಲ್ಮೀಕಿಗಳಿಗೆ ಕಥೋಪದೇಶ ಮಾಡಿದ ಸಂದರ್ಭದಲ್ಲಿಯೇ ಸಂಗ್ರಹವಾಗಿ ಹೇಳಿದ್ದಾನೆ

ರಾಮಾಭಿಷೇಕಾಭ್ಯುದಯಂ ಸರ್ವಸ್ಯೈನ್ಯವಿಸರ್ಜನಮ್ |
ಸ್ವರಾಜ್ಯರಂಜನಂ ಚೈವ ವೈದೇಹ್ಯಾಶ್ಚ ವಿಸರ್ಜನಮ್ ||
. ...... ... ... .. .. .. . . . . ... ..
ತಚ್ಚಕಾರೋತ್ತರೇ ಕಾವ್ಯೇ ವಾಲ್ಮೀಕಿರ್ಭಗವಾನೃಷಿಃ ||

—ಬಾಲಕಾಂಡ, ೩–೩೮, ೩೯, ಪುಟ ೩೫

ಸೀತಾದೇವಿಯ ಮಹತ್ವವೇನು ? ಆಕೆಯನ್ನು ದೈವ ಪರೀಕ್ಷಿಸಿದ್ದು, ಆಕೆ ಆ ಪರೀಕ್ಷೆಯಲ್ಲಿ ಉತ್ತೀರ್ಣಳಾದದ್ದು ಆಕೆಯ ವ್ರತನಿಷ್ಠೆ ಮತ್ತು ಧೈರ್ಯ

ಪುನಃ ಬ್ರಹ್ಮದೇವನು ವಾಲ್ಮೀಕಿಗಳಿಗೆ ಆದೇಶ ಕೊಡುವ ಸಂದರ್ಭದಲ್ಲಿ, ಹೀಗೆನ್ನುತ್ತಾನೆ .

ರಾಮಸ್ಯ ಚರಿತಂ ಕೃತ್ಸ್ನಂ . .... . |
. .. ... .. . . ..
ವೈದೇಹ್ಯಾಶ್ಚೈವ ಯದ್ವೃತ್ತಂ ಪ್ರಕಾಶಂ ಯದಿ ವಾ ರಹಃ

—ಬಾಲಕಾಂಡ, ೨–೩೨, ೩೪, ಪುಟ ೨೬

ಎಂದರೇನಾಯಿತು ? ವಾಲ್ಮೀಕಿಗಳಿಂದ ಉದ್ದಿಷ್ಟವಾದದ್ದು ರಾಮಚರಿತ್ರೆ ಮಾತ್ರವೇ ಅಲ್ಲ, ಸೀತಾಚರಿತ್ರೆ ಸಹ ಸೀತಾಚರಿತ್ರೆ ಎಂದರೆ ಏನು ? ಸೀತಾದೇವಿಯ ಬಾಲ್ಯದ ಅನಂತರದ ಕಥೆಯಲ್ಲಿ ಎರಡು ಘಟ್ಟಗಳು ದೊಡ್ಡವು ಮೊದಲನೆಯದು . ರಾವಣನಿಂದಾದ ಮೋಸ , ಎರಡನೆಯದು . ಜನವಾಕ್ಯ ಕಾರಣದಿಂದ ಶ್ರೀರಾಮಚಂದ್ರನೇ ಮಾಡಬೇಕಾಗಿ ಬಂದ ವಿವಾಸನ ಈ ಎರಡನ್ನು ಬಿಟ್ಟರೆ 'ಚರಿತಂ ಮಹತ್' ಎಂಬುದಕ್ಕೆ ಅರ್ಥವಿಲ್ಲ

ಸೀತೆಯ ಜೀವನ ಅರ್ಥವತ್ತಾಗಿ ನಮ್ಮ ಮೆಚ್ಚುಗೆಗೂ ಅನುಕರಣೆಗೂ ಪಾತ್ರವಾಗತಕ್ಕದ್ದು ಆಕೆಯ ವಿವಾಸನ ಕಥೆಯಿಂದ ಆಕೆಯ ಮಹತ್ವ ತೋರುವುದು ಅಲ್ಲಿ

ರಾವಣನು ಬಲಾತ್ಕಾರದಿಂದ ಆಕೆಯನ್ನು ಸೆರೆಯಲ್ಲಿಟ್ಟ ಆಕೆ ಅದನ್ನು ಸಹಿಸದೆ ಏನು ಮಾಡಿಯಾಳು ? ವಿವಾಸನವಾದರೋ ಆಕೆ ಬೇಡವೆನ್ನಬಹುದಾಗಿದ್ದದ್ದು ಆದರೂ ತನ್ನ ಕರ್ತವ್ಯಸ್ಮರಣೆಯಿಂದ ಆಕೆ ಒಪ್ಪಿಕೊಂಡಳು.

*

ಯಥಾಪವಾದಂ ಪೌರಾಣಾಂ ತಥೈವ ರಘುನಂದನ |
ಪತಿರ್ಹಿ ದೇವತಾ ನಾರ್ಯಾಃ ಪತಿರ್ಬಂಧುಃ ಪತಿರ್ಗುರುಃ ||
ಯಥಾ ಭ್ರಾತೃಷು ವರ್ತೇಥಾಸ್ತಥಾ ಪೌರೇಷು ನಿತ್ಯದಾ |
ಪರಮೋ ಹ್ಯೇಷ ಧರ್ಮಸ್ತೇ ತಸ್ಮಾತ್ ಕೀರ್ತಿರನುತ್ತಮಾ ||
ಯತ್ತು ಪೌರಜನೋ ರಾಜನ್ ಧರ್ಮೇಣ ಸಮವಾಪ್ನುಯಾತ್ |
ಅಹಂ ತು ನಾನುಶೋಚಾಮಿ ಸ್ವಶರೀರಂ ನರರ್ಷಭ ||

—ಉತ್ತರಕಾಂಡ, ಸರ್ಗ ೪೮, ಪುಟ ೩೬೦-೩೬೧

ಇದು ಆಕೆಯ ಮನಃಸ್ಥೈರ್ಯವನ್ನೂ ದೃಢನಿಷ್ಠೆಯನ್ನೂ ತೋರಿಸುತ್ತದೆ ಹೀಗೆ ಇದು ಮಹತ್ತಾದದ್ದು

ದೈವ ನಡೆಸಿದ ಸತ್ತ್ವಪರೀಕ್ಷೆಯಲ್ಲಿ ಸೀತಾದೇವಿಯು ಉತ್ತೀರ್ಣಳಾದಳು ಇದು ಅಪೂರ್ವ ಸಂದರ್ಭ ಶ್ರೀರಾಮಚಂದ್ರನ ಶೌರ್ಯವು ಎಷ್ಟು ಮೆಚ್ಚತಕ್ಕದ್ದೋ ಶ್ರೀ ಸೀತೆಯ ಸಹನೆ ಅದಕ್ಕಿಂತ ಕಡಮೆಯಿಲ್ಲದೆ ನಮ್ಮ ಮನ್ನಣೆಗೆ ಪಾತ್ರವಾಗತಕ್ಕದ್ದು, ಮತ್ತು ಇದು ರಾಮಚರಿತೆಯ ಅಂಗವೆಂಬುದನ್ನು,—ಮುಖ್ಯಾಂಗವೆಂಬುದನ್ನು,—ವಾಲ್ಮೀಕಿಯ ಮೇಲಿನ ಮಾತು ತೋರಿಸುತ್ತದೆ ಹೀಗಿರುವಲ್ಲಿ ಉತ್ತರಕಾಂಡವು ಪ್ರಕ್ಷಿಪ್ತವೆಂದು ಹೇಳುವುದರಿಂದ ಧೃಷ್ಟತನ ವ್ಯಕ್ತವಾಗುತ್ತದೆ

(೨) ರಾಮಾಯಣಕ್ಕೆ ಮುಖ್ಯವಲ್ಲದೆ ಇದ್ದರೂ ರಾಮಾಯಣದ ಪಾತ್ರಗಳಿಗೆ ಸಂಬಂಧಪಟ್ಟ ಕೆಲವು ಉಪಪಾತ್ರಗಳ ವೃತ್ತಾಂತವು ಉತ್ತರಕಾಂಡದಲ್ಲಿದೆ ಈ ಕಥೆಗಳನ್ನು,—ಉದಾಹರಣೆಗಾಗಿ.

ರಾವಣೋತ್ಪತ್ತಿ, ಮೈತ್ರಾವರುಣ ಜನನ, ಲವಕುಶರ ಅವತಾರ, ಶತ್ರುಘ್ನನನ್ನು ಬೇರೆ ರಾಜ್ಯದಲ್ಲಿ ಸ್ಥಾಪಿಸಿದ್ದು, ಲವಣಾಸುರ ಮಥನ, ಇತ್ಯಾದಿ,—

ನಾವು ಗ್ರಂಥದ ಪರಿಶಿಷ್ಟ ಭಾಗ (Appendix) ಎಂದು ಸ್ವೀಕರಿಸಬಹುದೇ ವಿನಾ ವಾಲ್ಮೀಕೀಯವಲ್ಲವೆನ್ನಲು ಕಾರಣ ಸಾಲದು

(೩) ಇನ್ನು ಶೈಲಿಯ ವಿಚಾರ ಉತ್ತರಕಾಂಡದ ಶೈಲಿಯು ರಾಮಾಯಣದ ಇತರ ಕಾಂಡಗಳಿಗಿಂತ ವಿಲಕ್ಷಣವಾದದ್ದೆಂದು ಯಾರಿಗೆ

ತೋರುತ್ತದೆಯೋ ಅವರ ಅನುಭವ ವಿಚಿತ್ರವಾಗಿದ್ದಾಗಿರಬೇಕು ಇದುವರೆಗೆ ವ್ಯಾಖ್ಯಾನ ಬರೆದಿರುವ ಮಹೇಶತೀರ್ಥ, ಗೋವಿಂದರಾಜ, ಮಾಧವಯೋಗಿ —ಮೊದಲಾದವರಿಗೆ ಕಾಣಬಾರದೆಹೋದ ಶೈಲಿಯ ಭೇದ ಕಂಡುಬರ ಬೇಕಾದರೆ, ಅವರ ವೇದನಶಕ್ತಿ, ಗ್ರಹಣಶಕ್ತಿಗಳು ಅತಿಸೂಕ್ಷ್ಮವಾದವಾಗಿರ ಬೇಕು ನನಗೆ ಹಾಗಿಲ್ಲ ಕಥೆಯ ವರ್ಣನೆಯಿರುವ ಭಾಗದಲ್ಲಿ ರಾಮಾಯಣದ ಉತ್ತರಕಾಂಡವು ಮಿಕ್ಕೆಲ್ಲ ಕಾಂಡಗಳಂತೆಯೇ ಇದೆ ಇಲ್ಲಿ, ರಾಮ-ಸೀತೆಯರ ಕಥೆಯಲ್ಲದೆ ಬೇರೆ ವಿಷಯ ಹೇಳುವಲ್ಲಿ, ಕೊಂಚ ವಿಸ್ತಾರ ಕಡಮೆಯಾಗಿದೆ, ಅವಸರ-ಅವಸರವಾಗಿ ಹೇಳಿದೆ ಇದು ಹೊರತು ಶೈಲಿಯ ವ್ಯತ್ಯಾಸ ಕಾಣಬರುವುದಿಲ್ಲ ಎಲ್ಲವೂ ಒಂದೇ ಆಗಿದೆ

ಉಳಿದ ಭಾಗಕ್ಕೂ, ಈ ಉತ್ತರಕಾಂಡಕ್ಕೂ ವಿರೋಧವಾಗಲಿ, ಅಸಾಮಂಜಸ್ಯವಾಗಲಿ ಕಾಣುವುದಿಲ್ಲ

## IV

ಶ್ರೀರಾಮಚಂದ್ರನ ನಿರ್ಮಲ ಕೀರ್ತಿಗೆ ಕಳಂಕವಂಟಿಸುವ ಪ್ರಯತ್ನಕ್ಕೆ ಎರಡನೆಯ ವ್ಯಾಜವಿರುವುದು ಶಂಬೂಕನ ಕಥೆಯಲ್ಲಿ

ಶಂಬೂಕನ ಅಪರಾಧವೇನು? ಸಂಪ್ರದಾಯ ವಿರೋಧ, ಸಮಾಜ ಸಂಕ್ಷೋಭೆ, ವ್ಯವಸ್ಥಾ ಭಂಗ, ಈ ಕಾಲದ ಭಾಷೆಯಲ್ಲಿ ಕ್ರಾಂತಿ (Revolution) ಒಬ್ಬ ಪ್ರಜೆ ತನಗೆ ಅಧಿಕಾರವಿಲ್ಲದ ಕಾರ್ಯಕ್ಕೆ ಕೈಯಿಟ್ಟ ತಪಸ್ಸಿಗೆ ಅರ್ಹನಲ್ಲದವನು ತಪಸ್ಸು ಮಾಡಹೊರಟ

ಅಬ್ರಾಹ್ಮಣಸ್ತದಾ ರಾಜನ್ನ ತಪಸ್ವೀ ಕಥಂಚನ

—ಉತ್ತರಕಾಂಡ, ಸರ್ಗ ೭೪, ಪುಟ ೪೭೯

ಅದರಿಂದ ಆಗಿನ ಸಮಾಜ ಅಲುಗಿತು, ಒಬ್ಬ ಬ್ರಾಹ್ಮಣನ ಮಗ ತೀರಿ ಕೊಂಡ ಆದುದರಿಂದ ಶ್ರೀರಾಮನು ಆ ಅಕ್ರಮಕ್ಕೆ ದಂಡನೆ ಮಾಡಬೇಕಾ ದದ್ದು ವಿಹಿತವಾಯಿತು ಇದೇನು ಸಂತೋಷದ ಕೆಲಸವಲ್ಲ ರಾಮನು ಕ್ರೂರಿಯಲ್ಲ, ಕರುಣಾಳು. ಆದರೆ, ಕರ್ತವ್ಯದ ಮುಂದೆ ಅವನ ವೈಯಕ್ತಿಕ ಹೃದಯಾವೇದನೆ ಕೆಲಸಮಾಡತಕ್ಕದ್ದಲ್ಲ ಶ್ರೀರಾಮನು ತನಗೆ ಇಷ್ಟವಿಲ್ಲ ದಿದ್ದರೂ ಕರ್ತವ್ಯವಾದದ್ದನ್ನು ಮಾಡಬೇಕಾಯಿತೆಂಬುದು ಭವಭೂತಿಯ ಈ ಕೆಳಗಿನ ರಾಮವಾಕ್ಯದಿಂದ ನಮಗೆ ಹೃದಯವೇಧಕವಾಗುವಂತೆ ಇದೆ:

ಹೇ! ಹಸ್ತ ದಕ್ಷಿಣ ಮೃತಸ್ಯ ಶಿಶೋರ್ದ್ವಿಜಸ್ಯ
ಜೀವಾತವೇ ವಿಸೃಜ ಶೂದ್ರಮುನೌ ಕೃಪಾಣಮ್ ||
ರಾಮಸ್ಯ ಬಾಹುರಸಿ ನಿರ್ಭರಗರ್ಭಖಿನ್ನ
ಸೀತಾವಿವಾಸನಪಟೋಃ ಕರುಣಾ ಕುತಸ್ತೇ ||

—ಉತ್ತರರಾಮಚರಿತೆ, II-೯

[ಎಲೈ ಬಾಹುವೇ! ಬ್ರಾಹ್ಮಣಸುತನನ್ನು ಪುನಃ ಬದುಕಿಸುವುದಕ್ಕಾಗಿ ಶೂದ್ರಮುನಿಯನ್ನು ಹೊಡೆ ರಾಮನ ತೋಳಲ್ಲವೇ ನೀನು? ರಾಮನಾದರೋ ಗರ್ಭಭಾರದಿಂದ ನೊಂದಿರುವ ಸೀತೆಯನ್ನು ಕಾಡಿಗೆ ಕಳಿಸಿದನಲ್ಲವೇ? ಅಂಥವನಿಗೆ ಕರುಣೆಯುಂಟೆ? ನಿನಗೆಲ್ಲಿಯದು ಕರುಣೆ!]

ಶ್ರೀರಾಮಚಂದ್ರನು ಕರುಣಿಯೂ ಹೌದು, ನಿಷ್ಕರುಣಿಯೂ ಹೌದು, ಸಂದರ್ಭಕ್ಕೆ ತಕ್ಕ ನ್ಯಾಯವಾಗುವಂತೆ, ಅದಕ್ಕ ಸಂಬಂಧಪಟ್ಟವರಿಗೆ ಹಿತವಾಗುವಂತೆ ಮೂವತ್ತು ವರ್ಷದವನಿಗೆ ಸಲ್ಲತಕ್ಕದ್ದು ಮೂರು ವರ್ಷದವನಿಗೆ ಸಲ್ಲತಕ್ಕದ್ದಲ್ಲ, ಮೂರು ವರ್ಷದವನಿಗೆ ಪ್ರಯೋಜಕವಾಗತಕ್ಕದು ಮೂವತ್ತು ವರ್ಷದವನಿಗಲ್ಲ ಹೀಗೆ ವಿವೇಚಿಸುತ್ತಾನೆ ಧರ್ಮಿಷ್ಠ.

ವಜ್ರಾದಪಿ ಕಠೋರಾಣಿ
ಮೃದೂನಿ ಕುಸುಮಾದಪಿ
ಲೋಕೋತ್ತರಾಣಾಂ ಚೇತಾಂಸಿ
ಕೋ ಹಿ ವಿಜ್ಞಾತುಮರ್ಹತಿ ||

ಇದು ಶ್ರೀರಾಮಚಂದ್ರನ ತತ್ತ್ವ

ಮೃದುವೋ ಕಟುವೋ ಹಿತ ಮುಖ್ಯ, ನ್ಯಾಯ ಮುಖ್ಯ

ಮೇಲೆ ಹೇಳಿದ ಶಂಬೂಕವೃತ್ತಾಂತಕ್ಕೆ ಸಂಬಂಧಪಟ್ಟ ಶಾಸ್ತ್ರವಾಕ್ಯವು ತ್ರೇತಾಯುಗಕ್ಕೆ ಅನ್ವಯಿಸತಕ್ಕದ್ದು

ಅಬ್ರಾಹ್ಮಣಸ್ತದಾ ರಾಜನ್ನ ತಪಸ್ವೀ ಕಥಂಚನ

—ಉತ್ತರಕಾಂಡ, ಸರ್ಗ ೭೪, ಪುಟ ೪೭೯

ಇದರ ತತ್ತ್ವ ಸರಿಯಾದದ್ದೇ?—ಎಂಬುದು ನಾವು ಚರ್ಚಿಸಬೇಕಾದ

ವಿಷಯುವಲ್ಲ ಪ್ರಜಾಜನ ಈ ವಿಧಿಯನ್ನಂಗೀಕರಿಸಿದ್ದರು ಎಂಬುದಷ್ಟೇ ನಮಗೆ ಇಲ್ಲಿ ಪ್ರಯುಕ್ತವಾದದ್ದು ಶ್ರೀರಾಮನು ಆ ಮೃತಶಿಶುವಿನ ತಂದೆಯ ಆರ್ತನಾದವನ್ನು ಕೇಳಿದ

ರಾಮಸ್ಯ ದುಷ್ಕೃತಂ ಕಿಂಚಿನ್ಮಹದಸ್ತಿ ನ ಸಂಶಯಃ

—ಉತ್ತರಕಾಂಡ, ಸರ್ಗ ೭೩, ಪುಟ ೪೭೫

ಏನು ಮಾಡಿದ ? ಮಂತ್ರಿಗಳ ಮತ್ತು ಋಷಿಗಳ ಉಪದೇಶವೇನೆಂದು ಕೇಳಿದ ಆಗ ಅಲ್ಲಿದ್ದ ಎಂಟು ಮಂದಿ ಋಷಿಗಳ ಪರವಾಗಿ ನಾರದರು "ಕೃತಯುಗದ ಧರ್ಮವು ತ್ರೇತಾಯುಗಕ್ಕೆ ಅನ್ವಯಿಸದು ತ್ರೇತಾಯುಗದಲ್ಲಿ ಬ್ರಾಹ್ಮಣ ನೊಬ್ಬನಿಗೇ ತಪಸ್ಸಿಗೆ ಅಧಿಕಾರ ಅಬ್ರಾಹ್ಮಣನೊಬ್ಬನು ನಿನ್ನ ರಾಜ್ಯದಲ್ಲಿ ತಪಸ್ಸು ಮಾಡುತ್ತಿದ್ದಾನೆಂದು ತೋರುತ್ತದೆ ಅದೇ ಈ ಬ್ರಾಹ್ಮಣ ಬಾಲಕನ ಮರಣಕ್ಕೆ ಕಾರಣ ಇದು ಎಲ್ಲಿ ನಡೆದಿದೆಯೆಂದು ನೀನು ಕಂಡುಹಿಡಿದು, ಆ ಅನಧಿಕಾರಿಯಾದ ತಪಸ್ವಿಯನ್ನು ಶಿಕ್ಷಿಸು ಆಗ ಆ ಬ್ರಾಹ್ಮಣ ಬಾಲಕನು ಮತ್ತೆ ಜೀವಿಸುವನು"—ಎಂದು ಹೇಳಿದರು

ಇದರಿಂದ ಸ್ಪಷ್ಟಪಡುತ್ತದೆ, ರಾಮನು ಸ್ವತಂತ್ರಿಸಿ ನಡೆಯಲಿಲ್ಲ ವೆಂಬುದು ನಾರದರು ಹೇಳಿದ ವಿಧಿ ಸರಿಯಾದದ್ದ ? ಶೂದ್ರನಿಂದ ಯಾರಿಗಾದರೂ ಕೇಡಾಯಿತೆ ? ಶಂಬೂಕನು ನಿರಪರಾಧಿಯಲ್ಲವೆ ?—ಇತ್ಯಾದಿ ಪ್ರಶ್ನೆಗಳನ್ನು ವಿಚಾರಿಸುವುದು ರಾಮನಿಗೆ ಕರ್ತವ್ಯವಲ್ಲ ಆ ರಾಜ್ಯದ ಪ್ರಜೆಗಳು, ಅವರಲ್ಲಿ ವಿದ್ಯೋತ್ತಮರು ಸಹ, ಆ ವಿಧಿಯನ್ನು ಒಪ್ಪಿಕೊಂಡಿದ್ದರು ಅದರಿಂದ ಅದರ ಪಾಲನೆ ಶ್ರೀರಾಮನಿಗೆ ಕರ್ತವ್ಯ ವಾಯಿತು.

## V

ಹೀಗೆ ಶ್ರೀ ಸೀತಾ ವಿವಾಸನ ವಿಷಯದಲ್ಲಿಯೂ, ಶಂಬೂಕ ವಧೆಯ ವಿಷಯದಲ್ಲಿಯೂ ಶ್ರೀರಾಮನು ಅನುಸರಿಸಿದ್ದು ಪ್ರಜಾಭಿಪ್ರಾಯವನ್ನು ಅದು ಡೆಮಾಕ್ರೆಸಿ (Democracy)—ಪ್ರಜಾಪ್ರಭುತ್ವ

ಇದನ್ನು ನಾವು ಗಮನಿಸಬೇಕು ಗ್ರೀಸ್ ದೇಶದಲ್ಲಿ ಪ್ರಜಾಪ್ರಭುತ್ವವು ಸಾಕ್ರಟೀಸ್ (Socrates) ತತ್ತ್ವಜ್ಞನನ್ನು ನುಂಗಿತು ಅದಕ್ಕಿಂತ ಎಷ್ಟೋ

ಸಹಸ್ರ ವರ್ಷಗಳ ಹಿಂದೆ ಅಯೋಧ್ಯೆಯಲ್ಲಿ ಪ್ರಜಾರಾಜ್ಯವು ಶ್ರೀ ಸೀತಾದೇವಿಯನ್ನು ಗಡೀಪಾರು ಮಾಡಿಸಿತು , ಶಂಬೂಕನಿಗೆ ಮೃತ್ಯುವನ್ನು ತಂದಿತು

ಅಲ್ಲಿಂದೀಚೆಗೆ ನಮ್ಮ ದೇಶದಲ್ಲಿ ಡೆಮಾಕ್ರೆಸಿ ಪುನಃ ಪ್ರಬಲಿಸುತ್ತಿದೆ ಆದಕಾರಣ ಸತ್ತ್ವಾಭಿಮಾನಿಗಳು ಜಾಗ್ರತೆಯಿಂದಿರಬೇಕಾದದ್ದು

* * *

ಶ್ರೀಮದುತ್ತರಕಾಂಡವು ಹಿಂದಿನ ಕಾಂಡಗಳಂತೆಯೇ ಓದತಕ್ಕದ್ದಾಗಿದೆ. ಎಲ್ಲಿ ನೋಡಿದರೂ ವಾಲ್ಮೀಕಿಗಳ ಮಹೋದಾರವಾದ ಕವಿತ್ವಸನ್ನಿವೇಶಗಳು ಮರ್ಮಭೇದಕವಾದವು ಮಾತುಗಳು ಅರ್ಥವತ್ತಾದವು , ಶಬ್ದಗಳು ಶ್ರವಣ ಮೋಹಕವಾದವು. ಓದಿ ರಸವನ್ನು ಸವಿಯಬೇಕು , ಮಾತುಗಳಿಂದ ಹೇಳಲಾಗುವುದಿಲ್ಲ ಇಲ್ಲಿ ಸ್ವಾನುಭವವೇ ಪ್ರಮಾಣ.

ಸ್ವಾನುಭೂತ್ಯೇಕಮಾನಾಯ

—ಎಂಬುದು ಪರಬ್ರಹ್ಮ ವಿಷಯದಲ್ಲಿ ಹೇಳಿದ ಮಾತು. ಬ್ರಹ್ಮಾನಂದವು ಮುಖ್ಯವಾದದ್ದು ಶ್ರೀಮದ್ರಾಮಾಯಣದಲ್ಲಿ

## VI

ಕಾವ್ಯದಲ್ಲಿ ಸ್ವಾರಸ್ಯಸ್ಥಾನಗಳು ಮೂರು , ಹೀಗೆ

ಮೊದಲು ಅಕ್ಷರ ಇದು ಕಿವಿಯನ್ನು ನಲಿಸಿ ಒಲಿಸಿಕೊಳ್ಳುತ್ತದೆ ಈ ಶ್ರವಣಾಕರ್ಷೆಯೇ ಕಾವ್ಯಾನುಭವದಲ್ಲಿ ಮೊದಲನೆಯ ಮೆಟ್ಟಲು

ಅನಂತರ, ಅಕ್ಷರಸಮೂಹವಾದ ಪದವು ಮನಸ್ಸಿಗೆ ರಸದ ರುಚಿಯನ್ನು ಕೊಡುತ್ತದೆ

ಹೀಗೆ ಕಿವಿಯ ಮೇಲಿನ ಹಿಡಿತ ಸ್ಥಿರಪಡುತ್ತದೆ

ಆಮೇಲೆ, ಮೂರನೆಯದಾಗಿ, ಪದಬಂಧವಾದ ವಾಕ್ಯವು ಬುದ್ಧಿಗೆ ಅರ್ಥವನ್ನು ಪೂರ್ಣಮಾಡುತ್ತದೆ , ನಮ್ಮ ಅನುಭವವು ಪೂರ್ತಿಯಾಗುತ್ತದೆ

ಕಿವಿ, ಮನಸ್ಸು, ಬುದ್ಧಿ—ಇವು ಕಾವ್ಯಾನುಭವ ಸ್ಥಾನಗಳು

ಈ ಮರ್ಮವನ್ನು ತಿಳಿದ ಮಹಾನುಭಾವನು, ಯಾರೋ ಪೂರ್ವಿಕನು, ಹೇಳಿದ .

ಕೂಜಂತಂ ರಾಮರಾಮೇತಿ
ಮಧುರಂ ಮಧುರಾಕ್ಷರಮ್ |
ಆರುಹ್ಯ ಕವಿತಾಶಾಖಾಂ
ವಂದೇ ವಾಲ್ಮೀಕಿ ಕೋಕಿಲಮ್ ||

ಹೀಗೆ ಅಕ್ಷರದ ಸೊಬಗನ್ನು ನಮ್ಮ ಅನುಭವಕ್ಕೆ ತರುವವರು ವಾಲ್ಮೀಕಿಗಳು ಜಯದೇವ ಮೊದಲಾದ ಕವಿಗಳು ಪದದ ಮತ್ತು ವಾಕ್ಯದ ಸೌಭಾಗ್ಯವನ್ನು ತೋರಿಸಿದ್ದಾರೆ, ವಾಲ್ಮೀಕಿಗಳಂತೆ ಪ್ರತ್ಯಕ್ಷರ ಸೌಭಾಗ್ಯವನ್ನು,—ಅದರ ಕಾಂತಿಯನ್ನು, ವೀರ್ಯವನ್ನು, ನಿದರ್ಶನಪಡಿಸಿರುವ ಕವಿಗಳು ವಿರಳ ಅವರ ಅಕ್ಷರಗಳು, ಮಧುರವಾಗಿ, ತೇಜೋವಂತವಾಗಿ, ಕೋಮಲವಾಗಿ, ಇರುವುದರಿಂದ ರಾಮಾಯಣವು ಎಲ್ಲೆಲ್ಲಿಯೂ ಸುಂದರವಾಗಿದೆ ರಾಮಾಯಣದ ಮುಖ್ಯಗುಣ ಕೋಮಲತೆ

* * *

ನನ್ನ ಪೂಜ್ಯ ಸ್ನೇಹಿತರಾದ ವಿದ್ವಾನ್ ಶ್ರೀ ಎನ್ ರಂಗನಾಥಶರ್ಮಾ ಅವರ ಕನ್ನಡ ಅನುವಾದದ ವಿಷಯವಾಗಿ ಒಂದು ಮಾತನ್ನು ವಿಶೇಷವಾಗಿ ಹೇಳಲು ಇದು ಅವಕಾಶ ಅವರ ಅನುವಾದವು ಸ್ವತಂತ್ರ ರಚನೆಯೋ—ಎಂಬಷ್ಟು ಮನೋಹರವಾಗಿದೆ ಕನ್ನಡದ ಭಾಷಾಮರ್ಯಾದೆಯನ್ನು ಎಲ್ಲೆಲ್ಲಿಯೂ ಪಾಲಿಸಿದ್ದಾರೆ ಎಷ್ಟೋ ಮಂದಿ ಸಂಸ್ಕೃತ ಬಲ್ಲವರಿಗೂ ಇವರ ಅನುವಾದವು ಉಪಕಾರಕವಾದೀತು ನಮ್ಮ ಸ್ಕೂಲು-ಕಾಲೇಜುಗಳಲ್ಲಿ ಯಾವ-ಯಾವುದೋ ಅಸಂಬದ್ಧ ಲೇಖನಗಳನ್ನು ಪಠ್ಯಪುಸ್ತಕಗಳನ್ನಾಗಿಡುತ್ತಿದ್ದಾರೆ ಅವುಗಳಿಗೆ ಬದಲಾಗಿ ಈ ಕನ್ನಡ ರಾಮಾಯಣದ ಯಾವುದಾದರೂ ಒಂದು ಭಾಗವನ್ನು ಪಠ್ಯಪುಸ್ತಕವನ್ನಾಗಿ ನಿಯಮಿಸಿದರೆ, ಈ ವ್ಯಾಜದಿಂದಲಾದರೂ ದೇಶದ ಚರಿತ್ರೆ, ಭಾಷೆ ಎರಡನ್ನೂ ನಮ್ಮ ಯುವಕರಿಗೆ ಪರಿಚಯಮಾಡಿಸಿದಂತಾಗುವುದು ಈ ರಾಮಾಯಣದ ಕನ್ನಡದ ವಿಷಯದಲ್ಲಿ ನಾನು ತುಂಬ ಹೆಮ್ಮೆಪಟ್ಟುಕೊಂಡಿದ್ದೇನೆ ನನ್ನಂತೆ ಗ್ರಂಥವನ್ನೋದಿದವರು ಅದನ್ನು ಒಪ್ಪಿಯಾರು—ಎಂಬ ನಂಬಿಕೆ ನನಗೆ ದೃಢವಾಗಿದೆ.

ಕನ್ನಡ ಮಹಾಜನರು ಶ್ರೀಮದ್ರಾಮಾಯಣವನ್ನು ಆಮೂಲಾಗ್ರವಾಗಿ ಪಾರಾಯಣಮಾಡಿ ಸಂತೋಷಿಸಲೆಂದೂ, ಶ್ರೀ ಸೀತಾರಾಮಾನುಗ್ರಹದಿಂದ ಅವರು ಯಶಸ್ವಿಗಳಾಗಿ ಶ್ರೇಯಸ್ಸಂಪನ್ನರಾಗಲೆಂದೂ ಆಶಿಸುತ್ತೇನೆ

ಇಂತು ಸರ್ವಂ ಶಿವಂ

ಬೆಂಗಳೂರು
೧೪–೧–೧೯೭೪
(ಮಕರಸಂಕ್ರಾಂತಿ)

ಡಿ. ವಿ. ಗುಂಡಪ್ಪ

# ನಿವೇದನೆ

ಶ್ರೀ ಸೀತಾ ಲಕ್ಷ್ಮಣ ಭರತ ಶತ್ರುಘ್ನ ಹನೂಮತ್ಸಮೇತನಾದ ಶ್ರೀರಾಮಚಂದ್ರನ ಕೃಪೆಯಿಂದ, ಕೈಗೊಂಡ ಕಾರ್ಯವು ಪೂರ್ಣವಾಗಿ ನೆರವೇರಿತು ವಾಲ್ಮೀಕಿಮಹರ್ಷಿಗಳೂ ಅನುಗ್ರಹದೃಷ್ಟಿಯಿಂದ ವೀಕ್ಷಿಸಿದರು ಆದ್ದರಿಂದಲೇ ಉತ್ತರಕಾಂಡದ ಅನುವಾದಕಾರ್ಯವೂ ಮುಗಿದು ಸಮಗ್ರರಾಮಾಯಣವನ್ನು ವಾಚಕರ ಕೈಯಲ್ಲಿಡುವ ಧನ್ಯತೆ ಪ್ರಾಪ್ತವಾಯಿತು

ಪೂಜ್ಯರಾದ ಡಾ|| ಡಿ ವಿ ಗುಂಡಪ್ಪನವರು ಆರಂಭದಿಂದಲೂ ಈ ಕಾರ್ಯಕ್ಕಾಗಿ ಪ್ರೇರಣೆಯನ್ನಿತ್ತು ಹರಸುತ್ತ ಬಂದಿದ್ದಾರೆ ಪ್ರತಿಯೊಂದು ಕಾಂಡಕ್ಕೂ ಶ್ರೇಷ್ಠವಾದ ಮುನ್ನುಡಿಯನ್ನು ಬರೆದುಕೊಟ್ಟು ಪ್ರೋತ್ಸಾಹಿಸಿದ್ದಾರೆ ಅವರ ಉಪಕಾರವನ್ನು ಸದಾ ಕೃತಜ್ಞತೆಯಿಂದ ನೆನೆಸಿಕೊಳ್ಳುತ್ತಿದ್ದೇನೆ

ರಾಮಾಯಣ ಸಮಿತಿಯ ಸಕಲ ಸದಸ್ಯರೂ ವಿಶೇಷವಾಗಿ ಶ್ರೀ ಡಿ ಸಿ. ಅನಂತರಾಮಯ್ಯನವರೂ ಶ್ರೀ ಎಸ್ ಎನ್ ಮೂರ್ತಿಗಳೂ ಅಭಿಮಾನವಿಟ್ಟು ನೆರವಾಗಿ ಎಲ್ಲ ವಿಧವಾದ ಸೌಕರ್ಯಗಳನ್ನೂ ನನಗೆ ಒದಗಿಸಿಕೊಟ್ಟಿದ್ದಾರೆ ಆ ಮಹನೀಯರೆಲ್ಲರನ್ನೂ ಈ ಸಮಯದಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ

ಪ್ರಭಾ ಮುದ್ರಣಾಲಯದ ಮಾಲಿಕರಾದ ಶ್ರೀ ಡಿ ಎಸ್. ಕೃಷ್ಣಾಚಾರ್ಯರು ಸಮಗ್ರರಾಮಾಯಣವನ್ನೂ ಮುದ್ರಿಸಿಕೊಟ್ಟ ಕೀರ್ತಿಗೂ ಶ್ರೇಯಸ್ಸಿಗೂ ಪಾತ್ರರಾಗಿದ್ದಾರ ಹೆಚ್ಚಿನ ಆದರ ಆಸಕ್ತಿಗಳನ್ನು ವಹಿಸಿ ಈ ಗ್ರಂಥವನ್ನು ಇಷ್ಟು ಸುಂದರವಾಗಿಯೂ ಶುದ್ಧವಾಗಿಯೂ ಅಚ್ಚುಮಾಡಿಕೊಟ್ಟಿರುವ ಅವರಿಗೆ ನನ್ನ ವಂದನೆಗಳು ಸಲ್ಲುತ್ತವೆ

ಎಲ್ಲ ಕಾಂಡಗಳೂ ಪ್ರಕಟವಾದಂತೆ ಓದಿ ಬೆಂಬಲವನ್ನೀಯುತ್ತ ಬಂದವರು ವಾಚಕಮಹನೀಯರು ಅವರೆಲ್ಲರ ಸಹೃದಯತೆ ಪ್ರೋತ್ಸಾಹಗಳಿಂದ ನನ್ನ ಲೇಖನಿಗೆ ಚೈತನ್ಯ ಬಂದಿತು ಶ್ರೀರಾಮಭಕ್ತರಾದ ಅವರೆಲ್ಲರಿಗೂ ನನ್ನ ಅಭಿನಂದನೆಗಳು ಸಲ್ಲುತ್ತವೆ

ಉತ್ತರಕಾಂಡದ ಅನುಬಂಧದಲ್ಲಿ ವಾಲ್ಮೀಕಿಮುನಿಗಳ ಕಾವ್ಯರಚನಾ ಪ್ರತಿಭೆ, ಪಾತ್ರರಚನಾ ವಿಧಾನ, ವೃತ್ತಾಂತಗಳ ಕಾಲನಿರ್ಣಯ, ಪ್ರಕ್ಷೇಪ– ಮುಂತಾದ ವಿಷಯಗಳನ್ನು ಕುರಿತು ಒಂದು ಸಮೀಕ್ಷೆಯನ್ನು ನಡೆಸಬೇಕೆಂಬ ಉದ್ದೇಶವಿತ್ತು ಆದರೆ ಸಾಂಸಾರಿಕವಾದ ಒಂದು ಶೋಕಪ್ರಸಂಗವು ಒದಗಿ, ಮನಸ್ಸು ಅತ್ಯಂತ ವ್ಯಾಕುಲಗೊಂಡು ವಿಕ್ಷಿಪ್ತವಾಯಿತು ಸಮೀಕ್ಷೆಗೆ ಸಾವಧಾನತೆ ಉಳಿಯಲಿಲ್ಲ ಇದಕ್ಕಾಗಿ ಎಲ್ಲರ ಕ್ಷಮೆಯನ್ನೂ ಬೇಡುತ್ತೇನೆ

ಯದಾ ಕಾಂಡಂ ಷಷ್ಠಾತ್ ಪರಮಿನಕುಲೋತ್ತಂಸಚರಿತೇ
ಮಹಾಪ್ರಸ್ಥಾನಾಂತಂ ಜನಕತನಯಾಂತರ್ಧಿಸಹಿತಮ್ |
ಮಯಾ ಕಾರ್ಣಾಟೀನ ವ್ಯರಚಿ ವಚಸಾ ಪ್ರಾಪಿ ಸಹಸಾ
ತದಾಽಕಾಂಡೇ ಪತ್ನೀನಿಧನಭವಶೋಕೋಽನಲಸಮಃ ||

ಫಲಂ ಕಿಂ ಪ್ರಾಪ್ತಂ ಮೇ ವಿರಹಯಿತುರಂತೇ ದಯಿತಯಾ
ವಿಭುಂ ತಂ ವೈದೇಹ್ಯಾ ಧವಲತಮಕೀರ್ತ್ಯೇವ ಪರಯಾ |
ನ ನೈವಂ, ಮತ್ಸ್ವಾಮೀ ನಿರವಧಿಕೃಪಾವಾರಿಧಿರತಃ
ಪ್ರಸಾದಃ ಕೋಽಪ್ಯೇಷೋಽಸ್ಫುರಿತಮಹಿಮಾ ಮುಗ್ಧಮನಸಾಮ್ ||

ಯಾ ಲಬ್ಧಾ ಭೂಮಿಜಾತಾರಮಣಕರುಣಯಾ ಸಂಸ್ಕೃತಾ ಪಾಣಿನೀತಾ *
ಯಾ ಭಾವಸ್ನಿಗ್ಧರಮ್ಯೋಚಿತವಿಶದಪದಸ್ರಗ್ಧರಾ ಸಾಧುವೃತ್ತಾ |
ಯಾಽಜಸ್ರಂ ಶ್ರೋತ್ರಪೇಯಾಮೃತರಸನಿಚಿತಂ
ರಾಮನಾಮಾನ್ವಜಾಪೀತ್
ತಾಂ ವಾಣೀಂ ತಾಂ ಚ ಪತ್ನೀಂ ಹರಿಪದಯುಗಲೇ
ನಿಕ್ಷಿಪನ್ನಿರ್ವೃತೋಽಸ್ಮಿ ||

* ಪಾಣಿನಿನಾ ಇತಾ, ಪಾಣಿನಾ ನೀತಾ ಚ

ಬೆಂಗಳೂರು
೩೦–೧–೧೯೭೪

ಎನ್. ರಂಗನಾಥಶರ್ಮಾ

# ಅನುಕ್ರಮಣಿಕೆ





ಗಾಯೇಥಾಂ ಮಧುರಂ ಗೇಯಂ ತಂತ್ರೀಲಯಸಮನ್ವಿತಮ್ (ಉ ಕಾಂ ೯೩-೧೮)

|| ಶ್ರೀಃ ||

# || ಶ್ರೀಮದ್ವಾಲ್ಮೀಕಿರಾಮಾಯಣಮ್ ||

## ಉತ್ತರಕಾಂಡಃ

### ಪ್ರಥಮಃ ಸರ್ಗಃ

ರಾಮಪ್ರಶ್ನಃ

ಪ್ರಾಪ್ತರಾಜ್ಯಸ್ಯ ರಾಮಸ್ಯ ರಾಕ್ಷಸಾನಾಂ ವಧೇ ಕೃತೇ ।
ಆಜಗ್ಮುರ್ಮುನಯಃ ಸರ್ವೇ ರಾಘವಂ ಪ್ರತಿನಂದಿತುಮ್ ॥ ೧

ಕೌಶಿಕೋಽಥ ಯವಕ್ರೀತೋ ಗಾರ್ಗ್ಯೋ ಗಾಲವ ಏವ ಚ ।
ಕಣ್ವೋ ಮೇಧಾತಿಥೇಃ ಪುತ್ರಃ ಪೂರ್ವಸ್ಯಾಂ ದಿಶಿ ಯೇ ಶ್ರಿತಾಃ ॥

ಸ್ವಸ್ತ್ಯಾತ್ರೇಯೋಽಥ ಭಗವಾನ್ನಮುಚಿಃ ಪ್ರಮುಚಿಸ್ತಥಾ ।
ಅಗಸ್ತ್ಯೋಽತ್ರಿಶ್ಚ ಭಗವಾನ್ ಸುಮುಖೋ ವಿಮುಖಸ್ತಥಾ ॥ ೩

## ಉತ್ತರಕಾಂಡ

### ಸರ್ಗ ೧

ವಿಜಯಶಾಲಿಯಾದ ಶ್ರೀರಾಮನನ್ನು ಅಭಿನಂದಿಸುವುದಕ್ಕಾಗಿ ಋಷಿಗಳು ಅಯೋಧ್ಯೆಗೆ ಆಗಮಿಸುವುದು ಇಂದ್ರಜಿತು ಹತನಾದನೆಂದು ಋಷಿಗಳ ವಿಸ್ಮಯ ಅದರಿಂದ ಕುತೂಹಲಗೊಂಡ ಶ್ರೀರಾಮನ ಪ್ರಶ್ನೆ

ಈ ಪ್ರಕಾರದಲ್ಲಿ ಶ್ರೀರಾಮಚಂದ್ರನು ರಾವಣಾದಿ ರಾಕ್ಷಸರನ್ನು ಸಂಹರಿಸಿ, ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾಗಲು, ಆತನನ್ನು ಅಭಿನಂದಿಸುವುದಕ್ಕಾಗಿ ಸಮಸ್ತ ಋಷಿಗಳೂ ಆಗಮಿಸಿದರು (೧) ಪೂರ್ವದಿಕ್ಕಿನಲ್ಲಿ ವಾಸಿಸುತ್ತಿದ್ದ ಕೌಶಿಕ, ಯವಕ್ರೀತ, ಗಾರ್ಗ್ಯ, ಗಾಲವ ಮತ್ತು ಮೇಧಾತಿಥಿ ಪುತ್ರರಾದ ಕಣ್ವ—ಎಂಬ ಮುನಿಗಳು ಆಗಮಿಸಿದರು (೨) ದಕ್ಷಿಣದಿಕ್ಕಿನಲ್ಲಿ ನೆಲೆಸಿದ್ದ ಆತ್ರೇಯ, ನಮುಚಿ, ಪ್ರಮುಚಿ, ಅತ್ರಿ, ಸುಮುಖ ಮತ್ತು ವಿಮುಖ

ಆಜಗ್ಮುಸ್ತೇ ಸಹಾಗಸ್ತ್ಯಾ ಯೇ ಸ್ಥಿತಾ ದಕ್ಷಿಣಾಂ ದಿಶಮ್ ।
ನೃಷದ್ಗುಃ ಕವಷೋ ಧೌಮ್ಯೋ ರೌದ್ರೇಯಶ್ಚ ಮಹಾನೃಷಿಃ ॥ ೪

ತೇಽಪ್ಯಾಜಗ್ಮುಃ ಸಶಿಷ್ಯಾ ವೈ ಯೇ ಶ್ರಿತಾಃ ಪಶ್ಚಿಮಾಂ ದಿಶಮ್ ।
ವಸಿಷ್ಠಃ ಕಶ್ಯಪೋಽಥಾತ್ರಿರ್ವಿಶ್ವಾಮಿತ್ರಃ ಸಗೌತಮಃ ॥ ೫

ಜಮದಗ್ನಿರ್ಭರದ್ವಾಜಸ್ತೇಽಪಿ ಸಪ್ತರ್ಷಯಸ್ತಥಾ ।
ಉದೀಚ್ಯಾಂ ದಿಶಿ ಸಪ್ತೈತೇ ನಿತ್ಯಮೇವ ನಿವಾಸಿನಃ ॥ ೬

ಸಂಪ್ರಾಪ್ಯ ತೇ ಮಹಾತ್ಮಾನೋ ರಾಘವಸ್ಯ ನಿವೇಶನಮ್ ।
ವಿಷ್ಠಿತಾಃ ಪ್ರತಿಹಾರಾರ್ಥಂ ಹುತಾಶನಸಮಪ್ರಭಾಃ ॥ ೭

ವೇದವೇದಾಂಗವಿದುಷೋ ನಾನಾಶಾಸ್ತ್ರವಿಶಾರದಾಃ ।
ದ್ವಾಃಸ್ಥಂ ಪ್ರೋವಾಚ ಧರ್ಮಾತ್ಮಾ ಹ್ಯಗಸ್ತ್ಯೋ ಮುನಿಸತ್ತಮಃ ॥

ನಿವೇದ್ಯತಾಂ ದಾಶರಥೇರ್ಋಷೀನಸ್ಮಾನ್ ಸಮಾಗತಾನ್ ।
ಪ್ರತೀಹಾರಸ್ತತಸ್ತೂರ್ಣಮಗಸ್ತ್ಯವಚನಾದ್ದ್ರುತಮ್ ॥ ೯

---

ರೆಂಬ ಮುನಿಗಳು ಅಗಸ್ತ್ಯಮಹರ್ಷಿಗಳೊಡನೆ ಬಂದರು ಪಶ್ಚಿಮದಿಕ್ಕಿನಲ್ಲಿದ್ದ ನೃಷದ್ಗು, ಕವಷ, ಧೌಮ್ಯ, ರೌದ್ರೇಯ ಎಂಬವರು ತಮ್ಮ ಶಿಷ್ಯರೊಡನೆ ಪ್ರಾಪ್ತರಾದರು (೩-೪) ಸದಾ ಉತ್ತರದಿಗ್ವಾಸಿಗಳಾದ ವಸಿಷ್ಠ, ಕಶ್ಯಪ, ಅತ್ರಿ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ಭರದ್ವಾಜರೆಂಬ ಸಪ್ತರ್ಷಿಗಳೂ ಅಯೋಧ್ಯೆಗೆ ದಯಮಾಡಿಸಿದರು (೫-೬) ವೇದವೇದಾಂಗಪಾರಂಗತರೂ ಸರ್ವಶಾಸ್ತ್ರವಿಶಾರದರೂ ಅಗ್ನಿಯಂತೆ ತಪೋಮಹಿಮೆಯಿಂದ ಬೆಳಗುತ್ತಿದ್ದ ವರೂ ಆದ ಆ ಮಹಾತ್ಮರು ರಾಘವನ ಅರಮನೆಯ ಮಹಾದ್ವಾರದ ಬಳಿಗೆ ಬಂದು ನಿಂತರು (೭) ಆಗ ಧರ್ಮಾತ್ಮರಾದ ಅಗಸ್ತ್ಯಮಹರ್ಷಿಗಳು ದ್ವಾರ ಪಾಲಕನನ್ನು ನೋಡಿ “ಅಯ್ಯಾ-ದ್ವಾರಪಾಲ, ಋಷಿಗಳಾದ ನಾವು ಆಗಮಿ ಸಿದ್ದೇವೆಂದು ಮಹಾರಾಜನಾದ ದಶರಥಪುತ್ರನಿಗೆ ಅರಿಕೆಮಾಡು” ಎಂದರು ಒಡನೆಯೇ ಆ ಪ್ರತೀಹಾರಿಯು ಶ್ರೀರಾಮನ ಬಳಿಗೆ ತ್ವರೆಯಿಂದ ಧಾವಿಸಿ

ಸಮೀಪಂ ರಾಘವಸ್ಯಾಶು ಪ್ರವಿವೇಶ ಮಹಾತ್ಮನಃ ।
ನಯೇಂಗಿತಜ್ಞಃ ಸದ್ವೃತ್ತೋ ದಕ್ಷೋ ಧೈರ್ಯಸಮನ್ವಿತಃ ॥ ೧೦
ಸ ರಾಮಂ ದೃಶ್ಯ ಸಹಸಾ ಪೂರ್ಣಚಂದ್ರಸಮದ್ಯುತಿಮ್ ।
ಅಗಸ್ತ್ಯಂ ಕಥಯಾಮಾಸ ಸಂಪ್ರಾಪ್ತಮೃಷಿಭಿಃ ಸಹ ॥ ೧೧
ಶ್ರುತ್ವಾ ಪ್ರಾಪ್ತಾನ್ ಮುನೀಂಸ್ತಾಂಸ್ತು ಬಾಲಸೂರ್ಯಸಮಪ್ರಭಾನ್
ಪ್ರತ್ಯುವಾಚ ತತೋ ದ್ವಾಃಸ್ಥಂ ಪ್ರವೇಶಯ ಯಥಾಸುಖಮ್ ॥
ತಾನ್ ಸಂಪ್ರಾಪ್ತಾನ್ ಮುನೀನ್ ದೃಷ್ಟ್ವಾ ಪ್ರತ್ಯುತ್ಥಾಯ ಕೃತಾಂಜಲಿಃ
ಪಾದ್ಯಾರ್ಘ್ಯಾದಿಭಿರಾನರ್ಚ್ಯ ಗಾಂ ನಿವೇದ್ಯ ಚ ಸಾದರಮ್ ॥ ೧೩
ರಾಮೋಽಭಿವಾದ್ಯ ಪ್ರಯತ ಆಸನಾನ್ಯಾದಿದೇಶ ಹ ।
ತೇಷು ಕಾಂಚನಚಿತ್ರೇಷು ಸ್ವಾಸ್ತೀರ್ಣೇಷು ಸುಖೇಷು ಚ ॥ ೧೪
ಕುಶಾಂತರ್ಧಾನದತ್ತೇಷು ಮೃಗಚರ್ಮಯುತೇಷು ಚ ।
ಯಥಾರ್ಹಮುಪವಿಷ್ಟಾಸ್ತೇ ಆಸನೇಷ್ವೃಷಿಪುಂಗವಾಃ ॥ ೧೫

---

ದನು (೮-೯) ಆ ಪ್ರತೀಹಾರಿಯು ನೀವಾನೀತಿಯನ್ನು ಬಲ್ಲವನು, ಇಂಗಿತಜ್ಞ, ಒಳ್ಳೆಯ ನಡತೆಯುಳ್ಳವನು, ಕಾರ್ಯದಕ್ಷ, ಧೈರ್ಯಶಾಲಿ ಆತನು ಪೂರ್ಣಚಂದ್ರನಂತೆ ವಿರಾಜಿಸುತ್ತಿದ್ದ ಶ್ರೀರಾಮನನ್ನು ಕಂಡು 'ಅಗಸ್ತ್ಯಮುನಿಗಳು ಋಷಿಗಳೊಡನೆ ದಯಮಾಡಿಸಿದ್ದಾರೆ' ಎಂದು ನಿವೇದಿಸಿದನು (೧೦-೧೧) ಬಾಲಸೂರ್ಯನಂತೆ ಬೆಳಗುವ ಋಷಿಗಳು ಬಂದಿರುವರೆಂಬುದನ್ನು ಕೇಳಿ ಶ್ರೀರಾಮನು "ಒಳ್ಳೆಯದು, ಅವರನ್ನು ಆದರದಿಂದ ಒಳಗೆ ಕರೆದುಕೊಂಡು ಬಾ" ಎಂದು ತಿಳಿಸಿದನು ಅನಂತರ ಮುನಿಗಳೆಲ್ಲರೂ ಒಳಗೆ ಬಂದರು ಶ್ರೀರಾಮನು ಬದ್ಧಾಂಜಲಿಯಾಗಿ ಎದ್ದು ನಿಂತು ಸ್ವಾಗತಿಸಿದನು (೧೨) ಅನಂತರ ಮುನಿಗಳನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, (ಮಧುಪರ್ಕದ ಅಂಗವಾಗಿ) ಗೋವನ್ನು ಆದರದಿಂದ ಅರ್ಪಿಸಿ, ವಿನಯದಿಂದ ಅಭಿವಾದನೆಯನ್ನು ಮಾಡಿ, ಕುಳಿತುಕೊಳ್ಳಲು ಪೀಠಗಳನ್ನು ಹಾಕಿಸಿದನು ಮೃದುವಾದ ಮೆತ್ತೆಯನ್ನು ಹಾಸಿದ ಸುವರ್ಣಾಲಂಕೃತವಾದ ಆ ಪೀಠಗಳು ಸುಖಕರವಾಗಿದ್ದವು (೧೩-೧೪) ಆ ಪೀಠಗಳ ಮೇಲೆ ದರ್ಭೆಗಳನ್ನೂ ಕೃಷ್ಣಾಜಿನವನ್ನೂ ಹಾಸಲಾಗಿತ್ತು

*

ರಾಮೇಣ ಕುಶಲಂ ಪೃಷ್ಟಾಃ ಸಶಿಷ್ಯಾಃ ಸಪುರೋಗಮಾಃ ।
ಮಹರ್ಷಯೋ ವೇದವಿದೋ ರಾಮಂ ವಚನಮಬ್ರುವನ್ ॥ ೧೬

ಕುಶಲಂ ನೋ ಮಹಾಬಾಹೋ ಸರ್ವತ್ರ ರಘುನಂದನ ।
ತ್ವಾಂ ತು ದಿಷ್ಟ್ಯಾ ಕುಶಲಿನಂ ಪಶ್ಯಾಮೋ ಹತಶಾತ್ರವಮ್ ॥ ೧೭

ದಿಷ್ಟ್ಯಾ ತ್ವಯಾ ಹತೋ ರಾಜನ್ ರಾವಣೋ ಲೋಕರಾವಣಃ ।
ನ ಹಿ ಭಾರಃ ಸ ತೇ ರಾಮ ರಾವಣಃ ಪುತ್ರಪೌತ್ರವಾನ್ ॥ ೧೮

ಸಧನುಸ್ತ್ವಂ ಹಿ ಲೋಕಾಂಸ್ತ್ರೀನ್ ವಿಜಯೇಥಾ ನ ಸಂಶಯಃ ।
ದಿಷ್ಟ್ಯಾ ತ್ವಯಾ ಹತೋ ರಾಮ ರಾವಣೋ ರಾಕ್ಷಸೇಶ್ವರಃ ॥ ೧೯

ದಿಷ್ಟ್ಯಾ ವಿಜಯಿನಂ ತ್ವಾದ್ಯ ಪಶ್ಯಾಮಃ ಸಹ ಸೀತಯಾ ।
ಲಕ್ಷ್ಮಣೇನ ಚ ಧರ್ಮಾತ್ಮನ್ ಭ್ರಾತ್ರಾ ತ್ವದ್ಧಿತಕಾರಿಣಾ ॥ ೨೦

ಮಾತೃಭಿರ್ಭ್ರಾತೃಸಹಿತಂ ಪಶ್ಯಾಮೋಽದ್ಯ ವಯಂ ನೃಪ ।
ದಿಷ್ಟ್ಯಾ ಪ್ರಹಸ್ತೋ ವಿಕಟೋ ವಿರೂಪಾಕ್ಷೋ ಮಹೋದರಃ ॥

---

ಆ ಮುನಿಶ್ರೇಷ್ಠರು ಯಥಾರ್ಹವಾಗಿ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಳ್ಳಲು, ಶ್ರೀರಾಮನು ಆ ಮುನಿಗಳ ಮತ್ತು ಅವರ ಗುರುಶಿಷ್ಯರ ಕುಶಲವನ್ನು ವಿಚಾರಿಸಿದನು ವೇದವಿದರಾದ ಆ ಮಹರ್ಷಿಗಳು ಹೀಗೆಂದರು (೧೫-೧೬) "ಮಹಾಬಾಹು-ರಘುನಂದನ, ನಾವೆಲ್ಲರೂ ಕುಶಲದಿಂದಿದ್ದೇವೆ ಮುಖ್ಯವಾಗಿ ನೀನು ಶತ್ರುಗಳನ್ನು ಸಂಹರಿಸಿ ಕುಶಲದಿಂದ ಬಾಳುವುದನ್ನು ನೋಡುತ್ತಿದ್ದೇವಲ್ಲ, ಇದು ನಮ್ಮ ಭಾಗ್ಯ! (೧೭) ಮಹಾರಾಜ, ಲೋಕರಾವಣನಾಗಿದ್ದ ರಾವಣನನ್ನು ವಧಿಸಿದೆ ಪುತ್ರಪೌತ್ರರಿಂದ ಸಮೇತನಾದ ರಾವಣನನ್ನು ಕೊಲ್ಲುವುದು ನಿನಗೇನೂ ಕಷ್ಟವಾಗಲಿಲ್ಲ ರಾಮ, ನೀನು ಧನುರ್ಧಾರಿಯಾಗಿ ನಿಂತೆಯಾದರೆ ಮೂರುಲೋಕಗಳನ್ನೂ ಜಯಿಸಬಲ್ಲೆ ರಾಕ್ಷಸೇಶ್ವರನಾದ ರಾವಣನನ್ನು ಸಂಹರಿಸಿದ್ದು ಲೋಕದ ಭಾಗ್ಯವೇ ಸರಿ (೧೮-೧೯) ಓ ಧರ್ಮಾತ್ಮ, ಪತ್ನಿಯಾದ ಸೀತೆಯಿಂದಲೂ ನಿನ್ನ ಹಿತವನ್ನು ಕೋರುವ ತಮ್ಮನಾದ ಲಕ್ಷ್ಮಣನಿಂದಲೂ ಸಮೇತನಾಗಿ ದಿಗ್ವಿಜಯ ಮಾಡಿ ಬಂದಿರುವ ನಿನ್ನನ್ನು ನೋಡುತ್ತಿದ್ದೇವಲ್ಲ, ಇದು ನಮ್ಮ ಪುಣ್ಯ (೨೦) ತಾಯಿತಮ್ಮಂದಿರೊಡನೆ ನೀನು ಸುಖವಾಗಿರುವುದನ್ನು, ನರೇಶ್ವರ, ಇಂದು

ಅಕಂಪನಶ್ಚ ದುರ್ಧರ್ಷೋ ನಿಹತಾಸ್ತೇ ನಿಶಾಚರಾಃ ।
ಯಸ್ಯ ಪ್ರಮಾಣಾದ್ವಿಪುಲಂ ಪ್ರಮಾಣಂ ನೇಹ ವಿದ್ಯತೇ ॥ ೨೨

ದಿಷ್ಟ್ಯಾ ತೇ ಸಮರೇ ರಾಮ ಕುಂಭಕರ್ಣೋ ನಿಪಾತಿತಃ ।
ತ್ರಿಶಿರಾಶ್ಚಾತಿಕಾಯಶ್ಚ ದೇವಾಂತಕನರಾಂತಕೌ ॥ ೨೩

ದಿಷ್ಟ್ಯಾ ತೇ ನಿಹತಾ ರಾಮ ಮಹಾವೀರ್ಯಾ ನಿಶಾಚರಾಃ ।
ಕುಂಭಶ್ಚೈವ ನಿಕುಂಭಶ್ಚ ರಾಕ್ಷಸೌ ಭೀಮದರ್ಶನೌ ॥ ೨೪

ದಿಷ್ಟ್ಯಾ ತೌ ನಿಹತೌ ರಾಮ ಕುಂಭಕರ್ಣಸುತೌ ಮೃಧೇ ।
ಯುದ್ಧೋನ್ಮತ್ತಶ್ಚ ಮತ್ತಶ್ಚ ಕಾಲಾಂತಕಯಮೋಪಮೌ ॥ ೨೫

ಯಜ್ಞಕೋಪಶ್ಚ ಬಲವಾನ್ ಧೂಮ್ರಾಕ್ಷೋ ನಾಮ ರಾಕ್ಷಸಃ ।
ಕುರ್ವಂತಃ ಕದನಂ ಘೋರಮೇತೇ ಶಸ್ತ್ರಾಸ್ತ್ರಪಾರಗಾಃ ॥ ೨೬

ಅಂತಕಪ್ರತಿಮೈರ್ಬಾಣೈರ್ದಿಷ್ಟ್ಯಾ ವಿನಿಹತಾಸ್ತ್ವಯಾ ।
ದಿಷ್ಟ್ಯಾ ತ್ವಂ ರಾಕ್ಷಸೇಂದ್ರೇಣ ದ್ವಂದ್ವಯುದ್ಧಮುಪಾಗತಃ ॥ ೨೭

---

ನಾವು ಕಾಣುತ್ತಿದ್ದೇವೆ ಪ್ರಹಸ್ತ, ವಿಕಟ, ವಿರೂಪಾಕ್ಷ, ಮಹೋದರ, ದುರ್ಧರ್ಷನಾದ ಅಕಂಪನ—ಈ ರಾಕ್ಷಸರು ಹತರಾದರು ಕುಂಭಕರ್ಣನು ಎಂತಹ ಬೃಹತ್ಕಾಯ! ಅವನಿಗಿಂತಲೂ ದೊಡ್ಡ ದೇಹದ ಇನ್ನೊಬ್ಬ ರಾಕ್ಷಸನು ಈ ಲೋಕದಲ್ಲಿಲ್ಲ! (೨೧-೨೨) ಶ್ರೀರಾಮ, ಆ ಕುಂಭಕರ್ಣನನ್ನು ಸಮರಾಂಗಣದಲ್ಲಿ ನೀನು ವಿಧ್ವಂಸಗೊಳಿಸಿದ್ದೀಯೆ. ತ್ರಿಶಿರ, ಅತಿಕಾಯ, ದೇವಾಂತಕ, ನರಾಂತಕರೆಂಬ ಮಹಾವೀರರಾದ ನಿಶಾಚರರು ಹತರಾದರು ಕುಂಭಕರ್ಣನ ಪುತ್ರರಾದ ಕುಂಭ, ನಿಕುಂಭ ಎಂಬ ಭೀಮಾಕಾರದ ರಾಕ್ಷಸರು ಸತ್ತರು ಕಾಲಾಂತಕಸದೃಶರಾದ ಯುದ್ಧೋನ್ಮತ್ತ, ಮತ್ತ ಎಂಬ ರಾಕ್ಷಸರು ಮೃತರಾದರು (೨೩-೨೫) ನೀನು ಹೂಡಿದ ಸಂಗ್ರಾಮದಲ್ಲಿ ಶಸ್ತ್ರಾಸ್ತ್ರವಿಶಾರದರೂ ಬಲಾಢ್ಯರೂ ಆದ ಯಜ್ಞಕೋಪ, ಧೂಮ್ರಾಕ್ಷ ಎಂಬ ರಾಕ್ಷಸರು ನಿರ್ನಾಮವಾದರು ಯಮನಂತೆ ಕ್ರೂರವಾದ ಬಾಣಗಳಿಂದ, ಶ್ರೀರಾಮ, ಬಹುಮಂದಿ ರಾಕ್ಷಸರನ್ನು ವಧಿಸಿದ್ದೀಯೆ. ರಾಕ್ಷಸೇಂದ್ರನಾದ ರಾವಣನೊಡನೆ ದ್ವಂದ್ವಯುದ್ಧವೇ ನಿನಗೆ ಸಂಘಟಿಸಿತು

ದೇವತಾನಾಮವಧ್ಯೇನ ವಿಜಯಂ ಪ್ರಾಪ್ತವಾನಸಿ ।
ಸಂಖ್ಯೇ ತಸ್ಯ ನ ಕಿಂಚಿತ್ತು ರಾವಣಸ್ಯ ಪರಾಭವಃ ॥ ೨೮

ದ್ವಂದ್ವಯುದ್ಧಮನುಪ್ರಾಪ್ತೋ ದಿಷ್ಟ್ಯಾ ತೇ ರಾವಣಿರ್ಹತಃ ।
ದಿಷ್ಟ್ಯಾ ತಸ್ಯ ಮಹಾಬಾಹೋ ಕಾಲಸ್ಯೇವಾಭಿಧಾವತಃ ॥ ೨೯

ಮುಕ್ತಃ ಸುರರಿಪೋರ್ವೀರ ಪ್ರಾಪ್ತಶ್ಚ ವಿಜಯಸ್ತ್ವಯಾ ।
ಅಭಿನಂದಾಮ ತೇ ಸರ್ವೇ ಸಂಶ್ರುತ್ಯೇಂದ್ರಜಿತೋ ವಧಮ್ ॥ ೩೦

ಸೋಽವಧ್ಯಃ ಸರ್ವಭೂತಾನಾಂ ಮಹಾಮಾಯಾಧರೋ ಯುಧಿ ।
ವಿಸ್ಮಯಸ್ತ್ವೇಷ ಚಾಸ್ಮಾಕಂ ತಚ್ಛ್ರುತ್ವೇಂದ್ರಜಿತಂ ಹತಮ್ ॥

ಏತೇ ಚಾನ್ಯೇ ಚ ಬಹವೋ ರಾಕ್ಷಸಾಃ ಕಾಮರೂಪಿಣಃ ।
ದಿಷ್ಟ್ಯಾ ತ್ವಯಾ ಹತಾ ವೀರಾ ರಘೂಣಾಂ ಕುಲವರ್ಧನ ॥ ೩೨

ದತ್ತ್ವಾ ಪುಣ್ಯಾಮಿಮಾಂ ವೀರ ಸೌಮ್ಯಾಮಭಯದಕ್ಷಿಣಾಮ್ ।
ದಿಷ್ಟ್ಯಾ ವರ್ಧಸಿ ಕಾಕುತ್ಸ್ಥ ಜಯೇನಾಮಿತ್ರಕರ್ಶನ ॥ ೩೩

---

(೨೬-೨೭) ಅವನಾದರೋ ದೇವತೆಗಳಿಗೂ ಅವಧ್ಯನಾದ ಅತುಲಪರಾಕ್ರಮಿ. ಆತನೊಡನೆ ಸೆಣಸಿ, ನಮ್ಮ ಭಾಗ್ಯದಿಂದ ವಿಜಯವನ್ನು ಗಳಿಸಿದೆ ಆದರೆ, ರಾಘವ, ಯುದ್ಧದಲ್ಲಿ ರಾವಣನನ್ನು ಸೋಲಿಸಿದ್ದು ಯಾವ ದೊಡ್ಡ ವಿಷಯವೂ ಅಲ್ಲ! (೨೮). ಅವನ ಮಗನಾದ ಇಂದ್ರಜಿತು ದ್ವಂದ್ವಯುದ್ಧದಲ್ಲಿ ಹತನಾದನಲ್ಲ, ಅವನನ್ನು ಕೊಂದದ್ದು ಮಾತ್ರ ಬಹು ದೊಡ್ಡ ವಿಷಯ! ಓ ಮಹಾಬಾಹು, ಕಾಲಯಮನಂತೆ ಬಂದು ಎರಗುತ್ತಿದ್ದ ಇಂದ್ರಜಿತುವಿನ ಶರಬಂಧಾದಿಗಳಿಂದ ವಿಮುಕ್ತನಾಗಿ ವಿಜಯವನ್ನು ಸಂಪಾದಿಸಿದ್ದೀಯೆ ಇದು ನಮ್ಮ ಭಾಗ್ಯವೇ ಸರಿ ಇಂದ್ರಜಿತುವಿನ ವಧೆಯಾಯಿತೆಂದು ಕೇಳಿ ಸಂಹೃಷ್ಟರಾದ ನಾವೆಲ್ಲರೂ ನಿನ್ನನ್ನು ಅಭಿನಂದಿಸುತ್ತೇವೆ (೨೯-೩೦) ಇಂದ್ರಜಿತು ಮಹಾಮಾಯಾವಿ ಸರ್ವಭೂತಗಳು ಒಟ್ಟುಗೂಡಿದರೂ ಅವನನ್ನು ಕೊಲ್ಲುವುದು ಅಶಕ್ಯವೇ ಸರಿ ರಾಘವ, ಅಂಥ ಇಂದ್ರಜಿತು ಸತ್ತನೆಂಬುದನ್ನು ಕೇಳಿ ನಾವು ಬೆಕ್ಕಸ ಬೆರಗಾಗಿದ್ದೇವೆ! (೩೧). ರಘುಕುಲ ತಿಲಕ, ಈ ಬಗೆಯ ಕಾಮರೂಪಿಗಳಾದ ಬಹುಮಂದಿ ರಾಕ್ಷಸರನ್ನು ನೀನು

**ಶ್ರುತ್ವಾ ತು ತೇಷಾಂ ವಚನಮೃಷೀಣಾಂ ಭಾವಿತಾತ್ಮನಾಮ್ ।**
**ವಿಸ್ಮಯಂ ಪರಮಂ ಗತ್ವಾ ರಾಮಃ ಪ್ರಾಂಜಲಿರಬ್ರವೀತ್ ॥** ೩೪

**ಭಗವಂತಃ ಕುಂಭಕರ್ಣಂ ರಾವಣಂ ಚ ನಿಶಾಚರಮ್ ।**
**ಅತಿಕ್ರಮ್ಯ ಮಹಾವೀರ್ಯೌ ಕಿಂ ಪ್ರಶಂಸಥ ರಾವಣಿಮ್ ॥** ೩೫

**ಮಹೋದರಂ ಪ್ರಹಸ್ತಂ ಚ ವಿರೂಪಾಕ್ಷಂ ಚ ರಾಕ್ಷಸಮ್ ।**
**ಮತ್ತೋನ್ಮತ್ತೌ ಚ ದುರ್ಧರ್ಷೌ ದೇವಾಂತಕನರಾಂತಕೌ ॥** ೩೬

**ಅತಿಕ್ರಮ್ಯ ಮಹಾವೀರ್ಯಾನ್ ಕಿಂ ಪ್ರಶಂಸಥ ರಾವಣಿಮ್ ।**
**ಅತಿಕಾಯಂ ತ್ರಿಶಿರಸಂ ಧೂಮ್ರಾಕ್ಷಂ ಚ ನಿಶಾಚರಮ್ ॥** ೩೭

---

ವಿಧ್ವಂಸಗೊಳಿಸಿದ್ದೀಯೆ * ಇದೆಲ್ಲವೂ ನಮ್ಮ ಭಾಗ್ಯ ಹೇ ಕಾಕುತ್ಸ್ಥ-ಪರಂತಪ-ವೀರಾಗ್ರಣಿ, ಪುಣ್ಯಾಕರವಾದ ಮಹಾಕಾರ್ಯವನ್ನು ಸಾಧಿಸಿ ಸಜ್ಜನರಿಗೆ ಅಭಯದಾನವನ್ನಿತ್ತಿರುವೆ ನಿನಗೆ ಸದಾ ಜಯವಾಗಲಿ! ಮಂಗಳವಾಗಲಿ!" ಎಂದರು (೩೨-೩೩) ಆತ್ಮಜ್ಞಾನಿಗಳಾದ ಆ ಋಷಿಗಳ ವಚನವನ್ನಾಲಿಸಿ ಶ್ರೀರಾಮನು ಪರಮ ವಿಸ್ಮಿತನಾಗಿ ಕೈಮುಗಿದುಕೊಂಡು ಹೀಗೆಂದನು "ಮಹರ್ಷಿಗಳೆ, ಅತುಲಪರಾಕ್ರಮಿಗಳಾದ ರಾವಣ ಕುಂಭಕರ್ಣರನ್ನೂ ಅತಿಕ್ರಮಿಸಿ ಆ ರಾವಣಪುತ್ರನನ್ನು ಅತಿಯಾಗಿ ಹೊಗಳುವಿರಲ್ಲ, ಇದೇನು? (೩೪-೩೫) ಮಹೋದರ, ಪ್ರಹಸ್ತ, ವಿರೂಪಾಕ್ಷ, ಮತ್ತ, ಉನ್ಮತ್ತ, ದೇವಾಂತಕ, ನರಾಂತಕರು ದುರ್ಧರ್ಷರಾದ ಮಹಾವೀರರಲ್ಲವೆ? ಅತಿಕಾಯ, ತ್ರಿಶಿರ, ಧೂಮ್ರಾಕ್ಷ—ಇವರೆಲ್ಲರೂ ಸಾಮಾನ್ಯರಾದ ಶೂರರ? ಇವರನ್ನು ಬಿಟ್ಟು ಇಂದ್ರಜಿತುವನ್ನು ಅಷ್ಟೊಂದು ಪ್ರಶಂಸೆಮಾಡುವುದೇಕೆ? ಹಾಗಿದ್ದರೆ ಅವನ ಮಹಿಮೆ ಎಷ್ಟು? ಬಲಪರಾಕ್ರಮಗಳು

---

* ಪ್ರಹಸ್ತಾದಿ ಸಕಲ ರಾಕ್ಷಸರನ್ನೂ ಶ್ರೀರಾಮನು ತನ್ನ ಕೈಯಿಂದ ಸಂಹರಿಸಿದ್ದಾನೆ ಎಂದು ಅರ್ಥಬರುವಂತೆ ಮೂಲದಲ್ಲಿ ವಾಕ್ಯರಚನೆ ಇದೆ ಕಪಿಸೇನೆಗೆ ಶ್ರೀರಾಮನು ಮಹಾನೇತೃವಾದ್ದರಿಂದಲೂ ಆತನ ತೇಜೋಬಲದಿಂದ ರಾಕ್ಷಸರು ಹತರಾದ್ದರಿಂದಲೂ ಋಷಿಗಳು ಹಾಗೆ ಹೇಳಿದ್ದಾರೆ

ಅತಿಕ್ರಮ್ಯ ಮಹಾವೀರ್ಯಾನ್ ಕಿಂ ಪ್ರಶಂಸಥ ರಾವಣಿಮ್ ।
ಕೀದೃಶೋ ವೈ ಪ್ರಭಾವೋಽಸ್ಯ ಕಿಂ ಬಲಂ ಕಃ ಪರಾಕ್ರಮಃ ॥ ೩೮
ಕೇನ ವಾ ಕಾರಣೇನೈಷ ರಾವಣಾದತಿರಿಚ್ಯತೇ ।
ಶಕ್ಯಂ ಯದಿ ಮಯಾ ಶ್ರೋತುಂ ನ ಖಲ್ವಾಜ್ಞಾಪಯಾಮಿ ವಃ ॥
ಯದಿ ಗುಹ್ಯಂ ನ ಚೇದ್ವಕ್ತುಂ ಶ್ರೋತುಮಿಚ್ಛಾಮಿ ಕಥ್ಯತಾಮ್ ।
ಶಕ್ರೋಽಪಿ ವಿಜಿತಸ್ತೇನ ಕಥಂ ಲಬ್ಧವರಶ್ಚ ಸಃ ॥ ೪೦
ಕಥಂ ಚ ಬಲವಾನ್ ಪುತ್ರೋ ನ ಪಿತಾ ತಸ್ಯ ರಾವಣಃ ॥

ಕಥಂ ಪಿತುಶ್ಚಾಭ್ಯಧಿಕೋ ಮಹಾಹವೇ
ಶಕ್ರಸ್ಯ ಜೇತಾ ಹಿ ಕಥಂ ಸ ರಾಕ್ಷಸಃ ।
ವರಾಶ್ಚ ಲಬ್ಧಾಃ ಕಥಯಸ್ವ ಮೇಽದ್ಯ
ತತ್ ಪೃಚ್ಛತಶ್ಚಾಸ್ಯ ಮುನೀಂದ್ರ ಸರ್ವಮ್ ॥ ೪೧

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ ಚತುರ್ವಿಂಶತಿ ಸಹಸ್ರಿಕಾಯಾಂ ಸಂಹಿತಾಯಾಂ ಉತ್ತರಕಾಂಡೇ ಪ್ರಥಮಃ ಸರ್ಗಃ

---

ಎಂಥವು ? (೩೬-೩೭) ರಾವಣನಿಗಿಂತಲೂ ಅವನು ಅಧಿಕನೆನ್ನಲು ಕಾರಣವಾದರೂ ಯಾವುದು ? ಪೂಜ್ಯರ, ಅದನ್ನು ನಾನು ಕೇಳಬಹುದೆ ? ಹೇಳಬೇಕೆಂದು ನಾನು ತಮ್ಮನ್ನು ಒತ್ತಾಯಪಡಿಸಲಾರೆ (೩೮-೩೯) ಅದು ರಹಸ್ಯವಲ್ಲವಾದರೆ, ಕೇಳಲಿಚ್ಛಿಸುತ್ತೇನೆ ಹೇಳೋಣವಾಗಲಿ. ಆತನು ವರವನ್ನು ಪಡೆದು ದೇವೇಂದ್ರನನ್ನೂ ಗೆದ್ದ ಪರಿ ಯಾವುದು ? ಪುತ್ರನಾದ ಮೇಘನಾದನೇ ಅತ್ಯಂತ ಬಲಶಾಲಿ, ತಂದೆಯಾದ ರಾವಣನೂ ಸಹ ಅವನಷ್ಟು ಬಲಶಾಲಿಯಲ್ಲ – ಎಂಬುದು ಹೇಗೆ ? (೪೦). ಮುನೀಂದ್ರರೆ, ಆ ರಾಕ್ಷಸನು ತಂದೆಗಿಂತ ಹೆಚ್ಚಿನ ಬಲಾಢ್ಯನೆಂಬುದು ಹೇಗೆ ? ಸಂಗ್ರಾಮದಲ್ಲಿ ದೇವೇಂದ್ರನನ್ನು ಹೇಗೆ ಜಯಿಸಿದನು ? ಯಾವ ಯಾವ ವರಗಳನ್ನು ಹೇಗೆ ಪಡೆದನು ? ಇದೆಲ್ಲವನ್ನೂ ನನಗೆ ಕೃಪೆಯಿಟ್ಟು ತಿಳಿಸಿರಿ" ಎಂದು ಪ್ರಾರ್ಥಿಸಿದನು (೪೧)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಒಂದನೆಯ ಸರ್ಗ

## ದ್ವಿತೀಯಃ ಸರ್ಗಃ

### ಪೌಲಸ್ತ್ಯೋತ್ಪತ್ತಿಃ

ತಸ್ಯ ತದ್ವಚನಂ ಶ್ರುತ್ವಾ ರಾಘವಸ್ಯ ಮಹಾತ್ಮನಃ ।
ಕುಂಭಯೋನಿರ್ಮಹಾತೇಜಾ ರಾಮಮೇತದುವಾಚ ಹ ॥ ೧

ಶೃಣು ರಾಮ ಯಥಾವೃತ್ತಂ ತಸ್ಯ ತೇಜೋಬಲಂ ಮಹತ್ ।
ಜಘಾನ ಶತ್ರೂನ್ ಯೇನಾಸೌ ನ ಚ ವಧ್ಯಃ ಸ ಶತ್ರುಭಿಃ ॥ ೨

ತಾವತ್ತೇ ರಾವಣಸ್ಯೇದಂ ಕುಲಂ ಜನ್ಮ ಚ ರಾಘವ ।
ವರಪ್ರದಾನಂ ಚ ತಥಾ ತಸ್ಮೈ ದತ್ತಂ ಬ್ರವೀಮಿ ತೇ ॥ ೩

ಪುರಾ ಕೃತಯುಗೇ ರಾಮ ಪ್ರಜಾಪತಿಸುತಃ ಪ್ರಭುಃ ।
ಪುಲಸ್ತ್ಯೋ ನಾಮ ಬ್ರಹ್ಮರ್ಷಿಃ ಸಾಕ್ಷಾದಿವ ಪಿತಾಮಹಃ ॥ ೪

ನಾನುಕೀರ್ತ್ಯಾ ಗುಣಾಸ್ತಸ್ಯ ಧರ್ಮತಃ ಶೀಲತಸ್ತಥಾ ।
ಪ್ರಜಾಪತೇಃ ಪುತ್ರ ಇತಿ ವಕ್ತುಂ ಶಕ್ಯಂ ಹಿ ನಾಮತಃ ॥ ೫

### ಸರ್ಗ ೨

'ಅಗಸ್ತ್ಯರು ಉತ್ತರವನ್ನು ಹೇಳಲಾರಂಭಿಸುವುದು ಪುಲಸ್ತ್ಯನ ಉತ್ಪತ್ತಿ,
ತೃಣಬಿಂದುವಿನ ಮಗಳೊಡನೆ ಪುಲಸ್ತ್ಯನ ವಿವಾಹ, ವಿಶ್ರವಸ್ಸಿನ ಜನನ

ಮಹಾತ್ಮನಾದ ಶ್ರೀರಾಮನ ಆ ಪ್ರಶ್ನೆಯನ್ನು ಕೇಳಿ, ತೇಜೋನಿಧಿಗಳಾದ ಅಗಸ್ತ್ಯಮುನಿಗಳು ಈ ರೀತಿಯಲ್ಲಿ ಉತ್ತರವನ್ನು ಹೇಳಲಾರಂಭಿಸಿದರು ಶ್ರೀರಾಮ, ಮೇಘನಾದನ ಮಹತ್ತರವಾದ ತೇಜೋಬಲಗಳನ್ನು ಯಥಾಸ್ಥಿತಿಯಾಗಿ ಹೇಳುವೆನು, ಕೇಳು ಅವನು ಶತ್ರುಗಳನ್ನು ಹೇಗೆ ವಧಿಸುತ್ತಿದ್ದನು, ಹೇಗೆ ಅವಧ್ಯನಾಗಿದ್ದನು - ಎಂಬುದನ್ನು ವಿವರಿಸುವೆನು (೧-೨) ಮೊದಲು ರಾವಣನ ಕುಲಜನ್ಮಗಳ ವೃತ್ತಾಂತವನ್ನೂ ಅವನು ವರವನ್ನು ಪಡೆದ ವಿಧಾನವನ್ನೂ ನಿನಗೆ ತಿಳಿಸುವೆನು—ರಾಘವ, ಹಿಂದೆ ಕೃತಯುಗದಲ್ಲಿ ಬ್ರಹ್ಮಪುತ್ರನಾದ ಪುಲಸ್ತ್ಯನೆಂಬ ಬ್ರಹ್ಮರ್ಷಿ ಇದ್ದನು ಅವನು ಸಾಕ್ಷಾತ್ ಬ್ರಹ್ಮದೇವನಂತೆ ಸರ್ವಸಮರ್ಥನಾಗಿ ಕಂಗೊಳಿಸುತ್ತಿದ್ದನು (೩-೪) ಧರ್ಮ, ಸದಾಚಾರಗಳ ವಿಷಯವಾಗಿ ಆತನಲ್ಲಿದ್ದ ಮಹಾಗುಣಗಳನ್ನು

ಪ್ರಜಾಪತಿಸುತತ್ವೇನ ದೇವಾನಾಂ ವಲ್ಲಭೋ ಹಿ ಸಃ ।
ಇಷ್ಟಃ ಸರ್ವಸ್ಯ ಲೋಕಸ್ಯ ಗುಣೈಃ ಶುಭ್ರೈರ್ಮಹಾಮತಿಃ ॥ ೬

ಸ ತು ಧರ್ಮಪ್ರಸಂಗೇನ ಮೇರೋಃ ಪಾರ್ಶ್ವೇ ಮಹಾಗಿರೇಃ ।
ತೃಣಬಿಂದ್ವಾಶ್ರಮಂ ಗತ್ವಾ ನ್ಯವಸನ್ಮುನಿಪುಂಗವಃ ॥ ೭

ತಪಸ್ತೇಪೇ ಸ ಧರ್ಮಾತ್ಮಾ ಸ್ವಾಧ್ಯಾಯನಿಯತೇಂದ್ರಿಯಃ ।
ಗತ್ವಾಶ್ರಮಪದಂ ತಸ್ಯ ವಿಘ್ನಂ ಕುರ್ವಂತಿ ಕನ್ಯಕಾಃ ॥ ೮

ದೇವಪನ್ನಗಕನ್ಯಾಶ್ಚ ರಾಜರ್ಷಿತನಯಾಶ್ಚ ಯಾಃ ।
ಕ್ರೀಡಂತ್ಯೋಽಪ್ಸರಸಶ್ಚೈವ ತಂ ದೇಶಮುಪಪೇದಿರೇ ॥ ೯

ಸರ್ವರ್ತುಷೂಪಭೋಗ್ಯತ್ವಾದ್ರಮ್ಯತ್ವಾತ್ ಕಾನನಸ್ಯ ಚ ।
ನಿತ್ಯಶಸ್ತಾಸ್ತು ತಂ ದೇಶಂ ಗತ್ವಾ ಕ್ರೀಡಂತಿ ಕನ್ಯಕಾಃ ॥ ೧೦

ದೇಶಸ್ಯ ರಮಣೀಯತ್ವಾತ್ ಪುಲಸ್ತ್ಯೋ ಯತ್ರ ಸ ದ್ವಿಜಃ ।
ಗಾಯಂತ್ಯೋ ವಾದಯಂತ್ಯಶ್ಚ ಲಾಸಯಂತ್ಯಸ್ತಥೈವ ಚ ॥ ೧೧

---

ವರ್ಣಿಸಲು ಯಾರಿಗೂ ಶಕ್ಯವಲ್ಲ ಪುಲಸ್ತ್ಯನು ಪ್ರಜಾಪತಿಯ ಪುತ್ರನೆಂದು ಹೇಳಿದರೆ ನಾಕು, ಎಲ್ಲವನ್ನೂ ವರ್ಣಿಸಿದಂತೆಯೇ ಆಯಿತು (೫) ಪ್ರಜಾಪತಿಯ ಪುತ್ರನೆಂದು ಆತನು ದೇವತೆಗಳೆಲ್ಲರಿಗೂ ಸಂಮಾನ್ಯನಾಗಿದ್ದನು ಆ ಮೇಧಾವಿಯು ಪರಿಶುದ್ಧವಾದ ಸದ್ಗುಣಗಳಿಂದ ಸಕಲರಿಗೂ ಪ್ರಿಯನಾಗಿದ್ದನು ಆ ಮುನಿಪುಂಗವನು ಧರ್ಮಾಚರಣೆಗೋಸ್ಕರ ಮೇರುಗಿರಿಯ ಬಳಿಯಲ್ಲಿದ್ದ ತೃಣಬಿಂದುವಿನ ಆಶ್ರಮದಲ್ಲಿ ವಾಸಮಾಡುತ್ತಿದ್ದನು (೬-೭) ಆ ಧರ್ಮಾತ್ಮನು ವೇದಾಧ್ಯಯನಮಾಡುತ್ತ ಇಂದ್ರಿಯಗಳನ್ನು ನಿಗ್ರಹಿಸಿ ತಪಸ್ಸಿನಲ್ಲಿ ನಿರತನಾದನು ಆ ಸಮಯದಲ್ಲಿ ದೇವಪನ್ನಗಕನ್ಯೆಯರೂ ರಾಜರ್ಷಿಪುತ್ರಿಯರೂ ಅಪ್ಸರೆಯರೂ ಪುಲಸ್ತ್ಯನಿದ್ದ ಆಶ್ರಮಕ್ಕೆ ಬಂದು ಕ್ರೀಡಿಸುತ್ತ ಆತನ ತಪಸ್ಸಿಗೆ ವಿಘ್ನವನ್ನೊಡ್ಡಿದರು (೮-೯) ಆ ತಪೋವನವು ಎಲ್ಲ ಋತುಗಳಲ್ಲಿಯೂ ಹಿತಕರವಾಗಿ ರಮಣೀಯವಾಗಿದ್ದುದರಿಂದ, ಆ ತರುಣಿಯರು ನಿತ್ಯವೂ ಅಲ್ಲಿ ಹೋಗಿ ವಿಹರಿಸುತ್ತಿದ್ದರು ಪುಲಸ್ತ್ಯನಿದ್ದ ಸ್ಥಳವು ಮನೋಹರವಾಗಿದ್ದುದರಿಂದ, ಆ ಸ್ತ್ರೀಯರು ಹಾಡುತ್ತ ಕುಣಿಯುತ್ತ

**ಮುನೇಸ್ತಪಸ್ವಿನಸ್ತಸ್ಯ ವಿಘ್ನಂ ಚಕ್ರುರನಿಂದಿತಾಃ ।**
**ಅಥ ಕ್ರುದ್ಧೋ ಮಹಾತೇಜಾ ವ್ಯಾಜಹಾರ ಮಹಾಮುನಿಃ ॥ ೧೨**

**ಯಾ ಮೇ ದರ್ಶನಮಾಗಚ್ಛೇತ್ ಸಾ ಗರ್ಭಂ ಧಾರಯಿಷ್ಯತಿ ।**
**ತಾಸ್ತು ಸರ್ವಾಃ ಪ್ರತಿಶ್ರುತ್ಯ ತಸ್ಯ ವಾಕ್ಯಂ ಮಹಾತ್ಮನಃ ॥ ೧೩**

**ಬ್ರಹ್ಮಶಾಪಭಯಾದ್ಭೀತಾಸ್ತಂ ದೇಶಂ ನೋಪಚಕ್ರಮುಃ ।**
**ತೃಣಬಿಂದೋಸ್ತು ರಾಜರ್ಷೇಸ್ತನಯಾ ನ ಶೃಣೋತಿ ತತ್ ॥ ೧೪**

**ಗತ್ವಾಶ್ರಮಪದಂ ತತ್ರ ವಿಚಚಾರ ಸುನಿರ್ಭಯಾ ।**
**ನ ಸಾಪಶ್ಯತ್ ಸ್ಥಿತಾ ತತ್ರ ಕಾಂಚಿದಭ್ಯಾಗತಾಂ ಸಖೀಮ್ ॥ ೧೫**

**ತಸ್ಮಿನ್ ಕಾಲೇ ಮಹಾತೇಜಾಃ ಪ್ರಾಜಾಪತ್ಯೋ ಮಹಾನೃಷಿಃ ।**
**ಸ್ವಾಧ್ಯಾಯಮಕರೋತ್ತತ್ರ ತಪಸಾ ಭಾವಿತಃ ಸ್ವಯಮ್ ॥ ೧೬**

---

ವಾದ್ಯಗಳನ್ನು ಸುಡಿಸುತ್ತ ನಲಿಯುತ್ತಿದ್ದರು (೧೦-೧೧ ಈ ರೀತಿಯಲ್ಲಿ ಆ ಚೆಲುವೆಯರು ಪುಲಸ್ತ್ಯಮುನಿಯ ತಪಸ್ಸಿಗೆ ಅಡ್ಡಿಯಾಗುತ್ತಿದ್ದರು ಅದನ್ನು ಕಂಡು ತೇಜೋರಾಶಿಯಾದ ಆ ಮಹಾಮುನಿಯು ಕುಪಿತನಾಗಿ "ಇನ್ನುಮೇಲೆ ಯಾವ ಹೆಂಗಸಾದರೂ ಇಲ್ಲಿ ನನಗೆ ಗೋಚರಿಸಿದರೆ, ಒಡನೆಯೇ ಅವಳು ಗರ್ಭವತಿಯಾಗಲಿ!" ಶಪಿಸಿದನು (೧೨, ಆ ತರುಣಿಯರು ಶಾಪವೃತ್ತಾಂತವನ್ನು ಕೇಳಿ ಬ್ರಹ್ಮಶಾಪಕ್ಕೆ ಅಳುಕಿ, ಆ ಸ್ಥಳಕ್ಕೆ ಬರುವುದನ್ನು ನಿಲ್ಲಿಸಿದರು ಆದರೆ ತೃಣಬಿಂದುವೆಂಬ ರಾಜರ್ಷಿಯ ಪುತ್ರಿಯೊಬ್ಬಳಿಗೆ* ಈ ವೃತ್ತಾಂತವು ತಿಳಿಯದೆ, ಆಶ್ರಮಪ್ರದೇಶಕ್ಕೆ ಬಂದು ಎಂದಿನಂತೆ ನಿಶ್ಶಂಕೆಯಿಂದ ತಿರುಗಾಡತೊಡಗಿದಳು. ತನ್ನ ಯಾವ ಸಖಿಯೂ ಅಲ್ಲಿಗೆ ಬಾರದಿರುವುದನ್ನು ಕಂಡಳು (೧೩-೧೫) ಆ ಸಮಯದಲ್ಲಿ ಪ್ರಜಾಪತಿಸುತನೂ ತಪೋನಿಷ್ಠನೂ ಆದ ಪುಲಸ್ತ್ಯಮಹರ್ಷಿಯು ವೇದಾಧ್ಯಯನದಲ್ಲಿ ತೊಡಗಿದ್ದನು ವೇದಪಾರದ ಶಬ್ದವನ್ನು ಕೇಳಿ ಈ ರಾಜರ್ಷಿಪುತ್ರಿಯು ಅಲ್ಲಿ

---

* ಇವಳ ಹೆಸರು 'ಗೋ' ಎಂದು ಪುರಾಣನಾಮ ಚೂಡಾಮಣಿ ಎಂಬ ಗ್ರಂಥದಲ್ಲಿ ಬರೆದಿದೆ

ಸಾ ತು ವೇದಶ್ರುತಿಂ ಶ್ರುತ್ವಾ ದೃಷ್ಟ್ವಾ ವೈ ತಪಸೋ ನಿಧಿಮ್ ।
ಅಭವತ್ ಪಾಂಡುದೇಹಾ ಸಾ ಸುವ್ಯಂಜಿತಶರೀರಜಾ ॥ ೧೭

ಬಭೂವ ಚ ಸಮುದ್ವಿಗ್ನಾ ದೃಷ್ಟ್ವಾ ತದ್ದೋಷಮಾತ್ಮನಃ ।
ಇದಂ ಮೇ ಕಿಂ ತ್ವಿತಿ ಜ್ಞಾತ್ವಾ ಪಿತುರ್ಗತ್ವಾಶ್ರಮೇ ಸ್ಥಿತಾ ॥ ೧೮

ತಾಂ ತು ದೃಷ್ಟ್ವಾ ತಥಾಭೂತಾಂ ತೃಣಬಿಂದುರಥಾಬ್ರವೀತ್ ।
ಕಿಂ ತ್ವಮೇತತ್ತ್ವಸದೃಶಂ ಧಾರಯಸ್ಯಾತ್ಮನೋ ವಪುಃ ॥ ೧೯

ಸಾ ತು ಕೃತ್ವಾಂಜಲಿಂ ದೀನಾ ಕನ್ಯೋವಾಚ ತಪೋಧನಮ್ ।
ನ ಜಾನೇ ಕಾರಣಂ ತಾತ ಯೇನ ಮೇ ರೂಪಮೀದೃಶಮ್ ॥ ೨೦

ಕಿಂ ತು ಪೂರ್ವಂ ಗತಾಸ್ಮ್ಯೇಕಾ ಮಹರ್ಷೇರ್ಭಾವಿತಾತ್ಮನಃ ।
ಪುಲಸ್ತ್ಯಸ್ಯಾಶ್ರಮಂ ದಿವ್ಯಮನ್ವೇಷ್ಟುಂ ಸ್ವಸಖೀಜನಮ್ ॥ ೨೧

ನ ಚ ಪಶ್ಯಾಮ್ಯಹಂ ತತ್ರ ಕಾಂಚಿದಭ್ಯಾಗತಾಂ ಸಖೀಮ್ ।
ರೂಪಸ್ಯ ತು ವಿಪರ್ಯಾಸಂ ದೃಷ್ಟ್ವಾ ತ್ರಾಸಾದಿಹಾಗತಾ ॥ ೨೨

---

ಹೋಗಿ ಆ ತಪೋನಿಧಿಯನ್ನು ನೋಡಿದಳು ರಾಘವ, ಒಡನೆಯೇ ಆಕೆಯ ದೇಹವು ಬಿಳಿಕರಿಸಿತು ಅವಳು ಗರ್ಭವತಿಯಾದ ಚಿಹ್ನೆಗಳು ಸ್ಪಷ್ಟವಾಗಿ ಗೋಚರಿಸಿದವು (೧೬-೧೭) ತನ್ನ ದೇಹದಲ್ಲಿ ಪ್ರಕಟವಾದ ಗರ್ಭವಿಕಾರವನ್ನು ಕಂಡು, ಅವಳು ಭೀತಳಾದಳು "ಎಲಾ, ನನಗೇನಾಯಿತು!" ಎಂದು ಚಿಂತಿಸುತ್ತ ತನ್ನ ತಂದೆಯಾದ ತೃಣಬಿಂದುವಿನ ಆಶ್ರಮಕ್ಕೆ ಹೋದಳು (೧೮) ಆ ರೀತಿಯಲ್ಲಿದ್ದ ಮಗಳನ್ನು ನೋಡಿ ತೃಣಬಿಂದುವು "ವತ್ಸೇ, ಇದೇನು? ನಿನ್ನ ದೇಹವು ಅಯೋಗ್ಯವಾದ ಅವಸ್ಥಾಂತರವನ್ನು ಹೊಂದಿದೆ" ಎಂದು ಕೇಳಿದನು ಶೋಕಾರ್ತಳಾದ ಆ ಕನ್ಯೆಯು ಕೈಮುಗಿದುಕೊಂಡು ದೈನ್ಯದಿಂದ ಆ ತಪೋಧನನನ್ನು ಕುರಿತು "ಅಪ್ಪ, ನನಗೆ ಗೊತ್ತಿಲ್ಲ ಈ ತರದ ರೂಪ ನನಗೇಕೆ ಬಂದಿತೋ ತಿಳಿಯದು (೧೯-೨೦) ನಡೆದದ್ದು ಇಷ್ಟು ನನ್ನ ಸಖಿಯರನ್ನು ಹುಡುಕುತ್ತ, ಪುಲಸ್ತ್ಯಮಹರ್ಷಿಗಳ ಆಶ್ರಮಕ್ಕೆ ನಾನೊಬ್ಬಳೇ ಹೋದೆನು ಈ ದಿನ ನನ್ನ ಯಾವ ಗೆಳತಿಯನ್ನೂ ಅಲ್ಲಿ ನಾನು ಕಾಣಲಿಲ್ಲ ಇದ್ದಕ್ಕಿದ್ದಂತೆ ನನ್ನ ರೂಪದಲ್ಲಾದ ಈ ವಿಪರ್ಯಾಸವನ್ನು ಕಂಡು ಹೆದರಿ, ಒಡನೆಯೇ ಇಲ್ಲಿಗೆ ಬಂದೆನು" ಎಂದಳು (೨೧-೨೨)

ತೃಣಬಿಂದುಸ್ತು ರಾಜರ್ಷಿಸ್ತಪಸಾ ದ್ಯೋತಿತಪ್ರಭಃ ।
ಧ್ಯಾನಂ ವಿವೇಶ ತಚ್ಚಾಪಿ ಹ್ಯಪಶ್ಯದೃಷಿಕರ್ಮಜಮ್ ॥ ೨೩
ಸ ತು ವಿಜ್ಞಾಯ ತಂ ಶಾಪಂ ಮಹರ್ಷೇರ್ಭಾವಿತಾತ್ಮನಃ ।
ಗೃಹೀತ್ವಾ ತನಯಾಂ ಗತ್ವಾ ಪುಲಸ್ತ್ಯಮಿದಮಬ್ರವೀತ್ ॥ ೨೪
ಭಗವಂಸ್ತನಯಾಂ ಮೇ ತ್ವಂ ಗುಣೈಃ ಸ್ವೈರೇವ ಭೂಷಿತಾಮ್ ।
ಭಿಕ್ಷಾಂ ಪ್ರತಿಗೃಹಾಣೇಮಾಂ ಮಹರ್ಷೇ ಸ್ವಯಮುದ್ಯತಾಮ್ ॥
ತಪಶ್ಚರಣಯುಕ್ತಸ್ಯ ಶ್ರಾಮ್ಯಮಾಣೇಂದ್ರಿಯಸ್ಯ ತೇ ।
ಶುಶ್ರೂಷಣಪರಾ ನಿತ್ಯಂ ಭವಿಷ್ಯತಿ ನ ಸಂಶಯಃ ॥ ೨೬
ತಂ ಬ್ರುವಾಣಂ ತು ತದ್ವಾಕ್ಯಂ ರಾಜರ್ಷಿಂ ಧಾರ್ಮಿಕಂ ತದಾ ।
ಜಿಘೃಕ್ಷುರಬ್ರವೀತ್ ಕನ್ಯಾಂ ಬಾಢಮಿತ್ಯೇವ ಸ ದ್ವಿಜಃ ॥ ೨೭
ದತ್ತ್ವಾ ಸ ತು ಯಥಾನ್ಯಾಯಂ ಸ್ವಮಾಶ್ರಮಪದಂ ಗತಃ ।
ಸಾಪಿ ತತ್ರಾವಸತ್ ಕನ್ಯಾ ತೋಷಯಂತೀ ಪತಿಂ ಗುಣೈಃ ॥ ೨೮

---

ಆಗ ರಾಜರ್ಷಿಯೂ ತಪೋಮಹಿಮಾನ್ವಿತನೂ ಆದ ತೃಣಬಿಂದುವು ಧ್ಯಾನಾರೂಢನಾಗಿ ದಿವ್ಯದೃಷ್ಟಿಯಿಂದ "ಆಹಾ! ಇದು ಪುಲಸ್ತ್ಯಮುನಿಯ ಕೆಲಸ ಆತ್ಮಜ್ಞಾನಿಯಾದ ಆ ಮಹರ್ಷಿಯ ಶಾಪದಿಂದ ಹೀಗಾಗಿದೆ" ಎಂಬುದನ್ನರಿತನು (೨೩) ಅನಂತರ ಆ ರಾಜರ್ಷಿಯು ತನ್ನ ಮಗಳೊಡನೆ ಪುಲಸ್ತ್ಯಮುನಿಯ ಸಮೀಪಕ್ಕೆ ಹೋಗಿ "ಭಗವನ್, ಇವಳು ನನ್ನ ಮಗಳು ನಿನಗೆ ಯೋಗ್ಯವಾದ ಸದ್ಗುಣಗಳಿಂದ ಭೂಷಿತಳಾಗಿರುವಳು ಮಹರ್ಷಿ, ತಾನಾಗಿ ಪ್ರಾಪ್ತವಾದ ಈ ಭಿಕ್ಷೆಯನ್ನು ಸ್ವೀಕರಿಸು (೨೪-೨೫) ತಪೋನಿರತನಾದ ನಿನಗೆ ಬಹಳ ಶ್ರಮವಾಗುತ್ತದೆ ದೇಹೇಂದ್ರಿಯಗಳು ಬಳಲುತ್ತವೆ ನನ್ನ ಮಗಳು ಸದಾ ನಿನ್ನ ಶುಶ್ರೂಷೆಯಲ್ಲಿ ನಿರತಳಾಗಿ ನಿನ್ನ ತಪಸ್ಸಾಧನೆಗೆ ನಿಶ್ಚಯವಾಗಿಯೂ ನೆರವಾಗುವಳು" ಎಂದು ನಿವೇದಿಸಿದನು (೨೬) ಶ್ರೀರಾಮ, ಧಾರ್ಮಿಕನಾದ ಆ ರಾಜರ್ಷಿಯು ವಿನಯದಿಂದ ಹೀಗೆ ಹೇಳಲಾಗಿ, ಪುಲಸ್ತ್ಯನು ಆ ಕನ್ಯೆಯನ್ನು ಸ್ವೀಕರಿಸಲು ಒಪ್ಪಿ 'ಆಗಲಿ' ಎಂದು ನುಡಿದನು ಅನಂತರ ತೃಣಬಿಂದುವು ತನ್ನ ಪುತ್ರಿಯನ್ನು ವಿಧಿವತ್ತಾಗಿ ಪುಲಸ್ತ್ಯನಿಗೆ ಮದುವೆಮಾಡಿಕೊಟ್ಟು, ತನ್ನ ಆಶ್ರಮಕ್ಕೆ ಹಿಂದಿರುಗಿದನು ಇತ್ತ

ತಸ್ಯಾಸ್ತು ಶೀಲವೃತ್ತಾಭ್ಯಾಂ ತುತೋಷ ಮುನಿಪುಂಗವಃ ।
ಪ್ರೀತಃ ಸ ತು ಮಹಾತೇಜಾ ವಾಕ್ಯಮೇತದುವಾಚ ಹ ॥ ೨೯

ಪರಿತುಷ್ಟೋಽಸ್ಮಿ ಸುಶ್ರೋಣಿ ಗುಣಾನಾಂ ಸಂಪದಾ ಭೃಶಮ್ ।
ತಸ್ಮಾದ್ದೇವಿ ಪ್ರದಾಸ್ಯಾಮಿ ಪುತ್ರಮಾತ್ಮಸಮಂ ತವ ॥ ೩೦

ಉಭಯೋರ್ವಂಶಕರ್ತಾರಂ ಪೌಲಸ್ತ್ಯ ಇತಿ ವಿಶ್ರುತಮ್ ।
ಯಸ್ಮಾತ್ತು ವಿಶ್ರುತೋ ವೇದಸ್ತ್ವಯೈಷೋಽಧ್ಯಯತೋ ಮಮ ॥

ತಸ್ಮಾತ್ ಸ ವಿಶ್ರವಾ ನಾಮ ಭವಿಷ್ಯತಿ ನ ಸಂಶಯಃ ।
ಏವಮುಕ್ತಾ ತು ಸಾ ದೇವೀ ಪ್ರಹೃಷ್ಟೇನಾಂತರಾತ್ಮನಾ ॥ ೩೨

ಅಚಿರೇಣೈವ ಕಾಲೇನಾಸೂತ ವಿಶ್ರವಸಂ ಸುತಮ್ ।
ತ್ರಿಷು ಲೋಕೇಷು ವಿಖ್ಯಾತಂ ಯಶೋಧರ್ಮಸಮನ್ವಿತಮ್ ॥ ೩೩

---

ಆ ರಾಜಪುತ್ರಿಯು ತನ್ನ ಪತಿಯಾದ ಪುಲಸ್ತ್ಯಮುನಿಯನ್ನು ವಿನಯಾದಿ ಸದ್ಗುಣಗಳಿಂದ ಸಂತೋಷಪಡಿಸುತ್ತಿದ್ದಳು (೨೭-೨೮) ಆ ಮುನಿಶ್ರೇಷ್ಠನು ಪತ್ನಿಯ ಸೌಶೀಲ್ಯ ಸದಾಚಾರಗಳಿಂದ ಸಂಪ್ರೀತನಾಗಿ ಒಂದು ದಿನ ಅವಳನ್ನು ಕುರಿತು "ಸುಂದರಿ, ನಿನ್ನ ಗುಣಸಂಪತ್ತನ್ನು ನೋಡಿ ನನಗೆ ಬಹಳ ಆನಂದವಾಗಿದೆ ಆದ್ದರಿಂದ, ದೇವಿ, ನಿನ್ನ ಗರ್ಭದಲ್ಲಿ ನನಗೆ ಸಮನಾದ ಪುತ್ರನು ಜನಿಸಲೆಂದು ಹರಸುವೆನು (೨೯-೩೦) ನಮ್ಮೀರ್ವರ ಕುಲ ಗಳನ್ನೂ ನಡೆಸಿ ಬೆಳೆಸುವ ಪೌಲಸ್ತ್ಯನೆಂಬ ಪುತ್ರನನ್ನು ನೀನು ಪಡೆಯುವೆ ನಾನು ವೇದಾಧ್ಯಯನವನ್ನು ಮಾಡುತ್ತಿದ್ದಾಗ ನೀನು ಬಂದು ಅದನ್ನು ಕೇಳಿದೆಯಲ್ಲವೆ ? (೩೧) ವೇದವು ವಿಶ್ರುತವಾಗುತ್ತಿದ್ದಾಗ ಗರ್ಭವನ್ನು ಧರಿಸಿದ್ದರಿಂದ, ಆ ಪುತ್ರನು ವಿಶ್ರವಸ್ ಎಂದು ಪ್ರಸಿದ್ಧನಾಗುವನು" ಎಂದು ಹೇಳಿದನು ಪುಲಸ್ತ್ಯನ ನುಡಿಯನ್ನು ಕೇಳಿ ಆ ದೇವಿಯು ಪರಮಾನಂದ ಮಗ್ನಳಾದಳು (೩೨) ಸ್ವಲ್ಪಕಾಲದಲ್ಲಿಯೇ ಅವಳು ಒಬ್ಬ ಪುತ್ರನನ್ನು ಪ್ರಸವಿಸಿದಳು ಅವನಿಗೆ ವಿಶ್ರವಸ್ ಎಂದು ನಾಮಕರಣವಾಯಿತು. ಮುಂದೆ ಆತನು ಧರ್ಮನಿಷ್ಠನಾಗಿ ವಿಖ್ಯಾತನಾದನು. ವಿದ್ವಾಂಸನೂ

ಶ್ರುತಿಮಾನ್ ಸಮದರ್ಶೀ ಚ ವ್ರತಾಚಾರರತಸ್ತಥಾ ।
ಪಿತೇವ ತಪಸಾ ಯುಕ್ತೋ ಹ್ಯಭವದ್ವಿಶ್ರವಾ ಮುನಿಃ ॥ ೩೪

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವಿತೀಯಃ ಸರ್ಗಃ

---

## ತೃತೀಯಃ ಸರ್ಗಃ

### ವೈಶ್ರವಣಲೋಕಪಾಲಪದಲಂಕಾದಿಪ್ರಾಪ್ತಿಃ

**ಅಥ ಪುತ್ರಃ ಪುಲಸ್ತ್ಯಸ್ಯ ವಿಶ್ರವಾ ಮುನಿಪುಂಗವಃ ।**
**ಅಚಿರೇಣೈವ ಕಾಲೇನ ಪಿತೇವ ತಪಸಿ ಸ್ಥಿತಃ ॥ ೧**

**ಸತ್ಯವಾನ್ ಶೀಲವಾನ್ ಶಾಂತಃ ಸ್ವಾಧ್ಯಾಯನಿರತಃ ಶುಚಿಃ ।**
**ಸರ್ವಭೋಗೇಷ್ವಸಂಸಕ್ತೋ ನಿತ್ಯಂ ಧರ್ಮಪರಾಯಣಃ ॥ ೨**

---

ಸಮದರ್ಶಿಯೂ ವ್ರತಾಚಾರನಿರತನೂ ಆದನು ವಿಶ್ರವಸ್ಸೆಂಬ ಆ ಋಷಿಯು ತನ್ನ ತಂದೆಯಂತೆ ಮಹಾತಪಸ್ವಿ ಎನಿಸಿದನು (೩೩-೩೪)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎರಡನೆಯ ಸರ್ಗ

---

## ಸರ್ಗ ೩

### ಕುಬೇರನ ಉತ್ಪತ್ತಿ, ಅವನ ತಪಸ್ಸಿಗೆ ಮೆಚ್ಚಿ ಬ್ರಹ್ಮನು ಲೋಕಪಾಲ ಪದವಿಯನ್ನೂ ಪುಷ್ಪಕವಿಮಾನವನ್ನೂ ನೀಡುವುದು

ಪುಲಸ್ತ್ಯಸುತನಾದ ವಿಶ್ರವಸ್ಸೆಂಬ ಆ ಮುನಿಪುಂಗವನು ತನ್ನ ತಂದೆಯಂತೆಯೇ ಸ್ವಲ್ಪಕಾಲದಲ್ಲಿ ತಪೋನಿರತನಾದನು ಆತನು ಸತ್ಯವಾದಿಯೂ ಶೀಲವಂತನೂ ಶಾಂತಸ್ವಭಾವದವನೂ ಪರಿಶುದ್ಧಚಿತ್ತನೂ ಆಗಿ ವೇದಾಧ್ಯಯನತತ್ಪರನಾಗಿದ್ದನು ಸಕಲಭೋಗಗಳಲ್ಲಿಯೂ ವಿರಕ್ತನಾಗಿ ಸದಾ

ಜ್ಞಾತ್ವಾ ತಸ್ಯ ತು ತದ್ವೃತ್ತಂ ಭರದ್ವಾಜೋ ಮಹಾಮುನಿಃ ।
ದದೌ ವಿಶ್ರವಸೇ ಭಾರ್ಯಾಂ ಸ ಸುತಾಂ ದೇವವರ್ಣಿನೀಮ್ ॥ ೩

ಪ್ರತಿಗೃಹ್ಯ ತು ಧರ್ಮೇಣ ಭರದ್ವಾಜಸುತಾಂ ತದಾ ।
ಪ್ರಜಾನ್ವೇಷಿಕಯಾ ಬುದ್ಧ್ಯಾ ಶ್ರೇಯೋ ಹ್ಯಸ್ಯ ವಿಚಿಂತಯನ್ ॥
ಮುದಾ ಪರಮಯಾ ಯುಕ್ತೋ ವಿಶ್ರವಾ ಮುನಿಪುಂಗವಃ ।
ಸ ತಸ್ಯಾಂ ವೀರ್ಯಸಂಪನ್ನಮಪತ್ಯಂ ಪರಮಾದ್ಭುತಮ್ ॥ ೫

ಜನಯಾಮಾಸ ಧರ್ಮಜ್ಞಃ ಸರ್ವೈರ್ಬ್ರಹ್ಮಗುಣೈರ್ಯುತಮ್ ।
ತಸ್ಮಿನ್ ಜಾತೇ ತು ಸಂಹೃಷ್ಟಃ ಸಂಬಭೂವ ಪಿತಾಮಹಃ ॥ ೬

ದೃಷ್ಟ್ವಾ ಶ್ರೇಯಸ್ಕರೀಂ ಬುದ್ಧಿಂ ಧನಾಧ್ಯಕ್ಷೋ ಭವಿಷ್ಯತಿ ।
ನಾಮ ತಸ್ಯಾಕರೋತ್ ಪ್ರೀತಃ ಸಾರ್ಧಂ ದೇವರ್ಷಿಭಿಸ್ತದಾ ॥ ೭

---

ಧರ್ಮನಿಷ್ಠನಾಗಿದ್ದನು (೧-೨) ಹೀಗಿರಲು ಭರದ್ವಾಜಮಹರ್ಷಿಯು ವಿಶ್ರವಸ್ಸಿನ ವೃತ್ತಾಂತವನ್ನು ತಿಳಿದು, ಆತನಿಗೆ ತನ್ನ ಮಗಳಾದ ದೇವವರ್ಣಿನಿಯನ್ನು ಕೊಟ್ಟು ವಿವಾಹಮಾಡಲುದ್ದೇಶಿಸಿದನು (೩) ಆಗ ವಿಶ್ರವಸ್ಸು ಭರದ್ವಾಜತನಯಳನ್ನು ವಿಧಿಪೂರ್ವಕವಾಗಿ ಮದುವೆಯಾದನು ಲೋಕಧರ್ಮವನ್ನರಿತ ಆ ಮುನಿಪುಂಗವನಿಗೆ ಪತ್ನಿಯ ಸದ್ಗುಣಗಳಿಂದ ಸಂತೋಷವಾಗಿ, ಲೋಕಹಿತಕ್ಕೋಸ್ಕರ ಅವಳಲ್ಲಿ ಸಂತತಿಯನ್ನು ಪಡೆಯಬೇಕೆಂದು ಇಚ್ಛೆಯಾಯಿತು (೪) ಆಗ ವಿಶ್ರವಸ್ಸು ದೇವವರ್ಣಿನಿಯಲ್ಲಿ ವೀರ್ಯವಂತನೂ ಬ್ರಾಹ್ಮಣೋಚಿತವಾದ ಸಮಸ್ತಗುಣಗಳಿಂದ ಯುಕ್ತನೂ ವಿಸ್ಮಯಾವಹಚರಿತ್ರನೂ ಆದ ಒಬ್ಬ ಪುತ್ರನನ್ನು ಪಡೆದನು. ಆ ಮಗು ಜನಿಸಲಾಗಿ ಅದರ ಪಿತಾಮಹನಾದ ಪುಲಸ್ತ್ಯನಿಗೆ ಪರಮಾನಂದವಾಯಿತು ವಿಶ್ರವಸ್ಸಿನ ಲೋಕಹಿತೇಚ್ಛೆಯನ್ನು ಪರ್ಯಾಲೋಚಿಸಿ, ಆ ಮಗು ಮುಂದೆ ಧನಾಧ್ಯಕ್ಷನಾಗುವನೆಂದು ಪುಲಸ್ತ್ಯನು ದಿವ್ಯದೃಷ್ಟಿಯಿಂದ ತಿಳಿದುಕೊಂಡನು * (೫-೬) ಅನಂತರ ,ಸಂಪ್ರೀತನಾದ ಪುಲಸ್ತ್ಯನು ದೇವರ್ಷಿ

* ಮೂಲದಲ್ಲಿರುವ 'ಪಿತಾಮಹ' ಎಂದರೆ ಬ್ರಹ್ಮನೆಂದೂ, 'ಶ್ರೇಯಸ್ಕರೀ ಬುದ್ಧಿ'ಯು ಮಗುವಿನದೆಂದೂ ವ್ಯಾಖ್ಯಾನಕಾರರು ವಿವಿಧಾನ್ವಯಗಳಿಂದ ಬೇರೆ ಬೇರೆ ಅರ್ಥವನ್ನು ಹೇಳಿದ್ದಾರೆ

ಯಸ್ಮಾದ್ವಿಶ್ರವಸೋಽಪತ್ಯಂ ಸಾದೃಶ್ಯಾದ್ವಿಶ್ರವಾ ಇವ ।
ತಸ್ಮಾದ್ವೈಶ್ರವಣೋ ನಾಮ ಭವಿಷ್ಯತ್ಯೇಷ ವಿಶ್ರುತಃ ॥ ೮

ಸ ತು ವೈಶ್ರವಣಸ್ತತ್ರ ತಪೋವನಗತಸ್ತದಾ ।
ಅವರ್ಧತಾಹುತಿಹುತೋ ಮಹಾತೇಜಾ ಯಥಾನಲಃ ॥ ೯

ತಸ್ಯಾಶ್ರಮಪದಸ್ಥಸ್ಯ ಬುದ್ಧಿರ್ಜಜ್ಞೇ ಮಹಾತ್ಮನಃ ।
ಚರಿಷ್ಯೇ ಪರಮಂ ಧರ್ಮಂ ಧರ್ಮೋ ಹಿ ಪರಮಾ ಗತಿಃ ॥ ೧೦

ಸ ತು ವರ್ಷಸಹಸ್ರಾಣಿ ತಪಸ್ತಪ್ತ್ವಾ ಮಹಾವನೇ ।
ಯಂತ್ರಿತೋ ನಿಯಮೈರುಗ್ರೈಶ್ಚಕಾರ ಸುಮಹತ್ತಪಃ ॥ ೧೧

ಪೂರ್ಣೇ ವರ್ಷಸಹಸ್ರಾಂತೇ ತಂ ತಂ ವಿಧಿಮಕಲ್ಪಯತ್ ।
ಜಲಾಶೀ ಮಾರುತಾಹಾರೋ ನಿರಾಹಾರಸ್ತಥೈವ ಚ ॥ ೧೨

ಏವಂ ವರ್ಷಸಹಸ್ರಾಣಿ ಜಗ್ಮುಸ್ತಾನ್ಯೇಕವರ್ಷವತ್ ।
ಅಥ ಪ್ರೀತೋ ಮಹಾತೇಜಾಃ ಸೇಂದ್ರೈಃ ಸುರಗಣೈಃ ಸಹ ॥ ೧೩

---

ಗಳೊಡಗೂಡಿ ಬಂದು ಆ ಶಿಶುವಿಗೆ 'ವೈಶ್ರವಣ' ಎಂದು ನಾಮಕರಣ ಮಾಡಿದನು ಏಕೆಂದರೆ, ಆ ಶಿಶು ವಿಶ್ರವಸ್ಸಿನ ಪುತ್ರನಾದ್ದರಿಂದಲೂ ಆಕೃತಿಯಲ್ಲಿ ವಿಶ್ರವಸ್ಸನ್ನು ಹೋಲುತ್ತಿದ್ದುದರಿಂದಲೂ ಈತನು ವೈಶ್ರವಣನೆಂದು ವಿಖ್ಯಾತನಾಗಲಿ—ಎಂದು ಪುಲಸ್ತ್ಯನ ಆಶಯವಾಗಿತ್ತು (೭-೮) ಆಮೇಲೆ ವೈಶ್ರವಣನು ಆಹುತಿಗಳಿಂದ ಹುತನಾದ ಯಜ್ಞೇಶ್ವರನಂತೆ ಮಹಾತೇಜಸ್ವಿಯಾಗಿ, ತಪೋವನದಲ್ಲಿ ಬೆಳೆದನು ಹೀಗಿರಲು ಆ ಮಹಾತ್ಮನಿಗೆ "ನಾನು ಉಗ್ರವಾದ ತಪಸ್ಸನ್ನಾಚರಿಸುವೆನು ಧರ್ಮಸಾಧನವಾದ ತಪಸ್ಸೇ ಅಲ್ಲವೆ ಜೀವಿಗಳಿಗೆ ಪರಮಗತಿ ? " ಎಂಬ ಬುದ್ಧಿಯುಂಟಾಯಿತು (೯-೧೦) ಆಗ ವೈಶ್ರವಣನು ದಟ್ಟವಾದ ಅರಣ್ಯದಲ್ಲಿದ್ದು, ಕಠೋರವಾದ ನಿಯಮಗಳಿಗೆ ಒಳಗಾಗಿ, ಒಂದು ಸಾವಿರ ವರ್ಷಗಳವರೆಗೆ ಉಗ್ರವಾದ ತಪಸ್ಸನ್ನಾಚರಿಸಿದನು ಆಮೇಲೆ ಇನ್ನೂ ಕೆಲವು ಕಟ್ಟುಗಳಿಗೆ ಒಳಪಟ್ಟು ಕೇವಲ ಜಲಾಹಾರ, ವಾತಾಹಾರ, ಅವುಗಳೂ ಇಲ್ಲದ ನಿರಾಹಾರಗಳಿಂದ ವರ್ಷಸಹಸ್ರ ಪರ್ಯಂತವಾಗಿ ತಪೋನಿರತನಾದನು (೧೧-೧೨) ಶ್ರೀರಾಮ, ಹೀಗೆ ಸಾವಿರಾರು ವರ್ಷಗಳನ್ನು ಒಂದು ವರ್ಷದಂತೆ ಆತನು ಅನಾಯಾಸ

ಗತ್ವಾ ತಸ್ಯಾಶ್ರಮಪದಂ ಬ್ರಹ್ಮೇದಂ ವಾಕ್ಯಮಬ್ರವೀತ್ ।
ಪರಿತುಷ್ಟೋಽಸ್ಮಿ ತೇ ವತ್ಸ ಕರ್ಮಣಾನೇನ ಸುವ್ರತ ॥ ೧೪

ವರಂ ವೃಣೀಷ್ವ ಭದ್ರಂ ತೇ ವರಾರ್ಹಸ್ತ್ವಂ ಮಹಾಮತೇ ।
ಅಥಾಬ್ರವೀದ್ವೈಶ್ರವಣಃ ಪಿತಾಮಹಮುಪಸ್ಥಿತಮ್ ॥ ೧೫

ಭಗವನ್ ಲೋಕಪಾಲತ್ವಮಿಚ್ಛೇಯಂ ವಿತ್ತರಕ್ಷಣಮ್ ।
ಅಥಾಬ್ರವೀದ್ವೈಶ್ರವಣಂ ಪರಿತುಷ್ಟೇನ ಚೇತಸಾ ॥ ೧೬

ಬ್ರಹ್ಮಾ ಸುರಗಣೈಃ ಸಾರ್ಧಂ ಬಾಢಮಿತ್ಯೇವ ಹೃಷ್ಟವತ್ ।
ಅಹಂ ವೈ ಲೋಕಪಾಲಾನಾಂ ಚತುರ್ಥಂ ಸ್ರಷ್ಟುಮುದ್ಯತಃ ॥ ೧೭

ಯಮೇಂದ್ರವರುಣಾನಾಂ ಚ ಪದಂ ಯತ್ತವ ಚೇಪ್ಸಿತಮ್ ।
ತದ್ಗಚ್ಛ ತ್ವಂ ಹಿ ಧರ್ಮಜ್ಞ ನಿಧೀಶತ್ವಮವಾಪ್ನುಹಿ ॥ ೧೮

ಶಕ್ರಾಂಬುಪಯಮಾನಾಂ ಚ ಚತುರ್ಥಸ್ತ್ವಂ ಭವಿಷ್ಯಸಿ ।
ಏತಚ್ಚ ಪುಷ್ಪಕಂ ನಾಮ ವಿಮಾನಂ ಸೂರ್ಯಸಂನಿಭಮ್ ॥ ೧೯

---

ವಾಗಿ ಕಳೆದನು ತೇಜೋನಿಧಿಯಾದ ಬ್ರಹ್ಮದೇವನು ವೈಶ್ರವಣನ ತಪಸ್ಸಿನಿಂದ ಸಂತುಷ್ಟನಾಗಿ ಇಂದ್ರಾದಿ ದೇವತೆಗಳೊಡನೆ ಬಂದು "ವತ್ಸ–ವೈಶ್ರವಣ, ನಿನ್ನ ತಪಶ್ಚರಣದಿಂದ ಪರಿತುಷ್ಟನಾಗಿದ್ದೇನೆ ನಿನಗೆ ಮಂಗಳವಾಗಲಿ. ವರವನ್ನು ಪಡೆಯಲು ಅರ್ಹನಾಗಿದ್ದೀಯೆ ನಿನಗೆ ಬೇಕಾದ ವರವನ್ನು ಕೇಳಿಕೊ" ಎಂದನು (೧೩–೧೪) ಆಗ ತನ್ನೆದುರಿಗೆ ಪ್ರತ್ಯಕ್ಷನಾದ ಬ್ರಹ್ಮನನ್ನು ನೋಡಿ ವೈಶ್ರವಣನು "ಭಗವನ್, ನಾನು ಲೋಕಪಾಲನೆನಿಸಿ ಸಮಸ್ತ ನಿಧಿಗಳಿಗೂ ಅಧಿಪತಿಯಾಗಬೇಕೆಂದು ಬಯಸುತ್ತೇನೆ" ಎಂದು ನುಡಿದನು ದೇವತೆಗಳೊಡನಿದ್ದ ಬ್ರಹ್ಮನು ಸಂತುಷ್ಟಾಂತರಂಗನಾಗಿ "ಒಳ್ಳೆಯದು ಹಾಗೆಯೇ ಆಗಲಿ ನಾಲ್ಕನೆಯ ಲೋಕಪಾಲನೊಬ್ಬನನ್ನು ನಾನು ಸೃಜಿಸಬೇಕೆಂದು ಸಂಕಲ್ಪಿಸಿದ್ದೆನು (೧೫–೧೭) ನೀನು ಲೋಕಪಾಲ ಪದವಿಯನ್ನು ಬಯಸಿದ್ದೀಯ ಆದ್ದರಿಂದ ಯಮ, ಇಂದ್ರ, ವರುಣರೊಡನೆ ನೀನು ನಾಲ್ಕನೆಯ ಲೋಕಪಾಲನಾಗು ಎಲೈ ಧರ್ಮಜ್ಞನೆ, ಸಮಸ್ತ ನಿಧಿಗಳಿಗೂ ಅಧಿಪತಿಯಾಗಿರು. ಇಂದ್ರ, ವರುಣ, ಯಮರೊಡನೆ ನೀನು ನಾಲ್ಕನೆಯವನಾಗುವೆ. ಅಲ್ಲದೆ ಇಲ್ಲಿ ನೋಡು ಇದು ಸೂರ್ಯಸಂಕಾಶವಾದ

**ಪ್ರತಿಗೃಹ್ಣೀಷ್ವ ಯಾನಾರ್ಥಂ ತ್ರಿದಶೈಃ ಸಮತಾಂ ವ್ರಜ ।**
**ಸ್ವಸ್ತಿ ತೇಽಸ್ತು ಗಮಿಷ್ಯಾಮಃ ಸರ್ವ ಏವ ಯಥಾಗತಮ್ ॥　　೨೦**

**ಕೃತಕೃತ್ಯಾ ವಯಂ ತಾತ ದತ್ವಾ ತವ ವರದ್ವಯಮ್ ।**
**ಇತ್ಯುಕ್ತ್ವಾ ಸ ಗತೋ ಬ್ರಹ್ಮಾ ಸ್ವಸ್ಥಾನಂ ತ್ರಿದಶೈಃ ಸಹ ॥　　೨೧**

**ಗತೇಷು ಬ್ರಹ್ಮಪೂರ್ವೇಷು ದೇವೇಷ್ವಥ ನಭಃಸ್ಥಲಮ್ ।**
**ಧನೇಶಃ ಪಿತರಂ ಪ್ರಾಹ ಪ್ರಾಂಜಲಿಃ ಪ್ರಯತಾತ್ಮವಾನ್ ॥　　೨೨**

**ನಿವಾಸನಂ ನ ಮೇ ದೇವೋ ವಿದಧೇ ಸ ಪ್ರಜಾಪತಿಃ ।**
**ಭಗವನ್ ಲಬ್ಧವಾನಸ್ಮಿ ವರಮಿಷ್ಟಂ ಪಿತಾಮಹಾತ್ ॥　　೨೩**

**ತಂ ಪಶ್ಯ ಭಗವನ್ ಕಿಂಚಿನ್ನಿವಾಸಂ ಸಾಧು ಮೇ ಪ್ರಭೋ ।**
**ನ ಚ ಪೀಡಾ ಭವೇದ್ಯತ್ರ ಪ್ರಾಣಿನೋ ಯಸ್ಯ ಕಸ್ಯಚಿತ್ ॥　　೨೪**

**ಏವಮುಕ್ತಸ್ತು ಪುತ್ರೇಣ ವಿಶ್ರವಾ ಮುನಿಪುಂಗವಃ ।**
**ವಚನಂ ಪ್ರಾಹ ಧರ್ಮಜ್ಞಃ ಶ್ರೂಯತಾಮಿತಿ ಸತ್ತಮಃ ॥　　೨೫**

---

ಪುಷ್ಪಕವೆಂಬ ವಿಮಾನ (೧೭-೧೯) ನಿನ್ನ ಸಂಚಾರಾರ್ಥವಾಗಿ ಇದನ್ನು ಸ್ವೀಕರಿಸು ದೇವತೆಗಳಿಗೆ ಸಮಾನನಾಗು ನಿನಗೆ ಶುಭವಾಗಲಿ ವತ್ಸ, ಈ ಎರಡು ವರಗಳನ್ನು ಸಲ್ಲಿಸಿ ನಾವು ಕೃತಕೃತ್ಯರಾದೆವು ಇನ್ನು ನಾವು ಹೊರಡುತ್ತೇವೆ" ಎಂದು ಹೇಳಿ ದೇವತೆಗಳೊಡನೆ ತನ್ನ ಲೋಕಕ್ಕೆ ಹೊರಟು ಹೋದನು (೨೦-೨೧) ಹೀಗೆ ಬ್ರಹ್ಮಾದಿಗಳು ಅಂತರಿಕ್ಷಮಾರ್ಗದಲ್ಲಿ ನಿರ್ಗಮಿಸಲು, ಧನಾಧಿಪತಿಯಾದ ವೈಶ್ರವಣನು ತನ್ನ ತಂದೆಯಾದ ವಿಶ್ರವಸ್ಸನ್ನು ಕಂಡು ವಿನಯದಿಂದ ನಮಸ್ಕರಿಸಿ, "ಭಗವನ್, ಬ್ರಹ್ಮದೇವನಿಂದ ಅಭೀಷ್ಟವಾದ ವರವನ್ನು ಪಡೆದಿದ್ದೇನೆ ಆದರೆ ಪ್ರಜೇಶ್ವರನಾದ ಆ ದೇವನು ನನಗೆ ವಾಸಸ್ಥಾನವನ್ನು ಗೊತ್ತುಪಡಿಸಲಿಲ್ಲ (೨೨-೨೩) ಆದ್ದರಿಂದ, ಓ ಪ್ರಭು, ನನಗೊಂದು ವಾಸಸ್ಥಳವನ್ನು ನಿರ್ದೇಶಿಸು ಅಲ್ಲಿ ಯಾವ ಪ್ರಾಣಿಗೂ ನನ್ನಿಂದ ಹಿಂಸೆಯಾಗದಂತಿರಲಿ" ಎಂದು ವಿಜ್ಞಾಪಿಸಿದನು (೨೪) ಆಗ ಮುನಿಪುಂಗವನಾದ ವಿಶ್ರವಸ್ಸು "ವತ್ಸ, ದಕ್ಷಿಣ ಸಮುದ್ರದ ಆಚೆಯ ದಡದಲ್ಲಿ ತ್ರಿಕೂಟವೆಂಬ ಪರ್ವತವಿದೆ. ಅದರ ಶಿಖರ

**ದಕ್ಷಿಣಸ್ಯೋದಧೇಸ್ತೀರೇ ತ್ರಿಕೂಟೋ ನಾಮ ಪರ್ವತಃ ।**
**ತಸ್ಯಾಗ್ರೇ ತು ವಿಶಾಲಾ ಸಾ ಮಹೇಂದ್ರಸ್ಯ ಪುರೀ ಯಥಾ ॥ ೨೬**

**ಲಂಕಾ ನಾಮ ಪುರೀ ರಮ್ಯಾ ನಿರ್ಮಿತಾ ವಿಶ್ವಕರ್ಮಣಾ ।**
**ರಾಕ್ಷಸಾನಾಂ ನಿವಾಸಾರ್ಥಂ ಯಥೇಂದ್ರಸ್ಯಾಮರಾವತೀ ॥ ೨೭**

**ತತ್ರ ತ್ವಂ ವಸ ಭದ್ರಂ ತೇ ಲಂಕಾಯಾಂ ನಾತ್ರ ಸಂಶಯಃ ।**
**ಹೇಮಪ್ರಾಕಾರಪರಿಖಾ ಯಂತ್ರಶಸ್ತ್ರಸಮಾವೃತಾ ॥ ೨೮**

**ರಮಣೀಯಾ ಪುರೀ ಸಾ ಹಿ ರುಕ್ಮವೈದೂರ್ಯತೋರಣಾ ।**
**ರಾಕ್ಷಸೈಃ ಸಾ ಪರಿತ್ಯಕ್ತಾ ಪುರಾ ವಿಷ್ಣುಭಯಾರ್ದಿತೈಃ ॥ ೨೯**

**ಶೂನ್ಯಾ ರಕ್ಷೋಗಣೈಃ ಸರ್ವೈ ರಸಾತಲತಲಂ ಗತೈಃ ।**
**ಶೂನ್ಯಾ ಸಂಪ್ರತಿ ಲಂಕಾ ಸಾ ಪ್ರಭುಸ್ತಸ್ಯಾ ನ ವಿದ್ಯತೇ ॥ ೩೦**

**ಸ ತ್ವಂ ತತ್ರ ನಿವಾಸಾಯ ಗಚ್ಛ ಪುತ್ರ ಯಥಾಸುಖಮ್ ।**
**ನಿರ್ದೋಷಸ್ತತ್ರ ತೇ ವಾಸೋ ನ ಬಾಧಾ ತತ್ರ ಕಸ್ಯಚಿತ್ ॥ ೩೧**

**ಏತಚ್ಛ್ರುತ್ವಾ ಸ ಧರ್ಮಾತ್ಮಾ ಧರ್ಮಿಷ್ಠಂ ವಚನಂ ಪಿತುಃ ।**
**ನಿವಾಸಯಾಮಾಸ ತದಾ ಲಂಕಾಂ ಪರ್ವತಮೂರ್ಧನಿ ॥ ೩೨**

---

ದಲ್ಲಿ ಇಂದ್ರನ ಅಮರಾವತಿಯಂತೆ ಭವ್ಯವಾದ ಲಂಕೆಯೆಂಬ ನಗರವುಂಟು. ಅದನ್ನು ವಿಶ್ವಕರ್ಮನು ರಾಕ್ಷಸರ ನಿವಾಸಕ್ಕಾಗಿ ಹಿಂದೆ ನಿರ್ಮಿಸಿದ್ದನು. ನೀನು ಅಲ್ಲಿ ವಾಸವಾಗಿರು (೨೬-೨೭) ನಿಶ್ಚಯವಾಗಿಯೂ ನಿನಗೆ ಶುಭವಾಗುವುದು. ಲಂಕಾನಗರವು ಸುವರ್ಣಮಯ ಪ್ರಾಕಾರಗಳಿಂದ ಪರಿವೃತವಾಗಿದೆ. ಸುತ್ತಲೂ ಕಂದಕವಿದೆ ವಿವಿಧ ಯಂತ್ರಗಳಿಂದಲೂ ಆಯುಧಗಳಿಂದಲೂ ಸನ್ನದ್ಧವಾಗಿದೆ ಚಿನ್ನ, ವೈಡೂರ್ಯಾದಿಗಳಿಂದ ಅಲಂಕೃತವಾದ ಪುರದ್ವಾರವಿದೆ ವತ್ಸ, ಆ ನಗರವು ಬಹು ಸುಂದರವಾಗಿದೆ. ಈಗ ರಾಕ್ಷಸರು ಅಲ್ಲಿಲ್ಲ ವಿಷ್ಣುವಿನ ಭಯದಿಂದ ಅವರು ಲಂಕೆಯನ್ನು ತ್ಯಜಿಸಿ ಹೋಗಿದ್ದಾರೆ (೨೮-೨೯) ಅವರೆಲ್ಲರೂ ರಸಾತಳಕ್ಕೆ ಹೋಗಿದ್ದಾರೆ ನಗರವು ಶೂನ್ಯವಾಗಿದೆ. ಅದಕ್ಕೆ ಯಾವನೂ ಈಗ ಒಡೆಯನಿಲ್ಲ ಮಗನೆ, ನೀನು ಆ ಲಂಕೆಗೆ ಹೋಗಿ ಸುಖದಿಂದ ವಾಸವಾಗಿರು ಅಲ್ಲಿ ಯಾವ ತೊಂದರೆಯೂ ನಿನಗೆ ಸಮನಿಸದು. ನಿನ್ನಿಂದ ಇತರರಿಗೂ ತೊಂದರೆಯಾಗದು" ಎಂದು

**ನೈರ್ಋತಾನಾಂ ಸಹಸ್ರೈಸ್ತು ಹೃಷ್ಟೈಃ ಪ್ರಮುದಿತೈಃ ಸಹ ।**
**ಅಚಿರೇಣೈವ ಕಾಲೇನ ಸಂಪೂರ್ಣಾ ತಸ್ಯ ಶಾಸನಾತ್ ॥ ೩೩**

**ಸ ತು ತತ್ರಾವಸತ್ ಪ್ರೀತೋ ಧರ್ಮಾತ್ಮಾ ನೈರ್ಋತರ್ಷಭಃ ।**
**ಸಮುದ್ರಪರಿಖಾಯಾಂ ತು ಲಂಕಾಯಾಂ ವಿಶ್ರವಾತ್ಮಜಃ ॥ ೩೪**

**ಕಾಲೇ ಕಾಲೇ ತು ಧರ್ಮಾತ್ಮಾ ಪುಷ್ಪಕೇಣ ಧನೇಶ್ವರಃ ।**
**ಅಭ್ಯಾಗಚ್ಛದ್ವಿನೀತಾತ್ಮಾ ಪಿತರಂ ಮಾತರಂ ಚ ಹಿ ॥ ೩೫**

**ಸ ದೇವಗಂಧರ್ವಗಣೈರಭಿಷ್ಟುತ-**
**ಸ್ತಥಾಪ್ಸರೋನೃತ್ಯವಿಭೂಷಿತಾಲಯಃ ।**
**ಗಭಸ್ತಿಭಿಃ ಸೂರ್ಯ ಇವಾವಭಾಸಯನ್**
**ಪಿತುಃ ಸಮೀಪಂ ಪ್ರಯಯೌ ಸ ವಿತ್ತಪಃ ॥ ೩೬**

**ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತೃತೀಯಃ ಸರ್ಗಃ**

---

ತಿಳಿಸಿದನು (೩೦-೩೧) ಧರ್ಮಾತ್ಮನಾದ ವೈಶ್ರವಣನು ತಂದೆಯ ಧರ್ಮಾನ್ವಿತವಾದ ವಚನವನ್ನಾಲಿಸಿ, ಅದರಂತೆಯೇ ತ್ರಿಕೂಟಶಿಖರದಲ್ಲಿದ್ದ ಲಂಕೆಯಲ್ಲಿ ನೆಲೆಸಿದನು ಕೆಲವು ದಿನಗಳಲ್ಲಿಯೇ ಲಂಕೆಯು ಹೃಷ್ಟಪುಷ್ಟರಾದ ರಾಕ್ಷಸರ ಸಂದಣಿಯಿಂದ ತುಂಬಿತು ವೈಶ್ರವಣನ ಆಜ್ಞೆಯಂತೆ ಬಹುಮಂದಿ ಪ್ರಜೆಗಳು ಬಂದು ನೆಲೆಸಿದರು (೩೨-೩೩) ವೈಶ್ರವಣನು ಅಲ್ಲಿದ್ದ ರಾಕ್ಷಸರಿಗೆ ಅಧಿಪತಿಯಾದನು ಆ ಧರ್ಮಾತ್ಮನು ಈ ಪ್ರಕಾರವಾಗಿ ಲಂಕೆಯಲ್ಲಿ ಸಂತೋಷದಿಂದ ವಾಸವಾಗಿದ್ದನು ಆತನು ಆಗಾಗ ಪುಷ್ಪಕವನ್ನೇರಿ ಬಂದು ತಂದೆತಾಯಿಗಳನ್ನು ವಿನಯದಿಂದ ಕಂಡು ಹೋಗುತ್ತಿದ್ದನು (೩೪-೩೫) ಆ ಧನೇಶ್ವರನ ಅರಮನೆಗೆ ಬಂದು ದೇವಗಂಧರ್ವರು ಸ್ತುತಿಸುತ್ತಿದ್ದರು ಅಪ್ಸರೆಯರು ನರ್ತಿಸುತ್ತಿದ್ದರು ಕಿರಣಗಳಿಂದ ವಿರಾಜಿಸುವ ಸೂರ್ಯನಂತೆ ವೈಶ್ರವಣನು ತೇಜೋರಾಶಿಯಾಗಿದ್ದನು. ಆದರೂ ಪಿತೃದರ್ಶನಕ್ಕಾಗಿ ವಿಶ್ರವಸ್ಸಿನ ಬಳಿಗೆ ಆತನು ವಿನಯದಿಂದ ಆಗಾಗ ಬರುತ್ತಿದ್ದನು (೩೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂರನೆಯ ಸರ್ಗ

## ಚತುರ್ಥಃ ಸರ್ಗಃ

ರಾವಣಾದಿಪೂರ್ವತನರಾಕ್ಷಸೋತ್ಪತ್ತಿಕಥನಮ್

ಶ್ರುತ್ವಾಗಸ್ತ್ಯೇರಿದಂ ವಾಕ್ಯಂ ರಾಮೋ ವಿಸ್ಮಯಮಾಗತಃ ।
ಕಥಮಾಸೀತ್ತು ಲಂಕಾಯಾಂ ಸಂಭವೋ ರಕ್ಷಸಾಂ ಪುರಾ ॥ ೧

ತತಃ ಶಿರಃ ಕಂಪಯಿತ್ವಾ ತ್ರೇತಾಗ್ನಿಸಮವಿಗ್ರಹಮ್ ।
ತಮಗಸ್ತ್ಯಂ ಮುಹುರ್ದೃಷ್ಟ್ವಾ ಸ್ಮಯಮಾನೋಽಭ್ಯಭಾಷತ ॥ ೨

ಭಗವನ್ ಪೂರ್ವಮಪ್ಯೇಷಾ ಲಂಕಾಸೀತ್ ಪಿಶಿತಾಶಿನಾಮ್ ।
ಶ್ರುತ್ವೇದಂ ಭಗವದ್ವಾಕ್ಯಂ ಜಾತೋ ಮೇ ವಿಸ್ಮಯಃ ಪರಃ ॥ ೩

ಪುಲಸ್ತ್ಯವಂಶಾದುದ್ಭೂತಾ ರಾಕ್ಷಸಾ ಇತಿ ನಃ ಶ್ರುತಮ್ ।
ಇದಾನೀಮನ್ಯತಶ್ಚಾಪಿ ಸಂಭವಃ ಕೀರ್ತಿತಸ್ತ್ವಯಾ ॥ ೪

ರಾವಣಾತ್ ಕುಂಭಕರ್ಣಾಚ್ಚ ಪ್ರಹಸ್ತಾದ್ವಿಕಟಾದಪಿ ।
ರಾವಣಸ್ಯ ಚ ಪುತ್ರೇಭ್ಯಃ ಕಿಂ ನು ತೇ ಬಲವತ್ತರಾಃ ॥ ೫

## ಸರ್ಗ ೪

ಶ್ರೀರಾಮನ ಪ್ರಶ್ನೆಗೆ ಅಗಸ್ತ್ಯರ ಉತ್ತರ  ಹೇತಿಯೆಂಬ ರಾಕ್ಷಸನಿಗೆ
ವಿದ್ಯುತ್ಕೇಶನೆಂಬ ಪುತ್ರನು ಜನಿಸುವುದು  ಆತನ ಮಗನಾದ
ಸುಕೇಶನಿಗೆ ಪಾರ್ವತೀಪರಮೇಶ್ವರರ ಅನುಗ್ರಹ

ಅಗಸ್ತ್ಯರ ನುಡಿಯನ್ನು ಕೇಳಿ ಶ್ರೀರಾಮನು ಆಶ್ಚರ್ಯಚಕಿತನಾದನು ಕುಬೇರನಿಗಿಂತಲೂ ಹಿಂದೆ ಲಂಕೆಯಲ್ಲಿ ರಾಕ್ಷಸರು ಇದ್ದುದಾದರೂ ಹೇಗೆಂದು ಶ್ರೀರಾಮನು ವಿಸ್ಮಿತನಾಗಿ ತಲೆದೂಗುತ್ತ, ತ್ರೇತಾಗ್ನಿಯಂತೆ ದೀಪ್ತಕಾಯರಾದ ಅಗಸ್ತ್ಯಮಹರ್ಷಿಗಳನ್ನು ನೋಡಿ "ಭಗವನ್, ಪೂರ್ವದಲ್ಲಿಯೂ ಸಹ ಲಂಕೆಯು ಮಾಂಸಾಶಿಗಳಾದ ರಾಕ್ಷಸರಿಗೆ ವಸತಿಯಾಗಿತ್ತೆಂಬ ತಮ್ಮ ನುಡಿಯನ್ನು ಕೇಳಿ ನನಗೆ ಪರಮಾಶ್ಚರ್ಯವಾಗಿದೆ (೧-೩)  ರಾಕ್ಷಸರು ಪುಲಸ್ತ್ಯವಂಶದಲ್ಲಿ ಜನಿಸಿದರೆಂದು ನಾವು ಕೇಳಿದ್ದೇವೆ  ಬೇರೊಂದು ವಂಶದಲ್ಲಿಯೂ ಅವರು ಜನಿಸಿದ್ದರೆಂದು ಅರ್ಥ ಬರುವಂತೆ ತಾವು ಹೇಳಿದಿರಿ  ಅವರು ರಾವಣ

**ಕ ಏಷಾಂ ಪೂರ್ವಕೋ ಬ್ರಹ್ಮನ್ ಕಿಂನಾಮಾ ಚ ಬಲೋತ್ಕಟಃ ।**
**ಅಪರಾಧಂ ಚ ಕಂ ಪ್ರಾಪ್ಯ ವಿಷ್ಣುನಾ ದ್ರಾವಿತಾಃ ಕಥಮ್ ॥ ೬**

**ಏತದ್ವಿಸ್ತರತಃ ಸರ್ವಂ ಕಥಯಸ್ವ ಮಮಾನಘ ।**
**ಕೌತೂಹಲಮಿದಂ ಮಹ್ಯಂ ನುದ ಭಾನುರ್ಯಥಾ ತಮಃ ॥ ೭**

**ರಾಘವಸ್ಯ ವಚಃ ಶ್ರುತ್ವಾ ಸಂಸ್ಕಾರಾಲಂಕೃತಂ ಶುಭಮ್ ।**
**ಈಷದ್ವಿಸ್ಮಯಮಾನಸ್ತಮಗಸ್ತ್ಯಃ ಪ್ರಾಹ ರಾಘವಮ್ ॥ ೮**

**ಪ್ರಜಾಪತಿಃ ಪುರಾ ಸೃಷ್ಟ್ವಾ ಹ್ಯಪಃ ಸಲಿಲಸಂಭವಃ ।**
**ತಾಸಾಂ ಗೋಪಾಯನೇ ಸತ್ತ್ವಾನಸೃಜತ್ ಪದ್ಮಸಂಭವಃ ॥ ೯**

**ತೇ ಸತ್ತ್ವಾಃ ಸತ್ತ್ವಕರ್ತಾರಂ ವಿನೀತವದುಪಸ್ಥಿತಾಃ ।**
**ಕಿಂ ಕುರ್ಮ ಇತಿ ಭಾಷಂತಃ ಕ್ಷುತ್ಪಿಪಾಸಾಭಯಾರ್ದಿತಾಃ ॥ ೧೦**

---

ಕುಂಭಕರ್ಣರಿಗಿಂತಲೂ ಪ್ರಹಸ್ತ ವಿಕಟರಿಗಿಂತಲೂ ಬಲಾಢ್ಯರೆ? ರಾವಣ ಪುತ್ರರಿಗಿಂತಲೂ ಬಲಶಾಲಿಗಳೆ? (೪-೫) ದ್ವಿಜೋತ್ತಮರೆ, ಆ ರಾಕ್ಷಸರಿಗೆ ಮೂಲಪುರುಷನು ಯಾರು? ಅತ್ಯಂತ ಬಲಶಾಲಿಯಾದ ಆತನ ಹೆಸರೇನು? ಯಾವ ಅಪರಾಧವನ್ನು ಕಂಡು ವಿಷ್ಣುವು ಆ ರಾಕ್ಷಸರನ್ನು ಲಂಕೆಯಿಂದ ಓಡಿಸಿದನು? ಮಾನ್ಯರೆ, ಇದೆಲ್ಲವನ್ನೂ ವಿಸ್ತರವಾಗಿ ನನಗೆ ಹೇಳೋಣವಾಗಲಿ ಸೂರ್ಯನು ಕತ್ತಲೆಯನ್ನು ಹೋಗಲಾಡಿಸುವಂತೆ, ನನ್ನ ಈ ಕುತೂಹಲವನ್ನು ಪರಿಹರಿಸಿರಿ" ಎಂದು ಕೇಳಿದನು (೬-೭) ರಾಘವನ ವಿನಯಭೂಷಿತವಾದ ವಚನವಿನ್ಯಾಸವನ್ನು ಕೇಳಿ, ಅಗಸ್ತ್ಯಮುನಿಗಳು ಕೊಂಚ ಅಚ್ಚರಿಗೊಂಡು* ಕಿರುನಗೆಯಿಂದ ಹೀಗೆಂದರು "ರಾಘವ, ಪರಮಾತ್ಮನು ಆದಿಯಲ್ಲಿ ಜಲವನ್ನು ಸೃಜಿಸಿ, ಅದರಲ್ಲಿಯೇ ತಾನು ಕಾಣಿಸಿಕೊಂಡು ಬ್ರಹ್ಮದೇವನೆನಿಸಿದನು ಪದ್ಮಸಂಭವನೆಂದು ವಿಖ್ಯಾತನಾದ ಆ ಬ್ರಹ್ಮನು ಜಲದ ರಕ್ಷಣೆಗಾಗಿ ಪ್ರಾಣಿಗಳನ್ನು ಸೃಷ್ಟಿಸಿದನು (೮-೯). ಆ ಪ್ರಾಣಿಗಳು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ, ತಮ್ಮನ್ನು ಸೃಜಿಸಿದ ಬ್ರಹ್ಮನ ಬಳಿಗೆ ಹೋಗಿ, "ಈಗ ನಾವೇನು ಮಾಡಬೇಕು?"

* ಸ್ವಯಂ ಸರ್ವಜ್ಞನಾದ ಶ್ರೀರಾಮನು ಅಜ್ಞನಂತೆ ನಟಿಸುತ್ತಾನೆಂದು ಅಗಸ್ತ್ಯರಿಗೆ ಅಚ್ಚರಿ

**ಪ್ರಜಾಪತಿಸ್ತು ತಾನ್ಯಾಹ ಸತ್ತ್ವಾನಿ ಪ್ರಹಸನ್ನಿವ ।**
**ಆಭಾಷ್ಯ ವಾಚಾ ಯತ್ನೇನ ರಕ್ಷಧ್ವಮಿತಿ ಮಾನದಃ ॥ ೧೧**

**ರಕ್ಷಾಮೇತಿ ಚ ತತ್ರಾನ್ಯೇ ಯಕ್ಷಾಮ ಇತಿ ಚಾಪರೇ ।**
**ಭುಂಕ್ಷಿತಾಭುಂಕ್ಷಿತೈರುಕ್ತಸ್ತತಸ್ತಾನಾಹ ಭೂತಕೃತ್ ॥ ೧೨**

**ರಕ್ಷಾಮೇತಿ ಚ ಯೈರುಕ್ತಂ ರಾಕ್ಷಸಾಸ್ತೇ ಭವಂತು ವಃ ।**
**ಯಕ್ಷಾಮ ಇತಿ ಯೈರುಕ್ತಂ ಯಕ್ಷಾ ಏವ ಭವಂತು ವಃ ॥ ೧೩**

**ತತ್ರ ಹೇತಿಃ ಪ್ರಹೇತಿಶ್ಚ ಭ್ರಾತರೌ ರಾಕ್ಷಸಾಧಿಪೌ ।**
**ಮಧುಕೈಟಭಸಂಕಾಶೌ ಬಭೂವತುರರಿಂದಮೌ ॥ ೧೪**

**ಪ್ರಹೇತಿರ್ಧಾರ್ಮಿಕಸ್ತತ್ರ ತಪೋವನಗತಸ್ತದಾ ।**
**ಹೇತಿರ್ದಾರಕ್ರಿಯಾರ್ಥೇ ತು ಪರಂ ಯತ್ನಮಥಾಕರೋತ್ ॥ ೧೫**

**ಸ ಕಾಲಭಗಿನೀಂ ಕನ್ಯಾಂ ಭಯಾಂ ನಾಮ ಭಯಾವಹಾಮ್ ।**
**ಉದಾವಹದಮೇಯಾತ್ಮಾ ಸ್ವಯಮೇವ ಮಹಾಮತಿಃ ॥ ೧೬**

---

ಎಂದು ವಿನಯದಿಂದ ಕೇಳಿದರು ಆಗ ಬ್ರಹ್ಮನು ಕಿರುನಗೆಯಿಂದ "ಎಲೈ ಪ್ರಾಣಿಗಳೆ, ಸರ್ವಪ್ರಯತ್ನದಿಂದಲೂ ಜಲವನ್ನು 'ರಕ್ಷಿಸಿರಿ' " ಎಂದು ಹೇಳಿದನು (೧೦-೧೧). ಅದನ್ನು ಕೇಳಿ ಆ ಪ್ರಾಣಿಗಳಲ್ಲಿ ಕೆಲವರು ಹಸಿದಿದ್ದರೂ 'ರಕ್ಷಿಸುವೆವು' ಎಂದೂ ಕೆಲವರು 'ಯಕ್ಷಿಸುವೆವು' * ಎಂದೂ ಹೇಳಿದರು. ಆಗ ಪ್ರಜಾಪತಿಯು ಅವರನ್ನು ನೋಡಿ "ಎಲೈ ಜನರೆ, ನಿಮ್ಮಲ್ಲಿ 'ರಕ್ಷಿಸುವೆವು' ಎಂದವರು ರಾಕ್ಷಸರೆಂದೂ 'ಯಕ್ಷಿಸುವೆವು' ಎಂದವರು ಯಕ್ಷರೆಂದೂ ಪ್ರಸಿದ್ಧರಾಗಲಿ !" ಎಂಬುದಾಗಿ ನುಡಿದನು (೧೨-೧೩) ಹೀಗೆ ಸೃಷ್ಟರಾದ ರಾಕ್ಷಸರಲ್ಲಿ ಹೇತಿ, ಪ್ರಹೇತಿ—ಎಂಬ ಇಬ್ಬರು ಅಣ್ಣತಮ್ಮಂದಿರು ರಕ್ಷೋಧಿಪತಿಗಳಾದರು ಅವರಿಬ್ಬರೂ ಮಧುಕೈಟಭರಂತೆ ಪರಾಕ್ರಮಿಗಳಾಗಿದ್ದರು. ಪ್ರಹೇತಿಯು ಧರ್ಮನಿಷ್ಠನಾಗಿ ವಿರಕ್ತಿಯಿಂದ ತಪೋವನವನ್ನು ಸೇರಿದನು. ಹೇತಿಯಾದರೋ ಮದುವೆಯಾಗಿ ಗೃಹಸ್ಥನಾಗಬೇಕೆಂದು ಉದ್ದೇಶಿಸಿದನು (೧೪-೧೫) ಧೀಮಂತನೂ ಊಹಾತೀತ ಶೌರ್ಯಶಾಲಿಯೂ ಆದ

---

* ಪೂಜಿಸುವೆವು ಎಂದರ್ಥ ಯಕ್ಷ=ಪೂಜಾಯಾಮ್ ೯ನೆಯ ಶ್ಲೋಕದಲ್ಲಿ ಅರ್ಥಭೇದವೂ ೧೨ನೆಯ ಶ್ಲೋಕದಲ್ಲಿ ಅರ್ಥಭೇದ ಪಾಠಭೇದಗಳೂ ಉಂಟು.

**ಸ ತಸ್ಯಾಂ ಜನಯಾಮಾಸ ಹೇತೀ ರಾಕ್ಷಸಪುಂಗವಃ ।**
**ಪುತ್ರಂ ಪುತ್ರವತಾಂ ಶ್ರೇಷ್ಠೋ ವಿದ್ಯುತ್ಕೇಶ ಇತಿ ಶ್ರುತಮ್ ॥ ೧೭**

**ವಿದ್ಯುತ್ಕೇಶೋ ಹೇತಿಪುತ್ರಃ ಸ ದೀಪ್ತಾರ್ಕಸಮಪ್ರಭಃ ।**
**ವ್ಯವರ್ಧತ ಮಹಾತೇಜಾಸ್ತೋಯಮಧ್ಯ ಇವಾಂಬುಜಮ್ ॥ ೧೮**

**ಸ ಯದಾ ಯೌವನಂ ಭದ್ರಮನುಪ್ರಾಪ್ತೋ ನಿಶಾಚರಃ ।**
**ತತೋ ದಾರಕ್ರಿಯಾಂ ತಸ್ಯ ಕರ್ತುಂ ವ್ಯವಸಿತಃ ಪಿತಾ ॥ ೧೯**

**ಸಂಧ್ಯಾಯಾಸ್ತನಯಾಂ ಸೋಽಥ ಸಂಧ್ಯಾತುಲ್ಯಾಂ ಪ್ರಭಾವತಃ ।**
**ವರಯಾಮಾಸ ಪುತ್ರಾರ್ಥಂ ಹೇತೀ ರಾಕ್ಷಸಪುಂಗವಃ ॥ ೨೦**

**ಅವಶ್ಯಮೇವ ದಾತವ್ಯಾ ಪರಸ್ಮೈ ಸೇತಿ ಸಂಧ್ಯಯಾ ।**
**ಚಿಂತಯಿತ್ವಾ ಸುತಾ ದತ್ತಾ ವಿದ್ಯುತ್ಕೇಶಾಯ ರಾಘವ ॥ ೨೧**

**ಸಂಧ್ಯಾಯಾಸ್ತನಯಾಂ ಲಬ್ಧ್ವಾ ವಿದ್ಯುತ್ಕೇಶೋ ನಿಶಾಚರಃ ।**
**ರಮತೇ ಸ್ಮ ತಯಾ ಸಾರ್ಧಂ ಪೌಲೋಮ್ಯಾ ಮಘವಾನಿವ ॥ ೨೨**

---

ಹೇತಿಯು ಯಮನ ಸೋದರಿಯೂ ಭಯಂಕರಳೂ ಆದ ಭಯಾ ಎಂಬ ಕನ್ಯೆಯನ್ನು ಮದುವೆಯಾದನು ಅನಂತರ ಆ ಪತ್ನಿಯಲ್ಲಿ ಹೇತಿಗೆ ವಿದ್ಯುತ್ಕೇಶನೆಂಬ ಪುತ್ರನು ಜನಿಸಿದನು (೧೬-೧೭) ಹೇತಿಪುತ್ರನಾದ ಆ ವಿದ್ಯುತ್ಕೇಶನು ಆದಿತ್ಯನಂತೆ ತೇಜಸ್ವಿಯಾಗಿ ಉದಕಮಧ್ಯದಲ್ಲಿ ಬೆಳೆಯುವ ತಾವರೆಯಂತೆ ವರ್ಧಿಸಿದನು ಶ್ರೀರಾಮ, ವಿದ್ಯುತ್ಕೇಶನಿಗೆ ಯೌವನವು ಪ್ರಾಪ್ತವಾಗಲು ಆತನ ತಂದೆಯು ಮಗನಿಗೆ ವಿವಾಹಮಾಡಬೇಕೆಂದು ಸಂಕಲ್ಪಿಸಿ, ಸಂಧ್ಯಾದೇವಿಯ ತನಯಳೂ ಸಂಧ್ಯಾಸಮಾನಪ್ರಭಾವಶಾಲಿನಿಯೂ ಆದ ಸಾಲಕಟಂಕಟೆಯೆಂಬ ಕನ್ಯೆಯನ್ನು ತನ್ನ ಮಗನಿಗೆ ಕೊಡಬೇಕೆಂದು ಕೇಳಿದನು (೧೮-೨೦) ಸಂಧ್ಯೆಯಾದರೋ 'ಹೇಗಿದ್ದರೂ ಮಗಳನ್ನು ಪರರಿಗೆ ಕೊಡಲೇಬೇಕು' ಎಂದು ಚಿಂತಿಸಿ, ವಿದ್ಯುತ್ಕೇಶನಿಗೆ ತನ್ನ ಮಗಳನ್ನು ಮದುವೆಮಾಡಿಕೊಟ್ಟಳು ಈ ರೀತಿಯಲ್ಲಿ, ರಾಘವ, ವಿದ್ಯುತ್ಕೇಶನು ಸಂಧ್ಯಾತನಯಳನ್ನು ವಿವಾಹವಾಗಿ, ಇಂದ್ರನು ಶಚಿಯೊಡನೆ

**ಕೇನಚಿತ್ತ್ವಥ ಕಾಲೇನ ರಾಮ ಸಾಲಕಟಂಕಟಾ ।**
**ವಿದ್ಯುತ್ಕೇಶಾದ್ಗರ್ಭಮಾಪ ಘನರಾಜಿರಿವಾರ್ಣವಾತ್ ॥ ೨೩**

**ತತಃ ಸಾ ರಾಕ್ಷಸೀ ಗರ್ಭಂ ಘನಗರ್ಭಸಮಪ್ರಭಮ್ ।**
**ಪ್ರಸೂತಾ ಮಂದರಂ ಗತ್ವಾ ಗಂಗಾ ಗರ್ಭಮಿವಾಗ್ನಿಜಮ್ ॥ ೨೪**

**ತಮುತ್ಸೃಜ್ಯ ತು ಸಾ ಗರ್ಭಂ ವಿದ್ಯುತ್ಕೇಶರತಾರ್ಥಿನೀ ।**
**ರೇಮೇ ತು ಸಾರ್ಧಂ ಪತಿನಾ ವಿಸ್ಮೃತ್ಯ ಸುತಮಾತ್ಮಜಮ್ ॥ ೨೫**

**ಉತ್ಸೃಷ್ಟಸ್ತು ತದಾ ಗರ್ಭೋ ಘನಶಬ್ದಸಮಸ್ವನಃ ।**
**ತಯೋತ್ಸೃಷ್ಟಃ ಸ ತು ಶಿಶುಃ ಶರದರ್ಕಸಮದ್ಯುತಿಃ ॥ ೨೬**

**ನಿಧಾಯಾಸ್ಯೇ ಸ್ವಯಂ ಮುಷ್ಟಿಂ ರುರೋದ ಶನಕೈಸ್ತದಾ ।**
**ತತೋ ವೃಷಭಮಾಸ್ಥಾಯ ಪಾರ್ವತ್ಯಾ ಸಹಿತಃ ಶಿವಃ ॥ ೨೭**

**ವಾಯುಮಾರ್ಗೇಣ ಗಚ್ಛನ್ ವೈ ಶುಶ್ರಾವ ರುದಿತಸ್ವನಮ್ ।**
**ಅಪಶ್ಯದುಮಯಾ ಸಾರ್ಧಂ ರುದಂತಂ ರಾಕ್ಷಸಾತ್ಮಜಮ್ ॥ ೨೮**

---

ವಿಹರಿಸುವಂತೆ ಅವಳೊಡನೆ ವಿಹರಿಸುತ್ತಿದ್ದನು (೨೧-೨೨) ಕೆಲವು ದಿನಗಳಲ್ಲಿ ಆ ಸಾಲಕಟಂಕಟೆಯು, ಮೇಘರಾಜಿಯು ಸಮುದ್ರರಾಜನಿಂದ ಜಲಗರ್ಭವನ್ನು ಧರಿಸುವಂತೆ, ವಿದ್ಯುತ್ಕೇಶನಿಂದ ಗರ್ಭಿಣಿಯಾದಳು (೨೩). ಆ ರಾಕ್ಷಸಿಯು ಮಂದರಪರ್ವತಕ್ಕೆ ಹೋಗಿ, ಗಂಗೆಯು ಸ್ಕಂದನನ್ನು ಪ್ರಸವಿಸಿದಂತೆ, ಸಿಡಿಲಿನಂತೆ ಹೊಳೆಯುವ ಒಬ್ಬ ಪುತ್ರನನ್ನು ಹಡೆದಳು ಆಮೇಲೆ ಆ ರಾಕ್ಷಸಿಯು ವಿದ್ಯುತ್ಕೇಶನೊಡನೆ ವಿಹರಿಸಬೇಕೆಂಬ ಚಾಪಲ್ಯದಿಂದ ತನ್ನ ಶಿಶುವನ್ನು ಅಲ್ಲಿಯೇ ತ್ಯಜಿಸಿ, ತನ್ನ ಪತಿಯನ್ನು ಸೇರಿ ಕಾಮಕೇಳಿಯಲ್ಲಿ ನಿರತಳಾದಳು (೨೪-೨೫). ಇತ್ತ ಶರತ್ಕಾಲದ ಸೂರ್ಯನಂತೆ ಹೊಳೆಯುತ್ತಿದ್ದ ಆ ಶಿಶು ಗುಡುಗು ಮೊಳಗುವಂತೆ ಗಟ್ಟಿಯಾಗಿ ರೋದಿಸತೊಡಗಿತು. ಕಡೆಗೆ ತನ್ನ ಕೈಯನ್ನು ಬಾಯಲ್ಲಿಟ್ಟುಕೊಂಡು ಅಳುತ್ತಿತ್ತು ಶ್ರೀರಾಮ, ಆ ಸಮಯದಲ್ಲಿ ಪರಮೇಶ್ವರನು ಪಾರ್ವತೀಸಮೇತನಾಗಿ ವೃಷಭವನ್ನೇರಿ ವಾಯುಮಾರ್ಗದಲ್ಲಿ ಹೋಗುತ್ತಿದ್ದನು ಆಗ ಶಿಶುವಿನ ರೋದನಧ್ವನಿಯು ಕೇಳಿಸಲಾಗಿ, ಉಮಾಶಂಕರರೀರ್ವರೂ ವಿದ್ಯುತ್ಕೇಶನ ಪುತ್ರಸಾದ ಆ ಬಾಲಕ

ಕಾರುಣ್ಯಭಾವಾತ್ ಪಾರ್ವತ್ಯಾ ಭವಸ್ತ್ರಿಪುರಸೂದನಃ ।
ತಂ ರಾಕ್ಷಸಾತ್ಮಜಂ ಚಕ್ರೇ ಮಾತುರೇವ ವಯಃಸಮಮ್ ॥ ೨೯

ಅಮರಂ ಚೈವ ತಂ ಕೃತ್ವಾ ಮಹಾದೇವೋಽಕ್ಷರೋಽವ್ಯಯಃ ।
ಪುರಮಾಕಾಶಗಂ ಪ್ರಾದಾತ್ ಪಾರ್ವತ್ಯಾಃ ಪ್ರಿಯಕಾಮ್ಯಯಾ ॥

ಉಮಯಾಪಿ ವರೋ ದತ್ತೋ ರಾಕ್ಷಸಾನಾಂ ನೃಪಾತ್ಮಜ ।
ಸದ್ಯೋಪಲಬ್ಧಿರ್ಗರ್ಭಸ್ಯ ಪ್ರಸೂತಿಃ ಸದ್ಯ ಏವ ಚ ॥ ೩೦
ಸದ್ಯ ಏವ ವಯಃಪ್ರಾಪ್ತಿರ್ಮಾತುರೇವ ವಯಃಸಮಮ್ ॥

ತತಃ ಸುಕೇಶೋ ವರದಾನಗರ್ವಿತಃ
ಶ್ರಿಯಂ ಪ್ರಭೋಃ ಪ್ರಾಪ್ಯ ಹರಸ್ಯ ಪಾರ್ಶ್ವತಃ ।
ಚಚಾರ ಸರ್ವತ್ರ ಮಹಾನ್ ಮಹಾಮತಿಃ
ಖಗಂ ಪುರಂ ಪ್ರಾಪ್ಯ ಪುರಂದರೋ ಯಥಾ ॥ ೩೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುರ್ಥಃ ಸರ್ಗಃ

---

ನನ್ನು ಕಂಡರು (೨೬-೨೮). ಉಮಾದೇವಿಗೆ ಆ ಮಗುವಿನಲ್ಲಿ ಮರುಕವುಂಟಾಯಿತು. ಆಗ ತ್ರಿಪುರಾಂತಕನಾದ ಪರಶಿವನು ಆ ರಾಕ್ಷಸ ಶಿಶುವಿಗೆ, ಅದರ ತಾಯಿಯಂತೆ ಕೂಡಲೆ ತಾರುಣ್ಯವು ಲಭಿಸಲೆಂದೂ ಅದು ಅಮರವಾಗಲೆಂದೂ ವರವನ್ನು ದಯಪಾಲಿಸಿದನು ಅಲ್ಲದೆ ಪಾರ್ವತಿಗೆ ಸಂತೋಷವಾಗಲೆಂದು, ಆಕಾಶದಲ್ಲಿ ನಿರ್ಮಿತವಾದ ಒಂದು ನಗರವನ್ನು ಆತನಿಗೆ ಅನುಗ್ರಹಿಸಿದನು (೨೯-೩೦) ರಾಘವ, ಆಗ ಉಮೆಯೂ ಸಹ ರಾಕ್ಷಸ ಜಾತಿಗೆ ಈ ವರವನ್ನಿತ್ತಳು ಏನೆಂದರೆ 'ಇನ್ನು ಮೇಲೆ ರಾಕ್ಷಸಿಯರಿಗೆ ಗರ್ಭವು ನಿಂತೊಡನೆ, ಅದು ಬೆಳೆದು ಕೂಡಲೆ ಪ್ರಸವವಾಗಲಿ! ಹುಟ್ಟಿದ ಶಿಶು ತತ್‌ಕ್ಷಣದಲ್ಲಿಯೇ ತಾಯಿಯ ವಯೋಮಾನವನ್ನು ಪಡೆಯಲಿ!' (೩೧). ಇತ್ತ ಆ ರಾಕ್ಷಸತನಯನು ಸುಕೇಶನೆಂದು ವಿಖ್ಯಾತನಾಗಿ, ಪರಮೇಶ್ವರನ ವರಬಲದಿಂದ ಗರ್ವಿತನಾಗಿ ಮೆರೆಯತೊಡಗಿದನು ಗಗನನಿರ್ಮಿತವಾದ ಪುರವನ್ನು ಪ್ರವೇಶಿಸಿ ಪುರಂದರನಂತೆ ವಿರಾಜಿಸಿದನು (೩೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಾಲ್ಕನೆಯ ಸರ್ಗ

## ಪಂಚಮಃ ಸರ್ಗಃ

### ಮಾಲ್ಯವದಾದ್ಯುತ್ಪತ್ತಿಃ

ಸುಕೇಶಂ ಧಾರ್ಮಿಕಂ ದೃಷ್ಟ್ವಾ ವರಲಬ್ಧಂ ಚ ರಾಕ್ಷಸಮ್ ।
ಗ್ರಾಮಣೀರ್ನಾಮ ಗಂಧರ್ವೋ ವಿಶ್ವಾವಸುಸಮಪ್ರಭಃ ॥ ೧

ತಸ್ಯ ದೇವವತೀ ನಾಮ ದ್ವಿತೀಯಾ ಶ್ರೀರಿವಾತ್ಮಜಾ ।
ತ್ರಿಷು ಲೋಕೇಷು ವಿಖ್ಯಾತಾ ರೂಪಯೌವನಶಾಲಿನೀ ॥ ೨

ತಾಂ ಸುಕೇಶಾಯ ಧರ್ಮೇಣ ದದೌ ರಕ್ಷಃಶ್ರಿಯಂ ಯಥಾ ।
ವರದಾನಕೃತೈಶ್ವರ್ಯಂ ಸಾ ತಂ ಪ್ರಾಪ್ಯ ಪತಿಂ ಪ್ರಿಯಮ್ ॥ ೩

ಆಸೀದ್ದೇವವತೀ ತುಷ್ಟಾ ಧನಂ ಪ್ರಾಪ್ಯೇವ ನಿರ್ಧನಃ ।
ಸ ತಯಾ ಸಹ ಸಂಯುಕ್ತೋ ರರಾಜ ರಜನೀಚರಃ ॥ ೪

## ಸರ್ಗ ೫

ಸುಕೇಶನು ದೇವವತಿಯನ್ನು ವರಿಸುವುದು ಮಾಲ್ಯವಂತ, ಸುಮಾಲಿ ಮತ್ತು ಮಾಲಿ ಎಂಬ ರಾಕ್ಷಸರ ಉತ್ಪತ್ತಿ. ಅವರ ವಿವಾಹ; ಅವರ ಸಂತತಿ

ರಾಘವ, ಸುಕೇಶನು ಧಾರ್ಮಿಕನೆಂದೂ ವರಬಲಸಂಪನ್ನನೆಂದೂ ವಿಶ್ವಾವಸುವಿನಂತೆ ಮಹಿಮಾನ್ವಿತನಾದ ಗ್ರಾಮಣಿ ಎಂಬ ಗಂಧರ್ವನಿಗೆ ತಿಳಿಯಿತು. ಆ ಗಂಧರ್ವನಿಗೆ ಸಾಕ್ಷಾಲ್ಲಕ್ಷ್ಮಿಯಂತೆ ಪರಮಸುಂದರಿಯಾದ ದೇವವತಿಯೆಂಬ ಮಗಳಿದ್ದಳು ರೂಪಯೌವನಸಂಪನ್ನೆಯೆಂದು ಅವಳು ಜಗತ್ಪ್ರಸಿದ್ಧಳಾಗಿದ್ದಳು (೧-೨) ಗ್ರಾಮಣಿಯು ಸುಕೇಶನಿಗೆ ರಾಕ್ಷಸಲಕ್ಷ್ಮಿಯಂತಿದ್ದ ದೇವವತಿಯನ್ನು ಧಾರ್ಮಿಕವಿಧಿಯಿಂದ ಪಾಣಿಗ್ರಹಣಮಾಡಿಸಿ ಕೊಟ್ಟನು ಈಶ್ವರನ ವರಪ್ರಸಾದದಿಂದ ವಿವಿಧೈಶ್ವರ್ಯವನ್ನು ಸಂಪಾದಿಸಿದ ಸುಕೇಶನು ಪತಿಯಾಗಿ ಲಭಿಸಿದ್ದರಿಂದ, ದರಿದ್ರನಿಗೆ ವಿಪುಲೈಶ್ವರ್ಯವು ದೊರಕಿದಂತಾಗಿ ದೇವವತಿಯು ಆನಂದಿಸಿದಳು ಅಂಜನಪರ್ವತದಿಂದ* ಹೊರಬಂದ ಮಹಾಗಜವು ಹೆಣ್ಣಾನೆಯೊಡನೆ ರಮಿಸುವಂತೆ, ಸುಕೇಶನು ದೇವವತಿ

* 'ಅಂಜನವೆಂಬ ದಿಗ್ಗಜದಿಂದ ಜನಿಸಿದ' ಎಂದೂ ಅರ್ಥಮಾಡಬಹುದು

ಅಂಜನಾದಭಿನಿಷ್ಕ್ರಾಂತಃ ಕರೇಣ್ವೇವ ಮಹಾಗಜಃ ।
ದೇವವತ್ಯಾಂ ಸುಕೇಶಸ್ತು ಜನಯಾಮಾಸ ರಾಘವ ॥ ೫

ತ್ರೀನ್ ಪುತ್ರಾನ್ ಜನಯಾಮಾಸ ತ್ರೇತಾಗ್ನಿಸಮವಿಗ್ರಹಾನ್ ।
ಮಾಲ್ಯವಂತಂ ಸುಮಾಲಿಂ ಚ ಮಾಲಿಂ ಚ ಬಲಿನಾಂ ವರಮ್ ॥ ೬

ತ್ರೀಂಸ್ತ್ರಿನೇತ್ರಸಮಾನ್ ಪುತ್ರಾನ್ ರಾಕ್ಷಸಾನ್ ರಾಕ್ಷಸಾಧಿಪಃ ।
ತ್ರಯೋ ಲೋಕಾ ಇವಾವ್ಯಗ್ರಾಃ ಸ್ಥಿತಾಸ್ತ್ರಯ ಇವಾಗ್ನಯಃ ॥ ೭

ತ್ರಯೋ ಮಂತ್ರಾ ಇವಾತ್ಯುಗ್ರಾಸ್ತ್ರಯೋ ಘೋರಾ ಇವಾಮಯಾಃ
ತ್ರಯಃ ಸುಕೇಶಸ್ಯ ಸುತಾಸ್ತ್ರೇತಾಗ್ನಿಸಮತೇಜಸಃ ॥ ೮

ವಿವೃದ್ಧಿಮಗಮಂಸ್ತತ್ರ ವ್ಯಾಧಯೋಽಪೇಕ್ಷಿತಾ ಇವ ।
ವರಪ್ರಾಪ್ತಿಂ ಪಿತುಸ್ತೇ ತು ಜ್ಞಾತ್ವೈಶ್ವರ್ಯಂ ತಪೋಬಲಾತ್ ॥ ೯

ತಪಸ್ತಪ್ತುಂ ಗತಾ ಮೇರುಂ ಭ್ರಾತರಃ ಕೃತನಿಶ್ಚಯಾಃ ।
ಪ್ರಗೃಹ್ಯ ನಿಯಮಾನ್ ಘೋರಾನ್ ರಾಕ್ಷಸಾ ನೃಪಸತ್ತಮ ॥ ೧೦

---

ಯೊಡನೆ ರಮಿಸುತ್ತ ವಿಹರಿಸಿದನು (೩-೪) ಶ್ರೀರಾಮ, ಆ ಸುಕೇಶನು ತನ್ನ ಮಡದಿಯಲ್ಲಿ ತ್ರೇತಾಗ್ನಿಗಳಂತಿದ್ದ ಮಾಲ್ಯವಂತ, ಸುಮಾಲಿ, ಮಾಲಿ–ಎಂಬ ಮೂವರು ಮಕ್ಕಳನ್ನು ಪಡೆದನು ಮುಕ್ಕಣ್ಣನಿಗೆ ಸದೃಶರಾದ ಆ ಮೂವರು ಮೂರು ಲೋಕಗಳಂತೆ ಸ್ಥೈರ್ಯಸಂಪನ್ನರೂ ಮೂರು ಅಗ್ನಿಗಳಂತೆ ತೇಜಸ್ವಿಗಳೂ ಉತ್ಸಾಹಶಕ್ತಿ, ಪ್ರಭುಶಕ್ತಿ, ಮಂತ್ರಶಕ್ತಿಗಳಂತೆ ಉಗ್ರಸಾಮರ್ಥ್ಯಶಾಲಿಗಳೂ ವಾತ ಪಿತ್ತ ಶ್ಲೇಷ್ಮರೋಗಗಳಂತೆ ಪರಹಿಂಸಕರೂ ಆಗಿ ಮೆರೆಯುತ್ತಿದ್ದರು (೫-೮) ಚಿಕಿತ್ಸೆ ಮಾಡದೆ ಉಪೇಕ್ಷಿಸಲ್ಪಟ್ಟ ವ್ಯಾಧಿಗಳಂತೆ ಅವರು ದಿನದಿನವೂ ಬೆಳೆದರು! ತಮ್ಮ ತಂದೆಗೆ ಈಶ್ವರನಿಂದ ವರಪ್ರಾಪ್ತಿಯಾದುದನ್ನೂ ತಪೋಬಲದಿಂದಲೇ ಐಶ್ವರ್ಯವು ಲಭಿಸುವುದೆಂಬುದನ್ನೂ ಆಲೋಚಿಸಿ, ಆ ಮೂವರು ಸೋದರರೂ ತಪಶ್ಚರಣೆಗಾಗಿ ಮೇರುಪರ್ವತಕ್ಕೆ ಹೋದರು (೯) ಕಾಕುತ್ಸ್ಥ, ಆ ರಾಕ್ಷಸರು ಕಠೋರ ನಿಯಮಗಳನ್ನು ಪರಿಪಾಲಿಸುತ್ತ ಸರ್ವಭೂತಭಯಂಕರವಾದ

**ವಿಚೇರುಸ್ತೇ ತಪೋ ಘೋರಂ ಸರ್ವಭೂತಭಯಾವಹಮ್ ।**
**ಸತ್ಯಾರ್ಜವಶಮೋಪೇತೈಸ್ತಪೋಭಿರತಿದುಷ್ಕರೈಃ ॥ ೧೧**
**ಸಂತಾಪಯಂತಸ್ತ್ರೀನ್ ಲೋಕಾನ್ ಸದೇವಾಸುರಮಾನುಷಾನ್ ।**
**ತತೋ ವಿಭುಶ್ಚತುರ್ವಕ್ತ್ರೋ ವಿಮಾನವರಮಾಸ್ಥಿತಃ ॥ ೧೨**
**ಸುಕೇಶಪುತ್ರಾನಾಮಂತ್ರ್ಯ ವರದೋಽಸ್ಮೀತ್ಯಭಾಷತ ।**
**ಬ್ರಹ್ಮಾಣಂ ವರದಂ ಜ್ಞಾತ್ವಾ ಸೇಂದ್ರೈರ್ದೇವಗಣೈರ್ವೃತಮ್ ॥ ೧೩**
**ಊಚುಃ ಪ್ರಾಂಜಲಯಃ ಸರ್ವೇ ವೇಪಮಾನಾ ಇವ ದ್ರುಮಾಃ ।**
**ತಪಸಾರಾಧಿತೋ ದೇವ ಯದಿ ನೋ ದಿಶಸೇ ವರಮ್ ॥ ೧೪**
**ಅಜೇಯಾಃ ಶತ್ರುಹಂತಾರಸ್ತಥೈವ ಚಿರಜೀವಿನಃ ।**
**ಪ್ರಭವಿಷ್ಣವೋ ಭವಾಮೇತಿ ಪರಸ್ಪರಮನುವ್ರತಾಃ ॥ ೧೫**
**ಏವಂ ಭವಿಷ್ಯತೀತ್ಯುಕ್ತ್ವಾ ಸುಕೇಶತನಯಾನ್ ವಿಭುಃ ।**
**ಸ ಯಯೌ ಬ್ರಹ್ಮಲೋಕಾಯ ಬ್ರಹ್ಮಾ ಬ್ರಾಹ್ಮಣವತ್ಸಲಃ ॥ ೧೬**

---

ತಪಸ್ಸನ್ನಾಚರಿಸಿದರು ಸತ್ಯ, ಆರ್ಜವ, ಶಮ – ಮುಂತಾದ ಕಠಿಣವ್ರತಗಳನ್ನು ಆಶ್ರಯಿಸಿ ಆ ರಾಕ್ಷಸರು ತಪೋಮಗ್ನರಾಗಲು, ದೇವಾಸುರಮನುಷ್ಯಸಹಿತವಾದ ಲೋಕತ್ರಯವು ಕಂಗಾಲಾಯಿತು (೧೦-೧೧) ಆಮೇಲೆ ಚತುರ್ಮುಖನಾದ ಬ್ರಹ್ಮದೇವನು ದಿವ್ಯವಿಮಾನದಲ್ಲಿ ಆಗಮಿಸಿ, ಆ ಸುಕೇಶತನಯರನ್ನು ಸಂಬೋಧಿಸಿ 'ಎಲೈ ಭಕ್ತರೆ, ನಿಮಗೆ ವರದನಾಗಿ ಬಂದಿರುವೆನು' ಎಂದು ಹೇಳಿದನು ಬ್ರಹ್ಮನು ವರವನ್ನು ಅನುಗ್ರಹಿಸುವುದಕ್ಕಾಗಿ ಇಂದ್ರಾದಿದೇವತೆಗಳೊಡನೆ ಬಂದಿರುವನೆಂದು ಅವರಿಗೆ ತಿಳಿಯಿತು (೧೨-೧೩) ಆಗ ಅವರೆಲ್ಲರೂ ಪ್ರಾಂಜಲಿಗಳಾಗಿ, ಅಲ್ಲಾಡುವ ಮರಗಳಂತೆ ಭಕ್ತಿಭರದಿಂದ ತೂಗಾಡುತ್ತ ಬ್ರಹ್ಮನನ್ನು ಕುರಿತು "ಹೇ ದೇವ, ನಮ್ಮ ತಪಸ್ಸಿಗೆ ಮೆಚ್ಚಿ ವರವನ್ನು ಅನುಗ್ರಹಿಸುವುದಾದರೆ, ನಾವು ಅಜೇಯರೂ ಶತ್ರುವಿಧ್ವಂಸಕರೂ ಚಿರಜೀವಿಗಳೂ ಆಗುವಂತೆ ವರವನ್ನು ದಯಪಾಲಿಸು. ನಾವು ಮೂವರೂ ಪ್ರಭಾವಶಾಲಿಗಳೂ ಅನ್ಯೋನ್ಯವಾಗಿ ಭ್ರಾತೃವಾತ್ಸಲ್ಯವುಳ್ಳವರೂ ಆಗಬೇಕು" ಎಂದು ಕೇಳಿಕೊಂಡರು (೧೪-೧೫) "ಹಾಗೆಯೇ ಆಗುವುದು" ಎಂದು ಸುಕೇಶತನಯರಿಗೆ ಹೇಳಿ ಬ್ರಾಹ್ಮಣವತ್ಸಲನಾದ

**ವರಂ ಲಬ್ಧ್ವಾ ತು ತೇ ಸರ್ವೇ ರಾಮ ರಾತ್ರಿಂಚರಾಸ್ತದಾ |**
**ಸುರಾಸುರಾನ್ ಪ್ರಬಾಧಂತೇ ವರದಾನಸುನಿರ್ಭಯಾಃ || ೧೭**

**ತೈರ್ವಧ್ಯಮಾನಾಸ್ತ್ರಿದಶಾಃ ಸರ್ಷಿಸಂಘಾಃ ಸಚಾರಣಾಃ |**
**ತ್ರಾತಾರಂ ನಾಧಿಗಚ್ಛಂತಿ ನಿರಯಸ್ಥಾ ಯಥಾ ನರಾಃ || ೧೮**

**ಅಥ ತೇ ವಿಶ್ವಕರ್ಮಾಣಂ ಶಿಲ್ಪಿನಾಂ ವರಮವ್ಯಯಮ್ |**
**ಊಚುಃ ಸಮೇತ್ಯ ಸಂಹೃಷ್ಟಾ ರಾಕ್ಷಸಾ ರಘುಸತ್ತಮ || ೧೯**

**ಓಜಸ್ತೇಜೋಬಲವತಾಂ ಮಹತಾಮಾತ್ಮತೇಜಸಾ |**
**ಗೃಹಕರ್ತಾ ಭವಾನೇವ ದೇವಾನಾಂ ಹೃದಯೇಪ್ಸಿತಮ್ || ೨೦**

**ಅಸ್ಮಾಕಮಪಿ ತಾವತ್ತ್ವಂ ಗೃಹಂ ಕುರು ಮಹಾಮತೇ |**
**ಹಿಮವಂತಮುಪಾಶ್ರಿತ್ಯ ಮೇರುಂ ಮಂದರಮೇವ ವಾ || ೨೧**

**ಮಹೇಶ್ವರಗೃಹಪ್ರಖ್ಯಂ ಗೃಹಂ ನಃ ಕ್ರಿಯತಾಂ ಮಹತ್ |**
**ವಿಶ್ವಕರ್ಮಾ ತತಸ್ತೇಷಾಂ ರಾಕ್ಷಸಾನಾಂ ಮಹಾಭುಜಃ || ೨೨**

---

ಬ್ರಹ್ಮನು ಬ್ರಹ್ಮಲೋಕಕ್ಕೆ ಹೊರಟುಹೋದನು ಶ್ರೀರಾಮ, ಇತ್ತಲಾಗಿ ಆ ನಿಶಾಚರರು ವರಬಲದಿಂದ ನಿರ್ಭೀತರಾಗಿ ದೇವಾಸುರರನ್ನು ಬಾಧಿಸ ಲಾರಂಭಿಸಿದರು (೧೬-೧೭) ಅವರ ಬಾಧೆಗೆ ಸಿಕ್ಕಿದ ದೇವತೆಗಳಿಗೂ ಋಷಿ ಚಾರಣರಿಗೂ ನರಕಕ್ಕೆ ಬಿದ್ದ ನರರ ಪರಿಸ್ಥಿತಿಯುಂಟಾಯಿತು ಅವರಿಗೆ ರಕ್ಷಣೆಯನ್ನೀಯುವ ಭಯತ್ರಾತನು ದೊರೆಯಲಿಲ್ಲ (೧೮) ಮಾಲ್ಯವಂತನೇ ಮೊದಲಾದ ಆ ರಾಕ್ಷಸರು ಶ್ರೇಷ್ಠಶಿಲ್ಪಿಯಾದ ವಿಶ್ವಕರ್ಮನನ್ನು ಕಂಡು "ಅಯ್ಯಾ—ವಿಶ್ವಕರ್ಮ, ಓಜಸ್ತೇಜೋಬಲಾನ್ವಿತರಾದ ದೇವತೆಗಳಿಗೆ ನಿನ್ನ ಸಾಮರ್ಥ್ಯದಿಂದ ಮನೋಜ್ಞವಾದ ಭವ್ಯಗೃಹಗಳನ್ನು ನಿರ್ಮಿಸತಕ್ಕವನು ನೀನೇ ಅಲ್ಲವೆ? (೧೯-೨೦) ಎಲೈ ಶಿಲ್ಪಕಲಾನಿಪುಣನೆ, ಹಾಗೆಯೇ ನಮಗೂ ಒಂದು ವಸತಿಯನ್ನು ನಿರ್ಮಿಸಿಕೊಡು! ಹಿಮಾಲಯ ಪ್ರಾಂತದಲ್ಲಿಯೋ ಮೇರು ಮಂದರಗಳ ಬಳಿಯಲ್ಲಿಯೋ ನೀನು ಆರಿಸುವ ಸ್ಥಳದಲ್ಲಿ ವಸತಿ ಇರಲಿ ಪರಮೇಶ್ವರನ ಭವನದಂತೆ ನಮ್ಮ ವಾಸಸ್ಥಾನವು ವಿಶಾಲ

**ನಿವಾಸಂ ಕಥಯಾಮಾಸ ಶಕ್ರಸ್ಯೇವಾಮರಾವತೀಮ್ ।**
**ದಕ್ಷಿಣಸ್ಯೋದಧೇಸ್ತೀರೇ ತ್ರಿಕೂಟೋ ನಾಮ ಪರ್ವತಃ ॥** ೨೩

**ಸುವೇಲ ಇತಿ ಚಾಪ್ಯನ್ಯೋ ದ್ವಿತೀಯಸ್ತತ್ರ ಸತ್ತಮಾಃ ।**
**ಶಿಖರೇ ತಸ್ಯ ಶೈಲಸ್ಯ ಮಧ್ಯಮೇಽಂಬುದಸನ್ನಿಭೇ ॥** ೨೪

**ಶಕುನೈರಪಿ ದುಷ್ಪ್ರಾಪೇ ಟಂಕಚ್ಛಿನ್ನಚತುರ್ದಿಶಿ ।**
**ತ್ರಿಂಶದ್ಯೋಜನವಿಸ್ತೀರ್ಣಾ ಶತಯೋಜನಮಾಯತಾ ॥** ೨೫

**ಸ್ವರ್ಣಪ್ರಾಕಾರಸಂವೀತಾ ಹೇಮತೋರಣಸಂವೃತಾ ।**
**ಮಯಾ ಲಂಕೇತಿ ನಗರೀ ಶಕ್ರಾಜ್ಞಪ್ತೇನ ನಿರ್ಮಿತಾ ॥** ೨೬

**ತಸ್ಯಾಂ ವಸತ ದುರ್ಧರ್ಷಾ ಯೂಯಂ ರಾಕ್ಷಸಪುಂಗವಾಃ ।**
**ಅಮರಾವತೀಂ ಸಮಾಸಾದ್ಯ ಸೇಂದ್ರಾ ಇವ ದಿವೌಕಸಃ ॥** ೨೭

**ಲಂಕಾದುರ್ಗಂ ಸಮಾಸಾದ್ಯ ರಾಕ್ಷಸೈರ್ಬಹುಭಿರ್ವೃತಾಃ ।**
**ಭವಿಷ್ಯಥ ದುರಾಧರ್ಷಾಃ ಶತ್ರೂಣಾಂ ಶತ್ರುಸೂದನಾಃ ॥** ೨೮

---

ವಾಗಿರಲಿ" ಎಂದು ತಿಳಿಸಿದರು (೨೧-೨೨) ಆಗ ವಿಶ್ವಕರ್ಮನು "ಎಲೈ ರಾಕ್ಷಸೋತ್ತಮರೆ, ದಕ್ಷಿಣಸಾಗರದ ಆಚೆಯ ದಡದಲ್ಲಿ ತ್ರಿಕೂಟವೆಂಬ ಪರ್ವತವುಂಟು ಅದರ ಬಳಿ ಸುವೇಲವೆಂಬ ಇನ್ನೊಂದು ಪರ್ವತವೂ ಇದೆ ಮೇಘರಾಜಿಯಂತೆ ವಿರಾಜಿಸುವ ತ್ರಿಕೂಟಶೈಲದ ಶಿಖರದಲ್ಲಿ ಲಂಕೆಯೆಂಬ ನಗರಿಯನ್ನು ನಿರ್ಮಿಸಿದ್ದೇನೆ (೨೩-೨೪) ಆ ಶಿಖರವು ಹಕ್ಕಿಗಳಿಗೂ ನಿಲುಕದಷ್ಟು ಉನ್ನತವಾಗಿದೆ ಶಿಖರದ ನಾಲ್ಕು ದಿಕ್ಕುಗಳನ್ನೂ ಟಂಕಗಳಿಂದ ಕೆತ್ತಿ ನಯವಾಗಿ ಮಾಡಿದ್ದೇನೆ ಆ ಲಂಕಾನಗರವು ಮೂವತ್ತು ಯೋಜನ ಅಗಲವಾಗಿಯೂ ನೂರು ಯೋಜನ ಉದ್ದವಾಗಿಯೂ ಇದೆ (೨೫). ಅದರ ಸುತ್ತಲೂ ಚಿನ್ನದ ಪ್ರಾಕಾರವಿದೆ ಸುವರ್ಣಮಯವಾದ ನಗರದ್ವಾರವುಂಟು ಇಂದ್ರನ ಆಜ್ಞೆಯಂತೆ ಅದನ್ನು ಹಿಂದೆಯೇ ನಿರ್ಮಿಸಿದ್ದೆನು. ಎಲೈ ವೀರರೆ, ನೀವು ಅಲ್ಲಿಗೆ ಹೋಗಿ ನೆಲೆಸಿರಿ ಅಮರಾವತಿಯಲ್ಲಿ ಇಂದ್ರಾದಿ ದೇವತೆಗಳಿರುವಂತೆ, ನೀವು ಅಲ್ಲಿ ಸೌಖ್ಯದಿಂದ ಇರಬಹುದು. ರಾಕ್ಷಸಪರಿವಾರಗಳೊಡನೆ ನೀವು ಅಲ್ಲಿ ವಸತಿಯನ್ನು ಹೂಡಿದರೆ, ಶತ್ರುಗಳಿಗೆ

ವಿಶ್ವಕರ್ಮವಚಃ ಶ್ರುತ್ವಾ ತತಸ್ತೇ ರಾಕ್ಷಸೋತ್ತಮಾಃ ।
ಸಹಸ್ರಾನುಚರಾ ಭೂತ್ವಾ ಗತ್ವಾ ತಾಮವಸನ್ ಪುರೀಮ್ ॥ ೨೯

ದೃಢಪ್ರಾಕಾರಪರಿಖಾಂ ಹೈಮೈರ್ಗೃಹಶತೈರ್ವೃತಾಮ್ ।
ಲಂಕಾಮವಾಪ್ಯ ತೇ ಹೃಷ್ಟಾ ನ್ಯವಸನ್ ರಜನೀಚರಾಃ ॥ ೩೦

ಏತಸ್ಮಿನ್ನೇವ ಕಾಲೇ ತು ಯಥಾಕಾಮಂ ಚ ರಾಘವ ।
ನರ್ಮದಾ ನಾಮ ಗಂಧರ್ವೀ ಬಭೂವ ರಘುನಂದನ ॥ ೩೧

ತಸ್ಯಾಃ ಕನ್ಯಾತ್ರಯಂ ಹ್ಯಾಸೀದ್ಧ್ರೀ ಶ್ರೀ ಕೀರ್ತಿಸಮದ್ಯುತಿ ।
ಜ್ಯೇಷ್ಠಕ್ರಮೇಣ ಸಾ ತೇಷಾಂ ರಾಕ್ಷಸಾನಾಮರಾಕ್ಷಸೀ ॥ ೩೨

ಕನ್ಯಾಸ್ತಾಃ ಪ್ರದದೌ ಹೃಷ್ಟಾ ಪೂರ್ಣಚಂದ್ರನಿಭಾನನಾಃ ।
ತ್ರಯಾಣಾಂ ರಾಕ್ಷಸೇಂದ್ರಾಣಾಂ ತಿಸ್ರೋ ಗಂಧರ್ವಕನ್ಯಕಾಃ ॥ ೩೩

ದತ್ತಾ ಮಾತ್ರಾ ಮಹಾಭಾಗಾ ನಕ್ಷತ್ರೇ ಭಗದೈವತೇ ।
ಕೃತದಾರಾಸ್ತು ತೇ ರಾಮ ಸುಕೇಶತನಯಾಸ್ತದಾ ॥ ೩೪

---

ದುರ್ಧರ್ಷರಾಗಿ ಬಾಳುವಿರಿ" ಎಂದು ನುಡಿದನು (೨೬-೨೮) ಅನಂತರ, ರಾಘವ, ಆ ರಾಕ್ಷಸರು ಬಹುಮಂದಿ ನಿಶಾಚಪರಿವಾರಗಳೊಡನೆ ಹೋಗಿ ಲಂಕಾನಗರದಲ್ಲಿ ನೆಲೆಸಿದರು ಲಂಕಾನಗರವಾದರೋ ದೃಢವಾದ ಕೋಟೆ ಕೊತ್ತಲಗಳಿಂದಲೂ ಸುವರ್ಣಮಯ ಮಂದಿರಗಳಿಂದಲೂ ಶೋಭಿಸುವುದನ್ನು ಕಂಡು ಆ ರಾಕ್ಷಸರು ಸಂತುಷ್ಟರಾದರು (೨೯-೩೦) ರಘುನಂದನ, ಹೀಗಿರಲು ನರ್ಮದೆಯೆಂಬ ಒಬ್ಬ ಗಂಧರ್ವಿಗೆ ಮೂವರು ಹೆಣ್ಣುಮಕ್ಕಳಿದ್ದರು ಆ ಕನ್ಯೆಯರು ಹ್ರೀ, ಶ್ರೀ, ಕೀರ್ತಿಗಳಂತೆ ತೇಜಸ್ವಿನಿಯರೂ ಸುಂದರಿಯರೂ ಆಗಿದ್ದರು ಗಂಧರ್ವಿಯು ಆ ಕನ್ಯೆಯರನ್ನು ಜ್ಯೇಷ್ಠಕ್ರಮದಿಂದ ಮಾಲ್ಯವಂತ, ಸುಮಾಲಿ ಮತ್ತು ಮಾಲಿಗಳಿಗೆ ಕೊಟ್ಟು ವಿವಾಹಮಾಡಿದಳು (೩೧-೩೨). ಪೂರ್ಣಚಂದ್ರಾನನೆಯರಾದ ಆ ಗಂಧರ್ವಕನ್ಯೆಯರು ಉತ್ತರಾಫಲ್ಗುನೀ ನಕ್ಷತ್ರದಲ್ಲಿ ಆ ರಾಕ್ಷಸೇಂದ್ರರನ್ನು ಕ್ರಮವಾಗಿ ವರಿಸಿದರು ಸುಕೇಶಸುತರಾದ ಮಾಲ್ಯವದಾದಿಗಳು ತಮ್ಮ ಮಡದಿಯರೊಡನೆ, ಅಪ್ಸರೆಯರೊಡನೆ

ಚಿಕ್ರೀಡತುಃ ಸಹ ಭಾರ್ಯಾಭಿರಪ್ಸರೋಭಿರಿವಾಮರಾಃ ।
ತತೋ ಮಾಲ್ಯವತೋ ಭಾರ್ಯಾ ಸುಂದರೀ ನಾಮ ಸುಂದರೀ ॥

ಸ ತಸ್ಯಾಂ ಜನಯಾಮಾಸ ಯದಪತ್ಯಂ ನಿಬೋಧ ತತ್ ।
ವಜ್ರಮುಷ್ಟಿರ್ವಿರೂಪಾಕ್ಷೋ ದುರ್ಮುಖಶ್ಚೈವ ರಾಕ್ಷಸಃ ॥ ೩೬

ಸುಪ್ತಘ್ನೋ ಯಜ್ಞಕೋಪಶ್ಚ ಮತ್ತೋನ್ಮತ್ತೌ ತಥೈವ ಚ ।
ಅನಲಾ ಚಾಭವತ್ ಕನ್ಯಾ ಸುಂದರ್ಯಾಂ ರಾಮ ಸುಂದರೀ ॥ ೩೭

ಸುಮಾಲಿನೋಽಪಿ ಭಾರ್ಯಾಸೀತ್ ಪೂರ್ಣಚಂದ್ರನಿಭಾನನಾ ।
ನಾಮ್ನಾ ಕೇತುಮತೀ ನಾಮ ಪ್ರಾಣೇಭ್ಯೋಽಪಿ ಗರೀಯಸೀ ॥ ೩೮

ಸುಮಾಲೀ ಜನಯಾಮಾಸ ಯದಪತ್ಯಂ ನಿಶಾಚರಃ ।
ಕೇತುಮತ್ಯಾಂ ಮಹಾರಾಜ ತನ್ನಿಬೋಧಾನುಪೂರ್ವಶಃ ॥ ೩೯

ಪ್ರಹಸ್ತೋಽಕಂಪನಶ್ಚೈವ ವಿಕಟಃ ಕಾಲಕಾರ್ಮುಕಃ ।
ಧೂಮ್ರಾಕ್ಷಶ್ಚೈವ ದಂಡಶ್ಚ ಸುಪಾರ್ಶ್ವಶ್ಚ ಮಹಾಬಲಃ ॥ ೪೦

ಸಂಹ್ರಾದಿಃ ಪ್ರಘಸಶ್ಚೈವ ಭಾಸಕರ್ಣಶ್ಚ ರಾಕ್ಷಸಃ ।
ರಾಕಾ ಪುಷ್ಪೋತ್ಕಟಾ ಚೈವ ಕೈಕಸೀ ಚ ಶುಚಿಸ್ಮಿತಾ ॥ ೪೧

ಕುಂಭೀನಸೀ ಚ ಇತ್ಯೇತೇ ಸುಮಾಲೇಃ ಪ್ರಸವಾಃ ಸ್ಮೃತಾಃ ।
ಮಾಲೇಸ್ತು ವಸುಧಾ ನಾಮ ಗಂಧರ್ವೀ ರೂಪಶಾಲಿನೀ ॥ ೪೨

---

ದೇವತೆಗಳು ವಿಹರಿಸುವಂತೆ ವಿಹರಿಸುತ್ತಿದ್ದರು (೩೩-೩೪). ಹೀಗಿರಲು ಮಾಲ್ಯವಂತನ ಮಡದಿಯಾದ ಸುಂದರಿಯೆಂಬ ಗಂಧರ್ವಿಯಲ್ಲಿ ವಜ್ರಮುಷ್ಟಿ, ವಿರೂಪಾಕ್ಷ, ದುರ್ಮುಖ, ಸುಪ್ತಘ್ನ, ಯಜ್ಞಕೋಪ, ಮತ್ತ, ಉನ್ಮತ್ತ ಎಂಬ ಪುತ್ರರೂ ಅನಲೆಯೆಂಬ ಚೆಲುವೆಯಾದ ಪುತ್ರಿಯೂ ಜನಿಸಿದರು (೩೫-೩೭). ಸುಮಾಲಿಯ ಪ್ರಾಣಕಾಂತೆಯಾದ ಕೇತುಮತಿಯಲ್ಲಿ ಪ್ರಹಸ್ತ, ಅಕಂಪನ, ವಿಕಟ, ಕಾಲಕಾರ್ಮುಕ, ಧೂಮ್ರಾಕ್ಷ, ದಂಡ, ಸುಪಾರ್ಶ್ವ, ಸಂಹ್ರಾದಿ, ಪ್ರಘಸ, ಭಾಸಕರ್ಣ ಎಂಬ ಗಂಡುಮಕ್ಕಳೂ ರಾಕಾ, ಪುಷ್ಪೋತ್ಕಟಾ, ಕೈಕಸೀ, ಕುಂಭೀನಸೀ ಎಂಬ ಹೆಣ್ಣುಮಕ್ಕಳೂ ಹುಟ್ಟಿದರು (೩೮-೪೧) ಮಾಲಿಯ ಹೆಂಡತಿ ರೂಪಶಾಲಿನಿಯಾದ ವಸುಧೆಯೆಂಬ ಗಂಧರ್ವಿ,

ಭಾರ್ಯಾಸೀತ್ ಪದ್ಮಪತ್ರಾಕ್ಷೀ ಸ್ವಕ್ಷೀ ಯಕ್ಷೀ ವರೋಪಮಾ ।
ಸುಮಾಲೇರನುಜಸ್ತಸ್ಯಾಂ ಜನಯಾಮಾಸ ಯತ್ ಪ್ರಭೋ ॥ ೪೩
ಅಪತ್ಯಂ ಕಥ್ಯಮಾನಂ ತು ಮಯಾ ತ್ವಂ ಶೃಣು ರಾಘವ ।
ಅನಿಲಶ್ಚಾನಲಶ್ಚೈವ ಹರಃ ಸಂಪಾತಿರೇವ ಚ ॥ ೪೪
ಏತೇ ವಿಭೀಷಣಾಮಾತ್ಯಾ ಮಾಲೇಯಾಸ್ತು ನಿಶಾಚರಾಃ ॥

ತತಸ್ತು ತೇ ರಾಕ್ಷಸಪುಂಗವಾಸ್ತ್ರಯೋ
ನಿಶಾಚರೈಃ ಪುತ್ರಶತೈಶ್ಚ ಸಂವೃತಾಃ ।
ಸುರಾನ್ ಸಹೇಂದ್ರಾನ್ಋಷಿನಾಗಯಕ್ಷಾನ್
ಬಬಾಧಿರೇ ತಾನ್ ಬಹುವೀರ್ಯದರ್ಪಿತಾಃ ॥ ೪೫

ಜಗದ್ಭ್ರಮಂತೋಽನಿಲವದ್ದುರಾಸದಾ
ರಣೇಷು ಮೃತ್ಯುಪ್ರತಿಮಾನತೇಜಸಃ ।
ವರಪ್ರದಾನಾದತಿಗರ್ವಿತಾ ಭೃಶಂ
ಕ್ರತುಕ್ರಿಯಾಣಾಂ ಪ್ರಶಮಂಕರಾಃ ಸದಾ ॥ ೪೬

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚಮಃ ಸರ್ಗಃ

---

ಮಹಾರಾಜ, ಮಾಲಿಗೆ ಅವಳಲ್ಲಿ ಅನಿಲ, ಅನಲ, ಹರ, ಸಂಪಾತಿಯೆಂಬ ನಾಲ್ವರು ತನಯರು ಜನಿಸಿದರು ಮಾಲಿತನಯರಾದ ಆ ನಾಲ್ವರೂ ಮುಂದೆ ವಿಭೀಷಣನಿಗೆ ಅಮಾತ್ಯರಾದರು (೪೨-೪೪) ಆಮೇಲೆ ಮಾಲ್ಯವದಾದಿ ರಾಕ್ಷಸಪುಂಗವರು ಬಹುಮಂದಿ ನಿಶಾಚರರಿಂದಲೂ ತಮ್ಮ ಮಕ್ಕಳಿಂದಲೂ ಸಮೇತರಾಗಿ ಬಲದರ್ಪದಿಂದ ಸೊಕ್ಕಿ ಇಂದ್ರಾದಿ ದೇವತೆಗಳನ್ನೂ ಋಷಿನಾಗಯಕ್ಷರನ್ನೂ ವಿಶೇಷವಾಗಿ ಪೀಡಿಸತೊಡಗಿದರು (೪೫) ಬ್ರಹ್ಮನ ವರಬಲದಿಂದ ದೃಪ್ತರಾದ ಆ ನಿಶಾಚರರು ಬಿರುಗಾಳಿಯಂತೆ ಲೋಕವನ್ನು ಸುತ್ತುತ್ತ, ರಣರಂಗದಲ್ಲಿ ಮೃತ್ಯುವಿನಂತೆ ಉಗ್ರತೇಜಸ್ಸಿನಿಂದ ಬೆಳಗುತ್ತ, ಯಜ್ಞಾದಿ ವೈದಿಕ ಕರ್ಮಗಳಿಗೆ ವಿಘ್ನವನ್ನೊಡ್ಡುತ್ತ ಮೆರೆಯುತ್ತಿದ್ದರು (೪೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐದನೆಯ ಸರ್ಗ

*

## ಷಷ್ಠಃ ಸರ್ಗಃ

### ವಿಷ್ಣುಮಾಲ್ಯವದಾದಿಯುದ್ಧಮ್

ತೈರ್ವಧ್ಯಮಾನಾ ದೇವಾಶ್ಚ ಋಷಯಶ್ಚ ತಪೋಧನಾಃ ।
ಭಯಾರ್ತಾಃ ಶರಣಂ ಜಗ್ಮುರ್ದೇವದೇವಂ ಮಹೇಶ್ವರಮ್ ॥ ೧

ಜಗತ್ಸೃಷ್ಟ್ಯಂತಕರ್ತಾರಮಜಮವ್ಯಕ್ತರೂಪಿಣಮ್ ।
ಆಧಾರಂ ಸರ್ವಲೋಕಾನಾಮಾರಾಧ್ಯಂ ಪರಮಂ ಗುರುಮ್ ॥ ೨

ತೇ ಸಮೇತ್ಯ ತು ಕಾಮಾರಿಂ ತ್ರಿಪುರಾರಿಂ ತ್ರಿಲೋಚನಮ್ ।
ಊಚುಃ ಪ್ರಾಂಜಲಯೋ ದೇವಾ ಭಯಗದ್ಗದಭಾಷಿಣಃ ॥ ೩

ಸುಕೇಶಪುತ್ರೈರ್ಭಗವನ್ ಪಿತಾಮಹವರೋದ್ಧತೈಃ ।
ಪ್ರಜಾಧ್ಯಕ್ಷಪ್ರಜಾಃ ಸರ್ವಾ ಬಾಧ್ಯಂತೇ ರಿಪುಬಾಧನೈಃ ॥ ೪

## ಸರ್ಗ ೬

ರಾಕ್ಷಸಪೀಡಿತರಾದ ದೇವತೆಗಳು ಈಶ್ವರನನ್ನು ಮರೆಹೊಗುವುದು ಆತನ ಸೂಚನೆಯಂತೆ ಅವರು ವಿಷ್ಣುವನ್ನು ಪ್ರಾರ್ಥಿಸಿಕೊಳ್ಳಲು, ವಿಷ್ಣುವು ಮಾಲ್ಯವದಾದಿಗಳನ್ನು ಸಂಹರಿಸುವುದಕ್ಕಾಗಿ ಆಗಮಿಸುವುದು

ಹೀಗೆ ಮಾಲ್ಯವದಾದಿ ರಾಕ್ಷಸರ ಪೀಡೆಗೆ ಒಳಗಾದ ದೇವತೆಗಳೂ ತಪೋಧನರೂ ತಲ್ಲಣಗೊಂಡು, ದೇವದೇವನಾದ ಮಹೇಶ್ವರನನ್ನು ಮರೆಹೊಕ್ಕರು ಜಗತ್ತಿನ ಸೃಷ್ಟಿ ಲಯಗಳಿಗೆ ಕರ್ತನೂ ಅನಾದಿಯೂ ಅವ್ಯಕ್ತನೂ ಸರ್ವಲೋಕಗಳಿಗೆ ಆಧಾರನೂ ನಿಖಿಲವಂದ್ಯನೂ ಪರಮ ಗುರುವೂ ಆದ ಶಿವನಿಗೆ ಶರಣಾದರು (೧-೨). ಕಾಮಾಂತಕನೂ ತ್ರಿಪುರಾರಿಯೂ ಆದ ಆ ತ್ರಿಯಂಬಕನ ಬಳಿಗೆ ಹೋಗಿ, ದೇವತೆಗಳು ಪ್ರಾಂಜಲಿಗಳಾಗಿ ಭಯದಿಂದ ಗದ್ಗದಿಸುತ್ತ "ಭಗವನ್, ಸುಕೇಶನ ಪುತ್ರರಾದ ಮಾಲ್ಯವದಾದಿಗಳು ಬ್ರಹ್ಮನ ವರದಿಂದ ದೃಪ್ತರಾಗಿದ್ದಾರೆ. ಪ್ರಜಾಧ್ಯಕ್ಷನಾದ ಬ್ರಹ್ಮನ ಪ್ರಜೆಗಳನ್ನೇ ಅವರು ಬಾಧಿಸುತ್ತಿದ್ದಾರೆ (೩-೪).

**ಶರಣ್ಯಾನ್ಯಶರಣ್ಯಾನಿ ಹ್ಯಾಶ್ರಮಾಣಿ ಕೃತಾನಿ ನಃ ।**
**ಸ್ವರ್ಗಾಚ್ಚ ದೇವಾನ್ ಪ್ರಾಚ್ಯಾವ್ಯ ಸ್ವರ್ಗೇ ಕ್ರೀಡಂತಿ ದೇವವತ್ ॥**
**ಅಹಂ ವಿಷ್ಣುರಹಂ ರುದ್ರೋ ಬ್ರಹ್ಮಾಹಂ ದೇವರಾಡಹಮ್ ।**
**ಅಹಂ ಯಮಶ್ಚ ವರುಣಶ್ಚಂದ್ರೋಽಹಂ ರವಿರಪ್ಯಹಮ್ ॥ ೬**
**ಇತಿ ಮಾಲೀ ಸುಮಾಲೀ ಚ ಮಾಲ್ಯವಾಂಶ್ಚೈವ ರಾಕ್ಷಸಾಃ ।**
**ಬಾಧಂತೇ ಸಮರೋದ್ಧರ್ಷಾ ಯೇ ಚ ತೇಷಾಂ ಪುರಸ್ಸರಾಃ ॥ ೭**
**ತನ್ನೋ ದೇವ ಭಯಾರ್ತಾನಾಮಭಯಂ ದಾತುಮರ್ಹಸಿ ।**
**ಅಶಿವಂ ವಪುರಾಸ್ಥಾಯ ಜಹಿ ವೈ ದೇವಕಂಟಕಾನ್ ॥ ೮**
**ಇತ್ಯುಕ್ತಸ್ತು ಸುರೈಃ ಸರ್ವೈಃ ಕಪರ್ದೀ ನೀಲಲೋಹಿತಃ ।**
**ಸುಕೇಶಂ ಪ್ರತಿ ಸಾಪೇಕ್ಷಃ ಪ್ರಾಹ ದೇವಗಣಾನ್ ಪ್ರಭುಃ ॥ ೯**
**ಅಹಂ ತಾನ್ನ ಹನಿಷ್ಯಾಮಿ ಮಯಾವಧ್ಯಾ ಹಿ ತೇಽಸುರಾಃ ।**
**ಕಿಂ ತು ಮಂತ್ರಂ ಪ್ರದಾಸ್ಯಾಮಿ ಯೋ ವೈ ತಾನ್ನಿಹನಿಷ್ಯತಿ ॥ ೧೦**

---

ಸಮಸ್ತ ಪ್ರಾಣಿಗಳಿಗೂ ಆಶ್ರಯವನ್ನೀಯುತ್ತಿದ್ದ ನಮ್ಮ ವಸತಿಗಳೇ ಆ ರಾಕ್ಷಸರ ಪೀಡೆಯಿಂದ ದಿಕ್ಕಿಲ್ಲದೆ ಅನಾಥವಾದವು ದೇವತೆಗಳನ್ನು ಸ್ವರ್ಗದಿಂದ ಓಡಿಸಿ ಸ್ವರ್ಗವನ್ನಾಕ್ರಮಿಸಿ ತಾವೇ ದೇವತೆಗಳಂತೆ ವಿಹರಿಸಿದ್ದಾರೆ (೫) ಮಾಲಿ, ಸುಮಾಲಿ, ಮಾಲ್ಯವಂತ–ಎಂಬ ಆ ಮೂವರು ಅಹಂಕಾರದಿಂದ ಮೆರೆಯುತ್ತಿದ್ದಾರೆ 'ನಾನೇ ವಿಷ್ಣು, ನಾನೇ ರುದ್ರ, ನಾನೇ ಬ್ರಹ್ಮ, ನಾನೇ ಇಂದ್ರ!' ಎಂದು ಸೊಕ್ಕಿನಿಂದ ನುಡಿಯುತ್ತಾರೆ 'ಯಮ, ವರುಣ, ಚಂದ್ರ, ಸೂರ್ಯ–ಎಲ್ಲರೂ ನಾವೇ!' ಎಂದು ಹೇಳಿಕೊಳ್ಳುತ್ತಾರೆ (೬) ಆ ಮೂವರು ರಾಕ್ಷಸರೂ ಅವರ ಪರಿವಾರದವರೂ ಕೊಬ್ಬಿನಿಂದ ಯುದ್ಧೋನ್ಮತ್ತರಾಗಿ ನಮ್ಮನ್ನು ಪೀಡಿಸುತ್ತಿದ್ದಾರೆ ಆದ್ದರಿಂದ, ಹೇ ದೇವದೇವ, ಭಯಾರ್ತರಾದ ನಮಗೆ ಅಭಯಹಸ್ತವನ್ನಿತ್ತು ಕೃಪೆ ಮಾಡು. ಉಗ್ರರೂಪವನ್ನು ಧರಿಸಿ, ದೇವಕಂಟಕರಾದ ಆ ರಾಕ್ಷಸರನ್ನು ಸಂಹರಿಸು" ಎಂದು ಬೇಡಿದರು (೭–೮) ಆಗ ಜಟಾಮಾಲಿಯೂ ನೀಲಲೋಹಿತನೂ ಆದ ಶಂಕರನು, ಸುಕೇಶನು ತನ್ನ ಅನುಗ್ರಹಕ್ಕೆ ಪಾತ್ರನಾದ್ದರಿಂದ ಅವನ ಮಕ್ಕಳನ್ನು ತಾನೇ ಸಂಹರಿಸುವುದು ಸರಿಯಲ್ಲವೆಂದು

ಏತಮೇವ ಸಮುದ್ಯೋಗಂ ಪುರಸ್ಕೃತ್ಯ ಮಹರ್ಷಯಃ ।
ಗಚ್ಛಧ್ವಂ ಶರಣಂ ವಿಷ್ಣುಂ ಹನಿಷ್ಯತಿ ಸ ತಾನ್ ಪ್ರಭುಃ ॥ ೧೧
ತತಸ್ತು ಜಯಶಬ್ದೇನ ಪ್ರತಿನಂದ್ಯ ಮಹೇಶ್ವರಮ್ ।
ವಿಷ್ಣೋಃ ಸಮೀಪಮಾಜಗ್ಮುರ್ನಿಶಾಚರಭಯಾರ್ದಿತಾಃ ॥ ೧೨
ಶಂಖಚಕ್ರಧರಂ ದೇವಂ ಪ್ರಣಮ್ಯ ಬಹುಮಾನ್ಯ ಚ ।
ಊಚುಃ ಸಂಭ್ರಾಂತವದ್ವಾಕ್ಯಂ ಸುಕೇಶತನಯಾನ್ ಪ್ರತಿ ॥ ೧೩
ಸುಕೇಶತನಯೈರ್ದೇವ ತ್ರಿಭಿಸ್ತ್ರೇತಾಗ್ನಿಸಂನಿಭೈಃ ।
ಆಕ್ರಮ್ಯ ವರದಾನೇನ ಸ್ಥಾನಾನ್ಯಪಹೃತಾನಿ ನಃ ॥ ೧೪
ಲಂಕಾ ನಾಮ ಪುರೀ ದುರ್ಗಾ ತ್ರಿಕೂಟಶಿಖರೇ ಸ್ಥಿತಾ ।
ತತ್ರ ಸ್ಥಿತಾಃ ಪ್ರಬಾಧಂತೇ ಸರ್ವಾನ್ನಃ ಕ್ಷಣದಾಚರಾಃ ॥ ೧೫
ಸ ತ್ವಮಸ್ಮದ್ಧಿತಾರ್ಥಾಯ ಜಹಿ ತಾನ್ ಮಧುಸೂದನ ।
ಶರಣಂ ತ್ವಾಂ ವಯಂ ಪ್ರಾಪ್ತಾ ಗತಿರ್ಭವ ಸುರೇಶ್ವರ ॥ ೧೬

---

ಆಲೋಚಿಸಿ, "ಎಲೈ ದೇವತೆಗಳೆ, ನಾನು ಆ ರಾಕ್ಷಸರನ್ನು ಸಂಹರಿಸುವುದಿಲ್ಲ ಅವರನ್ನು ವಧಿಸುವುದು ನನಗೆ ಉಚಿತವಲ್ಲ ಆದರೆ ಆ ರಾಕ್ಷಸರನ್ನು ಕೊಲ್ಲು ವುದಕ್ಕೆ ಒಂದು ಉಪಾಯವನ್ನು ಹೇಳುವೆನು (೯-೧೦) ಎಲೈ ಮಹರ್ಷಿಗಳೆ-ದೇವತೆಗಳೆ, ಈ ಪ್ರಯತ್ನವನ್ನೇ ಮುಂದುವರಿಸಿ ವಿಷ್ಣುವಿನ ಬಳಿಗೆ ಶರಣಾರ್ಥಿಗಳಾಗಿ ಹೋಗಿರಿ ಆತನು ಅವರನ್ನು ವಧಿಸುವನು" ಎಂದು ನುಡಿದನು ಆಮೇಲೆ ದೇವರ್ಷಿಗಳು 'ಜಯ ಜಯ ಮಹೇಶ್ವರ!' ಎಂದು ಅಭಿನಂದಿಸಿ, ವಿಷ್ಣುವಿನ ಸಮೀಪಕ್ಕೆ ಹೋದರು (೧೧-೧೨). ಶಂಖಚಕ್ರ ಧಾರಿಯಾದ ಆ ಸ್ವಾಮಿಯನ್ನು ಕಂಡು ವಂದಿಸಿ ಆದರದಿಂದ ಸ್ತುತಿಸಿ, ಸುಕೇಶತನಯರಿಂದಾದ ಭೀತಿಯನ್ನು ತೋಡಿಕೊಳ್ಳುತ್ತ ಹೀಗೆಂದರು· "ದೇವ-ಮಧುಸೂದನ, ಸುಕೇಶನೆಂಬ ರಾಕ್ಷಸನ ಪುತ್ರರಾದ ಮೂವರು ತ್ರೇತಾಗ್ನಿಗಳಂತೆ ಜ್ವಲಿಸುತ್ತ, ಬ್ರಹ್ಮನ ವರಬಲದಿಂದ ನಮ್ಮೆಲ್ಲರ ಸ್ಥಾನ ಗಳನ್ನು ಅಪಹರಿಸಿದ್ದಾರೆ (೧೩-೧೪) ತ್ರಿಕೂಟಶಿಖರದಲ್ಲಿ ಲಂಕೆಯೆಂಬ ದುರ್ಗಮವಾದ ನಗರವುಂಟಷ್ಟೆ ಮೂವರು ರಾಕ್ಷಸರೂ ಅಲ್ಲಿ ನೆಲೆಸಿ ನಮ್ಮೆಲ್ಲರನ್ನೂ ಪೀಡಿಸುತ್ತಿದ್ದಾರೆ. ಹೇ ಸ್ವಾಮಿ, ನಮ್ಮೆಲ್ಲರ ಹಿತವನ್ನು

ರಾಕ್ಷಸಾನ್ ಸಮರೇ ದುಷ್ಟಾನ್ ಸಾನುಬಂಧಾನ್ ಮದೋದ್ಧತಾನ್ ।
ಚಕ್ರಕೃತ್ತಾಸ್ಯಕಮಲಾನ್ನಿವೇದಯ ಯಮಾಯ ವೈ ॥ ೧೭

ಭಯೇಷ್ವಭಯದೋಽಸ್ಮಾಕಂ ನಾನ್ಯೋಽಸ್ತಿ ಭವತಾ ವಿನಾ ।
ನುದ ತ್ವಂ ನೋ ಭಯಂ ದೇವ ನೀಹಾರಮಿವ ಭಾಸ್ಕರಃ ॥ ೧೮

ಇತ್ಯೇವಂ ದೈವತೈರುಕ್ತೋ ದೇವದೇವೋ ಜನಾರ್ದನಃ ।
ಅಭಯಂ ಭಯದೋಽರೀಣಾಂ ದತ್ತ್ವಾ ದೇವಾನುವಾಚ ಹ ॥ ೧೯

ಸುಕೇಶಂ ರಾಕ್ಷಸಂ ಜಾನೇ ಈಶಾನವರದರ್ಪಿತಮ್ ।
ತಾಂಶ್ಚಾಸ್ಯ ತನಯಾನ್ ಜಾನೇ ಯೇಷಾಂ ಜ್ಯೇಷ್ಠಃ ಸ ಮಾಲ್ಯವಾನ್

ತಾನಹಂ ಸಮತಿಕ್ರಾಂತಮರ್ಯಾದಾನ್ ರಾಕ್ಷಸಾಧಮಾನ್ ।
ನಿಹನಿಷ್ಯಾಮಿ ಸಂಕ್ರುದ್ಧಃ ಸುರಾ ಭವತ ವಿಜ್ವರಾಃ ॥ ೨೧

ಇತ್ಯುಕ್ತಾಸ್ತೇ ಸುರಾಃ ಸರ್ವೇ ವಿಷ್ಣುನಾ ಪ್ರಭವಿಷ್ಣುನಾ ।
ಯಥಾವಾಸಂ ಯಯುರ್ಹೃಷ್ಟಾಃ ಪ್ರಶಂಸಂತೋ ಜನಾರ್ದನಮ್

---

ಚಿಂತಿಸಿ ಆ ನಿಶಾಚರರನ್ನು ನೀನು ಸಂಹರಿಸಬೇಕು ನಿನಗೆ ನಾವು ಶರಣಾಗತರಾಗಿದ್ದೇವೆ ನಮಗೆ ಗತಿಯಾಗು (೧೫-೧೬). ಮದೋದ್ಧತರಾದ ಆ ದುರುಳರ ಶಿರಗಳನ್ನು ಅವರ ಪರಿವಾರಸಹಿತವಾಗಿ ಚಕ್ರಾಯುಧದಿಂದ ಸಮರದಲ್ಲಿ ತರಿದು, ಯಮನಿಗೆ ಅರ್ಪಿಸು! ದೇವ, ನಮಗೆ ಭಯವೊದಗಿದಾಗ ಅಭಯವನ್ನಿತ್ತು ನಮ್ಮನ್ನು ಪೊರೆಯುವವನು ನೀನಲ್ಲದೆ ಇನ್ನೊಬ್ಬನಿಲ್ಲ ಪ್ರಭು, ಸೂರ್ಯನು ಮಂಜನ್ನು ಕರಗಿಸುವಂತೆ, ನಮ್ಮ ಭಯವನ್ನು ನೀಗಿಸಲು ನೀನೇ ಸಮರ್ಥ" ಎಂದು ಪ್ರಾರ್ಥಿಸಿದರು (೧೭-೧೮) ಈ ರೀತಿಯಲ್ಲಿ ದೇವತೆಗಳು ಬೇಡಿಕೊಳ್ಳಲು, ದೇವದೇವನಾದ ಜನಾರ್ದನನು ಅಮರರಿಗೆ ಅಭಯವನ್ನಿತ್ತು " ಓ ದೇವತೆಗಳೆ, ಈಶ್ವರನ ವರದಿಂದ ಗರ್ವಿತನಾದ ಸುಕೇಶನ ವಿಷಯವು ನನಗೆ ಗೊತ್ತುಂಟು! ಅವನ ಮಕ್ಕಳನ್ನೂ ಬಲ್ಲೆನು! ಅವರಲ್ಲಿ ಮಾಲ್ಯವಂತನು ಹಿರಿಯನಲ್ಲವೆ? (೧೯-೨೦) ಆ ರಾಕ್ಷಸಾಧಮರು ಲೋಕಮರ್ಯಾದೆಯನ್ನು ಉಲ್ಲಂಘಿಸಿ ನಡೆಯುತ್ತಿದ್ದಾರೆ. ಈಗ ನಾನು ಸಂಕ್ರುದ್ಧನಾಗಿದ್ದೇನೆ. ದೇವತೆಗಳೆ, ಅವರನ್ನು ಸಂಹರಿಸುವೆನು ನಿಶ್ಚಿಂತರಾಗಿರಿ" ಎಂದು ತಿಳಿಸಿದನು. ಸರ್ವಶಕ್ತನಾದ ಶ್ರೀಮನ್ನಾರಾಯಣನು ಹೀಗೆ

ವಿಬುಧಾನಾಂ ಸಮುದ್ಯೋಗಂ ಮಾಲ್ಯವಾಂಸ್ತು ನಿಶಾಚರಃ ।
ಶ್ರುತ್ವಾ ತೌ ಭ್ರಾತರೌ ವೀರಾವಿದಂ ವಚನಮಬ್ರವೀತ್ ॥ ೨೩
ಅಮರಾ ಋಷಯಶ್ಚೈವ ಸಂಗಮ್ಯ ಕಿಲ ಶಂಕರಮ್ ।
ಅಸ್ಮದ್ವಧಂ ಪರೀಪ್ಸಂತ ಇದಂ ವಚನಮಬ್ರುವನ್ ॥ ೨೪
ಸುಕೇಶತನಯಾ ದೇವ ವರದಾನಬಲೋದ್ಧತಾಃ ।
ಬಾಧಂತೇಽಸ್ಮಾನ್ ಸಮುದ್ದೃಪ್ತಾ ಘೋರರೂಪಾಃ ಪದೇ ಪದೇ ॥
ರಾಕ್ಷಸೈರಭಿಭೂತಾಃ ಸ್ಮ ನ ಶಕ್ತಾಃ ಸ್ಮ ಪ್ರಜಾಪತೇ ।
ಸ್ವೇಷು ಸದ್ಮಸು ಸಂಸ್ಥಾತುಂ ಭಯಾತ್ತೇಷಾಂ ದುರಾತ್ಮನಾಮ್ ॥
ತದಸ್ಮಾಕಂ ಹಿತಾರ್ಥಾಯ ಜಹಿ ತಾಂಶ್ಚ ತ್ರಿಲೋಚನ ।
ರಾಕ್ಷಸಾನ್ ಹುಂಕೃತೇನೈವ ದಹ ಪ್ರದಹತಾಂ ವರ ॥ ೨೭
ಇತ್ಯೇವಂ ತ್ರಿದಶೈರುಕ್ತೋ ನಿಶಮ್ಯಾಂಧಕಸೂದನಃ ।
ಶಿರಃ ಕರಂ ಚ ಧುನ್ವಾನ ಇದಂ ವಚನಮಬ್ರವೀತ್ ॥ ೨೮

---

ನುಡಿಯಲು, ಸುರರೆಲ್ಲರೂ ಉಲ್ಲಸಿತರಾಗಿ ಭಗವಂತನನ್ನು ಹೊಗಳುತ್ತ ತಮ್ಮ ಸ್ಥಳಗಳಿಗೆ ತೆರಳಿದರು (೨೧-೨೨) ಇತ್ತ ಮಾಲ್ಯವಂತನಿಗೆ ದೇವತೆಗಳು ನಡೆಸಿದ ಸಂನಾಹವು ತಿಳಿಯಿತು. ಆ ನಿಶಾಚರನು ಮಾಲಿ, ಸುಮಾಲಿಗಳನ್ನು ಕರೆದು ಹೀಗೆಂದನು: "ಎಲೈ ತಮ್ಮಂದಿರೆ, ದೇವತೆಗಳೂ ಋಷಿಗಳೂ ನೇರಿ ನಡೆಸಿದ ಹಂಚಿಕೆಯನ್ನು ಕೇಳಿದಿರಾ? ಅವರೆಲ್ಲರೂ ಸೇರಿ ನಮ್ಮನ್ನು ಕೊಲ್ಲಲು ಹವಣಿಸಿದ್ದಾರೆ ಅವರು ಶಿವನ ಬಳಿಗೆ ಹೋಗಿ 'ದೇವ, ಸುಕೇಶತನಯರು ವರಬಲದಿಂದ ಉದ್ಧತರಾಗಿ ನಮ್ಮನ್ನು ಪೀಡಿಸುತ್ತಿದ್ದಾರೆ. ಆ ಕ್ರೂರಾತ್ಮರು ಪದೇ ಪದೇ ನಮ್ಮನ್ನು ಹಿಂಸಿಸುತ್ತಿದ್ದಾರೆ (೨೩-೨೫). ಆ ದುರುಳರಿಂದ ನಾವು ಪರಾಭೂತರಾದೆವು ನಮ್ಮ ನಮ್ಮ ಮನೆಗಳಲ್ಲಿ ಕೂಡ ಅವರ ಭಯದಿಂದ ಇರಲಾರದೆ ಸಂಕಟಪಡುತ್ತಿದ್ದೇವೆ ಆದ್ದರಿಂದ, ನಮ್ಮ ಹಿತಕ್ಕಾಗಿ ಮಾಲ್ಯವದಾದಿಗಳನ್ನು ಕೊಲ್ಲು! ಹೇ ತ್ರಿಲೋಚನ, ಹುಂಕಾರಮಾತ್ರದಿಂದಲೇ ನೀನು ಅವರನ್ನು ಸುಟ್ಟು ಬೂದಿಮಾಡಬಲ್ಲೆ!' ಎಂದು ಹೇಳಿದರಂತೆ (೨೬-೨೭). ದೇವತೆಗಳ ನುಡಿಯನ್ನು ಕೇಳಿ ಅಂಧಕಾರಿಯು ತಲೆಯಾಡಿಸಿ ಕೈಕೊಡವಿ 'ದೇವತೆಗಳಿ, ಸುಕೇಶತನಯ

ಅವಧ್ಯಾ ಮಮ ತೇ ದೇವಾಃ ಸುಕೇಶತನಯಾ ರಣೇ ।
ಮಂತ್ರಂ ತು ವಃ ಪ್ರದಾಸ್ಯಾಮಿ ಯಸ್ತಾನ್ ವೈ ನಿಹನಿಷ್ಯತಿ ॥ ೨೯

ಯೋಽಸೌ ಚಕ್ರಗದಾಪಾಣಿಃ ಪೀತವಾಸಾ ಜನಾರ್ದನಃ ।
ಹರಿರ್ನಾರಾಯಣಃ ಶ್ರೀಮಾನ್ ಶರಣಂ ತಂ ಪ್ರಪದ್ಯಥ ॥ ೩೦

ಹರಾದವಾಪ್ಯ ತೇ ಮಂತ್ರಂ ಕಾಮಾರಿಮಭಿವಾದ್ಯ ಚ ।
ನಾರಾಯಣಾಲಯಂ ಪ್ರಾಪ್ಯ ತಸ್ಮೈ ಸರ್ವಂ ನ್ಯವೇದಯನ್ ॥ ೩೧

ತತೋ ನಾರಾಯಣೇನೋಕ್ತಾ ದೇವಾ ಇಂದ್ರಪುರೋಗಮಾಃ ।
ಸುರಾರೀಂಸ್ತಾನ್ ಹನಿಷ್ಯಾಮಿ ಸುರಾ ಭವತ ವಿಜ್ವರಾಃ ॥ ೩೨

ದೇವಾನಾಂ ಭಯಭೀತಾನಾಂ ಹರಿಣಾ ರಾಕ್ಷಸರ್ಷಭೌ ।
ಪ್ರತಿಜ್ಞಾತೋ ವಧೋಽಸ್ಮಾಕಂ ಚಿಂತ್ಯತಾಂ ಯದಿಹ ಕ್ಷಮಮ್ ॥

ಹಿರಣ್ಯಕಶಿಪೋರ್ಮೃತ್ಯುರನ್ಯೇಷಾಂ ಚ ಸುರದ್ವಿಷಾಮ್ ।
ದುಃಖಂ ನಾರಾಯಣಂ ಜೇತುಂ ಯೋ ನೋ ಹಂತುಮಭೀಪ್ಸತಿ ॥

---

ರನ್ನು ನಾನು ಸಂಹರಿಸುವುದು ಸರಿಯಲ್ಲ ಆದರೆ ಅವರನ್ನು ವಧಿಸುವ ಒಂದು ಉಪಾಯವನ್ನು ಹೇಳುವೆನು (೨೮-೨೯) ಚಕ್ರಗದಾಪಾಣಿಯೂ ಪೀತಾಂಬರನೂ ಆದ ಜನಾರ್ದನನಿದ್ದಾನೆ ನೀವು ಆ ನಾರಾಯಣನಿಗೆ ಶರಣಾಗಿರಿ’ ಎಂದು ತಿಳಿಸಿದನಂತೆ ಆಗ ದೇವತೆಗಳೂ ಋಷಿಗಳೂ ಹರನು ಹೇಳಿದ ಉಪಾಯವನ್ನು ಮನ್ನಿಸಿ, ಆ ಕಾಮಾಂತಕನಿಗೆ ವಂದಿಸಿ ವಿಷ್ಣುವಿನ ಸಮೀಪಕ್ಕೆ ಹೋಗಿ ಎಲ್ಲವನ್ನೂ ನಿವೇದಿಸಿಕೊಂಡರು (೩೦-೩೧). ಆಗ ವಿಷ್ಣುವು ಇಂದ್ರಾದಿ ದೇವತೆಗಳಿಗೆ ಅಭಯವನ್ನಿತ್ತು ‘ದೇವತೆಗಳೆ, ಆ ರಾಕ್ಷಸ ರನ್ನು ನಾನು ಕೊಲ್ಲುವೆನು. ನೀವು ನಿಶ್ಚಿಂತರಾಗಿರಿ’ ಎಂದು ಮಾತು ಕೊಟ್ಟಿರುವನಂತೆ (೩೨) ಎಲೈ ರಾಕ್ಷಸೋತ್ತಮರೆ, ಭೀತರಾದ ಸುರರಿಗೆ ವಿಷ್ಣುವು ನಮ್ಮನ್ನು ಕೊಲ್ಲುವೆನೆಂದು ಹೇಳಿ ಪ್ರತಿಜ್ಞೆಮಾಡಿಕೊಟ್ಟಿದ್ದಾನೆ ಈ ಪರಿಸ್ಥಿತಿಯಲ್ಲಿ ನಾವೇನು ಮಾಡಬೇಕೆಂದು ಆಲೋಚಿಸಿರಿ ನಾರಾಯಣ ನಾದರೋ ಸಾಮಾನ್ಯನಲ್ಲ ಹಿರಣ್ಯಕಶಿಪುವಿಗೆ ಮೃತ್ಯುವಾದವನು ಬಹು ಮಂದಿ ರಾಕ್ಷಸರನ್ನು ಸಂಹರಿಸಿದ್ದಾನೆ ನಮ್ಮನ್ನು ಕೊಲ್ಲಬೇಕೆಂದಿರುವ

**ತತಃ ಸುಮಾಲೀ ಮಾಲೀ ಚ ಶ್ರುತ್ವಾ ಮಾಲ್ಯವತೋ ವಚಃ ।**
**ಊಚತುರ್ಭ್ರಾತರಂ ಜ್ಯೇಷ್ಠಮಶ್ವಿನಾವಿವ ವಾಸವಮ್ ॥** ೩೫

**ಸ್ವಧೀತಂ ದತ್ತಮಿಷ್ಟಂ ಚಾಪ್ಯೈಶ್ವರ್ಯಂ ಪರಿಪಾಲಿತಮ್ ।**
**ಆಯುರ್ನಿರಾಮಯಂ ಪ್ರಾಪ್ತಂ ಸುಧರ್ಮಃ ಪ್ರಾಪಿತಃ ಪಥಿ ॥** ೩೬

**ದೇವಸಾಗರಮಕ್ಷೋಭ್ಯಂ ಶಸ್ತ್ರೈಃ ಸಮವಗಾಹ್ಯ ಚ ।**
**ಜಿತಾ ದ್ವಿಷೋ ಹ್ಯಪ್ರತಿಮಾಸ್ತನ್ನೋ ಮೃತ್ಯುಕೃತಂ ಭಯಮ್ ॥**

**ನಾರಾಯಣಶ್ಚ ರುದ್ರಶ್ಚ ಶಕ್ರಶ್ಚಾಪಿ ಯಮಸ್ತಥಾ ।**
**ಅಸ್ಮಾಕಂ ಪ್ರಮುಖೇ ಸ್ಥಾತುಂ ಸರ್ವೇ ಬಿಭ್ಯತಿ ಸರ್ವದಾ ॥** ೩೮

**ವಿಷ್ಣೋರ್ದ್ವೇಷಸ್ಯ ನಾಸ್ತ್ಯೇವ ಕಾರಣಂ ರಾಕ್ಷಸೇಶ್ವರ ।**
**ದೇವಾನಾಮೇವ ದೋಷೇಣ ವಿಷ್ಣೋಃ ಪ್ರಚಲಿತಂ ಮನಃ ॥** ೩೯

**ತಸ್ಮಾದದ್ಯ ಸಮುದ್ಯುಕ್ತಾಃ ಸರ್ವಸೈನ್ಯಸಮಾವೃತಾಃ ।**
**ದೇವಾನೇವ ಜಿಘಾಂಸಾಮೋ ಯೇಭ್ಯೋ ದೋಷಃ ಸಮುತ್ಥಿತಃ ॥**

---

ಆತನನ್ನು ಜಯಿಸುವುದು ಕಷ್ಟ !" ಎಂದನು (೩೩-೩೪) ಮಾಲ್ಯವಂತನ ಮಾತನ್ನಾಲಿಸಿ ಮಾಲಿ ಸುಮಾಲಿಗಳು, ಇಂದ್ರನನ್ನು ಕುರಿತು ಅಶ್ವಿನೀ ದೇವತೆಗಳು ನುಡಿದಂತೆ, ತಮ್ಮ ಅಣ್ಣನನ್ನುದ್ದೇಶಿಸಿ ಹೀಗೆಂದರು (೩೫): "ಅಣ್ಣ, ನಾವು ಚೆನ್ನಾಗಿ ವಿದ್ಯಾರ್ಜನೆ ಮಾಡಿದ್ದೇವೆ ದಾನಮಾಡಿದ್ದೇವೆ. ಯಜ್ಞಗಳನ್ನು ನಡೆಸಿದ್ದೇವೆ ಬೇಕಾದಷ್ಟು ಐಶ್ವರ್ಯವನ್ನು ಗಳಿಸಿ ಪಾಲಿಸಿ ಅನುಭವಿಸಿದ್ದೇವೆ ಆಯುರಾರೋಗ್ಯಗಳನ್ನು ಪಡೆದಿದ್ದೇವೆ ನಮ್ಮ ಕುಲ ಪರಂಪರಾಗತವಾದ ಧರ್ಮವನ್ನು ಸರಿಯಾದ ಮಾರ್ಗದಲ್ಲಿ ಸ್ಥಾಪಿಸಿದ್ದೇವೆ ! ಹೀಗಿರುವಾಗ ಮರಣಕ್ಕೆ ಅಂಜುವುದಾದರೂ ಏಕೆ ? ನಮಗೆ ಅಂಜಿಕೆ ಇಲ್ಲ ! (೩೬-೩೭) ಅಲ್ಲದೆ, ಅಣ್ಣ, ನಾರಾಯಣನಾಗಲಿ, ರುದ್ರನಾಗಲಿ, ಇಂದ್ರ ಯಮರೇ ಆಗಲಿ, ನಮ್ಮೆದುರಿಗೆ ರಣರಂಗದಲ್ಲಿ ನಿಲ್ಲಲಾರರು ಅವರೆಲ್ಲರೂ ಹೆದರುತ್ತಾರೆ ರಾಕ್ಷಸೇಂದ್ರ, ವಿಷ್ಣುವಾದರೂ ನಮ್ಮನ್ನು ದ್ವೇಷಿಸಲು ಯಾವ ಕಾರಣವೂ ಇಲ್ಲ ಈ ದೇವತೆಗಳ ತರಲೆಯಿಂದ ಆತನ ಮನಸ್ಸು ಕಲಕಿದೆ ! (೩೮-೩೯). ಈ ಸಂಚು ದೇವತೆಗಳಿಂದಲೇ ಆದದ್ದು. ಆದ್ದರಿಂದ

**ಏವಂ ಸಂಮಂತ್ರ್ಯ ಬಲಿನಃ ಸರ್ವೇ ಸೈನ್ಯಸಮಾವೃತಾಃ ।**
**ಉದ್ಯೋಗಂ ಘೋಷಯಿತ್ವಾ ತು ಸರ್ವೇ ನೈರ್ಋತಪುಂಗವಾಃ ॥**
**ಯುದ್ಧಾಯ ನಿರ್ಯಯುಃ ಕ್ರುದ್ಧಾ ಜಂಭವೃತ್ರಬಲಾ ಇವ ।**
**ಇತಿ ತೇ ರಾಮ ಸಂಮಂತ್ರ್ಯ ಸರ್ವೋದ್ಯೋಗೇನ ರಾಕ್ಷಸಾಃ ॥ ೪೨**
**ಯುದ್ಧಾಯ ನಿರ್ಯಯುಃ ಸರ್ವೇ ಮಹಾಕಾಯಾ ಮಹಾಬಲಾಃ**
**ಸ್ಯಂದನೈರ್ವಾರಣೈಶ್ಚೈವ ಹಯೈಶ್ಚ ಗಿರಿಸನ್ನಿಭೈಃ ॥ ೪೩**
**ಖರೈರ್ಗೋಭೀ ರಥೋಷ್ಟ್ರೈಶ್ಚ ಶಿಂಶುಮಾರೈರ್ಭುಜಂಗಮೈಃ ।**
**ಮಕರೈಃ ಕಚ್ಛಪೈರ್ಮೀನೈರ್ವಿಹಂಗೈರ್ಗರುಡೋಪಮೈಃ ॥ ೪೪**
**ಸಿಂಹೈರ್ವ್ಯಾಘ್ರೈರ್ವರಾಹೈಶ್ಚ ಸೃಮರೈಶ್ಚಮರೈರಪಿ ।**
**ತ್ಯಕ್ತ್ವಾ ಲಂಕಾಂ ಗತಾಃ ಸರ್ವೇ ರಾಕ್ಷಸಾ ಬಲಗರ್ವಿತಾಃ ॥ ೪೫**
**ಪ್ರಯಾತಾ ದೇವಲೋಕಾಯ ಯೋದ್ಧುಂ ದೈವತಶತ್ರವಃ ।**
**ಲಂಕಾವಿಪರ್ಯಯಂ ದೃಷ್ಟ್ವಾ ಯಾನಿ ಲಂಕಾಲಯಾನ್ಯಥ ॥ ೪೬**
**ಭೂತಾನಿ ಭಯದರ್ಶಾನಿ ವಿಮನಸ್ಕಾನಿ ಸರ್ವಶಃ ।**
**ರಥೋತ್ತಮೈರುಹ್ಯಮಾನಾಃ ಶತಶೋಽಥ ಸಹಸ್ರಶಃ ॥ ೪೭**

---

ನಾವು ಸೇನಾಸಮೇತರಾಗಿ ನುಗ್ಗಿ, ಮೊದಲು ದೇವತೆಗಳನ್ನೇ ಬಗ್ಗುಬಡಿಯ ಬೇಕು" ಈ ರೀತಿಯಲ್ಲಿ ಮಂತ್ರಾಲೋಚನೆ ಮಾಡಿ ಆ ರಾಕ್ಷಸವೀರರು ಯುದ್ಧವು ನಡೆಯುವುದೆಂದು ಡಂಗುರ ಹೊಡೆಸಿದರು (೪೦-೪೧) ಜಂಭ, ವೃತ್ರ, ಬಲಾಸುರರಂತೆ ಬಲಾಢ್ಯರಾದ ಆ ನಿಶಾಚರರು ಸೇನಾಸಮೇತರಾಗಿ ಸರ್ವಸನ್ನಾಹಗಳೊಡನೆ, ದೇವತೆಗಳ ಮೇಲೆ ಕಾಳಗಕ್ಕಾಗಿ ಧಾವಿಸಿದರು (೪೨) ಶೈಲೋಪಮಗಳಾದ ರಥ, ಗಜ, ಅಶ್ವ, ಹೇಸರಗತ್ತೆ, ವೃಷಭ, ಒಂಟೆ, ನೆಗಳು, ಸರ್ಪ, ಮೊಸಳೆ, ಆಮೆ, ಮೀನ ಮತ್ತು ಗರುಡೋಪಮ ಗಳಾದ ಪಕ್ಷಿಗಳು, ಸಿಂಹ, ವ್ಯಾಘ್ರ, ವರಾಹ, ಸೃಮರ, ಚಮರ ಎಂಬ ಮೃಗಗಳು – ಮುಂತಾದ ವಾಹನಗಳನ್ನೇರಿ ಬಲದೃಪ್ತರಾದ ರಾಕ್ಷಸರು ಹೋರಾಟಕ್ಕಾಗಿ ದೇವಲೋಕಕ್ಕೆ ಹೊರಟರು (೪೩-೪೫). ಲಂಕೆಗೆ ಒದಗಿದ ವಿಪತ್ತನ್ನು ಕಂಡು ಲಂಕಾನಿವಾಸಿಗಳಾದ ಸಕಲರೂ ಭಯದಿಂದ ವಿಷಣ್ಣ ರಾದರು ರಾಕ್ಷಸರು ಸಾವಿರಾರು ಸಂಖ್ಯೆಯಲ್ಲಿ ಉತ್ತಮ ರಥಗಳನ್ನೇರಿ,

**ಪ್ರಯಾತಾ ರಾಕ್ಷಸಾಸ್ತೂರ್ಣಂ ದೇವಲೋಕಂ ಪ್ರಯತ್ನತಃ ।**
**ರಕ್ಷಸಾಮೇವ ಮಾರ್ಗೇಣ ದೈವತಾನ್ಯಪಚಕ್ರಮುಃ ॥ ೪೮**

**ಭೂತಾನಿ ಭಯದರ್ಶೀನಿ ವಿಷಯಸ್ಥಾನಿ ಸರ್ವಶಃ ।**
**ಭೌಮಾಶ್ಚೈವಾಂತರಿಕ್ಷಾಶ್ಚ ಕಾಲಾಜ್ಞಪ್ತಾ ಭಯಾವಹಾಃ ॥ ೪೯**

**ಉತ್ಪಾತಾ ರಾಕ್ಷಸೇಂದ್ರಾಣಾಮಭಾವಾಯ ಸಮುತ್ಥಿತಾಃ ।**
**ಅಸ್ಥೀನಿ ಮೇಘಾ ವವೃಷುರುಷ್ಣಂ ಶೋಣಿತಮೇವ ಚ ॥ ೫೦**

**ವೇಲಾಂ ಸಮುದ್ರಾಶ್ಚೋತ್ಕ್ರಾಂತಾಶ್ಚೇಲುಶ್ಚಾಪ್ಯಥ ಭೂಧರಾಃ ।**
**ಅಟ್ಟಹಾಸಾನ್ ವಿಮುಂಚಂತೋ ಘನನಾದಸಮಸ್ವನಾಃ ॥ ೫೧**

**ವಾಶ್ಯಂತ್ಯಶ್ಚ ಶಿವಾಸ್ತತ್ರ ದಾರುಣಂ ಘೋರದರ್ಶನಾಃ ।**
**ಸಂಪತಂತ್ಯಥ ಭೂತಾನಿ ದೃಶ್ಯಂತೇ ಚ ಯಥಾಕ್ರಮಮ್ ॥ ೫೨**

**ಗೃಧ್ರಚಕ್ರಂ ಮಹಚ್ಚಾತ್ರ ಜ್ವಲನೋದ್ಗಾರಿಭಿರ್ಮುಖೈಃ ।**
**ರಾಕ್ಷಸಾನಾಮುಪರಿ ಖೇ ಭ್ರಮತೇಽಲಾತಚಕ್ರವತ್ ॥ ೫೩**

**ಕಪೋತಾ ರಕ್ತಪಾದಾಶ್ಚ ಶಾರಿಕಾ ವಿದ್ರುತಾ ಯಯುಃ ।**
**ಕಾಕಾ ವಾಶ್ಯಂತಿ ತತ್ರೈವ ಬಿಡಾಲಾ ವೈ ದ್ವಿಪಾದಿಕಾಃ ॥ ೫೪**

---

ದೇವಲೋಕಕ್ಕೆ ಸಾಗಿದರು ಅಲ್ಲಲ್ಲಿ ನೆಲೆಸಿದ್ದ ದೇವತೆಗಳೂ ಸಹ ರಾಕ್ಷಸರ ದಾರಿಯನ್ನು ಹಿಡಿದು ತಮ್ಮ ಲೋಕಕ್ಕೆ ಬಂದು ಸೇರಿದರು (೪೬-೪೮). ಭೂಮಿಯಲ್ಲಿಯೂ ಅಂತರಿಕ್ಷದಲ್ಲಿಯೂ ವಿಪತ್ಕಾಲಜನ್ಯವಾದ ಉತ್ಪಾತಗಳು ರಾಕ್ಷಸರ ವಿನಾಶವನ್ನು ಸೂಚಿಸಿದವು ಮೋಡಗಳಿಂದ ಮೂಳೆಗಳೂ ಬಿಸಿ ನೆತ್ತರೂ ಸುರಿದವು (೪೯-೫೦) ಸಮುದ್ರಗಳು ಎಲ್ಲೆಮೀರಿ ಉಕ್ಕಿದವು. ಬೆಟ್ಟಗಳು ಅಲ್ಲಾಡಿದವು ಗುಡುಗಿನಂತೆ ಅಬ್ಬರಿಸಿದ ಸಮುದ್ರಗಳೂ ಬೆಟ್ಟಗಳೂ ಅಟ್ಟಹಾಸಮಾಡುವಂತೆ ಕಾಣಿಸಿದವು ಘೋರರೂಪಿಗಳಾದ ನರಿಗಳು ಕೆಟ್ಟದಾಗಿ ಊಳಿದವು ಎಲ್ಲೆಲ್ಲಿಯೂ ಭೂತಗಳು ಗಡಿಬಿಡಿಯಿಂದ ಸುತ್ತಾಡಿದವು (೫೧-೫೨). ಹದ್ದುಗಳ ದೊಡ್ಡ ಹಿಂಡು ಬಾಯಿಂದ ಬೆಂಕಿಯನ್ನು ಉಗುಳುತ್ತ ರಾಕ್ಷಸರ ಮೇಲೆ ಆಕಾಶದಲ್ಲಿ ಪಂಜಿನ ಚಕ್ರದಂತೆ ಹಾರಾಡಿತು. ಕೆಂಪುಕಾಲಿನ ಪಾರಿವಾಳಗಳೂ ಶಾರಿಕೆಗಳೂ ಕಂಗೆಟ್ಟು ಓಡಿದವು ಕಾಗೆಗಳು ಕರ್ರೆಂದು ಕೂಗಾಡಿದವು ಬೆಕ್ಕು, ಆನೆ ಮುಂತಾದ ಪ್ರಾಣಿಗಳು

**ಉತ್ಪಾತಾಂಸ್ತಾನನಾದೃತ್ಯ ರಾಕ್ಷಸಾ ಬಲಗರ್ವಿತಾಃ ।**
**ಯಾಂತ್ಯೇವ ನ ನಿವರ್ತಂತೇ ಮೃತ್ಯುಪಾಶಾವಪಾಶಿತಾಃ ॥ ೫೫**

**ಮಾಲ್ಯವಾಂಶ್ಚ ಸುಮಾಲೀ ಚ ಮಾಲೀ ಚ ಸುಮಹಾಬಲಾಃ ।**
**ಆಸನ್ ಪುರಸ್ಸರಾಸ್ತೇಷಾಂ ಕ್ರತೂನಾಮಿವ ಪಾವಕಾಃ ॥ ೫೬**

**ಮಾಲ್ಯವಂತಂ ಚ ತೇ ಸರ್ವೇ ಮಾಲ್ಯವಂತಮಿವಾಚಲಮ್ ।**
**ನಿಶಾಚರಾ ಹ್ಯಾಶ್ರಯಂತಿ ಧಾತಾರಮಿವ ದೇವತಾಃ ॥ ೫೭**

**ತದ್ಬಲಂ ರಾಕ್ಷಸೇಂದ್ರಾಣಾಂ ಮಹಾಭ್ರಘನನಾದಿತಮ್ ।**
**ಜಯೇಪ್ಸಯಾ ದೇವಲೋಕಂ ಯಯೌ ಮಾಲಿವಶೇ ಸ್ಥಿತಮ್ ॥**

**ರಾಕ್ಷಸಾನಾಂ ಸಮುದ್ಯೋಗಂ ತಂ ತು ನಾರಾಯಣಃ ಪ್ರಭುಃ ।**
**ದೇವದೂತಾದುಪಶ್ರುತ್ಯ ಚಕ್ರೇ ಯುದ್ಧೇ ತದಾ ಮನಃ ॥ ೫೯**

**ಸ ಸಜ್ಜಾಯುಧತೂಣೀರೋ ವೈನತೇಯೋಪರಿ ಸ್ಥಿತಃ ।**
**ಆಸಜ್ಯ ಕವಚಂ ದಿವ್ಯಂ ಸಹಸ್ರಾರ್ಕಸಮದ್ಯುತಿ ॥ ೬೦**

---

ನಿಷ್ಕಾರಣವಾಗಿ ಅರಚಿದವು (೫೩-೫೪) ಬಲಗರ್ವಿತರಾದ ರಾಕ್ಷಸರು ಆ ಮಹೋತ್ಪಾತಗಳನ್ನು ಕಂಡರೂ ಲೆಕ್ಕಿಸದೆ ಮುಂದೆ ನಡೆದರು ಮೃತ್ಯುಪಾಶವು ಅವರನ್ನೆಳೆಯುತ್ತಿತ್ತು ರಾಕ್ಷಸರ ಪಡೆಯಲ್ಲಿ ಅಗ್ರಗಾಮಿಗಳಾದ ಮಾಲ್ಯವಂತ, ಸುಮಾಲಿ, ಮಾಲಿಗಳೆಂಬ ಬಲಾಢ್ಯರಾದ ರಾಕ್ಷಸೇಂದ್ರರು, ಯಜ್ಞವೇದಿಕೆಯಲ್ಲಿರುವ ಅಗ್ನಿಗಳಂತೆ ತೇಜೋವಿಶಿಷ್ಟರಾಗಿ ವಿರಾಜಿಸುತ್ತಿದ್ದರು (೫೫-೫೬) ಮಾಲ್ಯವತ್ಪರ್ವತದಂತೆ ಕಂಗೊಳಿಸುತ್ತಿದ್ದ ಮಾಲ್ಯವಂತನನ್ನು, ದೇವತೆಗಳು ಬ್ರಹ್ಮನನ್ನಾಶ್ರಯಿಸುವಂತೆ, ನಿಶಾಚರರು ಆಶ್ರಯಿಸಿದ್ದರು ಮಾಲಿಯ ಸೇನಾಧಿಪತ್ಯದಲ್ಲಿದ್ದ ಆ ರಾಕ್ಷಸಪಡೆಯು ಕಾಲಮೇಘದಂತೆ ಅಬ್ಬರಿಸುತ್ತ, ಜಯಾಪೇಕ್ಷೆಯಿಂದ ದೇವಲೋಕಕ್ಕೆ ನಡೆಯಿತು (೫೭-೫೮) ರಾಘವ, ರಾಕ್ಷಸರ ಈ ಸಮರಸನ್ನಾಹವು ದೇವದೂತನಿಂದ ಶ್ರೀಮನ್ ನಾರಾಯಣನಿಗೆ ತಿಳಿಯಿತು ಯುದ್ಧಮಾಡಬೇಕೆಂದು ಅವನು ನಿಶ್ಚಯಿಸಿದನು ಆ ಸ್ವಾಮಿಯು ಆಯುಧಗಳನ್ನು ಸಜ್ಜುಗೊಳಿಸಿಕೊಂಡು, ಸಹಸ್ರಸೂರ್ಯರಂತೆ ಹೊಳೆಹೊಳೆಯುತ್ತಿದ್ದ ದಿವ್ಯಕವಚವನ್ನು ತೊಟ್ಟು, ಸೊಂಟದ

ಆಬಧ್ಯ ಶರಸಂಪೂರ್ಣೇ ಇಷುಧೀ ವಿಮಲೇ ತದಾ ।
ಶ್ರೋಣಿಸೂತ್ರಂ ಚ ಖಡ್ಗಂ ಚ ವಿಮಲಂ ಕಮಲೇಕ್ಷಣಃ ॥ ೬೧

ಶಂಖಚಕ್ರಗದಾಶಾರ್ಙ್ಗಖಡ್ಗಾಖ್ಯಪ್ರವರಾಯುಧಾನ್ ।
ಸುಪರ್ಣಂ ಗಿರಿಸಂಕಾಶಂ ವೈನತೇಯಮಥಾಸ್ಥಿತಃ ॥ ೬೨

ರಾಕ್ಷಸಾನಾಮಭಾವಾಯ ಯಯೌ ತೂರ್ಣತರಂ ಪ್ರಭುಃ ।
ಸುಪರ್ಣಪೃಷ್ಠೇ ಸ ಬಭೌ ಶ್ಯಾಮಃ ಪೀತಾಂಬರೋ ಹರಿಃ ॥ ೬೩

ಕಾಂಚನಸ್ಯ ಗಿರೇಃ ಶೃಂಗೇ ಸತಡಿತ್ತೋಯದೋ ಯಥಾ ॥

ಸ ಸಿದ್ಧದೇವರ್ಷಿಮಹೋರಗೈಶ್ಚ
ಗಂಧರ್ವಯಕ್ಷೈರುಪಗೀಯಮಾನಃ ।
ಸಮಾಸಸಾದಾಸುರಸೈನ್ಯಶತ್ರೂಂ-
ಶ್ಚಕ್ರಾಸಿಶಾರ್ಙ್ಗಾಯುಧಶಂಖಪಾಣಿಃ ॥ ೬೪

ಸುಪರ್ಣಪಕ್ಷಾನಿಲನುನ್ನಪಕ್ಷಂ
ಭ್ರಮತ್ಪತಾಕಂ ಪ್ರವಿಕೀರ್ಣಶಸ್ತ್ರಮ್ ।
ಚಚಾಲ ತದ್ರಾಕ್ಷಸರಾಜಸೈನ್ಯಂ
ಚಲೋಪಲಂ ನೀಲ ಇವಾಚಲೇಂದ್ರಃ ॥ ೬೫

---

ಪಟ್ಟಿಯನ್ನು ಕಟ್ಟಿ, ಶರಪೂರಿತಗಳಾದ ಬತ್ತಳಿಕೆಗಳನ್ನು ಬೆನ್ನಿಗೆ ಬಿಗಿದು, ಶಂಖ ಚಕ್ರ ಗದಾ ಶಾರ್ಙ್ಗ ಖಡ್ಗಗಳೆಂಬ ದಿವ್ಯಾಯುಧಗಳನ್ನು ಧರಿಸಿ, ಗಿರಿಸಂಕಾಶನಾದ ವೈನತೇಯನನ್ನಡರಿದನು (೫೯-೬೨) ಶ್ಯಾಮಲಾಂಗನೂ ಪೀತಾಂಬರಧಾರಿಯೂ ಆದ ಶ್ರೀಹರಿಯು ಗರುಡನ ಮೇಲೆ ಕುಳಿತು, ಮೇರು ಶಿಖರವನ್ನಡರಿದ ವಿದ್ಯುದ್ವಿರಾಜಿತಮೇಘದಂತೆ ಕಂಗೊಳಿಸುತ್ತ, ರಾಕ್ಷಸರ ಸಂಹಾರಕ್ಕಾಗಿ ಧಾವಿಸಿದನು (೬೩) ಆಗ ಭಗವಂತನನ್ನು ಸಿದ್ಧರೂ ದೇವರ್ಷಿಮಹೋರಗರೂ ಯಕ್ಷಗಂಧರ್ವರೂ ಸ್ತುತಿಸುತ್ತಿದ್ದರು ಶ್ರೀಹರಿಯು ಚಕ್ರಾದ್ಯಾಯುಧಪಾಣಿಯಾಗಿ, ದೇವಶತ್ರುಗಳಾದ ರಾಕ್ಷಸರನ್ನೆದುರಿಸಲು ಬಂದನು (೬೪) ಗರುಡನ ರೆಕ್ಕೆಗಳ ವೇಗದಿಂದೆದ್ದ ಗಾಳಿಯ ಬಿರುಸಿಗೆ, ರಾಕ್ಷಸಪಡೆಯ ಇಕ್ಕೆಡೆಗಳೂ ತೂಗಾಡಿದವು! ಪತಾಕೆಗಳು ಹಾರಾಡಿದವು.

ತತಃ ಶರೈಃ ಶೋಣಿತಮಾಂಸರೂಷಿತೈ-
ರ್ಯುಗಾಂತವೈಶ್ವಾನರತುಲ್ಯವಿಗ್ರಹೈಃ ।
ನಿಶಾಚರಾಃ ಸಂಪರಿವಾರ್ಯ ಮಾಧವಂ
ವರಾಯುಧೈರ್ನಿರ್ಬಿಭಿದುಃ ಸಹಸ್ರಶಃ ॥ ೬೬

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಷ್ಠಃ ಸರ್ಗಃ



ಆಯುಧಗಳು ತೂರಾಡಿದವು ನೀಲಾಚಲವು ಬಂಡೆಗಳನ್ನುರುಳಿಸುತ್ತ ಅಲ್ಲಾಡುವುದೋ ಎಂಬಂತೆ ರಾಕ್ಷಸಸೇನೆಯು ಗೋಚರಿಸಿತು (೬೫) ಮರುಕ್ಷಣದಲ್ಲಿಯೇ ನಿಶಾಚರರು ವಿಷ್ಣುವನ್ನು ಮುತ್ತಿ, ತಮ್ಮ ಉಗ್ರಾಯುಧಗಳನ್ನು ಪ್ರಯೋಗಿಸಲಾರಂಭಿಸಿದರು ರಕ್ತಮಾಂಸರೂಷಿತವಾಗಿ ಪ್ರಳಯಕಾಲಾಗ್ನಿಯಂತೆ ವಿಜೃಂಭಿಸುತ್ತಿದ್ದ ಶರಗಳನ್ನು ತೂರಿದರು (೬೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಆರನೆಯ ಸರ್ಗ



## ಸಪ್ತಮಃ ಸರ್ಗಃ

### ಮಾಲಿವಧಃ

ನಾರಾಯಣಗಿರಿಂ ತೇ ತು ಗರ್ಜಂತೋ ರಾಕ್ಷಸಾಂಬುದಾಃ ।
ಅವರ್ಷಂಶ್ಶರವರ್ಷೇಣ ವರ್ಷೇಣೇವಾದ್ರಿಮಂಬುದಾಃ ॥ ೧

ಶ್ಯಾಮಾವದಾತಸ್ತೈರ್ವಿಷ್ಣುರ್ನೀಲೈರ್ನಕ್ತಂಚರೋತ್ತಮೈಃ ।
ವೃತೋಽಂಜನಗಿರೀವಾಸೀದ್ವರ್ಷಮಾಣೈಃ ಪಯೋಧರೈಃ ॥ ೨

ಶಲಭಾ ಇವ ಕೇದಾರಂ ಮಶಕಾ ಇವ ಪಾವಕಮ್ ।
ಯಥಾಮೃತಘಟಂ ದಂಶಾ ಮಕರಾ ಇವ ಚಾರ್ಣವಮ್ ॥ ೩

ತಥಾ ರಕ್ಷೋಧನುರ್ಮುಕ್ತಾ ವಜ್ರಾನಿಲಮನೋಜವಾಃ ।
ಹರಿಂ ವಿಶಂತಿ ಸ್ಮ ಶರಾ ಲೋಕಾ ಇವ ವಿಪರ್ಯಯೇ ॥ ೪

## ಸರ್ಗ ೭

### ರಾಕ್ಷಸರೊಡನೆ ಮಹಾವಿಷ್ಣುವಿನ ಯುದ್ಧ ಮಾಲಿಯ ವಧೆ

ರಾಘವ, ಅನಂತರ ಮೋಡಗಳು ಮಳೆಸುರಿಸುತ್ತ ಬೆಟ್ಟವನ್ನು ಮುತ್ತುವಂತೆ, ಆ ರಾಕ್ಷಸಮೇಘಗಳು ಗರ್ಜಿಸುತ್ತ ಶರವೃಷ್ಟಿಯನ್ನು ಸುರಿಸುತ್ತ, ನಾರಾಯಣನೆಂಬ ಪರ್ವತವನ್ನು ಮುತ್ತಿದರು! (೧). ನೀಲವರ್ಣದ ನಕ್ತಂಚರರು ಸುತ್ತಲೂ ಮುತ್ತಲಾಗಿ, ಶ್ಯಾಮಲಾಂಗನೂ ಶುಭ್ರರೂಪನೂ ಆದ ಶ್ರೀಹರಿಯು ಮಳೆಗರೆಯುವ ಮೋಡಗಳಿಂದ ಮುಚ್ಚಲ್ಪಟ್ಟ ನೀಲಾಚಲದಂತೆ ಕಂಗೊಳಿಸಿದನು (೨) ರಾಕ್ಷಸರ ಧನುಸ್ಸುಗಳಿಂದ ಸಿಡಿಲಿನಂತೆ ಸಿಡಿದು ವಾಯುವೇಗ ಮನೋವೇಗಗಳಿಂದ ನೆಗೆಯುವ ನಾರಾಚಗಳು, ಹೊಲದತ್ತ ಮಿಡತೆಗಳು ನುಗ್ಗುವಂತೆ ಶ್ರೀಹರಿಯತ್ತ ನುಗ್ಗಿದವು. ಅಗ್ನಿಯತ್ತ ದೀಪದ ಹುಳುಗಳಂತೆ ಹಾಯ್ದುವು ಜೇನಿನ ಗಡಿಗೆಯನ್ನು ನೊಣಗಳು ಮುತ್ತುವಂತೆ ವಿಷ್ಣುವನ್ನು ಮುತ್ತಿದವು ಸಮುದ್ರಕ್ಕೆ ಮೊಸಳೆಗಳು ಸಾರುವಂತೆ ಅವನ ಬಳಿಗೆ ಸಾರಿದವು ಪ್ರಳಯಕಾಲದಲ್ಲಿ ಸಮಸ್ತ ಲೋಕಗಳೂ

ಸ್ಯಂದನೈಃ ಸ್ಯಂದನಗತಾ ಗಜೈಶ್ಚ ಗಜಪೃಷ್ಠಗಾಃ ।
ಅಶ್ವಾರೋಹಾಸ್ತಥಾಶ್ವೈಶ್ಚ ಪಾದಾತಾಶ್ಚಾಂಬರೇ ಸ್ಥಿತಾಃ ॥ ೫
ರಾಕ್ಷಸೇಂದ್ರಾ ಗಿರಿನಿಭಾಃ ಶರೈಃ ಶಕ್ತ್ಯೃಷ್ಟಿತೋಮರೈಃ ।
ನಿರುಚ್ಛ್ವಾಸಂ ಹರಿಂ ಚಕ್ರುಃ ಪ್ರಾಣಾಯಾಮಾ ಇವ ದ್ವಿಜಮ್ ॥

ನಿಶಾಚರೈಸ್ತಾಡ್ಯಮಾನೋ ಮೀನೈರಿವ ಮಹೋದಧಿಃ ।
ಶಾರ್ಙ್ಗಮಾಯಮ್ಯ ದುರ್ಧರ್ಷೋ ರಾಕ್ಷಸೇಭ್ಯೋಽಸೃಜಚ್ಛರಾನ್॥
ಶರೈಃ ಪೂರ್ಣಾಯತೋತ್ಸೃಷ್ಟೈರ್ವಜ್ರವಕ್ತ್ರೈರ್ಮನೋಜವೈಃ ।
ಚಿಚ್ಛೇದ ವಿಷ್ಣುರ್ನಿಶಿತೈಃ ಶತಶೋಽಥ ಸಹಸ್ರಶಃ ॥ ೮

ವಿದ್ರಾವ್ಯ ಶರವರ್ಷೇಣ ವರ್ಷಂ ವಾಯುರಿವೋತ್ಥಿತಮ್ ।
ಪಾಂಚಜನ್ಯಂ ಮಹಾಶಂಖಂ ಪ್ರದಧ್ಮೌ ಪುರುಷೋತ್ತಮಃ ॥ ೯

ಸೋಽಂಬುಜೋ ಹರಿಣಾ ಧ್ಮಾತಃ ಸರ್ವಪ್ರಾಣೇನ ಶಂಖರಾಟ್ ।
ರರಾಸ ಭೀಮನಿರ್ಹ್ರಾದಸ್ತ್ರೈಲೋಕ್ಯಂ ವ್ಯಥಯನ್ನಿವ ॥ ೧೦

ಕಣ್ಮರೆಯಾಗುವಂತೆ ಭಗವಂತನಲ್ಲಿ ಕಣ್ಮರೆಯಾದವು! (೩-೪) ರಥಗಳನ್ನೇರಿಯೂ ಗಜಗಳನ್ನು ಹತ್ತಿಯೂ ಅಶ್ವಗಳನ್ನಾರೋಹಿಸಿಯೂ ಅಂಬರವನ್ನಡರಿಯೂ ಯುದ್ಧದಲ್ಲಿ ತೊಡಗಿದ ಶೈಲಸಂಕಾಶರಾದ ರಾಕ್ಷಸೇಂದ್ರರು ವಿಷ್ಣುವಿಗೆ ಉಸಿರಾಡಲೂ ಎಡೆಯೀಯಲಿಲ್ಲ ಆತನು ಪ್ರಾಣಾಯಾಮದಲ್ಲಿ ತೊಡಗಿದ ಬ್ರಾಹ್ಮಣನಂತೆ ನಿರುಚ್ಛ್ವಾಸನಾದನು! (೫-೬) ಮಹಾಮೀನಗಳಿಂದ ತಾಡಿತವಾಗುವ ಮಹಾಸಾಗರದಂತೆ, ನಿಶಾಚರರ ಪ್ರಹಾರಕ್ಕೊಳಗಾದ ದುರ್ಧರ್ಷನಾದ ವಿಷ್ಣುವು ಶಾರ್ಙ್ಗಧನುಸ್ಸನ್ನೆಳೆದೆಳೆದು ಅವರ ಮೇಲೆ ಶರಗಳನ್ನು ತೂರುತ್ತಿದ್ದನು ಆಕರ್ಣಾಂತವಾಗಿ ನೆಳೆದು ಬಿಟ್ಟ ವಜ್ರಸಂಕಾಶ ನಿಶಿತಾಗ್ರವುಳ್ಳ ಬಾಣಗಳು ಮನೋವೇಗದಿಂದ ಧಾವಿಸುತ್ತಿರಲಾಗಿ, ಮಹಾವಿಷ್ಣುವು ಆ ಬಾಣಗಳಿಂದ ಸಾವಿರಾರು ರಾಕ್ಷಸರನ್ನು ಕಡಿದುರುಳಿಸಿದನು (೭-೮) ಬಿರುಗಾಳಿಯು ಜಡಿಮಳೆಯನ್ನು ತಡೆದು ಮೋಡಗಳನ್ನು ಚದರಿಸುವಂತೆ, ಮಹಾವಿಷ್ಣುವು ರಾಕ್ಷಸರ ಶರಜಾಲಗಳನ್ನು ಶರಜಾಲಗಳಿಂದಲೇ ಕಡಿದೊಟ್ಟಿ ರಾಕ್ಷಸರನ್ನು ಹೊಡೆದೋಡಿಸುತ್ತ, ಪಾಂಚಜನ್ಯವೆಂಬ ತನ್ನ ಮಹಾಶಂಖವನ್ನು ಮೊಳಗಿಸುತ್ತಿದ್ದನು (೯) ಶ್ರೀಹರಿಯು ಸರ್ವಶಕ್ತಿಯನ್ನೂ

ಶಂಖರಾಜರವಃ ಸೋಽಥ ತ್ರಾಸಯಾಮಾಸ ರಾಕ್ಷಸಾನ್ ।
ಮೃಗರಾಜ ಇವಾರಣ್ಯೇ ಸಮದಾನಿವ ಕುಂಜರಾನ್ ॥ ೧೧

ನ ಶೇಕುರಶ್ವಾಃ ಸಂಸ್ಥಾತುಂ ವಿಮದಾಃ ಕುಂಜರಾ ಭವನ್ ।
ಸ್ಯಂದನೇಭ್ಯಶ್ಚ್ಯುತಾ ವೀರಾಃ ಶಂಖರಾವಿತದುರ್ಬಲಾಃ ॥ ೧೨

ಶಾರ್ಙ್ಗಚಾಪವಿನಿರ್ಮುಕ್ತಾ ವಜ್ರತುಲ್ಯಾನನಾಃ ಶರಾಃ ।
ವಿದಾರ್ಯ ತಾನಿ ರಕ್ಷಾಂಸಿ ಸುಪುಂಖಾ ವಿವಿಶುಃ ಕ್ಷಿತಿಮ್ ॥ ೧೩

ಭಿದ್ಯಮಾನಾಃ ಶರೈಃ ಸಂಖ್ಯೇ ನಾರಾಯಣಕರಚ್ಯುತೈಃ ।
ನಿಪೇತೂ ರಾಕ್ಷಸಾ ಭೂಮೌ ಶೈಲಾ ವಜ್ರಹತಾ ಇವ ॥ ೧೪

ವ್ರಣಾನಿ ಪರಗಾತ್ರೇಭ್ಯೋ ವಿಷ್ಣುಚಕ್ರಕೃತಾನಿ ವೈ ।
ಅಸೃಕ್ ಕ್ಷರಂತಿ ಧಾರಾಭಿಃ ಸ್ವರ್ಣಧಾರಾ ಇವಾಚಲಾಃ ॥ ೧೫

ಶಂಖರಾಜರವಶ್ಚಾಪಿ ಶಾರ್ಙ್ಗಚಾಪರವಸ್ತಥಾ ।
ರಾಕ್ಷಸಾನಾಂ ರವಾಂಶ್ಚಾಪಿ ಗ್ರಸತೇ ವೈಷ್ಣವೋ ರವಃ ॥ ೧೬

---

ವಿನಿಯೋಗಿಸಿ ಪಾಂಚಜನ್ಯವನ್ನೂದುತ್ತಿರಲು, ಆ ಶಂಖವು ಭೀಮನಾದದಿಂದ ಭೋರ್ಗರೆಯುತ್ತ ಮೂರುಲೋಕಗಳನ್ನೂ ತಲ್ಲಣಗೊಳಿಸುತ್ತ ಮೊಳಗಿತು ಅಡವಿಯಲ್ಲಿ ಮೃಗರಾಜನಾದ ಕಂಠೀರವನು ಮತ್ತಮಾತಂಗಗಳನ್ನು ಕಂಗೆಡಿಸುವಂತೆ, ಪಾಂಚಜನ್ಯವು ರಾಕ್ಷಸರನ್ನು ತತ್ತರಗೊಳಿಸುತ್ತ ಬೊಬ್ಬಿರಿಯಿತು (೧೦-೧೧) ಪಾಂಚಜನ್ಯದ ಬೊಬ್ಬಿರಿತಕ್ಕೆ ದಿಗ್ಭ್ರಮೆಗೊಂಡ ಕುದುರೆಗಳು ನಿಲ್ಲಲಾರದೆ ತತ್ತರಿಸಿದವು ಆನೆಗಳ ಮದವಿಳಿಯಿತು ಅತಿರಥರು ರಥಗಳಿಂದ ಉರುಳಿಬಿದ್ದರು ವಿಷ್ಣುವಿನ ಶಾರ್ಙ್ಗಚಾಪದಿಂದ ಸಿಡಿಯುತ್ತಿದ್ದ ಸಿಡಿಲಿನಂತಹ ಪುಂಖಾಂಕಿತ ಶರಗಳು ರಾಕ್ಷಸರ ದೇಹಗಳನ್ನು ಕೊರೆದು ತೂರಿ ನೆಲದಲ್ಲಿ ನುಗ್ಗಿದವು! (೧೨-೧೩) ನಾರಾಯಣನ ಶರನಿಕರಗಳಿಂದ ತರಿಯಲ್ಪಟ್ಟ ರಾಕ್ಷಸರು, ವಜ್ರನಿರ್ಭಿನ್ನ ಪರ್ವತಗಳಂತೆ ಧರೆಗುರುಳಿದರು ವಿಷ್ಣುಚಕ್ರದಿಂದ ಶತ್ರುಗಾತ್ರಗಳಲ್ಲಾದ ಗಾಯಗಳಿಂದ, ಬೆಟ್ಟಗಳಿಂದ ಹರಿಯುವ ಗೈರಿಕಸಂಮಿಶ್ರವಾದ ಕೆಂಪು ಬಣ್ಣದ* ಜಲರಾಶಿಯಂತೆ, ನೆತ್ತರು ಧಾರೆ ಧಾರೆಯಾಗಿ ನೋರಿತು (೧೪-೧೫) ವಿಷ್ಣುವು ಮೊಳಗಿಸುತ್ತಿದ್ದ ಪಾಂಚಜನ್ಯದ ಘೋಷವೂ ಮಿಡಿಯುತ್ತಿದ್ದ ಶಾರ್ಙ್ಗ

* ಸ್ವರ್ಣ = ಕೆಂಪು ಬಣ್ಣದ ಒಂದು ಬಗೆಯ ಕಲ್ಲು.

ತೇಷಾಂ ಶಿರೋಧರಾನ್ ಧೂತಾನ್ ಶರಧ್ವಜಧನೂಂಷಿ ಚ ।
ರಥಾನ್ ಪತಾಕಾಸ್ತೂಣೀರಾಂಶ್ಚಿಚ್ಛೇದ ಸ ಹರಿಃ ಶರೈಃ ॥ ೧೭
ಸೂರ್ಯಾದಿವ ಕರಾ ಘೋರಾ ಊರ್ಮಯಃ ಸಾಗರಾದಿವ ।
ಪರ್ವತಾದಿವ ನಾಗೇಂದ್ರಾ ಧಾರೌಘಾ ಇವ ಚಾಂಬುದಾತ್ ॥ ೧೮
ತಥಾ ಶಾರ್ಙ್ಗವಿನಿರ್ಮುಕ್ತಾಃ ಶರಾ ನಾರಾಯಣೇರಿತಾಃ ।
ನಿರ್ಧಾವಂತೀಷವಸ್ತೂರ್ಣಂ ಶತಶೋಽಥ ಸಹಸ್ರಶಃ ॥ ೧೯
ಶರಭೇಣ ಯಥಾ ಸಿಂಹಾಃ ಸಿಂಹೇನ ದ್ವಿರದಾ ಯಥಾ ।
ದ್ವಿರದೇನ ಯಥಾ ವ್ಯಾಘ್ರಾ ವ್ಯಾಘ್ರೇಣ ದ್ವೀಪಿನೋ ಯಥಾ ॥
ದ್ವೀಪಿನೇವ ಯಥಾ ಶ್ವಾನಃ ಶುನಾ ಮಾರ್ಜಾರಕಾ ಯಥಾ ।
ಮಾರ್ಜಾರೇಣ ಯಥಾ ಸರ್ಪಾಃ ಸರ್ಪೇಣ ಚ ಯಥಾಖವಃ ॥ ೨೦
ತಥಾ ತೇ ರಾಕ್ಷಸಾಃ ಸರ್ವೇ ವಿಷ್ಣುನಾ ಪ್ರಭವಿಷ್ಣುನಾ ।
ದ್ರವಂತಿ ದ್ರಾವಿತಾಶ್ಚಾನ್ಯೇ ಶಾಯಿತಾಶ್ಚ ಮಹೀತಲೇ ॥ ೨೧

---

ಧನುಸ್ಸಿನ ಝಂಕಾರವೂ ರಾಕ್ಷಸರ ಕೋಲಾಹಲವನ್ನು ಅಡಗಿಸಿದವು ಶ್ರೀಹರಿಯು ತನ್ನ ಅಸ್ತ್ರಗಳಿಂದ ಆ ರಾಕ್ಷಸಯೋಧರ ಕೊರಳನ್ನು ತರಿದು ಹಾರಿಸಿ, ಬಾಣಗಳನ್ನು ಕತ್ತರಿಸಿ, ಧ್ವಜಸ್ತಂಭಗಳನ್ನು ಭೇದಿಸಿ, ಬಿಲ್ಲುಗಳನ್ನು ಛೇದಿಸಿ, ರಥಗಳನ್ನು ಪುಡಿಗೈಯ್ದು, ಬಾವುಟಗಳನ್ನು ವಿಧ್ವಂಸಗೊಳಿಸಿ, ಬತ್ತಳಿಕೆಗಳನ್ನು ತುಂಡರಿಸಿದನು (೧೬-೧೭) ಸೂರ್ಯನಿಂದ ಖರಕಿರಣಗಳೂ ಸಮುದ್ರದಿಂದ ಉತ್ತುಂಗ ತರಂಗಮಾಲೆಗಳೂ ಪರ್ವತಗಳಿಂದ ಮಹಾಸರ್ಪಗಳೂ ಕಾಲಮೇಘದಿಂದ ಜಲಧಾರೆಗಳೂ ಹೊರಹೊಮ್ಮುವಂತೆ, ಶ್ರೀಮನ್ನಾರಾಯಣನ ಶಾರ್ಙ್ಗಧನುಸ್ಸಿನಿಂದ ನಿಶಿತಾಸ್ತ್ರ ಪರಂಪರೆಗಳು ನೂರುಮುಖವಾಗಿ-ಸಾವಿರಮುಖವಾಗಿ ಸಿಡಿದೆರಗುತ್ತಿದ್ದವು (೧೮-೧೯) ಮಹಾಮಹಿಮನಾದ ಮಹಾವಿಷ್ಣುವಿನೆದುರಿಗೆ ನಿಲ್ಲಲಾರದೆ ಸಮಸ್ತ ರಾಕ್ಷಸರೂ ಕಿತ್ತೆದ್ದು ಓಡಲಾರಂಭಿಸಿದರು ಶರಭದೆದುರಿಗೆ ಸಿಂಹಗಳಂತೆಯೂ ಸಿಂಹದೆದುರಿಗೆ ಹುಲಿಗಳಂತೆಯೂ ಹುಲಿಯೆದುರಿಗೆ ಕಿರುಬಗಳಂತೆಯೂ ಕಿರುಬದೆದುರಿಗೆ ನಾಯಿಗಳಂತೆಯೂ ನಾಯಿಯೆದುರಿಗೆ ಬೆಕ್ಕುಗಳಂತೆಯೂ ಬೆಕ್ಕಿನೆದುರಿಗೆ ಹಾವುಗಳಂತೆಯೂ ಹಾವಿನೆದುರಿಗೆ ಇಲಿ

ರಾಕ್ಷಸಾನಾಂ ಸಹಸ್ರಾಣಿ ನಿಹತ್ಯ ಮಧುಸೂದನಃ ।
ವಾರಿಜಂ ಪೂರಯಾಮಾಸ ತೋಯದಂ ಸುರರಾಡಿವ ॥ ೨೩

ನಾರಾಯಣಶರತ್ರಸ್ತಂ ಶಂಖನಾದಸುವಿಹ್ವಲಮ್ ।
ಯಯೌ ಲಂಕಾಮಭಿಮುಖಂ ಪ್ರಭಗ್ನಂ ರಾಕ್ಷಸಂ ಬಲಮ್ ॥ ೨೪

ಪ್ರಭಗ್ನೇ ರಾಕ್ಷಸಬಲೇ ನಾರಾಯಣಶರಾಹತೇ ।
ಸುಮಾಲೀ ಶರವರ್ಷೇಣ ನಿವವಾರ ರಣೇ ಹರಿಮ್ ॥ ೨೫

ಸ ತು ತಂ ಛಾದಯಾಮಾಸ ನೀಹಾರ ಇವ ಭಾಸ್ಕರಮ್ ।
ರಾಕ್ಷಸಾಃ ಸತ್ತ್ವಸಂಪನ್ನಾಃ ಪುನರ್ಧೈರ್ಯಂ ಸಮಾದಧುಃ ॥ ೨೬

ಅಥ ಸೋಽಭ್ಯಪತದ್ರೋಷಾದ್ರಾಕ್ಷಸೋ ಬಲದರ್ಪಿತಃ ।
ಮಹಾನಾದಂ ಪ್ರಕುರ್ವಾಣೋ ರಾಕ್ಷಸಾನ್ ಜೀವಯನ್ನಿವ ॥ ೨೭

ಉತ್ಕ್ಷಿಪ್ಯ ಲಂಬಾಭರಣಂ ಧುನ್ವನ್ ಕರಮಿವ ದ್ವಿಪಃ ।
ರರಾಸ ರಾಕ್ಷಸೋ ಹರ್ಷಾತ್ ಸತಡಿತ್ತೋಯದೋ ಯಥಾ ॥ ೨೮

---

ಗಳಂತೆಯೂ ನಿಲ್ಲಲಾರದೆ ರಾಕ್ಷಸಭಟರು ಪಲಾಯನ ಮಾಡಿದರು. ಕೆಲವರು ಹತರಾಗಿ ನೆಲವನ್ನಪ್ಪಿದರು (೨೦-೨೨) ಸಾವಿರಾರು ರಾಕ್ಷಸರನ್ನು ವಿಧ್ವಂಸಗೊಳಿಸಿ, ದೇವೇಂದ್ರನು ಮೇಘವನ್ನು ಗುಡುಗಿಸುವಂತೆ ಮಧುಸೂದನನು ಪಾಂಚಜನ್ಯವನ್ನು ಮೊಳಗಿಸಿದನು ರಾಕ್ಷಸಪಡೆಯು ನಾರಾಯಣನ ಶರಘಾತಕ್ಕೆ ಅಂಜಿ, ಶಂಖನಾದದ ಅಬ್ಬರಕ್ಕೆ ಕಂಗೆಟ್ಟು ಚಲ್ಲಾಪಿಲ್ಲಿಯಾಗಿ ಲಂಕೆಗೆ ಓಡಿತು (೨೩-೨೪) ಹೀಗೆ ರಾಕ್ಷಸ ಸೇನೆಯು ಚದರಲು, ಸುಮಾಲಿಯು ಶರವೃಷ್ಟಿಯನ್ನು ಸುರಿಸುತ್ತ ಶ್ರೀಹರಿಯನ್ನು ಅಡ್ಡಗಟ್ಟಿದನು ಹಿಮರಾಶಿಯು ಭಾಸ್ಕರನನ್ನು ಮುತ್ತುವಂತೆ ಮುತ್ತಿದನು ಶೂರರಾದ ಕೆಲವು ರಾಕ್ಷಸರಿಗೆ ಮತ್ತೆ ಧೈರ್ಯ ಉಂಟಾಯಿತು (೨೫-೨೬) ಬಲದರ್ಪಿತನಾದ ಸುಮಾಲಿಯು ಅಬ್ಬರಿಸುತ್ತ, ರಾಕ್ಷಸರನ್ನು ಹುರಿದುಂಬಿಸುತ್ತ, ದೊಡ್ಡ ಸುವರ್ಣಾಭರಣವನ್ನು ತೊಟ್ಟಿದ್ದ ತೋಳನ್ನು ಆನೆಯು ಸೊಂಡಿಲನ್ನು ಮೇಲೆತ್ತುವಂತೆ ಎತ್ತಿ, ವಿದ್ಯುದ್ವಿರಾಜಿತ ಮೇಘರಾಜಿಯಂತೆ ರಣೋತ್ಸಾಹ

ಸುಮಾಲೇರ್ನರ್ದತಸ್ತಸ್ಯ ಶಿರೋ ಜ್ವಲಿತಕುಂಡಲವತ್ ।
ಚಿಚ್ಛೇದ ಯಂತುರಶ್ವಾಶ್ಚ ಭ್ರಾಂತಾಸ್ತಸ್ಯ ತು ರಕ್ಷಸಃ ॥ ೨೯
ತೈರಶ್ವೈರ್ಭ್ರಾಮ್ಯತೇ ಭ್ರಾಂತೈಃ ಸುಮಾಲೀ ರಾಕ್ಷಸೇಶ್ವರಃ ।
ಇಂದ್ರಿಯಾಶ್ವೈಃ ಪರಿಭ್ರಾಂತೈರ್ಧೃತಿಹೀನೋ ಯಥಾ ನರಃ ॥ ೩೦
ತತೋ ವಿಷ್ಣುಂ ಮಹಾಬಾಹುಂ ಪ್ರಾಪತಂತಂ ರಣಾಜಿರೇ ।
ಹೃತೇ ಸುಮಾಲೇರಶ್ವೈಶ್ಚ ರಥೇ ವಿಷ್ಣುರಥಂ ಪ್ರತಿ ॥ ೩೧
ಮಾಲೀ ಚಾಭ್ಯದ್ರವದ್ಯುಕ್ತಃ ಪ್ರಗೃಹ್ಯ ಸಶರಂ ಧನುಃ ।
ಮಾಲೇರ್ಧನುಶ್ಚ್ಯುತಾ ಬಾಣಾಃ ಕಾರ್ತಸ್ವರವಿಭೂಷಿತಾಃ ॥ ೩೨
ವಿವಿಶುರ್ಹರಿಮಾಸಾದ್ಯ ಕ್ರೌಂಚಂ ಪತ್ರರಥಾ ಇವ ।
ಅರ್ದ್ಯಮಾನಃ ಶರೈಃ ಸೋಽಥ ಮಾಲಿಮುಕ್ತೈಃ ಸಹಸ್ರಶಃ ॥ ೩೩
ಚುಕ್ಷುಭೇ ನ ರಣೇ ವಿಷ್ಣುರ್ಜಿತೇಂದ್ರಿಯ ಇವಾಧಿಭಿಃ ।
ಅಥ ಮೌರ್ವೀಸ್ವನಂ ಶ್ರುತ್ವಾ ಭಗವಾನ್ ಭೂತಭಾವನಃ ॥ ೩೪

---

ದಿಂದ ಬೊಬ್ಬಿರಿದನು (೨೭–೨೮). ಅಷ್ಟರಲ್ಲಿ ವಿಷ್ಣುವು ಸುಮಾಲಿಯ ಸಾರಥಿಯ ಶಿರಸ್ಸನ್ನು ತರಿದನು ಆಗ ರಥಾಶ್ವಗಳು ದಿಕ್ಕುಗೆಟ್ಟು ಅತ್ತಿತ್ತ ಜಗ್ಗಾಡಿ ಎಳೆದಾಡಲು, ರಥದಲ್ಲಿ ಕುಳಿತಿದ್ದ ರಾಕ್ಷಸೇಶ್ವರನಾದ ಸುಮಾಲಿಯು, ಚಂಚಲೇಂದ್ರಿಯಗಳ ಎಳೆದಾಟಕ್ಕೆ ಸಿಕ್ಕಿ ಮನಃಸ್ಥೈರ್ಯವಿಲ್ಲದ ಮನುಷ್ಯನಂತೆ ಗೋಚರಿಸಿದನು! (೨೯-೩೦) ಹೀಗೆ ಸುಮಾಲಿಯ ರಥವನ್ನು ಅಶ್ವಗಳು ಎತ್ತಲೋ ಎಳೆದೊಯ್ಯುತ್ತಿರಲು, ಮಾಲಿಯು ಶರಸಂಹಿತವಾದ ಚಾಪವನ್ನು ಹಿಡಿದು ಮಹಾಬಾಹುವಾದ ವಿಷ್ಣುವಿನ ಕಡೆಗೆ ನುಗ್ಗಿದನು ಅನಂತರ ಮಾಲಿಯ ಬಿಲ್ಲಿನಿಂದ ಚಿಮ್ಮುವ ಸುವರ್ಣಭೂಷಿತ ನಾರಾಚಗಳು ನಾರಾಯಣನ ದೇಹದಲ್ಲಿ, ಕ್ರೌಂಚಪರ್ವತದಲ್ಲಿ ಪಕ್ಷಿಗಳು ನುಗ್ಗುವಂತೆ ನುಗ್ಗಿದವು (೩೧-೩೨) ಈ ರೀತಿಯಲ್ಲಿ ಮಾಲಿಯು ಬಿಡುತ್ತಿದ್ದ ವಿವಿಧ ಶರಗಳ ಘಾತಕ್ಕೆ ಒಳಗಾದರೂ ವಿಷ್ಣುವು ಕಂಗೆಡಲಿಲ್ಲ ನಾನಾಬಗೆಯ ಮಾನಸ ಚಿಂತೆಗಳಿದ್ದರೂ ಜಿತೇಂದ್ರಿಯನು ಧೃತಿಗೆಡುವುದಿಲ್ಲವಷ್ಟೆ? ಮಾಲಿಯ ಧನುಷ್ಟಂಕಾರವನ್ನು ಕೇಳಿ ಜಗನ್ನಿಯಾಮಕನಾದ ಆ ಭಗವಂತನು ಮಾಲಿಯ ಮೇಲೆ ಬಾಣಗಳ ಮಳೆಗರೆದನು (೩೩-೩೪).

ಮಾಲಿನಂ ಪ್ರತಿ ಬಾಣೌಘಾನ್ ಸಸರ್ಜಾರಿನಿಷೂದನಃ ।
ತೇ ಮಾಲಿದೇಹಮಾಸಾದ್ಯ ವಜ್ರವಿದ್ಯುತ್ಪ್ರಭಾಃ ಶರಾಃ ॥ ೩೫
ಪಿಬಂತಿ ರುಧಿರಂ ತಸ್ಯ ನಾಗಾ ಇವ ಸುಧಾರಸಮ್ ।
ಮಾಲಿನಂ ವಿಮುಖಂ ಕೃತ್ವಾ ಶಂಖಚಕ್ರಗದಾಧರಃ ॥ ೩೬
ಮಾಲಿಮೌಲಿಂ ಧ್ವಜಂ ಚಾಪಂ ವಾಜಿನಶ್ಚಾಪ್ಯಪಾತಯತ್ ।
ವಿರಥಸ್ತು ಗದಾಂ ಗೃಹ್ಯ ಮಾಲೀ ನಕ್ತಂಚರೋತ್ತಮಃ ॥ ೩೭
ಆಪುಪ್ಲುವೇ ಗದಾಪಾಣಿರ್ಗಿರ್ಯಗ್ರಾದಿವ ಕೇಸರೀ ।
ಗದಯಾ ಗರುಡೇಶಾನಮೀಶಾನಮಿವ ಚಾಂತಕಃ ॥ ೩೮
ಲಲಾಟದೇಶೇಽಭ್ಯಹನದ್ವಜ್ರೇಣೇಂದ್ರೋ ಯಥಾಚಲಮ್ ।
ಗದಯಾಭಿಹತಸ್ತೇನ ಮಾಲಿನಾ ಗರುಡೋ ಭೃಶಮ್ ॥ ೩೯
ರಣಾತ್ ಪರಾಙ್ಮುಖಂ ದೇವಂ ಕೃತವಾನ್ ವೇದನಾತುರಃ ।
ಪರಾಙ್ಮುಖೇ ಕೃತೇ ದೇವೇ ಮಾಲಿನಾ ಗರುಡೇನ ವೈ ॥ ೪೦

---

ಮಿಂಚಿನಂತೆ ಮಿಂಚುತ್ತ ಸಿಡಿಲಿನಂತೆ ಸಿಡಿದೆರಗಿದ ಆ ಬಾಣಗಳು ಮಾಲಿಯ ದೇಹವನ್ನು ಕೊರೆದು, ಗರುಡಾನೀತವಾದ ಅಮೃತವನ್ನು ಸರ್ಪಗಳು ಹೀರುವಂತೆ, ಆತನ ರಕ್ತವನ್ನು ಕುಡಿಯತೊಡಗಿದವು ಚಕ್ರಪಾಣಿಯು ಮಾಲಿಯ ರಭಸವನ್ನು ತಗ್ಗಿಸಿ, ಮಾಲಿಯ ಕಿರೀಟವನ್ನು ಕತ್ತರಿಸಿ, ಧ್ವಜ ಚಾಪಗಳನ್ನು ಧ್ವಂಸಮಾಡಿ, ಕುದುರೆಗಳನ್ನು ಹೊಡೆದುರುಳಿಸಿದನು ರಥ ಹೀನನಾದ ಮಾಲಿಯು ಗದೆಯನ್ನು ತುಡುಕಿದನು (೩೫-೩೭) ಆ ರಾಕ್ಷಸ ವೀರನು ಗದಾಪಾಣಿಯಾಗಿ, ಗಿರಿಶಿಖರದಿಂದ ಸಿಂಹವು ಧುಮುಕುವಂತೆ ರಥದಿಂದ ಧುಮುಕಿ, ಪಕ್ಷಿರಾಜನಾದ ಗರುಡನನ್ನಪ್ಪಳಿಸಿದನು ಯಮನು ರುದ್ರನನ್ನು* ಯಮದಂಡದಿಂದ ಬಡಿದಂತೆಯೂ, ಇಂದ್ರನು ವಜ್ರಾಯುಧ ದಿಂದ ಪರ್ವತವನ್ನು ಅಪ್ಪಳಿಸಿದಂತೆಯೂ ಆತನು ಗರುಡನ ಹಣೆಯ ಮೇಲೆ ಗದೆಯಿಂದ ಹೊಡೆಯಲು, ನೋವಿನಿಂದ ನಿರ್ವಿಣ್ಣನಾದ ಗರುಡನು ಹಿಮ್ಮೆಟ್ಟಿ ಪರಾಙ್ಮುಖನಾದನು (೩೮-೩೯) ಅದರಿಂದ ಗರುಡಾರೂಢನಾದ

---

* ಮಾರ್ಕಂಡೆಯನನ್ನು ಶಿವನು ರಕ್ಷಿಸಲು ಉದ್ಯುಕ್ತನಾದಾಗ ಯಮನು ದಂಡದಿಂದ ಶಿವನನ್ನು ಹೊಡೆದನೆಂದು ಪುರಾಣದಲ್ಲಿ ಕಥೆಯಿದೆ

ಉದತಿಷ್ಠನ್ಮಹಾನ್ ಶಬ್ದೋ ರಕ್ಷಸಾಮಭಿನರ್ದತಾಮ್ ।
ರಕ್ಷಸಾಂ ರವತಾಂ ರಾವಂ ಶ್ರುತ್ವಾ ಹರಿಹಯಾನುಜಃ ॥ ೪೧

ತಿರ್ಯಗಾಸ್ಥಾಯ ಸಂಕ್ರುದ್ಧಃ ಪಕ್ಷೀಶೇ ಭಗವಾನ್ ಹರಿಃ ।
ಪರಾಙ್ಮುಖೋಽಪ್ಯುತ್ಸಸರ್ಜ ಮಾಲೇಶ್ಚಕ್ರಂ ಜಿಘಾಂಸಯಾ ॥ ೪೨

ತತ್ ಸೂರ್ಯಮಂಡಲಾಭಾಸಂ ಸ್ವಭಾಸಾ ಭಾಸಯನ್ನಭಃ ।
ಕಾಲಚಕ್ರನಿಭಂ ಚಕ್ರಂ ಮಾಲೇಃ ಶೀರ್ಷಮಪಾತಯತ್ ॥ ೪೩

ತಚ್ಛಿರೋ ರಾಕ್ಷಸೇಂದ್ರಸ್ಯ ಚಕ್ರಕೃತ್ತಂ ವಿಭೀಷಣಮ್ ।
ಪಪಾತ ರುಧಿರೋದ್ಗಾರಿ ಪುರಾ ರಾಹುಶಿರೋ ಯಥಾ ॥ ೪೪

ತತಃ ಸುರೈಃ ಸುಸಂಹೃಷ್ಟೈಃ ಸರ್ವಪ್ರಾಣಸಮೀರಿತಃ ।
ಸಿಂಹನಾದರವೋ ಮುಕ್ತಃ ಸಾಧು ದೇವೇತಿ ವಾದಿಭಿಃ ॥ ೪೫

ಮಾಲಿನಂ ನಿಹತಂ ದೃಷ್ಟ್ವಾ ಸುಮಾಲೀ ಮಾಲ್ಯವಾನಪಿ ।
ಸಬಲೌ ಶೋಕಸಂತಪ್ತೌ ಲಂಕಾಮೇವ ಪ್ರಧಾವಿತೌ ॥ ೪೬

---

ದೇವದೇವನೂ ಪರಾಙ್ಮುಖನಾಗಲು, ರಾಕ್ಷಸರು ಹರ್ಷದಿಂದ ಕೋಲಾಹಲ ಮಾಡಿದರು ಆಗ ಇಂದ್ರಾನುಜನಾದ ವಿಷ್ಣುವು ರಾಕ್ಷಸಕೋಲಾಹಲವನ್ನು ಕೇಳಿ ಸಂಕ್ರುದ್ಧನಾಗಿ, ಗರುಡನು ಹಿಮ್ಮೆಟ್ಟಿದರೂ ತಾನು ತಿರುಗಿ ಕುಳಿತು, ಮಾಲಿಯನ್ನು ಕೊಲ್ಲಬೇಕೆಂದು ಚಕ್ರಾಯುಧವನ್ನು ಪ್ರಯೋಗಿಸಿದನು (೪೦-೪೨) ಸೂರ್ಯಮಂಡಲದಂತೆ ಪ್ರಜ್ವಲಿಸುತ್ತ ಕಾಲಚಕ್ರದಂತೆ ಕಾಣಿಸಿದ ಆ ಸುದರ್ಶನಚಕ್ರವು, ಗಗನವನ್ನು ಬೆಳಗಿಸುತ್ತ ಭರ್ರೆಂದು ಬಂದು, ಮಾಲಿಯ ತಲೆಯನ್ನು ತರಿದುರುಳಿಸಿತು ಚಕ್ರನಿರ್ಭಿನ್ನವಾದ ರಾಕ್ಷಸೇಂದ್ರನ ಕರಾಳವಾದ ಶಿರಸ್ಸು ರಕ್ತವನ್ನು ಸುರಿಸುತ್ತ, ರಾಹುವಿನ ಶಿರಸ್ಸಿನಂತೆ ಕೆಳಗುರುಳಿತು (೪೩-೪೪) ಶ್ರೀರಾಮ, ದೇವತೆಗಳು ಆನಂದತುಂದಿಲರಾಗಿ ಸಿಂಹನಾದಗೈಯುತ್ತ "ಸ್ವಾಮಿ-ಶ್ರೀಮನ್ನಾರಾಯಣ, ಸಾಧು! ಸಾಧು!" ಎಂದು ಹೊಗಳಿದರು ಮಾಲಿಯು ಹತನಾದುದನ್ನು ಕಂಡು ಸುಮಾಲಿಯೂ ಮಾಲ್ಯವಂತನೂ ಶೋಕಸಂತಪ್ತರಾಗಿ ರಾಕ್ಷಸಪಡೆಯೊಡನೆ ಲಂಕೆಗೆ ಓಡಿ

ಗರುಡಸ್ತು ಸಮಾಶ್ವಸ್ತಃ ಸಂನಿವೃತ್ಯ ಯಥಾ ಪುರಾ ।
ರಾಕ್ಷಸಾನ್ ದ್ರಾವಯಾಮಾಸ ಪಕ್ಷವಾತೇನ ಕೋಪಿತಃ ॥ ೪೭
ಚಕ್ರಕೃತ್ತಾಸ್ಯಕಮಲಾ ಗದಾಸಂಚೂರ್ಣಿತೋರಸಃ ।
ಲಾಂಗಲಗ್ಲಪಿತಗ್ರೀವಾ ಮುಸಲೈರ್ಭಿನ್ನಮಸ್ತಕಾಃ ॥ ೪೮
ಕೇಚಿಚ್ಚೈವಾಸಿನಾ ಛಿನ್ನಾಸ್ತಥಾನ್ಯೇ ಶರಪೀಡಿತಾಃ ।
ನಿಪೇತುರಂಬರಾತ್ತೂರ್ಣಂ ರಾಕ್ಷಸಾಃ ಸಾಗರಾಂಭಸಿ ॥ ೪೯

ನಾರಾಯಣೋ ಬಾಣವರಾಶನೀಭಿ-
ರ್ವಿದಾರಯಾಮಾಸ ಧನುರ್ವಿಮುಕ್ತೈಃ ।
ನಕ್ತಂಚರಾನ್ ಮುಕ್ತವಿಧೂತಕೇಶಾನ್
ಯಥಾಶನೀಭಿಃ ಸತಡಿನ್ಮಹಾಭ್ರಃ ॥ ೫೦
ಭಿನ್ನಾತಪತ್ರಂ ಪತಮಾನಶಸ್ತ್ರಂ
ಶರೈರಪಧ್ವಸ್ತವಿನೀತವೇಷಮ್ ।
ವಿನಿಃಸೃತಾಂತ್ರಂ ಭಯಲೋಲನೇತ್ರಂ
ಬಲಂ ತದುನ್ಮತ್ತತರಂ ಬಭೂವ ॥ ೫೧

---

ಹೋದರು (೪೫-೪೬) ಇತ್ತ ಗರುಡನು ಸುಧಾರಿಸಿಕೊಂಡು ಮತ್ತೆ ರಣರಂಗಕ್ಕೆ ಹಿಂದಿರುಗಿ ಕ್ರುದ್ಧನಾಗಿ, ರೆಕ್ಕೆಗಳಿಂದ ಝಂಝಾವಾತವನ್ನೆಬ್ಬಿಸಿ ರಾಕ್ಷಸರನ್ನು ಓಡಿಸಿದನು ಕೆಲವು ರಾಕ್ಷಸಭಟರ ತಲೆಗಳು ಚಕ್ರದಿಂದ ಕತ್ತರಿಸಲ್ಪಟ್ಟವು ಕೆಲವರ ಎದೆಗಳು ಗದೆಯ ಬಡಿತದಿಂದೊಡೆದವು ಕೆಲವರ ಕತ್ತುಗಳು ಲಾಂಗಲಾಯುಧದಿಂದ ಕತ್ತರಿಸಲ್ಪಟ್ಟವು ಕೆಲವರ ಮಸ್ತಕಗಳು ಮುಸಲಗಳಿಂದ ಜರ್ಝರಿತವಾದವು ಕೆಲವರು ಕತ್ತಿಯಿಂದ ಸೀಳಲ್ಪಟ್ಟರು ಕೆಲವರು ಶರಗಳಿಂದ ತರಿಯಲ್ಪಟ್ಟರು ಹೀಗೆ ರಾಕ್ಷಸರೆಲ್ಲರೂ ಹತರಾಗಿ ಸಮುದ್ರಜಲದಲ್ಲಿ ಬಿದ್ದುಹೋದರು (೪೭-೪೯). ಶ್ರೀಮನ್ನಾರಾಯಣನು ಶಾರ್ಙ್ಗಧನುಸ್ಸನ್ನು ಹಿಡಿದು ಮಿಂಚಿನಂತಿರುವ ಶರವರಗಳನ್ನು ಹೊಡೆಯುತ್ತ, ವಿದ್ಯುದ್ವಿರಾಜಿತ ಮಹಾಮೇಘದಂತೆ ಕಂಗೊಳಿಸುತ್ತಿದ್ದನು ಅವನ ಶರಘಾತದಿಂದ ನಿಶಾಚರರು ವಿಕೀರ್ಣಕೇಶರೂ ವಿದೀರ್ಣದೇಹರೂ ಆಗಿ ಉರುಳುತ್ತಿದ್ದರು (೫೦) ರಾಘವ, (ಏನು ಹೇಳಲಿ?) ರಾಕ್ಷಸಯೋಧರು ಹಿಡಿದಿದ್ದ ಕೊಡೆಗಳು ಪುಡಿಯಾದವು

ಸಿಂಹಾರ್ದಿತಾನಾಮಿವ ಕುಂಜರಾಣಾಂ
　　ನಿಶಾಚರಾಣಾಂ ಸಹಕುಂಜರಾಣಾಮ್ ।
ರವಾಶ್ಚ ವೇಗಾಶ್ಚ ಸಮಂ ಬಭೂವುಃ
　　ಪುರಾಣಸಿಂಹೇನ ವಿಮರ್ದಿತಾನಾಮ್ ॥　　೫೨

ತೇ ಮಾರ್ಯಮಾಣಾ ಹರಿಬಾಣಜಾಲೈಃ
　　ಸ್ವಬಾಣಜಾಲಾನಿ ಸಮುತ್ಸೃಜಂತಃ ।
ಧಾವಂತಿ ನಕ್ತಂಚರಕಾಲಮೇಘಾ
　　ವಾಯುಪ್ರಭಿನ್ನಾ ಇವ ಕಾಲಮೇಘಾಃ ॥　　೫೩

ಚಕ್ರಪ್ರಹಾರೈರ್ವಿನಿಕೃತ್ತಶೀರ್ಷಾಃ
　　ಸಂಚೂರ್ಣಿತಾಂಗಾಶ್ಚ ಗದಾಪ್ರಹಾರೈಃ ।
ಅಸಿಪ್ರಹಾರೈರ್ದ್ವಿವಿಧಾ ವಿಭಿನ್ನಾಃ
　　ಪತಂತಿ ಶೈಲಾ ಇವ ರಾಕ್ಷಸೇಂದ್ರಾಃ ॥　　೫೪

ವಿಲಂಬಮಾನೈರ್ಮಣಿಹಾರಕುಂಡಲೈ-
　　ರ್ನಿಶಾಚರೈರ್ನೀಲಬಲಾಹಕೋಪಮೈಃ ।

---

ಶಸ್ತ್ರಗಳು ಜಾರಿಬಿದ್ದವು ಉಡುಗೆ ತೊಡುಗೆಗಳು ಕಳಚಿದವು ಕರುಳುಗಳು ಹೊರಬಂದವು ಹೆದರಿಕೆಯಿಂದ ಕಣ್ಣುಗಳು ನಡುಗಿದವು ರಾಕ್ಷಸಪಡೆಗೆ ಹುಚ್ಚು ಹಿಡಿದಿದೆಯೋ ಎಂಬಂತೆ ಕಾಣಿಸಿತು (೫೧) ಗಜಸೇನಾಪರಿವೃತರಾದ ನಿಶಾಚರರ ಪರಿಸ್ಥಿತಿಯು ಸಿಂಹದ ಆಕ್ರಮಣಕ್ಕೊಳಗಾದ ಆನೆಗಳಂತಾಯಿತು ಪುರಾಣಸಿಂಹನೆನಿಸಿದ ನರಸಿಂಹನ ಧಾಳಿಗೆ ಸಿಲುಕಿದ ಆ ರಾಕ್ಷಸರು 'ಹಾ ಹಾ !' ಎಂದು ಅರಚುತ್ತ ದಿಕ್ಕುದಿಕ್ಕಿಗೆ ಓಡಿದರು (೫೨). ಶ್ರೀಹರಿಯ ಬಾಣಜಾಲಗಳಿಗೆ ಈಡಾದ ರಾಕ್ಷಸರು ತಿರುಗಿ ಬಾಣಜಾಲಗಳನ್ನು ಪ್ರಯೋಗಿಸುತ್ತಲೇ, ಬಿರುಗಾಳಿಯು ಹೊಡೆತಕ್ಕೆ ಸಿಕ್ಕಿದ ಕಾರ್ಮೋಡಗಳಂತೆ ಚದರಿದರು (೫೩) ಚಕ್ರಪ್ರಹಾರಗಳಿಂದ ತಲೆಗಳು ಕತ್ತರಿಸಲ್ಪಟ್ಟವು ಗದಾಪ್ರಹಾರಗಳಿಂದ ಅಂಗೋಪಾಂಗಗಳು ಜರ್ಝರಿತವಾದವು ಖಡ್ಗಪ್ರಹಾರಗಳಿಂದ ದೇಹಗಳು ಎರಡಾಗಿ ಸೀಳಿದವು. ರಾಕ್ಷಸಯೋಧರು ಬೆಟ್ಟಗಳಂತೆ ಧರೆಗುರುಳಿದರು (೫೪) ನೀಲಮೇಘಗಳಂತೆ ನೀಲಕಾಯ

ನಿಪಾತ್ಯಮಾನೈರ್ದದೃಶೇ ನಿರಂತರಂ
ನಿಪಾತ್ಯಮಾನೈರಿವ ನೀಲಪರ್ವತೈಃ ॥ ೫೫

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತಮಃ ಸರ್ಗಃ

---

## ಅಷ್ಟಮಃ ಸರ್ಗಃ

### ಸುಮಾಲ್ಯಾದಿನಿಗ್ರಹಃ

ಹನ್ಯಮಾನೇ ಬಲೇ ತಸ್ಮಿನ್ ಪದ್ಮನಾಭೇನ ಪೃಷ್ಠತಃ ।
ಮಾಲ್ಯವಾನ್ ಸಂನಿವೃತ್ತೋಽಥ ವೇಲಾಮೇತ್ಯ ಇವಾರ್ಣವಃ ॥ ೧

ಸಂರಕ್ತನಯನಃ ಕೋಪಾಚ್ಚಲನ್ಮೌಲಿರ್ನಿಶಾಚರಃ ।
ಪದ್ಮನಾಭಮಿದಂ ಪ್ರಾಹ ವಚನಂ ಪುರುಷೋತ್ತಮಮ್ ॥ ೨

---

ರಾದ ನಿಶಾಚರರು ನೇತಾಡುವ ಮಣಿಹಾರಕುಂಡಲಗಳೊಡನೆ ನಿಹತರಾಗಿ ನೆಲಕ್ಕೆ ಬೀಳುತ್ತಿರಲು, ನೀಲಪರ್ವತಗಳು ನೇರವಾಗಿ ನಿರಂತರವೂ ಕೆಳಗೆ ಬೀಳುತ್ತಿವೆಯೋ ಎಂಬಂತೆ ಕಾಣಿಸಿತು (೫೫)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಏಳನೆಯ ಸರ್ಗ

---

## ಸರ್ಗ ೮

### ಮಾಲ್ಯವಂತ ಮತ್ತು ಸುಮಾಲಿಗಳು ಮತ್ತೆ ವಿಷ್ಣುವಿನೊಡನೆ ಹೋರಾಡಿ ಪರಾಜಿತರಾಗುವುದು ಅವರು ಭಯದಿಂದ ಲಂಕೆಯನ್ನು ತ್ಯಜಿಸಿ ರಸಾತಳಕ್ಕೆ ಹೋಗುವುದು

ಶ್ರೀರಾಮ, ಈ ಪ್ರಕಾರದಲ್ಲಿ ಪದ್ಮನಾಭನು ಅಟ್ಟಿಸಿಕೊಂಡು ಹೋಗಿ ರಾಕ್ಷಸರನ್ನು ವಿಧ್ವಂಸಗೊಳಿಸುತ್ತಿರಲಾಗಿ, ಮಾಲ್ಯವಂತನು ಕ್ರೋಧದಿಂದ ರಕ್ತನೇತ್ರನಾಗಿ ರೋಷಾವೇಶದಿಂದ ಕಂಪಿತಶಿರಸ್ಕನಾಗಿ, ಸಮುದ್ರವೇ ಎಲ್ಲೆಮೀರಿ ಉಕ್ಕಿತೋ ಎಂಬಂತೆ ರಭಸದಿಂದ ರಣರಂಗಕ್ಕೆ ಹಿಂದಿರುಗಿ ಬಂದನು (೧) ಆತನು ಶ್ರೀಮನ್ನಾರಾಯಣನನ್ನು ನೋಡಿ “ಎಲೈ

ನಾರಾಯಣ ನ ಜಾನೀಷೇ ಕ್ಷಾತ್ರಧರ್ಮಂ ಪುರಾತನಮ್ ।
ಅಯುದ್ಧಮನಸೋ ಭೀತಾನಸ್ಮಾನ್ ಹಂಸಿ ಯಥೇತರಃ ॥ ೩
ಪರಾಙ್ಮುಖವಧಂ ಪಾಪಂ ಯಃ ಕರೋತಿ ಸುರೇಶ್ವರ ।
ಸ ಹಂತಾ ನ ಗತಃ ಸ್ವರ್ಗಂ ಲಭತೇ ಪುಣ್ಯಕರ್ಮಣಾಮ್ ॥ ೪
ಯುದ್ಧಶ್ರದ್ಧಾಥವಾ ತೇಽಸ್ತಿ ಶಂಖಚಕ್ರಗದಾಧರ ।
ಅಹಂ ಸ್ಥಿತೋಽಸ್ಮಿ ಪಶ್ಯಾಮಿ ಬಲಂ ದರ್ಶಯ ಯತ್ತವ ॥ ೫
ಮಾಲ್ಯವಂತಂ ಸ್ಥಿತಂ ದೃಷ್ಟ್ವಾ ಮಾಲ್ಯವಂತಮಿವಾಚಲಮ್ ।
ಉವಾಚ ರಾಕ್ಷಸೇಂದ್ರಂ ತಂ ದೇವರಾಜಾನುಜೋ ಬಲೀ ॥ ೬
ಯುಷ್ಮತ್ತೋ ಭಯಭೀತಾನಾಂ ದೇವಾನಾಂ ವೈ ಮಯಾಭಯಮ್
ರಾಕ್ಷಸೋತ್ಸಾದನಂ ದತ್ತಂ ತದೇತದನುಪಾಲ್ಯತೇ ॥ ೭
ಪ್ರಾಣೈರಪಿ ಪ್ರಿಯಂ ಕಾರ್ಯಂ ದೇವಾನಾಂ ಹಿ ಸದಾ ಮಯಾ ।
ಸೋಽಹಂ ವೋ ನಿಹನಿಷ್ಯಾಮಿ ರಸಾತಲಗತಾನಪಿ ॥ ೮

---

ನಾರಾಯಣ, ಪುರಾತನವಾದ ಕ್ಷಾತ್ರಧರ್ಮವು ನಿನಗೆ ತಿಳಿಯದು! ಯುದ್ಧಾಪೇಕ್ಷೆಯಿಲ್ಲದೆ ಭೀತರಾಗಿ ಓಡುತ್ತಿರುವ ನಮ್ಮ ರಾಕ್ಷಸರನ್ನು ಅಲ್ಪನಂತೆ ಅಟ್ಟಿಸಿಕೊಂಡು ಬಂದು ಕೊಲ್ಲುತ್ತಿದ್ದೀಯೆ (೨-೩) ಯುದ್ಧದಲ್ಲಿ ಹಿಮ್ಮೆಟ್ಟಿ ಓಡುವವರನ್ನು ಸಂಹರಿಸುವುದು ಪಾಪಕಾರ್ಯ ಹಾಗೆ ಸಂಹರಿಸತಕ್ಕವನು ಪುಣ್ಯವಂತರಿಗೆ ಲಭಿಸುವ ಸ್ವರ್ಗವನ್ನು ಎಂದಿಗೂ ಪಡೆಯಲಾರ. ಎಲೈ ವಿಷ್ಣುವೆ, ನಿನಗೆ ಅಷ್ಟೊಂದು ಯುದ್ಧಾಸಕ್ತಿ ಇರುವುದಾದರೆ, ಇದೋ! ಇಲ್ಲಿ ನಾನು ನಿಂತಿದ್ದೇನೆ ಎಲ್ಲಿ? ನಿನ್ನ ಬಲವನ್ನು ತೋರಿಸು, ನೋಡುವೆನು" ಎಂದನು (೪-೫) ಮಾಲ್ಯವತ್ಪರ್ವತವೋ ಎಂಬಂತೆ ಬಂದು ನಿಂತ ಮಾಲ್ಯವಂತನನ್ನು ನೋಡಿ ಶ್ರೀಹರಿಯು "ಎಲೈ ರಾಕ್ಷಸ, ನಿಮ್ಮಿಂದ ಭೀತರಾಗಿ ಬಂದ ದೇವತೆಗಳಿಗೆ ನಾನು ಅಭಯವನ್ನು ನೀಡಿದ್ದೇನೆ ನಿಮ್ಮೆಲ್ಲರನ್ನೂ ಕೊಲ್ಲುವೆನೆಂದು ಮಾತುಕೊಟ್ಟಿದ್ದೇನೆ ಕೊಟ್ಟ ಮಾತನ್ನು ಈಗ ನಡೆಸುತ್ತಿದ್ದೇನೆ (೬-೭) ಪ್ರಾಣವನ್ನಾದರೂ ಮುಡುಪಿಟ್ಟು ದೇವತೆಗಳಿಗೆ ಪ್ರಿಯವನ್ನು ಮಾಡುವುದು ನನ್ನ ಕಾರ್ಯಪದ್ಧತಿ ನೀವು ರಸಾತಳವನ್ನೇ ಹೊಕ್ಕರೂ ನಿಮ್ಮನ್ನು ಸದೆಬಡಿಯುವೆನು!" ಎಂದು ಉತ್ತರವಿತ್ತನು.

ದೇವದೇವಂ ಬ್ರುವಾಣಂ ತಂ ರಕ್ತಾಂಬುರುಹಲೋಚನಮ್ ।
ಶಕ್ತ್ಯಾ ಬಿಭೇದ ಸಂಕ್ರುದ್ಧೋ ರಾಕ್ಷಸೇಂದ್ರೋ ಭುಜಾಂತರೇ ॥ ೯

ಮಾಲ್ಯವದ್ಭುಜನಿರ್ಮುಕ್ತಾ ಶಕ್ತಿರ್ಘಂಟಾಕೃತಸ್ವನಾ ।
ಹರೇರುರಸಿ ಬಭ್ರಾಜ ಮೇಘಸ್ಥೇವ ಶತಹ್ರದಾ ॥ ೧೦

ತತಸ್ತಾಮೇವ ಚೋತ್ಕೃಷ್ಯ ಶಕ್ತಿಂ ಶಕ್ತಿಧರಪ್ರಿಯಃ ।
ಮಾಲ್ಯವಂತಂ ಸಮುದ್ದಿಶ್ಯ ಚಿಕ್ಷೇಪಾಂಬುರುಹೇಕ್ಷಣಃ ॥ ೧೧

ಸ್ಕಂದೋತ್ಸೃಷ್ಟೇವ ಸಾ ಶಕ್ತಿರ್ಗೋವಿಂದಕರನಿಃಸೃತಾ ।
ಕಾಂಕ್ಷಂತೀ ರಾಕ್ಷಸಂ ಪ್ರಾಯಾನ್ಮಹೇಂದ್ರೇವಾಂಜನಾಚಲಮ್ ॥

ಸಾ ತಸ್ಯೋರಸಿ ವಿಸ್ತೀರ್ಣೇ ಹಾರಭಾಸಾವಭಾಸಿತೇ ।
ಅಪತದ್ರಾಕ್ಷಸೇಂದ್ರಸ್ಯ ಗಿರಿಕೂಟೆ ಇವಾಶನಿಃ ॥ ೧೩

ತಯಾ ಭಿನ್ನತನುತ್ರಾಣಃ ಪ್ರಾವಿಶದ್ವಿಪುಲಂ ತಮಃ ।
ಮಾಲ್ಯವಾನ್ ಪುನರಾಶ್ವಸ್ತಸ್ತಸ್ಥೌ ಗಿರಿರಿವಾಚಲಃ ॥ ೧೪

---

ಕೆಂದಾವರೆಯಂತಹ ಕಣ್ಗಳಿಂದ ಶೋಭಿಸುತ್ತಿದ್ದ ದೇವದೇವನು ಹೀಗೆ ನುಡಿಯುವಷ್ಟರಲ್ಲಿ, ಮಾಲ್ಯವಂತನು ಸಿಟ್ಟಿನಿಂದ ಶಕ್ತ್ಯಾಯುಧವನ್ನು ವಿಷ್ಣುವಿನ ಎದೆಗೆ ಗುರಿಯಿಟ್ಟು ಹೊಡೆದನು (೮-೯). ಘಂಟಾಲಂಕೃತವಾದ ಆ ಶಕ್ತಿಯು ಗಣಗಣಯೆನ್ನುತ್ತ ಸಿಡಿದು ಬಂದು ಶ್ರೀಹರಿಯ ಎದೆಗೆ ತಾಗಿ, ಮೇಘಮಂಡಲದಲ್ಲಿ ಮಿರುಗುವ ಮಿಂಚಿನಂತೆ ಕಂಗೊಳಿಸಿತು (೧೦). ಶಕ್ತಿಧರನಾದ ಕುಮಾರಸ್ವಾಮಿಗೆ ಪ್ರಿಯನಾದ ವಿಷ್ಣುವು ಒಡನೆಯೇ ಆ ಶಕ್ತಿಯನ್ನೇ ಕಿತ್ತು, ಮಾಲ್ಯವಂತನ ಮೇಲೆ ಪ್ರಯೋಗಿಸಿದನು ಸ್ಕಂದನೇ ತೆಗೆದು ಬಿಗಿದಂತಿದ್ದ ಆ ಶಕ್ತಿಯು ಹರಿಕರದಿಂದ ಹೊರಟು, ಮಹೇಂದ್ರನ ವಜ್ರಾಯುಧವು ಅಂಜನಾಚಲದ ಮೇಲೆ ಎರಗುವಂತೆ, ರಾಕ್ಷಸನ ಮೇಲೆ ಎರಗಿತು (೧೧-೧೨). ಮುಕ್ತಾಹಾರವಿರಾಜಿತವಾದ ರಾಕ್ಷಸೇಂದ್ರನ ವಿಶಾಲ ವಕ್ಷಃಸ್ಥಳಕ್ಕೆ ಆ ಶಕ್ತಿಯು, ಗಿರಿಶಿಖರಕ್ಕೆ ಸಿಡಿಲುಬಡಿದಂತೆ ಬಡಿಯಿತು. ಮಾಲ್ಯವಂತನ ಕವಚವು ನಿರ್ಭಿನ್ನವಾಯಿತು. ಅವನು ಎಚ್ಚರದಪ್ಪಿದನು

**ತತಃ ಕಾರ್ಷ್ಣಾಯಸಂ ಶೂಲಂ ಕಂಟಕೈರ್ಬಹುಭಿರ್ವೃತಮ್ ।**
**ಪ್ರಗೃಹ್ಯಾಭ್ಯಹನದ್ದೇವಂ ಸ್ತನಯೋರಂತರೇ ದೃಢಮ್ ॥ ೧೪**
**ತಥೈವ ರಣರಕ್ತಸ್ತು ಮುಷ್ಟಿನಾ ವಾಸವಾನುಜಮ್ ।**
**ತಾಡಯಿತ್ವಾ ಧನುರ್ಮಾತ್ರಮಪಕ್ರಾಂತೋ ನಿಶಾಚರಃ ॥ ೧೬**
**ತತೋಽಂಬರೇ ಮಹಾನ್ ಶಬ್ದಃ ಸಾಧು ಸಾಧ್ವಿತಿ ಚೋದಿತಃ ।**
**ಆಹತ್ಯ ರಾಕ್ಷಸೋ ವಿಷ್ಣುಂ ಗರುಡಂ ಚಾಪ್ಯತಾಡಯತ್ ॥ ೧೭**
**ವೈನತೇಯಸ್ತತಃ ಕ್ರುದ್ಧಃ ಪಕ್ಷವಾತೇನ ರಾಕ್ಷಸಮ್ ।**
**ವ್ಯಪೋಹದ್ಬಲವಾನ್ ವಾಯುಃ ಶುಷ್ಕಪರ್ಣಚಯಂ ಯಥಾ ॥ ೧೮**
**ದ್ವಿಜೇಂದ್ರಪಕ್ಷವಾತೇನ ದ್ರಾವಿತಂ ದೃಶ್ಯ ಪೂರ್ವಜಮ್ ।**
**ಸುಮಾಲೀ ಸ್ವಬಲೈಃ ಸಾರ್ಧಂ ಲಂಕಾಮಭಿಮುಖೋ ಯಯೌ ॥**
**ಪಕ್ಷವಾತಬಲೋದ್ಧೂತೋ ಮಾಲ್ಯವಾನಪಿ ರಾಕ್ಷಸಃ ।**
**ಸ್ವಬಲೇನ ಸಮಾಗಮ್ಯ ಯಯೌ ಲಂಕಾಂ ಹ್ರಿಯಾ ವೃತಃ ॥ ೨೦**

---

ಮತ್ತೆ ಎಚ್ಚೆತ್ತು ಆ ರಾಕ್ಷಸೇಂದ್ರನು ಬೆಟ್ಟದಂತೆ ದಿಟ್ಟತನದಿಂದ ನಿಂತು, ಮುಳ್ಳುಗಳಿಂದ ಮಳಮಳಿಸುತ್ತಿದ್ದ ಉಕ್ಕಿನ ಶೂಲವನ್ನೆತ್ತಿ ವಿಷ್ಣುವಿನ ಎದೆಯಲ್ಲಿ ನೆಟ್ಟನು (೧೩-೧೪) ಅಲ್ಲದೆ ಯುದ್ಧೋನ್ಮತ್ತನಾದ ಆ ನಿಶಾಚರನು ಮುಷ್ಟಿಯನ್ನೆತ್ತಿ ವಿಷ್ಣುವನ್ನು ಗುದ್ದಿ, ಒಂದು ಧನುಸ್ಸಿನ* ದೂರದಷ್ಟು ಹಿಂದಕ್ಕೆ ಸರಿದನು 'ಭಲಾ! ಶಹಭಾಸ್!' ಎಂಬ ರಾಕ್ಷಸರ ಕೋಲಾಹಲವು ಅಂಬರದಲ್ಲಿ ತುಂಬಿತು ಮತ್ತೆ ಮಾಲ್ಯವಂತನು ಮುನ್ನುಗ್ಗಿ ಗರುಡನನ್ನೂ ಗುದ್ದಿದನು (೧೬-೧೭) ಆಗ ಬಲಾಢ್ಯನಾದ ವೈನತೇಯನು ಕ್ರೋಧಾವಿಷ್ಟನಾಗಿ ರೆಕ್ಕೆಯನ್ನು ಬೀಸಿ ಅದರಿಂದೆದ್ದ ಬಿರುಗಾಳಿಯಿಂದಲೇ ಮಾಲ್ಯವಂತನನ್ನು ತರಗೆಲೆಯಂತೆ ದೂರಕ್ಕೆ ಹಾರಿಸಿಬಿಟ್ಟನು! ಪಕ್ಷಿರಾಜನ ರೆಕ್ಕೆಯ ಗಾಳಿಯಿಂದಲೇ ದೂರ ಸಾರಿದ ತನ್ನ ಅಣ್ಣನನ್ನು ನೋಡಿ, ಸುಮಾಲಿಯು ತನ್ನ ಪಡೆಗಳೊಡನೆ ಲಂಕೆಗೆ ಹಿಂದಿರುಗಿದನು (೧೮-೧೯) ಇತ್ತ ಮಾಲ್ಯವಂತನೂ ಲಜ್ಜೆಯಿಂದ ತನ್ನ ಸೈನ್ಯದೊಡನೆ ಲಂಕೆಗೆ ಹಿಮ್ಮೆಟ್ಟಿದನು. ಕಮಲನಯನ-ರಾಘವ, ಈ ರೀತಿಯಲ್ಲಿ ರಾಕ್ಷಸರು ವಿಷ್ಣುವಿನಿಂದ ಪರಾಜಿತ

---

* ಒಂದು ಧನುಸ್ಸಿನ ದೂರ=ನಾಲ್ಕು ಮೊಳ

ಏವಂ ತೇ ರಾಕ್ಷಸಾಸ್ತೇನ ಹರಿಣಾ ಕಮಲೇಕ್ಷಣ ।
ಬಹುಶಃ ಸಂಯುಗೇ ಭಗ್ನಾ ಹತಪ್ರವರನಾಯಕಾಃ ॥ ೨೦

ಅಶಕ್ನುವಂತಸ್ತೇ ವಿಷ್ಣುಂ ಪ್ರತಿಯೋದ್ಧುಂ ಭಯಾರ್ದಿತಾಃ ।
ತ್ಯಕ್ತ್ವಾ ಲಂಕಾಂ ಗತಾ ವಸ್ತುಂ ಪಾತಾಲಂ ಸಹಪತ್ನಯಃ ॥ ೨೨

ಸುಮಾಲಿನಂ ಸಮಾಸಾದ್ಯ ರಾಕ್ಷಸಂ ರಘುಸತ್ತಮ ।
ಸ್ಥಿತಾಃ ಪ್ರಖ್ಯಾತವೀರ್ಯಾಸ್ತೇ ವಂಶೇ ಸಾಲಕಟಂಕಟೇ ॥ ೨೩

ಯೇ ತ್ವಯಾ ನಿಹತಾಸ್ತೇ ತು ಪೌಲಸ್ತ್ಯಾ ನಾಮ ರಾಕ್ಷಸಾಃ ।
ಸುಮಾಲೀ ಮಾಲ್ಯವಾನ್ ಮಾಲೀ ಯೇ ಚ ತೇಷಾಂ ಪುರಸ್ಸರಾಃ॥

ಸರ್ವೇ ತೇಭ್ಯೋ ಮಹಾಭಾಗ ರಾವಣಾದ್ಬಲವತ್ತರಾಃ ।
ನ ಚಾನ್ಯೋ ರಾಕ್ಷಸಾನ್ ಹಂತಾ ಸುರಾರೀನ್ ದೇವಕಂಟಕಾನ್ ॥

ಋತೇ ನಾರಾಯಣಂ ದೇವಂ ಶಂಖಚಕ್ರಗದಾಧರಮ್ ।
ಭವಾನ್ನಾರಾಯಣೋ ದೇವಶ್ಚತುರ್ಬಾಹುಃ ಸನಾತನಃ ॥ ೨೬

---

ರಾದರು ಮುಖ್ಯರಾದ ನಾಯಕರು ಹತರಾದರು ಆ ರಾಕ್ಷಸರು ವಿಷ್ಣು ವನ್ನು ಎದುರಿಸಲಾರದೆ ಭೀತಿಯಿಂದ ಲಂಕೆಯನ್ನು ತೊರೆದು, ಪಾತಾಳದಲ್ಲಿ ನೆಲೆಸಬೇಕೆಂದು ಪತ್ನೀಸಮೇತರಾಗಿ ಹೊರಟುಹೋದರು (೨೦-೨೨) ರಘುಕುಲೋತ್ತಮ, ವಿಖ್ಯಾತವೀರರಾದ ಆ ರಾಕ್ಷಸರು ಸಾಲಕಟಂಕಟೆಯ * ವಂಶದಲ್ಲಿ ಜನಿಸಿದ ಸುಮಾಲಿಯನ್ನು ಆಶ್ರಯಿಸಿ ಪಾತಾಳದಲ್ಲಿ ನೆಲೆಸಿದರು ಪುಲಸ್ತ್ಯವಂಶದಲ್ಲಿ ಜನಿಸಿದ ಬಹುಮಂದಿ ರಾಕ್ಷಸರನ್ನು ನೀನು ಸಂಹರಿಸಿದೆ ಯಷ್ಟೆ ಮಾಲಿ, ಸುಮಾಲಿ, ಮಾಲ್ಯವಂತ—ಮೊದಲಾದವರು ಅವರೆಲ್ಲರಿ ಗಿಂತ ಬಲಶಾಲಿಗಳು ರಾವಣನಿಗಿಂತ ಬಲಾಢ್ಯರು (೨೩-೨೫) ದೇವಕಂಟಕ ರಾದ ಅಸುರರನ್ನು, ಶಂಖಚಕ್ರಗದಾಧಾರಿಯಾದ ಶ್ರೀಮನ್ನಾರಾಯಣನಲ್ಲದೆ ಇನ್ನು ಯಾರು ಸಂಹರಿಸಿಯಾರು? ಶ್ರೀರಾಮ, ಚತುರ್ಭುಜನೂ ಸನಾತನನೂ ಅಜೇಯನೂ ಸರ್ವಲೋಕ ಪ್ರಭುವೂ ಶಾಶ್ವತನೂ ಆದ ನಾರಾಯಣನೇ ನೀನು! ರಾಕ್ಷಸರನ್ನು ವಧಿಸುವುದಕ್ಕಾಗಿ ರಘುಕುಲದಲ್ಲಿ

* ಇವಳು ಮಾಲ್ಯವದಾದಿಗಳ ಪಿತಾಮಹಿ, ವಿದ್ಯುತ್ಕೇಶನ ಹೆಂಡತಿ

ರಾಕ್ಷಸಾನ್ ಹಂತುಮುತ್ಪನ್ನೋ ಹ್ಯಜೇಯಃ ಪ್ರಭುರವ್ಯಯಃ ।
ನಷ್ಟಧರ್ಮವ್ಯವಸ್ಥಾತಾ ಕಾಲೇ ಕಾಲೇ ಪ್ರಜಾಕರಃ ॥ ೨೭

ಉತ್ಪದ್ಯತೇ ದಸ್ಯುವಧೇ ಶರಣಾಗತವತ್ಸಲಃ ॥

ಏಷಾ ಮಯಾ ತವ ನರಾಧಿಪ ರಾಕ್ಷಸಾನಾ-
ಮುತ್ಪತ್ತಿರದ್ಯ ಕಥಿತಾ ಸಕಲಾ ಯಥಾವತ್ ।
ಭೂಯೋ ನಿಬೋಧ ರಘುಸತ್ತಮ ರಾವಣಸ್ಯ
ಜನ್ಮಪ್ರಭಾವಮತುಲಂ ಸಸುತಸ್ಯ ಸರ್ವಮ್ ॥ ೨೮

ಚಿರಾತ್ ಸುಮಾಲೀ ವ್ಯಚರದ್ರಸಾತಲಂ
ಸ ರಾಕ್ಷಸೋ ವಿಷ್ಣುಭಯಾರ್ದಿತಸ್ತದಾ ।
ಪುತ್ರೈಶ್ಚ ಪೌತ್ರೈಶ್ಚ ಸಮನ್ವಿತೋ ಬಲೀ
ತತಸ್ತು ಲಂಕಾಮವಸದ್ಧನೇಶ್ವರಃ ॥ ೨೯

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟಮಃ ಸರ್ಗಃ



ಜನಿಸಿದ್ದೀಯೆ ಶರಣಾಗತವತ್ಸಲನಾದ ನೀನು ದಸ್ಯುಗಳನ್ನು ಸಂಹರಿಸಿ, ನಷ್ಟವಾದ ಧರ್ಮವನ್ನು ಉದ್ಧರಿಸುವುದಕ್ಕಾಗಿ ಆಗಾಗ ಅವತರಿಸುತ್ತೀಯೆ (೨೫-೨೭) ಮಹಾರಾಜ–ರಘುಸತ್ತಮ, ಹೀಗೆ ರಾಕ್ಷಸರ ಉತ್ಪತ್ತಿಯ ಕಥೆಯನ್ನು ಯಥಾವತ್ತಾಗಿ ನಿನಗೆ ತಿಳಿಸಿದ್ದೇನೆ ಇನ್ನು ರಾವಣನೂ ಅವನ ಮಕ್ಕಳೂ ಜನಿಸಿದ ವೃತ್ತಾಂತವನ್ನೂ ಅಸದೃಶವಾದ ಅವರ ಪ್ರಭಾವವನ್ನೂ ಹೇಳುವೆನು, ಕೇಳು (೨೮) ಸುಮಾಲಿಯು ಪುತ್ರ ಪೌತ್ರರಿಂದ ಸಮನ್ವಿತನಾಗಿ, ವಿಷ್ಣುಭಯದಿಂದ ತತ್ತರಿಸುತ್ತಲೇ ಬಹುಕಾಲದವರೆಗೆ ಪಾತಾಳದಲ್ಲಿ ವಾಸವಾಗಿದ್ದನು ಇತ್ತ ಕುಬೇರನು ಲಂಕೆಗೆ ಬಂದು ನೆಲೆಸಿದನು (೨೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಟನೆಯ ಸರ್ಗ



## ನವಮಃ ಸರ್ಗಃ

### ರಾವಣಾದ್ಯುತ್ಪತ್ತಿಃ

ಕಸ್ಯಚಿತ್ತ್ವಥ ಕಾಲಸ್ಯ ಸುಮಾಲೀ ನಾಮ ರಾಕ್ಷಸಃ ।
ರಸಾತಲಾನ್ಮರ್ತ್ಯಲೋಕಂ ಸರ್ವಂ ವೈ ವಿಚಚಾರ ಹ ॥ ೧

ನೀಲಜೀಮೂತಸಂಕಾಶಸ್ತಪ್ತಕಾಂಚನಕುಂಡಲಃ ।
ಕನ್ಯಾಂ ದುಹಿತರಂ ಗೃಹ್ಯ ವಿನಾ ಪದ್ಮಮಿವ ಶ್ರಿಯಮ್ ॥ ೨

ರಾಕ್ಷಸೇಂದ್ರಃ ಸ ತು ತದಾ ವಿಚರನ್ ವೈ ಮಹೀತಲಮ್ ।
ತದಾಪಶ್ಯತ್ ಸ ಗಚ್ಛಂತಂ ಪುಷ್ಪಕೇಣ ಧನೇಶ್ವರಮ್ ॥ ೩

ಗಚ್ಛಂತಂ ಪಿತರಂ ದ್ರಷ್ಟುಂ ಪುಲಸ್ತ್ಯತನಯಂ ವಿಭುಮ್ ।
ತಂ ದೃಷ್ಟ್ವಾಮರಸಂಕಾಶಂ ಸ್ವಚ್ಛಂದಂ ತಪನೋಪಮಮ್ ॥ ೪

## ಸರ್ಗ ೯

ಸುಮಾಲಿಯ ಮಗಳಾದ ಕೈಕಸಿಯಲ್ಲಿ ರಾವಣ, ಕುಂಭಕರ್ಣ, ವಿಭೀಷಣ ಮತ್ತು ಶೂರ್ಪಣಖಿಯರ ಜನನ ರಾವಣ ಕುಂಭಕರ್ಣರು ತಪಸ್ಸನ್ನಾಚರಿಸಿ ಬ್ರಹ್ಮನಿಂದ ವರವನ್ನು ಪಡೆಯುವುದು

ಶ್ರೀರಾಮ, ಬಹುಕಾಲವು ಕಳೆಯಿತು. ಸುಮಾಲಿಯೆಂಬ ರಾಕ್ಷಸನು ರಸಾತಳದಿಂದ ಭೂಲೋಕಕ್ಕೆ ಬಂದು ಸಂಚರಿಸತೊಡಗಿದನು. ನೀಲ ಮೇಘದಂತೆ ಶೋಭಿಸುತ್ತ ಸುವರ್ಣಕುಂಡಲಧಾರಿಯಾದ ಸುಮಾಲಿಯು ಅವಿವಾಹಿತಳಾದ ಕೈಕಸಿಯೆಂಬ ತನ್ನ ಮಗಳನ್ನು ಜೊತೆಯಲ್ಲಿ ಕರೆತಂದಿದ್ದನು ಆ ಕನ್ಯೆಯು ಪದ್ಮವೊಂದಿಲ್ಲದ ಲಕ್ಷ್ಮಿಯೋ ಎಂಬಂತೆ ಸುಂದರಿಯಾಗಿದ್ದಳು (೧-೨) ಆಕೆಯೊಡನೆ ಸಂಚರಿಸುತ್ತಿದ್ದ ರಾಕ್ಷಸೇಂದ್ರನು ಆಕಸ್ಮಿಕವಾಗಿ ಕುಬೇರನನ್ನು ಕಂಡನು ಕುಬೇರನು ಪುಷ್ಪಕವಿಮಾನದಲ್ಲಿ ಕುಳಿತು, ತನ್ನ ತಂದೆಯಾದ ವಿಶ್ರವಸ್ಸನ್ನು ನೋಡಲು ಹೋಗುತ್ತಿದ್ದನು. ದೇವತಾಸ್ವರೂಪನಾಗಿ ಸೂರ್ಯನಂತೆ ಬೆಳಗುತ್ತ ಸ್ವತಂತ್ರನಾಗಿದ್ದ ಕುಬೇರ

ರಸಾತಲಂ ಪ್ರವಿಷ್ಟಃ ಸನ್ ಮರ್ತ್ಯಲೋಕಾತ್ ಸವಿಸ್ಮಯಃ ।
ಇತ್ಯೇವಂ ಚಿಂತಯಾಮಾಸ ರಾಕ್ಷಸಾನಾಂ ಮಹಾಮತಿಃ ॥ ೫

ಕಿಂ ಕೃತಂ ಶ್ರೇಯ ಇತ್ಯೇವಂ ವರ್ಧೇಮಹಿ ಕಥಂ ವಯಮ್ ।
ಅಥಾಬ್ರವೀತ್ ಸುತಾಂ ರಕ್ಷಃ ಕೈಕಸೀಂ ನಾಮ ನಾಮತಃ ॥ ೬

ಪುತ್ರಿ ಪ್ರದಾನಕಾಲೋಽಯಂ ಯೌವನಂ ತೇಽತಿವರ್ತತೇ ।
ಪ್ರತ್ಯಾಖ್ಯಾನಾಚ್ಚ ಭೀತೈಸ್ತ್ವಂ ನ ವರೈಃ ಪ್ರತಿಗೃಹ್ಯಸೇ ॥ ೭

ತ್ವತ್ಕೃತೇ ಚ ವಯಂ ಸರ್ವೇ ಯಂತ್ರಿತಾ ಧರ್ಮಬುದ್ಧಯಃ ।
ತ್ವಂ ಹಿ ಸರ್ವಗುಣೋಪೇತಾ ಶ್ರೀಃ ಸಾಕ್ಷಾದಿವ ಪುತ್ರಿಕೇ ॥ ೮

ಕನ್ಯಾಪಿತೃತ್ವಂ ದುಃಖಂ ಹಿ ಸರ್ವೇಷಾಂ ಮಾನಕಾಂಕ್ಷಿಣಾಮ್ ।
ನ ಜ್ಞಾಯತೇ ಚ ಕಃ ಕನ್ಯಾಂ ವರಯೇದಿತಿ ಕನ್ಯಕೇ ॥ ೯

ಮಾತುಃ ಕುಲಂ ಪಿತೃಕುಲಂ ಯತ್ರ ಚೈವ ಪ್ರದೀಯತೇ ।
ಕುಲತ್ರಯಂ ಸದಾ ಕನ್ಯಾ ಸಂಶಯೇ ಸ್ಥಾಪ್ಯ ತಿಷ್ಠತಿ ॥ ೧೦

---

ನನ್ನು ನೋಡಿ ಸುಮಾಲಿಗೆ ವಿಸ್ಮಯವಾಯಿತು (೩-೪) ಅವನು ಮತ್ತೆ ರಸಾತಳಕ್ಕೆ ಹೋಗಿ "(ಎಲಾ! ನಮ್ಮ ಲಂಕೆಯನ್ನು ಕುಬೇರನು ಆಕ್ರಮಿಸಿದನಲ್ಲ!) ನಮಗೆ ಶ್ರೇಯಸ್ಸು ಹೇಗೆ ಲಭಿಸೀತು? ನಾವು ಅಭಿವೃದ್ಧಿ ಹೊಂದುವುದು ಹೇಗೆ?" ಎಂದು ಚಿಂತಿಸಿದನು ಕಡೆಗೆ ಕೈಕಸಿಯೆಂಬ ಆ ಪುತ್ರಿಯನ್ನು ಕರೆದು ಹೀಗೆಂದನು (೫-೬): "ವತ್ಸೆ, ನಿನಗೆ ಮದುವೆಯಾಗುವ ಕಾಲವಿದು ಹೀಗೆಯೇ ಇದ್ದರೆ ಯೌವನವು ಕಳೆದುಹೋಗುವುದು. ನಾವು ಒಪ್ಪದಿರಬಹುದೆಂಬ ಶಂಕೆಯಿಂದ ಯಾವ ವರರೂ ನಿನ್ನನ್ನು ಮದುವೆಯಾಗಲು ಮುಂದೆ ಬರುತ್ತಿಲ್ಲ ಸರಿಯಾದ ವಯಸ್ಸಿನಲ್ಲಿ ವಿವಾಹ ಮಾಡಿಕೊಡುವುದು ಧರ್ಮವೆಂಬ ನಿಶ್ಚಯದಿಂದ ನಾವೆಲ್ಲರೂ ನಿನಗೋಸ್ಕರ ಬಹಳ ಶ್ರಮಪಟ್ಟೆವು ಮಗಳೆ, ನೀನಾದರೋ ಸರ್ವಸದ್ಗುಣಸಂಪನ್ನೆಯಾಗಿ ಸಾಕ್ಷಾಲ್ಲಕ್ಷ್ಮಿಯಂತೆ ಇದ್ದೀಯೆ (೭-೮) ಮಾನವಂತರಿಗೆ ಕನ್ಯಾಪಿತೃತ್ವವು ಕಷ್ಟಕರವಾದುದು ಯಾರು ಕನ್ಯೆಯನ್ನು ವರಿಸುವರೋ ಎಂದು ತಿಳಿಯದೆ ಚಿಂತೆಯಾಗುವುದು ಮದುವೆಯಾದ ಮೇಲೂ ಚಿಂತೆಯು ತಪ್ಪಿದ್ದಲ್ಲ. ತನ್ನ ತಾಯಿಯ ಕುಲ, ತಂದೆಯ ಕುಲ, ತಾನು ಸೇರಿದ ಕುಲ—ಈ ಮೂರು

ಸಾ ತ್ವಂ ಮುನಿವರಂ ಶ್ರೇಷ್ಠಂ ಪ್ರಜಾಪತಿಕುಲೋದ್ಭವಮ್ ।
ಭಜ ವಿಶ್ರವಸಂ ಪುತ್ರಿ ಪೌಲಸ್ತ್ಯಂ ವರಯ ಸ್ವಯಮ್ ॥ ೧೧
ಈದೃಶಾಸ್ತೇ ಭವಿಷ್ಯಂತಿ ಪುತ್ರಾಃ ಪುತ್ರಿ ನ ಸಂಶಯಃ ।
ತೇಜಸಾ ಭಾಸ್ಕರಸಮೋ ಯಾದೃಶೋಽಯಂ ಧನೇಶ್ವರಃ ॥ ೧೨
ಸಾ ತು ತದ್ವಚನಂ ಶ್ರುತ್ವಾ ಕನ್ಯಕಾ ಪಿತೃಗೌರವಾತ್ ।
ತತ್ರೋಪಾಗಮ್ಯ ಸಾ ತಸ್ಥೌ ವಿಶ್ರವಾ ಯತ್ರ ತಪ್ಯತೇ ॥ ೧೩
ಏತಸ್ಮಿನ್ನಂತರೇ ರಾಮ ಪುಲಸ್ತ್ಯತನಯೋ ದ್ವಿಜಃ ।
ಅಗ್ನಿಹೋತ್ರಮುಪಾತಿಷ್ಠಚ್ಚತುರ್ಥ ಇವ ಪಾವಕಃ ॥ ೧೪
ಅವಿಚಿಂತ್ಯ ತು ತಾಂ ವೇಲಾಂ ದಾರುಣಾಂ ಪಿತೃಗೌರವಾತ್ ।
ಉಪಸೃತ್ಯಾಗ್ರತಸ್ತಸ್ಯ ಚರಣಾಧೋಮುಖೀ ಸ್ಥಿತಾ ॥ ೧೫
ವಿಲಿಖಂತೀ ಮುಹುರ್ಭೂಮಿಮಂಗುಷ್ಠಾಗ್ರೇಣ ಭಾಮಿನೀ ।
ಸ ತು ತಾಂ ಪ್ರೇಕ್ಷ್ಯ ಸುಶ್ರೋಣೀಂ ಪೂರ್ಣಚಂದ್ರನಿಭಾನನಾಮ್

---

ಕುಲಗಳಿಗೂ ಯಾವಾಗ ಯಾವ ಕೆಟ್ಟ ಹೆಸರನ್ನು ತರುವಳೋ ಎಂಬ ಶಂಕೆಯು ಇದ್ದೇ ಇರುತ್ತದೆ (೯-೧೦) ವತ್ಸೆ, ಪ್ರಜಾಪತಿಕುಲದಲ್ಲಿ ಜನಿಸಿದ ವಿಶ್ರವಸ್ಸು ಮುನಿಶ್ರೇಷ್ಠನಾಗಿದ್ದಾನೆ ಪುಲಸ್ತ್ಯನ ಪುತ್ರನವನು ನೀನು ಅವನನ್ನು ಮದುವೆಯಾಗು ನೀನಾಗಿಯೇ ಹೋಗಿ ಆತನನ್ನು ವರಿಸು ಮಗಳೆ, ಆತನನ್ನು ವರಿಸಿದರೆ ಧನೇಶ್ವರನಾದ ಕುಬೇರನಿಗೆ ಸಮಾನರಾದ ಪುತ್ರರು ನಿನಗೆ ಜನಿಸುವರು ನೋಡು! ಆ ಕುಬೇರನು ಸೂರ್ಯನಂತೆ ತೇಜಸ್ವಿಯಾಗಿದ್ದಾನೆ!" ಎಂದನು (೧೧-೧೨) ಕೈಕಸಿಯು ತಂದೆಯ ಮಾತನ್ನಾಲಿಸಿ ಆತನ ನುಡಿಗೆ ಗೌರವವನ್ನು ಕೊಟ್ಟು, ವಿಶ್ರವಸ್ಸು ತಪಶ್ಚರಣೆ ಮಾಡುತ್ತಿದ್ದ ಸ್ಥಳಕ್ಕೆ ಹೋದಳು ಶ್ರೀರಾಮ, ಇತ್ತ ಪುಲಸ್ತ್ಯತನಯನಾದ ವಿಶ್ರವಸ್ಸು ನಾಲ್ಕನೆಯ ಅಗ್ನಿಯೋ ಎಂಬಂತೆ ಬೆಳಗುತ್ತ ಅಗ್ನಿಹೋತ್ರವನ್ನಾಚರಿಸುತ್ತಿದ್ದನು ಪ್ರದೋಷಕಾಲವಾಗಿತ್ತು (೧೩-೧೪). ಅದು ದಾರುಣವಾದ ಅವೇಳೆಯೆಂಬುದನ್ನು ಲೆಕ್ಕಿಸದೆ, ಕೈಕಸಿಯು ತಂದೆಯ ಮಾತಿನಂತೆ ನೇರವಾಗಿ ಅಲ್ಲಿಗೆ ಹೋದಳು. ಮುನಿಯೆದುರಿಗೆ ತಲೆತಗ್ಗಿಸಿ ನಿಂತುಕೊಂಡಳು ತನ್ನ ಕಾಲನ್ನು ನೋಡುತ್ತ ಹೆಬ್ಬೆರಳಿನಿಂದ ನೆಲವನ್ನು ಕೆರೆಯುತ್ತ ನಿಂತಳು (೧೫) ಪೂರ್ಣಚಂದ್ರಾನನೆಯೂ ಕಾಂತಿಮತಿಯೂ

**ಅಬ್ರವೀತ್ ಪರಮೋದಾರೋ ದೀಪ್ಯಮಾನಾಂ ಸ್ವತೇಜಸಾ ।**
**ಭದ್ರೇ ಕಸ್ಯಾಸಿ ದುಹಿತಾ ಕುತೋ ವಾ ತ್ವಮಿಹಾಗತಾ ॥ ೧೭**

**ಕಿಂ ಕಾರ್ಯಂ ಕಸ್ಯ ವಾ ಹೇತೋಸ್ತತ್ತ್ವತೋ ಬ್ರೂಹಿ ಶೋಭನೇ**
**ಏವಮುಕ್ತಾ ತು ಸಾ ಕನ್ಯಾ ಕೃತಾಂಜಲಿರಥಾಬ್ರವೀತ್ ॥ ೧೮**

**ಆತ್ಮಪ್ರಭಾವೇಣ ಮುನೇ ಜ್ಞಾತುಮರ್ಹಸಿ ಮೇ ಮತಮ್ ।**
**ಕಿಂ ತು ಮಾಂ ವಿದ್ಧಿ ಬ್ರಹ್ಮರ್ಷೇ ಶಾಸನಾತ್ ಪಿತುರಾಗತಾಮ್ ॥**

**ಕೈಕಸೀ ನಾಮ ನಾಮ್ನಾಹಂ ಶೇಷಂ ತ್ವಂ ಜ್ಞಾತುಮರ್ಹಸಿ ।**
**ಸ ತು ಗತ್ವಾ ಮುನಿರ್ಧ್ಯಾನಂ ವಾಕ್ಯಮೇತದುವಾಚ ಹ ॥ ೨೦**

**ವಿಜ್ಞಾತಂ ತೇ ಮಯಾ ಭದ್ರೇ ಕಾರಣಂ ಯನ್ಮನೋಗತಮ್ ।**
**ಸುತಾಭಿಲಾಷೋ ಮತ್ತಸ್ತೇ ಮತ್ತಮಾತಂಗಗಾಮಿನಿ ॥ ೨೧**

**ದಾರುಣಾಯಾಂ ತು ವೇಲಾಯಾಂ ಯಸ್ಮಾತ್ತ್ವಂ ಮಾಮುಪಸ್ಥಿತಾ**
**ಶೃಣು ತಸ್ಮಾತ್ ಸುತಾನ್ ಭದ್ರೇ ಯಾದೃಶಾನ್ ಜನಯಿಷ್ಯಸಿ ॥**

---

ಆದ ಆ ಸುಂದರಿಯನ್ನು ನೋಡಿ, ಪರಮಕೃಪಾಳುವಾದ ಆ ಮುನಿಯು "ಭದ್ರೆ, ನೀನು ಯಾರ ಮಗಳು? ಇಲ್ಲಿಗೇಕೆ ಬಂದೆ? ನನ್ನಿಂದ ಏನಾಗಬೇಕು? ಬಂದ ನಿಮಿತ್ತವೇನು? ದಿಟವನ್ನು ಹೇಳು" ಎಂದು ಕೇಳಿದನು (೧೬-೧೭) ಆಗ ಕೈಕಸಿಯು ಕೈಮುಗಿದುಕೊಂಡು "ಮಹರ್ಷಿಗಳೆ, ನಿಮ್ಮ ತಪೋಮಹಿಮೆಯಿಂದಲೇ ನನ್ನ ಆಶಯವನ್ನು ಗ್ರಹಿಸಬಹುದು ಆದರೆ, ಬ್ರಹ್ಮರ್ಷಿಗಳೆ, ನನ್ನ ತಂದೆಯ ಆಜ್ಞೆಯಿಂದಲೇ ನಾನು ಇಲ್ಲಿಗೆ ಬಂದಿದ್ದೇನೆ ನನ್ನ ಹೆಸರು ಕೈಕಸಿ ಉಳಿದುದನ್ನರಿತುಕೊಳ್ಳಲು ನೀವೇ ಸಮರ್ಥರು" ಎಂದಳು ಆಗ ವಿಶ್ರವಸ್ಸು ಧ್ಯಾನಾರೂಢನಾಗಿ ಎಲ್ಲವನ್ನೂ ತಿಳಿದುಕೊಂಡನು (೧೮-೨೦) ಅನಂತರ "ಭದ್ರೆ, ನೀನು ಬಂದ ಕಾರಣವು ತಿಳಿಯಿತು ನಿನ್ನ ಮನೋಗತವು ವಿಶದವಾಯಿತು ನನ್ನಿಂದ ಪುತ್ರರನ್ನು ಪಡೆಯಬೇಕೆಂದು ನಿನಗೆ ಅಭಿಲಾಷೆಯಾಗಿದೆ! ಆದರೆ, ಎಲೌ ಮತ್ತಮಾತಂಗಗಾಮಿನಿ! ದಾರುಣವಾದ ಈ ಪ್ರದೋಷಕಾಲದಲ್ಲಿ ನನ್ನನ್ನು ಕಾಮಿಸಿ ಬಂದಿದ್ದೀಯೆ ಆದ್ದರಿಂದ, ನಿನಗೆ ಎಂತಹ ಪುತ್ರರು ಜನಿಸುವ

ದಾರುಣಾನ್ ದಾರುಣಾಕಾರಾನ್ ದಾರುಣಾಭಿಜನಪ್ರಿಯಾನ್ ।
ಪ್ರಸವಿಷ್ಯಸಿ ಸುಶ್ರೋಣಿ ರಾಕ್ಷಸಾನ್ ಕ್ರೂರಕರ್ಮಣಃ ॥ ೨೩

ಸಾ ತು ತದ್ವಚನಂ ಶ್ರುತ್ವಾ ಪ್ರಣಿಪತ್ಯಾಬ್ರವೀದ್ವಚಃ ।
ಭಗವನ್ನೀದೃಶಾನ್ ಪುತ್ರಾಂಸ್ತ್ವತ್ತೋಽಹಂ ಬ್ರಹ್ಮವಾದಿನಃ ॥ ೨೪

ನೇಚ್ಛಾಮಿ ಸುದುರಾಚಾರಾನ್ ಪ್ರಸಾದಂ ಕರ್ತುಮರ್ಹಸಿ ।
ಕನ್ಯಯಾ ತ್ವೇವಮುಕ್ತಸ್ತು ವಿಶ್ರವಾ ಮುನಿಪುಂಗವಃ ॥ ೨೫

ಉವಾಚ ಕೈಕಸೀಂ ಭೂಯಃ ಪೂರ್ಣೇಂದುರಿವ ರೋಹಿಣೀಮ್ ।
ಪಶ್ಚಿಮೋ ಯಸ್ತವ ಸುತೋ ಭವಿಷ್ಯತಿ ಶುಭಾನನೇ ॥ ೨೬

ಮಮ ವಂಶಾನುರೂಪಃ ಸ ಧರ್ಮಾತ್ಮಾ ಚ ಭವಿಷ್ಯತಿ ।
ಏವಮುಕ್ತಾ ತು ಸಾ ಕನ್ಯಾ ರಾಮ ಕಾಲೇನ ಕೇನಚಿತ್ ॥ ೨೭

ಜನಯಾಮಾಸ ಬೀಭತ್ಸಂ ರಕ್ಷೋರೂಪಂ ಸುದಾರುಣಮ್ ।
ದಶಗ್ರೀವಂ ಮಹಾದಂಷ್ಟ್ರಂ ನೀಲಾಂಜನಚಯೋಪಮಮ್ ॥ ೨೮

---

ರೆಂಬುದನ್ನಾದರೂ ಕೇಳು. (೨೧-೨೨) ಎಲೌ ಸುಶ್ರೋಣಿ, ಘೋರ ಸ್ವಭಾವದವರೂ ಘೋರಾಕೃತಿಗಳೂ ಘೋರಕರ್ಮಿಗಳನ್ನು ಪ್ರೀತಿಸುವವರೂ ಕ್ರೂರಕರ್ಮಿಗಳೂ ಆದ ಪುತ್ರರನ್ನು ಪಡೆಯುವೆ!" ಎಂದು ನುಡಿದನು ಆಗ ಕೈಕಸಿಯು ವಿಶ್ರವಸ್ಸಿಗೆ ಅಡ್ಡಬಿದ್ದು ನಮಸ್ಕರಿಸಿ "ಭಗವನ್, ಬ್ರಹ್ಮವಾದಿಗಳಾದ ನಿಮ್ಮಿಂದ ಅಂತಹ ಮಕ್ಕಳು ನನಗೆ ಜನಿಸುವುದು ಬೇಡ! ಅಂತಹ ದುಷ್ಟರನ್ನು ನಾನು ಬಯಸುವುದಿಲ್ಲ! ಪ್ರಸನ್ನರಾಗಿರಿ" ಎಂದು ಬೇಡಿಕೊಂಡಳು (೨೩-೨೪). ಆ ಕನ್ಯೆಯು ಈ ರೀತಿಯಲ್ಲಿ ನಿವೇದಿಸಿ ಕೊಳ್ಳಲು, ವಿಶ್ರವಸ್ಸು ಪೂರ್ಣಚಂದ್ರನಂತೆ ಪ್ರಸನ್ನನಾಗಿ ರೋಹಿಣಿಯಂತಿದ್ದ ಕೈಕಸಿಯನ್ನು ಕುರಿತು "ಸೌಮ್ಯೆ, ನಿನ್ನಲ್ಲಿ ಜನಿಸುವ ಕಿರಿಯ ಮಗನೊಬ್ಬನು ಧರ್ಮಾತ್ಮನಾಗಿ ನನ್ನ ವಂಶಕ್ಕೆ ಅನುಗುಣವಾಗಿ ವರ್ತಿಸುವನು" ಎಂದು ತಿಳಿಸಿದನು (೨೫-೨೬) ಶ್ರೀರಾಮ, ಕೆಲವು ಕಾಲವು ಕಳೆಯಿತು ಕೈಕಸಿಯು ರಾಕ್ಷಸಾಕಾರನೂ ದಾರುಣಾಕೃತಿಯೂ ಆದ ಒಬ್ಬ ಮಗನನ್ನು ಹೆತ್ತಳು ಆತನು ದಶಕಂಠನೂ ಮಹಾದಂಷ್ಟ್ರನೂ ನೀಲಾಂಜನಪರ್ವತಾಕಾರನೂ

**ತಾಮ್ರೋಷ್ಠಂ ವಿಂಶತಿಭುಜಂ ಮಹಾಸ್ಯಂ ದೀಪ್ತಮೂರ್ಧಜಮ್ ।**
**ತಸ್ಮಿನ್ ಜಾತೇ ತು ತತ್ಕಾಲೇ ಸಜ್ವಾಲಕವಲಾಃ ಶಿವಾಃ ॥ ೨೯**

**ಕ್ರವ್ಯಾದಾಶ್ಚಾಪಸವ್ಯಾನಿ ಮಂಡಲಾನಿ ಪ್ರಚಕ್ರಮುಃ ।**
**ವವರ್ಷ ರುಧಿರಂ ದೇವೋ ಮೇಘಾಶ್ಚ ಖರನಿಸ್ವನಾಃ ॥ ೩೦**

**ಪ್ರಬಭೌ ನ ಚ ಸೂರ್ಯೋ ವೈ ಮಹೋಲ್ಕಾಶ್ಚಾಪತನ್ ಭುವಿ ।**
**ಚಕಂಪೇ ಜಗತೀ ಚೈವ ವವುರ್ವಾತಾಃ ಸುದಾರುಣಾಃ ॥ ೩೧**

**ಅಕ್ಷೋಭ್ಯಃ ಕ್ಷುಭಿತಶ್ಚೈವ ಸಮುದ್ರಃ ಸರಿತಾಂ ಪತಿಃ ।**
**ಅಥ ನಾಮಾಕರೋತ್ತಸ್ಯ ಪಿತಾಮಹಸಮಃ ಪಿತಾ ॥ ೩೨**

**ದಶಗ್ರೀವಃ ಪ್ರಸೂತೋಽಯಂ ದಶಗ್ರೀವೋ ಭವಿಷ್ಯತಿ ।**
**ತಸ್ಯ ತ್ವನಂತರಂ ಜಾತಃ ಕುಂಭಕರ್ಣೋ ಮಹಾಬಲಃ ॥ ೩೩**

**ಪ್ರಮಾಣಾದ್ಯಸ್ಯ ವಿಪುಲಂ ಪ್ರಮಾಣಂ ನೇಹ ವಿದ್ಯತೇ ।**
**ತತಃ ಶೂರ್ಪಣಖಾ ನಾಮ ಸಂಜಜ್ಞೇ ವಿಕೃತಾನನಾ ॥ ೩೪**

**ವಿಭೀಷಣಶ್ಚ ಧರ್ಮಾತ್ಮಾ ಕೈಕಸ್ಯಾಃ ಪಶ್ಚಿಮಃ ಸುತಃ ।**
**ತಸ್ಮಿನ್ ಜಾತೇ ಮಹಾಸತ್ತ್ವೇ ಪುಷ್ಪವರ್ಷಂ ಪಪಾತ ಹ ॥ ೩೫**

---

ಆಗಿದ್ದನು ಕೆಂಪಾದ ತುಟಿಗಳು, ಇಪ್ಪತ್ತು ಭುಜಗಳು, ದೊಡ್ಡಬಾಯಿ, ಕೆಂಗೂದಲು ಅವನು ಹುಟ್ಟಿದಾಗ ನರಿಗಳು ಬೆಂಕಿಯನ್ನುಗುಳಿದವು ಮಾಂಸಾಹಾರಿಗಳಾದ ಪಕ್ಷಿಗಳು ಅಪಸವ್ಯವಾಗಿ ಸುತ್ತಿದವು ರಕ್ತದ ಮಳೆ ಸುರಿಯಿತು ಮೋಡಗಳು ಕರ್ಕಶವಾಗಿ ಗುಡುಗಿದವು (೨೭-೩೦) ಸೂರ್ಯನು ಮಂಕಾದನು ಉಲ್ಕೆಗಳು ಬಿದ್ದವು. ಭೂಮಿ ನಡುಗಿತು ಬಿರುಗಾಳಿ ಭರ್ರೆಂದು ಬೀಸಿತು ಅಕ್ಷೋಭ್ಯವಾದ ಸಮುದ್ರವು ಉಲ್ಲೋಲ ಕಲ್ಲೋಲವಾಯಿತು ಅನಂತರ ಬ್ರಹ್ಮದೇವನಿಗೆ ಸಮಾನನಾದ ವಿಶ್ರವಸ್ಸು ತನ್ನ ಮಗನಿಗೆ “ ಈತನು ದಶಕಂಠನಾಗಿ ಜನಿಸಿರುವುದರಿಂದ ದಶಕಂಠನೆಂಬ ಹೆಸರಾಗಲಿ ” ಎಂದು ನಾಮಕರಣಮಾಡಿದನು ಆಮೇಲೆ ಬಲಾಢ್ಯನಾದ ಕುಂಭಕರ್ಣನು ಹುಟ್ಟಿದನು (೩೧-೩೩) ಆತನ ದೇಹಪ್ರಮಾಣವು ಅತಿ ವಿಪುಲವಾದುದು ಅವನಿಗಿಂತ ದೊಡ್ಡ ದೇಹದವನು ಈ ಜಗತ್ತಿನಲ್ಲಿಲ್ಲ! ಆಮೇಲೆ ಕುರೂಪಿಯಾದ ಶೂರ್ಪಣಖೆ ಹುಟ್ಟಿದಳು ವಿಭೀಷಣನು ಕೈಕಸಿಯ ಕಿರಿಯ ಮಗ ಧರ್ಮಾತ್ಮ ಆ ಸತ್ತ್ವಶಾಲಿಯು ಜನಿಸಿದಾಗ

ನಭಃಸ್ಥಾನೇ ದುಂದುಭಯೋ ದೇವಾನಾಂ ಪ್ರಾಣದಂಸ್ತದಾ ।
ವಾಕ್ಯಂ ಚೈವಾಂತರಿಕ್ಷೇ ಚ ಸಾಧು ಸಾಧ್ವಿತಿ ತತ್ತಥಾ ॥ ೩೬

ತೌ ತು ತತ್ರ ಮಹಾರಣ್ಯೇ ವವೃಧಾತೇ ಮಹೌಜಸೌ ।
ತೇಷಾಂ ಕ್ರೂರೋ ದಶಗ್ರೀವೋ ಲೋಕೋದ್ವೇಗಕರೋಽಭವತ್

ಕುಂಭಕರ್ಣಃ ಪ್ರಮತ್ತಸ್ತು ಮಹರ್ಷೀನ್ ಧರ್ಮವತ್ಸಲಾನ್ ।
ತ್ರೈಲೋಕ್ಯಂ ಭಕ್ಷಯನ್ನಿತ್ಯಾಸಂತುಷ್ಟೋ ವಿಚಚಾರ ಹ ॥ ೩೮

ವಿಭೀಷಣಸ್ತು ಧರ್ಮಾತ್ಮಾ ನಿತ್ಯಂ ಧರ್ಮೇ ವ್ಯವಸ್ಥಿತಃ ।
ಸ್ವಾಧ್ಯಾಯನಿಯತಾಹಾರ ಉವಾಸ ವಿಜಿತೇಂದ್ರಿಯಃ ॥ ೩೯

ಅಥ ವೈಶ್ರವಣೋ ದೇವಸ್ತತ್ರ ಕಾಲೇನ ಕೇನಚಿತ್ ।
ಆಗತಃ ಪಿತರಂ ದ್ರಷ್ಟುಂ ಪುಷ್ಪಕೇಣ ಧನೇಶ್ವರಃ ॥ ೪೦

ತಂ ದೃಷ್ಟ್ವಾ ಕೈಕಸೀ ತತ್ರ ಜ್ವಲಂತಮಿವ ತೇಜಸಾ ।
ಆಗಮ್ಯ ರಾಕ್ಷಸೀ ತತ್ರ ದಶಗ್ರೀವಮುವಾಚ ಹ ॥ ೪೧

---

ಪುಷ್ಪವೃಷ್ಟಿಯಾಯಿತು ಗಗನದಲ್ಲಿ ದೇವದುಂದುಭಿಗಳು ಮೊಳಗಿದವು ಅಂತರಿಕ್ಷದಲ್ಲಿ "ಒಳ್ಳೆಯದಾಯಿತು ಸಾಧು ಸಾಧು!" ಎಂಬ ನುಡಿ ಕೇಳಿಸಿತು (೩೪-೩೬) ರಾಘವ, ವಿಶ್ರವಸ್ಸಿನ ತಪೋವನದಲ್ಲಿ ದಶಕಂಠ ಕುಂಭಕರ್ಣರು ಬಲಸಂಪನ್ನರಾಗಿ ಬೆಳೆದರು ಅವರಲ್ಲಿ ದಶಗ್ರೀವನು ಕ್ರೂರನಾಗಿ ಜನರಿಗೆ ಉದ್ವೇಗವನ್ನುಂಟುಮಾಡುತ್ತಿದ್ದನು ತಾಮಸ ಸ್ವಭಾವ ದವನಾದ ಕುಂಭಕರ್ಣನು ಧರ್ಮವತ್ಸಲರಾದ ಋಷಿಗಳನ್ನು ತಿಂದುಬಿಡು ತ್ತಿದ್ದನು! ಮೂರು ಲೋಕವನ್ನು ತಿಂದರೂ ಅವನಿಗೆ ತೃಪ್ತಿಯಿಲ್ಲ ಯಾವಾಗಲೂ 'ಹಸಿವು ಹಸಿವು' ಎನ್ನುತ್ತ ಪರದಾಡುತ್ತಿದ್ದನು! (೩೭-೩೮) ವಿಭೀಷಣನು ಮಾತ್ರ ಧರ್ಮಾತ್ಮನಾಗಿ ಸದಾ ಧರ್ಮಮಾರ್ಗದಲ್ಲಿ ನಿಷ್ಠೆ ಯಿಂದಿದ್ದನು ವೇದಾಧ್ಯಯನಮಾಡುತ್ತ ಮಿತಾಹಾರಿಯೂ ಜಿತೇಂದ್ರಿ ಯನೂ ಆಗಿದ್ದನು ಶ್ರೀರಾಮ, ಹೀಗಿರಲು ಒಂದು ಸಲ ವೈಶ್ರವಣನು ತನ್ನ ತಂದೆಯನ್ನು ಸಂದರ್ಶಿಸುವುದಕ್ಕಾಗಿ ಪುಷ್ಪಕ ವಿಮಾನವನ್ನೇರಿ ಆ ತಪೋ ವನಕ್ಕೆ ಬಂದನು (೩೯-೪೦) ತೇಜಸ್ವಿಯಾದ ಕುಬೇರನನ್ನು ಕಂಡು

ಪುತ್ರ ವೈಶ್ರವಣಂ ಪಶ್ಯ ಭ್ರಾತರಂ ತೇಜಸಾ ವೃತಮ್ ।
ಭ್ರಾತೃಭಾವೇ ಸಮೇ ಚಾಪಿ ಪಶ್ಯಾತ್ಮಾನಂ ತ್ವಮೀದೃಶಮ್ ॥ ४೨

ದಶಗ್ರೀವ ತಥಾ ಯತ್ನಂ ಕುರುಷ್ವಾಮಿತವಿಕ್ರಮ ।
ಯಥಾ ತ್ವಮಸಿ ಮೇ ಪುತ್ರ ಭವ ವೈಶ್ರವಣೋಪಮಃ ॥ ४೩

ಮಾತುಸ್ತದ್ವಚನಂ ಶ್ರುತ್ವಾ ದಶಗ್ರೀವಃ ಪ್ರತಾಪವಾನ್ ।
ಅಮರ್ಷಮತುಲಂ ಲೇಭೇ ಪ್ರತಿಜ್ಞಾಂ ಚಾಕರೋತ್ತದಾ ॥ ४४

ಸತ್ಯಂ ತೇ ಪ್ರತಿಜಾನಾಮಿ ಭ್ರಾತೃತುಲ್ಯೋಽಧಿಕೋಽಪಿ ವಾ ।
ಭವಿಷ್ಯಾಮ್ಯೋಜಸಾ ಚೈವ ಸಂತಾಪಂ ತ್ಯಜ ಹೃದ್ಗತಮ್ ॥ ४೫

ತತಸ್ತೇನೈವ ಕೋಪೇನ ದಶಗ್ರೀವಃ ಸಹಾನುಜಃ ।
ಚಿಕೀರ್ಷುರ್ದುಷ್ಕರಂ ಕರ್ಮ ತಪಸೇ ಧೃತಮಾನಸಃ ॥ ४೬

ಪ್ರಾಪ್ಸ್ಯಾಮಿ ತಪಸಾ ಕಾಮಮಿತಿ ಕೃತ್ವಾಧ್ಯವಸ್ಯ ಚ ।
ಆಗಚ್ಛದಾತ್ಮಸಿದ್ಧ್ಯರ್ಥಂ ಗೋಕರ್ಣಸ್ಯಾಶ್ರಮಂ ಶುಭಮ್ ॥ ४೭

---

ರಾಕ್ಷಸಪುತ್ರಿಯಾದ ಕೈಕಸಿಯು ದಶಗ್ರೀವನನ್ನು ಕರೆದು "ವತ್ಸ, ಆ ಕುಬೇರನನ್ನು ನೋಡು—ಎಷ್ಟು ತೇಜಸ್ವಿಯಾಗಿದ್ದಾನೆ! ಆತನು ನಿನಗೆ ಅಣ್ಣನಾಗಬೇಕು. ನೀವು ಒಬ್ಬ ತಂದೆಯ ಮಕ್ಕಳಾಗಿ ಅಣ್ಣತಮ್ಮಂದಿರಾಗಿದ್ದರೂ ನಿನ್ನ ಸ್ಥಿತಿ ಹೇಗಿದೆ, ನೋಡಿಕೊ! (४೧-४೨) ದಶಗ್ರೀವ, ಮಹಾಸಾಹಸಿಯಾದ ನೀನು ಪ್ರಯತ್ನಮಾಡಿ ಕುಬೇರನಿಗೆ ಸಮಾನನಾಗು. ನೀನು ನನ್ನ ಮಗನಾದರೆ, ಈ ಕಾರ್ಯವನ್ನು ಸಾಧಿಸು!" ಎಂದು ಹೇಳಿದಳು. ಮಾತೆಯ ಮಾತನ್ನು ಕೇಳಿ ಪ್ರತಾಪಶಾಲಿಯಾದ ದಶಗ್ರೀವನಿಗೆ ಸಹನೆ ತಪ್ಪಿತು. ಅವನು ಅಸೂಯಾತಿರೇಕದಿಂದ ಹೀಗೆ ಪ್ರತಿಜ್ಞೆಮಾಡಿದನು. (४೩-४४) "ಅಮ್ಮ, ಇದೋ ಶಪಥಮಾಡುವೆನು—ವೈಭವದಲ್ಲಿ ಕುಬೇರನಿಗೆ ಸದೃಶನು ಮಾತ್ರವೇ ಅಲ್ಲ, ಅವನಿಗಿಂತ ಅಧಿಕನಾಗುವೆನು! ನಿನ್ನ ಮನೋವ್ಯಥೆಯನ್ನು ತ್ಯಜಿಸು" ಹೀಗೆ ನುಡಿದು, ದುಷ್ಕರವಾದ ಕಾರ್ಯವನ್ನು ತಪಸ್ಸಿನಿಂದಲೇ ಸಾಧಿಸಬೇಕೆಂದು ದೃಢವಾಗಿ ನಿಶ್ಚಯಿಸಿ, ಆ ದಶಗ್ರೀವನು ತನ್ನ ಸೋದರರೊಡನೆ ಹೊರಟು, ಇಷ್ಟಸಿದ್ಧಿಗಾಗಿ ಗೋಕರ್ಣಕ್ಷೇತ್ರದ

ಸ ರಾಕ್ಷಸಸ್ತತ್ರ ಸಹಾನುಜಸ್ತದಾ
ತಪಶ್ಚಕಾರಾತುಲಮುಗ್ರವಿಕ್ರಮಃ ।
ಅತೋಷಯಚ್ಚಾಪಿ ಪಿತಾಮಹಂ ವಿಭುಂ
ದದೌ ಸ ತುಷ್ಟಶ್ಚ ವರಾನ್ ಜಯಾವಹಾನ್ ॥ ೪೮

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ನವಮಃ ಸರ್ಗಃ



ಪವಿತ್ರಾಶ್ರಮಕ್ಕೆ ಆಗಮಿಸಿದನು (೪೫-೪೭) ಉಗ್ರವಾದ ನಿಲುವನ್ನು ತಳೆದ ಆ ರಾಕ್ಷಸನು ಸಹೋದರರೊಡನೆ ಕಠೋರವಾದ ತಪಸ್ಸನ್ನಾಚರಿಸಿ ಬ್ರಹ್ಮದೇವನನ್ನು ಮೆಚ್ಚಿಸಿದನು ರಾಘವ, ಪ್ರಸನ್ನನಾದ ಪಿತಾಮಹನು ಅವರಿಗೆ ಉತ್ತಮವಾದ ವರಗಳನ್ನು ಅನುಗ್ರಹಿಸಿದನು" ಎಂದು ಅಗಸ್ತ್ಯಮುನಿಗಳು ಹೇಳಿದರು (೪೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಒಂಬತ್ತನೆಯ ಸರ್ಗ



## ದಶಮಃ ಸರ್ಗಃ

### ರಾವಣಾದಿವರದಾನಮ್

ಅಥಾಬ್ರವೀನ್ಮುನಿಂ ರಾಮಃ ಕಥಂ ತೇ ಭ್ರಾತರೋ ವನೇ ।
ಕೀದೃಶಂ ತು ತದಾ ಬ್ರಹ್ಮಂಸ್ತಪಸ್ತೇಪುರ್ಮಹಾಬಲಾಃ ॥ ೧
ಅಗಸ್ತ್ಯಸ್ತ್ವಬ್ರವೀತ್ತತ್ರ ರಾಮಂ ಸುಪ್ರೀತಮಾನಸಮ್ ।
ತಾಂಸ್ತಾನ್ ಧರ್ಮವಿಧೀಂಸ್ತತ್ರ ಭ್ರಾತರಸ್ತೇ ಸಮಾವಿಶನ್ ॥ ೨
ಕುಂಭಕರ್ಣಸ್ತತೋ ಯತ್ತೋ ನಿತ್ಯಂ ಧರ್ಮಪಥೇ ಸ್ಥಿತಃ ।
ತತಾಪ ಗ್ರೀಷ್ಮಕಾಲೇ ತು ಪಂಚಾಗ್ನೀನ್ ಪರಿತಃ ಸ್ಥಿತಃ ॥ ೩
ಮೇಘಾಂಬುಸಿಕ್ತೋ ವರ್ಷಾಸು ವೀರಾಸನಮಸೇವತ ।
ನಿತ್ಯಂ ಚ ಶಿಶಿರೇ ಕಾಲೇ ಜಲಮಧ್ಯಪ್ರತಿಶ್ರಯಃ ॥ ೪
ಏವಂ ವರ್ಷಸಹಸ್ರಾಣಿ ದಶ ತಸ್ಯಾತಿಚಕ್ರಮುಃ ।
ಧರ್ಮೇ ಪ್ರಯತಮಾನಸ್ಯ ಸತ್ಪಥೇ ನಿಷ್ಠಿತಸ್ಯ ಚ ॥ ೫

### ಸರ್ಗ ೧೦

ಬ್ರಹ್ಮನು ದಶಗ್ರೀವ, ಕುಂಭಕರ್ಣ ಮತ್ತು ವಿಭೀಷಣರಿಗೆ ಯಾವ ವರ
ಗಳನ್ನು ಕೊಟ್ಟನೆಂಬುದನ್ನು ಅಗಸ್ತ್ಯರು ವಿವರಿಸುವುದು.

ಆಗ ಶ್ರೀರಾಮನು ಅಗಸ್ತ್ಯರನ್ನು ಕುರಿತು "ಮಹರ್ಷಿಗಳೆ, ದಶಗ್ರೀವಾದಿ ಸೋದರರು ವನದಲ್ಲಿ ತಪಸ್ಸು ಮಾಡಿದ ಬಗೆ ಯಾವುದು ?" ಎಂದು ಕೇಳಿದನು ಹೀಗೆ ಉತ್ಸಾಹದಿಂದ ಪ್ರಶ್ನೆ ಮಾಡುತ್ತಿದ್ದ ಶ್ರೀರಾಮನಿಗೆ ಅಗಸ್ತ್ಯರು ಹೇಳಿದರು : "ರಾಘವ, ಆ ಸೋದರರು ಬೇರೆ ಬೇರೆ ತಪೋವಿಧಾನಗಳಲ್ಲಿ ಉದ್ಯುಕ್ತರಾದರು (೧-೨) ಕುಂಭಕರ್ಣನು ತಪೋನಿರತನಾಗಿ ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ನಿಲ್ಲುತ್ತಿದ್ದನು ವರ್ಷಾಕಾಲದಲ್ಲಿ ಮಳೆ ನೀರಿನಲ್ಲಿ ನೆನೆಯುತ್ತ ವೀರಾಸನವನ್ನು ಅವಲಂಬಿಸುತ್ತಲೂ ಚಳಿಗಾಲದಲ್ಲಿ ಜಲಮಧ್ಯದಲ್ಲಿ ನಿಲ್ಲುತ್ತಲೂ ತಪಸ್ಸನ್ನಾಚರಿಸಿದನು (೩-೪) ಹೀಗೆ ಕುಂಭಕರ್ಣನು ತಪೋನಿರತನಾಗಿರಲು, ಹತ್ತು ಸಾವಿರ ವರ್ಷಗಳು ಕಳೆದವು

**ವಿಭೀಷಣಸ್ತು ಧರ್ಮಾತ್ಮಾ ನಿತ್ಯಂ ಧರ್ಮಪರಃ ಶುಚಿಃ ।**
**ಪಂಚವರ್ಷಸಹಸ್ರಾಣಿ ಪಾದೇನೈಕೇನ ತಸ್ಥಿವಾನ್ ॥ ೬**

**ಸಮಾಪ್ತೇ ನಿಯಮೇ ತಸ್ಯ ನನೃತುಶ್ಚಾಪ್ಸರೋಗಣಾಃ ।**
**ಪಪಾತ ಪುಷ್ಪವರ್ಷಂ ಚ ಕ್ಷುಭಿತಾಶ್ಚಾಪಿ ದೇವತಾಃ ॥ ೭**

**ಪಂಚ ವರ್ಷಸಹಸ್ರಾಣಿ ಸೂರ್ಯಂ ಚೈವಾನ್ವವರ್ತತ ।**
**ತಸ್ಥೌ ಚೋರ್ಧ್ವಶಿರೋಬಾಹುಃ ಸ್ವಾಧ್ಯಾಯಧೃತಮಾನಸಃ ॥ ೮**

**ಏವಂ ವಿಭೀಷಣಸ್ಯಾಪಿ ಸ್ವರ್ಗಸ್ಥಸ್ಯೇವ ನಂದನೇ ।**
**ದಶ ವರ್ಷಸಹಸ್ರಾಣಿ ಗತಾನಿ ನಿಯತಾತ್ಮನಃ ॥ ೯**

**ದಶ ವರ್ಷಸಹಸ್ರಾಣಿ ನಿರಾಹಾರೋ ದಶಾನನಃ ।**
**ಪೂರ್ಣೇ ವರ್ಷಸಹಸ್ರೇ ತು ಶಿರಶ್ಚಾಗ್ನೌ ಜುಹಾವ ಸಃ ॥ ೧೦**

**ಏವಂ ವರ್ಷಸಹಸ್ರಾಣಿ ನವ ತಸ್ಯಾತಿಚಕ್ರಮುಃ ।**
**ಶಿರಾಂಸಿ ನವ ಚಾಪ್ಯಸ್ಯ ಪ್ರವಿಷ್ಟಾನಿ ಹುತಾಶನಮ್ ॥ ೧೧**

---

ಧರ್ಮಾತ್ಮನಾದ ವಿಭೀಷಣನು ಶುಚಿಯಾಗಿ ಏಕಪಾದದಲ್ಲಿ ನಿಂತು, ಐದು ಸಾವಿರ ವರ್ಷಗಳವರೆಗೆ ತಪಸ್ಸನ್ನಾಚರಿಸಿದನು (೫-೬) ಈ ರೀತಿಯಲ್ಲಿ ವಿಭೀಷಣನ ತಪೋನಿಯಮದ ಒಂದು ಘಟ್ಟವು ಕಳೆಯಲು, ಅಪ್ಸರೆಯರು ಆನಂದದಿಂದ ನರ್ತಿಸಿದರು ಪುಷ್ಪವೃಷ್ಟಿಯಾಯಿತು. ದೇವತೆಗಳು ಏನಾಗುವುದೋ ಎಂದು ತಳಮಳಿಸಿದರು. ಆಮೇಲೆ ವಿಭೀಷಣನು ಮುಖವನ್ನೆತ್ತಿ ಸೂರ್ಯನನ್ನೇ ನೋಡುತ್ತ ಊರ್ಧ್ವಬಾಹುವಾಗಿ ವೇದಗಳನ್ನು ಪಠಿಸುತ್ತ, ಮತ್ತೆ ಐದುಸಾವಿರ ವರ್ಷಗಳವರೆಗೆ ತಪೋಮಗ್ನನಾದನು (೭-೮). ನಿಯತಾತ್ಮನಾದ ವಿಭೀಷಣನು ಸ್ವರ್ಗದ ನಂದನವನದಲ್ಲಿರುವನೋ ಎಂಬಂತೆ ಸಂತೃಪ್ತಿಯಿಂದ ತಪಸ್ಸನ್ನಾಚರಿಸುತ್ತಿದ್ದನು ಹೀಗಿರಲು ಅವನಿಗೂ ಹತ್ತುಸಾವಿರ ವರ್ಷಗಳು ಕಳೆದವು ದಶಗ್ರೀವನು ನಿರಾಹಾರನಾಗಿಯೇ ದಶಸಹಸ್ರ ವರ್ಷಪರ್ಯಂತವಾಗಿ ತಪೋಮಗ್ನನಾಗಿದ್ದನು. ಮೊದಲಿನ ಒಂದು ಸಾವಿರ ವತ್ಸರಗಳು ಕಳೆದಾಗ, ಆತನು ತನ್ನ ಒಂದು ಶಿರಸ್ಸನ್ನು ಕತ್ತರಿಸಿ ಅಗ್ನಿಯಲ್ಲಿ ಹೋಮಮಾಡಿದನು! (೯-೧೦) ಶ್ರೀರಾಮ, ಏನು ಹೇಳಲಿ! ಇದೇ ರೀತಿಯಲ್ಲಿ ಒಂದು ಸಾವಿರ ವರ್ಷದಂತೆ ಒಂಬತ್ತು ಸಾವಿರ

ಅಥ ವರ್ಷಸಹಸ್ರೇ ತು ದಶಮೇ ದಶಮಂ ಶಿರಃ ।
ಛೇತ್ತುಕಾಮೇ ದಶಗ್ರೀವೇ ಪ್ರಾಪ್ತಸ್ತತ್ರ ಪಿತಾಮಹಃ ॥ ೧೨

ಪಿತಾಮಹಸ್ತು ಸುಪ್ರೀತಃ ಸಾರ್ಧಂ ದೈವೈರುಪಸ್ಥಿತಃ ।
ತವ ತಾವದ್ದಶಗ್ರೀವ ಪ್ರೀತೋಽಸ್ಮೀತ್ಯಭ್ಯಭಾಷತ ॥ ೧೩

ಶೀಘ್ರಂ ವರಯ ಧರ್ಮಜ್ಞ ವರೋ ಯಸ್ತೇಽಭಿಕಾಂಕ್ಷಿತಃ ।
ತಂ ತೇ ಕಾಮಂ ಕರೋಮ್ಯದ್ಯ ನ ವೃಥಾ ತೇ ಪರಿಶ್ರಮಃ ॥ ೧೪

ಅಥಾಬ್ರವೀದ್ದಶಗ್ರೀವಃ ಪ್ರಹೃಷ್ಟೇನಾಂತರಾತ್ಮನಾ ।
ಪ್ರಣಮ್ಯ ಶಿರಸಾ ದೇವಂ ಹರ್ಷಗದ್ಗದಯಾ ಗಿರಾ ॥ ೧೫

ಭಗವನ್ ಪ್ರಾಣಿನಾಂ ನಿತ್ಯಂ ನಾನ್ಯತ್ರ ಮರಣಾದ್ಭಯಮ್ ।
ನಾಸ್ತಿ ಮೃತ್ಯುಸಮಃ ಶತ್ರುರಮರತ್ವಮಹಂ ವೃಣೇ ॥ ೧೬

ಏವಮುಕ್ತಸ್ತದಾ ಬ್ರಹ್ಮಾ ದಶಗ್ರೀವಮುವಾಚ ಹ ।
ನಾಸ್ತಿ ಸರ್ವಾಮರತ್ವಂ ತೇ ವರಮನ್ಯಂ ವೃಣೀಷ್ವ ಮೇ ॥ ೧೭

---

ವರ್ಷಗಳು. ಕಳೆದವು ರಾವಣನ ಒಂಬತ್ತು ಶಿರಸ್ಸುಗಳೂ ಅಗ್ನಿಯಲ್ಲಿ ಹುತವಾದವು! ಹತ್ತನೆಯ ಸಾವಿರ ಸಂವತ್ಸರಗಳೂ ಕಳೆದವು ರಾವಣನು ಹತ್ತನೆಯ ಶಿರಸ್ಸನ್ನೂ ಹೋಮಮಾಡುವುದಕ್ಕಾಗಿ ಕತ್ತರಿಸಲು ಉದ್ಯುಕ್ತನಾದನು! ಅಷ್ಟರಲ್ಲಿ ಪಿತಾಮಹನು ದೇವತೆಗಳೊಡನೆ ಪ್ರತ್ಯಕ್ಷನಾದನು (೧೧-೧೨) ಆತನು ಪ್ರೀತಿಯಿಂದ "ದಶಗ್ರೀವ, ನಿನ್ನ ತಪಸ್ಸಿಗೆ ಮೆಚ್ಚಿದೆನು ನಿನ್ನ ಮನೋಭೀಷ್ಟವೇನು? ಕೇಳಿಕೊ ಅದನ್ನು ಸಲ್ಲಿಸುವೆನು ನಿನ್ನ ಈ ಪರಿಶ್ರಮವು ವ್ಯರ್ಥವಾಗದು" ಎಂದು ಹೇಳಿದನು (೧೩-೧೪) ಆಗ ರಾವಣನು ಸಂತುಷ್ಟಚಿತ್ತನಾಗಿ ಬ್ರಹ್ಮದೇವನಿಗೆ ತಲೆಬಾಗಿ ವಂದಿಸಿ ಹರ್ಷದಿಂದ ಗದ್ಗದಿಸುತ್ತ "ಭಗವನ್, ಪ್ರಾಣಿಗಳಿಗೆ ಮರಣಕ್ಕಿಂತ ಹೆಚ್ಚಿನ ಭಯವಿಲ್ಲ ಮೃತ್ಯುವಿಗೆ ಸಮಾನವಾದ ಶತ್ರು ಇನ್ನೊಂದಿಲ್ಲ ಆದ್ದರಿಂದ ನಾನು ಅಮರನಾಗಬೇಕೆಂದು ವರವನ್ನು ಕೇಳಿಕೊಳ್ಳುತ್ತೇನೆ!" ಎಂದನು (೧೫-೧೬) ಬ್ರಹ್ಮನು "ದಶಗ್ರೀವ, 'ಯಾರಿಂದಲೂ ಮರಣವಾಗಬಾರದು'

ಏವಮುಕ್ತೇ ತದಾ ರಾಮ ಬ್ರಹ್ಮಣಾ ಲೋಕಕರ್ತೃಣಾ ।
ದಶಗ್ರೀವ ಉವಾಚೇದಂ ಕೃತಾಂಜಲಿರಥಾಗ್ರತಃ ॥ ೧೮

ಸುಪರ್ಣನಾಗಯಕ್ಷಾಣಾಂ ದೈತ್ಯದಾನವರಕ್ಷಸಾಮ್ ।
ಅವಧ್ಯೋಽಹಂ ಪ್ರಜಾಧ್ಯಕ್ಷ ದೇವತಾನಾಂ ಚ ಶಾಶ್ವತ ॥ ೧೯

ನ ಹಿ ಚಿಂತಾ ಮಮಾನ್ಯೇಷು ಪ್ರಾಣಿಷ್ವಮರಪೂಜಿತ ।
ತೃಣಭೂತಾ ಹಿ ತೇ ಮನ್ಯೇ ಪ್ರಾಣಿನೋ ಮಾನುಷಾದಯಃ ॥ ೨೦

ಏವಮುಕ್ತಸ್ತು ಧರ್ಮಾತ್ಮಾ ದಶಗ್ರೀವೇಣ ರಕ್ಷಸಾ ।
ಉವಾಚ ವಚನಂ ದೇವಃ ಸಹ ದೇವೈಃ ಪಿತಾಮಹಃ ॥ ೨೧

ಭವಿಷ್ಯತ್ಯೇವಮೇತತ್ತೇ ವಚೋ ರಾಕ್ಷಸಪುಂಗವ ।
ಏವಮುಕ್ತ್ವಾ ತು ತಂ ರಾಮ ದಶಗ್ರೀವಂ ಪಿತಾಮಹಃ ॥ ೨೨

ಶೃಣು ಚಾಪಿ ವರೋ ಭೂಯಃ ಪ್ರೀತಸ್ಯೇಹ ಶುಭೋ ಮಮ ।
ಹುತಾನಿ ಯಾನಿ ಶೀರ್ಷಾಣಿ ಪೂರ್ವಮಗ್ನೌ ತ್ವಯಾನಘ ॥ ೨೩

ಪುನಸ್ತಾನಿ ಭವಿಷ್ಯಂತಿ ತಥೈವ ತವ ರಾಕ್ಷಸ ।
ವಿತರಾಮೀಹ ತೇ ಸೌಮ್ಯ ವರಂ ಚಾನ್ಯಂ ದುರಾಸದಮ್ ॥ ೨೪

---

ಎಂಬ ವರವು ನಿನಗೆ ಲಭಿಸದು. ಬೇರೊಂದು ವರವನ್ನು ಬೇಡಿಕೊ" ಎಂದು ತಿಳಿಸಿದನು ಸೃಷ್ಟಿಕರ್ತನು ಹೀಗೆನ್ನಲು ರಾವಣನು ಕೃತಾಂಜಲಿಯಾಗಿ "ಸ್ವಾಮಿ–ಪ್ರಜೇಶ್ವರ, ಹಾಗಾದರೆ ಗರುಡನಾಗಯಕ್ಷರಿಂದಲೂ ದೈತ್ಯದಾನವ ರಾಕ್ಷಸರಿಂದಲೂ ದೇವತೆಗಳಿಂದಲೂ ನನಗೆ ಮರಣವಾಗದಂತೆ ಅನುಗ್ರಹಿಸು (೧೭–೧೯) ಇತರ ಯಾವ ವಿಷಯವಾಗಿಯೂ ನನಗೆ ಚಿಂತೆ ಇಲ್ಲ ಮನುಷ್ಯಾದಿಗಳು ಹುಲ್ಲುಕಡ್ಡಿಗೆ ಸಮಾನ!" ಎಂದನು ಆಗ ದೇವತೆಗಳೊಡನೆ ನಿಂತಿದ್ದ ಬ್ರಹ್ಮನು "ಒಳ್ಳೆಯದು ರಾಕ್ಷಸಪುಂಗವ, ಹಾಗೆಯೇ ಆಗಲಿ (೨೦–೨೨). ನಿನ್ನ ತಪಸ್ಸಿಗೆ ಸಂಪ್ರೀತನಾಗಿದ್ದೇನೆ ದುರ್ಲಭವಾದ ಇನ್ನೊಂದು ವರವನ್ನು ಕೊಡುವೆನು, ಕೇಳು. ಸೌಮ್ಯ, ಅಗ್ನಿಯಲ್ಲಿ ನೀನು ಹೋಮ

ಛಂದತಸ್ತವ ರೂಪಂ ಚ ಮನಸಾ ಯದ್ಯಥೇಪ್ಸಿತಮ್ ।
ಭವಿಷ್ಯತಿ ನ ಸಂದೇಹೋ ಮದ್ವರಾತ್ತವ ರಾಕ್ಷಸ ॥ ೨೫

ಏವಂ ಪಿತಾಮಹೋಕ್ತಸ್ಯ ದಶಗ್ರೀವಸ್ಯ ರಕ್ಷಸಃ ।
ಅಗ್ನೌ ಹುತಾನಿ ಶೀರ್ಷಾಣಿ ಪುನಸ್ತಾನ್ಯುದಿತಾನಿ ವೈ ॥ ೨೬

ಏವಮುಕ್ತ್ವಾ ತು ತಂ ರಾಮ ದಶಗ್ರೀವಂ ಪಿತಾಮಹಃ ।
ವಿಭೀಷಣಮಥೋವಾಚ ವಾಕ್ಯಂ ಲೋಕಪಿತಾಮಹಃ ॥ ೨೭

ವಿಭೀಷಣ ತ್ವಯಾ ವತ್ಸ ಧರ್ಮಸಂಹಿತಬುದ್ಧಿನಾ ।
ಪರಿತುಷ್ಟೋಽಸ್ಮಿ ಧರ್ಮಾತ್ಮನ್ ವರಂ ವರಯ ಸುವ್ರತ ॥ ೨೮

ವಿಭೀಷಣಸ್ತು ಧರ್ಮಾತ್ಮಾ ವಚನಂ ಪ್ರಾಹ ಸಾಂಜಲಿಃ ।
ವೃತಃ ಸರ್ವಗುಣೈರ್ನಿತ್ಯಂ ಚಂದ್ರಮಾ ರಶ್ಮಿಭಿರ್ಯಥಾ ॥ ೨೯

ಭಗವನ್ ಕೃತಕೃತ್ಯೋಽಹಂ ಯನ್ಮೇ ಲೋಕಗುರುಃ ಸ್ವಯಮ್ ।
ಪ್ರೀತೇನ ಯದಿ ದಾತವ್ಯೋ ವರೋ ಮೇ ಶೃಣು ಸುವ್ರತ ॥ ೩೦

---

ಮಾಡಿದ ಒಂಬತ್ತು ಶಿರಸ್ಸುಗಳೂ ಮತ್ತೆ ಹುಟ್ಟಲಿ ಅಲ್ಲದೆ ನೀನು ಬಯಸಿದ ರೂಪವನ್ನು ಧರಿಸುವ ಶಕ್ತಿ ನಿನಗೆ ಬರಲಿ ನೀನು ಕಾಮರೂಪಿಯಾಗು" ಎಂದು ನುಡಿದನು (೨೩-೨೫) ರಾಘವ, ಪಿತಾಮಹನು ಹೀಗೆ ನುಡಿದೊಡನೆ, ಅಗ್ನಿಯಲ್ಲಿ ಹುತವಾದ ರಾವಣನ ಶಿರಸ್ಸುಗಳು ಮತ್ತೆ ಉದಯಿಸಿದವು! ಅನಂತರ ಲೋಕಪಿತಾಮಹನು ವಿಭೀಷಣನ ಬಳಿಗೆ ಹೋಗಿ, "ವತ್ಸ– ವಿಭೀಷಣ, ನಿನ್ನ ಧರ್ಮನಿಷ್ಠೆಯಿಂದ ಸಂತುಷ್ಟನಾಗಿದ್ದೇನೆ ಎಲೈ ಧರ್ಮಾತ್ಮ, ವರವನ್ನು ಕೇಳಿಕೊ" ಎಂದನು (೨೬-೨೮) ಚಂದ್ರನು ಶೀತಲ ಕಿರಣಗಳಿಂದ ಶೋಭಿಸುವಂತೆ, ವಿಭೀಷಣನು ಸದ್ಗುಣಗಳಿಂದ ಶೋಭಿಸತಕ್ಕವನು ಆ ಧರ್ಮಾತ್ಮನು ಕೈಮುಗಿದುಕೊಂಡು "ದೇವ, ಲೋಕೇಶ್ವರನಾದ ನೀನು ಪ್ರಸನ್ನನಾದರೆ ನಾನು ಧನ್ಯನು ನೀನು ಸಂಪ್ರೀತನಾಗಿ ವರವನ್ನು ಕೊಡುವುದಾದರೆ, ನಾನು ಕೇಳಿಕೊಳ್ಳುವ ವರ ವಿದು. ಏನೆಂದರೆ, ಎಂತಹ ವಿಪತ್ತಿಗೆ ಸಿಕ್ಕಿದರೂ ನನ್ನ ಬುದ್ಧಿಯು

ಪರಮಾಪದ್ಗತಸ್ಯಾಪಿ ಧರ್ಮೇ ಮಮ ಮತಿರ್ಭವೇತ್ ।
ಅಶಿಕ್ಷಿತಂ ಚ ಬ್ರಹ್ಮಾಸ್ತ್ರಂ ಭಗವನ್ ಪ್ರತಿಭಾತು ಮೇ ॥ ೩೧

ಯಾ ಯಾ ಮೇ ಜಾಯತೇ ಬುದ್ಧಿರ್ಯೇಷು
ಯೇಷ್ವಾಶ್ರಮೇಷು ಚ ।
ಸಾ ಸಾ ಭವತು ಧರ್ಮಿಷ್ಠಾ ತಂ ತು ಧರ್ಮಂ ಚ ಪಾಲಯೇ ॥

ಏಷ ಮೇ ಪರಮೋದಾರ ವರಃ ಪರಮಕೋ ಮತಃ ।
ನ ಹಿ ಧರ್ಮಾಭಿರಕ್ತಾನಾಂ ಲೋಕೇ ಕಿಂಚನ ದುರ್ಲಭಮ್ ॥ ೩೩

ಪುನಃ ಪ್ರಜಾಪತಿಃ ಪ್ರೀತೋ ವಿಭೀಷಣಮುವಾಚ ಹ ।
ಧರ್ಮಿಷ್ಠಸ್ತ್ವಂ ಯಥಾ ವತ್ಸ ತಥಾ ಚೈತದ್ಭವಿಷ್ಯತಿ ॥ ೩೪

ಯಸ್ಮಾದ್ರಾಕ್ಷಸಯೋನೌ ತೇ ಜಾತಸ್ಯಾಮಿತ್ರನಾಶನ ।
ನಾಧರ್ಮೇ ಜಾಯತೇ ಬುದ್ಧಿರಮರತ್ವಂ ದದಾಮಿ ತೇ ॥ ೩೫

ಇತ್ಯುಕ್ತ್ವಾ ಕುಂಭಕರ್ಣಾಯ ವರಂ ದಾತುಮುಪಸ್ಥಿತಮ್ ।
ಪ್ರಜಾಪತಿಂ ಸುರಾಃ ಸರ್ವೇ ವಾಕ್ಯಂ ಪ್ರಾಂಜಲಯೋಽಬ್ರುವನ್ ॥

---

ಧರ್ಮದಲ್ಲಿ ಸ್ಥಿರವಾಗಿರಲಿ ಭಗವನ್, ಬ್ರಹ್ಮಾಸ್ತ್ರಮಂತ್ರವು ಅನುಪದಿಷ್ಟವಾದರೂ ನನಗೆ ಸ್ಫುರಿಸಲಿ (೨೯-೩೧) ಬ್ರಹ್ಮಚರ್ಯವೇ ಮೊದಲಾದ ಯಾವ ಆಶ್ರಮದಲ್ಲಿ ನಾನಿರಲಿ, ಅಂತಹ ಆಶ್ರಮಧರ್ಮವನ್ನು ನಿಷ್ಠೆಯಿಂದ ಪಾಲಿಸುವಂತೆ ನನ್ನ ಬುದ್ಧಿ ದೃಢವಾಗಿರಲಿ (೩೨) ಹೇ ಕರುಣಾಳುವೆ, ಇದೇ ನಾನು ಬೇಡುವ ಉತ್ಕೃಷ್ಟವಾದ ವರ ಧರ್ಮಾಭಿರಕ್ತರಿಗೆ ಈ ಲೋಕದಲ್ಲಿ ದುರ್ಲಭವಾದದ್ದಾದರೂ ಏನಿದೆ ?" ಎಂದನು ಬ್ರಹ್ಮನಿಗೆ ಪರಮಾನಂದವಾಯಿತು "ವತ್ಸ-ವಿಭೀಷಣ, ನೀನು ಧರ್ಮಿಷ್ಠನಾಗಿದ್ದೀಯೆ. ನಿನ್ನ ಇಚ್ಛೆಯು ಕೈಗೂಡುವುದು (೩೩-೩೪). ರಾಕ್ಷಸಯೋನಿಯಲ್ಲಿ ಜನಿಸಿದ್ದರೂ, ಅಧರ್ಮದ ಕಡೆಗೆ ನಿನ್ನ ಬುದ್ಧಿ ಒಲಿಯಲಿಲ್ಲ ಆದ್ದರಿಂದ ನಿನಗೆ ಅಮರತ್ವವನ್ನು ಕೊಟ್ಟಿದ್ದೇನೆ ನೀನು ಚಿರಂಜೀವಿಯಾಗು" ಎಂದು ಹೇಳಿ, ಪಿತಾಮಹನು ಕುಂಭಕರ್ಣನಿದ್ದಲ್ಲಿಗೆ ಹೋದನು (೩೫) ಅವನು ಕುಂಭಕರ್ಣನಿಗೆ ವರವನ್ನು ಕೊಡಲು ಉದ್ಯುಕ್ತನಾದುದನ್ನು ನೋಡಿ, ಸಕಲ

**ನ ತಾವತ್ ಕುಂಭಕರ್ಣಾಯ ಪ್ರದಾತವ್ಯೋ ವರಸ್ತ್ವಯಾ ।**
**ಜಾನೀಷೇ ಹಿ ಯಥಾ ಲೋಕಾಂಸ್ತ್ರಾಸಯತ್ಯೇಷ ದುರ್ಮತಿಃ ॥**

**ನಂದನೇಽಪ್ಸರಸಃ ಸಪ್ತ ಮಹೇಂದ್ರಾನುಚರಾ ದಶ ।**
**ಅನೇನ ಭಕ್ಷಿತಾ ಬ್ರಹ್ಮನ್ನೃಷಯೋ ಮಾನುಷಾಸ್ತಥಾ ॥ ೩೮**

**ಅಲಬ್ಧವರಪೂರ್ವೇಣ ಯತ್ ಕೃತಂ ರಾಕ್ಷಸೇನ ತು ।**
**ತದೇಷ ವರಲಬ್ಧಃ ಸ್ಯಾದ್ಭಕ್ಷಯೇದ್ಭುವನತ್ರಯಮ್ ॥ ೩೯**

**ವರವ್ಯಾಜೇನ ಮೋಹೋಽಸ್ಮೈ ದೀಯತಾಮಮಿತಪ್ರಭ ।**
**ಲೋಕಾನಾಂ ಸ್ವಸ್ತಿ ಚೈವಂ ಸ್ಯಾದ್ಭವೇದಸ್ಯ ಚ ಸಂನತಿಃ ॥ ೪೦**

**ಏವಮುಕ್ತಃ ಸುರೈರ್ಬ್ರಹ್ಮಾಚಿಂತಯತ್ ಪದ್ಮಸಂಭವಃ ।**
**ಚಿಂತಿತಾ ಚೋಪತಸ್ಥೇಽಸ್ಯ ಪಾರ್ಶ್ವಂ ದೇವೀ ಸರಸ್ವತೀ ॥ ೪೧**

**ಪ್ರಾಂಜಲಿಃ ಸಾ ತು ಪಾರ್ಶ್ವಸ್ಥಾ ವಾಕ್ಯಂ ಪ್ರಾಹ ಸರಸ್ವತೀ ।**
**ಇಯಮಸ್ಮ್ಯಾಗತಾ ದೇವ ಕಿಂ ಕಾರ್ಯಂ ಕರವಾಣ್ಯಹಮ್ ॥ ೪೨**

---

ದೇವತೆಗಳೂ ಕೃತಾಂಜಲಿಗಳಾಗಿ ಬ್ರಹ್ಮನನ್ನು ಕುರಿತು "ಪಿತಾಮಹ, ಕುಂಭಕರ್ಣನಿಗೆ ವಿಶೇಷವಾದ ಯಾವ ವರವನ್ನೂ ಕೊಡಬಾರದು! ಈ ದುಷ್ಟನು ಸಮಸ್ತಪ್ರಜೆಗಳನ್ನೂ ತಲ್ಲಣಗೊಳಿಸುತ್ತಿದ್ದಾನೆಂಬುದು ನಿನಗೆ ತಿಳಿದೇ ಇದೆ (೩೬-೩೭) ಈತನು ನಂದನವನಕ್ಕೆ ಹೋಗಿ ಏಳು ಜನ ಅಪ್ಸರೆಯರನ್ನೂ ಇಂದ್ರನ ಹತ್ತು ಮಂದಿ ಸೇವಕರನ್ನೂ ತಿಂದುಬಿಟ್ಟಿದ್ದಾನೆ! ಇವನು ಭಕ್ಷಿಸಿರುವ ಋಷಿಗಳೂ ಮನುಷ್ಯರೂ ಎಷ್ಟು ಜನರೋ! ಬ್ರಹ್ಮದೇವ, ವರಬಲವಿಲ್ಲದೆಯೇ ಈ ರಾಕ್ಷಸನು ಇಷ್ಟು ಹಾವಳಿಯನ್ನು ನಡೆಸುತ್ತಿದ್ದಾನೆ ಇನ್ನು ವರವನ್ನು ಪಡೆದರೆ ಏನೇನು ಮಾಡುವನೋ! ಮೂರು ಲೋಕಗಳನ್ನೂ ನುಂಗಿ ನೊಣೆದುಬಿಟ್ಟಾನು! (೩೮-೩೯) ಸ್ವಾಮಿ, ವರದ ನೆಪದಲ್ಲಿ ಈತನಿಗೆ ಅಜ್ಞಾನದ ಮಬ್ಬು ಕವಿಯುವಂತೆ ಮಾಡು! ಹಾಗಾದರೆ ಮಾತ್ರ ಜನರಿಗೆ ಮಂಗಳವಾದೀತು ಈತನನ್ನೂ ಹಿಡಿತದಲ್ಲಿಟ್ಟುಕೊಂಡಂತೆ ಆದೀತು" ಎಂದು ಪ್ರಾರ್ಥಿಸಿದರು (೪೦) ಆಗ ಪದ್ಮಯೋನಿಯಾದ ಬ್ರಹ್ಮನು ಸರಸ್ವತೀದೇವಿಯನ್ನು ಸ್ಮರಿಸಿದನು ಒಡನೆಯೇ ಸರಸ್ವತಿಯು ಬ್ರಹ್ಮನ ಪಾರ್ಶ್ವದಲ್ಲಿ ಉಪಸ್ಥಿತಳಾಗಿ ಕೈಮುಗಿದುಕೊಂಡು

ಪ್ರಜಾಪತಿಸ್ತು ತಾಂ ಪ್ರಾಪ್ತಾಂ ಪ್ರಾಹ ವಾಕ್ಯಂ ಸರಸ್ವತೀಮ್ ।
ವಾಣಿ ತ್ವಂ ರಾಕ್ಷಸೇಂದ್ರಾಸ್ಯೇ ಭವ ಯಾ ದೇವತೇಪ್ಸಿತಾ ॥ ೪೩

ತಥೇತ್ಯುಕ್ತ್ವಾ ಪ್ರವಿಷ್ಟಾ ಸಾ ಪ್ರಜಾಪತಿರಥಾಬ್ರವೀತ್ ।
ಕುಂಭಕರ್ಣ ಮಹಾಬಾಹೋ ವರಂ ವರಯ ಯೋ ಮತಃ ॥ ೪೪

ಕುಂಭಕರ್ಣಸ್ತು ತದ್ವಾಕ್ಯಂ ಶ್ರುತ್ವಾ ವಚನಮಬ್ರವೀತ್ ।
ಸ್ವಪ್ತುಂ ವರ್ಷಾಣ್ಯನೇಕಾನಿ ದೇವದೇವ ಮಮೇಪ್ಸಿತಮ್ ॥ ೪೫

ಏವಮಸ್ತ್ವಿತಿ ತಂ ಚೋಕ್ತ್ವಾ ಪ್ರಾಯಾದ್ಬ್ರಹ್ಮಾ ಸುರೈಃ ಸಮಂ।
ದೇವೀ ಸರಸ್ವತೀ ಚೈವ ರಾಕ್ಷಸಂ ತಂ ಜಹೌ ಪುನಃ ॥ ೪೬

ಬ್ರಹ್ಮಣಾ ಸಹ ದೇವೇಷು ಗತೇಷು ಚ ನಭಃಸ್ಥಲಮ್ ।
ವಿಮುಕ್ತೋಽಸೌ ಸರಸ್ವತ್ಯಾ ಸ್ವಾಂ ಸಂಜ್ಞಾಂ ಚ ತತೋ ಗತಃ ॥

ಕುಂಭಕರ್ಣಸ್ತು ದುಷ್ಟಾತ್ಮಾ ಚಿಂತಯಾಮಾಸ ದುಃಖಿತಃ ।
ಈದೃಶಂ ಕಿಮಿದಂ ವಾಕ್ಯಂ ಮಮಾದ್ಯ ವದನಾಚ್ಚ್ಯುತಮ್ ॥ ೪೮

---

"ಸ್ವಾಮಿ, ಇದೋ ಬಂದಿರುವೆನು ಏನು ಮಾಡಲಿ? ಆಜ್ಞೆಯಾಗಬೇಕು" ಎಂದಳು ಬ್ರಹ್ಮನು ಸರಸ್ವತಿಯನ್ನು ನೋಡಿ "ವಾಗ್ದೇವಿ, ಈ ಕುಂಭಕರ್ಣನ ಬಾಯಲ್ಲಿ ಉಪಸ್ಥಿತಳಾಗಿ ದೇವತೆಗಳ ಇಷ್ಟದಂತೆ ನುಡಿಸು" ಎಂದು ತಿಳಿಸಿದನು (೪೧-೪೩) "ಅಪ್ಪಣೆ" ಎಂದು ನುಡಿದು ವಾಗ್ದೇವತೆಯು ಕುಂಭಕರ್ಣನ ಮುಖವನ್ನು ಪ್ರವೇಶಿಸಿದಳು ಆಮೇಲೆ ಬ್ರಹ್ಮನು "ಮಹಾಬಾಹು–ಕುಂಭಕರ್ಣ, ನಿನಗೆ ಇಷ್ಟವಾದ ವರವನ್ನು ಕೇಳಿಕೊ" ಎನ್ನಲಾಗಿ, ಕುಂಭಕರ್ಣನು "ದೇವದೇವ, ಬಹುಕಾಲದವರೆಗೆ ನಿದ್ರಿಸುತ್ತಿರುವುದು ನನಗೆ ಇಷ್ಟ!" ಎಂದನು (೪೪-೪೫) "ತಥಾಸ್ತು!" ಎಂದು ಹೇಳಿ ಬ್ರಹ್ಮನು ದೇವತೆಗಳೊಡನೆ ಹೊರಟುಹೋದನು ವಾಗ್ದೇವಿಯೂ ಕುಂಭಕರ್ಣನ ಬಾಯಿಂದ ನಿರ್ಗಮಿಸಿದಳು ಹೀಗೆ ಬ್ರಹ್ಮಾದಿಗಳು ಅಂತರ್ಹಿತರಾಗಿ ಸರಸ್ವತಿಯೂ ನಿರ್ಗಮಿಸಿದಮೇಲೆ, ಕುಂಭಕರ್ಣನಿಗೆ ವಿವೇಕೋದಯ ವಾಯಿತು! (೪೬-೪೭) ಆ ದುರುಳನು ವಿಷಣ್ಣನಾಗಿ "ಎಲಾ ಇದೇನು! ನ್ನ ಬಾಯಿಂದ ಇಂಥ ಮಾತು ಹೊರಟಿತೆ? ಇದು ಹೇಗೆ ಸಂಭವಿಸಿರ

**ಅಹಂ ವ್ಯಾಮೋಹಿತೋ ದೇವೈರಿತಿ ಮನ್ಯೇ ತದಾಗತೈಃ ।**
**ಏವಂ ಲಬ್ಧವರಾಃ ಸರ್ವೇ ಭ್ರಾತರೋ ದೀಪ್ತತೇಜಸಃ ॥ ೪೯**
**ಶ್ಲೇಷ್ಮಾತಕವನಂ ಗತ್ವಾ ತತ್ರ ತೇ ನ್ಯವಸನ್ ಸುಖಮ್ ॥**

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದಶಮಃ ಸರ್ಗಃ



ಬಹುದು ? ಓಹೋ ! ಇಲ್ಲಿಗೆ ಬಂದಿದ್ದ ದೇವತೆಗಳ ಚೇಷ್ಟೆ ಇದು ! ಅವರು ನನಗೆ ವ್ಯಾಮೋಹವನ್ನುಂಟುಮಾಡಿದರು ! " ಎಂದು ಚಿಂತಿಸಿದನು. ಶ್ರೀರಾಮ, ಈ ಪ್ರಕಾರವಾಗಿ ತೇಜಸ್ವಿಗಳಾದ ಆ ಮೂವರು ಸೋದರರೂ ವರಗಳನ್ನು ಪಡೆದು, ತಮ್ಮ ತಂದೆಯಾದ ವಿಶ್ರವಸ್ಸಿನ ಶ್ಲೇಷ್ಮಾತಕವನಕ್ಕೆ ಹಿಂದಿರುಗಿ ಸುಖದಿಂದಿದ್ದರು (೪೮-೪೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹತ್ತನೆಯ ಸರ್ಗ



## ಏಕಾದಶಃ ಸರ್ಗಃ

### ರಾವಣಲಂಕಾಪ್ರಾಪ್ತಿಃ

ಸುಮಾಲೀ ವರಲಬ್ಧಾಂಸ್ತು ಜ್ಞಾತ್ವಾ ಚೈತಾನ್ನಿಶಾಚರಾನ್ ।
ಉದತಿಷ್ಠದ್ಭಯಂ ತ್ಯಕ್ತ್ವಾ ಸಾನುಗಃ ಸ ರಸಾತಲಾತ್ ॥ ೧

ಮಾರೀಚಶ್ಚ ಪ್ರಹಸ್ತಶ್ಚ ವಿರೂಪಾಕ್ಷೋ ಮಹೋದರಃ ।
ಉದತಿಷ್ಠನ್ ಸುಸಂರಬ್ಧಾಃ ಸಚಿವಾಸ್ತಸ್ಯ ರಕ್ಷಸಃ ॥ ೨

ಸುಮಾಲೀ ಸಚಿವೈಃ ಸಾರ್ಧಂ ವೃತೋ ರಾಕ್ಷಸಪುಂಗವೈಃ ।
ಅಭಿಗಮ್ಯ ದಶಗ್ರೀವಂ ಪರಿಷ್ವಜ್ಯೇದಮಬ್ರವೀತ್ ॥ ೩

ದಿಷ್ಟ್ಯಾ ತೇ ವತ್ಸ ಸಂಪ್ರಾಪ್ತಶ್ಚಿಂತಿತೋಽಯಂ ಮನೋರಥಃ ।
ಯಸ್ತ್ವಂ ತ್ರಿಭುವನಶ್ರೇಷ್ಠಾಲ್ಲಬ್ಧವಾನ್ ವರಮುತ್ತಮಮ್ ॥ ೪

ಯತ್ಕೃತೇ ಚ ವಯಂ ಲಂಕಾಂ ತ್ಯಕ್ತ್ವಾ ಯಾತಾ ರಸಾತಲಮ್ ।
ತದ್ಗತಂ ನೋ ಮಹಾಬಾಹೋ ಮಹದ್ವಿಷ್ಣುಕೃತಂ ಭಯಮ್ ॥ ೫

### ಸರ್ಗ ೧೧

ಲಂಕೆಯನ್ನು ವಶಪಡಿಸಿಕೊಳ್ಳಬೇಕೆಂದು ಸುಮಾಲಿಯು ರಾವಣನಿಗೆ ತಿಳಿಸುವುದು ಅನಂತರ ಪ್ರಹಸ್ತನ ಪ್ರೇರಣೆಯಂತೆ ರಾವಣನು ಲಂಕೆಯನ್ನು ಸ್ವಾಧೀನಪಡಿಸಿಕೊಳ್ಳುವುದು.

ಶ್ರೀರಾಮ, ಈ ನಿಶಾಚರರಿಗೆ ವರಗಳು ಲಭಿಸಿದವೆಂದು ಕೇಳಿ, ಸುಮಾಲಿಯು ನಿರ್ಭಯನಾಗಿ ತನ್ನ ಪರಿವಾರದೊಂದಿಗೆ ರಸಾತಳದಿಂದ ಹೊರಟು ಬಂದನು ಮಾರೀಚ, ಪ್ರಹಸ್ತ, ವಿರೂಪಾಕ್ಷ, ಮಹೋದರ ಎಂಬ ಆತನ ಸಚಿವರೂ ಅವನೊಡನೆ ಆವೇಶದಿಂದ ಬಂದರು (೧-೨) ಸುಮಾಲಿಯು ಆ ರಾಕ್ಷಸಪುಂಗವರೊಡನೆ ಆಗಮಿಸಿ ದಶಗ್ರೀವನನ್ನು ಆಲಂಗಿಸಿಕೊಂಡು "ವತ್ಸ, ಬಹುಕಾಲದಿಂದಿದ್ದ ನನ್ನ ಮನೋರಥವು ಸಿದ್ಧಿಸಿತು! ಇದು ನಮ್ಮ ಭಾಗ್ಯ ತ್ರಿಭುವನೇಶ್ವರನಾದ ಬ್ರಹ್ಮನಿಂದ ಶ್ರೇಷ್ಠವಾದ ವರವನ್ನು ಪಡೆದಿದ್ದೀಯೆ (೩-೪) ಇನ್ನು ವಿಷ್ಣುವಿನ ಭಯವು ತೊಲಗಿತು! ಮಹಾಬಾಹು, ಅದರಿಂದಲೇ ನಾವು ಲಂಕೆಯನ್ನು ತ್ಯಜಿಸಿ

ಅಸಕೃತ್ತದ್ಭಯಾದ್ಭೀತಾಃ ಪರಿತ್ಯಜ್ಯ ಸ್ವಮಾಲಯಮ್ ।
ವಿದ್ರುತಾಃ ಸಹಿತಾಃ ಸರ್ವೇ ಪ್ರವಿಷ್ಟಾಃ ಸ್ಮ ರಸಾತಲಮ್ ॥ ೬

ಅಸ್ಮದೀಯಾ ಚ ಲಂಕೇಯಂ ನಗರೀ ರಾಕ್ಷಸೋಚಿತಾ ।
ನಿವೇಶಿತಾ ತವ ಭ್ರಾತ್ರಾ ಧನಾಧ್ಯಕ್ಷೇಣ ಧೀಮತಾ ॥ ೭

ಯದಿ ನಾಮಾತ್ರ ಶಕ್ಯಂ ಸ್ಯಾತ್ ಸಾಮ್ನಾ ದಾನೇನ ವಾನಘ ।
ತರಸಾ ವಾ ಮಹಾಬಾಹೋ ಪ್ರತ್ಯಾನೇತುಂ ಕೃತಂ ಭವೇತ್ ॥ ೮

ತ್ವಂ ತು ಲಂಕೇಶ್ವರಸ್ತಾತ ಭವಿಷ್ಯಸಿ ನ ಸಂಶಯಃ ।
ತ್ವಯಾ ರಾಕ್ಷಸವಂಶೋಽಯಂ ನಿಮಗ್ನೋಽಪಿ ಸಮುದ್ಧೃತಃ ॥ ೯

ಸರ್ವೇಷಾಂ ನಃ ಪ್ರಭುಶ್ಚೈವ ಭವಿಷ್ಯಸಿ ಮಹಾಬಲ ।
ಅಥಾಬ್ರವೀದ್ದಶಗ್ರೀವೋ ಮಾತಾಮಹಮುಪಸ್ಥಿತಮ್ ॥ ೧೦

ವಿತ್ತೇಶೋ ಗುರುರಸ್ಮಾಕಂ ನಾರ್ಹಸೇ ವಕ್ತುಮೀದೃಶಮ್ ।
ಸಾಮ್ನಾಪಿ ರಾಕ್ಷಸೇಂದ್ರೇಣ ಪ್ರತ್ಯಾಖ್ಯಾತೋ ಗರೀಯಸಾ ॥ ೧೧

---

ರಸಾತಳಕ್ಕೆ ಹೋಗಿದ್ದೆವು ಆ ವಿಷ್ಣುವಿನಿಂದ ನಮಗೆ ಪದೇ ಪದೇ ಪೀಡೆ ಯಾಯಿತು ಆದ್ದರಿಂದ ನಾವೆಲ್ಲರೂ ನಮ್ಮ ಮನೆಮಾರುಗಳನ್ನು ಬಿಟ್ಟು ಪಾತಾಳಕ್ಕೆ ಓಡಿಹೋದೆವು (೫-೬) ಆ ಲಂಕೆಯು ನಮ್ಮದು! ರಾಕ್ಷಸರಿಗೆ ಯೋಗ್ಯವಾದ ರಾಣೆ ಈಗ ನಿನ್ನ ಅಣ್ಣನಾದ ಶ್ರೀಮಂತ ಕುಬೇರನು ಅಲ್ಲಿ ನೆಲೆಸಿದ್ದಾನೆ ಸಾಮದಾನಗಳಿಂದ ಆ ನಗರವನ್ನು ವಶಪಡಿಸಿಕೊಳ್ಳಲು ಶಕ್ಯವಾಗದೆ? ಶೂರಾಗ್ರೇಸರ, ದಂಡಪ್ರಯೋಗವಾದರೂ ನಡೆಯಲಿ! ಅದು ಸ್ವಾಧೀನವಾದರೇ ನಮ್ಮ ಇಷ್ಟಸಿದ್ಧಿ (೭-೮) ಮಗು, ನಿಶ್ಚಯ ವಾಗಿಯೂ ನೀನು ಲಂಕೇಶ್ವರನಾಗುವೆ ಮುಳುಗಿಹೋದ ಈ ರಾಕ್ಷಸ ವಂಶವನ್ನು ನೀನು ಉದ್ಧರಿಸಿದೆ ಬಲಿಷ್ಠನಾದ ನೀನು ನಮ್ಮೆಲ್ಲರಿಗೂ ಪ್ರಭುವಾಗಿ ಬಾಳುವೆ" ಎಂದನು. ಆಗ ದಶಗ್ರೀವನು ತನ್ನ ಮಾತಾಮಹ ನನ್ನು ನೋಡಿ "ಅಜ್ಜ, ಕುಬೇರನು ನಮಗೆ ಅಣ್ಣನಾಗಬೇಕು. ಗುರು ಸ್ಥಾನದಲ್ಲಿದ್ದಾನೆ ನೀನು ಹೀಗೆ ಹೇಳುವುದು ತರವಲ್ಲ" ಎಂದನು. ಸಾಮೋಪಾಯದಿಂದಲೂ ಲಂಕೆಯನ್ನು ಸ್ವಾಧೀನಪಡಿಸಿಕೊಳ್ಳಲು ಅವನು

ಕಿಂಚಿನ್ನಾಹ ತದಾ ರಕ್ಷೋ ಜ್ಞಾತ್ವಾ ತಸ್ಯ ಚಿಕೀರ್ಷಿತಮ್ ।
ಕಸ್ಯಚಿತ್ತ್ವಥ ಕಾಲಸ್ಯ ವಸಂತಂ ರಾವಣಂ ತತಃ ॥ ೧೨
ಉಕ್ತವಂತಂ ತಥಾ ವಾಕ್ಯಂ ದಶಗ್ರೀವಂ ನಿಶಾಚರಃ ।
ಪ್ರಹಸ್ತಃ ಪ್ರಶ್ರಿತಂ ವಾಕ್ಯಮಿದಮಾಹ ಸಕಾರಣಮ್ ॥ ೧೩
ದಶಗ್ರೀವ ಮಹಾಬಾಹೋ ನಾರ್ಹಸ್ತ್ವಂ ವಕ್ತುಮೀದೃಶಮ್ ।
ಸೌಭ್ರಾತ್ರಂ ನಾಸ್ತಿ ಶೂರಾಣಾಂ ಶೃಣು ಚೇದಂ ವಚೋ ಮಮ ॥
ಅದಿತಿಶ್ಚ ದಿತಿಶ್ಚೈವ ಭಗಿನ್ಯೌ ಸಹಿತೇ ಹಿತೇ ।
ಭಾರ್ಯೇ ಪರಮರೂಪಿಣ್ಯೌ ಕಶ್ಯಪಸ್ಯ ಪ್ರಜಾಪತೇಃ ॥ ೧೪
ಅದಿತಿರ್ಜನಯಾಮಾಸ ದೇವಾಂಸ್ತ್ರಿಭುವನೇಶ್ವರಾನ್ ।
ದಿತಿಸ್ತ್ವಜನಯತ್ ಪುತ್ರಾನ್ ಕಶ್ಯಪಸ್ಯಾತ್ಮಸಂಭವಾನ್ ॥ ೧೫
ದೈತ್ಯಾನಾಂ ಕಿಲ ಧರ್ಮಜ್ಞ ಪುರೇಯಂ ಸವನಾರ್ಣವಾ ।
ಸಪರ್ವತಾ ಮಹೀ ವೀರ ತೇಽಭವನ್ ಪ್ರಭವಿಷ್ಣವಃ ॥ ೧೬
ನಿಹತ್ಯ ತಾಂಸ್ತು ಸಮರೇ ವಿಷ್ಣುನಾ ಪ್ರಭವಿಷ್ಣುನಾ ।
ದೇವಾನಾಂ ವಶಮಾನೀತಂ ತ್ರೈಲೋಕ್ಯಮಿದಮವ್ಯಯಮ್ ॥ ೧೮

---

ಒಪ್ಪಲಿಲ್ಲ (೯-೧೧) ದಶಗ್ರೀವನ ಅಭಿಪ್ರಾಯವು ಹಾಗಿರುವುದನ್ನು ತಿಳಿದು, ಸುಮಾಲಿಯು ಏನನ್ನೂ ಹೇಳದೆ ಸುಮ್ಮನಾದನು ಕೆಲವು ಕಾಲ ಕಳೆಯಿತು ತಂದೆಯ ತಪೋವನದಲ್ಲಿ ನೆಲೆಸಿದ್ದ ರಾವಣನ ಬಳಿಗೆ ಪ್ರಹಸ್ತನು ಬಂದು ವಿನಯದಿಂದ ಸಹೇತುಕವಾಗಿ ಈ ರೀತಿ ನುಡಿದನು (೧೨-೧೩). "ಮಹಾಬಾಹು–ದಶಗ್ರೀವ, ನೀನು ಹೀಗೆ ಹೇಳುವುದು ಸರಿಯಲ್ಲ ಶೂರರಿಗೆ ಸೌಭ್ರಾತ್ರವೆಂಬುದು ಎಲ್ಲಿದೆ? ನಾನು ಹೇಳುವುದನ್ನು ಆಲಿಸು ಕಶ್ಯಪ ಪ್ರಜಾಪತಿಗೆ ಅದಿತಿ, ದಿತಿಯೆಂಬ ಇಬ್ಬರು ಪತ್ನಿಯರು ಅವರಿಬ್ಬರೂ ಅಕ್ಕತಂಗಿಯರು, ಪರಮಸುಂದರಿಯರು ಅದಿತಿಯು ತ್ರಿಲೋಕಾಧಿಪತಿಗಳಾದ ದೇವತೆಗಳನ್ನು ಹಡೆದಳು ದಿತಿಯು ಕಶ್ಯಪನಿಂದ ಪಡೆದ ಮಕ್ಕಳಿಗೆ ದೈತ್ಯರೆಂದು ಹೆಸರು (೧೪-೧೫) ಪರ್ವತಾರಣ್ಯಸಾಗರಸಮೇತವಾದ ಈ ಭೂಮಿಯೆಲ್ಲವೂ ಹಿಂದೆ ದೈತ್ಯರ ಸ್ವಾಧೀನವಾಗಿತ್ತು ಏಕೆಂದರೆ, ದೈತ್ಯರು ಮಹಾಪರಾಕ್ರಮಿಗಳಾಗಿದ್ದರು. ವಿಷ್ಣುವು ದೈತ್ಯರನ್ನು ಸಂಹರಿಸಿ

**ನೈತದೇಕೋ ಭವಾನೇವ ಕರಿಷ್ಯತಿ ವಿಪರ್ಯಯಮ್ ।**
**ಸುರಾಸುರೈರಾಚರಿತಂ ತತ್ ಕುರುಷ್ವ ವಚೋ ಮಮ ॥ ೧೯**

**ಏವಮುಕ್ತೋ ದಶಗ್ರೀವಃ ಪ್ರಹೃಷ್ಟೇನಾಂತರಾತ್ಮನಾ ।**
**ಚಿಂತಯಿತ್ವಾ ಮುಹೂರ್ತಂ ವೈ ಬಾಢಮಿತ್ಯೇವ ಸೋಽಬ್ರವೀತ್ ॥**

**ಸ ತು ತೇನೈವ ಹರ್ಷೇಣ ತಸ್ಮಿನ್ನಹನಿ ವೀರ್ಯವಾನ್ ।**
**ವನಂ ಗತೋ ದಶಗ್ರೀವಃ ಸಹ ತೈಃ ಕ್ಷಣದಾಚರೈಃ ॥ ೨೦**

**ತ್ರಿಕೂಟಸ್ಥಃ ಸ ತು ತದಾ ದಶಗ್ರೀವೋ ನಿಶಾಚರಃ ।**
**ಪ್ರೇಷಯಾಮಾಸ ದೌತ್ಯೇನ ಪ್ರಹಸ್ತಂ ವಾಕ್ಯಕೋವಿದಮ್ ॥ ೨೧**

**ಪ್ರಹಸ್ತ ಶೀಘ್ರಂ ಗಚ್ಛ ತ್ವಂ ಬ್ರೂಹಿ ನೈರ್ಋತಪುಂಗವಮ್ ।**
**ವಚಸಾ ಮಮ ವಿತ್ತೇಶಂ ಸಾಮಪೂರ್ವಮಿದಂ ವಚಃ ॥ ೨೨**

**ಇಯಂ ಲಂಕಾಪುರೀ ರಾಜನ್ ರಾಕ್ಷಸಾನಾಂ ಮಹಾತ್ಮನಾಮ್ ।**
**ತ್ವಯಾ ನಿವೇಶಿತಾ ಸೌಮ್ಯ ನೈತದ್ಯುಕ್ತಂ ತವಾನಘ ॥ ೨೪**

---

ತ್ರಿಲೋಕವನ್ನೂ ದೇವತೆಗಳ ವಶಕ್ಕೆ ಕೊಟ್ಟನು (೧೭-೧೮). ಹೀಗೆ ದಾಯಾದದ್ವೇಷವನ್ನು ಸುರಾಸುರರೇ ಮೊದಲಿನಿಂದ ನಡೆಸುತ್ತಿದ್ದಾರ ಸೌಭ್ರಾತ್ರದ ವಿಪರ್ಯಾಸವನ್ನು ನೀನೇ ಪ್ರಥಮವಾಗಿ ಮಾಡುತ್ತಿಲ್ಲ ಆದ್ದರಿಂದ ನಾನು ಹೇಳುವಂತೆ ಕೇಳು" ಎಂದನು ಆಗ ರಾವಣನ ಹೃದಯ ದಲ್ಲಿ ಉತ್ಸಾಹವು ಪುಟಿಯಿತು ಒಂದು ಮುಹೂರ್ತಕಾಲ ಆಲೋಚಿಸಿ "ಆಗಲಿ!" ಎಂದನು (೧೯-೨೦) ತಪೋವನದಲ್ಲಿದ್ದ ವೀರನಾದ ರಾವಣನು ಅದೇ ದಿನವೇ ಆ ನಿಶಾಚರರೊಡನೆ ತ್ರಿಕೂಟಪರ್ವತಕ್ಕೆ ಹೋದನು ಅಲ್ಲಿ ವಾಕ್ಯಕೋವಿದನಾದ ಪ್ರಹಸ್ತನಿಗೆ ದೂತಕಾರ್ಯವನ್ನು ವಹಿಸಿ "ಪ್ರಹಸ್ತ, ಕೂಡಲೆ ಕುಬೇರನ ಬಳಿಗೆ ಹೋಗಿ ನಾನು ಹೇಳಿದ್ದೇನೆಂದು ಸಾಮಪೂರ್ವಕ ವಾಗಿ ಈ ಸಂದೇಶವನ್ನು ತಿಳಿಸು. (೨೧-೨೨) 'ಎಲೈ ಯಕ್ಷರಾಜ, ಈ ಲಂಕಾಪುರಿಯು ಮಹಾತ್ಮರಾದ ರಾಕ್ಷಸರಿಗೆ ಸೇರಿದ್ದು ನೀನು ಇಲ್ಲಿಗೆ ಬಂದು ನೆಲೆಸಿದ್ದು ಯುಕ್ತವಲ್ಲ ಸೌಮ್ಯನೂ ಪುಣ್ಯಾತ್ಮನೂ ಆದ ನೀನು ಈ ನಗರವನ್ನು ನಮ್ಮ ವಶಕ್ಕೆ ಕೊಡುವುದು ಉಚಿತವಾದದ್ದು. ಹಾಗೆ

ತದ್ಭವಾನ್ ಯದಿ ನೋ ಹ್ಯದ್ಯ ದದ್ಯಾದತುಲವಿಕ್ರಮ ।
ಕೃತಾ ಭವೇನ್ಮಮ ಪ್ರೀತಿರ್ಧರ್ಮಶ್ಚೈವಾನುಪಾಲಿತಃ ॥ ೨೫
ಸ ತು ಗತ್ವಾ ಪುರೀಂ ಲಂಕಾಂ ಧನದೇನ ಸುರಕ್ಷಿತಾಮ್ ।
ಅಬ್ರವೀತ್ ಪರಮೋದಾರಂ ವಿತ್ತಪಾಲಮಿದಂ ವಚಃ ॥ ೨೬
ಪ್ರೇಷಿತೋಽಹಂ ತವ ಭ್ರಾತ್ರಾ ದಶಗ್ರೀವೇಣ ಸುವ್ರತ ।
ತ್ವತ್ಸಮೀಪಂ ಮಹಾಬಾಹೋ ಸರ್ವಶಸ್ತ್ರಭೃತಾಂ ವರ ॥ ೨೭
ತಚ್ಛ್ರೂಯತಾಂ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ ।
ವಚನಂ ಮಮ ವಿತ್ತೇಶ ಯದ್ಬ್ರವೀತಿ ದಶಾನನಃ ॥ ೨೮
ಇಯಂ ಕಿಲ ಪುರೀ ರಮ್ಯಾ ಸುಮಾಲಿಪ್ರಮುಖೈಃ ಪುರಾ ।
ಭುಕ್ತಪೂರ್ವಾ ವಿಶಾಲಾಕ್ಷ ರಾಕ್ಷಸೈರ್ಭೀಮವಿಕ್ರಮೈಃ ॥ ೨೯
ತೇನ ವಿಜ್ಞಾಪ್ಯತೇ ಸೋಽಯಂ ಸಾಂಪ್ರತಂ ವಿಶ್ರವಾತ್ಮಜ ।
ತದೇಷಾ ದೀಯತಾಂ ತಾತ ಯಾಚತಸ್ತಸ್ಯ ಸಾಮತಃ ॥ ೩೦
ಪ್ರಹಸ್ತಾದಭಿಸಂಶ್ರುತ್ಯ ದೇವೋ ವೈಶ್ರವಣೋ ವಚಃ ।
ಪ್ರತ್ಯುವಾಚ ಪ್ರಹಸ್ತಂ ತಂ ವಾಕ್ಯಂ ವಾಕ್ಯವಿಶಾರದಃ ॥ ೩೧

---

ಕೊಟ್ಟಲ್ಲಿ ನನಗೆ ಬಹಳ ಸಂತೋಷವಾಗುತ್ತದೆ. ನೀನು ಧರ್ಮವನ್ನು ಪಾಲಿಸಿದಂತೆಯೂ ಆಗುತ್ತದೆ' ಈ ಮಾತನ್ನು ತಿಳಿಸು" ಎಂದನು (೨೪–೨೫) ಪ್ರಹಸ್ತನು ಕುಬೇರನಿಂದ ಸುರಕ್ಷಿತವಾದ ಲಂಕೆಗೆ ಹೋಗಿ, ಉದಾರ ಸ್ವಭಾವದ ಆ ಧನಾಧ್ಯಕ್ಷನನ್ನು ಕಂಡು "ವೈಶ್ರವಣ, ನಿನ್ನ ತಮ್ಮನಾದ ದಶಗ್ರೀವನು ನನ್ನನ್ನು ಕಳಿಸಿದ್ದಾನೆ ಎಲೈ ಮಹಾಬಾಹುವೆ, ನೀನು ಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನೂ ಸದಾಚಾರನಿರತನೂ ಆಗಿರುವೆ (೨೬–೨೭) ಮಹಾಪ್ರಾಜ್ಞನಾದ ನೀನು ನನ್ನ ನುಡಿಯನ್ನಾಲಿಸು ದಶಗ್ರೀವನೇ ಈ ಸಂದೇಶವನ್ನು ಕಳಿಸಿದ್ದಾನೆ ಏನೆಂದರೆ 'ಹಿಂದೆ ಭೀಮವಿಕ್ರಮರಾದ ಸುಮಾಲಿ ಮೊದಲಾದ ರಾಕ್ಷಸರು ಈ ನಗರವನ್ನು ಆಳುತ್ತಿದ್ದರು ಆದ್ದರಿಂದ, ವೈಶ್ರವಣ, ಈ ವಿಷಯುವನ್ನು ವಿಜ್ಞಾಪಿಸಬೇಕಾಗಿದೆ ಇದನ್ನು ಈಗ ನನಗೆ ಒಪ್ಪಿಸು ಅಣ್ಣ, ಸಾಮಪೂರ್ವಕವಾಗಿ ಬೇಡುತ್ತಿದ್ದೇನೆ' ಈ ಮಾತನ್ನು ದಶಾನನನು ಹೇಳಿಕಳಿಸಿದ್ದಾನೆ" ಎಂದು ತಿಳಿಸಿದನು (೨೮–೩೦) ಆಗ ವಾಕ್ಯವಿಶಾರದನಾದ ಕುಬೇರನು "ಪ್ರಹಸ್ತ, ರಾಕ್ಷಸರಿಲ್ಲದೆ ಈ ನಗರವು

ದತ್ತಾ ಮಮೇಯಂ ಪಿತ್ರಾ ತು ಲಂಕಾ ಶೂನ್ಯಾ ನಿಶಾಚರೈಃ ।
ನಿವಾಸಿತಾ ಚ ಮೇ ಯಕ್ಷೈರ್ದಾನಮಾನಾದಿಭಿರ್ಗುಣೈಃ ॥ ೩೨

ಬ್ರೂಹಿ ಗಚ್ಛ ದಶಗ್ರೀವಂ ಪುರಂ ರಾಜ್ಯಂ ಚ ಯನ್ಮಮ ।
ತವಾಪ್ಯೇತನ್ಮಹಾಬಾಹೋ ಭುಂಕ್ಷ್ವ ರಾಜ್ಯಮಕಂಟಕಮ್ ॥ ೩೩

ಅವಿಭಕ್ತಂ ತ್ವಯಾ ಸಾರ್ಧಂ ರಾಜ್ಯಂ ಯಚ್ಚಾಪಿ ಮೇ ವಸು ।
ಏವಮುಕ್ತ್ವಾ ಧನಾಧ್ಯಕ್ಷೋ ಜಗಾಮ ಪಿತುರಂತಿಕಮ್ ॥ ೩೪

ಅಭಿವಾದ್ಯ ಗುರುಂ ಪ್ರಾಹ ರಾವಣಸ್ಯ ಯದೀಪ್ಸಿತಮ್ ।
ಏಷ ತಾತ ದಶಗ್ರೀವೋ ದೂತಂ ಪ್ರೇಷಿತವಾನ್ ಮಮ ॥ ೩೫

ದೀಯತಾಂ ನಗರೀ ಲಂಕಾ ಪೂರ್ವಂ ರಕ್ಷೋಗಣೋಷಿತಾ ।
ಮಯಾತ್ರ ಯದನುಷ್ಠೇಯಂ ತನ್ಮಮಾಚಕ್ಷ್ವ ಸುವ್ರತ ॥ ೩೬

ಬ್ರಹ್ಮರ್ಷಿಸ್ತ್ವೇವಮುಕ್ತೋಽಸೌ ವಿಶ್ರವಾ ಮುನಿಪುಂಗವಃ ।
ಪ್ರಾಂಜಲಿಂ ಧನದಂ ಪ್ರಾಹ ಶೃಣು ಪುತ್ರ ವಚೋ ಮಮ ॥ ೩೭

---

ಶೂನ್ಯವಾಗಿದ್ದಾಗ, ನನ್ನ ತಂದೆಯು ಇದನ್ನು ನನಗೆ ವಹಿಸಿಕೊಟ್ಟನು ಆದ್ದರಿಂದ ನಾನು ದಾನಮಾನಾದಿ ಗುಣಸಂಪನ್ನರಾದ ಯಕ್ಷರೊಡನೆ ಇಲ್ಲಿಗೆ ಬಂದು ನೆಲೆಸಿದ್ದೇನೆ ಒಳ್ಳೆಯದು ನೀನು ಹೋಗಿ ದಶಗ್ರೀವನಿಗೆ ತಿಳಿಸು. 'ತಮ್ಮ, ಈ ನಗರವಾಗಲಿ ಲಂಕಾರಾಜ್ಯವಾಗಲಿ, ನನ್ನದೆಲ್ಲವೂ ನಿನಗೂ ಸೇರಿದ್ದು ಮಹಾಬಾಹು, ಈ ರಾಜ್ಯವನ್ನು ನಿಷ್ಕಂಟಕವಾಗಿ ಅನುಭವಿಸು (೩೧-೩೩) ಈ ರಾಜ್ಯವಾಗಲಿ ನನ್ನ ಐಶ್ವರ್ಯವಾಗಲಿ, ಇಬ್ಬರಿಗೂ ಸಮಾನವೇ' ಎಂದು ಹೇಳು" ಎಂಬುದಾಗಿ ತಿಳಿಸಿದನು ಅನಂತರ ಕುಬೇರನು ನೇರವಾಗಿ ವಿಶ್ರವಸ್ಸಿನ ಬಳಿಗೆ ಹೋಗಿ, ರಾವಣನ ಈಪ್ಸಿತವನ್ನು ವಿವರಿಸುತ್ತ "ತಂದೆಯೆ, ದಶಗ್ರೀವನು ನನ್ನ ಸಮೀಪಕ್ಕೆ ಒಬ್ಬ ದೂತನನ್ನು ಕಳಿಸಿ 'ಲಂಕಾಪುರಿಯಲ್ಲಿ ಹಿಂದೆ ನಮ್ಮ ವಂಶದ ರಾಕ್ಷಸರು ನೆಲೆಸಿದ್ದರು ಅದನ್ನು ನನಗೆ ಹಿಂದಕ್ಕೆ ಕೊಡು' ಎಂದು ಕೇಳಿದ್ದಾನೆ ಈಗ ನಾನೇನು ಮಾಡಲಿ? ಆಜ್ಞಾಪಿಸು" ಎಂದು ಹೇಳಿದನು (೩೪-೩೬) ಆಗ ಬ್ರಹ್ಮರ್ಷಿಯಾದ ವಿಶ್ರವಸ್ಸು ಕೃತಾಂಜಲಿಯಾಗಿ ನಿಂತಿದ್ದ ಕುಬೇರನನ್ನು ನೋಡಿ

ದಶಗ್ರೀವೋ ಮಹಾಬಾಹುರುಕ್ತವಾನ್ ಮಮ ಸಂನಿಧೌ ।
ಮಯಾ ನಿರ್ಭರ್ತ್ಸಿತಶ್ಚಾಸೀದ್ಬಹುಶೋಽಕ್ತಃ ಸುದುರ್ಮತಿಃ ॥ ೩೮
ಸ ಕ್ರೋಧೇನ ಮಯಾ ಚೋಕ್ತೋ ಧ್ವಂಸಸೇ ಚ ಪುನಃ ಪುನಃ ।
ಶ್ರೇಯೋಽಭಿಯುಕ್ತಂ ಧರ್ಮ್ಯಂ ಚ ಶೃಣು ಪುತ್ರ ವಚೋ ಮಮ ॥
ವರಪ್ರದಾನಾತ್ ಸಂಮೂಢೋ ಮಾನ್ಯಾಮಾನ್ಯಾನ್ ಸ ದುರ್ಮತಿಃ ।
ನ ವೇತ್ತಿ ಮಮ ಶಾಪಾಚ್ಚ ಪ್ರಕೃತಿಂ ದಾರುಣಾಂ ಗತಃ ॥ ೪೦
ತಸ್ಮಾದ್ಗಚ್ಛ ಮಹಾಬಾಹೋ ಕೈಲಾಸಂ ಧರಣೀಧರಮ್ ।
ನಿವೇಶಯ ನಿವಾಸಾರ್ಥಂ ತ್ಯಕ್ತ್ವಾ ಲಂಕಾಂ ಸಹಾನುಗಃ ॥ ೪೧
ತತ್ರ ಮಂದಾಕಿನೀ ರಮ್ಯಾ ನದೀನಾಮುತ್ತಮಾ ನದೀ ।
ಕಾಂಚನೈಃ ಸೂರ್ಯಸಂಕಾಶೈಃ ಪಂಕಜೈಃ ಸಂವೃತೋದಕಾ ॥ ೪೨
ಕುಮುದೈರುತ್ಪಲೈಶ್ಚೈವ ತಥಾನ್ಯೈಶ್ಚ ಸುಗಂಧಿಭಿಃ ।
ತತ್ರ ದೇವಾಃ ಸಗಂಧರ್ವಾಃ ಸಾಪ್ಸರೋರಗಕಿನ್ನರಾಃ ॥ ೪೩

---

ಹೀಗೆಂದನು "ವತ್ಸ, ನನ್ನ ಮಾತನ್ನು ಕೇಳು ದಶಗ್ರೀವನು ಬಂದು ನನ್ನೊಡನೆ ಈ ವಿಷಯವನ್ನು ಪ್ರಸ್ತಾವಿಸಿದನು ನಾನು ಅವನನ್ನು ಗದರಿಸಿ ಬಹುವಿಧದಲ್ಲಿ ಬುದ್ಧಿವಾದವನ್ನು ಹೇಳಿದೆನು ಆ ದುಷ್ಟನು ನನ್ನ ಹಿತೋಪದೇಶವನ್ನು ಕಿವಿಗೆ ಹಾಕಿಕೊಳ್ಳಲಿಲ್ಲ (೩೭-೩೮) ನಾನು ಕ್ರೋಧದಿಂದ "ಥೂ! ನೀನು ಹಾಳಾಗಿಹೋಗುವೆ!" ಎಂದು ಮತ್ತೆ ಮತ್ತೆ ಹೇಳಿ ನೋಡಿದೆನು ಪುತ್ರ–ಕುಬೇರ, ಶ್ರೇಯಸ್ಕರವೂ ಧರ್ಮಾನುಗತವೂ ಆದ ನನ್ನ ಮಾತಿನಂತೆ ನಡೆದುಕೊ ಆ ದುರುಳನಿಗೆ ಬ್ರಹ್ಮನ ವರಬಲದಿಂದ ತಲೆ ತಿರುಗಿದೆ 'ಯಾರು ಮಾನ್ಯರು – ಯಾರ ಮಾತನ್ನು ಗೌರವಿಸಬೇಕು, ಯಾರು ಮಾನ್ಯರಲ್ಲ' ಎಂಬ ವಿವೇಕವೇ ಅಳಿಸಿಹೋಗಿದೆ ಅಲ್ಲದೆ ನನ್ನ ಶಾಪದಿಂದ ಆತನ ಸ್ವಭಾವ ಕ್ರೂರವಾಗಿದೆ (೩೯-೪೦) ಆದ್ದರಿಂದ, ವತ್ಸ, ನೀನು ಕೈಲಾಸಪರ್ವತಕ್ಕೆ ಹೊರಟುಹೋಗು ಲಂಕೆಯನ್ನು ತ್ಯಜಿಸಿ ನಿನ್ನ ಅನುಚರರೊಂದಿಗೆ ಅಲ್ಲಿ ನೆಲೆಸು ಕೈಲಾಸದಲ್ಲಿ ರಮಣೀಯವಾದ ಗಂಗಾನದಿಯು ಪ್ರವಹಿಸುತ್ತದೆ ಅದು ನದಿಗಳಲ್ಲಿ ಶ್ರೇಷ್ಠವಾದುದು ಅದರ ಜಲದಲ್ಲಿ ಸೂರ್ಯಬಿಂಬಗಳಂತಿರುವ ಸುವರ್ಣಕಮಲಗಳೂ ನೈದಿಲೆ

ವಿಹಾರಶೀಲಾಃ ಸತತಂ ರಮಂತೇ ಸರ್ವದಾಶ್ರಿತಾಃ ।
ನ ಹಿ ಕ್ಷಮಂ ತವಾನೇನ ವೈರಂ ಧನದ ರಕ್ಷಸಾ ॥ ೪೪
ಜಾನೀಷೇ ಹಿ ಯಥಾನೇನ ಲಬ್ಧಃ ಪರಮಕೋ ವರಃ ।
ಏವಮುಕ್ತೋ ಗೃಹೀತ್ವಾಶು ತದ್ವಚಃ ಪಿತೃಗೌರವಾತ್ ॥ ೪೫
ಸದಾರಪುತ್ರಃ ಸಾಮಾತ್ಯಃ ಸವಾಹನಧನೋ ಗತಃ ।
ಪ್ರಹಸ್ತೋಽಥ ದಶಗ್ರೀವಂ ಗತ್ವಾ ವಚನಮಬ್ರವೀತ್ ॥ ೪೬
ಪ್ರಹೃಷ್ಟಾತ್ಮಾ ಮಹಾತ್ಮಾನಂ ಸಹಾಮಾತ್ಯಂ ಸಹಾನುಜಮ್ ।
ಶೂನ್ಯಾ ಸಾ ನಗರೀ ಲಂಕಾ ತ್ಯಕ್ತ್ವೈನಾಂ ಧನದೋ ಗತಃ ॥ ೪೭
ಪ್ರವಿಶ್ಯ ತಾಂ ಸಹಾಸ್ಮಾಭಿಃ ಸ್ವಧರ್ಮಂ ಪ್ರತಿಪಾಲಯ ।
ಏವಮುಕ್ತೋ ದಶಗ್ರೀವಃ ಪ್ರಹಸ್ತೇನ ಮಹಾಬಲಃ ॥ ೪೮
ವಿವೇಶ ನಗರೀಂ ಲಂಕಾಂ ಭ್ರಾತೃಭಿಃ ಸಬಲಾನುಗೈಃ ।
ಧನದೇನ ಪರಿತ್ಯಕ್ತಾಂ ಸುವಿಭಕ್ತಮಹಾಪಥಾಮ್ ॥ ೪೯

---

ಕನ್ನೈದಿಲೆ ಮುಂತಾದ ಸುಗಂಧಿ ಪುಷ್ಪಗಳೂ ಅರಳಿರುತ್ತವೆ. ದೇವ ಗಂಧರ್ವರೂ ಉರಗಕಿನ್ನರರೂ ಅಪ್ಸರೆಯರೂ ಸದಾ ವಿಹರಿಸುತ್ತಾರೆ (೪೧-೪೩) ವಿತ್ತೇಶ್ವರನಾದ ನೀನು ಆ ರಾಕ್ಷಸನೊಡನೆ ವೈರವನ್ನು ಬೆಳೆಸುವುದು ಯುಕ್ತವಲ್ಲ ಕುಬೇರ, ಆ ದಶಗ್ರೀವನು ಸರ್ವೋತ್ಕೃಷ್ಟವಾದ ವರವನ್ನು ಪಡೆದಿರುವುದು ನಿನಗೆ ಗೊತ್ತೇ ಇದೆ" ಎಂದು ತಿಳಿಸಿದನು (೪೪) ವೈಶ್ರವಣನು ತಂದೆಯ ಮಾತಿಗೆ ಮನ್ನಣೆಯನ್ನಿತ್ತು ತನ್ನ ಪತ್ನೀಪುತ್ರರಿಂದಲೂ ಅಮಾತ್ಯರಿಂದಲೂ ಸಮೇತನಾಗಿ ಧನಕನಕವಾಹನಗಳೊಡನೆ ಕೈಲಾಸಕ್ಕೆ ನಿರ್ಗಮಿಸಿದನು ಇತ್ತ ಪ್ರಹಸ್ತನು ಹರ್ಷದಿಂದ ರಾವಣನ ಸಮೀಪಕ್ಕೆ ಹೋಗಿ "ದಶಗ್ರೀವ, ಲಂಕಾನಗರಿಯು ತೆರವಾಯಿತು ಕುಬೇರನು ಅದನ್ನು ತ್ಯಜಿಸಿ ಹೊರಟುಹೋದನು! (೪೫-೪೭) ನಮ್ಮೆಲ್ಲರೊಡನೆ ಆ ಪುರಿಯನ್ನು ಪ್ರವೇಶಿಸಿ, ನಿನ್ನ ಕರ್ತವ್ಯವನ್ನು ಪಾಲಿಸು" ಎಂದನು ಪ್ರಹಸ್ತನ ವಾಕ್ಯವನ್ನು ಕೇಳಿ ಪರಾಕ್ರಮಿಯಾದ ದಶಗ್ರೀವನು ಸೋದರಸಮೇತನಾಗಿ ತನ್ನ ಅನುಚರರೊಂದಿಗೆ ಲಂಕೆಯನ್ನು ಪ್ರವೇಶಿಸಿದನು ದೇವೇಂದ್ರನು ಸ್ವರ್ಗವನ್ನೇರುವಂತೆ, ಆ ದೇವಾರಿಯು ವಿಶಾಲ

ಆರುರೋಹ ಸ ದೇವಾರಿಃ ಸ್ವರ್ಗಂ ದೇವಾಧಿಪೋ ಯಥಾ ॥

ಸ ಚಾಭಿಷಿಕ್ತಃ ಕ್ಷಣದಾಚರೈಸ್ತದಾ
ನಿವೇಶಯಾಮಾಸ ಪುರೀಂ ದಶಾನನಃ ।
ನಿಕಾಮಪೂರ್ಣಾ ಚ ಬಭೂವ ಸಾ ಪುರೀ
ನಿಶಾಚರೈರ್ನೀಲಬಲಾಹಕೋಪಮೈಃ ॥ ೫೦

ಧನೇಶ್ವರಸ್ತ್ವಥ ಪಿತೃವಾಕ್ಯಗೌರವಾತ್
ನ್ಯವೇಶಯಚ್ಛಶಿವಿಮಲೇ ಗಿರೌ ಪುರೀಮ್ ।
ಸ್ವಲಂಕೃತೈರ್ಭವನವರೈರ್ವಿಭೂಷಿತಾಂ
ಪುರಂದರಸ್ಯೇವ ತದಾಮರಾವತೀಮ್ ॥ ೫೧

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕಾದಶಃ ಸರ್ಗಃ



ರಾಜಬೀದಿಗಳಿಂದ ರಂಜಿಸುವ ಲಂಕೆಯನ್ನೇರಿದನು (೪೮-೪೯). ಅನಂತರ ದಶಾನನನು ರಾಕ್ಷಸರಿಂದ ಪಟ್ಟಾಭಿಷಿಕ್ತನಾಗಿ ಲಂಕೆಯಲ್ಲಿ ನೆಲೆಸಿದನು. ಶೂನ್ಯವಾಗಿದ್ದ ಲಂಕಾಪುರಿಯು, ಕಾರ್ಮೋಡಗಳಂತಿದ್ದ ನಿಶಾಚರರಿಂದ ತುಂಬಿತು ರಾಘವ, ಇತ್ತ ಧನೇಶ್ವರನು ವಿಶ್ರವಸ್ಸಿನ ಹಿತೋಪದೇಶಕ್ಕೆ ಮನ್ನಣೆಯನ್ನಿತ್ತು ಚಂದ್ರಸಂಕಾಶವಾದ ಕೈಲಾಸಕ್ಕೆ ಆಗಮಿಸಿ ಅಲಕಾಪುರಿಯಲ್ಲಿ ವಾಸವಾಗಿದ್ದನು ಅಲಂಕೃತಪ್ರಾಸಾದಗಳಿಂದ ಶೋಭಿಸುತ್ತಿದ್ದ ಅಲಕೆಯು, ಇಂದ್ರನ ಅಮರಾವತಿಯಂತೆ ಕಂಗೊಳಿಸಿತು (೫೦-೫೧)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹನ್ನೊಂದನೆಯ ಸರ್ಗ



## ದ್ವಾದಶಃ ಸರ್ಗಃ

### ರಾವಣಾದಿವಿವಾಹಃ

ರಾಕ್ಷಸೇಂದ್ರೋಽಭಿಷಿಕ್ತಸ್ತು ಭ್ರಾತೃಭ್ಯಾಂ ಸಹಿತಸ್ತದಾ ।
ತತಃ ಪ್ರದಾನಂ ರಾಕ್ಷಸ್ಯಾ ಭಗಿನ್ಯಾಃ ಸಮಚಿಂತಯತ್ ॥ ೧

ಸ್ವಸಾರಂ ಕಾಲಕೇಯಾಯ ದಾನವೇಂದ್ರಾಯ ರಾಕ್ಷಸೀಮ್ ।
ದದೌ ಶೂರ್ಪಣಖಾಂ ನಾಮ ವಿದ್ಯುಜ್ಜಿಹ್ವಾಯ ನಾಮತಃ ॥ ೨

ಅಥ ದತ್ವಾ ಸ್ವಯಂ ರಕ್ಷೋ ಮೃಗಯಾಮಟತೇ ಸ್ಮ ತತ್ ।
ತತ್ರಾಪಶ್ಯತ್ತತೋ ರಾಮ ಮಯಂ ನಾಮ ದಿತೇಃ ಸುತಮ್ ॥ ೩

ಕನ್ಯಾಸಹಾಯಂ ತಂ ದೃಷ್ಟ್ವಾ ದಶಗ್ರೀವೋ ನಿಶಾಚರಃ ।
ಅಪೃಚ್ಛತ್ ಕೋ ಭವಾನೇಕೋ ನಿರ್ಮಾನುಷ್ಯಮೃಗೇ ವನೇ ॥ ೪

ಅನಯಾ ಮೃಗಶಾವಾಕ್ಷ್ಯಾ ಕಿಮರ್ಥಂ ಸಹ ತಿಷ್ಠಸಿ ।
ಮಯಸ್ತ್ವಥಾಬ್ರವೀದ್ರಾಮ ಪೃಚ್ಛಂತಂ ತಂ ನಿಶಾಚರಮ್ ॥ ೫

## ಸರ್ಗ ೧೨

### ಶೂರ್ಪಣಖೆ, ರಾವಣ, ಕುಂಭಕರ್ಣ ಮತ್ತು ವಿಭೀಷಣರ ವಿವಾಹ ಇಂದ್ರಜಿತುವಿನ ಜನನ

ಶ್ರೀರಾಮ, ರಾವಣನು ರಾಕ್ಷಸೇಂದ್ರನಾಗಿ ಪಟ್ಟಾಭಿಷಿಕ್ತನಾದ ಮೇಲೆ, ತಂಗಿಯಾದ ಶೂರ್ಪಣಖೆಯನ್ನು ಮದುವೆಮಾಡುವುದಕ್ಕಾಗಿ ತನ್ನ ತಮ್ಮಂದಿರೊಡನೆ ಸಮಾಲೋಚಿಸಿದನು ಅನಂತರ ಕಾಲಕನ ಪುತ್ರನೂ ದಾನವೇಂದ್ರನೂ ಆದ ವಿದ್ಯುಜ್ಜಿಹ್ವನಿಗೆ ಅವಳನ್ನು ಕೊಟ್ಟು ಮದುವೆಮಾಡಿದನು (೧-೨) ಶೂರ್ಪಣಖಯನ್ನು ವಿವಾಹಮಾಡಿ ರಾವಣನು ಒಂದು ದಿನ ಬೇಟೆಯಾಡಲು ಹೋಗಿದ್ದಾಗ, ದಿತಿಪುತ್ರನಾದ ಮಯ ಎಂಬವನನ್ನು ಕಂಡನು ಮಯನೊಡನೆ ಒಬ್ಬ ಕನ್ಯೆಯಿದ್ದಳು ದಶಗ್ರೀವನು ಆತನನ್ನು ಕುರಿತು "ಅಯ್ಯಾ, ನೀನು ಯಾರು? ಬರಿಯ ಮೃಗಗಳಿರುವ ನಿರ್ಮಾನುಷವಾದ ವನದಲ್ಲಿ ಈ ಸುಂದರಿಯೊಡನೆ ಇರಲು ನಿಮಿತ್ತವೇನು?" ಎಂದು ಪ್ರಶ್ನಿಸಿದನು (೩-೪) ಮಯನು ಹೀಗೆಂದನು. "ರಾಕ್ಷಸೇಂದ್ರ, ಇರುವ

ಶ್ರೂಯತಾಂ ಸರ್ವಮಾಖ್ಯಾಸ್ಯೇ ಯಥಾವೃತ್ತಮಿದಂ ಮಮ ।
ಹೇಮಾ ನಾಮಾಪ್ಸರಾ ತಾತ ಶ್ರುತಪೂರ್ವಾ ಯದಿ ತ್ವಯಾ ॥ ೬

ದೈವತೈರ್ಮಮ ಸಾ ದತ್ತಾ ಪೌಲೋಮೀವ ಶತಕ್ರತೋಃ ।
ತಸ್ಯಾಂ ಸಕ್ತಮನಾಸ್ತಾತ ದಶ ವರ್ಷಶತಾನ್ಯಹಮ್ ॥ ೭

ಸಾ ಚ ದೈವತಕಾರ್ಯೇಣ ಗತಾ ವರ್ಷಾಂಶ್ಚತುರ್ದಶ ।
ತಸ್ಯಾಃ ಕೃತೇ ಚ ಹೇಮಾಯಾಃ ಸರ್ವಂ ಹೇಮಮಯಂ ಪುರಮ್॥

ವಜ್ರವೈದೂರ್ಯಚಿತ್ರಂ ಚ ಮಾಯಯಾ ನಿರ್ಮಿತಂ ಮಯಾ ।
ತತ್ರಾಹಮವಸಂ ದೀನಸ್ತಯಾ ಹೀನಃ ಸುದುಃಖಿತಃ ॥ ೯

ತಸ್ಮಾತ್ ಪುರಾದ್ದುಹಿತರಂ ಗೃಹೀತ್ವಾ ವನಮಾಗತಃ ।
ಇಯಂ ಮಮಾತ್ಮಜಾ ರಾಜಂಸ್ತಸ್ಯಾಃ ಕುಕ್ಷೌ ವಿವರ್ಧಿತಾ ॥ ೧೦

ಭರ್ತಾರಮನಯಾ ಸಾರ್ಧಮಸ್ಯಾಃ ಪ್ರಾಪ್ತೋಽಸ್ಮಿ ಮಾರ್ಗಿತುಮ್
ಕನ್ಯಾಪಿತೃತ್ವಂ ದುಃಖಂ ಹಿ ಸರ್ವೇಷಾಂ ಮಾನಕಾಂಕ್ಷಿಣಾಮ್ ॥

---

ವಿಷಯವನ್ನು ಹೇಳುತ್ತೇನೆ, ಕೇಳು ಹೇಮೆಯೆಂಬ ಒಬ್ಬ ಅಪ್ಸರ ಇದ್ದಾಳೆ ಅವಳ ಹೆಸರನ್ನು ನೀನು ಕೇಳಿರಬಹುದು ಶಚಿಯನ್ನು ಇಂದ್ರನಿಗೆ ಕೊಟ್ಟಂತೆ, ಅವಳನ್ನು ನನಗೆ ದೇವತೆಗಳು ಪತ್ನಿಯಾಗಿ ಒಪ್ಪಿಸಿದರು ಅವಳಲ್ಲಿ ನಾನು ಒಂದು ಸಾವಿರ ವರ್ಷಗಳವರೆಗೆ ಅನುರಕ್ತನಾಗಿ ಬಾಳಿದೆನು (೫-೭) ಅನಂತರ ದೇವತೆಗಳ ಕಾರ್ಯಾರ್ಥವಾಗಿ ಅವಳು ಹೊರಟು ಹೋದಳು ಅಂದಿನಿಂದ ಹದಿನಾಲ್ಕು ವರ್ಷಗಳಾದವು ಆ ಹೇಮೆ ಗೋಸ್ಕರ ನಾನು ಒಂದು ಸುವರ್ಣಮಯವಾದ ನಗರವನ್ನೇ ನಿರ್ಮಿಸಿದೆನು ನನ್ನ ಮಾಯಾಶಕ್ತಿಯಿಂದ ವಜ್ರವೈಡೂರ್ಯಖಚಿತವಾಗಿ ಅದನ್ನು ಸೃಷ್ಟಿಸಿ ಅವಳೊಡನಿದ್ದನು ಅವಳ ವಿರಹದಿಂದ ದೀನನಾದ ನಾನು ಅತ್ಯಂತ ದುಃಖಿತ ನಾಗಿ, ಈ ನನ್ನ ಪುತ್ರಿಯನ್ನು ಕರದುಕೊಂಡು ವನಕ್ಕೆ ಬಂದೆನು ದೈತ್ಯ ರಾಜ, ಇವಳು ಹೇಮೆಯ ಗರ್ಭದಲ್ಲಿ ಜನಿಸಿದ ನನ್ನ ಮಗಳು (೮-೧೦) ಇವಳಿಗೆ ಯೋಗ್ಯನಾದ ಪತಿಯನ್ನು ಅರಸುತ್ತ ಇವಳೊಡನೆ ಹೊರಟುಬಂದಿದ್ದೇನೆ. ಅಭಿಮಾನಶಾಲಿಗಳಿಗೆ ಕನ್ಯಾಪಿತೃತ್ವವೆಂಬುದು ಕಷ್ಟಕರವಾದದ್ದಲ್ಲವೆ?

**ಕನ್ಯಾ ಹಿ ದ್ವೇ ಕುಲೇ ನಿತ್ಯಂ ಸಂಶಯೇ ಸ್ಥಾಪ್ಯ ತಿಷ್ಠತಿ ।**
**ಪುತ್ರದ್ವಯಂ ಮಮಾಪ್ಯಸ್ಯಾಂ ಭಾರ್ಯಾಯಾಂ ಸಂಬಭೂವ ಹ ॥**
**ಮಾಯಾವೀ ಪ್ರಥಮಸ್ತಾತ ದುಂದುಭಿಸ್ತದನಂತರಃ ।**
**ಏವಂ ತೇ ಸರ್ವಮಾಖ್ಯಾತಂ ಯಥಾ ತತ್ತ್ವೇನ ಪೃಚ್ಛತಃ ॥ ೧೩**
**ತ್ವಾಮಿದಾನೀಂ ಕಥಂ ತಾತ ಜಾನೀಯಾಂ ಕೋ ಭವಾನಿತಿ ।**
**ಏವಮುಕ್ತಂ ತು ತದ್ರಕ್ಷೋ ವಿನೀತಮಿದಮಬ್ರವೀತ್ ॥ ೧೪**
**ಅಹಂ ಪೌಲಸ್ತ್ಯತನಯೋ ದಶಗ್ರೀವಶ್ಚ ನಾಮತಃ ।**
**ಮುನೇರ್ವಿಶ್ರವಸೋ ಯಸ್ತು ತೃತೀಯೋ ಬ್ರಹ್ಮಣೋಽಭವತ್ ॥**
**ಏವಮುಕ್ತಸ್ತದಾ ರಾಮ ರಾಕ್ಷಸೇಂದ್ರೇಣ ದಾನವಃ ।**
**ಮಹರ್ಷೇಸ್ತನಯಂ ಜ್ಞಾತ್ವಾ ಮಯೋ ಹರ್ಷಮುಪಾಗತಃ ॥ ೧೬**
**ದಾತುಂ ದುಹಿತರಂ ತಸ್ಯ ರೋಚಯಾಮಾಸ ಯತ್ರ ವೈ ।**
**ಕರೇಣ ತು ಕರಂ ತಸ್ಯಾ ಗ್ರಾಹಯಿತ್ವಾ ಮಯಸ್ತದಾ ॥ ೧೭**
**ಪ್ರಹಸನ್ ಪ್ರಾಹ ದೈತ್ಯೇಂದ್ರೋ ರಾಕ್ಷಸೇಂದ್ರಮಿದಂ ವಚಃ ।**
**ಇಯಂ ಮಮಾತ್ಮಜಾ ರಾಜನ್ ಹೇಮಯಾಪ್ಸರಸಾ ಧೃತಾ ॥ ೧೮**

---

ಹುಟ್ಟಿದ ಕುಲ, ಸೇರಿದ ಕುಲ–ಇವೆರಡು ಕುಲಗಳಿಗೂ ಹೆಣ್ಣುಮಗಳು ಮುಂದೆ ಹೇಗೋ ಎಂಬ ಚಿಂತೆಯನ್ನೊಡ್ಡುತ್ತಾಳೆ ಈ ಪುತ್ರಿಯಲ್ಲದೆ ನನಗೆ ಹೇಮೆಯಲ್ಲಿ ಇಬ್ಬರು ಪುತ್ರರು ಜನಿಸಿದರು (೧೧-೧೨) ಹಿರಿಯವನ ಹೆಸರು ಮಾಯಾವಿ ಎರಡನೆಯವನು ದುಂದುಭಿ ನೀನು ಕೇಳಿದ್ದರಿಂದ ಎಲ್ಲವನ್ನೂ ನಾನು ಹೇಳಿದ್ದೇನೆ ಅಯ್ಯಾ, ಈಗ ನೀನು ಯಾರೆಂದು ನಾನು ತಿಳಿಯಬಹುದಲ್ಲವೆ ?" ಎಂದನು ಆಗ ರಾವಣನು ನಮ್ರತೆಯಿಂದ "ನಾನು ಪೌಲಸ್ತ್ಯನಾದ ವಿಶ್ರವಸ್ಸಿನ ಪುತ್ರ ನನ್ನ ಹೆಸರು ದಶಗ್ರೀವ ನನ್ನ ತಂದೆಯಾದ ವಿಶ್ರವಸ್ಸೆಂಬ ಮುನಿಯು ಬ್ರಹ್ಮದೇವನಿಂದ ಮೂರನೆಯವನು !" ಎಂದು ನುಡಿದನು (೧೩-೧೫) ರಾಘವ, ರಾಕ್ಷಸೇಂದ್ರನು ಹಾಗೆ ನುಡಿಯಲಾಗಿ ಆತನು ಋಷಿಪುತ್ರನೆಂದರಿತು ಮಯನು ಸಂತುಷ್ಟನಾದನು. ತನ್ನ ಮಗಳನ್ನು ದಶಗ್ರೀವನಿಗೆ ಕೊಡುವುದು ಯುಕ್ತವೆಂದು ಅವನಿಗೆ ತೋರಿತು ಕೂಡಲೆ ಮಯನು ರಾವಣನ ಕೈಯಿಂದ ತನ್ನ ಮಗಳ ಕೈಯನ್ನು ಹಿಡಿಸಿ

ಕನ್ಯಾ ಮಂದೋದರೀ ನಾಮ ಪತ್ನ್ಯರ್ಥಂ ಪ್ರತಿಗೃಹ್ಯತಾಮ್ ।
ಬಾಢಮಿತ್ಯೇವ ತಂ ರಾಮ ದಶಗ್ರೀವೋಽಭ್ಯಭಾಷತ ॥ ೧೯

ಪ್ರಜ್ವಾಲ್ಯ ತತ್ರ ಚೈವಾಗ್ನಿಮಕರೋತ್ ಪಾಣಿಸಂಗ್ರಹಮ್ ।
ಸ ಹಿ ತಸ್ಯ ಮಯೋ ರಾಮ ಶಾಪಾಭಿಜ್ಞಸ್ತಪೋಧನಾತ್ ॥ ೨೦

ವಿದಿತ್ವಾ ತೇನ ಸಾ ದತ್ತಾ ತಸ್ಯ ಪೈತಾಮಹಂ ಕುಲಮ್ ।
ಅಮೋಘಾಂ ತಸ್ಯ ಶಕ್ತಿಂ ಚ ಪ್ರದದೌ ಪರಮಾದ್ಭುತಾಮ್ ॥ ೨೧

ಪರೇಣ ತಪಸಾ ಲಬ್ಧಾಂ ಜಘ್ನಿವಾಲ್ಲಕ್ಷ್ಮಣಂ ಯಯಾ ।
ಏವಂ ಸ್ವೀಕೃತದಾರೋ ವೈ ಲಂಕಾಯಾ ಈಶ್ವರಃ ಪ್ರಭುಃ ॥ ೨೨

ಗತ್ವಾ ತು ನಗರೀಂ ಭಾರ್ಯೇ ಭ್ರಾತೃಭ್ಯಾಂ ಸಮುಪಾಹರತ್ ।
ವೈರೋಚನಸ್ಯ ದೌಹಿತ್ರೀಂ ವಜ್ರಜ್ವಾಲೇತಿ ನಾಮತಃ ॥ ೨೩

ತಾಂ ಭಾರ್ಯಾಂ ಕುಂಭಕರ್ಣಸ್ಯ ರಾವಣಃ ಸಮಕಲ್ಪಯತ್ ।
ಗಂಧರ್ವರಾಜಸ್ಯ ಸುತಾಂ ಶೈಲೂಷಸ್ಯ ಮಹಾತ್ಮನಃ ॥ ೨೪

---

ನಸುನಗುತ್ತ "ರಾಕ್ಷಸೇಶ್ವರ, ಇವಳು ಹೇಮೆಯೆಂಬ ಅಪ್ಸರೆಯಲ್ಲಿ ಜನಿಸಿದ ನನ್ನ ಪುತ್ರಿಯಾಗಿದ್ದಾಳೆ ಇವಳ ಹೆಸರು ಮಂಡೋದರಿ ಈ ಕನ್ಯೆಯನ್ನು ಪತ್ನಿಯಾಗಿ ಪ್ರತಿಗ್ರಹಿಸು" ಎಂದನು ದಶಗ್ರೀವನು "ತಥಾಸ್ತು" ಎಂದು ಹೇಳಿದನು (೧೬-೧೯) ಒಡನೆಯೇ ಮಯನು ಅಗ್ನಿಯನ್ನು ಪ್ರತಿಷ್ಠಾಪಿಸಿ ವಿಧಿವತ್ತಾಗಿ ಮಂಡೋದರಿಯನ್ನು ರಾವಣನಿಗೆ ಪಾಣಿಗ್ರಹಣಮಾಡಿಸಿದನು ದಶಗ್ರೀವನು ಕ್ರೂರಾತ್ಮನಾಗುವನೆಂದು ನುಡಿದ ವಿಶ್ರವಸ್ಸಿನ ಶಾಪವು ಮಯನಿಗೆ ತಿಳಿದಿತ್ತು ಆದರೂ ಅವನು ಬ್ರಹ್ಮವಂಶಸಂಜಾತನೆಂಬುದನ್ನರಿತು ಮಯನು ರಾವಣನಿಗೆ ಮಗಳನ್ನು ಕೊಟ್ಟನು ಅದ್ಭುತವೂ ಅಮೋಘವೂ ಆದ ಒಂದು ಶಕ್ತ್ಯಾಯುಧವನ್ನೂ ರಾವಣನಿಗೆ ಇತ್ತನು. ಅದು ಪರಮ ತಪೋಬಲದಿಂದ ಮಯನಿಗೆ ಲಭಿಸಿತ್ತು ಅದನ್ನೇ ರಾವಣನು ಲಕ್ಷ್ಮಣನ ಮೇಲೆ ಪ್ರಯೋಗಿಸಿದ್ದು (೨೦-೨೧) ಹೀಗೆ ಲಂಕೇಶ್ವರನು ಮದುವೆಯಾಗಿ ಪತ್ನಿಯೊಡನೆ ಲಂಕೆಗೆ ಹೋದಮೇಲೆ, ತನ್ನ ತಮ್ಮಂದಿರಿಗೂ ವಿವಾಹಮಾಡಿದನು ವೈರೋಚನನ ಪುತ್ರಿಯ ಮಗಳಾದ ವಜ್ರಜ್ವಾಲೆಯನ್ನು ಕುಂಭಕರ್ಣನಿಗೆ ತಂದುಕೊಂಡು ಮದುವೆಮಾಡಿಸಿದನು. ಗಂಧರ್ವರಾಜನಾದ ಶೈಲೂಷ

**ಸರಮಾಂ ನಾಮ ಧರ್ಮಜ್ಞಾಂ ಲೇಭೇ ಭಾರ್ಯಾಂ ವಿಭೀಷಣಃ ।**
**ತೀರೇ ತು ಸರಸೋ ವೈ ತು ಸಂಜಜ್ಞೇ ಮಾನಸಸ್ಯ ಹಿ ॥ ೨೫**

**ಸರಸ್ತದಾ ಮಾನಸಂ ತು ವವೃಧೇ ಜಲದಾಗಮೇ ।**
**ಮಾತ್ರಾ ತು ತಸ್ಯಾಃ ಕನ್ಯಾಯಾಃ ಸ್ನೇಹೇನಾಕ್ರಂದಿತಂ ವಚಃ ॥**

**ಸರೋ ಮಾ ವರ್ಧಯಸ್ವೇತಿ ತತಃ ಸಾ ಸರಮಾಭವತ್ ।**
**ಏವಂ ತೇ ಕೃತದಾರಾ ವೈ ರೇಮಿರೇ ತತ್ರ ರಾಕ್ಷಸಾಃ ॥ ೨೭**

**ಸ್ವಾಂ ಸ್ವಾಂ ಭಾರ್ಯಾಮುಪಾಗಮ್ಯ ಗಂಧರ್ವಾ ಇವ ನಂದನೇ ।**
**ತತೋ ಮಂದೋದರೀ ಪುತ್ರಂ ಮೇಘನಾದಮಜೀಜನತ್ ॥ ೨೮**

**ಸ ಏವ ಇಂದ್ರಜಿನ್ನಾಮ ಯುಷ್ಮಾಭಿರಭಿಧೀಯತೇ ।**
**ಜಾತಮಾತ್ರೇಣ ಹಿ ಪುರಾ ತೇನ ರಾವಣಸೂನುನಾ ॥ ೨೯**

**ರುದತಾ ಸುಮಹಾನ್ ಮುಕ್ತೋ ನಾದೋ ಜಲಧರೋಪಮಃ ।**
**ಜಡೀಕೃತಾ ಚ ಸಾ ಲಂಕಾ ತಸ್ಯ ನಾದೇನ ರಾಘವ ॥ ೩೦**

---

ನೆಂಬ ಮಹಾತ್ಮನಿಗೆ ಸರಮೆಯೆಂಬ ಮಗಳಿದ್ದಳು ಅವಳು ಧರ್ಮಿಷ್ಠಳು ಆಕೆಯನ್ನು ವಿಭೀಷಣನು ಮದುವೆಯಾದನು (೨೨-೨೪) ರಾಘವ, ಅವಳಿಗೆ ಸರಮಾ ಎಂಬ ಹೆಸರು ಏಕೆ ಬಂದಿತೆಂದರೆ ಅವಳು ಮಾನಸ ಸರಸ್ಸಿನ ತೀರದಲ್ಲಿ ಜನಿಸಿದಳು ಆ ಸಮಯದಲ್ಲಿ ಮಳೆಗಾಲವಾದ್ದರಿಂದ ಸರಸ್ಸು ಉಕ್ಕಿ ಬರುತ್ತಿರುವುದನ್ನು ನೋಡಿ ಸರಮೆಯ ತಾಯಿಯು 'ಸರೋ ಮಾ'—ಎಲೈ ಸರಸ್ಸೆ, ವರ್ಧಿಸಬೇಡ—ಎಂದು ಶಿಶುವಿನ ಮೇಲಿನ ಪ್ರೀತಿಯಿಂದ ಕೂಗಿಕೊಂಡಳು ಆದ್ದರಿಂದ ಆ ಮಗುವಿಗೆ ಸರಮಾ ಎಂದು ಹೆಸರಾಯಿತು ! ಹೀಗೆ ಆ ಮೂವರು ರಾಕ್ಷಸರೂ ವಿವಾಹವಾಗಿ ಪತ್ನಿಯರೊಡನೆ ಸುಖದಿಂದ ವಿಹರಿಸುತ್ತಿದ್ದರು (೨೫-೨೭). ನಂದನವನದಲ್ಲಿ ಗಂಧರ್ವರು ರಮಿಸುವಂತೆ ತಮ್ಮ ಕಾಂತೆಯರೊಂದಿಗೆ ಸುಖಿಸುತ್ತಿದ್ದರು ಹೀಗಿರಲು ಮಂಡೋದರಿಯು ಮೇಘನಾದನೆಂಬ ಪುತ್ರನನ್ನು ಪ್ರಸವಿಸಿದಳು ಆತನನ್ನೇ ನೀವು ಇಂದ್ರಜಿತುವೆಂದು ಕರೆಯುತ್ತಿದ್ದೀರಿ ಆ ರಾವಣಪುತ್ರನು ಹುಟ್ಟಿದೊಡನೆಯೇ ಮೇಘವು ಗುಡುಗಿದಂತೆ ಗಟ್ಟಿಯಾಗಿ ಅಳುತ್ತಿದ್ದನು ಆ ರೋದನಧ್ವನಿಯಿಂದ, ರಾಘವ, ಲಂಕಾನಗರಿಯೇ ಜಡೀಕೃತವಾಗಿ ಕಿವುಡಾಯಿತು ! (೨೮-೩೦)

ಪಿತಾ ತಸ್ಯಾಕರೋನ್ನಾಮ ಮೇಘನಾದ ಇತಿ ಸ್ವಯಮ್ ।
ಸೋಽವರ್ಧತ ತದಾ ರಾಮ ರಾವಣಾಂತಃಪುರೇ ಶುಭೇ ॥ ೩೧

ರಕ್ಷ್ಯಮಾಣೋ ವರಸ್ತ್ರೀಭಿಶ್ಛನ್ನಃ ಕಾಷ್ಠೈರಿವಾನಲಃ ।
ಮಾತಾಪಿತ್ರೋರ್ಮಹಾಹರ್ಷಂ ಜನಯನ್ ರಾವಣಾತ್ಮಜಃ ॥ ೩೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವಾದಶಃ ಸರ್ಗಃ



ಆದ್ದರಿಂದ ತಂದೆಯು ಅವನಿಗೆ ಮೇಘನಾದನೆಂದು ಹೆಸರಿಟ್ಟನು ಆಮೇಲೆ ಮೇಘನಾದನು ವೈಭವೋಪೇತವಾದ ರಾವಣಾಂತಃಪುರದಲ್ಲಿ ಉತ್ತಮ ಸ್ತ್ರೀಯರ ಲಾಲನೆಯಿಂದ ಬೆಳೆದನು ಕಟ್ಟಿಗೆಯಲ್ಲಡಗಿದ ಬೆಂಕಿಯಂತೆ, ರಾವಣಾತ್ಮಜನು ತಾಯಿತಂದೆಗಳಿಗೆ ಮಹಾಹರ್ಷವನ್ನುಂಟು ಮಾಡುತ್ತ ವರ್ಧಿಸಿದನು (೩೧-೩೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹನ್ನೆರಡನೆಯ ಸರ್ಗ



## ತ್ರಯೋದಶಃ ಸರ್ಗಃ

### ಧನದದೂತಹನನಮ್

ಅಥ ಲೋಕೇಶ್ವರೋತ್ಸೃಷ್ಟಾ ತತ್ರ ಕಾಲೇನ ಕೇನಚಿತ್ ।
ನಿದ್ರಾ ಸಮಭವತ್ತೀವ್ರಾ ಕುಂಭಕರ್ಣಸ್ಯ ರೂಪಿಣೀ ॥ ೧

ತತೋ ಭ್ರಾತರಮಾಸೀನಂ ಕುಂಭಕರ್ಣೋಽಬ್ರವೀದ್ವಚಃ ।
ನಿದ್ರಾ ಮಾಂ ಬಾಧತೇ ರಾಜನ್ ಕಾರಯಸ್ವ ಮಮಾಲಯಮ್ ॥ ೨

ವಿನಿಯುಕ್ತಾಸ್ತತೋ ರಾಜ್ಞಾ ಶಿಲ್ಪಿನೋ ವಿಶ್ವಕರ್ಮವತ್ ।
ಅಕುರ್ವನ್ ಕುಂಭಕರ್ಣಸ್ಯ ಕೈಲಾಸಸಮಮಾಲಯಮ್ ॥ ೩

ವಿಸ್ತೀರ್ಣಂ ಯೋಜನಂ ಶುಭ್ರಂ ತತೋ ದ್ವಿಗುಣಮಾಯತಮ್ ।
ದರ್ಶನೀಯಂ ನಿರಾಬಾಧಂ ಕುಂಭಕರ್ಣಸ್ಯ ಚಕ್ರಿರೇ ॥ ೪

### ಸರ್ಗ ೧೩

ಕುಂಭಕರ್ಣನಿಗೋಸ್ಕರ ಶಯನಮಂದಿರದ ನಿರ್ಮಾಣ ಧರ್ಮಮಾರ್ಗದಲ್ಲಿ ನಡೆಯುವಂತೆ ಕುಬೇರನಿಂದ ರಾವಣನಿಗೆ ಸಂದೇಶ ಕುಪಿತನಾದ ರಾವಣನು ಕುಬೇರನಮೇಲೆ ದಂಡೆತ್ತಿ ಹೋಗುವುದು.

ರಾಘವ, ಹೀಗಿರಲು ಲೋಕೇಶ್ವರನಾದ ಬ್ರಹ್ಮನ ವಚನಪ್ರಭಾವದಿಂದ ತೀವ್ರಸ್ವಭಾವದ ನಿದ್ರಾದೇವಿಯು ಕುಂಭಕರ್ಣನಿಗೆ ಪ್ರತ್ಯಕ್ಷಳಾದಳು! ಆಗ ಕುಂಭಕರ್ಣನು ತನ್ನ ಅಣ್ಣನನ್ನು ನೋಡಿ "ಮಹಾರಾಜ, ನಿದ್ರೆಯು ನನ್ನನ್ನು ಬಾಧಿಸುತ್ತಿದೆ ಆದ್ದರಿಂದ ನನಗಾಗಿ ಒಂದು ಶಯನಮಂದಿರವನ್ನು ನಿರ್ಮಿಸಿಕೊಡು" ಎಂದು ಕೇಳಿದನು (೧-೨) ಆಮೇಲೆ ರಾಕ್ಷಸೇಂದ್ರನ ಆದೇಶದಂತೆ ವಿಶ್ವಕರ್ಮ ಸಮಾನರಾದ ಶಿಲ್ಪಿಗಳು ಕೈಲಾಸದಂತೆ ಭವ್ಯವಾದ ಒಂದು ಶಯ್ಯಾಗೃಹವನ್ನು ಕುಂಭಕರ್ಣನಿಗಾಗಿ ನಿರ್ಮಿಸಿದರು ವಿಶಾಲವಾದ ಆ ಗೃಹವು ಒಂದು ಯೋಜನ ಅಗಲವಾಗಿಯೂ ಎರಡು ಯೋಜನ

ಸ್ಫಾಟಿಕೈಃ ಕಾಂಚನೈಶ್ಚಿತ್ರೈಃ ಸ್ತಂಭೈಃ ಸರ್ವತ್ರ ಶೋಭಿತಮ್ ।
ವೈದೂರ್ಯಕೃತಸೋಪಾನಂ ಕಿಂಕಿಣೀಜಾಲಕಂ ತಥಾ ॥ ೫

ದಾಂತತೋರಣವಿನ್ಯಸ್ತಂ ವಜ್ರಸ್ಫಟಿಕವೇದಿಕಮ್ ।
ಮನೋಹರಂ ಸರ್ವಸುಖಂ ಕಾರಯಾಮಾಸ ರಾಕ್ಷಸಃ ॥ ೬

ಸರ್ವತ್ರ ಸುಖದಂ ನಿತ್ಯಂ ಮೇರೋಃ ಪುಣ್ಯಾಂ ಗುಹಾಮಿವ ।
ತತ್ರ ನಿದ್ರಾಸಮಾವಿಷ್ಟಃ ಕುಂಭಕರ್ಣೋ ಮಹಾಬಲಃ ॥ ೭

ಬಹೂನ್ಯಬ್ದಸಹಸ್ರಾಣಿ ಶಯಾನೋ ನ ಪ್ರಬುಧ್ಯತೇ ।
ನಿದ್ರಾಭಿಭೂತೇ ತು ತದಾ ಕುಂಭಕರ್ಣೇ ದಶಾನನಃ ॥ ೮

ದೇವರ್ಷಿಯಕ್ಷಗಂಧರ್ವಾನ್ ಸಂಜಘ್ನೇ ಹಿ ನಿರಂಕುಶಃ ।
ಉದ್ಯಾನಾನಿ ಚ ಚಿತ್ರಾಣಿ ನಂದನಾದೀನಿ ಯಾನಿ ಚ ॥ ೯

ತಾನಿ ಗತ್ವಾ ಸುಸಂಕ್ರುದ್ಧೋ ಭಿನತ್ತಿ ಸ್ಮ ದಶಾನನಃ ।
ನದೀಂ ಗಜ ಇವ ಕ್ರೀಡನ್ ವೃಕ್ಷಾನ್ ವಾಯುರಿವ ಕ್ಷಿಪನ್ ॥ ೧೦

---

ಉದ್ದವಾಗಿಯೂ ಇದ್ದಿತು। ಸ್ಫಟಿಕಮಯವೂ ಕಾಂಚನಮಯವೂ ಆದ ಚಿತ್ರಾಕಾರದ ಸ್ತಂಭಗಳಿಂದ ಶೋಭಿತವಾಗಿಯೂ ವೈಡೂರ್ಯದ ಸೋಪಾನಗಳಿಂದ ರಂಜಿತವಾಗಿಯೂ ಕಿರುಗೆಜ್ಜೆಗಳಿಂದ ಅಲಂಕೃತವಾಗಿಯೂ ಇದ್ದಿತು (೩-೫) ಹೆಬ್ಬಾಗಿಲಿನ ಕಮಾನು ದಂತನಿರ್ಮಿತವಾಗಿಯೂ ವೇದಿಕೆಯು ವಜ್ರಗಳಿಂದಲೂ ಸ್ಫಟಿಕಮಣಿಗಳಿಂದಲೂ ಕೆತ್ತಲ್ಪಟ್ಟುದಾಗಿಯೂ ಇತ್ತು ಹೀಗೆ ಮನೋಹರವೂ ಸುಖಾವಹವೂ ಆದ ಶಯನಮಂದಿರವನ್ನು ರಾವಣನು ಕಟ್ಟಿಸಿದನು (೬). ಆ ಮಂದಿರವು ಮೇರುಪರ್ವತದ ಸುಂದರವಾದ ಒಂದು ಗುಹೆಯೋ ಎಂಬಂತೆ ಸೌಖ್ಯಕರವಾಗಿತ್ತು ಬಲಾಢ್ಯನಾದ ಕುಂಭಕರ್ಣನು ಅದರಲ್ಲಿ ಪವಡಿಸಿದನು। ಎಷ್ಟೋ ವರ್ಷಗಳು ಕಳೆದುಹೋದರೂ ಅವನಿಗೆ ಎಚ್ಚರವಾಗಲಿಲ್ಲ ಕುಂಭಕರ್ಣನು ನಿದ್ರೆಯಲ್ಲಿದ್ದಾಗ ದಶಗ್ರೀವನು ಯಾವ ತಡೆಯೂ ಇಲ್ಲದೆ ದೇವರ್ಷಿಯಕ್ಷಗಂಧರ್ವರನ್ನು ಪೀಡಿಸಲಾರಂಭಿಸಿದನು (೭-೮) ನಂದನಾದಿ ಉದ್ಯಾನವನಗಳಿಗೆ ನುಗ್ಗಿ ಕ್ರೋಧದಿಂದ ಅವುಗಳನ್ನು ಧ್ವಂಸಪಡಿಸುತ್ತಿದ್ದನು ಆ ರಾಕ್ಷಸನು ಆನೆಯಂತೆ ನದಿಗಳಲ್ಲಿ ಕ್ರೀಡಿಸುತ್ತ, ಬಿರುಗಾಳಿಯಂತೆ ಮರಗಳನ್ನು ಕಿತ್ತೆಸೆಯುತ್ತ, ವಜ್ರಾಯುಧದಂತೆ ಕ್ರೀಡಾ

ನಗಾನ್ ವಜ್ರ ಇವೋತ್ಸೃಷ್ಟೋ ವಿಧ್ವಂಸಯತಿ ರಾಕ್ಷಸಃ ।
ತಥಾವೃತ್ತಂ ತು ವಿಜ್ಞಾಯ ದಶಗ್ರೀವಂ ಧನೇಶ್ವರಃ ॥ ೧೧

ಕುಲಾನುರೂಪಂ ಧರ್ಮಜ್ಞೋ ವೃತ್ತಂ ಸಂಸ್ಮೃತ್ಯ ಚಾತ್ಮನಃ ।
ಸೌಭ್ರಾತ್ರದರ್ಶನಾರ್ಥಂ ತು ದೂತಂ ವೈಶ್ರವಣಸ್ತದಾ ॥ ೧೨

ಲಂಕಾಂ ಸಂಪ್ರೇಷಯಾಮಾಸ ದಶಗ್ರೀವಸ್ಯ ವೈ ಹಿತಮ್ ।
ಸ ಗತ್ವಾ ನಗರೀಂ ಲಂಕಾಮಾಸಸಾದ ವಿಭೀಷಣಮ್ ॥ ೧೩

ಮಾನಿತಸ್ತೇನ ಧರ್ಮೇಣ ಪೃಷ್ಟಶ್ಚಾಗಮನಂ ಪ್ರತಿ ।
ಪೃಷ್ಟ್ವಾ ಚ ಕುಶಲಂ ರಾಜ್ಞೋ ಜ್ಞಾತೀನಾಂ ಚ ವಿಭೀಷಣಃ ॥

ಸಭಾಯಾಂ ದರ್ಶಯಾಮಾಸ ತಮಾಸೀನಂ ದಶಾನನಮ್ ।
ಸ ದೃಷ್ಟ್ವಾ ತತ್ರ ರಾಜಾನಂ ದೀಪ್ಯಮಾನಂ ಸ್ವತೇಜಸಾ ॥ ೧೪

ಜಯೇತಿ ವಾಚಾ ಸಂಪೂಜ್ಯ ತೂಷ್ಣೀಂ ಸಮಭಿವರ್ತತ ।
ತಂ ತತ್ರೋತ್ತಮಪರ್ಯಂಕೇ ವರಾಸ್ತರಣಶೋಭಿತೇ ॥ ೧೬

---

ಪರ್ವತಗಳನ್ನು ಒಡೆಯುತ್ತ ವಿಧ್ವಂಸಕೃತ್ಯದಲ್ಲಿ ನಿರತನಾದನು (೯-೧೦). ದಶಗ್ರೀವನ ದುರ್ವರ್ತನೆಯು ಕುಬೇರನಿಗೆ ತಿಳಿಯಿತು ಆ ಬಗೆಯ ವರ್ತನೆಯು ತಮ್ಮ ಕುಲಕ್ಕೆ ಅನುಗುಣವಾದುದಲ್ಲವೆಂದು ಆಲೋಚಿಸಿ, ಆ ಧರ್ಮಾತ್ಮನು ಭ್ರಾತೃವಾತ್ಸಲ್ಯದಿಂದ ದಶಗ್ರೀವನಿಗೆ ಹಿತವನ್ನು ಬೋಧಿಸುವುದಕ್ಕಾಗಿ, ಒಬ್ಬ ದೂತನನ್ನು ಲಂಕೆಗೆ ಕಳಿಸಿದನು ಆ ದೂತನು ಲಂಕೆಗೆ ಹೋಗಿ ವಿಭೀಷಣನನ್ನು ಮೊದಲು ಕಂಡನು (೧೧-೧೩) ವಿಭೀಷಣನು ಧರ್ಮವಿಧಿಯಂತೆ ದೂತನನ್ನು ಉಪಚರಿಸಿ,ಆಗಮನವೃತ್ತಾಂತ ವನ್ನು ಕೇಳಿ, ಕುಬೇರನ ಮತ್ತು ಆತನ ಬಾಂಧವರ ಕುಶಲವನ್ನು ವಿಚಾರಿಸಿ, ರಾಜಸಭೆಗೆ ಕರೆತಂದು ದಶಗ್ರೀವನ ಸಂದರ್ಶನವನ್ನೇರ್ಪಡಿಸಿದನು (೧೪). ಸಿಂಹಾಸನದಲ್ಲಿ ವಿರಾಜಿಸುತ್ತಿದ್ದ ರಾವಣನನ್ನು ನೋಡಿ ಆ ದೂತನು "ಮಹಾರಾಜ, ಜಯವಾಗಲಿ!" ಎಂದು ಆದರದಿಂದ ಅಭಿನಂದಿಸಿ ಸುಮ್ಮನಾದನು. ರಾವಣನು ಉತ್ತಮಾಸ್ತರಣಗಳಿಂದ ಶೋಭಿತವಾದ

*

ಉಪವಿಷ್ಟಂ ದಶಗ್ರೀವಂ ದೂತೋ ವಾಕ್ಯಮಥಾಬ್ರವೀತ್ ।
ರಾಜನ್ ವದಾಮಿ ತೇ ಸರ್ವಂ ಭ್ರಾತಾ ತವ ಯದಬ್ರವೀತ್ ॥ ೧೭

ಉಭಯೋಃ ಸದೃಶಂ ವೀರ ವೃತ್ತಸ್ಯ ಚ ಕುಲಸ್ಯ ಚ ।
ಸಾಧು ಪರ್ಯಾಪ್ತಮೇತಾವತ್ ಕೃತಶ್ಚಾರಿತ್ರಸಂಗ್ರಹಃ ॥ ೧೮

ಸಾಧು ಧರ್ಮೇ ವ್ಯವಸ್ಥಾನಂ ಕ್ರಿಯತಾಂ ಯದಿ ಶಕ್ಯತೇ ।
ದೃಷ್ಟಂ ಮೇ ನಂದನಂ ಭಗ್ನಮೃಷಯೋ ನಿಹತಾಃ ಶ್ರುತಾಃ ॥ ೧೯

ದೇವತಾನಾಂ ಸಮುದ್ಯೋಗಸ್ತ್ವತ್ತೋ ರಾಜನ್ ಮಮ ಶ್ರುತಃ ।
ನಿರಾಕೃತಶ್ಚ ಬಹುಶಸ್ತ್ವಯಾಹಂ ರಾಕ್ಷಸಾಧಿಪ ॥ ೨೦

ಸಾಪರಾಧೋಽಪಿ ಬಾಲೋ ಹಿ ರಕ್ಷಿತವ್ಯಃ ಸ್ವಬಾಂಧವೈಃ ।
ಅಹಂ ತು ಹಿಮವತ್ಪೃಷ್ಠಂ ಗತೋ ಧರ್ಮಮುಪಾಸಿತುಮ್ ॥

ರೌದ್ರಂ ವ್ರತಂ ಸಮಾಸ್ಥಾಯ ನಿಯತೋ ನಿಯತೇಂದ್ರಿಯಃ ।
ತತ್ರ ದೇವೋ ಮಯಾ ದೃಷ್ಟಃ ಸಹದೇವ್ಯೋಮಯಾ ಪ್ರಭುಃ ॥

---

ಪೀಠದಲ್ಲಿ ಕುಳಿತೇ ಇದ್ದನು (೧೫-೧೬) ದೂತನು ದಶಗ್ರೀವನನ್ನು ಕುರಿತು ಹೀಗೆಂದನು. "ಮಹಾರಾಜ, ನಿನ್ನ ಸೋದರನಾದ ವೈಶ್ರವಣನು ಹೇಳಿಕಳಿಸಿದ ಸಂದೇಶವನ್ನು ತಿಳಿಸುತ್ತೇನೆ ವೀರಾಗ್ರೇಸರ–ದಶಾನನ, ಕುಬೇರನ ಸಂದೇಶವು ನಿಮ್ಮಿರ್ವರ ಕುಲಕ್ಕೂ ಚಾರಿತ್ರಪರಂಪರೆಗೂ ಅನುಗುಣವಾದದ್ದು ಆತನ ಸಂದೇಶವೇನೆಂದರೆ. ಒಳ್ಳೆಯದು, ಇದುವರೆಗೆ ಆದದ್ದಾಯಿತು, ಇಷ್ಟು ಸಾಕು ಇನ್ನು ಸಚ್ಚಾರಿತ್ರವನ್ನು ಸಂಪಾದಿಸಿಕೊಳ್ಳಬೇಕು (೧೭-೧೮) ಸಾಧ್ಯವಾದರೆ ಧರ್ಮಮಾರ್ಗದಲ್ಲಿ ನಡೆದುಕೊಳ್ಳಬೇಕು ನಂದನವನವು ನಾಶವಾದ್ದನ್ನು ನಾನು ನೋಡಿದ್ದೇನೆ. ಋಷಿಗಳು ಹತರಾದರೆಂಬುದನ್ನು ಕೇಳಿದ್ದೇನೆ ರಾಕ್ಷಸೇಶ್ವರ, ನಿನ್ನ ನಿಮಿತ್ತ ದಿಂದ ದೇವತೆಗಳು ಈಗ ಪ್ರತೀಕಾರಕ್ಕಾಗಿ ಸಂನಾಹ ಮಾಡುತ್ತಿರುವರೆಂಬ ಸುದ್ದಿ ನನಗೆ ಮುಟ್ಟಿದೆ ನನ್ನನ್ನು ನೀನು ಅನೇಕ ಬಾರಿ ಧಿಕ್ಕರಿಸಿದ್ದೀಯೆ (೧೯–೨೦) ಆದರೆ ಬಾಲಕರು ತಪ್ಪುಮಾಡಿದರೂ ಬಾಂಧವರು ಅವರ ಯೋಗಕ್ಷೇಮಗಳನ್ನು ನೋಡಿಕೊಳ್ಳಬೇಕಲ್ಲವೆ? ನಾನಾದರೋ ಇದುವರೆಗೆ ತಪಶ್ಚರಣೆಗಾಗಿ ಹಿಮಾಲಯ ಪರ್ವತಪ್ರಾಂತಕ್ಕೆ ಹೋಗಿದ್ದೆನು. ರುದ್ರ

**ಸವ್ಯಂ ಚಕ್ಷುರ್ಮಯಾ ದೈವಾತ್ತತ್ರ ದೇವ್ಯಾಂ ನಿಪಾತಿತಮ್ ।**
**ಕಾನ್ವಿಯಂ ಸ್ಯಾದಿತಿ ಶುಭಾ ನ ಖಲ್ವನ್ಯೇನ ಹೇತುನಾ ॥** ೨೩

**ರೂಪಂ ಹ್ಯನುಪಮಂ ಕೃತ್ವಾ ರುದ್ರಾಣೀ ತತ್ರ ತಿಷ್ಠತಿ ।**
**ದೇವ್ಯಾ ದಿವ್ಯಪ್ರಭಾವೇಣ ದಗ್ಧಂ ಸವ್ಯಂ ಮಮೇಕ್ಷಣಮ್ ॥** ೨೪

**ರೇಣುಧ್ವಸ್ತಮಿವ ಜ್ಯೋತಿಃ ಪಿಂಗಲತ್ವಮುಪಾಗತಮ್ ।**
**ತತೋಽಹಮನ್ಯದ್ವಿಸ್ತೀರ್ಣಂ ಗತ್ವಾ ತಸ್ಯ ಗಿರೇಸ್ತಟಮ್ ॥** ೨೫

**ತೂಷ್ಣೀಂ ವರ್ಷಶತಾನ್ಯಷ್ಟೌ ಸಮಧಾರಂ ಮಹಾವ್ರತಮ್ ।**
**ಸಮಾಪ್ತೇ ನಿಯಮೇ ತಸ್ಮಿಂಸ್ತತ್ರ ದೇವೋ ಮಹೇಶ್ವರಃ ॥** ೨೬

**ಪ್ರೀತಃ ಪ್ರೀತೇನ ಮನಸಾ ಪ್ರಾಹ ವಾಕ್ಯಮಿದಂ ಪ್ರಭುಃ ।**
**ಪೈಂಗಲ್ಯಂ ಯದವಾಪ್ತಂ ಹಿ ದೇವ್ಯಾ ರೂಪನಿರೀಕ್ಷಣಾತ್ ॥** ೨೭

---

ಪ್ರಸಾದನಾರ್ಥವಾಗಿ ಒಂದು ವ್ರತವನ್ನವಲಂಬಿಸಿ ಜಿತೇಂದ್ರಿಯನಾಗಿ ತಪಸ್ಸನ್ನಾಚರಿಸಿದೆನು ಹೀಗಿರುವಾಗ ಅಲ್ಲಿ ಉಮಾಸಹಿತನಾದ ಮಹಾದೇವನನ್ನು ಒಮ್ಮೆ ಕಂಡೆನು (೨೧-೨೨). ಉಮಾದೇವಿಯನ್ನು ನಾನು 'ಇವಳು ಯಾರಿರಬಹುದು?' ಎಂದು ಅಚ್ಚರಿಯಿಂದ ದಿಟ್ಟಿಸಿ ನೋಡಿದೆನು. ತಮ್ಮ, ಇನ್ನು ಯಾವ ನಿಮಿತ್ತದಿಂದಲೂ ಅಲ್ಲ ಅಸಾಮಾನ್ಯವಾದ ದಿವ್ಯರೂಪವನ್ನು ಧರಿಸಿ ಭವಾನಿಯು ಅಲ್ಲಿ ಕಾಣಿಸಿದಳು ದಶಾನನ, ಆ ದೇವಿಯ ದಿವ್ಯಪ್ರಭಾವದಿಂದ ನನ್ನ ಎಡಗಣ್ಣು ಸುಟ್ಟುಹೋಯಿತು! (೨೩-೨೪) ಧೂಳಿಮುಚ್ಚಿದ ಜ್ವಾಲೆಯಂತೆ ಪಿಂಗಳವರ್ಣವುಳ್ಳದ್ದಾಯಿತು * ಅನಂತರ ನಾನು ಹಿಮಾಚಲದ ಇನ್ನೊಂದು ತಟಕ್ಕೆ ಹೋಗಿ ಮೌನಿಯಾಗಿ ಎಂಟುನೂರು ವರ್ಷಗಳವರೆಗೆ ಮಹಾವ್ರತವನ್ನು ಕೈಗೊಂಡೆನು ಆ ವ್ರತವು ಪೂರ್ಣವಾಗಲು ಮಹೇಶ್ವರನು ಪ್ರಸನ್ನನಾಗಿ ಸಂತುಷ್ಟಹೃದಯದಿಂದ ಮಾತನಾಡಿದನು (೨೫-೨೬) ಆ ಸ್ವಾಮಿಯು "ವೈಶ್ರವಣ, ದೇವಿಯ ರೂಪವನ್ನು ನೋಡಿದ್ದರಿಂದ ನಿನ್ನ ನೇತ್ರವು ಪಿಂಗಳವಾಯಿತಲ್ಲವೆ? ನಿನ್ನ

---

* ಎಡಗಣ್ಣು ಸುಟ್ಟಿತೆಂದೂ ಬಲಗಣ್ಣು ಪಿಂಗಳವರ್ಣದ್ದಾಯಿತೆಂದೂ ಕೆಲವರು ಹೇಳುತ್ತಾರೆ ಪಿಂಗಳ=ಕಂದುಬಣ್ಣ (Brown).

ಪ್ರೀತೋಽಸ್ಮಿ ತವ ಧರ್ಮಜ್ಞ ತಪಸಾ ತೇನ ಸುವ್ರತ ।
ಮಯಾ ಚೈತದ್‌ವ್ರತಂ ಚೀರ್ಣಂ ತ್ವಯಾ ಚೈವ ಧನಾಧಿಪ ॥ ೨೮
ತೃತೀಯಃ ಪುರುಷೋ ನಾಸ್ತಿ ಯಶ್ಚರೇದ್‌ವ್ರತಮೀದೃಶಮ್ ।
ವ್ರತಂ ಸುದುಷ್ಕರಂ ಹ್ಯೇತನ್ಮಯಾ ಹ್ಯುತ್ಪಾದಿತಂ ಪುರಾ ॥ ೨೯
ತತ್ಸಖಿತ್ವಂ ಮಯಾ ಸೌಮ್ಯ ರೋಚಯಸ್ವ ಧನೇಶ್ವರ ।
ತಪಸಾ ನಿರ್ಜಿತಶ್ಚಾಹಂ ಸಖಾ ಮಮ ಭವಾನಘ ॥ ೩೦
ದೇವ್ಯಾ ದಗ್ಧಂ ಪ್ರಭಾವೇಣ ಯಚ್ಚ ಸವ್ಯಂ ತವೇಕ್ಷಣಮ್ ।
ಏಕಾಕ್ಷಿಪಿಂಗಲೇತ್ಯೇವಂ ನಾಮ ಸ್ಥಾಸ್ಯತಿ ಶಾಶ್ವತಮ್ ॥ ೩೧
ಏವಂ ತೇನ ಸಖಿತ್ವಂ ಚ ಪ್ರಾಪ್ಯಾನುಜ್ಞಾಂ ಚ ಶಂಕರಾತ್ ।
ಆಗತ್ಯ ಚ ಶ್ರುತೋಽಯಂ ಮೇ ತವ ಪಾಪವಿನಿಶ್ಚಯಃ ॥ ೩೨
ತದಧರ್ಮಿಷ್ಠಸಂಯೋಗಾನ್ನಿವರ್ತ ಕುಲದೂಷಣಾತ್ ।
ಚಿಂತ್ಯತೇ ಹಿ ವಧೋಪಾಯಃ ಸರ್ಷಿಸಂಘೈಃ ಸುರೈಸ್ತವ ॥ ೩೩

---

ತಪಸ್ಸಿಗೆ ಸಂತುಷ್ಟನಾಗಿದ್ದೇನೆ ನಾನೊಬ್ಬನು ಈ ಮಹಾವ್ರತವನ್ನು ಆಚರಿಸಿದ್ದೇನೆ. ಈಗ ನೀನು ಆಚರಿಸಿದ್ದೀಯ (೨೭-೨೮) ಇಂತಹ ದುಷ್ಕರವಾದ ವ್ರತವನ್ನು ಆಚರಿಸಬಲ್ಲ ಮೂರನೆಯವನಿಲ್ಲ ಇದು ಅತ್ಯಂತ ಕಠಿಣವಾದ ನಿಯಮ. ಈ ನಿಯಮವನ್ನು ಗೊತ್ತುಮಾಡಿದವನು ನಾನೇ ಆದ್ದರಿಂದ, ಸೌಮ್ಯ-ಧನೇಶ್ವರ, ಇನ್ನುಮೇಲೆ ನನಗೆ ಮಿತ್ರನಾಗಿರು ತಪೋಮಹಿಮೆಯಿಂದ ನನ್ನನ್ನು ವಶಮಾಡಿಕೊಂಡಿದ್ದೀಯೆ ನನ್ನ ಸಖನಾಗು (೨೯-೩೦) ಭವಾನಿಯ ಮಹಿಮೆಯಿಂದ ನಿನ್ನ ಎಡಗಣ್ಣು ದಗ್ಧವಾಯಿತಲ್ಲವೆ? ಇನ್ನುಮೇಲೆ 'ಏಕಾಕ್ಷಿಪಿಂಗಲ' ಎಂಬ ಹೆಸರು ನಿನಗೆ ಶಾಶ್ವತವಾಗಿ ಉಳಿಯುವುದು. ಹೀಗೆ ಪರಮೇಶ್ವರನ ಸಖ್ಯವನ್ನು ಪಡೆದು ಆತನ ಅನುಜ್ಞೆಯಂತೆ ನಾನು ಹಿಂದಿರುಗಿಬಂದೆನು ಬಂದಮೇಲೆಯೇ ನಿನ್ನ ದುರಾಚಾರದ ವೃತ್ತಾಂತವನ್ನು ಕೇಳಿದೆನು (೩೧-೩೨) ದಶಾನನ, ದುರ್ಜನರ ಸಂಗವನ್ನು ಮಾಡಬೇಡ. ಅದರಿಂದ ನಮ್ಮ ಕುಲಕ್ಕೆ ಕೆಟ್ಟ ಹೆಸರು ಬರುತ್ತದೆ ಈಗಾಗಲೇ ಋಷಿಗಳೂ ದೇವತೆಗಳೂ ಸೇರಿ ನಿನ್ನನ್ನು ವಧಿಸುವುದಕ್ಕಾಗಿ ಉಪಾಯವನ್ನು ಹವಣಿಸುತ್ತಿದ್ದಾರೆ" ಎಂದು ಕುಬೇರನ ಸಂದೇಶವನ್ನು

ಏವಮುಕ್ತೋ ದಶಗ್ರೀವಃ ಕ್ರುದ್ಧಃ ಸಂರಕ್ತಲೋಚನಃ ।
ಹಸ್ತೌ ದಂತಾಂಶ್ಚ ಸಂಪೀಡ್ಯ ವಾಕ್ಯಮೇತದುವಾಚ ಹ ॥ ೩೪

ವಿಜ್ಞಾತಂ ತೇ ಮಯಾ ದೂತ ವಾಕ್ಯಂ ಯಸ್ಯ ಪ್ರಭಾಷಸೇ ।
ನೈವ ತ್ವಮಸಿ ನೈವಾಸೌ ಭ್ರಾತ್ರಾ ಯೇನಾಸಿ ಚೋದಿತಃ ॥ ೩೫

ಹಿತಂ ನೈಷ ಮನ್ಯೈತದ್ಧಿ ಬ್ರವೀತಿ ಧನರಕ್ಷಕಃ ।
ಮಹೇಶ್ವರಸಖಿತ್ವಂ ತು ಮೂಢ ಶ್ರಾವಯಸೇ ಕಿಲ ॥ ೩೬

ನ ಚೇದಂ ಕ್ಷಮಣೀಯಂ ಮೇ ಯದೇತದ್ಭಾಷಿತಂ ತ್ವಯಾ ।
ಯದೇತಾವನ್ಮಯಾ ಕಾಲಂ ದೂತ ತಸ್ಯ ತು ಮರ್ಷಿತಮ್ ॥ ೩೭

ನ ಹಂತವ್ಯೋ ಗುರುರ್ಜ್ಯೇಷ್ಠೋ ಮಯಾಯಮಿತಿ ಮನ್ಯತೇ ।
ತಸ್ಯ ತ್ವಿದಾನೀಂ ಶ್ರುತ್ವಾ ಮೇ ವಾಕ್ಯಮೇಷಾ ಕೃತಾ ಮತಿಃ ॥ ೩೮

ತ್ರೀನ್ ಲೋಕಾನಪಿ ಜೇಷ್ಯಾಮಿ ಬಾಹುವೀರ್ಯಮುಪಾಶ್ರಿತಃ ।
ಏತನ್ಮುಹೂರ್ತಮೇವಾಹಂ ತಸ್ಯೈಕಸ್ಯ ತು ವೈ ಕೃತೇ ॥ ೩೯

---

ದೂತನು ತಿಳಿಸಿದನು. (೩೩) ಶ್ರೀರಾಮ, ದೂತನ ನುಡಿಯನ್ನು ಕೇಳಿ ದಶಗ್ರೀವನು ಕ್ರುದ್ಧನಾದನು ಕಣ್ಣುಗಳು ಕೆಂಪಡರಿದವು ಕೈಗಳನ್ನು ಹೊಸೆಯುತ್ತ ಹಲ್ಲುಗಳನ್ನು ಕಡಿಯುತ್ತ ಆತನು "ಎಲೈ ದೂತ, ನಿನ್ನ ಮಾತಿನ ಅಭಿಪ್ರಾಯವಾಯಿತು! ಇನ್ನು ಮುಗಿಯಿತು ನಿನ್ನ ಕಥೆ! ಅವನೂ ಉಳಿಯಲಾರ ನನ್ನ ಸೋದರನೆಂದುಕೊಳ್ಳುವ ಅವನ ಪ್ರೇರಣೆಯಿಂದ ಬಂದೆಯಲ್ಲವೆ? (೩೪-೩೫) ಹಣದ ಗಂಟನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಆತನು ಹೀಗೆ ಉಪದೇಶಮಾಡಿದ್ದಾನೆ! ಈ ನುಡಿ ನನಗೆ ಹಿತಕರವಾದ್ದಲ್ಲ! ಎಲೈ ಮೂಢ, ಅವನು ಮಹೇಶ್ವರನಿಗೆ ಮಿತ್ರನಾಗಿರುವನೆಂಬುದನ್ನು ಹೇಳುವುದಕ್ಕಾಗಿ ಅಲ್ಲವೆ ನೀನು ಬಂದದ್ದು? ನಿನ್ನ ಮಾತು ಸರ್ವಥಾ ಅಕ್ಷಮ್ಯವಾದುದು ಇದುವರೆಗೆ ಆತನನ್ನು ನಾನು ಮನ್ನಿಸಿ ಬಿಟ್ಟಿರುವುದು ಬೇರೆ ಕಾರಣದಿಂದ (೩೬-೩೭) ಎಷ್ಟಾದರೂ ಕುಬೇರನು ನನಗೆ ಜ್ಯೇಷ್ಠ, ಸಂಮಾನ್ಯ ಎಂದು ತಿಳಿದು ಆತನನ್ನು ಕೊಲ್ಲದೆ ಇದ್ದೆನು ಈಗ ಆತನ ಸಂದೇಶವನ್ನು ಕೇಳಿದಮೇಲೆ, ನನ್ನ ಬುದ್ಧಿ ವ್ಯತ್ಯಸ್ತವಾಯಿತು ನನ್ನ ಭುಜಬಲದಿಂದಲೇ ಮೂರು ಲೋಕಗಳನ್ನೂ ಗೆಲ್ಲುವೆನು ಇದೋ,

ಚತುರೋ ಲೋಕಪಾಲಾಂಸ್ತಾನ್ನಯಿಷ್ಯಾಮಿ ಯಮಕ್ಷಯಮ್ ।
ಏವಮುಕ್ತ್ವಾ ತು ಲಂಕೇಶೋ ದೂತಂ ಖಡ್ಗೇನ ಜಘ್ನಿವಾನ್ ॥

ದದೌ ಭಕ್ಷಯಿತುಂ ಹ್ಯೇನಂ ರಾಕ್ಷಸಾನಾಂ ದುರಾತ್ಮನಾಮ್ ।
ತತಃ ಕೃತಸ್ವಸ್ತ್ಯಯನೋ ರಥಮಾರುಹ್ಯ ರಾವಣಃ ॥ ೪೧

ತ್ರೈಲೋಕ್ಯವಿಜಯಾಕಾಂಕ್ಷೀ ಯಯೌ ಯತ್ರ ಧನೇಶ್ವರಃ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರಯೋದಶಃ ಸರ್ಗಃ



ಈ ಕ್ಷಣದಲ್ಲಿಯೇ ಹೊರಟು ಆತನ ನಿಮಿತ್ತವಾಗಿ ನಾಲ್ವರು ದಿಕ್ಪಾಲರನ್ನೂ ವಧಿಸುವೆನು!" ಎಂದು ಅಬ್ಬರಿಸಿದನು. ಒಡನೆಯೇ ರಾವಣನು ಖಡ್ಗವನ್ನೆತ್ತಿ ಆ ದೂತನನ್ನು ಸಂಹರಿಸಿದನು (೩೮-೪೦) ಅವನನ್ನು ಭಕ್ಷಿಸುವುದಕ್ಕಾಗಿ ದುರಾತ್ಮರಾದ ರಾಕ್ಷಸರಿಗೆ ಕೊಟ್ಟನು ಅನಂತರ ತ್ರೈಲೋಕ್ಯವನ್ನೂ ಜಯಿಸ ಬೇಕೆಂಬ ಆಕಾಂಕ್ಷೆಯಿಂದ ರಾವಣನು ಮಂಗಳಾಶಾಸನವನ್ನು ಮಾಡಿಸಿ ಕೊಂಡು ರಥವನ್ನೇರಿ, ಮೊದಲು ಕುಬೇರನ ನಗರಕ್ಕೆ ಧಾಳಿಯಿಟ್ಟನು (೪೧).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹದಿಮೂರನೆಯ ಸರ್ಗ



## ಚತುರ್ದಶಃ ಸರ್ಗಃ

### ಯಕ್ಷರಕ್ಷೋಯುದ್ಧಮ್

ತತಸ್ತು ಸಚಿವೈಃ ಸಾರ್ಧಂ ಷಡ್ಭಿರ್ನಿತ್ಯಂ ಬಲೋದ್ಧತೈಃ ।
ಮಹೋದರಪ್ರಹಸ್ತಾಭ್ಯಾಂ ಮಾರೀಚಶುಕಸಾರಣೈಃ ॥ ೧
ಧೂಮ್ರಾಕ್ಷೇಣ ಚ ವೀರೇಣ ನಿತ್ಯಂ ಸಮರಗೃಧ್ನುನಾ ।
ಸಂವೃತಃ ಪ್ರಯಯೌ ಶ್ರೀಮಾನ್ ಕ್ರೋಧಾಲ್ಲೋಕಾನ್ ದಹನ್ನಿವ
ಪುರಾಣಿ ಸ ನದೀಃ ಶೈಲಾನ್ ವನಾನ್ಯುಪವನಾನಿ ಚ ।
ಅತಿಕ್ರಮ್ಯ ಮುಹೂರ್ತೇನ ಕೈಲಾಸಂ ಗಿರಿಮಾಗಮತ್ ॥ ೩
ಸಂನಿವಿಷ್ಟಂ ಗಿರೌ ತಸ್ಮಿನ್ ರಾಕ್ಷಸೇಂದ್ರಂ ನಿಶಮ್ಯ ತು ।
ಯುದ್ಧೇಽತ್ಯರ್ಥಕೃತೋತ್ಸಾಹಂ ದುರಾತ್ಮಾನಂ ಸಮಂತ್ರಿಣಮ್ ॥
ಯಕ್ಷಾ ನ ಶೇಕುಃ ಸಂಸ್ಥಾತುಂ ಪ್ರಮುಖೇ ತಸ್ಯ ರಕ್ಷಸಃ ।
ರಾಜ್ಞೋ ಭ್ರಾತೇತಿ ವಿಜ್ಞಾಯ ಗತಾ ಯತ್ರ ಧನೇಶ್ವರಃ ॥ ೫

## ಸರ್ಗ ೧೪

### ಯಕ್ಷರೊಡನೆ ರಾವಣ ಸೈನಿಕರ ಯುದ್ಧ   ಯಕ್ಷರ ಪರಾಜಯ

ಶ್ರೀರಾಮ, ದಂಡಯಾತ್ರೆಗೆ ಹೊರಟ ರಾವಣನೊಡನೆ ಬಲೋದ್ಧತರಾದ ಮಹೋದರ, ಪ್ರಹಸ್ತ, ಮಾರೀಚ, ಶುಕ, ಸಾರಣ ಮತ್ತು ಧೂಮ್ರಾಕ್ಷರೆಂಬ ಆರುಮಂದಿ ಸಚಿವರೂ ಪ್ರಯಾಣಮಾಡಿದರು  ಧೂಮ್ರಾಕ್ಷನಂತೂ ಸದಾ ಯುದ್ಧಕ್ಕಾಗಿ ಕಾಲು ಕೆರೆಯತಕ್ಕವನು  ತೇಜಸ್ವಿಯಾದ ರಾವಣನು ಮೂರು ಲೋಕಗಳನ್ನೂ ಸುಡುವನೋ ಎಂಬಂತೆ ಉಗ್ರದರ್ಪದಿಂದ ಹೊರಟಿದ್ದನು (೧-೨)  ಆತನು ದಾರಿಯಲ್ಲಿ ವಿವಿಧ ನಗರ ನದೀ ಗಿರಿಗಳನ್ನೂ ವನೋಪವನಗಳನ್ನೂ ದಾಟಿ ಅಲ್ಪಕಾಲದಲ್ಲಿಯೇ ಕೈಲಾಸಗಿರಿಗೆ ಬಂದು ಸೇರಿದನು  ದುರಾತ್ಮನಾದ ರಾಕ್ಷಸೇಂದ್ರನು ಯುದ್ಧೋತ್ಸಾಹದಿಂದ ಮಂತ್ರಿಸಮೇತನಾಗಿ ಬಂದು ಬೆಟ್ಟದಲ್ಲಿ ಬೀಡುಬಿಟ್ಟಿರುವನೆಂಬುದು ಯಕ್ಷರಿಗೆ ತಿಳಿಯಿತು  ಅವನನ್ನೆದುರಿಸಲು ಯಕ್ಷರಿಗೆ ಧೈರ್ಯವಾಗಲಿಲ್ಲ. ಅಲ್ಲದೆ ರಾವಣನು ತಮ್ಮ ರಾಜನಾದ ಕುಬೇರನ ಸೋದರನಾದ್ದರಿಂದ ಆತನಿಗೆ

ತೇ ಗತ್ವಾ ಸರ್ವಮಾಚಖ್ಯುರ್ಭ್ರಾತುಸ್ತಸ್ಯ ಚಿಕೀರ್ಷಿತಮ್ ।
ಅನುಜ್ಞಾತಾ ಯಯುರ್ಹೃಷ್ಟಾ ಯುದ್ಧಾಯ ಧನದೇನ ತೇ ॥ ೬

ತತೋ ಬಲಾನಾಂ ಸಂಕ್ಷೋಭೋ ವ್ಯವರ್ಧತ ಇವೋದಧೇಃ ।
ತಸ್ಯ ನೈರ್ಋತರಾಜಸ್ಯ ಶೈಲಂ ಸಂಚಾಲಯನ್ನಿವ ॥ ೭

ತತೋ ಯುದ್ಧಂ ಸಮಭವದ್ಯಕ್ಷರಾಕ್ಷಸಸಂಕುಲಮ್ ।
ವ್ಯಥಿತಾಶ್ಚಾಭವಂಸ್ತತ್ರ ಸಚಿವಾ ರಾಕ್ಷಸಸ್ಯ ತೇ ॥ ೮

ಸ ದೃಷ್ಟ್ವಾ ತಾದೃಶಂ ಸೈನ್ಯಂ ದಶಗ್ರೀವೋ ನಿಶಾಚರಃ ।
ಹರ್ಷನಾದಾನ್ ಬಹೂನ್ ಕೃತ್ವಾ ಸಕ್ರೋಧಾದಭ್ಯಧಾವತ ॥ ೯

ಯೇ ತು ತೇ ರಾಕ್ಷಸೇಂದ್ರಸ್ಯ ಸಚಿವಾ ಘೋರವಿಕ್ರಮಾಃ ।
ತೇಷಾಂ ಸಹಸ್ರಮೇಕೈಕೋ ಯಕ್ಷಾಣಾಂ ಸಮಯೋಧಯತ್ ॥

ತತೋ ಗದಾಭಿರ್ಮುಸಲೈರಸಿಭಿಃ ಶಕ್ತಿತೋಮರೈಃ ।
ಹನ್ಯಮಾನೋ ದಶಗ್ರೀವಸ್ತತ್ ಸೈನ್ಯಂ ಸಮಗಾಹತ ॥ ೧೧

---

ಈ ವಿಷಯವನ್ನು ತಿಳಿಸಬೇಕೆಂದು ಕುಬೇರನ ಬಳಿಗೆ ಹೋದರು (೩-೫) ಸೋದರನ ದುರುದ್ದೇಶವನ್ನು ಅವರು ನಿವೇದಿಸಲಾಗಿ, ಯುದ್ಧವನ್ನಾರಂಭಿಸಬೇಕೆಂದು ವೈಶ್ರವಣನ ಅನುಜ್ಞೆಯಾಯಿತು ಯಕ್ಷರು ಉತ್ಸಾಹದಿಂದ ಬಂದು ರಾಕ್ಷಸಪಡೆಯನ್ನು ಎದುರಿಸಿದರು ರಾವಣಸೈನಿಕರ ಆರ್ಭಟವು ಮಹಾಸಾಗರದ ಅಬ್ಬರದಂತೆ ಉಬ್ಬಿತು ಕೈಲಾಸಶೈಲವೇ ಅಲ್ಲಾಡುವುದೋ ಎಂಬಂತೆ ತೋರಿತು (೬-೭) ಯಕ್ಷರಾಕ್ಷಸರಿಗೆ ಘೋರವಾದ ಕಾಳಗವು ನಡೆಯಿತು ರಾಕ್ಷಸಸಚಿವರು ಮುಂದೇನಾಗುವುದೋ ಎಂದು ಭೀತರಾದರು (೮). ದಶಗ್ರೀವನು ಯಕ್ಷಸೇನೆಯನ್ನು ನೋಡಿ ರಣೋತ್ಸಾಹದಿಂದ ಸಿಂಹನಾದಗೈಯುತ್ತ, ರೋಷಾವಿಷ್ಟನಾಗಿ ನುಗ್ಗಿದನು ಭೀಮವಿಕ್ರಮರಾದ ರಾವಣಮಂತ್ರಿಗಳಲ್ಲಿ ಒಬ್ಬೊಬ್ಬನೂ ಒಂದೊಂದು ಸಾವಿರ ಯಕ್ಷರನ್ನೆದುರಿಸಿದನು (೯-೧೦) ಯಕ್ಷರು ಗದೆ, ಮುಸಲ, ಖಡ್ಗ, ಶಕ್ತಿ, ತೋಮರಗಳಿಂದ ಬಡಿದು ಕಡಿದು ತಿವಿಯುತ್ತಿದ್ದರೂ ದಶಗ್ರೀವನು ಲೆಕ್ಕಿಸದೆ

ಸ ನಿರುಚ್ಛ್ವಾಸವತ್ತತ್ರ ವಧ್ಯಮಾನೋ ದಶಾನನಃ ।
ವರ್ಷದ್ಭಿರಿವ ಜೀಮೂತೈರ್ಧಾರಾಭಿರವರುಧ್ಯತ ॥ ೧೨

ನ ಚಕಾರ ವ್ಯಥಾಂ ಚೈವ ಯಕ್ಷಶಸ್ತ್ರೈಃ ಸಮಾಹತಃ ।
ಮಹೀಧರ ಇವಾಂಭೋದೈರ್ಧಾರಾಶತಸಮುಕ್ಷಿತಃ ॥ ೧೩

ಸ ದುರಾತ್ಮಾ ಸಮುದ್ಯಮ್ಯ ಕಾಲದಂಡೋಪಮಾಂ ಗದಾಮ್ ।
ಪ್ರವಿವೇಶ ತತಃ ಸೈನ್ಯಂ ನಯನ್ ಯಕ್ಷಾನ್ ಯಮಕ್ಷಯಮ್ ॥

ಸ ಕಕ್ಷಮಿವ ವಿಸ್ತೀರ್ಣಂ ಶುಷ್ಕೇಂಧನಮಿವಾಕುಲಮ್ ।
ವಾತೇನಾಗ್ನಿರಿವಾದೀಪ್ತೋ ಯಕ್ಷಸೈನ್ಯಂ ದದಾಹ ತತ್ ॥ ೧೫

ತೈಸ್ತು ತತ್ರ ಮಹಾಮಾತ್ಯೈರ್ಮಹೋದರಶುಕಾದಿಭಿಃ ।
ಅಲ್ಪಾವಶೇಷಾಸ್ತೇ ಯಕ್ಷಾಃ ಕೃತಾ ವಾತೈರಿವಾಂಬುದಾಃ ॥ ೧೬

ಕೇಚಿತ್ ಸಮಾಹತಾ ಭಗ್ನಾಃ ಪತಿತಾಃ ಸಮರಕ್ಷಿತೌ ।
ಓಷ್ಠಾಂಶ್ಚ ದಶನೈಸ್ತೀಕ್ಷ್ಣೈರದಶನ್ ಕುಪಿತಾ ರಣೇ ॥ ೧೭

---

ಯಕ್ಷಸೇನೆಯೊಳಗೆ ನುಗ್ಗಿದನು ಕಾರ್ಮೋಡಗಳು ಎಡಬಿಡದೆ ಧಾರಾಕಾರವಾಗಿ ಮಳೆಸುರಿಸುವಂತೆ ಯಕ್ಷರು ಪ್ರಹರಿಸುತ್ತಿರುವಾಗ, ರಾವಣನಿಗೆ ಉಸಿರು ಕಟ್ಟಿದಂತಾಯಿತು (೧೧-೧೨) ಆದರೆ ರಾಕ್ಷಸೇಂದ್ರನು ಅದೊಂದನ್ನೂ ಗಣಿಸಲಿಲ್ಲ ಹಿಂದೆಗೆಯಲಿಲ್ಲ ಮೇಘಪಂಕ್ತಿಗಳ ವರ್ಷಧಾರೆಗಳಿಗೆ ಪರ್ವತವು ಜಗ್ಗದಂತೆ, ಯಕ್ಷರ ಶಸ್ತ್ರಾಹತಿಗಳಿಗೆ ದಶಾನನು ಜಗ್ಗಲಿಲ್ಲ ಆ ದುರಾತ್ಮನು ಕಾಲದಂಡದಂತಿದ್ದ ಗದೆಯನ್ನೆತ್ತಿ ಅಪ್ಪಳಿಸುತ್ತ ಯಕ್ಷರನ್ನು ಸದೆಬಡಿದು ಕೊಲ್ಲುತ್ತ ಹೋದನು (೧೩-೧೪) ವಿಶಾಲವಾಗಿ ಹರಡಿದ ಹುಲ್ಲಿನ ಮೆದೆಗಳನ್ನೂ ಒಣಕಟ್ಟಿಗೆಯ ರಾಶಿಗಳನ್ನೂ ವಾತೋಜ್ಜೃಂಭಿತ ವಹ್ನಿಯಂತೆ, ಯಕ್ಷಸೇನೆಯನ್ನು ಸುಟ್ಟು ಉರುಬಿದನು. ಇತ್ತ ಮಹೋದರ, ಶುಕ ಮೊದಲಾದ ಮಹಾಮಾತ್ಯರು, ಚಂಡಮಾರುತಗಳು ಅಂಬುದಗಳನ್ನು ಇಂಬುಗೆಡಿಸುವಂತೆ, ಯಕ್ಷ ಸೈನಿಕರನ್ನು ಕಂಗೆಡಿಸಿ ಹೊಡೆದೋಡಿಸಿದರು (೧೫-೧೬) ಕೆಲವು ಯಕ್ಷರು ಹತರಾದರು, ಕೆಲವರು ಕೈಕಾಲುಗಳನ್ನು ಮುರಿದುಕೊಂಡರು; ಕೆಲವರು ರಣರಂಗದಲ್ಲಿ ಒರಗಿದರು, ಕೆಲವರು

**ಶ್ರಾಂತಾಶ್ಚಾನ್ಯೋಽನ್ಯಮಾಲಿಂಗ್ಯ ಭ್ರಷ್ಟಶಸ್ತ್ರಾ ರಣಾಜಿರೇ ।**
**ಸೀದಂತಿ ಚ ತದಾ ಯಕ್ಷಾಃ ಕೂಲಾ ಇವ ಜಲೇನ ಹ ॥** ೧೮

**ಹತಾನಾಂ ಗಚ್ಛತಾಂ ಸ್ವರ್ಗಂ ಯುಧ್ಯತಾಂ ಪೃಥಿವೀತಲೇ ।**
**ಪ್ರೇಕ್ಷತಾಮೃಷಿಸಂಘಾನಾಂ ನ ಬಭೂವಾಂತರಂ ದಿವಿ ॥** ೧೯

**ಭಗ್ನಾಂಸ್ತು ತಾನ್ ಸಮಾಲಕ್ಷ್ಯ ಯಕ್ಷೇಂದ್ರಾಂಸ್ತು ಮಹಾಬಲಾನ್**
**ಧನಾಧ್ಯಕ್ಷೋ ಮಹಾಬಾಹುಃ ಪ್ರೇಷಯಾಮಾಸ ಯಕ್ಷಕಾನ್ ॥**

**ಏತಸ್ಮಿನ್ನಂತರೇ ರಾಮ ವಿಸ್ತೀರ್ಣಬಲವಾಹನಃ ।**
**ಅಗಮತ್ ಸುಮಹಾನ್ ಯಕ್ಷೋ ನಾಮ್ನಾ ಸಂಯೋಧಕಂಟಕಃ ॥**

**ತೇನ ಚಕ್ರೇಣ ಮಾರೀಚೋ ವಿಷ್ಣುನೇವ ರಣೇ ಹತಃ ।**
**ಪತಿತೋ ಭೂತಲೇ ಶೈಲಾತ್ ಕ್ಷೀಣಪುಣ್ಯ ಇವಾಂಬರಾತ್ ॥** ೨೨

**ಸಸಂಜ್ಞಸ್ತು ಮುಹೂರ್ತೇನ ಸ ವಿಶ್ರಮ್ಯ ನಿಶಾಚರಃ ।**
**ತಂ ಯಕ್ಷಂ ಯೋಧಯಾಮಾಸ ಸ ಚ ಭಗ್ನಃ ಪ್ರದುದ್ರುವೇ ॥** ೨೩

---

ಕುಪಿತರಾಗಿ ಹಲ್ಲುಗಳಿಂದ ಅವಡುಗಚ್ಚಿದರು, ಉಳಿದವರು ಬಸವಳಿದು ಶಸ್ತ್ರಗಳನ್ನು ಬಿಸುಟು ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡು, ನದೀಪ್ರವಾಹದ ಹೊಡೆತಕ್ಕೆ ಸಿಕ್ಕಿದ ದಡಗಳಂತೆ ಕುಸಿದುಬಿದ್ದರು (೧೭-೧೮) ಪೃಥಿವಿಯಲ್ಲಿ ಯುದ್ಧಮಾಡಿ ಸ್ವರ್ಗವನ್ನೇರಿ ಯಕ್ಷರಾಕ್ಷಸರ ಯುದ್ಧವನ್ನು ನೋಡುತ್ತಿದ್ದ ದೇವಗಣಗಳಿಂದಲೂ ಋಷಿಸಂಘಗಳಿಂದಲೂ ಆಕಾಶವು ನಿಬಿಡವಾಗಲು, ಅಲ್ಲಿ ಸ್ಥಳವೇ ಇಲ್ಲದಂತಾಯಿತು ಯಕ್ಷರು ಸಮರಾಂಗಣದಲ್ಲಿ ಭಗ್ನರಾದುದನ್ನರಿತು ಕುಬೇರನು ಬಲಾಢ್ಯರಾದ ಬಹುಮಂದಿ ಯಕ್ಷರನ್ನು ರಣಭೂಮಿಗೆ ಕಳಿಸಿದನು (೧೯-೨೦). ಶ್ರೀರಾಮ, ಆ ಸಮಯದಲ್ಲಿ ಸಂಯೋಧಕಂಟಕನೆಂಬ ಪ್ರತಾಪಿಯಾದ ಯಕ್ಷನು ಸೇನಾವಾಹನಗಳಿಂದ ಸಮೇತನಾಗಿ ಯುದ್ಧಭೂಮಿಗೆ ಬಂದನು ಅವನು ಮಹಾವಿಷ್ಣುವಿನಂತೆ ಚಕ್ರಾಯುಧವನ್ನು ಮಾರೀಚನ ಮೇಲೆ ಪ್ರಯೋಗಿಸಲು, ಕ್ಷೀಣಪುಣ್ಯನು ಸ್ವರ್ಗದಿಂದ ಕೆಳಗುರುಳುವಂತೆ ಆ ನಿಶಾಚರನು ಕೈಲಾಸ ಶೈಲದಿಂದ ಭೂಮಿಗೆ ಬಿದ್ದನು (೨೧-೨೨). ಸ್ವಲ್ಪಕಾಲದಲ್ಲಿಯೇ ಮಾರೀಚನು ಎಚ್ಚೆತ್ತು ವಿಶ್ರಮಿಸಿಕೊಂಡು ಸಂಯೋಧಕಂಟಕನೊಡನೆ ಕಾಳಗವನ್ನು ಹೂಡಲು,

ತತಃ ಕಾಂಚನಚಿತ್ರಾಂಗಂ ವೈದೂರ್ಯರಜಸೋಕ್ಷಿತಮ್ ।
ಮರ್ಯಾದಾಂ ಪ್ರತಿಹಾರಾಣಾಂ ತೋರಣಾಂತರಮಾವಿಶತ್ ॥ ೨೪

ತಂ ತು ರಾಜನ್ ದಶಗ್ರೀವಂ ಪ್ರವಿಶಂತಂ ನಿಶಾಚರಮ್ ।
ಸೂರ್ಯಭಾನುರಿತಿ ಖ್ಯಾತೋ ದ್ವಾರಪಾಲೋ ನ್ಯವಾರಯತ್ ॥

ಸ ವಾರ್ಯಮಾಣೋ ಯಕ್ಷೇಣ ಪ್ರವಿವೇಶ ನಿಶಾಚರಃ ।
ಯದಾ ತು ವಾರಿತೋ ರಾಮ ನ ವ್ಯತಿಷ್ಠತ್ ಸ ರಾಕ್ಷಸಃ ॥ ೨೬

ತತಸ್ತೋರಣಮುತ್ಪಾಟ್ಯ ತೇನ ಯಕ್ಷೇಣ ತಾಡಿತಃ ।
ರುಧಿರಂ ಪ್ರಸ್ರವನ್ ಭಾತಿ ಶೈಲೋ ಧಾತುಸ್ರವೈರಿವ ॥ ೨೭

ಸ ಶೈಲಶಿಖರಾಭೇಣ ತೋರಣೇನ ಸಮಾಹತಃ ।
ಜಗಾಮ ನ ಕ್ಷತಿಂ ವೀರೋ ವರದಾನಾತ್ ಸ್ವಯಂಭುವಃ ॥ ೨೮

ತೇನೈವ ತೋರಣೇನಾಥ ಯಕ್ಷಸ್ತೇನಾಭಿತಾಡಿತಃ ।
ನಾದೃಶ್ಯತ ತದಾ ಯಕ್ಷೋ ಭಸ್ಮೀಕೃತತನುಸ್ತದಾ ॥ ೨೯

---

ಆ ಯಕ್ಷನು ಭಗ್ನನಾಗಿ ಓಡಿಹೋದನು ಅಲಕಾನಗರದ ಹೆಬ್ಬಾಗಿಲು ಕಾಂಚನಚಿತ್ರಿತವೂ ವೈಡೂರ್ಯದ ಚೂರುಗಳಿಂದ ಖಚಿತವೂ ಆಗಿತ್ತು ನಗರದ ಕಾವಲುಗಾರರಿಗೆ ಅದು ಗಡಿ ರಾವಣನು ಆ ಹೆಬ್ಬಾಗಿಲಿನ ಮಧ್ಯ ಭಾಗಕ್ಕೆ ನುಗ್ಗಿ ಬಂದನು (೨೩-೨೪) ನಗರದೊಳಗೆ ನುಗ್ಗುತ್ತಿದ್ದ ದಶಗ್ರೀವ ನನ್ನು ಸೂರ್ಯಭಾನುವೆಂಬ ದ್ವಾರಪಾಲನು ತಡೆದನು ಅವನು ತಡೆದರೂ ಲೆಕ್ಕಿಸದೆ ಆ ನಿಶಾಚರನು ನುಗ್ಗುತ್ತಿರಲಾಗಿ, ಸೂರ್ಯಭಾನುವು ತೋರಣದ ಬಾಗಿಲನ್ನೇ ಕಿತ್ತು ರಾವಣನನ್ನು ಬಡಿದನು ರಾವಣನ ಮೈಯಿಂದ ರಕ್ತವು ಝಲ್ಲೆಂದು ಚಿಮ್ಮಿತು ಮಣಿಶಿಲಾದಿಧಾತುರಸಸಿಕ್ತವಾದ ಶೈಲದಂತೆ ಆತನು ಕಂಗೊಳಿಸಿದನು (೨೫-೨೭) ಶೈಲಶಿಖರದಂತಿದ್ದ ತೋರಣದ್ವಾರ ದಿಂದ ಆಹತನಾದರೂ, ರಾವಣನು ಬ್ರಹ್ಮನ ವರಬಲದಿಂದ ಸಾಯಲಿಲ್ಲ ಆಗ ದಶಗ್ರೀವನು ಅದೇ ತೋರಣ ದ್ವಾರದಿಂದ ಸೂರ್ಯಭಾನುವನ್ನು ಅಪ್ಪಳಿಸಿದನು. ಆ ಕ್ಷಣದಲ್ಲಿ ಯಕ್ಷನು ಸತ್ತು ಪುಡಿಪುಡಿಯಾಗಿ ಕಣ್ಣಿಗೆ

**ತತಃ ಪ್ರದುದ್ರುವುಃ ಸರ್ವೇ ದೃಷ್ಟ್ವಾ ರಕ್ಷಃಪರಾಕ್ರಮಮ್ ।**
**ತತೋ ನದೀರ್ಗುಹಾಶ್ಚೈವ ವಿವಿಶುರ್ಭಯಪೀಡಿತಾಃ ॥ ೩೦**
**ತ್ಯಕ್ತಪ್ರಹರಣಾಃ ಶಾಂತಾ ವಿವರ್ಣವದನಾಸ್ತದಾ ॥**

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುರ್ದಶಃ ಸರ್ಗಃ



ಕಾಣದಂತಾದನು ! (೨೮-೨೯) ರಾಕ್ಷಸರ ಪರಾಕ್ರಮವನ್ನು ನೋಡಿ ಯಕ್ಷರೆಲ್ಲರೂ ಭಯಾಕ್ರಾಂತರಾಗಿ ಓಡಿಹೋಗಿ ನದಿಗಳಲ್ಲಿ ಮುಳುಗಿಕೊಂಡರು ಗುಹೆಗಳಲ್ಲಡಗಿದರು ಆಯುಧಗಳನ್ನು ಬಿಸುಟರು ಯುದ್ಧೋತ್ಸಾಹವಿಲ್ಲದೆ ಸಕಲಯಕ್ಷರೂ ತಣ್ಣಗಾದರು ಮುಖಗಳು ಬಾಡಿದವು (೩೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹದಿನಾಲ್ಕನೆಯ ಸರ್ಗ



## ಪಂಚದಶಃ ಸರ್ಗಃ

### ಪುಷ್ಪಕಹರಣಮ್

ತತಸ್ತಾಂಲ್ಲಕ್ಷ್ಯ ವಿತ್ರಸ್ತಾನ್ ಯಕ್ಷೇಂದ್ರಾಂಶ್ಚ ಸಹಸ್ರಶಃ ।
ಧನಾಧ್ಯಕ್ಷೋ ಮಹಾಯಕ್ಷಂ ಮಾಣಿಚಾರಮಥಾಬ್ರವೀತ್ ॥ ೧

ರಾವಣಂ ಜಹಿ ಯಕ್ಷೇಂದ್ರ ದುರ್ವೃತ್ತಂ ಪಾಪಚೇತಸಮ್ ।
ಶರಣಂ ಭವ ವೀರಾಣಾಂ ಯಕ್ಷಾಣಾಂ ಯುದ್ಧಶಾಲಿನಾಮ್ ॥ ೨

ಏವಮುಕ್ತೋ ಮಹಾಬಾಹುರ್ಮಾಣಿಭದ್ರಃ ಸುದುರ್ಜಯಃ ।
ವೃತೋ ಯಕ್ಷಸಹಸ್ರೈಸ್ತು ಚತುರ್ಭಿಃ ಸಮಯೋಧಯತ್ ॥ ೩

ತಂ ಗದಾಮುಸಲಪ್ರಾಸೈಃ ಶಕ್ತಿತೋಮರಮುದ್ಗರೈಃ ।
ಅಭಿಘ್ನಂತಸ್ತದಾ ಯಕ್ಷಾ ರಾಕ್ಷಸಾನ್ ಸಮುಪಾದ್ರವನ್ ॥ ೪

ಕುರ್ವಂತಸ್ತುಮುಲಂ ಯುದ್ಧಂ ಚರಂತಃ ಶ್ಯೇನವಲ್ಲಘು ।
ಬಾಢಂ ಪ್ರಯಚ್ಛ ನೇಚ್ಛಾಮಿ ದೀಯತಾಮಿತಿ ಭಾಷಿಣಃ ॥ ೫

## ಸರ್ಗ ೧೫

ಮಾಣಿಭದ್ರನೆಂಬ ಯಕ್ಷನ ಯುದ್ಧ. ಅವನ ಪರಾಜಯ.
ಕುಬೇರನ ಸೋಲು. ಪುಷ್ಪಕ ಹರಣ

ಶ್ರೀರಾಮ, ಈ ರೀತಿಯಲ್ಲಿ ಸಾವಿರಾರು ಯಕ್ಷೇಂದ್ರರು ಸೋತು ಪಲಾಯನ ಮಾಡುವುದನ್ನು ಕಂಡು, ಕುಬೇರನು ಮಾಣಿಭದ್ರನೆಂಬ ಮಹಾ ಯಕ್ಷನನ್ನು ಕರೆದು "ಯಕ್ಷೇಂದ್ರ, ದುರುಳನೂ ಪಾಪಿಯೂ ಆದ ರಾವಣನನ್ನು ನೀನು ಸಂಹರಿಸು ವೀರರಾದ ಯಕ್ಷರಿಗೆ ರಕ್ಷಕನಾಗು" ಎಂದನು (೧-೨) ಮಾಣಿಭದ್ರನಾದರೋ ಮಹಾಪರಾಕ್ರಮಿ ಯುದ್ಧದುರ್ಜಯ ಅವನು ನಾಲ್ಕು ಸಾವಿರ ಯಕ್ಷರೊಡನೆ ಬಂದು ರಾಕ್ಷಸರೊಡನೆ ಕಾಳಗವನ್ನಾರಂಭಿಸಿದನು ಗದೆ, ಮುಸಲ, ಪ್ರಾಸ, ಶಕ್ತಿ, ತೋಮರ, ಮುದ್ಗರಾದಿಗಳಿಂದ ಪ್ರಹರಿಸುತ್ತ ಯಕ್ಷರು ರಾಕ್ಷಸರನ್ನು ಬೆನ್ನಟ್ಟಿದರು (೩-೪) ಅವರು ಘೋರವಾದ ಕಾಳಗವನ್ನಾರಂಭಿಸಿ ಗಿಡಗಗಳಂತೆ ಭರ್ರನೆ ಎರಗುತ್ತ, 'ಭಲಾ!

ತತೋ ದೇವಾಃ ಸಗಂಧರ್ವಾ ಋಷಯೋ ಬ್ರಹ್ಮವಾದಿನಃ ।
ದೃಷ್ಟ್ವಾ ತತ್ತುಮುಲಂ ಯುದ್ಧಂ ಪರಂ ವಿಸ್ಮಯಮಾಗಮನ್ ॥

ಯಕ್ಷಾಣಾಂ ತು ಪ್ರಹಸ್ತೇನ ಸಹಸ್ರಂ ನಿಹತಂ ರಣೇ ।
ಮಹೋದರೇಣ ಚಾನಿಂದ್ಯ ಸಹಸ್ರಮಪರಂ ಹತಮ್ ॥ ೭

ಕ್ರುದ್ಧೇನ ಚ ತದಾ ರಾಜನ್ ಮಾರೀಚೇನ ಯುಯುತ್ಸುನಾ ।
ನಿಮೇಷಾಂತರಮಾತ್ರೇಣ ದ್ವೇ ಸಹಸ್ರೇ ನಿಪಾತಿತೇ ॥ ೮

ಕ್ವ ಚ ಯಕ್ಷಾರ್ಜವಂ ಯುದ್ಧಂ ಕ್ವ ಚ ಮಾಯಾಬಲಾಶ್ರಯಮ್
ರಕ್ಷಸಾಂ ಪುರುಷವ್ಯಾಘ್ರ ತೇನ ತೇಽಭ್ಯಧಿಕಾ ಯುಧಿ ॥ ೯

ಧೂಮ್ರಾಕ್ಷೇಣ ಸಮಾಗಮ್ಯ ಮಾಣಿಭದ್ರೋ ಮಹಾರಣೇ ।
ಮುಸಲೇನೋರಸಿ ಕ್ರೋಧಾತ್ತಾಡಿತೋ ನ ಚ ಕಂಪಿತಃ ॥ ೧೦

ತತೋ ಗದಾಂ ಸಮಾವಿಧ್ಯ ಮಾಣಿಭದ್ರೇಣ ರಾಕ್ಷಸಃ ।
ಧೂಮ್ರಾಕ್ಷಸ್ತಾಡಿತೋ ಮೂರ್ಧ್ನಿ ವಿಹ್ವಲಃ ಸ ಪಪಾತ ಹ ॥ ೧೧

---

ಎದುರಾಗು ಯುದ್ಧಕ್ಕೆ, ಸರಿಯುವುದಿಲ್ಲ, ಇತ್ತ ಕೊಡು ಆಯುಧವನ್ನು!' ಎನ್ನುತ್ತ ಹೊಡೆದಾಡಿದರು ದೇವಗಂಧರ್ವಾದಿಗಳು ಆ ತುಮುಲಯುದ್ಧವನ್ನು ನೋಡಿ ವಿಸ್ಮಿತರಾದರು (೫-೬) ಪ್ರಹಸ್ತನು ಒಂದು ಸಾವಿರ ಯಕ್ಷರನ್ನು ಸಂಹರಿಸಿದನು ಮಹೋದರನು ಮತ್ತೊಂದು ಸಾವಿರ ಯಕ್ಷರನ್ನು ಧ್ವಂಸಮಾಡಿದನು ಕ್ರುದ್ಧನಾದ ಮಾರೀಚನು ಒಂದು ನಿಮಿಷದಲ್ಲಿ ಎರಡು ಸಾವಿರ ಯಕ್ಷಸೈನಿಕರನ್ನು ನಿರ್ನಾಮಗೊಳಿಸಿದನು (೭-೮). ಪುರುಷೋತ್ತಮ—ರಾಘವ, ಯಕ್ಷರು ಅನುಸರಿಸಿದ ಋಜುಮಾರ್ಗದ ಯುದ್ಧವೆಲ್ಲಿ? ರಾಕ್ಷಸರ ಮಾಯಾಯುದ್ಧವೆಲ್ಲಿ? ರಾಕ್ಷಸರ ಕೈ ಮೇಲಾಯಿತು ಧೂಮ್ರಾಕ್ಷನಿಗೂ ಮಾಣಿಭದ್ರನಿಗೂ ಭೀಕರ ಯುದ್ಧ ನಡೆಯಿತು ಧೂಮ್ರಾಕ್ಷನು ಮುಸಲಾಯುಧದಿಂದ ಮಾಣಿಭದ್ರನನ್ನು ಬಡಿದನು ಮಣಿಭದ್ರನು ಜಗ್ಗಲಿಲ್ಲ ಅವನು ಗದೆಯನ್ನೆತ್ತಿ ಧೂಮ್ರಾಕ್ಷನ ತಲೆಯಮೇಲೆ

ಧೂಮ್ರಾಕ್ಷಂ ತಾಡಿತಂ ದೃಷ್ಟ್ವಾ ಪತಿತಂ ಶೋಣಿತೋಕ್ಷಿತಮ್ ।
ಅಭ್ಯಧಾವತ ಸಂಗ್ರಾಮೇ ಮಾಣಿಭದ್ರಂ ದಶಾನನಃ ॥ ೧೨

ತಂ ಕ್ರುದ್ಧಮಭಿಧಾವಂತಂ ಮಾಣಿಭದ್ರೋ ದಶಾನನಮ್ ।
ಶಕ್ತಿಭಿಸ್ತಾಡಯಾಮಾಸ ತಿಸೃಭಿರ್ಯಕ್ಷಪುಂಗವಃ ॥ ೧೩

ತಾಡಿತೋ ಮಾಣಿಭದ್ರಸ್ಯ ಮುಕುಟೇ ಪ್ರಾಹರದ್ರಣೇ ।
ತಸ್ಯ ತೇನ ಪ್ರಹಾರೇಣ ಮುಕುಟಂ ಪಾರ್ಶ್ವಮಾಗತಮ್ ॥ ೧೪

ತತಃ ಸಂಯುಧ್ಯಮಾನೇನ ವಿಷ್ಟಬ್ಧೋ ನ ವ್ಯಕಂಪತ ।
ತದಾಪ್ರಭೃತಿ ಯಕ್ಷೋಽಸೌ ಪಾರ್ಶ್ವಮೌಲಿರಿತಿ ಸ್ಮೃತಃ ॥ ೧೫

ತಸ್ಮಿಂಸ್ತು ವಿಮುಖೇ ಯಕ್ಷೇ ಮಾಣಿಭದ್ರೇ ಮಹಾತ್ಮನಿ ।
ಸಂನಾದಃ ಸುಮಹಾನ್ ರಾಜಂಸ್ತಸ್ಮಿನ್ ಶೈಲೇ ವ್ಯವರ್ಧತ ॥ ೧೬

ತತೋ ದೂರಾತ್ ಪ್ರದದೃಶೇ ಧನಾಧ್ಯಕ್ಷೋ ಗದಾಧರಃ ।
ಶುಕ್ರಪ್ರೋಷ್ಠಪದಾಭ್ಯಾಂ ಚ ಶಂಖಪದ್ಮಸಮಾವೃತಃ ॥ ೧೭

---

ಬಡಿಯಲು, ಆ ರಾಕ್ಷಸನು ವಿಹ್ವಲನಾಗಿ ಬಿದ್ದನು (೯-೧೧) ಹೀಗೆ ರಕ್ತಸಿಕ್ತನಾಗಿ ಧೂಮ್ರಾಕ್ಷನು ಬಿದ್ದುದನ್ನು ನೋಡಿ, ದಶಗ್ರೀವನು ಮಾಣಿಭದ್ರನ ಮೇಲೆ ಏರಿಹೋದನು. ರಾವಣನು ಕ್ರೋಧಾವಿಷ್ಟನಾಗಿ ಧಾವಿಸುತ್ತ ಬರುವುದನ್ನು ಕಂಡು, ಮಾಣಿಭದ್ರನು ಮೂರು ಶಕ್ತಿಗಳಿಂದ ಅವನನ್ನು ಪ್ರಹರಿಸಿದನು (೧೨-೧೩) ಆಗ ರಾವಣನು (ಗದೆಯಿಂದ) ಮಾಣಿಭದ್ರನ ಕಿರೀಟವನ್ನು ಜಡಿಯಲು, ಆ ಕಿರೀಟವು ಪಾರ್ಶ್ವಕ್ಕೆ ಸರಿದು ಓರೆಯಾಯಿತು. ಅಲ್ಲಿಂದ ಮೊದಲ್ಗೊಂಡು ಮಾಣಿಭದ್ರನಿಗೆ ಪಾರ್ಶ್ವಮೌಳಿ ಎಂಬ ಹೆಸರು ರೂಢಿಗೆ ಬಂದಿತು (೧೪-೧೫) ಅನಂತರ ಮಾಣಿಭದ್ರನು ಯುದ್ಧಭೂಮಿಯಿಂದ ಹೊರಟುಹೋದನು. ಆ ಪರ್ವತದಲ್ಲಿ ಎಲ್ಲೆಲ್ಲಿಯೂ ಕೋಲಾಹಲವೆದ್ದಿತು. ಧನಾಧ್ಯಕ್ಷನಾದ ಕುಬೇರನು ದೂರದಲ್ಲಿ ಗದಾಪಾಣಿಯಾಗಿ ಕಾಣಿಸಿಕೊಂಡನು. ಶಂಖ, ಪದ್ಮಗಳೆಂಬ ನಿಧ್ಯಭಿಮಾನಿದೇವತೆಗಳಿಂದಲೂ ಶುಕ್ರ, ಪ್ರೋಷ್ಠಪದ ಎಂಬ ಮಂತ್ರಿಗಳಿಂದಲೂ ಅವನು ಪರಿವೃತನಾಗಿದ್ದನು.

**ಸ ದೃಷ್ಟ್ವಾ ಭ್ರಾತರಂ ಸಂಖ್ಯೇ ಶಾಪಾದ್ವಿಭ್ರಷ್ಟಗೌರವಮ್ ।**
**ಉವಾಚ ವಚನಂ ಧೀಮಾನ್ ಯುಕ್ತಂ ಪೈತಾಮಹೇ ಕುಲೇ ॥**

**ಯನ್ಮಯಾ ವಾರ್ಯಮಾಣಸ್ತ್ವಂ ನಾವಗಚ್ಛಸಿ ದುರ್ಮತೇ ।**
**ಪಶ್ಚಾದಸ್ಯ ಫಲಂ ಪ್ರಾಪ್ಯ ಜ್ಞಾಸ್ಯಸೇ ನಿರಯಂ ಗತಃ ॥** ೧೯

**ಯೋ ಹಿ ಮೋಹಾದ್ವಿಷಂ ಪೀತ್ವಾ ನಾವಗಚ್ಛತಿ ದುರ್ಮತಿಃ ।**
**ಸ ತಸ್ಯ ಪರಿಣಾಮಾಂತೇ ಜಾನೀತೇ ಕರ್ಮಣಃ ಫಲಮ್ ॥** ೨೦

**ದೇವತಾ ನಾಭಿನಂದಂತಿ ಧರ್ಮಯುಕ್ತೇನ ಕೇನಚಿತ್ ।**
**ಯೇನ ತ್ವಮೀದೃಶಂ ಭಾವಂ ನೀತಃ ಸನ್ನಾವಬುಧ್ಯಸೇ ॥** ೨೧

**ಮಾತರಂ ಪಿತರಂ ಯೋ ಹಿ ಆಚಾರ್ಯಂ ಚಾವಮನ್ಯತೇ ।**
**ಸ ಪಶ್ಯತಿ ಫಲಂ ತಸ್ಯ ಪ್ರೇತರಾಜವಶಂ ಗತಃ ।** ೨೨

**ಅಧ್ರುವೇ ಹಿ ಶರೀರೇ ಯೋ ನ ಕರೋತಿ ತಪೋಽರ್ಜನಮ್ ।**
**ಸ ಪಶ್ಚಾತ್ತಪ್ಯತೇ ಮೂಢೋ ಮೃತೋ ದೃಷ್ಟ್ವಾತ್ಮನೋ ಗತಿಮ್**

---

(೧೬-೧೭) ಪಿತೃಶಾಪದಿಂದ ಕುಲಗೌರವವನ್ನುಲ್ಲಂಘಿಸಿ ದಾರುಣಸ್ವಭಾವದವನಾಗಿದ್ದ ತಮ್ಮನಾದ ದಶಗ್ರೀವನನ್ನು ನೋಡಿ, ಧೀಮಂತನಾದ ವೈಶ್ರವಣನು ಹೀಗೆಂದನು ಅವನ ನುಡಿ ಪಿತಾಮಹಕುಲಕ್ಕೆ ಅನುಗುಣವಾಗಿತ್ತು. "ಎಲೈ ದುರ್ಬುದ್ಧಿಯುವನೆ—ದಶಾನನ, ಬೇಡಬೇಡವೆಂದರೂ ನನ್ನ ಮಾತು ನಿನ್ನ ಮನಸ್ಸಿನಲ್ಲಿ ನಾಟಲಿಲ್ಲ. ನಿನ್ನ ದುಷ್ಕರ್ಮದ ಫಲವಾಗಿ ನರಕದಲ್ಲಿ ಬಿದ್ದಾಗ, ನಿನಗೆ ಅದು ಮನವರಿಕೆಯಾಗುವುದು (೧೮-೧೯). ದುರ್ಬುದ್ಧಿಯು ಅವಿವೇಕದಿಂದ ವಿಷವನ್ನು ಕುಡಿಯಬಹುದು ಆಗ ಅವನಿಗೆ ಅದರ ಪರಿಣಾಮ ತಿಳಿಯದು ಅದರ ಪರಿಣಾಮವಾಗಿ ನರಳುವಾಗ, ತನ್ನ ಕರ್ಮದ ಫಲವೇನೆಂಬುದು ಗೊತ್ತಾಗುವುದು ಧರ್ಮಯುಕ್ತವಾದ ಯಾವ ಕಾರ್ಯವನ್ನೂ ನೀನು ಮಾಡುವುದಿಲ್ಲವಾದ್ದರಿಂದ, ಬ್ರಹ್ಮಾದಿದೇವತೆಗಳು ನಿನ್ನ ವಿಷಯದಲ್ಲಿ ವಿಮುಖರಾಗಿದ್ದಾರೆ ಆದ್ದರಿಂದಲೇ ನಿನ್ನಲ್ಲಿ ಈ ಬಗೆಯ ದುರ್ಬುದ್ಧಿ ಬೆಳೆಯುತ್ತಿದೆ ಹೇಳಿದರೂ ನಿನ್ನ ತಲೆಗೆ ಹತ್ತುವುದಿಲ್ಲ (೨೦-೨೧) ತಾಯಿತಂದೆಗಳನ್ನೂ ಗುರುವನ್ನೂ ಯಾವನು ಅಲಕ್ಷಿಸಿ ನಡೆಯುವನೋ, ಅವನು ಪ್ರೇತರಾಜನ ವಶಕ್ಕೆ ಸಿಕ್ಕಿದಾಗ ಅದರ ಫಲವನ್ನು ಉಣ್ಣುತ್ತಾನೆ. ಈ ಶರೀರವು ಶಾಶ್ವತವಲ್ಲ ಇಂಥ ಶರೀರವು ಬಂದಾಗ

ಧರ್ಮಾದ್ರಾಜ್ಯಂ ಧನಂ ಸೌಖ್ಯಮಧರ್ಮಾದ್ದುಃಖಮೇವ ಚ ।
ತಸ್ಮಾದ್ಧರ್ಮಂ ಸುಖಾರ್ಥಾಯ ಕುರ್ಯಾತ್ ಪಾಪಂ ವಿಸರ್ಜಯೇತ್

ಪಾಪಸ್ಯ ಹಿ ಫಲಂ ದುಃಖಂ ತದ್ಭೋಕ್ತವ್ಯಮಿಹಾತ್ಮನಾ ।
ತಸ್ಮಾದಾತ್ಮಾಪಘಾತಾರ್ಥಂ ಮೂಢಃ ಪಾಪಂ ಕರಿಷ್ಯತಿ ॥ ೨೫

ಕಸ್ಯಚಿನ್ನ ಹಿ ದುರ್ಬುದ್ಧೇಶ್ಛಂದತೋ ಜಾಯತೇ ಮತಿಃ ।
ಯಾದೃಶಂ ಕುರುತೇ ಕರ್ಮ ತಾದೃಶಂ ಫಲಮಶ್ನುತೇ ॥ ೨೬

ಬುದ್ಧಿಂ ರೂಪಂ ಬಲಂ ಪುತ್ರಾನ್ ವಿತ್ತಂ ಧೀರತ್ವಮೇವ ಚ ।
ಪ್ರಾಪ್ನುವಂತಿ ನರಾ ಲೋಕೇ ನಿರ್ಜಿತಂ ಪುಣ್ಯಕರ್ಮಭಿಃ ॥ ೨೭

ಏವಂ ನಿರಯಗಾಮೀ ತ್ವಂ ಯಸ್ಯ ತೇ ಮತಿರೀದೃಶೀ ।
ನ ತ್ವಾಂ ಸಮಭಿಭಾಷಿಷ್ಯೇಽಸದ್ವೃತ್ತೇಷ್ವೇಷ ನಿರ್ಣಯಃ ॥ ೨೮

ಏವಮುಕ್ತಾಸ್ತತಸ್ತೇನ ತಸ್ಯಾಮಾತ್ಯಾಃ ಸಮಾಹತಾಃ ।
ಮಾರೀಚಪ್ರಮುಖಾಃ ಸರ್ವೇ ವಿಮುಖಾ ವಿಪ್ರದುದ್ರುವುಃ ॥ ೨೯

---

ಯಾವನು ತಪಸ್ಸನ್ನಾರ್ಜಿಸುವುದಿಲ್ಲವೋ, ಆ ಮೂಢನು ಸತ್ತಮೇಲೆ ತನ್ನ ದುರ್ಗತಿಗಾಗಿ ಪಶ್ಚಾತ್ತಾಪಪಡಬೇಕಾಗುತ್ತದೆ (೨೨-೨೩) ಧರ್ಮದಿಂದಲೇ ರಾಜ್ಯ, ಧನ, ಸೌಖ್ಯ—ಎಲ್ಲವೂ ಲಭಿಸುತ್ತದೆ ಅಧರ್ಮದ ಫಲ ದುಃಖವೇ ಆದ್ದರಿಂದ ಸುಖವು ಬೇಕೆನ್ನುವವನು ಧರ್ಮವನ್ನಾಚರಿಸಬೇಕು ಪಾಪಕರ್ಮವನ್ನು ವರ್ಜಿಸಬೇಕು ಪಾಪದ ಫಲವಾದ ದುಃಖವನ್ನು ತಾನೇ ಅನುಭವಿಸಬೇಕಾಗುತ್ತದೆ ಆದ್ದರಿಂದ ಪಾಪವನ್ನಾಚರಿಸುವವನು ಮೂಢನೇ ಸರಿ. ತನ್ನ ಕೇಡಿಗಾಗಿಯೇ ಅವನು ಪಾಪಕರ್ಮದಲ್ಲಿ ನಿರತನಾಗುತ್ತಾನೆ (೨೪-೨೫) ದಶಾನನ, ಮಾತಾಪಿತೃಸೇವೆ ಮುಂತಾದ ಕರ್ತವ್ಯವನ್ನು ಮಾಡದಿರುವ ಮತಿಗೇಡಿಗೆ, ತಾನಾಗಿಯೇ ಸದ್ಬುದ್ಧಿಯುಂಟಾಗುವುದಿಲ್ಲ. ಕರ್ಮಕ್ಕೆ ತಕ್ಕ ಫಲವು ಒದಗಿಯೇ ತೀರುತ್ತದೆ ಬುದ್ಧಿ, ರೂಪ, ಬಲ, ಪುತ್ರರು, ಧನ, ಪಾಂಡಿತ್ಯ—ಮೊದಲಾದವು ಜನರಿಗೆ ಅವರವರ ಪುಣ್ಯಕರ್ಮಗಳಿಂದ ಲಭಿಸುತ್ತವೆ (೨೬-೨೭). ನಿನಗೆ ಈ ಬಗೆಯ ದುರ್ಬುದ್ಧಿ ಬಂದಿರುವುದರಿಂದ ನಿನಗೆ ನರಕವೇ ಗತಿ ನಿನ್ನೊಡನೆ ನಾನು ಸಂಭಾಷಿಸುವುದೂ ಯುಕ್ತವಲ್ಲ ದುರ್ಜನರೊಡನೆ ಸಂಭಾಷಿಸಬಾರದೆಂಬುದೇ ಶಾಸ್ತ್ರಸಿದ್ಧಾಂತ" ಎಂದು ಹೇಳಿದನು (೨೮). ಹೀಗೆ ನುಡಿದು ಕುಬೇರನು

*

ತತಸ್ತೇನ ದಶಗ್ರೀವೋ ಯಕ್ಷೇಂದ್ರೇಣ ಮಹಾತ್ಮನಾ ।
ಗದಯಾಭಿಹತೋ ಮೂರ್ಧ್ನಿ ನ ಚ ಸ್ಥಾನಾತ್ ಪ್ರಕಂಪಿತಃ ॥ ೩೦

ತತಸ್ತೌ ರಾಮ ನಿಷ್ಕ್ರಾಂತೌ ತದಾನ್ಯೋಽನ್ಯಂ ಮಹಾಮೃಧೇ ।
ನ ವಿಹ್ವಲೌ ನ ಚ ಶ್ರಾಂತೌ ಬಭೂವತುರಮರ್ಷಣೌ ॥ ೩೧

ಆಗ್ನೇಯಮಸ್ತ್ರಂ ತಸ್ಮೈ ಸ ಮುಮೋಚ ಧನದಸ್ತದಾ ।
ರಾಕ್ಷಸೇಂದ್ರೋ ವಾರುಣೇನ ತದಸ್ತ್ರಂ ಪ್ರತ್ಯವಾರಯತ್ ॥ ೩೨

ತತೋ ಮಾಯಾಂ ಪ್ರವಿಷ್ಟೋಽಸೌ ರಾಕ್ಷಸೀಂ ರಾಕ್ಷಸೇಶ್ವರಃ ।
ರೂಪಾಣಾಂ ಶತಸಾಹಸ್ರಂ ವಿನಾಶಾಯ ಚಕಾರ ಚ ॥ ೩೩

ವ್ಯಾಘ್ರೋ ವರಾಹೋ ಜೀಮೂತಃ ಪರ್ವತಃ ಸಾಗರೋ ದ್ರುಮಃ
ಯಕ್ಷೋ ದೈತ್ಯಸ್ವರೂಪೀ ಚ ಸೋಽದೃಶ್ಯತ ದಶಾನನಃ ॥ ೩೪

ಬಹೂನಿ ಚ ಕರೋತಿ ಸ್ಮ ದೃಶ್ಯತೇ ನ ತ್ವಸೌ ತತಃ ।
ಪ್ರತಿಗೃಹ್ಯ ತತೋ ರಾಮ ಮಹದಸ್ತ್ರಂ ದಶಾನನಃ ॥ ೩೫

---

ಯುದ್ಧವನ್ನಾರಂಭಿಸಲು ಅವನನ್ನೆದುರಿಸಲಾರದೆ ಮಾರೀಚಾದಿಗಳು ಪೆಟ್ಟು ತಿಂದು ಓಡಿಹೋದರು ಅನಂತರ ಮಹಾತ್ಮನಾದ ಯಕ್ಷೇಶ್ವರನು ದಶಗ್ರೀವನ ತಲೆಯಮೇಲೆ ಗದೆಯಿಂದ ಬಡಿದನು ದಶಗ್ರೀವನು ಸ್ವಲ್ಪವೂ ವಿಚಲಿತನಾಗಲಿಲ್ಲ (೨೯-೩೦) ಶ್ರೀರಾಮ, ಆಮೇಲೆ ಅವರಿಬ್ಬರಿಗೂ ಘೋರ ಕದನವು ನಡೆಯಿತು ಕೋಪೋದ್ಧತರಾದ ಅವರೀರ್ವರೂ ಹೆದರದೆ ಬಳಲದೆ ಕಾದಾಡಿದರು ಕುಬೇರನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಲು ರಾವಣನು ವಾರುಣಾಸ್ತ್ರದಿಂದ ಅದನ್ನು ನಿವಾರಿಸಿದನು (೩೧-೩೨) ಆಮೇಲೆ ರಾಕ್ಷಸೇಶ್ವರನು ರಾಕ್ಷಸೀಮಾಯೆಯನ್ನವಲಂಬಿಸಿ ಲಕ್ಷಗಟ್ಟಲೆ ವಿವಿಧ ರೂಪಗಳನ್ನು ಧರಿಸಿ ಯಕ್ಷರ ಧ್ವಂಸದಲ್ಲಿ ಉದ್ಯುಕ್ತನಾದನು. ಆ ದಶಾನನನು ಹುಲಿಯಾಗಿ ಹಂದಿಯಾಗಿ ಮೋಡವಾಗಿ ಪರ್ವತವಾಗಿ ಸಮುದ್ರವಾಗಿ ಮರವಾಗಿ ಯಕ್ಷನಾಗಿ ಮತ್ತೆ ದೈತ್ಯನಾಗಿ ಗೋಚರಿಸಿದನು! (೩೩-೩೪). ಹೀಗೆ ವಿವಿಧ ರೂಪಗಳನ್ನು ಧರಿಸಿ ಮತ್ತೆ ಮಾಯವಾಗುತ್ತಿದ್ದನು. ಕಡೆಗೆ ದಶಗ್ರೀವನು ಒಂದು ಮಹಾಗದೆಯನ್ನೆತ್ತಿ ತಿರುಗಿಸಿ

ಜಘಾನ ಮೂರ್ಧ್ನಿ ಧನದಂ ವ್ಯಾವಿಧ್ಯ ಮಹತೀಂ ಗದಾಮ್ ।
ಏವಂ ಸ ತೇನಾಭಿಹತೋ ವಿಹ್ವಲಃ ಶೋಣಿತೋಕ್ಷಿತಃ ॥ ೩೭

ಕೃತ್ತಮೂಲ ಇವಾಶೋಕೋ ನಿಪಪಾತ ಧನಾಧಿಪಃ ।
ತತಃ ಪದ್ಮಾದಿಭಿಸ್ತತ್ರ ನಿಧಿಭಿಃ ಸ ತದಾವೃತಃ ॥ ೩೭

ಧನದೋಚ್ಛ್ವಸಿತಸ್ತೈಸ್ತು ವನಮಾನೀಯ ನಂದನಮ್ ।
ನಿರ್ಜಿತ್ಯ ರಾಕ್ಷಸೇಂದ್ರಸ್ತಂ ಧನದಂ ಹೃಷ್ಟಮಾನಸಃ ॥ ೩೮

ಪುಷ್ಪಕಂ ತಸ್ಯ ಜಗ್ರಾಹ ವಿಮಾನಂ ಜಯಲಕ್ಷಣಮ್ ।
ಕಾಂಚನಸ್ತಂಭಸಂವೀತಂ ವೈದೂರ್ಯಮಣಿತೋರಣಮ್ ॥ ೩೯

ಮುಕ್ತಾಜಾಲಪ್ರತಿಚ್ಛನ್ನಂ ಸರ್ವಕಾಮಫಲದ್ರುಮಮ್ ।
ಮನೋಜವಂ ಕಾಮಗಮಂ ಕಾಮರೂಪಂ ವಿಹಂಗಮಮ್ ॥ ೪೦

ಮಣಿಕಾಂಚನಸೋಪಾನಂ ತಪ್ತಕಾಂಚನವೇದಿಕಮ್ ।
ದೇವೋಪವಾಹ್ಯಮಕ್ಷಯ್ಯಂ ಸದಾ ದೃಷ್ಟಿಮನಃಸುಖಮ್ ॥ ೪೧

---

ಕುಬೇರನ ಶಿರಸ್ಸಿನ ಮೇಲೆ ಅಪ್ಪಳಿಸಿದನು ಧನದನು ಕಂಗೆಟ್ಟನು. ರಕ್ತದಲ್ಲಿ ತೋಯ್ದನು ಮರುಕ್ಷಣದಲ್ಲಿ ಕಡಿದುರುಳಿಸಿದ ಅಶೋಕ ವೃಕ್ಷದಂತೆ ಬಿದ್ದನು. ಒಡನೆಯೇ ಪದ್ಮಾದಿ ನಿಧಿದೇವತೆಗಳು ಅವನನ್ನು ಸುತ್ತುಗಟ್ಟಿ ನಿಂತರು (೩೫-೩೭). ಅವರು ಕುಬೇರನನ್ನು ನಂದನವನಕ್ಕೆ ಹೊತ್ತು ಕೊಂಡು ಹೋಗಿ ಶೈತ್ಯೋಪಚಾರಗಳಿಂದ ಸಂತೈಸಿದರು ರಾವಣನು ಈ ಪ್ರಕಾರದಲ್ಲಿ ಕುಬೇರನನ್ನು ಜಯಿಸಿ ಸಂತುಷ್ಟನಾಗಿ, ಜಯದ ಚಿಹ್ನೆಯಾಗಿರಲೆಂದು ಆತನ ಪುಷ್ಪಕವಿಮಾನವನ್ನು ಅಪಹರಿಸಿದನು ಆ ವಿಮಾನವಾದರೋ ಕಾಂಚನಸ್ತಂಭಗಳಿಂದಲೂ ವೈಡೂರ್ಯಮಣಿ ತೋರಣಗಳಿಂದಲೂ ವಿರಾಜಿಸುವಂತಹದು (೩೮-೩೯) ಮುತ್ತಿನ ಕುಚ್ಚು ಗಳಿಂದ ಭೂಷಿತವಾದುದು ಬಯಸುವ ಹಣ್ಣುಗಳನ್ನು ಕೊಡುವ ವೃಕ್ಷ ಗಳಿಂದ ಯುಕ್ತವಾದುದು ಅದು ಮನೋವೇಗದಿಂದ ಬಯಸಿದ ಕಡೆಗೆ ಹೋಗಬಲ್ಲ ಕಾಮರೂಪಿಯಾದ ಆಕಾಶಯಾನ ಮಣಿಮಯವಾದ ಸುವರ್ಣ ಸೋಪಾನವುಳ್ಳದ್ದು. ಚಿನ್ನದ ವೇದಿಕೆಗಳಿಂದ ವಿರಾಜಿಸತಕ್ಕದ್ದು ದೇವತೆ ಗಳಿಗೆ ಯೋಗ್ಯವಾದ ವಾಹನ. ಎಂದಿಗೂ ನಾಶವಾಗತಕ್ಕದ್ದಲ್ಲ ನೋಡಲು

ಬಹ್ವಾಶ್ಚರ್ಯಂ ಭಕ್ತಿಚಿತ್ರಂ ಬ್ರಹ್ಮಣಾ ಪರಿನಿರ್ಮಿತಮ್ ।
ನಿರ್ಮಿತಂ ಸರ್ವಕಾಮೈಸ್ತು ಮನೋಹರಮನುತ್ತಮಮ್ ॥ ೪೨
ನ ತು ಶೀತಂ ನ ಚೋಷ್ಣಂ ಚ ಸರ್ವರ್ತುಸುಖದಂ ಶುಭಮ್ ॥
ಸ ತಂ ರಾಜಾ ಸಮಾರುಹ್ಯ ಕಾಮಗಂ ವೀರ್ಯನಿರ್ಜಿತಮ್ ॥ ೪೩
ಜಿತಂ ತ್ರಿಭುವನಂ ಮೇನೇ ದರ್ಪೋತ್ಸೇಕಾತ್ ಸುದುರ್ಮತಿಃ ।
ಜಿತ್ವಾ ವೈಶ್ರವಣಂ ದೇವಂ ಕೈಲಾಸಾತ್ ಸಮವಾತರತ್ ॥ ೪೪
ಸ್ವತೇಜಸಾ ವಿಪುಲಮವಾಪ್ಯ ತಂ ಜಯಂ
ಪ್ರತಾಪವಾನ್ ವಿಮಲಕಿರೀಟಹಾರವಾನ್ ।
ರರಾಜ ವೈ ಪರಮವಿಮಾನಮಾಸ್ಥಿತೋ
ನಿಶಾಚರಃ ಸದಸಿ ಗತೋ ಯಥಾನಲಃ ॥ ೪೫

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚದಶಃ ಸರ್ಗಃ

---

ರಮಣೀಯವಾಗಿ ಮನಸ್ಸಿಗೆ ಹರ್ಷವನ್ನು ನೀಡುವಂತಹದು (೪೦-೪೧) ಆ ವಿಮಾನವು ಆಶ್ಚರ್ಯಕರವಾಗಿಯೂ ವಿವಿಧ ವಿಭಾಗಗಳಲ್ಲಿ ಚಿತ್ರರಂಜಿತವಾಗಿಯೂ ಇದ್ದಿತು ಬ್ರಹ್ಮನ ಆಜ್ಞೆಯಂತೆ ವಿಶ್ವಕರ್ಮನು ಅದನ್ನು ನಿರ್ಮಿಸಿದ್ದನು ಆ ಪುಷ್ಪಕವೂ ಯಾವ ಕೊರತೆಯೂ ಇಲ್ಲದೆ ಸರ್ವ ಕಾಮಸಮೃದ್ಧವಾದುದು ಮನೋಹರವಾದ ಆ ವಿಮಾನವು ಸರ್ವ ಶ್ರೇಷ್ಠವಾದದ್ದು (೪೨). ಚಳಿಯೂ ಇಲ್ಲದೆ ಸೆಕೆಯೂ ಇಲ್ಲದೆ ಸಕಲ ಋತುಗಳಲ್ಲಿಯೂ ಒಂದೇ ಬಗೆಯ ಸೌಖ್ಯವನ್ನು ನೀಡುವಂತಹುದು. ರಾಕ್ಷಸರಾಜನು ತನ್ನ ಪರಾಕ್ರಮದಿಂದ ಅದನ್ನು ವಶಪಡಿಸಿಕೊಂಡು ಅದನ್ನೇರಿದನು (೪೩) ಆ ದುರ್ಮತಿಯು ಪುಷ್ಪಕವನ್ನೇರಿ ದರ್ಪೋದ್ರೇಕದಿಂದ ತ್ರಿಭುವನವನ್ನೂ ನಾನು ಜಯಿಸಿದೆನೆಂದೇ ಬಗೆದನು ಹೀಗೆ ವೈಶ್ರವಣನನ್ನು ಗೆದ್ದು ರಾವಣನು ಕೈಲಾಸದಿಂದ ಕೆಳಗಿಳಿದನು ಪ್ರತಾಪಶಾಲಿಯಾದ ದಶಗ್ರೀವನು ತನ್ನ ತೇಜೋಬಲದಿಂದ ಕುಬೇರನನ್ನು ಜಯಿಸಿ, ವಿಮಲವಾದ ಕಿರೀಟವನ್ನೂ ಮುಕ್ತಾಹಾರವನ್ನೂ ಧರಿಸಿ ಪುಷ್ಪಕ ವಿಮಾನದಲ್ಲಿ ಕುಳಿತಿರಲು, ಯಾಗಸಭೆಯಲ್ಲಿ ವಿರಾಜಿಸುವ ಯಜ್ಞೇಶ್ವರನಂತೆ ಕಂಗೊಳಿಸಿದನು (೪೪-೪೫)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹದಿನೈದನೆಯ ಸರ್ಗ

## ಷೋಡಶಃ ಸರ್ಗಃ

### ರಾವಣನಾಮಪ್ರಾಪ್ತಿಃ

ಸ ಜಿತ್ವಾ ಧನದಂ ರಾಮ ಭ್ರಾತರಂ ರಾಕ್ಷಸಾಧಿಪಃ ।
ಮಹಾಸೇನಪ್ರಸೂತಿಂ ತದ್ಯಯೌ ಶರವಣಂ ಮಹತ್ ॥ ೧

ಅಥಾಪಶ್ಯದ್ದಶಗ್ರೀವೋ ರೌಕ್ಮಂ ಶರವಣಂ ಮಹತ್ ।
ಗಭಸ್ತಿಜಾಲಸಂವೀತಂ ದ್ವಿತೀಯಮಿವ ಭಾಸ್ಕರಮ್ ॥ ೨

ಸ ಪರ್ವತಂ ಸಮಾರುಹ್ಯ ಕಂಚಿದ್ರಮ್ಯವನಾಂತರಮ್ ।
ಅಪಶ್ಯತ್ ಪುಷ್ಪಕಂ ತತ್ರ ರಾಮ ವಿಷ್ಟಂಭಿತಂ ತದಾ ॥ ೩

ವಿಷ್ಟಬ್ಧಂ ಪುಷ್ಪಕಂ ದೃಷ್ಟ್ವಾ ಹ್ಯಗಮಂ ಕಾಮಗಂ ಕೃತಮ್ ।
ಅಚಿಂತಯದ್ರಾಕ್ಷಸೇಂದ್ರಃ ಸಚಿವೈಸ್ತೈಃ ಸಮಾವೃತಃ ॥ ೪

ಕಿಂ ನಿಮಿತ್ತಂ ಚೇಚ್ಛಯಾ ಮೇ ನೇದಂ ಗಚ್ಛತಿ ಪುಷ್ಪಕಮ್ ।
ಪರ್ವತಸ್ಯೋಪರಿಸ್ಥಸ್ಯ ಕರ್ಮೇದಂ ಕಸ್ಯಚಿದ್ಭವೇತ್ ॥ ೫

### ಸರ್ಗ ೧೬

ದಶಗ್ರೀವನಿಗೆ ನಂದೀಶ್ವರನ ಶಾಪ ಕೈಲಾಸಚಾಲನ ರಾವಣನೆಂದು ನಾಮ ಪ್ರಾಪ್ತಿ ಶಿವನಿಂದ ಚಂದ್ರಹಾಸವೆಂಬ ಖಡ್ಗವನ್ನು ಪಡೆಯುವುದು

ರಾಘವ, ರಾಕ್ಷಸಾಧಿಪನು ತನ್ನ ಅಣ್ಣನಾದ ಕುಬೇರನನ್ನು ಜಯಿಸಿದ ಮೇಲೆ, ಕುಮಾರಸ್ವಾಮಿಯು ಜನಿಸಿದ ವಿಶಾಲವಾದ ಶರವಣಕ್ಕೆ ಹೋದನು ಆ ಶರವಣವು ಸುವರ್ಣಮಯವಾಗಿ, ಕಿರಣಜಾಲಸಂವೀತವಾದ ಸೂರ್ಯ ಮಂಡಲದಂತೆ ವಿರಾಜಿಸುತ್ತಿತ್ತು (೧-೨) ರಮ್ಯವನಸಂಶೋಭಿತವಾದ ಆ ಶರವಣಪರ್ವತವನ್ನು ದಶಗ್ರೀವನು ಏರಿ ಹೋಗುತ್ತಿರುವಾಗ, ಪುಷ್ಪಕ ವಿಮಾನವು ಮುಂದೆ ಹೋಗದೆ ಥಟ್ಟನೆ ನಿಂತಿತು ಕಾಮಗಾಮಿಯಾದ ವಿಮಾನವು ಮುಂದೆ ಹೋಗದೆ ನಿಂತುದನ್ನು ನೋಡಿ, ರಾಕ್ಷಸೇಂದ್ರನು ತನ್ನ ಸಚಿವರೊಡನೆ "ಎಲೈ ಸಚಿವರೆ, ಇದೇನು? ನನ್ನ ಇಚ್ಛಾನುಸಾರವಾಗಿ ಪುಷ್ಪಕವು ಸಾಗದಿರಲು ನಿಮಿತ್ತವೇನು? ಗಿರಿಶಿಖರದಮೇಲಿರುವ

ತತೋಽಬ್ರವೀತ್ತದಾ ರಾಮ ಮಾರೀಚೋ ಬುದ್ಧಿಕೋವಿದಃ ।
ನೇದಂ ನಿಷ್ಕಾರಣಂ ರಾಜನ್ ಪುಷ್ಪಕಂ ಯನ್ನ ಗಚ್ಛತಿ ॥ ೬

ಅಥವಾ ಪುಷ್ಪಕಮಿದಂ ಧನದಾನ್ನಾನ್ಯವಾಹನಮ್ ।
ಅತೋ ನಿಃಸ್ಪಂದಮಭವದ್ಧನಾಧ್ಯಕ್ಷವಿನಾಕೃತಮ್ ॥ ೭

ಇತಿ ವಾಕ್ಯಾಂತರೇ ತಸ್ಯ ಕರಾಲಃ ಕೃಷ್ಣಪಿಂಗಲಃ ।
ವಾಮನೋ ವಿಕಟೋ ಮುಂಡೀ ನಂದೀ ಪ್ರಹ್ವಭುಜೋ ಬಲೀ ॥

ತತಃ ಪಾರ್ಶ್ವಮುಪಾಗಮ್ಯ ಭವಸ್ಯಾನುಚರೋಽಬ್ರವೀತ್ ।
ನಂದೀಶ್ವರೋ ವಚಶ್ಚೇದಂ ರಾಕ್ಷಸೇಂದ್ರಮಶಂಕಿತಃ ॥ ೯

ನಿವರ್ತಸ್ವ ದಶಗ್ರೀವ ಶೈಲೇ ಕ್ರೀಡತಿ ಶಂಕರಃ ।
ಸುಪರ್ಣನಾಗಯಕ್ಷಾಣಾಂ ದೇವಗಂಧರ್ವರಕ್ಷಸಾಮ್ ॥ ೧೦

ಸರ್ವೇಷಾಮೇವ ಭೂತಾನಾಮಗಮ್ಯಃ ಪರ್ವತಃ ಕೃತಃ ।
ತನ್ನಿವರ್ತಸ್ವ ದುರ್ಬುದ್ಧೇ ಮಾ ವಿನಾಶಮವಾಪ್ಸ್ಯಸಿ ॥ ೧೧

---

ಯಾವನೋ ಒಬ್ಬನ ಕುಚೇಷ್ಟೆಯಾಗಿರಬಹುದೆ?" ಎಂದು ಸಮಾಲೋಚಿಸಿದನು (೩-೫) ಆಗ ಬುದ್ಧಿಶಾಲಿಯಾದ ಮಾರೀಚನೆಂಬ ಸಚಿವನು "ಮಹಾರಾಜ, ಈ ಪುಷ್ಪಕವು ಮುಂದೆ ಸಾಗದಿರಲು ಯಾವುದೋ ಪ್ರಬಲವಾದ ಕಾರಣವಿಲ್ಲದೇ ಇಲ್ಲ ಪ್ರಾಯಶಃ ಇದು ಕುಬೇರನೊಬ್ಬನನ್ನೇ ಹೊರುತ್ತಿರಬೇಕು ಇತರರಿಗೆ ವಾಹನವಾಗಲಾರದೆಂದು ತೋರುತ್ತದೆ ಕುಬೇರನಿಲ್ಲದ್ದರಿಂದ ಈ ವಿಮಾನವು ನಿಶ್ಚಲವಾಗಿ ನಿಂತುಬಿಟ್ಟಿದೆ" ಎಂದನು (೬-೭). ಹೀಗೆ ಮಾರೀಚನು ಹೇಳುತ್ತಿರುವಷ್ಟರಲ್ಲಿ, ಕರಾಳನೂ ಕೃಷ್ಣಪಿಂಗಳನೂ ಕುಳ್ಳನೂ ವಿಕಟಾಕಾರನೂ ಆದ ಒಬ್ಬ ಪುರುಷನು ಉಪಸ್ಥಿತನಾದನು ಅವನ ತಲೆಯಲ್ಲಿ ಕೇಶಗಳಿರಲಿಲ್ಲ ಕೈಗಳು ಗಿಡ್ಡವಾಗಿದ್ದವು ಆದರೂ ಮಹಾಬಲಾಢ್ಯನಾಗಿ ಕಾಣಿಸುತ್ತಿದ್ದನು ಶ್ರೀರಾಮ, ಆತನೇ ಶಿವನ ಅನುಚರನಾದ ನಂದೀಶ್ವರ! (೮) ಅವನು ನಿಶ್ಶಂಕೆಯಿಂದ ರಾಕ್ಷಸೇಂದ್ರನ ಸಮೀಪಕ್ಕೆ ಬಂದು "ದಶಗ್ರೀವ, ತೊಲಗು ಇಲ್ಲಿಂದ! ಈ ಶೈಲದಲ್ಲಿ ಶಂಕರನು ವಿಹರಿಸುತ್ತಿದ್ದಾನೆ ಈ ಪರ್ವತವು ಸಕಲಜೀವಜಾತಗಳಿಗೂ ಅಗಮ್ಯವಾದುದು ಸುಪರ್ಣನಾಗಯಕ್ಷರಾಗಲಿ ದೇವಗಂಧರ್ವರಾಕ್ಷಸರಾಗಲಿ, ಯಾರೂ ಇಲ್ಲಿಗೆ ಬರುವಹಾಗಿಲ್ಲ. ಎಲಾ ಮತಿಗೇಡಿ,

ಇತಿ ನಂದಿವಚಃ ಶ್ರುತ್ವಾ ಕ್ರೋಧಾತ್ ಕಂಪಿತಕುಂಡಲಃ ।
ರೋಷಾತ್ತು ತಾಮ್ರನಯನಃ ಪುಷ್ಪಕಾದವರುಹ್ಯ ಸಃ ॥ ೧೨

ಕೋಽಯಂ ಶಂಕರ ಇತ್ಯುಕ್ತ್ವಾ ಶೈಲಮೂಲಮುಪಾಗತಃ ।
ಸೋಽಪಶ್ಯನ್ನಂದಿನಂ ತತ್ರ ದೇವಸ್ಯಾದೂರತಃ ಸ್ಥಿತಮ್ ॥ ೧೩

ದೀಪ್ತಂ ಶೂಲಮವಷ್ಟಭ್ಯ ದ್ವಿತೀಯಮಿವ ಶಂಕರಮ್ ।
ತಂ ದೃಷ್ಟ್ವಾ ವಾನರಮುಖಮವಜ್ಞಾಯ ಸ ರಾಕ್ಷಸಃ ॥ ೧೪

ಪ್ರಹಾಸಂ ಮುಮುಚೇ ತತ್ರ ಸತೋಯ ಇವ ತೋಯದಃ ।
ತಂ ಕ್ರುದ್ಧೋ ಭಗವಾನ್ನಂದೀ ಶಂಕರಸ್ಯಾಪರಾ ತನುಃ ॥ ೧೫

ಅಬ್ರವೀತ್ತತ್ರ ತದ್ರಕ್ಷೋ ದಶಾನನಮುಪಸ್ಥಿತಮ್ ।
ಯಸ್ಮಾದ್ವಾನರರೂಪಂ ಮಾಮವಜ್ಞಾಯ ದಶಾನನ ॥ ೧೬

ಅಶನೀಪಾತಸಂಕಾಶಮುಪಹಾಸಂ ಪ್ರಮುಕ್ತವಾನ್ ।
ತಸ್ಮಾನ್ಮದ್ರೂಪಸಂಪನ್ನಾ ಮದ್ವೀರ್ಯಸಮತೇಜಸಃ ॥ ೧೭

---

ಮೊದಲು ಹೊರಡು ಇಲ್ಲಿಂದ ! ನಾಶವಾಗಿಹೋದೀಯೆ ! " ಎಂದು ಎಚ್ಚರಿಸಿದನು (೯-೧೧) ನಂದೀಶ್ವರನ ನುಡಿಯನ್ನು ಕೇಳಿ ದಶಗ್ರೀವನು ಕ್ರುದ್ಧನಾದನು ಅವನ ಕರ್ಣಕುಂಡಲಗಳು ತೂಗಾಡಿದವು ಕಣ್ಣುಗಳು ಕೆಂಪೇರಿದವು. ಒಡನೆಯೇ ಅವನು ಪುಷ್ಪಕದಿಂದ ಧುಮುಕಿ "ಯಾವನೋ ಅವನು ಶಂಕರ ಎಂಬವನು ? " ಎನ್ನುತ್ತ ಪರ್ವತದ ಬಳಿಗೆ ಹೋಗಿ, ಶಿವನ ಪಾರ್ಶ್ವದಲ್ಲಿ ನಿಂತಿದ್ದ ನಂದಿಯನ್ನು ಕಂಡನು (೧೨-೧೩) ಎರಡನೆಯ ಪರಮೇಶ್ವರನೋ ಎಂಬಂತೆ ತೇಜಸ್ಸಿನಿಂದ ಪ್ರಜ್ವಲಿಸುತ್ತ ತ್ರಿಶೂಲಧಾರಿಯಾಗಿ ನಿಂತಿದ್ದ ನಂದೀಶ್ವರನ ಮುಖವು ಕಪಿಯ ಮುಖದಂತೆ ಇದ್ದುದನ್ನು ನೋಡಿ, ಆ ರಾಕ್ಷಸನು 'ಹೋ !' ಎಂದು ಗಟ್ಟಿಯಾಗಿ ನಕ್ಕನು ಅವನ ಅಟ್ಟಹಾಸವು, ಕಾರ್ಮೋಡವು ಗುಡುಗಿದಂತೆ ಕೇಳಿಸಿತು ಆಗ ಶಂಕರನ ಮತ್ತೊಂದು ಶರೀರವೇ ಆದ ಭಗವಾನ್ ನಂದಿಕೇಶ್ವರನು ಕ್ರುದ್ಧನಾದನು (೧೪-೧೫) ಅವನು ದಶಗ್ರೀವನನ್ನು ನೋಡಿ "ಎಲೈ ರಾಕ್ಷಸ, ಕಪಿವೇಷಧಾರಿಯಾದ ನನ್ನನ್ನು ನೋಡಿ ನಗುವೆಯಾ ? ಸಿಡಿಲುಹೊಡೆದಂತೆ ಅಟ್ಟಹಾಸ ಮಾಡಿದೆಯಲ್ಲವೆ ? ನನ್ನಂತೆಯೇ ರೂಪವುಳ್ಳ—ನನ್ನಂತೆಯೇ ವೀರ್ಯಸಂಪನ್ನ

ಉತ್ಪತ್ಸ್ಯಂತಿ ವಧಾರ್ಥಂ ಹಿ ಕುಲಸ್ಯ ತವ ವಾನರಾಃ ।
ನಖದಂಷ್ಟ್ರಾಯುಧಾಃ ಕ್ರೂರಾ ಮನಃಸಂಪಾತರಂಹಸಃ ॥ ೧೮

ಯುದ್ಧೋನ್ಮತ್ತಾ ಬಲೋದ್ರಿಕ್ತಾಃ ಶೈಲಾ ಇವ ವಿಸರ್ಪಿಣಃ ।
ತೇ ತವ ಪ್ರಬಲಂ ದರ್ಪಮುತ್ಸೇಧಂ ಚ ಪೃಥಗ್ವಿಧಮ್ ॥ ೧೯

ವ್ಯಪನೇಷ್ಯಂತಿ ಸಂಭೂಯ ಸಹಾಮಾತ್ಯಸುತಸ್ಯ ಚ ।
ಕಿಂ ತ್ವಿದಾನೀಂ ಮಯಾ ಶಕ್ಯಂ ಹಂತುಂ ತ್ವಾಂ ಹೇ ನಿಶಾಚರ ॥

ನ ಹಂತವ್ಯೋ ಹತಸ್ತ್ವಂ ಹಿ ಪೂರ್ವಮೇವ ಸ್ವಕರ್ಮಭಿಃ ।
ಇತ್ಯುದೀರಿತವಾಕ್ಯೇ ತು ದೇವೇ ತಸ್ಮಿನ್ ಮಹಾತ್ಮನಿ ॥ ೨೦

ದೇವದುಂದುಭಯೋ ನೇದುಃ ಪುಷ್ಪವೃಷ್ಟಿಶ್ಚ ಖಾಚ್ಚ್ಯುತಾ ।
ಅಚಿಂತಯಿತ್ವಾ ಸ ತದಾ ನಂದಿವಾಕ್ಯಂ ಮಹಾಬಲಃ ॥ ೨೧

ಪರ್ವತಂ ತು ಸಮಾಸಾದ್ಯ ವಾಕ್ಯಮಾಹ ದಶಾನನಃ ।
ಪುಷ್ಪಕಸ್ಯ ಗತಿಶ್ಛಿನ್ನಾ ಯತ್ಕೃತೇ ಮಮ ಗಚ್ಛತಃ ॥ ೨೨

ರಾದ ಕಪಿಗಳು ಜನಿಸಿ ನಿನ್ನ ಕುಲವನ್ನೇ ನಾಶಮಾಡುವರು ! ಆ ವೀರರಿಗೆ ನಖದಂಷ್ಟ್ರಗಳೇ ಆಯುಧಗಳಾಗಿರುವವು ಮನೋವೇಗದಿಂದ ಸಂಚರಿಸುವರು (೧೬-೧೮) ಆ ವಾನರರು ಯುದ್ಧೋನ್ಮತ್ತರೂ ಬಲೋದ್ರಿಕ್ತರೂ ಆಗಿ ಶೈಲಗಳಂತೆ ಸಂಚರಿಸುತ್ತ, ನಿನ್ನ ಈ ದರ್ಪವನ್ನೂ ಎಲ್ಲಾ ಬಗೆಯ ಸೊಕ್ಕನ್ನೂ ಇಳಿಸುವರು ! ನಿನ್ನ ಮಂತ್ರಿಗಳನ್ನೂ ನಿನ್ನ ಮಕ್ಕಳನ್ನೂ—ಸಕಲರನ್ನೂ ಸಂಹರಿಸುವರು ಎಲೈ ನಿಶಾಚರ, ನಿನ್ನನ್ನು ಈಗಲೇ ಕೊಂದು ನಿರ್ನಾಮಮಾಡಿಯೇನು ಆದರೆ ನಿನ್ನ ದುಷ್ಕರ್ಮಗಳಿಂದಲೇ ಸತ್ತು ಹೋಗಿದ್ದೀಯೆ ! ಸತ್ತವನನ್ನು ಮತ್ತೆ ಕೊಲ್ಲಬೇಕಾದ್ದಿಲ್ಲ !" (೧೯-೨೦). ಈ ಪ್ರಕಾರವಾಗಿ ನಂದಿಕೇಶ್ವರನು ನುಡಿಯಲಾಗಿ, ದೇವದುಂದುಭಿಗಳು ಮೊಳಗಿದವು ಹೂಮಳೆಯು ಆಕಾಶದಿಂದ ಸುರಿಯಿತು ಬಲೋದ್ಧತನಾದ ದಶಗ್ರೀವನು ನಂದಿಯ ನುಡಿಯನ್ನು ಲೆಕ್ಕಿಸಲಿಲ್ಲ " (೨೧) ಅವನು ನೇರವಾಗಿ ಪರ್ವತದ ಬಳಿಗೆ ಹೋಗಿ ನಂದಿಯನ್ನು ಕುರಿತು "ಎಲೈ ಎತ್ತುಗಳ ರಾಜ ! *

* ಮೂಲದಲ್ಲಿ ಗೋಪತಿ ಎಂದಿದೆ ಶಿವನೆಂದು ವ್ಯಾಖ್ಯಾನಕಾರರು ಅರ್ಥ ಮಾಡಿದ್ದಾರೆ.

ತಮಿಮಂ ಶೈಲಮುನ್ಮೂಲಂ ಕರೋಮಿ ತವ ಗೋಪತೇ ।
ಕೇನ ಪ್ರಭಾವೇಣ ಭವೋ ನಿತ್ಯಂ ಕ್ರೀಡತಿ ರಾಜವತ್ ॥ ೨೪

ವಿಜ್ಞಾತವ್ಯಂ ನ ಜಾನೀತೇ ಭಯಸ್ಥಾನಮುಪಸ್ಥಿತಮ್ ।
ಏವಮುಕ್ತ್ವಾ ತತೋ ರಾಮ ಭುಜಾನ್ ವಿಕ್ಷಿಪ್ಯ ಪರ್ವತೇ ॥ ೨೫

ತೋಲಯಾಮಾಸ ತಂ ಶೈಲಂ ಸ ಶೈಲಃ ಸಮಕಂಪತ ।
ಚಾಲನಾತ್ ಪರ್ವತಸ್ಯೈವ ಗಣಾ ದೇವಸ್ಯ ಕಂಪಿತಾಃ ॥ ೨೬

ಚಚಾಲ ಪಾರ್ವತೀ ಚಾಪಿ ತದಾಶ್ಲಿಷ್ಟಾ ಮಹೇಶ್ವರಮ್ ।
ತತೋ ರಾಮ ಮಹಾದೇವೋ ದೇವಾನಾಂ ಪ್ರವರೋ ಹರಃ ॥ ೨೭

ಪಾದಾಂಗುಷ್ಠೇನ ತಂ ಶೈಲಂ ಪೀಡಯಾಮಾಸ ಲೀಲಯಾ ।
ಪೀಡಿತಾಸ್ತು ತತಸ್ತಸ್ಯ ಶೈಲಸ್ಯಾಧೋಗತಾ ಭುಜಾಃ ॥ ೨೮

ವಿಸ್ಮಿತಾಶ್ಚಾಭವಂಸ್ತತ್ರ ಸಚಿವಾಸ್ತಸ್ಯ ರಕ್ಷಸಃ ।
ರಕ್ಷಸಾ ತೇನ ರೋಷಾಚ್ಚ ಭುಜಾನಾಂ ಪೀಡನಾತ್ತದಾ ॥ ೨೯

---

ಶಿವನು ಇಲ್ಲಿ ನಿತ್ಯವೂ ಮಹಾರಾಜನಂತೆ ಕ್ರೀಡಿಸುತ್ತಿರುವನೆಂದು ಹೇಳಿದೆಯಲ್ಲ, ಅವನಲ್ಲಿರುವ ಮಹಿಮೆಯಾದರೂ ಯಾವುದು? (೨೩-೨೪) ಅವನಿಗೀಗ ಎಂತಹ ಭಯವು ಉಪಸ್ಥಿತವಾಗಿದೆಯೆಂಬುದನ್ನು ಅರಿಯದಿದ್ದಾನೆ" ಎಂದು ಹೇಳಿ, ಶ್ರೀರಾಮ, ತನ್ನ ತೋಳ್ಗಳನ್ನು ನೀಡಿ ಕೈಲಾಸ ಪರ್ವತವನ್ನು ಅಮುಕಿಹಿಡಿದು ಮೀಟಿದನು! ಪರ್ವತವು ಅಲ್ಲಾಡಿತು! ಪರ್ವತವೇ ಕಂಪಿಸಿದ್ದರಿಂದ ಈಶ್ವರನ ಗಣಗಳು ತೂಗಾಡಿದರು (೨೫-೨೬). ಪಾರ್ವತೀದೇವಿಯು ಕಂಪಿಸಿ ಭಯದಿಂದ ಮಹೇಶ್ವರನನ್ನು ಆಲಿಂಗಿಸಿ ಹಿಡಿದುಕೊಂಡಳು ಆಗ, ಶ್ರೀರಾಮ, ಸಕಲದೇವೋತ್ತಮನೂ ಮಹಾದೇವನೂ ಆದ ಹರನು ಪಾದಾಂಗುಷ್ಠದಿಂದ ಬಹು ಸುಲಭವಾಗಿ ಆ ಶೈಲವನ್ನದುಮಿದನು ಒಡನೆಯೇ ಶೈಲದ ತಳದಲ್ಲಿ ರಾವಣನ ಭುಜಗಳು ಸಿಕ್ಕಿಕೊಂಡವು! (೨೭-೨೮) ಆತನ ಸಚಿವರು ದಿಗ್ಭ್ರಾಂತರಾದರು ದಶಗ್ರೀವನು ರೋಷದಿಂದಲೂ ತೋಳ್ಗಳು ಸಿಕ್ಕಿಕೊಂಡದ್ದರಿಂದಾದ ಯಾತನೆಯಿಂದಲೂ

ಮುಕ್ತೋ ವಿರಾವಃ ಸಹಸಾ ತ್ರೈಲೋಕ್ಯಂ ಯೇನ ಕಂಪಿತಮ್ ।
ಮೇನಿರೇ ವಜ್ರನಿಷ್ಪೇಷಂ ತಸ್ಯಾಮಾತ್ಯಾ ಯುಗಕ್ಷಯೇ ॥ ೩೦

ತದಾ ವರ್ತ್ಮಸ್ಥ ಚಲಿತಾ ದೇವಾ ಇಂದ್ರಪುರೋಗಮಾಃ ।
ಸಮುದ್ರಾಶ್ಚಾಪಿ ಸಂಕ್ಷುಬ್ಧಾಶ್ಚಲಿತಾಶ್ಚಾಪಿ ಪರ್ವತಾಃ ॥ ೩೧

ಯಕ್ಷಾ ವಿದ್ಯಾಧರಾಃ ಸಿದ್ಧಾಃ ಕಿಮೇತದಿತಿ ಚಾಬ್ರುವನ್ ।
ಅಥ ತೇ ಮಂತ್ರಿಣಸ್ತಸ್ಯ ವಿಕ್ರೋಶಂತಮಥಾಽಬ್ರುವನ್ ॥ ೩೨

ತೋಷಯಸ್ವ ಮಹಾದೇವಂ ನೀಲಕಂಠಮುಮಾಪತಿಮ್ ।
ತಮೃತೇ ಶರಣಂ ನಾನ್ಯಂ ಪಶ್ಯಾಮೋಽತ್ರ ದಶಾನನ ॥ ೩೩

ಸ್ತುತಿಭಿಃ ಪ್ರಣತೋ ಭೂತ್ವಾ ತಮೇವ ಶರಣಂ ವ್ರಜ ।
ಕೃಪಾಲುಃ ಶಂಕರಸ್ತುಷ್ಟಃ ಪ್ರಸಾದಂ ತೇ ವಿಧಾಸ್ಯತಿ ॥ ೩೪

ಏವಮುಕ್ತಸ್ತದಾಮಾತ್ಯೈಸ್ತುಷ್ಟಾವ ವೃಷಭಧ್ವಜಮ್ ।
ಸಾಮಭಿರ್ವಿವಿಧೈಃ ಸ್ತೋತ್ರೈಃ ಪ್ರಣಮ್ಯ ಸ ದಶಾನನಃ ॥ ೩೫

---

ಗಟ್ಟಿಯಾಗಿ ಅರಚಿದನು! ಅವನ ಅರಚಾಟಕ್ಕೆ ಮೂರು ಲೋಕಗಳೂ ನಡುಗಿದವು ಪ್ರಳಯಕಾಲದ ಸಿಡಿಲಿನ ಅಬ್ಬರವೋ ಎಂದು ಅವನ ಮಂತ್ರಿಗಳು ಶಂಕಿಸಿದರು (೨೯-೩೦) ಆಕಾಶಮಾರ್ಗದಲ್ಲಿ ಸಂಚರಿಸುತ್ತಿದ್ದ ಇಂದ್ರಾದಿ ದೇವತೆಗಳು ವಿಚಲಿತರಾದರು. ಸಮುದ್ರಗಳು ಉಕ್ಕೇರಿದವು ಪರ್ವತಗಳು ಅಲ್ಲಾಡಿದವು! 'ಆಃ ಇದೇನು!' ಎಂದು ಯಕ್ಷಸಿದ್ಧವಿದ್ಯಾಧರರು ಉದ್ಗರಿಸಿದರು ಅರಚುತ್ತಿದ್ದ ದಶಗ್ರೀವನನ್ನು ನೋಡಿ ಅವನ ಮಂತ್ರಿಗಳು "ಮಹಾರಾಜ, ನೀಲಕಂಠನೂ ಉಮಾಪತಿಯೂ ಆದ ಮಹಾದೇವನನ್ನು ಸ್ತೋತ್ರಮಾಡಿ ಪ್ರಸನ್ನೀಕರಿಸು ಅವನಲ್ಲದೆ ನಿನ್ನನ್ನು ರಕ್ಷಿಸಬಲ್ಲ ಇನ್ನು ಯಾರನ್ನೂ ಕಾಣೆವು (೩೧-೩೩) ಸ್ತುತಿಗಳಿಂದ ಈಶ್ವರನ ಮರೆಹೊಗು. ಕೃಪಾನಿಧಿಯಾದ ಶಂಕರನು ಅನುಗ್ರಹಿಸುವನು" ಎಂದು ಹೇಳಿದರು ಆಗ ದಶಾನನನು ವೃಷಭಧ್ವಜನಿಗೆ ಶರಣಾಗಿ ವಿವಿಧ ಸಾಮಗಳಿಂದಲೂ ಸ್ತುತಿಗಳಿಂದಲೂ ಕೊಂಡಾಡಿದನು (೩೪-೩೫) ರಾಘವ, ಆ ರಾಕ್ಷಸನು ಹೀಗೆ ಸ್ತುತಿಸುತ್ತ ಅರಚುತ್ತಲೇ ಒಂದು ಸಾವಿರ ವರ್ಷಗಳು ಕಳೆದವು! ಅನಂತರ

**ಸಂವತ್ಸರಸಹಸ್ರಂ ತು ರುದತೋ ರಕ್ಷಸೋ ಗತಮ್ ।**
**ತತಃ ಪ್ರೀತೋ ಮಹಾದೇವಃ ಶೈಲಾಗ್ರೇ ವಿಷ್ಠಿತಃ ಪ್ರಭುಃ ॥ ೩೬**
**ಮುಕ್ತ್ವಾ ಚಾಸ್ಯ ಭುಜಾನ್ ರಾಮ ಪ್ರಾಹ ವಾಕ್ಯಂ ದಶಾನನಮ್**
**ಪ್ರೀತೋಽಸ್ಮಿ ತವ ವೀರ್ಯಸ್ಯ ಶೌಂಡೀರ್ಯಾಚ್ಚ ದಶಾನನ ॥ ೩೭**
**ಶೈಲಾಕ್ರಾಂತೇನ ಯೋ ಮುಕ್ತಸ್ತ್ವಯಾ ರಾವಃ ಸುದಾರುಣಃ ।**
**ಯಸ್ಮಾಲ್ಲೋಕತ್ರಯಂ ಚೈತದ್ರಾವಿತಂ ಭಯಮಾಗತಮ್ ॥ ೩೮**
**ತಸ್ಮಾತ್ತ್ವಂ ರಾವಣೋ ನಾಮ ನಾಮ್ನಾ ರಾಜನ್ ಭವಿಷ್ಯಸಿ ।**
**ದೇವತಾ ಮಾನುಷಾ ಯಕ್ಷಾ ಯೇ ಚಾನ್ಯೇ ಜಗತೀತಲೇ ॥ ೩೯**
**ಏವಂ ತ್ವಾಮಭಿಧಾಸ್ಯಂತಿ ರಾವಣಂ ಲೋಕರಾವಣಮ್ ।**
**ಗಚ್ಛ ಪೌಲಸ್ತ್ಯ ವಿಸ್ರಬ್ಧಂ ಪಥಾ ಯೇನ ತ್ವಮಿಚ್ಛಸಿ ॥ ೪೦**
**ಮಯಾ ಚೈವಾಭ್ಯನುಜ್ಞಾತೋ ರಾಕ್ಷಸಾಧಿಪ ಗಮ್ಯತಾಮ್ ।**
**ಏವಮುಕ್ತಸ್ತು ಲಂಕೇಶಃ ಶಂಭುನಾ ಸ್ವಯಮಬ್ರವೀತ್ ॥ ೪೧**
**ಪ್ರೀತೋ ಯದಿ ಮಹಾದೇವ ವರಂ ಮೇ ದೇಹಿ ಯಾಚತಃ ।**
**ಅವಧ್ಯತ್ವಂ ಮಯಾ ಪ್ರಾಪ್ತಂ ದೇವಗಂಧರ್ವದಾನವೈಃ ॥ ೪೨**

---

ಕೈಲಾಸ ಶೈಲಾಗ್ರದಲ್ಲಿ ವಿರಾಜಮಾನನಾಗಿದ್ದ ಭಗವಾನ್ ಶಂಕರನು ದಶಗ್ರೀವನ ತೋಳುಗಳನ್ನು ಬಿಡಿಸಿ ಹೀಗೆಂದನು (೩೬) "ದಶಾನನ, ನಿನ್ನ ವೀರ್ಯಸಾಹಸಗಳಿಗೂ ಸ್ತುತಿಗೂ ಪ್ರಸನ್ನನಾಗಿದ್ದೇನೆ ನೀನು ಈ ಶೈಲದ ಅಡಿಯಲ್ಲಿ ಸಿಕ್ಕಿಕೊಂಡು ದಾರುಣವಾದ 'ರಾವ'ವನ್ನು ಮಾಡಿದ್ದೀಯೆ ತಲ್ಲಣಗೊಂಡ ಲೋಕತ್ರಯವು ನಿನ್ನಿಂದ 'ರಾವಿತ'ವಾಗಿದೆ* (೩೭-೩೮) ಆದ್ದರಿಂದ ದೇವಯಕ್ಷಮನುಷ್ಯಾದಿಗಳು ಲೋಕರಾವಣನಾದ ನಿನ್ನನ್ನು ಇನ್ನುಮೇಲೆ ರಾವಣನೆಂದು ಕರೆಯುವರು! ಪೌಲಸ್ತ್ಯ, ಇನ್ನು ಇಷ್ಟಬಂದೆಡೆಗೆ ನೆಮ್ಮದಿಯಿಂದ ನೀನು ಹೋಗಬಹುದು (೩೯-೪೦) ರಾಕ್ಷಸಾಧಿಪ, ಹೋಗಲು ನಿನಗೆ ಅನುಮತಿಯನ್ನು ಕೊಟ್ಟಿರುವೆನು!" ಎಂದನು ಆಗ ಲಂಕೇಶ್ವರನು ಶಂಭುವನ್ನು ಕುರಿತು "ಮಹಾದೇವ, ನೀನು ಪ್ರೀತನಾಗಿರುವುದಾದರೆ ನನಗೆ ವರವನ್ನು ಕೊಡು! ಬಲಶಾಲಿಗಳಾದ ದೇವಗಂಧರ್ವ

---

* ರಾವ–ಶಬ್ದ, ಅರಚಾಟ ರಾವಿತ–ಅರಚಾಟದಿಂದ ಪ್ರತಿಧ್ವನಿಗೊಂಡದ್ದು

ರಾಕ್ಷಸೈರ್ಗುಹ್ಯಕೈರ್ನಾಗೈರ್ಯೇ ಚಾನ್ಯೇ ಬಲವತ್ತರಾಃ ।
ಮಾನುಷಾನ್ನ ಗಣೇ ದೇವ ಸ್ವಲ್ಪಾಸ್ತೇ ಮಮ ಸಂಮತಾಃ ॥ ೪೩

ದೀರ್ಘಮಾಯುಶ್ಚ ಮೇ ಪ್ರಾಪ್ತಂ ಬ್ರಹ್ಮಣಸ್ತ್ರಿಪುರಾಂತಕ ।
ವಾಂಛಿತಂ ಚಾಯುಷಃ ಶೇಷಂ ಶಸ್ತ್ರಂ ತ್ವಂ ಚ ಪ್ರಯಚ್ಛ ಮೇ ॥

ಏವಮುಕ್ತಸ್ತತಸ್ತೇನ ರಾವಣೇನ ಸ ಶಂಕರಃ ।
ದದೌ ಖಡ್ಗಂ ಮಹಾದೀಪ್ತಂ ಚಂದ್ರಹಾಸಮಿತಿ ಶ್ರುತಮ್ ॥ ೪೫

ಆಯುಷಶ್ಚಾವಶೇಷಂ ಚ ದದೌ ಭೂತಪತಿಸ್ತದಾ ।
ದತ್ತ್ವೋವಾಚ ತತಃ ಶಂಭುರ್ನಾವಜ್ಞೇಯಮಿದಂ ತ್ವಯಾ ॥ ೪೬

ಅವಜ್ಞಾತಂ ಯದಿ ಹಿ ತೇ ಮಾಮೇವೈಷ್ಯತ್ಯಸಂಶಯಃ ।
ಏವಂ ಮಹೇಶ್ವರೇಣೈವ ಕೃತನಾಮಾ ಸ ರಾವಣಃ ॥ ೪೭

ಅಭಿವಾದ್ಯ ಮಹಾದೇವಮಾರುರೋಹಾಥ ಪುಷ್ಪಕಮ್ ।
ತತೋ ಮಹೀತಲೇ ರಾಮ ಪರಿಚಕ್ರಾಮ ರಾವಣಃ ॥ ೪೮

---

ದಾನವರಿಂದಲೂ ರಾಕ್ಷಸಗುಹ್ಯಕನಾಗರಿಂದಲೂ ನನಗೆ ಮರಣವಾಗದಂತೆ ಈಗಾಗಲೇ ವರವನ್ನು ಪಡೆದಿದ್ದೇನೆ ಪ್ರಭು, ಮಾನವರನ್ನು ನಾನು ಎಣಿಸ ತಕ್ಕವನೇ ಅಲ್ಲ. ಅವರು ಕ್ಷುದ್ರರೆಂದೇ ತಿಳಿದಿದ್ದೇನೆ (೪೧-೪೩). ಬ್ರಹ್ಮನಿಂದ ದೀರ್ಘಾಯುಸ್ಸನ್ನು ಪಡೆದಿದ್ದೇನೆ ತ್ರಿಪುರಾಂತಕ, ಆತನು ಸಂಕಲ್ಪಿಸಿರುವುದಕ್ಕಿಂತಲೂ ಅಧಿಕವಾದ ಆಯುಸ್ಸನ್ನೂ ದಿವ್ಯಾಯುಧವನ್ನೂ ಅನುಗ್ರಹಿಸು" ಎಂದು ಪ್ರಾರ್ಥಿಸಿದನು ರಾವಣನ ಪ್ರಾರ್ಥನೆಯನ್ನು ಮನ್ನಿಸಿ, ಚಂದ್ರಹಾಸವೆಂದು ವಿಖ್ಯಾತವಾದ ಅತ್ಯುಗ್ರವಾದ ಖಡ್ಗವನ್ನೂ ಅಧಿಕಾಯುಸ್ಸನ್ನೂ ಶಿವನು ರಾವಣನಿಗೆ ಅನುಗ್ರಹಿಸಿದನು (೪೪-೪೫). ಅನಂತರ ಆ ಭೂತೇಶ್ವರನು "ರಾವಣ, ಈ ಖಡ್ಗವನ್ನು ಎಂದೂ ಅವಜ್ಞೆಯಿಂದ ಕಾಣಬೇಡ ಪೂಜಾದಿಗಳನ್ನು ಮಾಡದೆ ಹಾಗೇನಾದರೂ ಉಪೇಕ್ಷಿಸಿದಲ್ಲಿ, ಇದು ಮತ್ತೆ ನನ್ನನ್ನೇ ಸೇರುವುದು" ಎಂದು ತಿಳಿಸಿದನು ಶ್ರೀರಾಮ, ಈ ರೀತಿಯಲ್ಲಿ ಮಹೇಶ್ವರನೇ ದಶಗ್ರೀವನಿಗೆ ರಾವಣನೆಂದು ನಾಮಕರಣ ಮಾಡಿದನು (೪೬-೪೭). ಅನಂತರ ರಾವಣನು ಪರಮೇಶ್ವರನಿಗೆ ಅಭಿವಂದಿಸಿ ಪುಷ್ಪಕವನ್ನೇರಿ, ಸ್ವಚ್ಛಂದವಾಗಿ ಅಲೆಯತೊಡಗಿದನು.

ಕ್ಷತ್ರಿಯಾನ್ ಸುಮಹಾವೀರ್ಯಾನ್ ಬಾಧಮಾನ ಇತಸ್ತತಃ ।
ಕೇಚಿತ್ತೇಜಸ್ವಿನಃ ಶೂರಾಃ ಕ್ಷತ್ರಿಯಾ ಯುದ್ಧದುರ್ಮದಾಃ ॥ ೪೯

ತಚ್ಛಾಸನಮಕುರ್ವಾಂತೋ ವಿನೇಶುಃ ಸಪರಿಚ್ಛದಾಃ ।
ಅಪರೇ ದುರ್ಜಯಂ ರಕ್ಷೋ ಜಾನಂತಃ ಪ್ರಾಜ್ಞಸಂಮತಾಃ ॥ ೫೦
ಜಿತಾಃ ಸ್ಮ ಇತ್ಯಭಾಷಂತ ರಾಕ್ಷಸಂ ಬಲದರ್ಪಿತಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷೋಡಶಃ ಸರ್ಗಃ



ಮಹೀತಳದಲ್ಲಿ ವೀರಾಗ್ರೇಸರರೆಂದು ವಿಖ್ಯಾತರಾದ ಕ್ಷತ್ರಿಯರನ್ನು ಬಾಧಿಸ ತೊಡಗಿದನು ತೇಜಸ್ವಿಗಳೂ ಸಮರೋತ್ಸುಕರೂ ಆದ ಕೆಲವು ನೃಪಾಲರು ಅವನ ಆಜ್ಞೆಗೆ ಒಳಗಾಗದೆ ಹೋರಾಡಿ, ಪರಿವಾರಸಮೇತರಾಗಿ ಹತರಾದರು ಇನ್ನು ಕೆಲವು ವಿಚಾರಶೀಲರು, ಈ ರಾಕ್ಷಸನು ದುರ್ಜಯನೆಂದು ಮನಗಂಡು ಬಲದರ್ಪಿತನಾದ ರಾವಣನಿಗೆ "ನಾವು ನೋತೆವು" ಎಂದು ತಿಳಿಸಿದರು (೪೯-೫೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹದಿನಾರನೆಯ ಸರ್ಗ



## ಸಪ್ತದಶಃ ಸರ್ಗಃ

### ವೇದವತೀಶಾಪಃ

ಅಥ ರಾಜನ್ ಮಹಾಬಾಹುರ್ವಿಚರನ್ ಸ ಮಹೀತಲೇ ।
ಹಿಮವತ್ವಾನಮಾಸಾದ್ಯ ಪರಿಚಕ್ರಾಮ ರಾವಣಃ ॥ ೧

ತತ್ರಾಪಶ್ಯತ್ ಸ ವೈ ಕನ್ಯಾಂ ಕೃಷ್ಣಾಜಿನಜಟಾಧರಾಮ್ ।
ಆರ್ಷೇಣ ವಿಧಿನಾ ಜೈನಾಂ ದೀಪ್ಯಂತೀಂ ದೇವತಾಮಿವ ॥ ೨

ಸ ದೃಷ್ಟ್ವಾ ರೂಪಸಂಪನ್ನಾಂ ಕನ್ಯಾಂ ತಾಂ ಸುಮಹಾವ್ರತಾಮ್ ।
ಕಾಮಮೋಹಪರೀತಾತ್ಮಾ ಪ್ರಪಚ್ಛ ಪ್ರಹಸನ್ನಿವ ॥ ೩

ಕಿಮಿದಂ ವರ್ತಸೇ ಭದ್ರೇ ವಿರುದ್ಧಂ ಯೌವನಸ್ಯ ತೇ ।
ನ ಹಿ ಯುಕ್ತಾ ತವೈತಸ್ಯ ರೂಪಸ್ಯ ತಪಸಃ ಕ್ರಿಯಾ ॥ ೪

ರೂಪಂ ತೇಽನುಪಮಂ ಭೀರು ಕಾಮೋನ್ಮಾದಕರಂ ನೃಣಾಮ್ ।
ನ ಯುಕ್ತಂ ತಪಸಿ ಸ್ಥಾತುಂ ನಿರ್ಗತೋ ಹ್ಯೇಷ ನಿರ್ಣಯಃ ॥ ೫

## ಸರ್ಗ ೧೭

### ರಾವಣನು ವೇದವತಿಯನ್ನು ಬಲಾತ್ಕರಿಸುವುದು ಅವಳು ರಾವಣನನ್ನು ಶಪಿಸಿ ಅಗ್ನಿಪ್ರವೇಶ ಮಾಡುವುದು

ಮಹಾರಾಜ-ರಾಘವ, ಪ್ರತಾಪಶಾಲಿಯಾದ ರಾವಣನು ಹಿಮಾಲಯ ಪ್ರಾಂತದಲ್ಲಿ ಸಂಚರಿಸುತ್ತಿರುವಾಗ, ಕೃಷ್ಣಾಜಿನ ಜಟಾಧಾರಿಣಿಯಾದ ಒಬ್ಬ ಕನ್ಯೆಯನ್ನು ಕಂಡನು ವೇದೋಕ್ತಮಾರ್ಗದಿಂದ ತಪಸ್ವಿನಿಯಾಗಿದ್ದ ಆ ಕನ್ಯೆಯು ದೇವತೆಯಂತೆ ತೇಜಸ್ವಿನಿಯಾಗಿದ್ದಳು (೧-೨) ರೂಪಸಂಪನ್ನೆಯಾದ ಅವಳನ್ನು ವೀಕ್ಷಿಸಿ ಕಾಮುಕನಾದ ರಾವಣನಿಗೆ ಬುದ್ಧಿಗೆಟ್ಟಿತು. ಅವನು ಮುಗುಳ್ನಗೆಯಿಂದ "ಭದ್ರೆ, ಇದೇನು? ನೀನು ಯೌವನಕ್ಕೆ ವಿರುದ್ಧವಾದ ಮಾರ್ಗದಲ್ಲಿ ನಡೆಯುವೆಯಲ್ಲ! ನಿನ್ನ ಸೌಂದರ್ಯಕ್ಕೆ ಈ ತಪಸ್ಸು ಹೇಗೆ ಯುಕ್ತವಾದೀತು? (೩-೪) ಭೀರು, ಎಣೆಯಿಲ್ಲದ ನಿನ್ನ ಚೆಲುವು ಜನರಿಗೆ ಕಾಮದ ಹುಚ್ಚನ್ನು ಕೆರಳಿಸುವುದು ಆದ್ದರಿಂದ ನೀನು

**ಕಸ್ಯಾಸಿ ಕಿಮಿದಂ ಭದ್ರೇ ಕಶ್ಚ ಭರ್ತಾ ವರಾನನೇ ।**
**ಯೇನ ಸಂಭುಜ್ಯಸೇ ಭೀರು ಸ ನರಃ ಪುಣ್ಯಭಾಗ್ಭುವಿ ॥ ೬**

**ಪೃಚ್ಛತಃ ಶಂಸ ಮೇ ಸರ್ವಂ ಕಸ್ಯ ಹೇತೋಃ ಪರಿಶ್ರಮಃ ।**
**ಏವಮುಕ್ತಾ ತು ಸಾ ಕನ್ಯಾ ರಾವಣೇನ ಯಶಸ್ವಿನೀ ॥ ೭**

**ಅಬ್ರವೀದ್ವಿಧಿವತ್ ಕೃತ್ವಾ ತಸ್ಯಾತಿಥ್ಯಂ ತಪೋಧನಾ ।**
**ಕುಶಧ್ವಜೋ ಮಮ ಪಿತಾ ಬ್ರಹ್ಮರ್ಷಿರಮಿತಪ್ರಭಃ ॥ ೮**

**ಬೃಹಸ್ಪತಿಸುತಃ ಶ್ರೀಮಾನ್ ಬುದ್ಧ್ಯಾ ತುಲ್ಯೋ ಬೃಹಸ್ಪತೇಃ ।**
**ತಸ್ಯಾಹಂ ಕುರ್ವತೋ ನಿತ್ಯಂ ವೇದಾಭ್ಯಾಸಂ ಮಹಾತ್ಮನಃ ॥ ೯**

**ಸಂಭೂತಾ ವಾಙ್ಮಯೀ ಕನ್ಯಾ ನಾಮ್ನಾ ವೇದವತೀ ಸ್ಮೃತಾ ।**
**ತತೋ ದೇವಾಃ ಸಗಂಧರ್ವಾ ಯಕ್ಷರಾಕ್ಷಸಪನ್ನಗಾಃ ॥ ೧೦**

**ತೇಽಪಿ ಗತ್ವಾ ಹಿ ಪಿತರಂ ವರಣಂ ರೋಚಯಂತಿ ಮೇ ।**
**ನ ಚ ಮಾಂ ಸ ಪಿತಾ ತೇಭ್ಯೋ ದತ್ತವಾನ್ ರಾಕ್ಷಸರ್ಷಭ ॥ ೧೧**

---

ತಪಸ್ಸನ್ನಾಚರಿಸುವುದು ಸರಿಯಲ್ಲವೆಂಬುದೇ ಸಿದ್ಧಾಂತವಾದ ಮಾತು! ಭದ್ರೆ, ಯಾರ ಮಗಳು ನೀನು? ಯಾವ ವ್ರತವಿದು? ಶುಭಾನನೆ, ನಿನ್ನ ಪತಿ ಯಾರು? ನಿನ್ನನ್ನು ಭೋಗಿಸುವ ಪುರುಷನೇ ಈ ಜಗತ್ತಿನಲ್ಲಿ ಪುಣ್ಯಾತ್ಮನೆನ್ನಬೇಕು (೫-೬) ನನಗೆ ಎಲ್ಲವನ್ನೂ ಹೇಳಬಾರದೆ? ಏತಕ್ಕೆ ಈ ಪರಿಶ್ರಮ?" ಎಂದು ಕೇಳಿದನು ರಾವಣನು ಹೀಗೆ ಕೇಳಲಾಗಿ ತಪೋನಿರತಳಾಗಿದ್ದ ಆ ಕನ್ಯೆಯು ಆತನಿಗೆ ವಿಧಿವತ್ತಾಗಿ ಅತಿಥಿಸತ್ಕಾರವನ್ನಿತ್ತು, ಈ ಪ್ರಕಾರವಾಗಿ ಹೇಳಿದಳು. "ಎಲೈ ರಾಕ್ಷಸೇಂದ್ರ, ಮಹಾಮಹಿಮನಾದ ಕುಶಧ್ವಜನೆಂಬ ಬ್ರಹ್ಮರ್ಷಿಯು ನನ್ನ ತಂದೆ (೭-೮). ಆತನು ಬೃಹಸ್ಪತಿಯ ಪುತ್ರ ಬುದ್ಧಿಶಕ್ತಿಯಲ್ಲಿ ಬೃಹಸ್ಪತಿಗೆ ಸಮಾನ. ಕುಶಧ್ವಜನು ವೇದವನ್ನು ಪಠಿಸುತ್ತಿರುವಾಗ, ವೇದವಾಙ್ಮಯದ ಮೂರ್ತಿಸ್ವರೂಪಳಾಗಿ ನಾನು ಜನಿಸಿದೆನು ಆದ್ದರಿಂದ ನನಗೆ ವೇದವತಿಯೆಂದು ಹೆಸರಾಯಿತು ದೇವಗಂಧರ್ವಾದಿಗಳು ನನ್ನ ತಂದೆಯ ಬಳಿಗೆ ಬಂದು, ನನ್ನನ್ನು ವಿವಾಹ ಮಾಡಿಕೊಡುವಂತೆ ಕೇಳತೊಡಗಿದರು (೯-೧೦). ರಾಕ್ಷಸೇಂದ್ರ, ನನ್ನ ತಂದೆಯು ಅದಕ್ಕೆ ಒಪ್ಪಲಿಲ್ಲ. ಅದರ ಕಾರಣವನ್ನು

ಕಾರಣಂ ತದ್ವದಿಷ್ಯಾಮಿ ನಿಶಾಚರ ನಿಶಾಮಯ ।
ಪಿತುಸ್ತು ಮಮ ಜಾಮಾತಾ ವಿಷ್ಣುಃ ಕಿಲ ಸುರೇಶ್ವರಃ ॥ ೧೨

ಅಭಿಪ್ರೇತಸ್ತ್ರಿಲೋಕೇಶಸ್ತಸ್ಮಾನ್ನಾನ್ಯಸ್ಯ ಮೇ ಪಿತಾ ।
ದಾತುಮಿಚ್ಛತಿ ತಸ್ಮೈ ತು ತಚ್ಛ್ರುತ್ವಾ ಬಲದರ್ಪಿತಃ ॥ ೧೩

ದಂಭುರ್ನಾಮ ತತೋ ರಾಜಾ ದೈತ್ಯಾನಾಂ ಕುಪಿತೋಽಭವತ್ ।
ತೇನ ರಾತ್ರೌ ಶಯಾನೋ ಮೇ ಪಿತಾ ಪಾಪೇನ ಹಿಂಸಿತಃ ॥ ೧೪

ತತೋ ಮೇ ಜನನೀ ದೀನಾ ತಚ್ಛರೀರಂ ಪಿತುರ್ಮಮ ।
ಪರಿಷ್ವಜ್ಯ ಮಹಾಭಾಗಾ ಪ್ರವಿಷ್ಟಾ ಹವ್ಯವಾಹನಮ್ ॥ ೧೫

ತತೋ ಮನೋರಥಂ ಸತ್ಯಂ ಪಿತುರ್ನಾರಾಯಣಂ ಪ್ರತಿ ।
ಕರೋಮೀತಿ ತಮೇವಾಹಂ ಹೃದಯೇನ ಸಮುದ್ವಹೇ ॥ ೧೬

ಇತಿ ಪ್ರತಿಜ್ಞಾಮಾರುಹ್ಯ ಚರಾಮಿ ವಿಪುಲಂ ತಪಃ ।
ಏತತ್ತೇ ಸರ್ವಮಾಖ್ಯಾತಂ ಮಯಾ ರಾಕ್ಷಸಪುಂಗವ ॥ ೧೭

---

ಹೇಳುತ್ತೇನೆ, ಕೇಳು ದೇವದೇವನಾದ ಮಹಾವಿಷ್ಣುವೇ ಅಳಿಯನಾಗ ಬೇಕೆಂಬುದು ನನ್ನ ತಂದೆಯ ಇಚ್ಛೆಯಾಗಿದೆ. ಇನ್ನೊಬ್ಬನನ್ನು ನನ್ನ ತಂದೆಯು ಒಪ್ಪುವುದಿಲ್ಲ. ವಿಷ್ಣುವಿಗೇ ನನ್ನನ್ನು ಕೊಡಬೇಕೆಂದು ಆತನು ಸಂಕಲ್ಪಿಸಿದ್ದಾನೆ (೧೧-೧೨). ಈ ವಿಷಯವನ್ನು ದಂಭುವೆಂಬ ದೈತ್ಯನು ಕೇಳಿ ಕುಪಿತನಾದನು ರಾತ್ರಿಯಲ್ಲಿ ನನ್ನ ತಂದೆಯು ನಿದ್ರಿಸುತ್ತಿದ್ದಾಗ ಆ ಪಾಪಿ ದೈತ್ಯನು ಬಂದು ಅವನನ್ನು ಕೊಂದನು ಆಗ ಮಹಾಸತಿಯಾದ ನನ್ನ ತಾಯಿಯು ಶೋಕಾರ್ತಳಾಗಿ, ನನ್ನ ತಂದೆಯ ದೇಹವನ್ನಪ್ಪಿಕೊಂಡು ಅಗ್ನಿಪ್ರವೇಶ ಮಾಡಿದಳು (೧೩-೧೫) 'ಶ್ರೀಮನ್ನಾರಾಯಣನ ವಿಷಯ ವಾಗಿ ನನ್ನ ತಂದೆಯು ಇಟ್ಟುಕೊಂಡಿದ್ದ ಮನೋರಥವು ಈಡೇರಲಿ' ಎಂಬ ಉದ್ದೇಶದಿಂದ, ನಾನು ನಾರಾಯಣನನ್ನೇ ಮದುವೆಯಾಗಬೇಕೆಂದು ನಿಶ್ಚಯಿಸಿಕೊಂಡಿದ್ದೇನೆ ಆ ಪ್ರತಿಜ್ಞೆಯನ್ನು ಸಾಧಿಸುವುದಕ್ಕಾಗಿ ಕಠೋರ ತಪಸ್ಸಿನಲ್ಲಿ ನಿರತಳಾಗಿದ್ದೇನೆ ರಾಕ್ಷಸರಾಜ, ನನ್ನ ವೃತ್ತಾಂತವೆಲ್ಲವನ್ನೂ

**ನಾರಾಯಣೋ ಮಮ ಪತಿರ್ನ ತ್ವನ್ಯಃ ಪುರುಷೋತ್ತಮಾತ್ ।**
**ಆಶ್ರಯೇ ನಿಯಮಂ ಘೋರಂ ನಾರಾಯಣಪರೀಪ್ಸಯಾ ॥ ೧೮**

**ವಿಜ್ಞಾತಸ್ತ್ವಂ ಹಿ ಮೇ ರಾಜನ್ ಗಚ್ಛ ಪೌಲಸ್ತ್ಯನಂದನ ।**
**ಜಾನಾಮಿ ತಪಸಾ ಸರ್ವಂ ತ್ರೈಲೋಕ್ಯೇ ಯದ್ಧಿ ವರ್ತತೇ ॥ ೧೯**

**ಸೋಽಬ್ರವೀದ್ರಾವಣೋ ಭೂಯಸ್ತಾಂ ಕನ್ಯಾಂ ಸುಮಹಾವ್ರತಾಂ**
**ಅವರುಹ್ಯ ವಿಮಾನಾಗ್ರಾತ್ ಕಂದರ್ಪಶರಪೀಡಿತಃ ॥ ೨೦**

**ಅವಲಿಪ್ತಾಸಿ ಸುಶ್ರೋಣಿ ಯಸ್ಯಾಸ್ತೇ ಮತಿರೀದೃಶೀ ।**
**ವೃದ್ಧಾನಾಂ ಮೃಗಶಾವಾಕ್ಷಿ ಭ್ರಾಜತೇ ಪುಣ್ಯಸಂಚಯಃ ॥ ೨೧**

**ತ್ವಂ ಸರ್ವಗುಣಸಂಪನ್ನಾ ನಾರ್ಹಸೇ ವಕ್ತುಮೀದೃಶಮ್ ।**
**ತ್ರೈಲೋಕ್ಯಸುಂದರೀ ಭೀರು ಯೌವನಂ ತೇಽತಿವರ್ತತೇ ॥ ೨೨**

**ಅಹಂ ಲಂಕಾಪತಿರ್ಭದ್ರೇ ದಶಗ್ರೀವ ಇತಿ ಶ್ರುತಃ ।**
**ತಸ್ಯ ಮೇ ಭವ ಭಾರ್ಯಾ ತ್ವಂ ಭುಂಕ್ಷ್ವ ಭೋಗಾನ್ಯಥಾಸುಖಮ್**

---

ತಿಳಿಸಿದ್ದೇನೆ (೧೬-೧೭) ಶ್ರೀಮನ್ನಾರಾಯಣನೇ ನನ್ನ ಪತಿಯಾಗಬೇಕು ಆ ಪುರುಷೋತ್ತಮನನ್ನು ಬಿಟ್ಟು ಇನ್ನೊಬ್ಬನನ್ನು ನಾನು ವರಿಸುವುದಿಲ್ಲ ಆದ್ದರಿಂದ ಘೋರವಾದ ನಿಯಮವನ್ನು ಪಾಲಿಸುತ್ತಿದ್ದೇನೆ ರಾಕ್ಷಸಾಧಿಪ, ನೀನು ಯಾರು ಏನೆಂಬುದೆಲ್ಲವೂ ನನಗೆ ಗೊತ್ತಾಗಿದೆ! ಎಲೈ ಪೌಲಸ್ತ್ಯ ನಂದನ! ಇನ್ನು ನೀನು ಹೊರಡು! ಈ ತ್ರೈಲೋಕ್ಯದಲ್ಲಿ ನಡೆಯುವುದೆಲ್ಲವೂ ತಪೋಬಲದಿಂದ ನನಗೆ ವಿದಿತವಾಗಿದೆ" ಎಂದು ನುಡಿದಳು (೧೮-೧೯) ಆದರೆ ರಾವಣನು ಮನ್ಮಥಶರಪೀಡಿತನಾಗಿದ್ದನು ಅವನು ಪುಷ್ಪಕದಿಂದ ಕೆಳಗಿಳಿದು ಬಂದು ವ್ರತನಿಷ್ಠಳಾದ ಆ ಕನ್ಯೆಯನ್ನು ಕುರಿತು "ಸುಂದರಿ, ಬಹಳ ಗರ್ವಿಷ್ಠಳು ನೀನು! ನಿನಗೆ ಇಂತಹ ಬುದ್ಧಿ ಬರಬಹುದೆ? ಎಲೌ ಹರಿಣಲೋಚನೆ, ತಪಸ್ಸು-ಪುಣ್ಯ ಇವೆಲ್ಲವೂ ಮುದುಕರಿಗೆ ಒಪ್ಪುತ್ತದೆ! (೨೦-೨೧) ಸರ್ವಗುಣಸಂಪನ್ನೆಯಾದ ನೀನು ಹೀಗೆಲ್ಲ ಮಾತಾಡಬಾರದು ಭೀರು, ತ್ರೈಲೋಕ್ಯಸುಂದರಿ ನೀನು. ನಿನ್ನ ತಾರುಣ್ಯವು ಕಳೆದು ಹೋಗುತ್ತಿದೆಯಲ್ಲವೆ? ಭದ್ರೆ, ನಾನು ಯಾರೆಂದು ತಿಳಿದೆ? ಲಂಕೇಶ್ವರನೆಂದು ವಿಖ್ಯಾತನಾದ ದಶಗ್ರೀವನೇ ನಾನು ನೀನು ನನ್ನ ಭಾರ್ಯೆಯಾಗಿ

*

ಕಶ್ಚ ತಾವದಸೌ ಯಂ ತ್ವಂ ವಿಷ್ಣುರಿತ್ಯಭಿಭಾಷಸೇ ।
ವೀರ್ಯೇಣ ತಪಸಾ ಚೈವ ಭೋಗೇನ ಚ ಬಲೇನ ಚ ॥ ೨೪

ನ ಮಯಾ ಸ ಸಮೋ ಭದ್ರೇ ಯಂ ತ್ವಂ ಕಾಮಯಸೇಽಂಗನೇ ।
ಇತ್ಯುಕ್ತವತಿ ತಸ್ಮಿಂಸ್ತು ವೇದವತ್ಯಥ ಸಾಬ್ರವೀತ್ ॥ ೨೫

ಮಾ ಮೈವಮಿತಿ ಸಾ ಕನ್ಯಾ ತಮುವಾಚ ನಿಶಾಚರಮ್ ।
ತ್ರೈಲೋಕ್ಯಾಧಿಪತಿಂ ವಿಷ್ಣುಂ ಸರ್ವಲೋಕನಮಸ್ಕೃತಮ್ ॥ ೨೬

ತ್ವದೃತೇ ರಾಕ್ಷಸೇಂದ್ರಾನ್ಯಃ ಕೋಽವಮನ್ಯೇತ ಬುದ್ಧಿಮಾನ್ ।
ಏವಮುಕ್ತಸ್ತಯಾ ತತ್ರ ವೇದವತ್ಯಾ ನಿಶಾಚರಃ ॥ ೨೭

ಮೂರ್ಧಜೇಷು ತದಾ ಕನ್ಯಾಂ ಕರಾಗ್ರೇಣ ಪರಾಮೃಶತ್ ।
ತತೋ ವೇದವತೀ ಕ್ರುದ್ಧಾ ಕೇಶಾನ್ ಹಸ್ತೇನ ಸಾಚ್ಛಿನತ್ ॥ ೨೮

ಅಸಿರ್ಭೂತ್ವಾ ಕರಸ್ತಸ್ಯಾಃ ಕೇಶಾಂಶ್ಛಿನ್ನಾಂಸ್ತದಾಕರೋತ್ ।
ಸಾ ಜ್ವಲಂತೀವ ರೋಷೇಣ ದಹಂತೀವ ನಿಶಾಚರಮ್ ॥ ೨೯

---

ಸಕಲ ಭೋಗಗಳನ್ನು ಯಥೇಷ್ಟವಾಗಿ ಅನುಭವಿಸು (೨೨-೨೩). ವಿಷ್ಣು-ವಿಷ್ಣು ಎಂದು ಹೇಳುತ್ತೀಯಲ್ಲ, ಯಾರವನು? ವೀರ್ಯ ತಪಸ್ಸುಗಳಲ್ಲಾಗಲಿ ಭೋಗಭಾಗ್ಯದಲ್ಲಾಗಲಿ ಬಲದಲ್ಲಾಗಲಿ, ಅವನು ನನಗೆ ಸಮನಲ್ಲ ಎಲೌ ಅಂಗನೆ, ಅವನನ್ನು ಕಾಮಿಸುವೆಯಾ?" ಎಂದು ಹೇಳಿದನು (೨೪-೨೫) ಆಗ ವೇದವತಿಯು "ಹಾಗೆನ್ನಬೇಡ, ಹಾಗೆನ್ನಬೇಡ ತ್ರಿಲೋಕೇಶ್ವರನೂ ಸರ್ವಲೋಕನಮಸ್ಕೃತನೂ ಆದ ವಿಷ್ಣುವನ್ನು, ರಾಕ್ಷಸೇಂದ್ರ, ನಿನ್ನೊಬ್ಬನನ್ನು ಬಿಟ್ಟರೆ ಯಾವ ವಿವೇಕಿಯೂ ದೂಷಿಸಲಾರ" ಎಂದು ಪ್ರತ್ಯುತ್ತರವನ್ನಿತ್ತಳು (೨೬) ಒಡನೆಯೇ ಆ ರಾಕ್ಷಸನು ವೇದವತಿಯ ಕೇಶಪಾಶವನ್ನು ಕೈಯಿಂದ ತುಡುಕಿದನು ಕ್ರುದ್ಧಳಾದ ವೇದವತಿಯು ಆ ಕೇಶರಾಶಿಯನ್ನು ಕೈಯಿಂದ ಕತ್ತರಿಸಿಕೊಂಡಳು ಅವಳ ತಪೋಮಹಿಮೆಯಿಂದ ಕರವೇ ಕತ್ತಿಯಾಗಿ ತಲೆಗೂದಲನ್ನು ಕತ್ತರಿಸಿತು (೨೭-೨೮) ಆ ಕನ್ಯೆಯು ಸಿಟ್ಟಿನಿಂದ ಉರಿದೆದ್ದು ರಾವಣನನ್ನು ಸುಡುವಂತೆ

ಉವಾಚಾಗ್ನಿಂ ಸಮಾಧಾಯ ಮರಣಾಯ ಕೃತತ್ವರಾ ।
ಧರ್ಷಿತಾಯಾಸ್ತ್ವಯಾನಾರ್ಯ ನ ಮೇ ಜೀವಿತಮಿಷ್ಯತೇ ॥ ೩೦

ರಕ್ಷಸ್ತಸ್ಮಾತ್ ಪ್ರವೇಕ್ಷ್ಯಾಮಿ ಪಶ್ಯತಸ್ತೇ ಹುತಾಶನಮ್ ।
ಯಸ್ಮಾತ್ತು ಧರ್ಷಿತಾ ಚಾಹಂ ತ್ವಯಾ ಪಾಪಾತ್ಮನಾ ವನೇ ॥ ೩೧

ತಸ್ಮಾತ್ತವ ವಧಾರ್ಥಂ ಹಿ ಸಮುತ್ಪತ್ಸ್ಯೇ ಹ್ಯಹಂ ಪುನಃ ।
ನ ಹಿ ಶಕ್ಯಂ ಸ್ತ್ರಿಯಾ ಹಂತುಂ ಪುರುಷಃ ಪಾಪನಿಶ್ಚಯಃ ॥ ೩೨

ಶಾಪೇ ತ್ವಯಿ ಮಯೋತ್ಸೃಷ್ಟೇ ತಪಸಶ್ಚ ವ್ಯಯೋ ಭವೇತ್ ।
ಯದಿ ತ್ವಸ್ತಿ ಮಯಾ ಕಿಂಚಿತ್ ಕೃತಂ ದತ್ತಂ ಹುತಂ ತಥಾ ॥ ೩೩

ತಸ್ಮಾತ್ತ್ವಯೋನಿಜಾ ಸಾಧ್ವೀ ಭವೇಯಂ ಧರ್ಮಿಣಃ ಸುತಾ ।
ಏವಮುಕ್ತ್ವಾ ಪ್ರವಿಷ್ಟಾ ಸಾ ಜ್ವಲಿತಂ ಜಾತವೇದಸಮ್ ॥ ೩೪

ಪಪಾತ ಚ ದಿವೋ ದಿವ್ಯಾ ಪುಷ್ಪವೃಷ್ಟಿಃ ಸಮಂತತಃ ।
ಸೈಷಾ ಜನಕರಾಜಸ್ಯ ಪ್ರಸೂತಾ ತನಯಾ ಪ್ರಭೋ ॥ ೩೫

---

ನೋಡುತ್ತ, ದೇಹತ್ಯಾಗಮಾಡಲು ತ್ವರೆಯಿಂದ ಅಗ್ನಿಯನ್ನು ಪ್ರಜ್ವಲಿಸಿ "ಎಲಾ ಅನಾರ್ಯ, ನೀನು ಬಲಾತ್ಕಾರದಿಂದ ನನ್ನನ್ನು ಸ್ಪರ್ಶಿಸಿದ್ದೀಯೆ ಇನ್ನು ನಾನು ಬದುಕಲಿಚ್ಛಿಸುವುದಿಲ್ಲ (೨೯-೩೦). ನಿಶಾಚರ, ನೋಡುತ್ತಿರು, ನಿನ್ನೆದುರಿಗೇ ಅಗ್ನಿಯಲ್ಲಿ ಬೀಳುವೆನು ಪಾಪಿಯಾದ ನೀನು ನನ್ನನ್ನು ತುಡುಕಿದ್ದರಿಂದ, ನಿನ್ನನ್ನು ವಧಿಸುವುದಕ್ಕಾಗಿ ಮತ್ತೆ ಹುಟ್ಟಿಬರುವೆನು! ಪಾಪಾತ್ಮನಾದ ಪುರುಷನನ್ನು ಕೊಲ್ಲಲು ಹೆಂಗಸಿಗೆ ಶಕ್ಯವಲ್ಲ (೩೧-೩೨) ಶಾಪವನ್ನು ಕೊಟ್ಟೆನೆಂದರೆ, ನನ್ನ ತಪಸ್ಸು ಕ್ಷೀಣವಾಗುವುದು ದಾನ ಹೋಮಾದಿ ಪುಣ್ಯಫಲವೇನಾದರೂ ನನ್ನಲ್ಲಿರುವುದಾದರೆ, ಅದರ ಬಲದಿಂದ ಅಯೋನಿಜೆಯಾದ ಒಬ್ಬ ಸಾಧ್ವಿಯಾಗಿ ಜನಿಸಿ, ಧರ್ಮಾತ್ಮನೊಬ್ಬನಿಗೆ ಸುತೆಯಾಗಿ ಬೆಳೆಯುವೆನು" ಎಂದು ಹೇಳಿ, ಉರಿಯುವ ಅಗ್ನಿಯಲ್ಲಿ ಧುಮುಕಿದಳು (೩೩-೩೪) ಆಕಾಶದಿಂದ ದಿವ್ಯಕುಸುಮಗಳ ಮಳೆ ಸುರಿಯಿತು ಶ್ರೀರಾಮ, ಅವಳೇ ಜನಕರಾಜನ ಸುತೆಯಾಗಿ ಜನಿಸಿದ್ದಾಳೆ.

ತವ ಭಾರ್ಯಾ ಮಹಾಬಾಹೋ ವಿಷ್ಣುಸ್ತ್ವಂ ಹಿ ಸನಾತನಃ ।
ಪೂರ್ವಂ ಕ್ರೋಧಹತಃ ಶತ್ರುರ್ಯಯಾಸೌ ನಿಹತಸ್ತ್ವಯಾ ॥ ೩೬
ಉಪಾಶ್ರಯಿತ್ವಾ ಶೈಲಾಭಸ್ತವ ವೀರ್ಯಮಮಾನುಷಮ್ ।
ಏವಮೇಷಾ ಮಹಾಭಾಗಾ ಮರ್ತ್ಯೇಷೂತ್ಪತ್ಸ್ಯತೇ ಪುನಃ ॥ ೩೭
ಕ್ಷೇತ್ರೇ ಹಲಮುಖೋತ್ಕೃಷ್ಟೇ ವೇದ್ಯಾಮಗ್ನಿಶಿಖೋಪಮಾ ।
ಏಷಾ ವೇದವತೀ ನಾಮ ಪೂರ್ವಮಾಸೀತ್ ಕೃತೇ ಯುಗೇ ॥ ೩೮
ತ್ರೇತಾಯುಗಮನುಪ್ರಾಪ್ಯ ವಧಾರ್ಥಂ ತಸ್ಯ ರಕ್ಷಸಃ ।
ಉತ್ಪನ್ನಾ ಮೈಥಿಲಕುಲೇ ಜನಕಸ್ಯ ಮಹಾತ್ಮನಃ ॥ ೩೯
ಸೀತೋತ್ಪನ್ನಾ ತು ಸೀತೇತಿ ಮಾನುಷೈಃ ಪುನರುಚ್ಯತೇ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತದಶಃ ಸರ್ಗಃ

---

ನಿನಗೆ ಪತ್ನಿಯಾಗಿದ್ದಾಳೆ ನೀನು ಸನಾತನನಾದ ಶ್ರೀಮನ್ನಾರಾಯಣ ನಾಗಿದ್ದೀಯೆ ಈ ರೀತಿಯಲ್ಲಿ ರಾವಣನು ವೇದವತಿಯ ಕ್ರೋಧದಿಂದಲೇ ಹತಪ್ರಾಯನಾಗಿದ್ದನು (೩೫-೩೬) ಪರ್ವತದಂತೆ ದುರ್ಧರ್ಷನಾದ ಆ ಶತ್ರುವನ್ನು, ಜನಕಸುತೆಯು ಅಮಾನುಷವಾದ ನಿನ್ನ ಪರಾಕ್ರಮವನ್ನು ಆಶ್ರಯಿಸಿ, ಈಗ ಪೂರ್ತಿಯಾಗಿ ಸಂಹರಿಸಿದ್ದಾಳೆ! ಈ ಮಹಾತ್ಮಳು ಹೀಗೆಯೇ (ಮುಂದಿನ ಕಲ್ಪಗಳಲ್ಲಿಯೂ) ನೇಗಿಲಿನಿಂದ ಉಳಲ್ಪಟ್ಟ ಕ್ಷೇತ್ರ ದಲ್ಲಿ ಮತ್ತೆ ಭೂಲೋಕದಲ್ಲಿ ಜನಿಸುವಳು ವೇದಿಯಲ್ಲಿ ಅಗ್ನಿಜ್ವಾಲೆಯಂತೆ ಅವತರಿಸುವಳು ಈ ಸೀತೆಯು ಕೃತಯುಗದಲ್ಲಿ ವೇದವತಿಯಾಗಿದ್ದಳು (೩೭-೩೮) ಈ ತ್ರೇತಾಯುಗದಲ್ಲಿ ರಾವಣನ ವಧೆಗೋಸ್ಕರ ಮೈಥಿಲ ರಾಜರ ವಂಶದಲ್ಲಿ ಮಹಾತ್ಮನಾದ ಜನಕರಾಜನಿಗೆ ಪುತ್ರಿಯಾಗಿ ಅವತರಿಸಿದ್ದಾಳೆ ಸೀತೆಯಲ್ಲಿ* ಜನಿಸಿದ್ದರಿಂದ ಸೀತೆಯೆಂದು ಜನರು ಕರೆಯುತ್ತಿದ್ದಾರೆ (೩೯).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹದಿನೇಳನೆಯ ಸರ್ಗ

---

* ಸೀತಾ = ನೇಗಿಲಿನಿಂದ ಉತ್ತಾಗ ನೆಲದಲ್ಲಾಗುವ ರೇಖೆ ಸೀತಾ ಲಾಂಗಲ-ಪದ್ಧತಿಃ—ಅಮರ ವೈಶಾಖ ಶುದ್ಧನವಮಿಯಂದು ಸೀತೆಯ ಜನ್ಮದಿನ

ವೈಶಾಖೇ ಶುದ್ಧನವಮ್ಯಾಮುತ್ಪನ್ನಾ ಸಾವನೀಸುತಾ ।
ಸೀತಾಮುಖಾತ್ ಸಾ ಸಂಜಾತಾ ಪಾಲಿತಾ ಜನಕೇನ ಚ ॥

—ಮಹಾಸುಂದರೀ ತಂತ್ರ

## ಅಷ್ಟಾದಶಃ ಸರ್ಗಃ

### ಮರುತ್ತವಿಜಯಃ

ಪ್ರವಿಷ್ಟಾಯಾಂ ಹುತಾಶಂ ತು ವೇದವತ್ಯಾಂ ಸ ರಾವಣಃ ।
ಪುಷ್ಪಕಂ ತು ಸಮಾರುಹ್ಯ ಪರಿಚಕ್ರಾಮ ಮೇದಿನೀಮ್ ॥ ೧

ತತೋ ಮರುತ್ತಂ ನೃಪತಿಂ ಯಜಂತಂ ಸಹ ದೈವತೈಃ ।
ಉಶೀರಬೀಜಮಾಸಾದ್ಯ ದದರ್ಶ ಸ ತು ರಾವಣಃ ॥ ೨

ಸಂವರ್ತೋ ನಾಮ ಬ್ರಹ್ಮರ್ಷಿಃ ಸಾಕ್ಷಾದ್ಭ್ರಾತಾ ಬೃಹಸ್ಪತೇಃ ।
ಯಾಜಯಾಮಾಸ ಧರ್ಮಜ್ಞಃ ಸರ್ವೈರ್ದೇವಗಣೈರ್ವೃತಃ ॥ ೩

ದೃಷ್ಟ್ವಾ ದೇವಾಸ್ತು ತದ್ರಕ್ಷೋ ವರದಾನೇನ ದುರ್ಜಯಮ್ ।
ತಿರ್ಯಗ್ಯೋನಿಂ ಸಮಾವಿಷ್ಟಾಸ್ತಸ್ಯ ದರ್ಶನಭೀರವಃ ॥ ೪

## ಸರ್ಗ ೧೮

ರಾವಣನು ಯಜ್ಞದೀಕ್ಷಿತನಾದ ಮರುತ್ತನನ್ನು ಯುದ್ಧಕ್ಕೆ ಆಹ್ವಾನಿಸುವುದು
ದೀಕ್ಷಿತನು ಯುದ್ಧಮಾಡಕೂಡದೆಂದು ಋತ್ವಿಜರ ನಿಷೇಧ
ರಾವಣನ ಜಯಘೋಷ

ರಾಘವ, ಈ ಪ್ರಕಾರವಾಗಿ ವೇದವತಿಯು ಅಗ್ನಿಪ್ರವೇಶಮಾಡಿದ ಮೇಲೆ ರಾವಣನು ಪುಷ್ಪಕವನ್ನೇರಿ ತನ್ನ ಸಂಚಾರವನ್ನು ಮುಂದುವರಿಸಿದನು ಆ ಸಮಯದಲ್ಲಿ ಮರುತ್ತನೆಂಬ ಭೂಪಾಲನು ಉಶೀರಬೀಜವೆಂಬ ಸ್ಥಳದಲ್ಲಿ ಯಜ್ಞಮಾಡುತ್ತಿದ್ದನು ಯಜ್ಞಶಾಲೆಯಲ್ಲಿ ದೇವತೆಗಳು ಪ್ರತ್ಯಕ್ಷವಾಗಿ ಉಪಸ್ಥಿತರಾಗಿದ್ದರು ರಾವಣನು ಅಲ್ಲಿಗೆ ಬಂದನು (೧-೨) ಬೃಹಸ್ಪತಿಯ ಸಾಕ್ಷಾತ್ ಸೋದರನೂ ಧರ್ಮಜ್ಞನೂ ಆದ ಸಂವರ್ತನೆಂಬ ಬ್ರಹ್ಮರ್ಷಿಯು ಮರುತ್ತನಿಂದ ಯಾಗಮಾಡಿಸುತ್ತಿದ್ದನು ವರಬಲದಿಂದ ದುರ್ಜಯನಾದ ಆ ರಾಕ್ಷಸನು ಬಂದುದನ್ನು ಕಂಡು, ಅವನು ತಮ್ಮನ್ನು ನೋಡಿಬಿಟ್ಟಾನೆಂಬ ಭಯದಿಂದ ಅಲ್ಲಿದ್ದ ದೇವತೆಗಳು ಒಡನೆಯೇ ನವಿಲೇ ಮೊದಲಾದ

ಇಂದ್ರೋ ಮಯೂರಃ ಸಂವೃತ್ತೋ ಧರ್ಮರಾಜಸ್ತು ವಾಯಸಃ ।
ಕೃಕಲಾಸೋ ಧನಾಧ್ಯಕ್ಷೋ ಹಂಸಶ್ಚ ವರುಣೋಽಭವತ್ ॥ ೫
ಅನ್ಯೇಷ್ವಪಿ ಗತೇಷ್ವೇವಂ ದೇವೇಷ್ವರಿನಿಷೂದನ ।
ರಾವಣಃ ಪ್ರಾವಿಶದ್ಯಜ್ಞಂ ಸಾರಮೇಯ ಇವಾಶುಚಿಃ ॥ ೬
ಸ ಚ ರಾಜಾನಮಾಸಾದ್ಯ ರಾವಣೋ ರಾಕ್ಷಸಾಧಿಪಃ ।
ಪ್ರಾಹ ಯುದ್ಧಂ ಪ್ರಯಚ್ಛೇತಿ ನಿರ್ಜಿತೋಽಸ್ಮೀತಿ ವಾ ವದ ॥ ೭
ತತೋ ಮರುತ್ತೋ ನೃಪತಿಃ ಕೋ ಭವಾನಿತ್ಯುವಾಚ ತಮ್ ।
ಅಪಹಾಸಂ ತತೋ ಮುಕ್ತ್ವಾ ರಾವಣೋ ವಾಕ್ಯಮಬ್ರವೀತ್ ॥ ೮
ಅಕುತೂಹಲಭಾವೇನ ಪ್ರೀತೋಽಸ್ಮಿ ತವ ಪಾರ್ಥಿವ ।
ಧನದಸ್ಯಾನುಜೋ ಯೋ ಮಾಂ ನಾವಗಚ್ಛಸಿ ರಾವಣಮ್ ॥ ೯
ತ್ರಿಷು ಲೋಕೇಷು ಕೋಽನ್ಯೋಽಸ್ತಿ ಯೋ ನ ಜಾನಾತಿ ಮೇ ಬಲಂ
ಭ್ರಾತರಂ ಯೇನ ನಿರ್ಜಿತ್ಯ ವಿಮಾನಮಿದಮಾಹೃತಮ್ ॥ ೧೦

---

ತಿರ್ಯಗ್ಜಂತುಗಳ ರೂಪವನ್ನು ಧರಿಸಿದರು (೩-೪) ಇಂದ್ರನು ನವಿಲಾದನು ಯಮನು ಕಾಗೆಯಾದನು ಕುಬೇರನು ಓತೀಕೇತದ ರೂಪವನ್ನೂ ವರುಣನು ಹಂಸದ ವೇಷವನ್ನೂ ಧರಿಸಿದರು ಹೀಗೆಯೇ ಇತರ ದೇವತೆಗಳೂ ಬೇರೆಬೇರೆ ಪ್ರಾಣಿಗಳ ಆಕೃತಿಯನ್ನು ಹೊಂದಿದರು ಶ್ರೀರಾಮ, ರಾವಣನು ಪವಿತ್ರವಾದ ಯಜ್ಞಶಾಲೆಯನ್ನು ಅಶುಚಿಯಾದ ನಾಯಿಯಂತೆ ಪ್ರವೇಶಿಸಿದನು ! (೫-೬) ರಾಕ್ಷಸಾಧಿಪನು ನೇರವಾಗಿ ಮರುತ್ತನ ಬಳಿಗೆ ಹೋಗಿ "ಏ ಮರುತ್ತ, ಯುದ್ಧಕ್ಕೆ ಎದುರಾಗು, ಇಲ್ಲವೆ, ಜಿತೋಽಸ್ಮಿ ಎಂದು ಹೇಳು !" ಎಂದನು ಮರುತ್ತನು "ಯಾರು ನೀನು ?" ಎಂದು ಕೇಳಿದನು ರಾವಣನು ಕೇಕೆಹಾಕಿ ನಗುತ್ತ "ಶಹಭಾಸ್ ! ನನ್ನನ್ನು ನೋಡಿಯೂ ಅಚ್ಚರಿಯಿಲ್ಲದೆ, ಕಳವಳವಿಲ್ಲದೆ, ಅಸಡ್ಡೆಯಿಂದ ಮಾತನಾಡುವೆಯಲ್ಲ ! ರಾಜ, ನಿನ್ನ ಧೀರತನಕ್ಕೆ ಮೆಚ್ಚಿದೆನು ! ನಾನು ಧನಾಧ್ಯಕ್ಷನ ತಮ್ಮನಾದ ರಾವಣನೆಂಬುದು ನಿನಗೆ ತಿಳಿಯದೆ ? (೭-೯) ನನ್ನ ಬಲಪರಾಕ್ರಮಗಳನ್ನರಿಯದವನು ಮೂರು ಲೋಕಗಳಲ್ಲಿ ಯಾವನಿದ್ದಾನೆ ? ಇತ್ತ ನೋಡು, ನನ್ನ ಅಣ್ಣನನ್ನೇ ಗೆದ್ದು ಈ ವಿಮಾನವನ್ನು ಕಿತ್ತುಕೊಂಡು ಬಂದಿದ್ದೇನೆ !" ಎಂದು ಹೇಳಿದನು

ತತೋ ಮರುತ್ತಃ ಸ ನೃಪಸ್ತಂ ರಾವಣಮಥಾಬ್ರವೀತ್ ।
ಧನ್ಯಃ ಖಲು ಭವಾನ್ ಯೇನ ಜ್ಯೇಷ್ಠೋ ಭ್ರಾತಾ ರಣೇ ಜಿತಃ ॥

ನ ತ್ವಯಾ ಸದೃಶಃ ಶ್ಲಾಘ್ಯಸ್ತ್ರಿಷು ಲೋಕೇಷು ವಿದ್ಯತೇ ।
ಕಂ ತ್ವಂ ಪ್ರಾಕ್ಕೇವಲಂ ಧರ್ಮಂ ಚರಿತ್ವಾ ಲಬ್ಧವಾನ್ ವರಮ್ ॥

ಶ್ರುತಪೂರ್ವಂ ಹಿ ನ ಮಯಾ ಭಾಷಸೇ ಯಾದೃಶಂ ಸ್ವಯಮ್ ।
ತಿಷ್ಠೇದಾನೀಂ ನ ಮೇ ಜೀವನ್ ಪ್ರತಿಯಾಸ್ಯಸಿ ದುರ್ಮತೇ ॥ ೧೩

ಅದ್ಯ ತ್ವಾಂ ನಿಶಿತೈರ್ಬಾಣೈಃ ಪ್ರೇಷಯಾಮಿ ಯಮಕ್ಷಯಮ್ ।
ತತಃ ಶರಾಸನಂ ಗೃಹ್ಯ ಸಾಯಕಾಂಶ್ಚ ನರಾಧಿಪಃ ॥ ೧೪

ರಣಾಯ ನಿರ್ಯಯೌ ಕ್ರುದ್ಧಃ ಸಂವರ್ತೋ ಮಾರ್ಗಮಾವೃಣೋತ್
ಸೋಽಬ್ರವೀತ್ ಸ್ನೇಹಸಂಯುಕ್ತಂ ಮರುತ್ತಂ ತಂ ಮಹಾನೃಷಿಃ ॥

ಶ್ರೋತವ್ಯಂ ಯದಿ ಮದ್ವಾಕ್ಯಂ ಸಂಪ್ರಹಾರೋ ನ ತೇ ಕ್ಷಮಃ ।
ಮಾಹೇಶ್ವರಮಿದಂ ಸತ್ರಮಸಮಾಪ್ತಂ ಕುಲಂ ದಹೇತ್ ॥ ೧೬

(೧೦) ಆಗ ಮರುತ್ತನು "ಆಹಾ! ಎಷ್ಟು ಧನ್ಯನಯ್ಯಾ ನೀನು! ಜ್ಯೇಷ್ಠ ಸೋದರನನ್ನು ಯುದ್ಧದಲ್ಲಿ ಗೆದ್ದಿರುವೆಯಲ್ಲವೆ? ರಾವಣ, ಮೂರು ಲೋಕಗಳಲ್ಲಿಯೂ ನಿನ್ನಂತಹ ಕೀರ್ತಿಶಾಲಿಯೇ ಇಲ್ಲ! ಹಿಂದೆ ನೀನು ಯಾರನ್ನು ಕುರಿತು ನಿಷ್ಠೆಯಿಂದ ತಪಸ್ಸುಮಾಡಿ ವರವನ್ನು ಪಡೆದಿದ್ದೀಯೆ? (೧೧-೧೨). ನೀನು ಹೇಳಿಕೊಳ್ಳುವ ವಿಶೇಷವೇನೂ ನನ್ನ ಕಿವಿಗೆ ಬಿದ್ದಿಲ್ಲ ಎಲಾ ದುರುಳ, ನಿಲ್ಲು, ನಿಲ್ಲು, ನನ್ನೆದುರಿಗೆ ಜೀವಸಹಿತ ನೀನು ಹಿಂದಿರುಗಲಿಕ್ಕಿಲ್ಲ ನಿಶಿತಾಸ್ತ್ರಗಳಿಂದ ಈಗಲೇ ನಿನ್ನನ್ನು ಯಮಸದನಕ್ಕೆ ದಬ್ಬುವೆನು" ಎಂದು ಉತ್ತರಿಸಿದನು ಒಡನೆಯೇ ಮರುತ್ತನು ಧನುಸ್ಸನ್ನು ತುಡುಕಿ ಶರಗಳನ್ನು ಸೆಳೆದುಕೊಂಡು ಕ್ರೋಧದಿಂದ ರಣಕ್ಕೆ ಸಜ್ಜಾದನು (೧೩-೧೪) ಅಷ್ಟರಲ್ಲಿ ಸಂವರ್ತಮಹರ್ಷಿಯು ಅಡ್ಡಬಂದು ಮರುತ್ತನನ್ನು ನೋಡಿ ಪ್ರೀತಿಯಿಂದ "ಭೂಪಾಲ, ನನ್ನ ಮಾತನ್ನು ಕೇಳುವೆಯಾದರೆ ಈ ಹೊಡೆದಾಟವು ನಿನಗೆ ಯುಕ್ತವಲ್ಲ ಈಗ ನಡೆಯುತ್ತಿರುವುದು ಮಹೇಶ್ವರ ದೇವತಾಕವಾದ ಯಜ್ಞ. ಇದು ಸಮಾಪ್ತವಾಗದ ನಿಂತರೆ, ಕರ್ತನ ಕುಲವನ್ನೇ ನಾಶಮಾಡೀತು

ದೀಕ್ಷಿತಸ್ಯ ಕುತೋ ಯುದ್ಧಂ ಕ್ರೋಧಿತ್ವಂ ದೀಕ್ಷಿತೇ ಕುತಃ ।
ಸಂಶಯಶ್ಚ ಜಯೇ ನಿತ್ಯಂ ರಾಕ್ಷಸಶ್ಚ ಸುದುರ್ಜಯಃ । ೧೭
ಸ ನಿವೃತ್ತೋ ಗುರೋರ್ವಾಕ್ಯಾನ್ಮರುತ್ತಃ ಪೃಥಿವೀಪತಿಃ ।
ವಿಸೃಜ್ಯ ಸಶರಂ ಚಾಪಂ ಸ್ವಸ್ಥೋ ಮಖಮುಖೋಽಭವತ್ ॥ ೧೮
ತತಸ್ತಂ ನಿರ್ಜಿತಂ ಮತ್ವಾ ಘೋಷಯಾಮಾಸ ವೈ ಶುಕಃ ।
ರಾವಣೋ ಜಯತೀತ್ಯುಚ್ಚೈರ್ಹರ್ಷಾನ್ನಾದಂ ವಿಮುಕ್ತವಾನ್ ॥
ತಾನ್ ಭಕ್ಷಯಿತ್ವಾ ತತ್ರಸ್ಥಾನ್ ಮಹರ್ಷೀನ್ ಯಜ್ಞಮಾಗತಾನ್
ವಿತೃಪ್ತೋ ರುಧಿರೈಸ್ತೇಷಾಂ ಪುನಃ ಸಂಪ್ರಯಯೌ ಮಹೀಮ್ ॥
ರಾವಣೇ ತು ಗತೇ ದೇವಾಃ ಸೇಂದ್ರಾಶ್ಚೈವ ದಿವೌಕಸಃ ।
ತತಃ ಸ್ವಾಂ ಯೋನಿಮಾಸಾದ್ಯ ತಾನಿ ಸತ್ತ್ವಾನಿ ಚಾಬ್ರುವನ್ ॥
ಹರ್ಷಾತ್ತದಾಬ್ರವೀದಿಂದ್ರೋ ಮಯೂರಂ ನೀಲಬರ್ಹಿಣಮ್ ।
ಪ್ರೀತೋಽಸ್ಮಿ ತವ ಧರ್ಮಜ್ಞ ಭುಜಂಗಾದ್ಧಿ ನ ತೇ ಭಯಮ್ ॥

---

(೧೫-೧೭) ಯಜ್ಞದಲ್ಲಿ ದೀಕ್ಷಿತನಾದವನು ಯುದ್ಧಮಾಡುವುದೆಂದರೇನು? ಕ್ರೋಧಗೊಳ್ಳುವುದಂದರೇನು? ಮತ್ತು ಯುದ್ಧದಲ್ಲಿ ಜಯವು ಸದಾ ಸಂಶಯಗ್ರಸ್ತವೇ ಈ ರಾಕ್ಷಸನನ್ನು ಗೆಲ್ಲುವುದೂ ಕಷ್ಟಸಾಧ್ಯ" ಎಂದು ತಿಳಿಸಿದನು (೧೭) ಆಗ ಮರುತ್ತರಾಜನು ಗುರುವಾಕ್ಯವನ್ನು ಗೌರವಿಸಿ ಶರಚಾಪಗಳನ್ನು ಬದಿಗಿರಿಸಿ, ಶಾಂತಮನಸ್ಕನಾಗಿ ಯಜ್ಞಕಾರ್ಯದಲ್ಲಿ ತೊಡಗಿದನು ಶುಕನೆಂಬ ರಾವಣನ ಅಮಾತ್ಯನು, ಮರುತ್ತರಾಜನು ಸೋತ ನೆಂದು ನಿಶ್ಚಯಿಸಿ "ಮಹಾರಾಜನಾದ ರಾವಣನಿಗೆ ಜಯವಾಗಲಿ!" ಎಂದು ಘೋಷಿಸಿ, ಹರ್ಷದಿಂದ ಸಿಂಹನಾದ ಮಾಡಿದನು! (೧೮-೧೯) ಯಜ್ಞಕ್ಕೆ ಬಂದಿದ್ದ ಕೆಲವು ಋಷಿಗಳನ್ನು ತಿಂದು ನೆತ್ತರನ್ನು ಕುಡಿದು ತೃಪ್ತನಾಗಿ, ರಾವಣನು ಮುಂದೆ ಸಾಗಿದನು ರಾವಣನು ತೆರಳಿದಮೇಲೆ ಇಂದ್ರಾದಿ ದೇವತೆಗಳು ತಮ್ಮ ನಿಜರೂಪವನ್ನು ತಾಳಿ, ತಾವು ಯಾವ ಪ್ರಾಣಿಗಳ ರೂಪ ವನ್ನು ಧರಿಸಿದ್ದರೋ ಆ ಪ್ರಾಣಿಗಳನ್ನು ಕರೆದು ಸಂಭಾಷಿಸಿದರು (೨೦-೨೧) ಇಂದ್ರನು ನೀಲವರ್ಣದ ನವಿಲನ್ನು ನೋಡಿ, ನಲವಿಂದ "ಎಲೈ ಮಯೂರವೆ, ನಾನು ಸುಪ್ರೀತನಾಗಿದ್ದೇನೆ ಇನ್ನುಮೇಲೆ ನಿನಗೆ ಹಾವುಗಳಿಂದ ಹೆದರಿಕೆ

ಇದಂ ನೇತ್ರಸಹಸ್ರಂ ತು ಯತ್ತ್ವದ್ಬರ್ಹೇ ಭವಿಷ್ಯತಿ ।
ವರ್ಷಮಾಣೇ ಮಯಿ ಮುದಂ ಪ್ರಾಪ್ಸ್ಯಸೇ ಪ್ರೀತಿಲಕ್ಷಣಾಮ್ ॥

ಏವಮಿಂದ್ರೋ ವರಂ ಪ್ರಾದಾನ್ಮಯೂರಸ್ಯ ಸುರೇಶ್ವರಃ ।
ನೀಲಾಃ ಕಿಲ ಪುರಾ ಬರ್ಹಾ ಮಯೂರಾಣಾಂ ನರಾಧಿಪ ॥ ೨೪

ಸುರಾಧಿಪಾದ್ವರಂ ಪ್ರಾಪ್ಯ ಗತಾಃ ಸರ್ವೇಽಪಿ ಬರ್ಹಿಣಃ ।
ಧರ್ಮರಾಜೋಽಬ್ರವೀದ್ರಾಮ ಪ್ರಾಗ್ವಂಶೇ ವಾಯಸಂ ಸ್ಥಿತಮ್ ॥

ಪಕ್ಷಿಂಸ್ತವಾಸ್ಮಿ ಸುಪ್ರೀತಃ ಪ್ರೀತಸ್ಯ ವಚನಂ ಶೃಣು ।
ಯಥಾನ್ಯೈರ್ವಿವಿಧೈ ರೋಗೈಃ ಪೀಡ್ಯಂತೇ ಪ್ರಾಣಿನೋ ಮಯಾ

ತೇ ನ ತೇ ಪ್ರಭವಿಷ್ಯಂತಿ ಮಯಿ ಪ್ರೀತೇ ನ ಸಂಶಯಃ ।
ಮೃತ್ಯುತಸ್ತೇ ಭಯಂ ನಾಸ್ತಿ ವರಾನ್ಮಮ ವಿಹಂಗಮ ॥ ೨೭

ಯಾವತ್ತ್ವಾಂ ನ ವಧಿಷ್ಯಂತಿ ನರಸ್ತಾವದ್ಭವಿಷ್ಯಸಿ ।
ಏತೇ ಮದ್ವಿಷಯಸ್ಥಾ ಯೇ ಮಾನವಾಃ ಕ್ಷುದ್ಭಯಾರ್ದಿತಾಃ ॥ ೨೮

---

ಇರದು ನನ್ನ ಸಾವಿರ ಕಣ್ಣುಗಳು ನಿನ್ನ ದೇಹದಲ್ಲಿ ಅಭಿವ್ಯಕ್ತವಾಗಲಿ ನನ್ನ ಪ್ರೀತಿಗೆ ಚಿಹ್ನೆಯಾಗಿ, ಮಳೆ ಬಂದಾಗ ನೀನು ನಲಿಯುವೆ" ಎಂದು ವರವನ್ನಿತ್ತನು (೨೨-೨೩) ಶ್ರೀರಾಮ, ಹಿಂದೆ ನವಿಲುಗಳ ಬಣ್ಣ ನೀಲ ವಾಗಿತ್ತು ಹೀಗೆ ಸುರೇಶ್ವರನಿಂದ ವರವನ್ನು ಪಡೆದು ನವಿಲುಗಳು ಹೊರಟು ಹೋದವು. ಯಮಧರ್ಮನು ಹವಿಶ್ಶಾಲೆಯ ಹೊರಗಿದ್ದ ಕಾಗೆಯನ್ನು ನೋಡಿ "ಎಲೈ ವಾಯಸವೆ, ನಿನ್ನ ವಿಷಯದಲ್ಲಿ ಸಂಪ್ರೀತನಾಗಿದ್ದೇನೆ ಸಂಪ್ರೀತನಾದ ನನ್ನ ನುಡಿಯನ್ನು ಕೇಳು ಲೋಕದಲ್ಲಿ ಇತರ ಪ್ರಾಣಿಗಳಿಗೆ ನನ್ನಿಂದ ನಾನಾ ರೋಗಗಳು ಸಂಭವಿಸಿ ಬಾಧಿಸುತ್ತವೆ (೨೪-೨೬) ನಾನು ಸಂಪ್ರೀತನಾದ್ದ ರಿಂದ, ಎಲೈ ವಾಯಸವೆ, ನಿನಗೆ ಅಂಥ ರೋಗಗಳಾವುವೂ ಬರುವುದಿಲ್ಲ! ಅಲ್ಲದೆ ಅಕಾರಣವಾಗಿ ನಿನಗೆ ಮರಣವೂ ಸಂಭವಿಸುವುದಿಲ್ಲ ಜನರು ನಿನ್ನನ್ನು ಕೊಲ್ಲುವವರೆಗೂ ಬದುಕಿರು! ನನ್ನ ಲೋಕದಲ್ಲಿರುವ ಪಿತೃಗಳು ಹಸಿವಿನ ಬಾಧೆಯಿಂದ ಬಳಲುತ್ತಿರುವಾಗ ನೀನು ಭುಜಿಸಿ ತೃಪ್ತನಾದರೆ, ಆ ಪಿತೃಗಳೂ ಅವರ ಪರಿವಾರದವರೂ ತೃಪ್ತರಾಗುವರು!" ಎಂದು ವರ

ತ್ವಯಿ ಭುಕ್ತೇ ತು ತೃಪ್ತಾಸ್ತೇ ಭವಿಷ್ಯಂತಿ ಸಬಾಂಧವಾಃ ।
ವರುಣಸ್ತ್ವಬ್ರವೀದ್ಧಂಸಂ ಗಂಗಾತೋಯವಿಹಾರಿಣಮ್ ॥ ೨೯

ಶ್ರೂಯತಾಂ ಪ್ರೀತಿಸಂಯುಕ್ತಂ ವಚಃ ಪತ್ರರಥೇಶ್ವರ ।
ವರ್ಣೋ ಮನೋಹರಃ ಸೌಮ್ಯ ಚಂದ್ರಮಂಡಲಸನ್ನಿಭಃ ॥ ೩೦

ಭವಿಷ್ಯತಿ ತವೋದಗ್ರಃ ಶುದ್ಧಫೇನಸಮಪ್ರಭಃ ।
ಮಚ್ಛರೀರಂ ಸಮಾಸಾದ್ಯ ಕಾಂತೋ ನಿತ್ಯಂ ಭವಿಷ್ಯಸಿ ॥ ೩೧

ಪ್ರಾಪ್ಸ್ಯಸೇ ಚಾತುಲಾಂ ಪ್ರೀತಿಮೇತನ್ಮೇ ಪ್ರೀತಿಲಕ್ಷಣಮ್ ।
ಹಂಸಾನಾಂ ಹಿ ಪುರಾ ರಾಮ ನೀಲವರ್ಣಃ ಸಪಾಂಡರಃ ॥ ೩೨

ಪಕ್ಷಾ ನೀಲಾಗ್ರಸಂವೀತಾಃ ಕ್ರೋಡಾಃ ಶಷ್ಪಾಗ್ರನಿರ್ಮಲಾಃ ।
ಅಥಾಬ್ರವೀದ್ವೈಶ್ರವಣಃ ಕೃಕಲಾಸಂ ಗಿರೌ ಸ್ಥಿತಮ್ ॥ ೩೩

ಹೈರಣ್ಯಂ ಸಂಪ್ರಯಚ್ಛಾಮಿ ವರ್ಣಂ ಪ್ರೀತಸ್ತವಾಪ್ಯಹಮ್ ।
ಸದ್ರವ್ಯಂ ಚ ಶಿರೋ ನಿತ್ಯಂ ಭವಿಷ್ಯತಿ ತವಾಕ್ಷಯಮ್ ॥ ೩೪

---

ವನ್ನನುಗ್ರಹಿಸಿದನು (೨೭-೨೮) ಆಮೇಲೆ ವರುಣನು ಗಂಗಾಜಲವಿಹಾರಿಯಾದ ಹಂಸವನ್ನು ಕರೆದು "ಎಲೈ ಪಕ್ಷಿರಾಜ, ನಾನು ಪ್ರೀತಿಯಿಂದಾಡುವ ಮಾತನ್ನಾಲಿಸು ಸೌಮ್ಯ, ಇನ್ನುಮೇಲೆ ನಿನ್ನ ಮೈಬಣ್ಣವು ಚಂದ್ರಮಂಡಲದಂತೆಯೂ ಶುದ್ಧವಾದ ನೀರಿನ ನೊರೆಯಂತೆಯೂ ಬೆಳ್ಳಗೆ ಮನೋಹರವಾಗಿರುವುದು! ನನ್ನ ಶರೀರವಾದ ಜಲರಾಶಿಯಲ್ಲಿ ನೆಲೆಸಿ, ನೀನು ಸದಾ ನನಗೆ ಪ್ರಿಯನಾಗಿ ಬಾಳುವೆ (೨೯-೩೧) ನೀನು ಯಾವಾಗಲೂ ಆನಂದದಿಂದ ವಿಹರಿಸುವೆ ಇದು ನನ್ನ ಪ್ರೀತಿಯ ಚಿಹ್ನೆಯೆಂದು ತಿಳಿ" ಎಂದು ನುಡಿದನು ಶ್ರೀರಾಮ, ಹಿಂದೆ ಹಂಸಗಳ ಬಣ್ಣವು ಬಿಳುಪು ಮಿಶ್ರವಾದ ಕಪ್ಪಾಗಿತ್ತು (೩೨) ರೆಕ್ಕೆಗಳ ತುದಿ ಕಪ್ಪಾಗಿಯೂ ಎದೆಯ ಭಾಗವು ಎಳೆಯ ಗರಿಕೆಯಂತೆ ಕೋಮಲಶ್ಯಾಮಲವಾಗಿಯೂ ಇತ್ತು ಆಮೇಲೆ ವೈಶ್ರವಣನು ಬೆಟ್ಟದಮೇಲಿದ್ದ ಓತೀಕೇತವನ್ನು ನೋಡಿ "ನಾನು ಸಂತುಷ್ಟನಾಗಿದ್ದೇನೆ ನಿನಗೆ ಚಿನ್ನದ ಬಣ್ಣವನ್ನು ಅನುಗ್ರಹಿಸುವೆನು ನಿನ್ನ ಶಿರಸ್ಸು ಸದಾ ಚಿನ್ನದ

ಏಷ ಕಾಂಚನಕೋ ವರ್ಣೋ ಮತ್ಪ್ರೀತ್ಯಾ ತೇ ಭವಿಷ್ಯತಿ ।
ಏವಂ ದತ್ತ್ವಾ ವರಾಂಸ್ತೇಭ್ಯಸ್ತಸ್ಮಿನ್ ಯಜ್ಞೋತ್ಸವೇ ಸುರಾಃ ॥
ನಿವೃತ್ತಾಃ ಸಹ ರಾಜ್ಞಾ ತೇ ಪುನಃ ಸ್ವಭವನಂ ಗತಾಃ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟಾದಶಃ ಸರ್ಗಃ



ಬಣ್ಣವನ್ನು* ಪಡೆದಿರಲಿ (೩೩-೩೪) ಕಾಂಚನವರ್ಣವು ನನ್ನ ಸಂತೋಷದ ಚಿಹ್ನೆಯಾಗಿ ನಿನಗೆ ಲಭಿಸುವುದು" ಎಂದನು ಈ ರೀತಿಯಲ್ಲಿ ದೇವತೆಗಳು ಆ ಪ್ರಾಣಿಗಳಿಗೆ ವರಗಳನ್ನಿತ್ತು, ಮಾಹೇಶ್ವರ ಯಜ್ಞವು ಮುಗಿದಮೇಲೆ ಮರುತ್ತರಾಜನೊಡನೆ ಸ್ವರ್ಗವನ್ನೇರಿದರು (೩೫)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹದಿನೆಂಟನೆಯ ಸರ್ಗ



* ಮೂಲದಲ್ಲಿ 'ಸದ್ರವ್ಯಂ' ಎಂದಿದೆ ದ್ರವ್ಯವಂದರೆ ಚಿನ್ನ ಸದ್ರವ್ಯ-ಚಿನ್ನದ ಬಣ್ಣವುಳ್ಳದ್ದು ಎಂದು ತಿಲಕವ್ಯಾಖ್ಯಾನದ ಅಭಿಪ್ರಾಯ 'ಚಿನ್ನವೇ ಓತೀಕೇತದ ಶಿರಸ್ಸಿನಲ್ಲಿ ಅವ್ಯಕ್ತವಾಗಿದೆ ಆದ್ದರಿಂದ ಅದರ ತಲೆ ದಪ್ಪದಾಗಿದೆ ಚಿನ್ನದ ಭಾರಕ್ಕೆ ಓತೀಕೇತವು ತಲೆಯಾಡಿಸುತ್ತಿರುವುದು!' ಎಂದು ಲೋಕರೂಢಿಯ ಮಾತು.

## ಏಕೋನವಿಂಶಃ ಸರ್ಗಃ

### ಅನರಣ್ಯಶಾಪಃ

ಅಥ ಜಿತ್ವಾ ಮರುತ್ತಂ ಸ ಪ್ರಯಯೌ ರಾಕ್ಷಸಾಧಿಪಃ ।
ನಗರಾಣಿ ನರೇಂದ್ರಾಣಾಂ ಯುದ್ಧಕಾಂಕ್ಷೀ ದಶಾನನಃ ॥ ೧

ಸಮಾಸಾದ್ಯ ತು ರಾಜೇಂದ್ರಾನ್ ಮಹೇಂದ್ರವರುಣೋಪಮಾನ್।
ಅಬ್ರವೀದ್ರಾಕ್ಷಸೇಂದ್ರಸ್ತು ಯುದ್ಧಂ ಮೇ ದೀಯತಾಮಿತಿ ॥ ೨

ನಿರ್ಜಿತಾಃ ಸ್ಮೇತಿ ವಾ ಬ್ರೂತ ಏಷ ಮೇ ಹಿ ಸುನಿಶ್ಚಯಃ ।
ಅನ್ಯಥಾ ಕುರ್ವತಾಮೇವಂ ಮೋಕ್ಷೋ ನೈವೋಪಪದ್ಯತೇ ॥ ೩

ತತಸ್ತ್ವಭೀರವಃ ಪ್ರಾಜ್ಞಾಃ ಪಾರ್ಥಿವಾ ಧರ್ಮನಿಶ್ಚಯಾಃ ।
ಮಂತ್ರಯಿತ್ವಾ ತತೋಽನ್ಯೋಽನ್ಯಂ ರಾಜಾನಃ ಸುಮಹಾಬಲಾಃ ॥

ನಿರ್ಜಿತಾಃ ಸ್ಮೇತ್ಯಭಾಷಂತ ಜ್ಞಾತ್ವಾ ವರಬಲಂ ರಿಪೋಃ ।
ದುಷ್ಯಂತಃ ಸುರಥೋ ಗಾಧಿರ್ಗಯೋ ರಾಜಾ ಪುರೂರವಾಃ ॥ ೫

## ಸರ್ಗ ೧೯

ಇಕ್ಷ್ವಾಕುವಂಶದ ರಾಜನಾದ ಅನರಣ್ಯನು ರಾವಣನೊಡನೆ ಯುದ್ಧ ಮಾಡಿ ಸೋಲು
ವುದು ಅವನು ಸಾಯುವಾಗ 'ನನ್ನ ವಂಶದಲ್ಲಿ ಜನಿಸುವ ದಶರಥಪುತ್ರನು
ನಿನ್ನನ್ನು ವಧಿಸುವನು' ಎಂದು ರಾವಣನಿಗೆ ಶಾಪವನ್ನೀಯುವುದು

ರಾಘವ, ರಾಕ್ಷಸಾಧಿಪನಾದ ದಶಗ್ರೀವನು ಈ ಪ್ರಕಾರದಲ್ಲಿ ಮರುತ್ತ ನನ್ನು ಜಯಿಸಿ, ಯುದ್ಧಾಪೇಕ್ಷೆಯಿಂದ ಭೂಪಾಲರ ನಗರಗಳನ್ನು ಅರಸುತ್ತ ಹೊರಟನು ಮಹೇಂದ್ರವರುಣರಂತೆ ಪ್ರತಾಪಶಾಲಿಗಳಾದ ರಾಜೇಂದ್ರ ರನ್ನು ಕಂಡು ಆ ರಾಕ್ಷಸೇಂದ್ರನು "ಎಲೈ ರಾಜರುಗಳಿರಾ, ನನ್ನೊಡನೆ ಕಾಳಗಕ್ಕೆ ಬನ್ನಿರಿ ಇಲ್ಲವೆ, ಸೋತೆವೆಂದು ಸ್ಪಷ್ಟವಾಗಿ ಹೇಳಿರಿ! ಇದು ನನ್ನ ನಿರ್ಣಯ. ಹಾಗಿಲ್ಲದೆ ಅತ್ತಿತ್ತ ಜಾರಿಕೊಂಡರೆ ನಿಮ್ಮನ್ನು ಬಿಡುವುದಿಲ್ಲ" ಎಂದು ತಿಳಿಸುತ್ತಿದ್ದನು (೧-೩) ಆ ಭೂಪಾಲರಾದರೋ ಹೆದರತಕ್ಕವರಲ್ಲ. ಪ್ರಾಜ್ಞರೂ ಧರ್ಮನಿಶ್ಚಯವುಳ್ಳವರೂ ಮಹಾಪರಾಕ್ರಮಿಗಳೂ ಆಗಿದ್ದರು.

ಏತೇ ಸರ್ವೇಽಬ್ರುವಂಸ್ತಾತ ನಿರ್ಜಿತಾಃ ಸ್ಮೇತಿ ಪಾರ್ಥಿವಾಃ ।
ಅಥಾಯೋಧ್ಯಾಂ ಸಮಾಸಾದ್ಯ ರಾವಣೋ ರಾಕ್ಷಸಾಧಿಪಃ ॥ ೬

ಸುಗುಪ್ತಾಮನರಣ್ಯೇನ ಶಕ್ರೇಣೇವಾಮರಾವತೀಮ್ ।
ಸ ತಂ ಪುರುಷಶಾರ್ದೂಲಂ ಪುರಂದರಸಮಂ ಬಲೇ ॥ ೭

ಪ್ರಾಹ ರಾಜಾನಮಾಸಾದ್ಯ ಯುದ್ಧಂ ದೇಹೀತಿ ರಾವಣಃ ।
ನಿರ್ಜಿತೋಽಸ್ಮೀತಿ ವಾ ಬ್ರೂಹಿ ತ್ವಮೇವಂ ಮಮ ಶಾಸನಮ್ ॥

ಅಯೋಧ್ಯಾಧಿಪತಿಸ್ತಸ್ಯ ಶ್ರುತ್ವಾ ಪಾಪಾತ್ಮನೋ ವಚಃ ।
ಅನರಣ್ಯಸ್ತು ಸಂಕ್ರುದ್ಧೋ ರಾಕ್ಷಸೇಂದ್ರಮಥಾಬ್ರವೀತ್ ॥ ೯

ದೀಯತೇ ದ್ವಂದ್ವಯುದ್ಧಂ ತೇ ರಾಕ್ಷಸಾಧಿಪತೇ ಮಯಾ ।
ಸಂತಿಷ್ಠ ಕ್ಷಿಪ್ರಮಾಯತ್ತೋ ಭವ ಚೈವಂ ಭವಾಮ್ಯಹಮ್ ॥ ೧೦

ಅಥ ಪೂರ್ವಂ ಶ್ರುತಾರ್ಥೇನ ನಿರ್ಜಿತಂ ಸುಮಹದ್ಬಲಮ್ ।
ನಿಷ್ಕ್ರಾಮತ್ತನ್ನರೇಂದ್ರಸ್ಯ ಬಲಂ ರಕ್ಷೋವಧೋದ್ಯತಮ್ ॥ ೧೧

---

ಅವರು ತಮ್ಮಲ್ಲಿಯೇ ಮಂತ್ರಾಲೋಚನೆಯನ್ನು ಮಾಡಿ, 'ಶತ್ರುವಾದ ಈ ರಾಕ್ಷಸನು ವರಬಲದಿಂದ ದುರ್ಜಯನಾಗಿದ್ದಾನೆ' ಎಂಬುದನ್ನು ಮನಗಂಡು, 'ನಾವು ಸೋತೆವು' ಎಂದು ಹೇಳಿಬಿಡುತ್ತಿದ್ದರು ದುಷ್ಯಂತ, ಸುರಥ, ಗಾಧಿ, ಗಯ, ಪುರೂರವ—ಮುಂತಾದವರು ಹಾಗೆಯೇ ಹೇಳಿದರು (೪-೫) ಹೀಗಿರಲು ರಾವಣನು ಅಯೋಧ್ಯೆಗೆ ಬಂದನು ಆಗ ಅನರಣ್ಯನೆಂಬ ರಾಜನು, ಅಮರಾವತಿಯನ್ನು ಇಂದ್ರನು ರಕ್ಷಿಸುವಂತೆ, ಅಯೋಧ್ಯೆಯನ್ನು ದಕ್ಷತೆಯಿಂದ ರಕ್ಷಿಸುತ್ತಿದ್ದನು ಪುರಂದರಸದೃಶಪರಾಕ್ರಮಿಯಾದ ಆ ಪುರುಷಶ್ರೇಷ್ಠನನ್ನು ಕುರಿತು ರಾವಣನು "ಎಲೈ ಅನರಣ್ಯ, ಯುದ್ಧಕ್ಕೆ ಎದುರಾಗು ಇಲ್ಲವೆ, ಸೋತೆನೆಂದು ಒಪ್ಪಿಕೊ ಇದು ನನ್ನ ಆಜ್ಞೆ !" ಎಂದನು (೬-೮) ಆ ಖೂಳನ ನುಡಿಯನ್ನು ಕೇಳಿ ಅಯೋಧ್ಯೇಶ್ವರನು ಕೆರಳಿ "ಎಲೈ ರಾಕ್ಷಸಾಧಿಪ, ದ್ವಂದ್ವಯುದ್ಧವನ್ನೀಯುವೆನು ; ಸನ್ನದ್ಧನಾಗು ನಾನೂ ಸಿದ್ಧನಾಗುವೆನು" ಎಂದು ಉತ್ತರಕೊಟ್ಟನು ರಾವಣನು ಆಗಮಿಸುವನೆಂಬ ವೃತ್ತಾಂತವನ್ನು ಕೇಳಿದ್ದ ಅನರಣ್ಯನು ಮೊದಲೇ ತನ್ನ ಸೇನೆಯನ್ನು ಯುದ್ಧಕ್ಕಾಗಿ ಸಜ್ಜುಗೊಳಿಸಿದ್ದನು ಒಡನೆಯೇ ಆ ಮಹಾ

ನಾಗಾನಾಂ ದಶಸಾಹಸ್ರಂ ವಾಜಿನಾಂ ನಿಯುತಂ ತಥಾ ।
ರಥಾನಾಂ ಬಹುಸಾಹಸ್ರಂ ಪತ್ತೀನಾಂ ಚ ನರೋತ್ತಮ ॥ ೧೨
ಮಹೀಂ ಸಂಛಾದ್ಯ ನಿಷ್ಕ್ರಾಂತಂ ಸಪದಾತಿರಥಂ ರಣೇ ।
ತತಃ ಪ್ರವೃತ್ತಂ ಸುಮಹದ್ಯುದ್ಧಂ ಯುದ್ಧವಿಶಾರದ ॥ ೧೩
ಅನರಣ್ಯಸ್ಯ ನೃಪತೇ ರಾಕ್ಷಸೇಂದ್ರಸ್ಯ ಚಾದ್ಭುತಮ್ ।
ತದ್ರಾವಣಬಲಂ ಪ್ರಾಪ್ಯ ಬಲಂ ತಸ್ಯ ಮಹೀಪತೇಃ ॥ ೧೪
ಪ್ರಾಣಶ್ಯತ ತದಾ ಸರ್ವಂ ಹವ್ಯಂ ಹುತಮಿವಾನಲೇ ।
ಯುದ್ಧ್ವಾ ಚ ಸುಚಿರಂ ಕಾಲಂ ಕೃತ್ವಾ ವಿಕ್ರಮಮುತ್ತಮಮ್ ॥
ಪ್ರಜ್ವಲಂತಂ ಸಮಾಸಾದ್ಯ ಕ್ಷಿಪ್ರಮೇವಾವಶೇಷಿತಮ್ ।
ಪ್ರಾವಿಶತ್ ಸಂಕುಲಂ ತತ್ರ ಶಲಭಾ ಇವ ಪಾವಕಮ್ ॥ ೧೬
ನಶ್ಯತಿ ಸ್ಮ ಬಲಂ ತತ್ರ ಹವ್ಯಂ ಹುತಮಿವಾನಲೇ ।
ಸೋಽಪಶ್ಯತ್ತನ್ನರೇಂದ್ರಸ್ತು ನಶ್ಯಮಾನಂ ಮಹಾಬಲಮ್ ॥ ೧೭
ಮಹಾರ್ಣವಂ ಸಮಾಸಾದ್ಯ ವನಾಪಗಶತಂ ಯಥಾ ।
ತತಃ ಶಕ್ರಧನುಃ ಪ್ರಖ್ಯಂ ಧನುರ್ವಿಸ್ಫಾರಯನ್ ಸ್ವಯಮ್ ॥ ೧೮

ಸೈನ್ಯವು ರಾಕ್ಷಸರನ್ನೆದುರಿಸಿತು (೯-೧೧) ಹತ್ತು ಸಾವಿರ ಆನೆಗಳೂ ಒಂದು ಲಕ್ಷ ಕುದುರೆಗಳೂ ಬಹು ಸಹಸ್ರ ಸಂಖ್ಯೆಯಲ್ಲಿ ರಥಗಳೂ ಪದಾತಿಗಳೂ ಭೂಮಂಡಲವನ್ನೇ ವ್ಯಾಪಿಸುವಂತೆ ಯುದ್ಧೋನ್ಮುಖವಾಗಿ ಹೋಗಲು, ಉಭಯಸೇನೆಗಳಿಗೂ ಭೀಷಣವಾದ ಕಾಳಗವು ತೊಡಗಿತು (೧೨-೧೩) ಅನರಣ್ಯನ ಸೇನೆಯು ರಾವಣನ ಸೇನೆಯನ್ನೆದುರಿಸಿ ಚಿರಕಾಲದವರೆಗೆ ಹೋರಾಡಿ ಅದ್ಭುತವಾದ ವಿಕ್ರಮವನ್ನು ಮೆರೆಸಿ, ವಹ್ನಿಯಲ್ಲಿ ಬಿದ್ದ ಹವಿಸ್ಸಿನಂತೆ ನಾಶಹೊಂದಿತು ಪ್ರಜ್ವಲಿಸುವ ಅಗ್ನಿಯಲ್ಲಿ ನುಗ್ಗಿಹೋದ ಮಿಡತೆಗಳ ಹಿಂಡಿನಂತೆ ನಿಶ್ಶೇಷವಾಯಿತು (೧೪-೧೬) ಹೀಗೆ ತನ್ನ ಸೈನ್ಯವು ಯಜ್ಞೇಶ್ವರನಲ್ಲರ್ಪಿಸಿದ ಹವಿಸ್ಸಿನಂತೆಯೂ ಮಹಾಸಾಗರವನ್ನು ಸೇರಿದ ನದೀಶತದಂತೆಯೂ ಅದೃಶ್ಯವಾಗುತ್ತಿರುವುದನ್ನು ಕಂಡು, ಅನರಣ್ಯ ನರೇಂದ್ರನು ಕೋಪದಿಂದ ಸಿಡಿದೆದ್ದು, ಇಂದ್ರಧನುಸ್ಸಿನಂತಿದ್ದ ತನ್ನ ಧನುಸ್ಸನ್ನು ಮಿಡಿಯುತ್ತ ರಾವಣನಮೇಲೆ ಏರಿ ಹೋದನು (೧೭-೧೮)

**ಆಸಸಾದ ನರೇಂದ್ರಸ್ತಂ ರಾವಣಂ ಕ್ರೋಧಮೂರ್ಛಿತಃ ।**
**ಅನರಣ್ಯೇನ ತೇಽಮಾತ್ಯಾ ಮಾರೀಚಶುಕಸಾರಣಾಃ ॥ ೧೯**
**ಪ್ರಹಸ್ತಸಹಿತಾ ಭಗ್ನಾ ವ್ಯದ್ರವಂತ ಮೃಗಾ ಇವ ।**
**ತತೋ ಬಾಣಶತಾನ್ಯಷ್ಟೌ ಪಾತಯಾಮಾಸ ಮೂರ್ಧನಿ ॥ ೨೦**
**ತಸ್ಯ ರಾಕ್ಷಸರಾಜಸ್ಯ ಇಕ್ಷ್ವಾಕುಕುಲನಂದನಃ ।**
**ತಸ್ಯ ಬಾಣಾಃ ಪತಂತಸ್ತೇ ಚಕ್ರಿರೇ ನ ಕ್ಷತಿಂ ಕ್ವಚಿತ್ ॥ ೨೧**
**ವಾರಿಧಾರಾ ಇವಾಭ್ರೇಭ್ಯಃ ಪತಂತ್ಯೋ ಗಿರಿಮೂರ್ಧನಿ ।**
**ತತೋ ರಾಕ್ಷಸರಾಜೇನ ಕ್ರುದ್ಧೇನ ನೃಪತಿಸ್ತದಾ ॥ ೨೨**
**ತಲೇನಾಭಿಹತೋ ಮೂರ್ಧ್ನಿ ಸ ರಥಾನ್ನಿಪಪಾತ ಹ ।**
**ಸ ರಾಜಾ ಪತಿತೋ ಭೂಮೌ ವಿಹ್ವಲಾಂಗಃ ಪ್ರವೇಪಿತಃ ॥ ೨೩**
**ವಜ್ರದಗ್ಧ ಇವಾರಣ್ಯೇ ಸಾಲೋ ನಿಪತಿತೋ ಯಥಾ ।**
**ತಂ ಪ್ರಹಸ್ಯಾಬ್ರವೀದ್ರಕ್ಷ ಇಕ್ಷ್ವಾಕುಂ ಪೃಥಿವೀಪತಿಮ್ ॥ ೨೪**
**ಕಿಮಿದಾನೀಂ ಫಲಂ ಪ್ರಾಪ್ತಂ ತ್ವಯಾ ಮಾಂ ಪ್ರತಿಯುಧ್ಯತಾ ।**
**ತ್ರೈಲೋಕ್ಯೇ ನಾಸ್ತಿ ಯೋ ದ್ವಂದ್ವಂ ಮಮ ದದ್ಯಾನ್ನರಾಧಿಪ ॥ ೨೫**

---

ರಾವಣನ ಸಚಿವರಾದ ಮಾರೀಚ, ಶುಕ, ಸಾರಣ, ಪ್ರಹಸ್ತ–ಮೊದಲಾದವರು ಅನರಣ್ಯನ ಆಕ್ರಮಣವನ್ನೆದುರಿಸಲಾರದೆ ಭಗ್ನರಾಗಿ, ಕ್ಷುದ್ರಮೃಗಗಳಂತೆ ಓಡಿಹೋದರು ಶ್ರೀರಾಮ, ಇಕ್ಷ್ವಾಕು ಕುಲನಂದನನಾದ ಅನರಣ್ಯನು ಎಂಟುನೂರು ಬಾಣಗಳನ್ನು ದಶಗ್ರೀವನ ಶಿರಸ್ಸಿಗೆ ಗುರಿಯಿಟ್ಟು ಹೊಡೆದನು (೧೯–೨೦) ಆದರೆ ಕಾರ್ಮೋಡಗಳಿಂದ ಸುರಿಯುವ ವಾರಿಧಾರೆಗಳು ಪರ್ವತಶಿಖರವನ್ನು ತಾಡಿಸಿದಂತಾದವು ರಾವಣನಿಗೆ ಯಾವ ಗಾಯವೂ ಆಗಲಿಲ್ಲ ಆಮೇಲೆ ರಾಕ್ಷಸರಾಜನು ರುಷ್ಟನಾಗಿ ಮುಷ್ಟಿಯಿಂದ ಅನರಣ್ಯನ ತಲೆಯಮೇಲೆ ಗುದ್ದಿದನು ಆ ನೃಪಾಲನು ವಿಹ್ವಲನಾಗಿ ತತ್ತರಿಸುತ್ತ, ಸಿಡಿಲಿನ ಹೊಡೆತಕ್ಕೆ ಗುರಿಯಾದ ಸಾಲವೃಕ್ಷದಂತೆ, ರಥದಿಂದುರುಳಿಬಿದ್ದನು (೨೧–೨೩) ರಾವಣನು ಅಟ್ಟಹಾಸದಿಂದ ಹಂಗಿಸುತ್ತ ಆ ಭೂಪತಿಯನ್ನು ನೋಡಿ "ಈಗ ಹೇಗಾಯಿತು! ನನ್ನೊಡನೆ ಯುದ್ಧಕ್ಕೆ ಬಂದ ಫಲವೇನಾಯಿತು ಕಂಡೆಯಾ? ದ್ವಂದ್ವಯುದ್ಧದಲ್ಲಿ ನನ್ನನ್ನೆದುರಿಸ

ಶಂಕೇ ಪ್ರಸಕ್ತೋ ಭೋಗೇಷು ನ ಶೃಣೋಷಿ ಬಲಂ ಮಮ ।
ತಸ್ಯೈವಂ ಬ್ರುವತೋ ರಾಜಾ ಮಂದಾಸುರ್ವಾಕ್ಯಮಬ್ರವೀತ್ ॥

ಕಿಂ ಶಕ್ಯಮಿಹ ಕರ್ತುಂ ವೈ ಕಾಲೋ ಹಿ ದುರತಿಕ್ರಮಃ ।
ನ ಹ್ಯಹಂ ನಿರ್ಜಿತೋ ರಕ್ಷಸ್ತ್ವಯಾ ಚಾತ್ಮಪ್ರಶಂಸಿನಾ ॥ ೨೭

ಕಾಲೇನೈವ ವಿಪನ್ನೋಽಹಂ ಹೇತುಭೂತಸ್ತು ಮೇ ಭವಾನ್ ।
ಕಿಂ ತ್ವಿದಾನೀಂ ಮಯಾ ಶಕ್ಯಂ ಕರ್ತುಂ ಪ್ರಾಣಪರಿಕ್ಷಯೇ ॥ ೨೮

ನ ಹ್ಯಹಂ ವಿಮುಖೋ ರಕ್ಷೋ ಯುಧ್ಯಮಾನಸ್ತ್ವಯಾ ಹತಃ ।
ಇಕ್ಷ್ವಾಕುಪರಿಭಾವಿತ್ವಾದ್ವಚೋ ವಕ್ಷ್ಯಾಮಿ ರಾಕ್ಷಸ ॥ ೨೯

ಯದಿ ದತ್ತಂ ಯದಿ ಹುತಂ ಯದಿ ಮೇ ಸುಕೃತಂ ತಪಃ ।
ಯದಿ ಗುಪ್ತಾಃ ಪ್ರಜಾಃ ಸಮ್ಯಕ್ ತದಾ ಸತ್ಯಂ ವಚೋಽಸ್ತು ಮೇ ॥

ಉತ್ಪತ್ಸ್ಯತೇ ಕುಲೇ ಹ್ಯಸ್ಮಿನ್ನಿಕ್ಷ್ವಾಕೂಣಾಂ ಮಹಾತ್ಮನಾಮ್ ।
ರಾಮೋ ದಾಶರಥಿರ್ನಾಮ ಯಸ್ತೇ ಪ್ರಾಣಾನ್ ಹರಿಷ್ಯತಿ ॥ ೩೧

---

ತಕ್ಕವನು ಮೂರುಲೋಕಗಳಲ್ಲಿ ಮತ್ತೊಬ್ಬನಿಲ್ಲ! (೨೪-೨೫) ಭೋಗಾಸಕ್ತನಾದ ನೀನು ನನ್ನ ಬಲ ವೈಭವವನ್ನು ಬಹುಶಃ ಕೇಳಿಲ್ಲವೆಂದು ಕಾಣುತ್ತದೆ!" ಎಂದನು. ಪ್ರಾಣೋತ್ಕ್ರಮಣಾವಸ್ಥೆಯಲ್ಲಿದ್ದ ಅನರಣ್ಯನು ಮೆಲ್ಲಗೆ ನುಡಿದನು. "ಎಲಾ ರಾಕ್ಷಸ, ಏನು ಮಾಡಲಾದೀತು? ಕಾಲವನ್ನು ಮೀರಲು ಶಕ್ಯವಲ್ಲ ನೀನಲ್ಲ ನನ್ನನ್ನು ಜಯಿಸಿದವನು ಸುಮ್ಮನೆ ಜಂಬದ ಮಾತನ್ನಾಡುತ್ತೀಯೆ ದೈವವು ನನ್ನನ್ನು ಕೊಂದಿತು ನೀನು ನಿಮಿತ್ತ ಮಾತ್ರ ನನ್ನ ಆಯುಸ್ಸು ಮುಗಿದಿರುವಾಗ ಏನು ಮಾಡಲು ನನಗೆ ಸಾಧ್ಯ? (೨೭-೨೮) ಯುದ್ಧದಿಂದ ನಾನು ವಿಮುಖನಾಗಲಿಲ್ಲ ಹೊಡೆದಾಡುತ್ತಲೇ ಹತನಾಗಿದ್ದೇನೆ ಎಲೈ ರಾಕ್ಷಸ, ಇಕ್ಷ್ವಾಕುವಂಶೀಯರನ್ನು ಹಂಗಿಸುವೆಯಾ? ಇಲ್ಲಿ ಕೇಳು. ನಾನು ದಾನಮಾಡಿರುವೆನಾದರೆ, ಯಾಗಮಾಡಿರುವೆನಾದರೆ, ತಪಸ್ಸನ್ನಾಚರಿಸಿರುವೆನಾದರೆ, ಪ್ರಜೆಗಳನ್ನು ಯುಕ್ತರೀತಿಯಲ್ಲಿ ಪಾಲಿಸಿರುವೆನಾದರೆ—ಈಗ ನಾನು ಹೇಳುವ ಮಾತು ಸತ್ಯವಾಗಲಿ! (೨೯-೩೦) ಏನೆಂದರೆ, ಮಹಾತ್ಮರಾದ ಇಕ್ಷ್ವಾಕುಗಳ ಕುಲದಲ್ಲಿ ರಾಮ ಎಂಬವನು

ತತೋ ಜಲಧರೋದಗ್ರಸ್ತಾಡಿತೋ ದೇವದುಂದುಭಿಃ ।
ತಸ್ಮಿನ್ನುದಾಹೃತೇ ಶಾಪೇ ಪುಷ್ಪವೃಷ್ಟಿಶ್ಚ ಖಾಚ್ಚ್ಯುತಾ ॥ ೩೨

ತತಃ ಸ ರಾಜಾ ರಾಜೇಂದ್ರ ಗತಃ ಸ್ಥಾನಂ ತ್ರಿವಿಷ್ಟಪಮ್ ।
ಸ್ವರ್ಗತೇ ಚ ನೃಪೇ ತಸ್ಮಿನ್ ರಾಕ್ಷಸಃ ಸೋಽಪಸರ್ಪತ ॥ ೩೩

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋನವಿಂಶಃ ಸರ್ಗಃ



ದಶರಥನಿಗೆ ಪುತ್ರನಾಗಿ ಜನಿಸುವನು ಅವನು ನಿನ್ನನ್ನು ಸಂಹರಿಸಲಿ!" ಎಂದನು ಹೀಗೆ ಅನರಣ್ಯನು ಶಪಿಸಲಾಗಿ, ಒಡನೆಯೇ ಗುಡುಗಿನಂತೆ ದೇವದುಂದುಭಿಗಳು ಮೊಳಗಿದವು ಗಗನದಿಂದ ಹೂಮಳೆ ಸುರಿಯಿತು. ರಾಘವ, ಅನರಣ್ಯನು ಮೃತನಾಗಿ ಸ್ವರ್ಗವನ್ನು ಸೇರಿದನು ರಾಕ್ಷಸರಾಜನು ಮುಂದಕ್ಕೆ ತೆರಳಿದನು (೩೧-೩೩)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಹತ್ತೊಂಬತ್ತನೆಯ ಸರ್ಗ



## ವಿಂಶಃ ಸರ್ಗಃ

### ರಾವಣಸಂಧುಕ್ಷಣಮ್

ತತೋ ವಿತ್ರಾಸಯನ್ ಮರ್ತ್ಯಾನ್ ಪೃಥಿವ್ಯಾಂ ರಾಕ್ಷಸಾಧಿಪಃ ।
ಆಸಸಾದ ಘನೇ ತಸ್ಮಿನ್ನಾರದಂ ಮುನಿಪುಂಗವಮ್ ॥ ೧

ತಸ್ಯಾಭಿವಾದನಂ ಕೃತ್ವಾ ದಶಗ್ರೀವೋ ನಿಶಾಚರಃ ।
ಅಬ್ರವೀತ್ ಕುಶಲಂ ಪೃಷ್ಟ್ವಾ ಹೇತುಮಾಗಮನಸ್ಯ ಚ ॥ ೨

ನಾರದಸ್ತು ಮಹಾತೇಜಾ ದೇವರ್ಷಿರಮಿತಪ್ರಭಃ ।
ಅಬ್ರವೀನ್ಮೇಘಪೃಷ್ಠಸ್ಥೋ ರಾವಣಂ ಪುಷ್ಪಕೇ ಸ್ಥಿತಮ್ ॥ ೩

ರಾಕ್ಷಸಾಧಿಪತೇ ಸೌಮ್ಯ ತಿಷ್ಠ ವಿಶ್ರವಸಃ ಸುತ ।
ಪ್ರೀತೋಽಸ್ಮ್ಯಭಿಜನೋಪೇತ ವಿಕ್ರಮೈರೂರ್ಜಿತೈಸ್ತವ ॥ ೪

## ಸರ್ಗ ೨೦

ಲೋಕಹಿಂಸಕನಾದ ರಾವಣನನ್ನು ನೋಡಿ ನಾರದಮುನಿಯು "ಈ ಮರ್ತ್ಯ ಲೋಕವನ್ನು ಪೀಡಿಸುವುದೇಕೆ? ಯಮನನ್ನು ನಿಗ್ರಹಿಸು" ಎಂದು ಹೇಳುವುದು ರಾವಣನು ಒಪ್ಪಿಕೊಳ್ಳುವುದು

ಶ್ರೀರಾಮ, ರಾಕ್ಷಸೇಶ್ವರನು ಪೃಥ್ವಿಯಲ್ಲಿದ್ದ ಮನುಷ್ಯರೆಲ್ಲರನ್ನೂ ತಲ್ಲಣಗೊಳಿಸುತ್ತ ಸಂಚರಿಸುತ್ತಿರುವಾಗ, ಒಂದುಸಲ ಮೇಘಪಂಕ್ತಿಯ ಬಳಿಯಲ್ಲಿ ನಿಂತಿದ್ದ ನಾರದಮುನಿಗಳನ್ನು ಕಂಡನು ದಶಗ್ರೀವನು ಆ ಮುನಿಗಳಿಗೆ ಅಭಿವಂದಿಸಿ ಕುಶಲವನ್ನು ಕೇಳಿ, ಅಲ್ಲಿಗೆ ಬಂದ ಕಾರಣವನ್ನು ವಿಚಾರಿಸಿದನು (೧-೨) ಮಹಾತೇಜೋನಿಧಿಗಳೂ ದೇವರ್ಷಿಗಳೂ ಆದ ನಾರದರು ಮೇಘರಾಜಿಯಮೇಲೆ ನಿಂತುಕೊಂಡು, ಪುಷ್ಪಕವಿಮಾನದಲ್ಲಿದ್ದ ರಾವಣನನ್ನು ವೀಕ್ಷಿಸಿ ಹೀಗೆಂದರು. "ಸೌಮ್ಯ-ರಾಕ್ಷಸೇಶ್ವರ, ಸ್ವಲ್ಪ ನಿಲ್ಲು, ವಿಶ್ರವಸ್ಸಿನ ಸುತನಾಗಿ ಉತ್ತಮಕುಲದಲ್ಲಿ ಜನಿಸಿದ್ದೀಯೆ ನಿನ್ನ ಅದ್ಭುತಪರಾಕ್ರಮ

ವಿಷ್ಣುನಾ ದೈತ್ಯಘಾತೈಶ್ಚ ಗಂಧರ್ವೋರಗಧರ್ಷಣೈಃ ।
ತ್ವಯಾ ಸಮಂ ವಿಮರ್ದೈಶ್ಚ ಭೃಶಂ ಹಿ ಪರಿತೋಷಿತಃ ॥ ೫
ಕಿಂಚಿದ್ವಕ್ಷ್ಯಾಮಿ ತಾವತ್ತೇ ಶ್ರೋತವ್ಯಂ ಶ್ರೋಷ್ಯಸೇ ಯದಿ ।
ತನ್ಮೇ ನಿಗದತಸ್ತಾತ ಸಮಾಧಿಂ ಶ್ರವಣೇ ಕುರು ॥ ೬
ಕಿಮಯಂ ವಧ್ಯತೇ ತಾತ ತ್ವಯಾವಧ್ಯೇನ ದೈವತೈಃ ।
ಹತ ಏವ ಹ್ಯಯಂ ಲೋಕೋ ಯದಾ ಮೃತ್ಯುವಶಂ ಗತಃ ॥ ೭
ದೇವದಾನವದೈತ್ಯಾನಾಂ ಯಕ್ಷಗಂಧರ್ವರಕ್ಷಸಾಮ್ ।
ಅವಧ್ಯೇನ ತ್ವಯಾ ಲೋಕಃ ಕ್ಲೇಷ್ಟುಂ ಯುಕ್ತೋ ನ ಮಾನುಷಃ ॥
ನಿತ್ಯಂ ಶ್ರೇಯಸಿ ಸಂಮೂಢಂ ಮಹದ್ಭಿರ್ವ್ಯಸನೈರ್ವೃತಮ್ ।
ಹನ್ಯಾತ್ ಕಸ್ತಾದೃಶಂ ಲೋಕಂ ಜರಾವ್ಯಾಧಿಶತೈರ್ಯುತಮ್ ॥ ೯
ತೈಸ್ತೈರನಿಷ್ಟೋಪಗಮೈರಜಸ್ರಂ ಯತ್ರ ಕುತ್ರ ಕಃ ।
ಮತಿಮಾನ್ ಮಾನುಷೇ ಲೋಕೇ ಯುದ್ಧೇನ ಪ್ರಣಯೀ ಭವೇತ್॥

---

ಗಳನ್ನು ಕಂಡು ಸಂತುಷ್ಟನಾಗಿದ್ದೇನೆ (೩-೪) (ನನಗೆ ಆನಂದವನ್ನುಂಟು ಮಾಡತಕ್ಕವರು ಈರ್ವರು ವಿಷ್ಣು ಮತ್ತು ನೀನು!) ವಿಷ್ಣುವು ದೈತ್ಯರನ್ನು ಘಾತಿಸುವಾಗಲೂ ನೀನು ಗಂಧರ್ವೋರಗಾದಿಗಳನ್ನು ಸದೆಬಡಿಯು ವಾಗಲೂ—ನಿಮ್ಮ ಶೌರ್ಯವನ್ನು ಕಂಡು ನನಗೆ ಸಮವಾದ ಆನಂದವಾಗು ವುದು! (೫) ನಿನಗೆ ಒಂದು ವಿಷಯವನ್ನು ಹೇಳಬೇಕೆಂದಿದ್ದೇನೆ ಇಷ್ಟ ವಿದ್ದರೆ ಕೇಳು ಏಕಾಗ್ರತೆಯಿಂದ ಆಲಿಸು ಅಪ್ಪಾ-ರಾವಣ, ನೀನು ದೇವತೆ ಗಳಿಗೂ ಅವಧ್ಯನಾಗಿದ್ದೀಯೆ ಇಂತಹ ನೀನು ಈ ಮಾನವರನ್ನು ಕೊಲ್ಲು ವುದಾದರೂ ಏಕೆ? ಒಂದು ದಿನ ಸಾಯಲೇಬೇಕಾದ ಈ ಜನರು ಹೇಗಿದ್ದರೂ ಸತ್ತವರೇ! (೬-೭) ದೇವದಾನವದೈತ್ಯರಿಗೂ ಯಕ್ಷಗಂಧರ್ವರಾಕ್ಷಸರಿಗೂ ಅವಧ್ಯನಾಗಿರುವ ನೀನು ಈ ಮನುಷ್ಯರನ್ನು ಹೀಗೆ ಪೀಡಿಸುವುದು ಯುಕ್ತ ವಲ್ಲ. ಯಾವುದರಿಂದ ತಮಗೆ ಶ್ರೇಯಸ್ಸು ಎಂಬುದನ್ನರಿಯದ ಮೂಢಾತ್ಮರು ಈ ಮನುಷ್ಯರು ನಾನಾಬಗೆಯ ದುಃಖಗಳಿಂದ ಪೀಡಿತರು. ಮುಪ್ಪಿನಿಂದಲೂ ನೂರಾರು ವ್ಯಾಧಿಗಳಿಂದಲೂ ನರಳುತ್ತಿದ್ದಾರೆ (೮-೯) ನಾನಾವಿಧದ ಅನಿಷ್ಟಗಳಿಂದ ಸರ್ವದಾ ಸಂಕಷ್ಟದಲ್ಲಿರುವ ಮಾನವರ ಈ ಲೋಕದಲ್ಲಿ,

ಕ್ಷೀಯಮಾಣಂ ದೈವಹತಂ ಕ್ಷುತ್ಪಿಪಾಸಾಜರಾದಿಭಿಃ ।
ವಿಷಾದಶೋಕಸಂಮೂಢಂ ಲೋಕಂ ತ್ವಂ ಕ್ಷಪಯಸ್ವ ಮಾ ॥ ೧೧

ಪಶ್ಯ ತಾವನ್ಮಹಾಬಾಹೋ ರಾಕ್ಷಸೇಶ್ವರ ಮಾನುಷಮ್ ।
ಮೂಢಮೇವಂ ವಿಚಿತ್ರಾರ್ಥಂ ಯಸ್ಯ ನ ಜ್ಞಾಯತೇ ಗತಿಃ ॥ ೧೨

ಕ್ವಚಿದ್ವಾದಿತ್ರನೃತ್ಯಾದಿ ಸೇವ್ಯತೇ ಮುದಿತೈರ್ಜನೈಃ ।
ರುದ್ಯತೇ ಚಾಪರೈರಾರ್ತೈರ್ಧಾರಾಶ್ರುನಯನಾನನೈಃ ॥ ೧೩

ಮಾತಾಪಿತೃಸುತಸ್ನೇಹೈರ್ಭಾರ್ಯಾಬಂಧುಮನೋರಮೈಃ ।
ಮೋಹಿತೋಽಯಂ ಜನೋ ಧ್ವಸ್ತಃ ಕ್ಲೇಶಂ ಸ್ವಂ ನಾವಬುಧ್ಯತೇ ॥

ಅಲಮೇನಂ ಪರಿಕ್ಲಿಶ್ಯ ಲೋಕಂ ಮೋಹನಿರಾಕೃತಮ್ ।
ಜಿತ ಏವ ತ್ವಯಾ ಸೌಮ್ಯ ಮರ್ತ್ಯಲೋಕೋ ನ ಸಂಶಯಃ ॥ ೧೫

---

ಎಲ್ಲೆಂದರಲ್ಲಿ ನುಗ್ಗಿ ಯುದ್ಧಮಾಡಲು ಯಾವ ವಿಚಾರಶೀಲನಿಗೆ ಇಚ್ಛೆಯಾದೀತು? ಹಸಿವು ಬಾಯಾರಿಕೆ ಮುಪ್ಪು ಮುಂತಾದ ಕ್ಲೇಶಗಳಿಂದ ಮೊದಲೇ ಕ್ಷೀಣಿಸಿಹೋಗುತ್ತಿದೆ ಈ ಮರ್ತ್ಯಲೋಕ ದೈವಹತವಾದದ್ದು ಈ ಲೋಕ ಕಷ್ಟನಷ್ಟಗಳಿಂದ ಕಂಗೆಟ್ಟಿರುವ ಈ ಜನರನ್ನು, ರಾಕ್ಷಸೇಂದ್ರ, ನೀನು ಮತ್ತೆ ವಿನಾಶಗೊಳಿಸಬೇಡ (೧೦-೧೧) ಮಹಾಬಾಹು, ಈ ಮಾನವರ ಪರಿಸ್ಥಿತಿಯನ್ನಾದರೂ ನೋಡು ಮುಂದಿನ ಗತಿಯೇನೆಂಬುದನ್ನರಿಯದ ಈ ಮೂರ್ಖರು ವಿಚಿತ್ರವಾದ ಭೋಗದಲ್ಲಿ ನಿರತರಾಗಿದ್ದಾರೆ ಒಂದು ಕಡೆ ವಾದ್ಯ ನೃತ್ಯ ಮುಂತಾದ ಪ್ರಮೋದಗಳಲ್ಲಿ ಕೆಲವರು ಮಗ್ನರಾಗಿರುತ್ತಾರೆ ಇನ್ನೊಂದು ಕಡೆ ಶೋಕಾರ್ತರಾದ ಕೆಲವರು ಧಾರಾಕಾರವಾಗಿ, ಕಣ್ಣೀರು ಸುರಿಸುತ್ತ ಗೋಳೋ ಎಂದು ಅಳುತ್ತಿರುತ್ತಾರೆ! (೧೨-೧೩) ತಾಯಿ, ತಂದೆ, ಮಗ, ಮಡದಿ, ಬಂಧು—ಎಂಬ ಆಪಾತರಮಣೀಯವಾದ ಸ್ನೇಹ ಪಾಶಗಳಿಂದ ಮೂಢರಾಗಿರುವ ಈ ಮಾನವರು ಮೊದಲೇ ಹಾಳಾಗಿಹೋಗಿದ್ದಾರೆ ತಮ್ಮ ಕಷ್ಟವನ್ನೇ ತಾವು ಗುರುತಿಸಿಕೊಳ್ಳದ ಅವಿವೇಕಿಗಳು ಇವರು ಅಜ್ಞಾನದಿಂದ ವಿಧ್ವಸ್ತರಾಗಿರುವ ಈ ಜನರನ್ನು ಪೀಡಿಸಬೇಡ ಸೌಮ್ಯ-ದಶಗ್ರೀವ, ಈ ಭೂಲೋಕವನ್ನು ನೀನು ಸರ್ವಥಾ ಗೆದ್ದಿರುವೆ, ಸಂದೇಹವಿಲ್ಲ

ಅವಶ್ಯಮೇಭಿಃ ಸರ್ವೈಶ್ಚ ಗಂತವ್ಯಂ ಯಮಸಾದನಮ್ ।
ತನ್ನಿಗೃಹ್ಣೀಷ್ವ ಪೌಲಸ್ತ್ಯ ಯಮಂ ಪರಪುರಂಜಯ ॥ ೧೬

ತಸ್ಮಿನ್ ಜಿತೇ ಜಿತಂ ಸರ್ವಂ ಭವತ್ಯೇವ ನ ಸಂಶಯಃ ।
ಏವಮುಕ್ತಸ್ತು ಲಂಕೇಶೋ ದೀಪ್ಯಮಾನಂ ಸ್ವತೇಜಸಾ ॥ ೧೭

ಅಬ್ರವೀನ್ನಾರದಂ ತತ್ರ ಸಂಪ್ರಹಸ್ಯಾಭಿವಾದ್ಯ ಚ ।
ಮಹರ್ಷೇ ದೇವಗಂಧರ್ವವಿಹಾರ ಸಮರಪ್ರಿಯ ॥ ೧೮

ಅಹಂ ಸಮುದ್ಯತೋ ಗಂತುಂ ವಿಜಯಾರ್ಥಂ ರಸಾತಲಮ್ ।
ತತೋ ಲೋಕತ್ರಯಂ ಜಿತ್ವಾ ಸ್ಥಾಪ್ಯ ನಾಗಾನ್ ಸುರಾನ್ ವಶೇ ॥

ಸಮುದ್ರಮಮೃತಾರ್ಥಂ ಚ ಮಥಿಷ್ಯಾಮಿ ರಸಾಲಯಮ್ ।
ಅಥಾಬ್ರವೀದ್ದಶಗ್ರೀವಂ ನಾರದೋ ಭಗವಾನೃಷಿಃ ॥ ೨೦

ಕ್ವ ಖಲ್ವಿದಾನೀಂ ಮಾರ್ಗೇಣ ತ್ವಯಾ ಹ್ಯನ್ಯೇನ ಗಮ್ಯತೇ ।
ಅಯಂ ಖಲು ಸುದುರ್ಗಮ್ಯಃ ಪ್ರೇತರಾಜಪುರಂ ಪ್ರತಿ ॥ ೨೧

---

(೧೪-೧೫) ಈ ಮನುಷ್ಯರು ಹೇಗಿದ್ದರೂ ಯಮಲೋಕಕ್ಕೆ ಹೋಗಿಯೇ ತೀರುವವರು ಆದ್ದರಿಂದ, ಪೌಲಸ್ತ್ಯ, ನೀನು ಯಮನಮೇಲೆ ಕೈಮಾಡಿ ಅವನನ್ನು ನಿಗ್ರಹಿಸು! ಯಮನನ್ನು ನೀನು ಗೆದ್ದೆಯಾದರೆ, ಸಕಲವನ್ನೂ ಗೆದ್ದಂತೆಯೇ" ಎಂದರು (೧೬-೧೭) ಆಗ ರಾವಣನು ಗಟ್ಟಿಯಾಗಿ ನಕ್ಕು ತೇಜಸ್ವಿಗಳಾದ ನಾರದರಿಗೆ ನಮಸ್ಕರಿಸಿ "ಮಹರ್ಷಿಗಳೆ, ನೀವು ದೇವ ಗಂಧರ್ವರೊಡನೆ ವಿಹರಿಸತಕ್ಕವರು ನೀವು ಕಲಹಪ್ರಿಯರೆಂಬುದು ನನಗೆ ಗೊತ್ತು! ಈಗ ನಾನು ರಸಾತಳಕ್ಕೆ ವಿಜಯಯಾತ್ರೆಯನ್ನು ಕೈಗೊಂಡಿದ್ದೇನೆ ರಸಾತಳವನ್ನು ಗೆದ್ದಮೇಲೆ ನಾಗರನ್ನೂ ದೇವತೆಗಳನ್ನೂ ನನ್ನ ಅಧೀನತೆ ಗೊಳಪಡಿಸಿಕೊಂಡು, ಅಮೃತಕ್ಕೋಸ್ಕರ ಸಮುದ್ರಮಥನಮಾಡುತ್ತೇನೆ!" ಎಂದು ನುಡಿದನು (೧೮-೨೦) ಅದನ್ನು ಕೇಳಿ ನಾರದಮಹರ್ಷಿಗಳು "ಓಹೊ! ಹಾಗಿದ್ದರೆ ಇದೇಕೆ ಬೇರೆ ದಾರಿಯಲ್ಲಿ ಹೊರಟಿದ್ದೀಯೆ? ಈ ದಾರಿಯು ಯಮರಾಜನ ನಗರಕ್ಕೆ ಹೋಗುತ್ತದೆ! ಶತ್ರುವಿಧ್ವಂಸಕ,

ಮಾರ್ಗೋ ಗಚ್ಛತಿ ದುರ್ಧರ್ಷೋ ಯಮಸ್ಯಾಮಿತ್ರಕರ್ಶನ ।
ಸ ತು ಶಾರದಮೇಘಾಭಂ ಹಾಸಂ ಮುಕ್ತ್ವಾ ದಶಾನನಃ ॥ ೨೨

ಉವಾಚ ಕೃತಮಿತ್ಯೇವ ವಚನಂ ಚೇದಮಬ್ರವೀತ್ ।
ತಸ್ಮಾದೇವಮಹಂ ಬ್ರಹ್ಮನ್ ವೈವಸ್ವತವಧೋದ್ಯತಃ ॥ ೨೩

ಗಚ್ಛಾಮಿ ದಕ್ಷಿಣಾಮಾಶಾಂ ಯತ್ರ ಸೂರ್ಯಾತ್ಮಜೋ ನೃಪಃ ।
ಮಯಾ ಹಿ ಭಗವನ್ ಕ್ರೋಧಾತ್ ಪ್ರತಿಜ್ಞಾತಂ ರಣಾರ್ಥಿನಾ ॥

ಅವಜೇಷ್ಯಾಮಿ ಚತುರೋ ಲೋಕಪಾಲಾನಿತಿ ಪ್ರಭೋ ।
ತದಿಹ ಪ್ರಸ್ಥಿತೋಽಹಂ ವೈ ಪ್ರೇತರಾಜಪುರಂ ಪ್ರತಿ ॥ ೨೫

ಪ್ರಾಣಿಸಂಕ್ಲೇಶಕರ್ತಾರಂ ಯೋಜಯಿಷ್ಯಾಮಿ ಮೃತ್ಯುನಾ ।
ಏವಮುಕ್ತ್ವಾ ದಶಗ್ರೀವೋ ಮುನಿಂ ತಮಭಿವಾದ್ಯ ಚ ॥ ೨೬

---

ಬಹು ಕಠಿಣವಾದ ಮಾರ್ಗವಿದು" ಎಂದರು (೨೧) ರಾವಣನು ಖೊಕ್ಕನೆ ನಕ್ಕು, ಶರತ್ಕಾಲದ ಮೇಘದಂತೆ ಶುಭ್ರಕಾಂತಿಯುಳ್ಳ* ನಾರದರನ್ನು ನೋಡಿ "ಭಲಾ! ಒಳ್ಳೆಯದೇ ಆಯಿತು! ಹಾಗಿದ್ದರೆ, ಮುನಿಗಳೆ, ನಾನು ಯಮನನ್ನು ವಧಿಸುವುದಕ್ಕಾಗಿಯೇ ದಕ್ಷಿಣ ದಿಕ್ಕನ್ನು ಹಿಡಿದು ಹೋಗುವೆನು ಅಲ್ಲಿಯೇ ಅಲ್ಲವೆ ಸೂರ್ಯಪುತ್ರನಾದ ಯಮರಾಜನಿದ್ದಾನೆ? ಭಗವನ್, ಒಮ್ಮೆ ನಾನು ಸಿಟ್ಟಿನಿಂದ ರಣೋತ್ಸುಕನಾಗಿ ನಾಲ್ವರು ದಿಕ್ಪಾಲರನ್ನೂ ಗೆಲ್ಲುವೆನೆಂದು ಪ್ರತಿಜ್ಞೆಮಾಡಿದ್ದೇನೆ (೨೨-೨೪) ಆದ್ದರಿಂದ ನಾನು ಯಮರಾಜಪುರಕ್ಕೆ ಧಾಳಿಯಿಡುವೆನು ಸಕಲ ಪ್ರಾಣಿಗಳನ್ನೂ ಕೊಲ್ಲುವ ಯಮನನ್ನೇ ಕೊಲ್ಲುವೆನು!" ಎಂದು ಹೇಳಿ, ನಾರದರಿಗೆ ವಂದಿಸಿ ಮಂತ್ರಿಗಳೊಡನೆ ಉತ್ಸಾಹದಿಂದ ದಕ್ಷಿಣ ದಿಕ್ಕನ್ನು ಹಿಡಿದು ನಡೆದನು (೨೫-೨೬)

---

* 'ಶಾರದಮೇಘಾಭಂ' ಎಂದು ಮೂಲವಿದೆ. ಇದು ನಾರದರಿಗೆ ವಿಶೇಷಣವೆಂದು ವ್ಯಾಖ್ಯಾನಕಾರರು ಬರೆದಿದ್ದಾರೆ ಆದರೆ ಇದು 'ಹಾಸಂ' ಎಂಬುದಕ್ಕೆ ವಿಶೇಷಣವೆನ್ನುವುದು ಯುಕ್ತವೆಂದು ತೋರುತ್ತದೆ ನಗು ಬೆಳ್ಳಗಿರುತ್ತದೆಯೆಂಬುದು ಕವಿಸಮಯ.

ಪ್ರಯಯೌ ದಕ್ಷಿಣಾಮಾಶಾಂ ಪ್ರಹೃಷ್ಟಃ ಸಹ ಮಂತ್ರಿಭಿಃ ।
ನಾರದಸ್ತು ಮಹಾತೇಜಾ ಮುಹೂರ್ತಂ ಧ್ಯಾನಮಾಸ್ಥಿತಃ ॥ ೨೭

ಚಿಂತಯಾಮಾಸ ವಿಪ್ರೇಂದ್ರೋ ವಿಧೂಮ ಇವ ಪಾವಕಃ ।
ಯೇನ ಲೋಕಾಸ್ತ್ರಯಃ ಸೇಂದ್ರಾಃ ಕ್ಲಿಶ್ಯಂತೇ ಸಚರಾಚರಾಃ ॥ ೨೮

ಕ್ಷೀಣೇ ಚಾಯುಷಿ ಧರ್ಮೇಣ ಸ ಕಾಲೋ ಜೇಷ್ಯತೇ ಕಥಮ್ ।
ಸ್ವದತ್ತಕೃತಸಾಕ್ಷೀ ಯೋ ದ್ವಿತೀಯ ಇವ ಪಾವಕಃ ॥ ೨೯

ಲಬ್ಧಸಂಜ್ಞಾ ವಿಚೇಷ್ಟಂತೇ ಲೋಕಾ ಯಸ್ಯ ಮಹಾತ್ಮನಃ ।
ಯಸ್ಯ ನಿತ್ಯಂ ತ್ರಯೋ ಲೋಕಾ ವಿದ್ರವಂತಿ ಭಯಾರ್ದಿತಾಃ ॥ ೩೦

ತಂ ಕಥಂ ರಾಕ್ಷಸೇಂದ್ರೋಽಸೌ ಸ್ವಯಮೇವ ಗಮಿಷ್ಯತಿ ।
ಯೋ ವಿಧಾತಾ ಚ ಧಾತಾ ಚ ಸುಕೃತಂ ದುಷ್ಕೃತಂ ತಥಾ ॥ ೩೧

ತ್ರೈಲೋಕ್ಯಂ ವಿಜಿತಂ ಯೇನ ತಂ ಕಥಂ ವಿಜಯಿಷ್ಯತೇ ।
ಅಪರಂ ಕಿಂತು ಕೃತ್ವೈವ ವಿಧಾನಂ ಸಂವಿಧಾಸ್ಯತಿ ॥ ೩೨

---

ಇತ್ತ ನಾರದರು, ಧೂಮರಹಿತ ಅಗ್ನಿಯಂತೆ, ಒಂದು ಮುಹೂರ್ತಕಾಲ ಧ್ಯಾನಸ್ತಿಮಿತರಾಗಿ ನಿಂತರು ಅವರು ತಮ್ಮಲ್ಲಿಯೇ "ಅಹಾ! ಏನಿದು? ಮೂರು ಲೋಕಗಳು–ಇಂದ್ರಾದಿ ಚರಾಚರಪ್ರಪಂಚಗಳು ಆಯುಸ್ಸು ಕ್ಷೀಣಿಸಿದಾಗ ಯಾರ ದಂಡನೆಗೆ ಒಳಪಡುತ್ತವೆಯೋ, ಯಾರು ಧರ್ಮಮಾರ್ಗದಿಂದ ಸಕಲವನ್ನೂ ನಿಯಂತ್ರಿಸುವನೋ ಅಂಥ ಕಾಲಯಮನನ್ನು ಜಯಿಸಲು ಹೇಗೆ ಸಾಧ್ಯ? ಕೊಡುವ ದಾನಕ್ಕೆ ಮಾಡುವ ಕರ್ಮಕ್ಕೆ ಯಾವನು ಸಾಕ್ಷಿಯೋ, ಯಾವನು ಎರಡನೆಯ ಅಗ್ನಿಯಂತೆ ತೇಜೋನಿಧಿಯೋ ಅಂತಹ ಯಮನನ್ನು ಜಯಿಸುವುದು ಹೇಗೆ? (೨೭-೨೯) ಯಾವ ಮಹಾತ್ಮನ ಅನುಗ್ರಹದಿಂದ ಜನರು ಜೀವಂತರಾಗಿದ್ದು ಕಾರ್ಯಗಳನ್ನು ನಡೆಸುವರೋ, ಮೂರು ಲೋಕಗಳು ಯಾರಿಗೆ ಹೆದರಿ ತತ್ತರಿಸುತ್ತವೆಯೋ ಅಂತಹ ಕಾಲಪುರುಷನನ್ನು ಜಯಿಸುವುದು ಹೇಗೆ? ಈ ರಾಕ್ಷಸರಾಜನು ತಾನಾಗಿಯೇ ಹೋಗಿ ಅವನನ್ನು ಹೇಗೆ ಎದುರಿಸಿಯಾನು? ಜನರ ಪಾಪಪುಣ್ಯಗಳಿಗೆ ಯಾವನು ಪ್ರೇರಕನೂ ಫಲದಾಯಕನೂ ಆಗಿರುವನೋ ಅಂತಹ ಕಾಲನನ್ನು ರಾವಣನು ಗೆಲ್ಲುವನೆಂದರೇನು? (೩೦-೩೧) ಲೋಕತ್ರಯವನ್ನೇ ಮೆಟ್ಟಿ

ಕೌತುಹಲಸಮುತ್ಪನ್ನೋ ಯಾಸ್ಯಾಮಿ ಯಮಸಾದನಮ್ ।
ವಿಮರ್ದಂ ದ್ರಷ್ಟುಮನಯೋರ್ಯಮರಾಕ್ಷಸಯೋಃ ಸ್ವಯಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ವಿಂಶಃ ಸರ್ಗಃ

---

## ಏಕವಿಂಶಃ ಸರ್ಗಃ

### ಯಮರಾವಣಯುದ್ಧಮ್

ಏವಂ ಸಂಚಿತ್ಯ ವಿಪ್ರೇಂದ್ರೋ ಜಗಾಮ ಲಘುವಿಕ್ರಮಃ ।
ಆಖ್ಯಾತುಂ ತದ್ಯಥಾವೃತ್ತಂ ಯಮಸ್ಯ ಸದನಂ ಪ್ರತಿ ॥ ೧
ಅಪಶ್ಯತ್ ಸ ಯಮಂ ತತ್ರ ದೇವಮಗ್ನಿಪುರಸ್ಕೃತಮ್ ।
ವಿಧಾನಮುಪತಿಷ್ಠಂತಂ ಪ್ರಾಣಿನೋ ಯಸ್ಯ ಯಾದೃಶಮ್ ॥ ೨

---

ನಿಂತಿರುವ ಯಮನನ್ನು ಈತನು ಹೇಗೆ ಜಯಿಸಿಯಾನು? ಸರ್ವಕಾರ್ಯಗಳಿಗೂ ಕಾಲವೇ ಸಾಧನವಾಗಿರುವಾಗ, ಕಾಲವನ್ನುಲ್ಲಂಘಿಸಿ ಈ ರಾವಣನು ಯಾವ ಸಾಧನವನ್ನು ಅವಲಂಬಿಸಬಹುದು? ನನಗಂತೂ ಬಹಳ ಕುತೂಹಲವುಂಟಾಗಿದೆ! ಯಮನಿಗೂ ಈ ರಾಕ್ಷಸನಿಗೂ ನಡೆಯುವ ಯುದ್ಧವನ್ನು ಕಣ್ಣಾರೆ ನೋಡಲು ನಾನೇ ಯಮಲೋಕಕ್ಕೆ ತೆರಳುವೆನು!" ಎಂದು ಆಲೋಚಿಸಿದರು (೩೨-೩೩)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತನೆಯ ಸರ್ಗ

---

## ಸರ್ಗ ೨೧

ರಾವಣನು ಯಮಲೋಕಕ್ಕೆ ಹೋಗಿ ನರಕದಲ್ಲಿದ್ದವರನ್ನು ಬಿಡುಗಡೆ ಮಾಡಿಸುವುದು ಯಮದೂತರಿಗೂ ರಾವಣನಿಗೂ ಘೋರವಾದ ಯುದ್ಧ.

ಶ್ರೀರಾಮ, ನಾರದರು ಹೀಗೆ ಆಲೋಚಿಸಿ ಎಲ್ಲವನ್ನೂ ಯಮನಿಗೆ ತಿಳಿಸಬೇಕೆಂದು ತ್ವರೆಯಿಂದ ಯಮಲೋಕಕ್ಕೆ ಹೋದರು ಅಲ್ಲಿ ಅಗ್ನಿಯನ್ನು ಸಾಕ್ಷಿಯಾಗಿ ಇಟ್ಟುಕೊಂಡು ಪ್ರಾಣಿಗಳ ಕರ್ಮಕ್ಕೆ ಅನುಗುಣವಾಗಿ

ಸ ತು ದೃಷ್ಟ್ವಾ ಯಮಃ ಪ್ರಾಪ್ತಂ ಮಹರ್ಷಿಂ ತತ್ರ ನಾರದಮ್ ।
ಅಬ್ರವೀತ್ ಸುಖಮಾಸೀನಮರ್ಘಮಾವೇದ್ಯ ಧರ್ಮತಃ ॥ ೩

ಕಚ್ಚಿತ್ ಕ್ಷೇಮಂ ನು ದೇವರ್ಷೇ ಕಚ್ಚಿದ್ಧರ್ಮೋ ನ ನಶ್ಯತಿ ।
ಕಿಮಾಗಮನಕೃತ್ಯಂ ತೇ ದೇವಗಂಧರ್ವಸೇವಿತ ॥ ೪

ಅಬ್ರವೀತ್ತು ತದಾ ವಾಕ್ಯಂ ನಾರದೋ ಭಗವಾನೃಷಿಃ ।
ಶ್ರೂಯತಾಮಭಿಧಾಸ್ಯಾಮಿ ವಿಧಾನಂ ಚ ವಿಧೀಯತಾಮ್ ॥ ೫

ಏಷ ನಾಮ್ನಾ ದಶಗ್ರೀವಃ ಪಿತೃರಾಜ ನಿಶಾಚರಃ ।
ಉಪಯಾತಿ ವಶಂ ನೇತುಂ ವಿಕ್ರಮೈಸ್ತ್ವಾಂ ಸುದುರ್ಜಯಮ್ ॥ ೬

ಏತೇನ ಕಾರಣೇನಾಹಂ ತ್ವರಿತೋ ಹ್ಯಾಗತಃ ಪ್ರಭೋ ।
ದಂಡಪ್ರಹರಣಸ್ಯಾದ್ಯ ತವ ಕಿಂ ನು ಭವಿಷ್ಯತಿ ॥ ೭

ಏತಸ್ಮಿನ್ನಂತರೇ ದೂರಾದಂಶುಮಂತಮಿವೋದಿತಮ್ ।
ದದರ್ಶ ದೀಪ್ತಮಾಯಾಂತಂ ವಿಮಾನಂ ತಸ್ಯ ರಕ್ಷಸಃ ॥ ೮

---

ನಿಗ್ರಹಾನುಗ್ರಹಗಳನ್ನು ವಿಧಿಸುತ್ತಿದ್ದ ಯಮಧರ್ಮನನ್ನು ಕಂಡರು (೧-೨) ನಾರದಮುನಿಗಳು ಆಗಮಿಸಿದ್ದನ್ನು ವೀಕ್ಷಿಸಿದ ಯಮಧರ್ಮರಾಜನು, ಅವರಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು ಸತ್ಕರಿಸಿ ಪೀಠದಲ್ಲಿ ಕುಳ್ಳಿರಿಸಿ, "ದೇವರ್ಷಿಗಳೆ, ಎಲ್ಲವೂ ಕುಶಲವಷ್ಟೆ? ಧರ್ಮಮಾರ್ಗಕ್ಕೆ ಚ್ಯುತಿಯಿಲ್ಲವಷ್ಟೆ? ದೇವಗಂಧರ್ವರಿಂದ ಸೇವಿತರಾಗಿ ಮಹಾಮಹಿಮರಾದ ನೀವು ಇಷ್ಟು ದೂರ ಆಗಮಿಸಿದ ಕಾರ್ಯಭಾರವೇನು?" ಎಂದು ಕೇಳಿದನು (೩-೪) ಆಗ ನಾರದಮಹರ್ಷಿಗಳು "ಧರ್ಮರಾಜ, ಹೇಳತಕ್ಕದ್ದಿದೆ, ಆಲಿಸು. ಮುಂದಿನ ಕರ್ತವ್ಯಕ್ಕೆ ಅಣಿಮಾಡಿಕೊ ದಶಗ್ರೀವನೆಂಬ ಒಬ್ಬ ನಿಶಾಚರನಿರುವನಷ್ಟೆ ದುರ್ಜಯನಾದ ನಿನ್ನನ್ನು ಪರಾಜಯಗೊಳಿಸಬೇಕೆಂದು ಆತನು ಬರುತ್ತಿದ್ದಾನೆ! ಪಿತೃರಾಜ, ಈ ವೃತ್ತಾಂತವನ್ನು ತಿಳಿಸಬೇಕೆಂದು ನಾನು ತ್ವರೆಯಿಂದ ಬಂದಿದ್ದೇನೆ ನಾನು ಬಂದ ಕಾರಣ ಇದೇ ಆದರೆ ಕಾಲದಂಡವನ್ನು ಹಿಡಿದಿರುವ ನಿನಗೆ ಅವನಿಂದ ಏನಾದೀತು!" ಎಂದರು (೫-೭) ಅಷ್ಟರಲ್ಲಿ ರಾವಣನ ಪುಷ್ಪಕವಿಮಾನವು, ಉದಿತವಾದ ಸೂರ್ಯಮಂಡಲವೋ ಎಂಬಂತೆ

ತಂ ದೇಶಂ ಪ್ರಭಯಾ ತಸ್ಯ ಪುಷ್ಪಕಸ್ಯ ಮಹಾಬಲಃ ।
ಕೃತ್ವಾ ವಿತಿಮಿರಂ ಸರ್ವಂ ಸಮೀಪಂ ಸೋಽಭ್ಯವರ್ತತ ॥ ೯
ಸೋಽಪಶ್ಯತ್ ಸುಮಹಾಬಾಹುರ್ದಶಗ್ರೀವಸ್ತತಸ್ತತಃ ।
ಪ್ರಾಣಿನಃ ಸುಕೃತಂ ಕರ್ಮ ಭುಂಜಾನಾಂಶ್ಚೈವ ದುಷ್ಕೃತಮ್ ॥ ೧೦
ಅಪಶ್ಯತ್ ಸೈನಿಕಾಂಶ್ಚಾಸ್ಯ ಯಮಸ್ಯಾನುಚರೈಃ ಸಹ ।
ಯಮಸ್ಯ ಪುರುಷೈರುಗ್ರೈರ್ಘೋರರೂಪೈರ್ಭಯಾನಕೈಃ ॥ ೧೧
ದದರ್ಶ ವಧ್ಯಮಾನಾಂಶ್ಚ ಕ್ಲಿಶ್ಯಮಾನಾಂಶ್ಚ ದೇಹಿನಃ ।
ಕ್ರೋಶತಶ್ಚ ಮಹಾನಾದಂ ತೀವ್ರನಿಷ್ಟನತತ್ಪರಾನ್ ॥ ೧೨
ಕೃಮಿಭಿರ್ಭಕ್ಷ್ಯಮಾಣಾಂಶ್ಚ ಸಾರಮೇಯೈಶ್ಚ ದಾರುಣೈಃ ।
ಶ್ರೋತ್ರಾಯಾಸಕರಾ ವಾಚೋ ವದತಶ್ಚ ಭಯಾವಹಾಃ ॥ ೧೩
ಸಂತಾರ್ಯಮಾಣಾನ್ ವೈತರಣೀಂ ಬಹುಶಃ ಶೋಣಿತೋದಕಾಮ್
ವಾಲುಕಾಸು ಚ ತಪ್ತಾಸು ತಪ್ಯಮಾನಾನ್ ಮುಹುರ್ಮುಹುಃ ॥ ೧೪

---

ಪ್ರಭೆಯಿಂದ ಬೆಳಗುತ್ತ ಬರುತ್ತಿರುವುದು ದೂರದಲ್ಲಿ ಗೋಚರಿಸಿತು ಪ್ರತಾಪಿಯಾದ ರಾವಣನು ವಿಮಾನದ ಪ್ರಭೆಯಿಂದ ಯಮಲೋಕದ ಕತ್ತಲನ್ನಡಗಿಸಿ ಝಗ್ ಎಂದು ಬೆಳಗಿಸುತ್ತ ಸಮೀಪಕ್ಕೆ ಬಂದನು (೮-೯) ಯಮಲೋಕದಲ್ಲಿ ಪ್ರಾಣಿವರ್ಗವು ತನ್ನ ಸುಕೃತಗಳ ಪುಣ್ಯಫಲವನ್ನೂ ದುಷ್ಕೃತಗಳ ದುಷ್ಟಫಲವನ್ನೂ ಅನುಭವಿಸುತ್ತಿರುವುದು ರಾವಣನಿಗೆ ಕಾಣಿಸಿತು ಯಮದೂತರೊಂದಿಗೆ ಯಮನ ಸೈನಿಕರು ತಿರುಗಾಡುತ್ತಿರುವುದನ್ನೂ ದಶಗ್ರೀವನು ನೋಡಿದನು (೧೦-೧೧). ಉಗ್ರಸ್ವಭಾವದವರೂ ಘೋರ ರೂಪಿಗಳೂ ಭಯಂಕರರೂ ಆದ ಯಮಭಟರು ಒಂದೆಡೆಯಲ್ಲಿ ನರಕಿಗಳಾದ ಜನರನ್ನು ಹೊಡೆದು ಬಡಿದು ಹಿಂಸಿಸುತ್ತಿದ್ದರು ಅವರ ಹಿಂಸೆಯನ್ನು ತಡೆದುಕೊಳ್ಳಲಾರದೆ ಪಾಪಕರ್ಮಿಗಳು ವಿಕಾರವಾದ ಧ್ವನಿಯಿಂದ ಗಟ್ಟಿಯಾಗಿ ಅರಚುತ್ತಿದ್ದರು (೧೨) ಯಮದೂತರು ಕೆಲವರನ್ನು ಕ್ರಿಮಿಗಳಿಂದ ಕಚ್ಚಿಸುತ್ತಿದ್ದರು ಭೀಕರವಾದ ನಾಯಿಗಳಿಂದ ಕೆಲವರನ್ನು ಹರಿದು ತಿನ್ನಿಸುತ್ತಿದ್ದರು. ಆ ಯಾತನೆಯನ್ನು ಸಹಿಸಲಾರದೆ ನರಕಿಗಳು ಕರ್ಣಕಠೋರವಾಗಿ ಕೂಗಿಕೊಳ್ಳುತ್ತಿದ್ದರು (೧೩). ರಕ್ತಮಯವಾದ ವೈತರಣೀನದಿಯಲ್ಲಿ ಬಹು

ಅಸಿಪತ್ರವನೇ ಚೈವ ಭಿದ್ಯಮಾನಾನಧಾರ್ಮಿಕಾನ್ ।
ರೌರವೇ ಕ್ಷಾರನದ್ಯಾಂ ಚ ಕ್ಷುರಧಾರಾಸು ಚೈವ ಹಿ ॥ ೧೫

ಪಾನೀಯಂ ಯಾಚಮಾನಾಂಶ್ಚ ತೃಷಿತಾನ್ ಕ್ಷುಧಿತಾನಪಿ ।
ಶವಭೂತಾನ್ ಕೃಶಾನ್ ದೀನಾನ್ ವಿವರ್ಣಾನ್ ಮುಕ್ತಮೂರ್ಧಜಾನ್

ಮಲಪಂಕಧರಾನ್ ದೀನಾನ್ ರೂಕ್ಷಾಂಶ್ಚ ಪರಿಧಾವತಃ ।
ದದರ್ಶ ರಾವಣೋ ಮಾರ್ಗೇ ಶತಶೋಽಥ ಸಹಸ್ರಶಃ ॥ ೧೭

ಕಾಂಶ್ಚಿಚ್ಚ ಗೃಹಮುಖ್ಯೇಷು ಗೀತವಾದಿತ್ರನಿಃಸ್ವನೈಃ ।
ಪ್ರಮೋದಮಾನಾನದ್ರಾಕ್ಷೀದ್ರಾವಣಃ ಸುಕೃತೈಃ ಸ್ವಕೈಃ ॥ ೧೮

ಗೋರಸಂ ಗೋಪ್ರದಾತಾರೋ ಹ್ಯನ್ನಂ ಚೈವಾನ್ನದಾಯಿನಃ ।
ಗೃಹಾಂಶ್ಚ ಗೃಹದಾತಾರಃ ಸ್ವಕರ್ಮಫಲಮಶ್ನತಃ ॥ ೧೯

---

ಜನರನ್ನು ಎಳೆಸುತ್ತಿದ್ದರು ಸುಡುವ ಮರಳುರಾಶಿಯಲ್ಲಿ ಕೆಲವು ಪಾಪಿಗಳನ್ನು ಮಲಗಿಸಿ ಸುಡುತ್ತಿದ್ದರು ಕೆಲವು ದುಷ್ಕರ್ಮಿಗಳನ್ನು ಅಸಿಪತ್ರವನದಲ್ಲಿ ಕತ್ತಿಗಳಿಂದ ಕತ್ತರಿಸುತ್ತಿದ್ದರು ಕೆಲವರನ್ನು ರೌರವನರಕದಲ್ಲಿಯೂ ಹಲವರನ್ನು ಕ್ಷಾರನದಿಯಲ್ಲಿಯೂ ಇತರರನ್ನು ಕತ್ತಿಗಳ ಅಲಗುಗಳಮೇಲೂ ತಳ್ಳಿದ್ದರು (೧೪-೧೫) ಹಸಿವು ಬಾಯಾರಿಕೆಗಳಿಂದ ಕಂಗೆಟ್ಟ ಕೆಲವರು 'ಅಯ್ಯೋ! ಕುಡಿಯಲು ಬೇಕು, ತಿನ್ನಲು ಬೇಕು' ಎಂದು ಯಾಚಿಸುತ್ತಿದ್ದರು ಆ ನರಕಿಗಳು ತಲೆಗೂದಲನ್ನು ಕೆದರಿಕೊಂಡು ಬಣ್ಣಗೆಟ್ಟು ದೀನರಾಗಿ ಕೃಶರಾಗಿ ಹೆಣಗಳಂತೆ ಕಾಣುತ್ತಿದ್ದರು ಅವರ ಮೈಗೆ ಕೊಳೆಯು ಮೆತ್ತಿಕೊಂಡಿತ್ತು ದಿಕ್ಕುಗೆಟ್ಟು ರೂಕ್ಷಜನರಂತೆ ಆ ನರಕಿಗಳು ಅತ್ತಿಂದಿತ್ತ ಧಾವಿಸುತ್ತಿದ್ದರು ಇಂತಹ ನೂರಾರು ಸಾವಿರಾರು ಜನರನ್ನು ರಾವಣನು ಮಾರ್ಗದಲ್ಲಿ ಅವಲೋಕಿಸಿದನು (೧೬-೧೭) ಇನ್ನೊಂದೆಡೆಯಲ್ಲಿ ಪುಣ್ಯಾತ್ಮರು ತಮ್ಮ ಸುಕೃತಗಳ ಬಲದಿಂದ ಗೀತವಾದ್ಯಾದಿ ಮನೋಹರ ಶಬ್ದಗಳನ್ನು ಕೇಳುತ್ತ ಉತ್ತಮ ಭವನಗಳಲ್ಲಿ ಪ್ರಮೋದಿಸುತ್ತಿರುವುದನ್ನೂ ರಾವಣನು ನೋಡಿದನು ಗೋದಾನಮಾಡಿದವರು ಗೋಕ್ಷೀರವನ್ನೂ ಅನ್ನದಾತೃಗಳು ಮೃಷ್ಟಾನ್ನವನ್ನೂ ಗೃಹದಾನಿಗಳು ಶ್ರೇಷ್ಠಗೃಹಗಳನ್ನೂ ತಮ್ಮ ಪುಣ್ಯಕರ್ಮಗಳಿಗೆ ಅನುಗುಣವಾಗಿ ಪಡೆದು

ಸುವರ್ಣಮಣಿಮುಕ್ತಾಭಿಃ ಪ್ರಮದಾಭಿರಲಂಕೃತಾನ್ |
ಧಾರ್ಮಿಕಾನಪರಾಂಸ್ತತ್ರ ದೀಪ್ಯಮಾನಾನ್ ಸ್ವತೇಜಸಾ || ೨೦

ದದರ್ಶ ಸುಮಹಾಬಾಹೂ ರಾವಣೋ ರಾಕ್ಷಸಾಧಿಪಃ |
ತತಸ್ತಾನ್ ಭಿದ್ಯಮಾನಾಂಶ್ಚ ಕರ್ಮಭಿರ್ದುಷ್ಕೃತೈಃ ಸ್ವಕೈಃ || ೨೧

ರಾವಣೋ ಮೋಚಯಾಮಾಸ ವಿಕ್ರಮೇಣ ಬಲಾದ್ಬಲೀ |
ಪ್ರಾಣಿನೋ ಮೋಚಿತಾಸ್ತೇನ ದಶಗ್ರೀವೇಣ ರಕ್ಷಸಾ || ೨೨

ಸುಖಮಾಪುರ್ಮುಹೂರ್ತಂ ತೇ ಹ್ಯತರ್ಕಿತಮಚಿಂತಿತಮ್ |
ಪ್ರೇತೇಷು ಮುಚ್ಯಮಾನೇಷು ರಾಕ್ಷಸೇನ ಬಲೀಯಸಾ || ೨೩

ಪ್ರೇತಗೋಪಾಃ ಸುಸಂಕ್ರುದ್ಧಾ ರಾಕ್ಷಸೇಂದ್ರಮಭಿದ್ರವನ್ |
ತತೋ ಹಲಹಲಾಶಬ್ದಃ ಸರ್ವದಿಗ್ಭ್ಯಃ ಸಮುತ್ಥಿತಃ || ೨೪

ಧರ್ಮರಾಜಸ್ಯ ಯೋಧಾನಾಂ ಶೂರಾಣಾಂ ಸಂಪ್ರಧಾವತಾಮ್ |
ತೇ ಪ್ರಾಸೈಃ ಪರಿಘೈಃ ಶೂಲೈರ್ಮುಸಲೈಃ ಶಕ್ತಿತೋಮರೈಃ || ೨೫

---

ಆನಂದಿಸುತ್ತಿದ್ದರು (೧೮-೧೯) ಧರ್ಮನಿಷ್ಠರಾಗಿದ್ದ ಕೆಲವರು ಸುವರ್ಣ, ರತ್ನ, ಮುಕ್ತಾಫಲವಿಭೂಷಿತರಾದ ತರುಣಿಯರಿಂದ ಪರಿವೃತರಾಗಿ, ತೇಜಸ್ವಿಗಳಾಗಿ ಕಂಗೊಳಿಸುತ್ತಿದ್ದರು ಅವರನ್ನೂ ರಾಕ್ಷಸಾಧಿಪನು ವೀಕ್ಷಿಸಿದನು ಅನಂತರ ಬಲಾಢ್ಯನಾದ ರಾವಣನು ಬಲಪ್ರಯೋಗದಿಂದ ಯಮದೂತರನ್ನು ತಡೆದು, ದುಷ್ಕರ್ಮಗಳಿಂದ ಹಿಂಸೆಗೊಳಗಾಗಿದ್ದ ನರಕಿಗಳನ್ನು ಬಿಡುಗಡೆ ಮಾಡಿಸಿದನು! (೨೦-೨೨) ಅನಿರೀಕ್ಷಿತವಾಗಿ ಥಕ್ಕನೆ ಸಂಭವಿಸಿದ ಈ ಘಟನೆಯಿಂದ ನರಕದಲ್ಲಿದ್ದವರು ಒಂದು ಮುಹೂರ್ತಕಾಲ ಆನಂದಿಸಿದರು! ಹೀಗೆ ಪ್ರತಾಪಿಯಾದ ರಾಕ್ಷಸಾಧಿಪನು ಮೃತರಾಗಿ ಬಂದಿದ್ದ ಆಪ್ರೇತಗಳನ್ನು ಕಷ್ಟದಿಂದ ಪಾರುಮಾಡಿಸಲು, ಕಾವಲಿದ್ದ ಯಮಭಟರು ರಾಕ್ಷಸೇಂದ್ರನನ್ನು ಆಕ್ರಮಿಸಿದರು ಎಲ್ಲೆಲ್ಲಿಯೂ ಹಲಹಲಾ ಶಬ್ದವು ಮಸಗಿತು (೨೩-೨೪) ಶೂರರಾದ ಯಮಸೈನಿಕರು ಅತ್ತಿಂದಿತ್ತ ಓಡುತ್ತಬಂದು ಪ್ರಾಸಪರಿಘಗಳಿಂದಲೂ ಮುಸಲತೋಮರಗಳಿಂದಲೂ ಶಕ್ತಿಶೂಲಗಳಿಂದಲೂ ಪುಷ್ಪಕ

ಪುಷ್ಪಕಂ ಸಮವರ್ಷಂತ ಶೂರಾಃ ಶತಸಹಸ್ರಶಃ ।
ತಸ್ಯಾಸನಾನಿ ಪ್ರಾಸಾದಾನ್ ವೇದಿಕಾಸ್ತೋರಣಾನಿ ಚ ॥ ೨೬

ಪುಷ್ಪಕಸ್ಯ ಬಭಂಜುಸ್ತೇ ಶೀಘ್ರಂ ಮಧುಕರಾ ಇವ ।
ದೇವನಿಷ್ಠಾನಭೂತಂ ತದ್ವಿಮಾನಂ ಪುಷ್ಪಕಂ ಮೃಧೇ ॥ ೨೭

ಭಜ್ಯಮಾನಂ ತಥೈವಾಸೀದಕ್ಷಯಂ ಬ್ರಹ್ಮತೇಜಸಾ ।
ಅಸಂಖ್ಯಾ ಸುಮಹತ್ಯಾಸೀತ್ತಸ್ಯ ಸೇನಾ ಮಹಾತ್ಮನಃ ॥ ೨೮

ಶೂರಾಣಾಮುಗ್ರಯಾತ್ಯಾಣಾಂ, ಸಹಸ್ರಾಣಿ ಶತಾನಿ ಚ ।
ತತೋ ವೃಕ್ಷೈಶ್ಚ ಶೈಲೈಶ್ಚ ಪ್ರಾಸಾದೀನಾಂ ಶತೈಸ್ತಥಾ ॥ ೨೯

ತತಸ್ತೇ ಸಚಿವಾಸ್ತಸ್ಯ ಯಥಾಕಾಮಂ ಯಥಾಬಲಮ್ ।
ಅಯುಧ್ಯಂತ ಮಹಾವೀರಾಃ ಸ ಚ ರಾಜಾ ದಶಾನನಃ ॥ ೩೦

ತೇ ತು ಶೋಣಿತದಿಗ್ಧಾಂಗಾಃ ಸರ್ವಶಸ್ತ್ರಸಮಾಹತಾಃ ।
ಅಮಾತ್ಯಾ ರಾಕ್ಷಸೇಂದ್ರಸ್ಯ ಚಕ್ರುರಾಯೋಧನಂ ಮಹತ್ ॥ ೩೧

---

ವಿಮಾನವನ್ನು ಪ್ರಹರಿಸುತ್ತ ಲಕ್ಷೋಪಲಕ್ಷಸಂಖ್ಯೆಯಲ್ಲಿ ಆಕ್ರಮಿಸಿದರು ಪುಷ್ಪಕದಲ್ಲಿದ್ದ ಆಸನ, ಪ್ರಾಸಾದ, ವೇದಿಕೆ, ತೋರಣಗಳನ್ನು ಕುಟ್ಟಿದರು ಜೇನುಹುಳುಗಳಂತೆ ವಿಮಾನವನ್ನು ಮುತ್ತಿದರು! (೨೫-೨೭) ದೇವಾಧಿಷ್ಠಾನವಾದ ಆ ದಿವ್ಯವಿಮಾನವು ಬ್ರಹ್ಮನ ತೇಜೋಬಲದಿಂದ ಅಚ್ಚಳಿಯದೆ ಮೊದಲಿನಂತೆಯೇ ಇದ್ದಿತು ಮಹಾತ್ಮನಾದ ಯಮನ ಸೇನೆಯು ಅಸಂಖ್ಯಾತವಾಗಿತ್ತು ಶೂರರೂ ಉಗ್ರಗಾಮಿಗಳೂ ಆದ ಬಹುಮಂದಿ ಯೋಧರಿದ್ದರು ವೃಕ್ಷ, ಶೈಲ, ಪ್ರಾಸ ಮುಂತಾದ ಆಯುಧಗಳಿಂದ ಹೋರಾಟವು ತೊಡಗಿತು (೨೮-೨೯) ರಾವಣನ ಸಚಿವರು ತಮಗೆ ತೋರಿದಂತೆ ಆಯುಧಗಳನ್ನು ಪ್ರಯೋಗಿಸುತ್ತ ಹೋರಾಡಿದರು ರಾವಣನೂ ಯುದ್ಧಕ್ಕಿಳಿದನು ದಶಗ್ರೀವನ ಮಂತ್ರಿಗಳ ದೇಹದಿಂದ ರಕ್ತವು ಸುರಿಯ ತೊಡಗಿತು ಸಕಲಶಸ್ತ್ರಗಳ ಆಘಾತವನ್ನೂ ಅವರು ಎದುರಿಸಿದರು ಭೀಕರವಾದ ಕಾಳಗವನ್ನು ರಾವಣಾಮಾತ್ಯರು ನಡೆಸಿದರು (೩೦-೩೧)

ಅನ್ಯೋನ್ಯಂ ತೇ ಮಹಾಭಾಗಾ ಜಘ್ನುಃ ಪ್ರಹರಣೈರ್ಭೃಶಮ್ ।
ಯಮಸ್ಯ ಚ ಮಹಾಬಾಹೋ ರಾವಣಸ್ಯ ಚ ಮಂತ್ರಿಣಃ ॥ ೩೨

ಅಮಾತ್ಯಾಂಸ್ತಾಂಸ್ತು ಸಂತ್ಯಜ್ಯ ಯಮಯೋಧಾ ಮಹಾಬಲಾಃ ।
ತಮೇವ ಚಾಭ್ಯಧಾವಂತ ಶೂಲವರ್ಷೈರ್ದಶಾನನಮ್ ॥ ೩೩

ತತಃ ಶೋಣಿತದಿಗ್ಧಾಂಗಃ ಪ್ರಹಾರೈರ್ಜರ್ಜರೀಕೃತಃ ।
ಫುಲ್ಲಾಶೋಕ ಇವಾಭಾತಿ ಪುಷ್ಪಕೇ ರಾಕ್ಷಸಾಧಿಪಃ ॥ ೩೪

ಸ ತು ಶೂಲಗದಾಪ್ರಾಸಾನ್ ಶಕ್ತಿತೋಮರಸಾಯಕಾನ್ ।
ಮುಸಲಾನಿ ಶಿಲಾವೃಕ್ಷಾನ್ ಮುಮೋಚಾಸ್ತ್ರಬಲಾದ್ಬಲೀ ॥ ೩೫

ತರೂಣಾಂ ಚ ಶಿಲಾನಾಂ ಚ ಶಸ್ತ್ರಾಣಾಂ ಚಾತಿದಾರುಣಮ್ ।
ಯಮಸೈನ್ಯೇಷು ತದ್ವರ್ಷಂ ಪಪಾತ ಧರಣೀತಲೇ ॥ ೩೬

ತಾಂಸ್ತು ಸರ್ವಾನ್ ವಿನಿರ್ಭಿದ್ಯ ತದಸ್ತ್ರಮುಪಹತ್ಯ ಚ ।
ಜಘ್ನುಸ್ತೇ ರಾಕ್ಷಸಂ ಘೋರಮೇಕಂ ಶತಸಹಸ್ರಶಃ ॥ ೩೭

ಪರಿವಾರ್ಯ ಚ ತಂ ಸರ್ವೇ ಶೈಲಂ ಮೇಘೋತ್ಕರಾ ಇವ ।
ಭಿಂಡಿಪಾಲೈಶ್ಚ ಶೂಲೈಶ್ಚ ನಿರುಚ್ಛ್ವಾಸಮಪೋಥಯನ್ ॥ ೩೮

ಶ್ರೀರಾಮ, ಈ ರೀತಿಯಲ್ಲಿ ಯಮಭಟರು ರಾವಣಸಚಿವರೊಡನೆ ಕಾದಾಡಿ, ಕಡೆಗೆ ಎಲ್ಲರೂ ರಾವಣನನ್ನೇ ಮುತ್ತಿದರು ಒಂದೇ ಸಮನಾಗಿ ಶೂಲಗಳಿಂದ ಪ್ರಹರಿಸಿದರು ರಾವಣನ ದೇಹವು ಜರ್ಜರಿತವಾಯಿತು ನೆತ್ತರು ದೇಹದಿಂದ ಚಿಮ್ಮಿತು ಅರಳಿದ ಅಶೋಕವೃಕ್ಷದಂತೆ ರಾವಣನು ಕಂಗೊಳಿಸಿದನು (೩೨-೩೪) ಅಸ್ತ್ರಶಿಕ್ಷಣದ ಬಲದಿಂದ ಆ ಬಲಾಢ್ಯನು ಶೂಲ, ಗದಾ, ಪ್ರಾಸಾದ್ಯಾಯುಧಗಳನ್ನು ಎಡಬಿಡದೆ ಯಮಸೇನೆಯಮೇಲೆ ಪ್ರಯೋಗಿಸಿದನು ಯಮನ ಸೈನಿಕರು ಪ್ರಯೋಗಿಸಿದ ತರುಶಿಲಾಶಸ್ತ್ರಗಳಿಗೂ ಅವುಗಳಿಗೂ ಘರ್ಷಣೆಯಾಗಿ ಪುಡಿಪುಡಿಯಾಗಿ ಎಲ್ಲವೂ ಮಳೆಯಂತೆ ಯಮಸೈನಿಕರಮೇಲೆ ಸುರಿಯುತ್ತಿದ್ದಿತು (೩೫-೩೬) ಕಡೆಗೆ ಯಮಭಟರು ರಾವಣನ ಸರ್ವಾಸ್ತ್ರಗಳನ್ನೂ ಭಗ್ನಗೊಳಿಸಿ, ಮೇಘರಾಶಿಗಳು ಬೆಟ್ಟವನ್ನು ಮುತ್ತುವಂತೆ, ಸಮಸ್ತದಿಕ್ಕುಗಳಿಂದಲೂ ಆ ಘೋರ ರಾಕ್ಷಸನನ್ನು ಮುತ್ತಿ, ಅವನಿಗೆ ಉಸಿರಾಡಲೂ ಅವಕಾಶ ಸಿಗದಂತೆ ಭಿಂಡಿವಾಲ ಶೂಲಾದಿಗಳಿಂದ

ವಿಮುಕ್ತಕವಚಃ ಕ್ರುದ್ಧಃ ಸಿಕ್ತಃ ಶೋಣಿತವಿಸ್ರವೈಃ ।
ತತಃ ಸ ಪುಷ್ಪಕಂ ತ್ಯಕ್ತ್ವಾ ಪೃಥಿವ್ಯಾಮವತಿಷ್ಠತ ॥ ೩೯

ತತಃ ಸ ಕಾರ್ಮುಕೀ ಬಾಣೀ ಸಮರೇ ಚಾಭಿವರ್ತತ ।
ಲಬ್ಧಸಂಜ್ಞೋ ಮುಹೂರ್ತೇನ ಕ್ರುದ್ಧಸ್ತಸ್ಥೌ ಯಥಾಂತಕಃ ॥ ೪೦

ತತಃ ಪಾಶುಪತಂ ದಿವ್ಯಮಸ್ತ್ರಂ ಸಂಧಾಯ ಕಾರ್ಮುಕೇ ।
ತಿಷ್ಠ ತಿಷ್ಠೇತಿ ತಾನುಕ್ತ್ವಾ ತಚ್ಚಾಪಂ ವಿಚಕರ್ಷ ಸಃ ॥ ೪೧

ಆಕರ್ಣಾತ್ ಸ ವಿಕೃಷ್ಯಾಥ ಚಾಪಮಿಂದ್ರಾರಿರಾಹವೇ ।
ಮುಮೋಚ ತಂ ಶರಂ ಕ್ರುದ್ಧಸ್ತ್ರಿಪುರೇ ಶಂಕರೋ ಯಥಾ ॥ ೪೨

ತಸ್ಯ ರೂಪಂ ಶರಸ್ಯಾಸೀದ್ವಿಧೂಮಜ್ವಾಲಮಂಡಲಮ್ ।
ವನಂ ದಹಿಷ್ಯತೋ ಘರ್ಮೇ ದಾವಾಗ್ನೇರಿವ ಮೂರ್ಛತಃ ॥ ೪೩

ಜ್ವಾಲಾಮಾಲೀ ಸ ತು ಶರಃ ಕ್ರವ್ಯಾದಾನುಗತೋ ರಣೇ ।
ಮುಕ್ತೋ ಗುಲ್ಮಾನ್ ದ್ರುಮಾಂಶ್ಚಾಪಿ ಭಸ್ಮ ಕೃತ್ವಾ ಪ್ರಧಾವತಿ ॥

---

ಹೊಡೆದು ಬಡಿದು ಕಡಿದು ತಿವಿದರು (೩೭-೩೮) ರಕ್ತಪ್ರವಾಹದಿಂದ ರಾವಣನ ದೇಹವು ತೊಯ್ದುಹೋಯಿತು. ಅವನು ತೊಟ್ಟಿದ್ದ ಕವಚವನ್ನು ರೋಷಾವೇಶದಿಂದ ಕಿತ್ತೆಸೆದು ಪುಷ್ಪಕದಿಂದ ನೆಲಕ್ಕೆ ಧುಮುಕಿದನು! ಧನುರ್ಬಾಣಗಳನ್ನು ಧರಿಸಿದ ದಶಗ್ರೀವನು ಕ್ರುದ್ಧನಾಗಿ ಮತ್ತೊಬ್ಬ ಯಮನೋ ಎಂಬಂತೆ ಗೋಚರಿಸಿದನು (೩೯-೪೦) ಪಾಶುಪತವೆಂಬ ದಿವ್ಯಾಸ್ತ್ರವನ್ನು ಚಾಪಕ್ಕೆ ಅಳವಡಿಸಿ 'ನಿಲ್ಲಿರಿ! ನಿಲ್ಲಿರಿ!' ಎನ್ನುತ್ತ ಚಾಪದ ಹೆದೆಯನ್ನು ಆಕರ್ಣಾಂತವಾಗಿ ಸೆಳೆದು, ತ್ರಿಪುರಾಸುರಸಂಹಾರಕಾಲದಲ್ಲಿ ಕ್ರುದ್ಧನಾದ ಪರಮೇಶ್ವರನಂತೆ ಕಂಗೊಳಿಸುತ್ತ, ಆ ದಿವ್ಯಾಸ್ತ್ರವನ್ನು ಪ್ರಯೋಗಿಸಿದನು (೪೧-೪೨) ಪಾಶುಪತಾಸ್ತ್ರದ ರೂಪವು, ಬೇಸಿಗೆಯಲ್ಲಿ ಅಡವಿಯನ್ನು ಸುಡುವ ಕಾಳ್ಗಿಚ್ಚಿನಂತೆ ಪ್ರಜ್ವಲಿಸಿ, ಹೊಗೆಯಿಲ್ಲದ ಅಗ್ನಿಯಂತೆ ಉಲ್ಬಣಿಸಿತು. ಜ್ವಾಲಾಮಾಲಾಕರಾಳವಾದ ಆ ದಿವ್ಯಾಸ್ತ್ರವು ರಾವಣಧನುಸ್ಸಿನಿಂದ ಪುಟಿದು, ಎಡಬಲದ ಗುಲ್ಮವೃಕ್ಷಗಳನ್ನು ಸುಟ್ಟು ಬೂದಿ

ತೇ ತಸ್ಯ ತೇಜಸಾ ದಗ್ಧಾಃ ಸೈನ್ಯಾ ವೈವಸ್ವತಸ್ಯ ತು ।
ರಣೇ ತಸ್ಮಿನ್ನಿಪತಿತಾ ದಾವದಗ್ಧಾ ನಗಾ ಇವ ॥ ೪೫

ತತಸ್ತು ಸಚಿವೈಃ ಸಾರ್ಧಂ ರಾಕ್ಷಸೋ ಭೀಮವಿಕ್ರಮಃ ।
ನನಾದ ಸುಮಹಾನಾದಂ ಕಂಪಯನ್ನಿವ ಮೇದಿನೀಮ್ ॥ ೪೬

**ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕವಿಂಶಃ ಸರ್ಗಃ**



ಮಾಡುತ್ತ ರಭಸದಿಂದ ನುಗ್ಗಿತು (೪೩-೪೪) ಅದರ ತೇಜಸ್ಸಿನಿಂದ ಯಮ ಭಟರು ದಗ್ಧರಾಗಿ, ಕಾಳ್ಗಿಚ್ಚಿನಿಂದ ಸುಡಲ್ಪಟ್ಟ ಮರಗಳಂತೆ ರಣರಂಗ ದಲ್ಲುರುಳಿದರು ಭೀಮವಿಕ್ರಮನಾದ ರಾವಣನು ತನ್ನ ಸಚಿವರೊಡನೆ ಕಲೆತು ಜಗತ್ತನ್ನೇ ತಲ್ಲಣಗೊಳಿಸುವಂತೆ ಭೀಷಣಧ್ವನಿಯಿಂದ ಸಿಂಹನಾದಮಾಡಿ ದನು ! (೪೫-೪೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತೊಂದನೆಯ ಸರ್ಗ



## ದ್ವಾವಿಂಶಃ ಸರ್ಗಃ

### ಯಮಜಯಃ

ಸ ತಸ್ಯ ತು ಮಹಾನಾದಂ ಶ್ರುತ್ವಾ ವೈವಸ್ವತಃ ಪ್ರಭುಃ ।
ಶತ್ರುಂ ವಿಜಯಿನಂ ಮೇನೇ ಸ್ವಬಲಸ್ಯ ಚ ಸಂಕ್ಷಯಮ್ ॥ ೧

ಸ ಹಿ ಯೋಧಾನ್ ಹತಾನ್ ಮತ್ವಾ ಕ್ರೋಧಸಂರಕ್ತಲೋಚನಃ ।
ಅಬ್ರವೀತ್ತ್ವರಿತಂ ಸೂತಂ ರಥೋಽಯಮುಪನೀಯತಾಮ್ ॥ ೨

ತಸ್ಯ ಸೂತಸ್ತದಾ ದಿವ್ಯಮುಪಸ್ಥಾಪ್ಯ ಮಹಾರಥಮ್ ।
ಸ್ಥಿತಃ ಸ ಚ ಮಹಾತೇಜಾ ಹ್ಯಧ್ಯಾರೋಹತ ತಂ ರಥಮ್ ॥ ೩

ಪಾಶಮುದ್ಗರಹಸ್ತಶ್ಚ ಮೃತ್ಯುಸ್ತಸ್ಯಾಗ್ರತಃ ಸ್ಥಿತಃ ।
ಯೇನ ಸಂಕ್ಷಿಪ್ಯತೇ ಸರ್ವಂ ತ್ರೈಲೋಕ್ಯಮಿದಮವ್ಯಯಮ್ ॥ ೪

### ಸರ್ಗ ೨೨

ಯಮರಾವಣರ ಯುದ್ಧ. ಯಮನು ಕಾಲದಂಡವನ್ನು ಪ್ರಯೋಗಿಸಲು ಉದ್ದೇಶಿಸುವುದು ಬ್ರಹ್ಮನು ಬೇಡವೆನ್ನುವುದು ಯಮನ ಅಂತರ್ಧಾನ

ರಾಘವ, ಸೂರ್ಯಪುತ್ರನಾದ ಯಮದೇವನು ಆ ಸಿಂಹನಾದವನ್ನು ಕೇಳಿ, ಶತ್ರುವಿಗೆ ಜಯವಾಯಿತೆಂದೂ ತನ್ನ ಸೇನೆಯು ಕ್ಷೀಣಿಸಿತೆಂದೂ ತಿಳಿದನು ತನ್ನ ಯೋಧರು ಹತರಾದರೆಂಬುದನ್ನರಿತೊಡನೆ ವೈವಸ್ವತನ ಕಣ್ಣುಗಳು ಕೋಪದಿಂದ ಕೆಂಪಡರಿದವು ಕೂಡಲೆ ರಥವನ್ನು ತಂದು ನಿಲ್ಲಿಸುವಂತೆ ಸೂತನಿಗೆ ಆಜ್ಞಾಪಿಸಿದನು (೧-೨) ಸಾರಥಿಯು ದಿವ್ಯವಾದ ಮಹಾರಥವನ್ನು ತ್ವರೆಯಿಂದ ತಂದು ನಿಲ್ಲಿಸಲು, ತೇಜೋನಿಧಿಯಾದ ಅಂತಕನು ಅದನ್ನೇರಿದನು ಅನುಚರನಾದ ಮೃತ್ಯುವು ಪಾಶಮುದ್ಗರಹಸ್ತನಾಗಿ ಅಂತಕನೆದುರಾಗಿ ಸಜ್ಜಾಗಿ ಹೊರಟನು. ಮೃತ್ಯುವಾದರೋ ದೀರ್ಘಕಾಲದಿಂದ ನಿತ್ಯವಾಗಿ ನಡೆಯುತ್ತಿರುವ ತ್ರಿಲೋಕವನ್ನೂ ಪ್ರಳಯಕಾಲದಲ್ಲಿ

*

ಕಾಲದಂಡಸ್ತು ಪಾರ್ಶ್ವಸ್ಥೋ ಮೂರ್ತಿಮಾನಸ್ಯ ಚಾಭವತ್ ।
ಯಮಪ್ರಹರಣಂ ದಿವ್ಯಂ ತೇಜಸಾ ಜ್ವಲದಗ್ನಿಮತ್ ॥ ೫

ತಸ್ಯ ಪಾರ್ಶ್ವೇಷು ನಿಶ್ಛಿದ್ರಾಃ ಕಾಲಪಾಶಾಃ ಪ್ರತಿಷ್ಠಿತಾಃ ।
ಪಾವಕಸ್ಪರ್ಶಸಂಕಾಶಾಃ ಸ್ಥಿತೋ ಮೂರ್ತಶ್ಚ ಮುದ್ಗರಃ ॥ ೬

ತತೋ ಲೋಕತ್ರಯಂ ಕ್ಷುಬ್ಧಮಕಂಪಂತ ದಿವೌಕಸಃ ।
ಕಾಲಂ ದೃಷ್ಟ್ವಾ ತಥಾ ಕ್ರುದ್ಧಂ ಸರ್ವಲೋಕಭಯಾವಹಮ್ ॥ ೭

ತತಃ ಪ್ರಚೋದಯನ್ ಸೂತಸ್ತಾನಶ್ವಾನ್ ರುಧಿರಪ್ರಭಾನ್ ।
ಪ್ರಯಯೌ ಭೀಮಸಂನಾದೋ ಯತ್ರ ರಕ್ಷಃಪತಿಃ ಸ್ಥಿತಃ ॥ ೮

ಮುಹೂರ್ತೇನ ಯಮಂ ತೇ ತು ಹಯಾ ಹರಿಹಯೋಪಮಾಃ ।
ಪ್ರಾಪಯನ್ ಮನಸಸ್ತುಲ್ಯಾ ಯತ್ರ ತತ್ ಪ್ರಸ್ತುತಂ ರಣಮ್ ॥ ೯

ದೃಷ್ಟ್ವಾ ತಥೈವ ವಿಕೃತಂ ರಥಂ ಮೃತ್ಯುಸಮನ್ವಿತಮ್ ।
ಸಚಿವಾ ರಾಕ್ಷಸೇಂದ್ರಸ್ಯ ಸಹಸಾ ವಿಪ್ರದುದ್ರುವುಃ ॥ ೧೦

---

ವಿಧ್ವಂಸಮಾಡತಕ್ಕವನು (೩-೪) ಯಮನ ದಿವ್ಯಾಯುಧವೆಂದು ಪ್ರಸಿದ್ಧವಾದ ಕಾಲದಂಡವು ಪ್ರಜ್ವಲಿಸುತ್ತ ಕಿಡಿಯುಗುಳುತ್ತ, ಯಮನ ಪಾರ್ಶ್ವದಲ್ಲಿ ಮೂರ್ತಿಮತ್ತಾಗಿ ಸನ್ನಿಹಿತವಾಯಿತು. ಅಂತಕನ ಇಕ್ಕೆಲಗಳಲ್ಲಿ ಬೆಂಕಿಯಂತೆ ಸುಡುವ ಕಾಲಪಾಶಗಳೂ ಮುದ್ಗರಗಳೂ ನಿರಂತರವಾಗಿ ನೇರಿಸಲ್ಪಟ್ಟವು (೫-೬) ಕಾಲನು ಸರ್ವಲೋಕಭಯಂಕರನಾಗಿ ಕೆರಳಿರುವುದನ್ನು ಕಂಡು ಮೂರುಲೋಕಗಳೂ ಕಳವಳಿಸಿದವು ದೇವತೆಗಳು ಹೆದರಿ ನಡುಗಿದರು ಆಮೇಲೆ ಸಾರಥಿಯು ರಥಕ್ಕೆ ಹೂಡಿದ ರಕ್ತಾಶ್ವಗಳನ್ನು ಚೋದಿಸಿ ಭೀಷಣಧ್ವನಿಗೈಯುತ್ತ, ರಾಕ್ಷಸೇಶ್ವರನಿದ್ದಲ್ಲಿಗೆ ರಥವನ್ನು ಓಡಿಸಿದನು (೭-೮) ಸೂರ್ಯಾಶ್ವಗಳಿಗೆ ಸಮಾನಗಳಾದ ಆ ದಿವ್ಯಾಶ್ವಗಳು ಮನೋವೇಗದಿಂದ ಧಾವಿಸಿ-ಒಂದು ಕ್ಷಣದಲ್ಲಿಯೇ ಯಮನನ್ನು ರಣರಂಗಕ್ಕೆ ಕರೆತಂದವು. ಯಮನನ್ನೂ ಮೃತ್ಯುವನ್ನೂ ಘೋರವಾದ ರಥವನ್ನೂ

ಲಘುಸತ್ತ್ವತಯಾ ತೇ ಹಿ ನಷ್ಟಸಂಜ್ಞಾ ಭಯಾರ್ದಿತಾಃ ।
ನೇಹ ಯೋದ್ಧುಂ ಸಮರ್ಥಾಃ ಸ್ಮ ಇತ್ಯುಕ್ತ್ವಾ ಪ್ರಯಯುರ್ದಿಶಃ ॥

ಸ ತು ತಂ ತಾದೃಶಂ ದೃಷ್ಟ್ವಾ ರಥಂ ಲೋಕಭಯಾವಹಮ್ ।
ನಾಕ್ಷುಭ್ಯತ ದಶಗ್ರೀವೋ ನ ಚಾಪಿ ಭಯಮಾವಿಶತ್ ॥ ೧೨

ಸ ತು ರಾವಣಮಾಸಾದ್ಯ ವ್ಯಸೃಜಚ್ಛಕ್ತಿತೋಮರಾನ್ ।
ಯಮೋ ಮರ್ಮಾಣಿ ಸಂಕ್ರುದ್ಧೋ ರಾವಣಸ್ಯೋಪಕೃಂತತ ॥

ಮರ್ಮಸು ಚ್ಛಿದ್ಯಮಾನೇಷು ರಾವಣೋ ರಾಕ್ಷಸೇಶ್ವರಃ ।
ಯಯೌ ಸ್ತಬ್ಧೋ ರುಜಂ ಘೋರಾಂ ಭಿದ್ಯಮಾನ ಇವಾಚಲಃ ॥

ರಾವಣಸ್ತು ತತಃ ಸ್ವಸ್ಥಃ ಶರವರ್ಷಂ ಮುಮೋಚ ಹ ।
ತಸ್ಮಿನ್ ವೈವಸ್ವತರಥೇ ತೋಯವರ್ಷಮಿವಾಂಬುದಃ ॥ ೧೫

ತತೋ ಮಹಾಶಕ್ತಿಶತೈಃ ಪಾತ್ಯಮಾನೋ ಮಹೋರಸಿ ।
ನಾಶಕ್ನೋತ್ ಪ್ರತಿಕರ್ತುಂ ಸ ರಾಕ್ಷಸಃ ಶಲ್ಯಪೀಡಿತಃ ॥ ೧೬

---

ಕಂಡೊಡನೆ ರಾವಣನ ಸಚಿವರು ಓಡಿಹೋದರು! (೯-೧೦) ಅವರು ಅಲ್ಪಸತ್ತ್ವರಾದ್ದರಿಂದ ಭಯದಿಂದ ತಲ್ಲಣಿಸಿ ಕಂಗೆಟ್ಟರು. 'ಇಲ್ಲಿ ಯುದ್ಧ ಮಾಡಲು ನಾವು ಶಕ್ತರಲ್ಲ!' ಎಂದು ಹೇಳಿ ದಿಕ್ಕುದಿಕ್ಕಿಗೆ ಪಲಾಯನಮಾಡಿದರು ಲೋಕಭೀಕರವಾದ ಆ ರಥವನ್ನು ವೀಕ್ಷಿಸಿದರೂ ದಶಗ್ರೀವನು ಮಾತ್ರ ವಿಚಲಿತನಾಗಲಿಲ್ಲ, ಭೀತನಾಗಲೂ ಇಲ್ಲ!(೧೧-೧೨) ಯಮನು ದಶಗ್ರೀವನ ಮೇಲೆ ಏರಿಹೋಗಿ ಶಕ್ತಿತೋಮರಗಳಿಂದ ಪ್ರಹರಿಸಿ ಕ್ರೋಧದಿಂದ ಅವನ ಮರ್ಮಸ್ಥಳಗಳನ್ನು ಭೇದಿಸಿದನು ಹೀಗೆ ಮರ್ಮಸ್ಥಳಗಳು ಕೊಚ್ಚಿ ಕೊರೆಯಲ್ಪಡುತ್ತಿರಲಾಗಿ, ಭೇದಿಸಲ್ಪಡುತ್ತಿರುವ ಅಚಲದಂತೆ ಸ್ತಬ್ಧನಾಗಿದ್ದ ರಾಕ್ಷಸೇಶ್ವರನು ಘೋರಯಾತನೆಯನ್ನನುಭವಿಸಿದನು (೧೩-೧೪) ಆದರೂ ತಾಳ್ಮೆಯಿಂದ ರಾವಣನು ಯಮನ ರಥದಮೇಲೆ ಮೇಘದಂತೆ ಶರವೃಷ್ಟಿಯನ್ನು ಸುರಿಸುತ್ತಲೇ ಇದ್ದನು ನೂರಾರು ಮಹಾಶಕ್ತಿಗಳು ಅವನ ಎದೆಗೆ ರಭಸದಿಂದ ಬಂದೆರಗಿದವು ಅದಕ್ಕೆ ತಕ್ಕ ಪ್ರತೀಕಾರವನ್ನೆಸಗಲು ಆ ರಾಕ್ಷಸನಿಗೆ

ಏವಂ ನಾನಾಪ್ರಹರಣೈರ್ಯಮೇನಾಮಿತ್ರಕರ್ಶಿನಾ ।
ಸಪ್ತರಾತ್ರಂ ಕೃತಃ ಸಂಖ್ಯೇ ನ ಭಗ್ನೋ ವಿಜಿತೋಽಪಿ ವಾ ॥ ೧೭

ತದಾಸೀತ್ತುಮುಲಂ ಯುದ್ಧಂ ಯಮರಾಕ್ಷಸಯೋರ್ದ್ವಯೋಃ ।
ಜಯಮಾಕಾಂಕ್ಷತೋರ್ವೀರ ಸಮರೇಷ್ವನಿವರ್ತಿನೋಃ ॥ ೧೮

ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಪ್ರಜಾಪತಿಂ ಪುರಸ್ಕೃತ್ಯ ಸಮೇತಾಸ್ತದ್ರಣಾಜಿರಮ್॥ ೧೯

ಸಂವರ್ತ ಇವ ಲೋಕಾನಾಂ ಯುಧ್ಯತೋರಭವತ್ತದಾ ।
ರಾಕ್ಷಸಾನಾಂ ಚ ಮುಖ್ಯಸ್ಯ ಪ್ರೇತಾನಾಮೀಶ್ವರಸ್ಯ ಚ ॥ ೨೦

ರಾಕ್ಷಸೇಂದ್ರೋಽಪಿ ವಿಸ್ಫಾರ್ಯ ಚಾಪಮಿಂದ್ರಾಶನಿಪ್ರಭಮ್ ।
ನಿರಂತರಮಿವಾಕಾಶಂ ಕುರ್ವನ್ ಬಾಣಾಂಸ್ತತೋಽಸೃಜತ್ ॥ ೨೧

ಮೃತ್ಯುಂ ಚತುರ್ಭಿರ್ವಿಶಿಖೈಃ ಸೂತಂ ಸಪ್ತಭಿರರ್ದಯತ್ ।
ಯಮಂ ಶತಸಹಸ್ರೇಣ ಶೀಘ್ರಂ ಮರ್ಮಸ್ವತಾಡಯತ್ ॥ ೨೨

---

ಸಾಧ್ಯವಾಗಲಿಲ್ಲ (೧೫-೧೬) ರಾಘವ, ಶತ್ರುಘಾತಿಯಾದ ಅಂತಕನು ನಾನಾ ಶಸ್ತ್ರಗಳನ್ನು ಪ್ರಯೋಗಿಸುತ್ತಲೇ ಇದ್ದನು ಏಳು ರಾತ್ರಿಗಳು ಕಳೆದವು. ರಾವಣನು ಹತನಾಗಲೂ ಇಲ್ಲ, ಜಿತನಾಗಲೂ ಇಲ್ಲ! ಈ ರೀತಿಯಲ್ಲಿ, ರಾಘವ, ಯಮರಾವಣರೀರ್ವರೂ ರಣದಿಂದ ಹಿಮ್ಮೆಟ್ಟದೆ ವಿಜಯಾಕಾಂಕ್ಷಿಗಳಾಗಿ ಹೊಡೆದಾಡುತ್ತಲೇ ಇದ್ದರು (೧೭-೧೮). ದೇವಗಂಧರ್ವಸಿದ್ಧಾದಿಗಳು ಪಿತಾಮಹನನ್ನು ಮುಂದಿಟ್ಟುಕೊಂಡು ರಣಭೂಮಿಗೆ ಬಂದು ಅವರೀರ್ವರ ಕಾಳಗವನ್ನು ವೀಕ್ಷಿಸುತ್ತಿದ್ದರು ಅವರೀರ್ವರೂ ಹೋರಾಡುತ್ತಿರುವಾಗ ಲೋಕಕ್ಕೆ ಪ್ರಳಯಕಾಲವೇ ಬಂದೊದಗಿತೋ ಎಂಬಂತೆ ತೋರಿತು ರಾಕ್ಷಸೇಂದ್ರನು ಇಂದ್ರನ ವಜ್ರಾಯುಧದಂತೆ ಬೆಳಗುತ್ತಿದ್ದ ತನ್ನ ಚಾಪವನ್ನು ಮಿಡಿದು, ಗಗನವನ್ನು ಮುಚ್ಚುವನೋ ಎಂಬಂತೆ ಬಾಣಗಳನ್ನು ತೂರುತ್ತಲೇ ಇದ್ದನು (೧೯-೨೧) ನಾಲ್ಕು ಸಾಯಕಗಳಿಂದ ಮೃತ್ಯುವಿಗೆ ಬಿಗಿದು, ಏಳು ಸರಳುಗಳಿಂದ ಸಾರಥಿಯನ್ನು ಕಂಗೆಡಿಸಿ, ಲಕ್ಷ ಶರಗಳಿಂದ ಯಮನನ್ನು

ತತಃ ಕ್ರುದ್ಧಸ್ಯ ವದನಾದ್ಯಮಸ್ಯ ಸಮಜಾಯತ ।
ಜ್ವಾಲಾಮಾಲೀ ಸನಿಶ್ವಾಸಃ ಸಧೂಮಃ ಕೋಪಪಾವಕಃ ॥ ೨೩

ತದಾಶ್ಚರ್ಯಮಥೋ ದೃಷ್ಟ್ವಾ ದೇವದಾನವಸಂನಿಧೌ ।
ಪ್ರಹರ್ಷಿತೌ ಸುಸಂರಬ್ಧೌ ಮೃತ್ಯುಕಾಲೌ ಬಭೂವತುಃ ॥ ೨೪

ತತೋ ಮೃತ್ಯುಃ ಕ್ರುದ್ಧತರೋ ವೈವಸ್ವತಮಭಾಷತ ।
ಮುಂಚ ಮಾಂ ಸಮರೇ ಯಾವದ್ಧನ್ಮೀಮಂ ಪಾಪರಾಕ್ಷಸಮ್ ॥

ನೈಷಾ ರಕ್ಷೋ ಭವೇದದ್ಯ ಮರ್ಯಾದಾ ಹಿ ನಿಸರ್ಗತಃ ।
ಹಿರಣ್ಯಕಶಿಪುಃ ಶ್ರೀಮಾನ್ನಮುಚಿಃ ಶಂಬರಸ್ತಥಾ ॥ ೨೬

ನಿಸಂಧಿರ್ಧೂಮಕೇತುಶ್ಚ ಬಲಿರ್ವೈರೋಚನೋಽಪಿ ಚ ।
ದಂಭುರ್ದೈತ್ಯಮಹಾರಾಜೋ ವೃತ್ರೋ ಬಾಣಸ್ತಥೈವ ಚ ॥ ೨೭

ರಾಜರ್ಷಯಃ ಶಾಸ್ತ್ರವಿದೋ ಗಂಧರ್ವಾಃ ಸಮಹೋರಗಾಃ ।
ಋಷಯಃ ಪನ್ನಗಾ ದೈತ್ಯಾ ಯಕ್ಷಾಶ್ಚಾಪ್ಯಪ್ಸರೋಗಣಾಃ ॥ ೨೮

---

ಬಾರಿಸಿದನು ಯಮನು ರೋಷದಿಂದ ಭುಗಿಲೆಂದನು ಅವನ ಬಾಯಿಂದ ನಿಶ್ವಾಸದೊಡನೆ ಜ್ವಾಲಾಮಾಲಿಯಾದ ಅಗ್ನಿಯು ಧೂಮಕರಾಳವಾಗಿ ಹೊರಹೊಮ್ಮಿತು! (೨೨–೨೩) ದೇವದಾನವರೆದುರಿಗೆ ಈ ಅಚ್ಚರಿಯು ನಡೆಯಿತು ಮೃತ್ಯುವೂ ಯಮನೂ ಮತ್ತಷ್ಟು ಉತ್ಸಾಹದಿಂದ ರೋಷಾವಿಷ್ಟರಾದರು ಮೃತ್ಯುವು ವೈವಸ್ವತನ ಕಡೆಗೆ ತಿರುಗಿ "ಯಮರಾಜ, ಕೊಡು ನನಗೆ ಅನುಜ್ಞೆಯನ್ನು! ಈ ದುರುಳ ರಾಕ್ಷಸನನ್ನು ಈಗಲೇ ಕೊಂದೆಸೆಯುವೆನು (೨೪–೨೫) ಈ ರಾಕ್ಷಸನು ಈ ಕ್ಷಣದಲ್ಲಿಯೇ ನಾಯಬೇಕು ನನ್ನ ಕಟಾಕ್ಷಕ್ಕೆ ಸಿಕ್ಕಿದವನು ಒಡನೆಯೇ ಸಾಯಬೇಕೆಂಬುದು ಪ್ರಕೃತಿಸಿದ್ಧವಾದ ನಿಯಮ! ಹಿರಣ್ಯಕಶಿಪು, ನಮುಚಿ, ಶಂಬರ, ನಿಸಂಧಿ, ಧೂಮಕೇತು, ವಿರೋಚನಪುತ್ರನಾದ ಬಲಿ, ದೈತ್ಯರಾಜನಾದ ದಂಭ, ವೃತ್ರಾಸುರ, ಬಾಣ– ಮೊದಲಾದ ಅಸುರರು ನನ್ನ ದೃಷ್ಟಿಗೆ ಬಿದ್ದಮೇಲೆ ಉಳಿದಿಲ್ಲ! ಶಾಸ್ತ್ರಜ್ಞರಾದ ರಾಜರ್ಷಿಗಳ ಗತಿ ಏನಾಯಿತು? ಗಂಧರ್ವಮಹೋರಗರಾಗಲಿ ಋಷಿಗಳಾಗಲಿ ಸಾಯದೆ ಉಳಿದರೆ? ಪನ್ನಗರು, ದೈತ್ಯರು, ಅಪ್ಸರೋಗಣಗಳು–

ಯುಗಾಂತಪರಿವರ್ತೇ ಚ ಪೃಥಿವೀ ಸಮಹಾರ್ಣವಾ ।
ಕ್ಷಯಂ ನೀತಾ ಮಹಾರಾಜ ಸಪರ್ವತಸರಿದ್ದ್ರುಮಾ ॥ ೨೯

ಏತೇ ಚಾನ್ಯೇ ಚ ಬಹವೋ ಬಲವಂತೋ ದುರಾಸದಾಃ ।
ವಿನಿಪನ್ನಾ ಮಯಾ ದೃಷ್ಟಾಃ ಕಿಮುತಾಯಂ ನಿಶಾಚರಃ ॥ ೩೦

ಮುಂಚ ಮಾಂ ಸಾಧುಧರ್ಮಜ್ಞ ಯಾವದೇನಂ ನಿಹನ್ಮ್ಯಹಮ್ ।
ನ ಹಿ ಕಶ್ಚಿನ್ಮಯಾ ದೃಷ್ಟೋ ಬಲವಾನಪಿ ಜೀವತಿ ॥ ೩೧

ಬಲಂ ಮಮ ನ ಖಲ್ವೇತನ್ಮರ್ಯಾದೈಷಾ ನಿಸರ್ಗತಃ ।
ಸ ದೃಷ್ಟೋ ನ ಮಯಾ ಕಾಲಂ ಮುಹೂರ್ತಮಪಿ ಜೀವತಿ ॥ ೩೨

ತಸ್ಯೈವಂ ವಚನಂ ಶ್ರುತ್ವಾ ಧರ್ಮರಾಜಃ ಪ್ರತಾಪವಾನ್ ।
ಅಬ್ರವೀತ್ತತ್ರ ತಂ ಮೃತ್ಯುಂ ತ್ವಂ ತಿಷ್ಠೈನಂ ನಿಹನ್ಮ್ಯಹಮ್ ॥ ೩೩

ತತಃ ಸಂರಕ್ತನಯನಃ ಕ್ರುದ್ಧೋ ವೈವಸ್ವತಃ ಪ್ರಭುಃ ।
ಕಾಲದಂಡಮಮೋಘಂ ತು ತೋಲಯಾಮಾಸ ಪಾಣಿನಾ ॥ ೩೪

---

ಎಲ್ಲರನ್ನೂ ನಾನು ಸಂಹರಿಸಿದ್ದೇನೆ! (೨೬-೨೮) ಯುಗಾಂತಕಾಲದಲ್ಲಿ ಮಹಾಸಾಗರಸಮೇತವಾದ ಈ ಪೃಥ್ವಿಯು ಪರ್ವತನದೀವೃಕ್ಷಗಳೊಡನೆ ನನ್ನಿಂದ ವಿಧ್ವಸ್ತವಾಗುವುದು ಮಹಾರಾಜ-ಯಮಧರ್ಮ, ಇವರೇ ಅಲ್ಲದೆ ಬಲಾಢ್ಯರೆಂದೂ ದುರ್ಧರ್ಷರೆಂದೂ ವಿಖ್ಯಾತರಾದವರು ನನ್ನ ದೃಷ್ಟಿಗೆ ಬಿದ್ದೊಡನೆ ನಿಶ್ಶೇಷವಾಗಿ ನಾಶಹೊಂದಿದ್ದಾರೆ ಹೀಗಿರುವಲ್ಲಿ ಈ ನಿಶಾಚರನು ಯಾವ ಶಿಕ್ಕ? (೨೯-೩೦) ಆದ್ದರಿಂದ, ಯಮರಾಜ, ನನಗೆ ಅನುಮತಿಯನ್ನು ಕೊಡು. ಈತನನ್ನು ಕೊಂದೆಸೆಯುವೆನು ಎಂತಹ ಬಲವಂತನಾದರೂ ನನ್ನ ದೃಷ್ಟಿಗೆ ಬಿದ್ದವನು ಎಂದಿಗೂ ಬದುಕಲಾರ. ಇದು ನನ್ನ ಸಾಮರ್ಥ್ಯದ ಪ್ರಶಂಸೆಯಲ್ಲ. ನಿಸರ್ಗಸಿದ್ಧವಾದ ನಿಯಮವಿದು ನನ್ನ ದೃಷ್ಟಿಗೆ ಸಿಕ್ಕಿದವನು ಒಂದು ಕ್ಷಣಕಾಲವೂ ಉಳಿಯುವುದಿಲ್ಲವೆಂಬುದೇ ನಿಯಮ" ಎಂದನು (೩೧-೩೨). ಮೃತ್ಯುವಿನ ಮಾತನ್ನಾಲಿಸಿ ಪ್ರತಾಪಿಯಾದ ಅಂತಕನು "ಎಲೈ ಮೃತ್ಯು, ಸ್ವಲ್ಪ ತಾಳು ನಾನೇ ಇವನನ್ನು ಮುಗಿಸುವೆನು" ಎಂದು ಹೇಳಿ ಕ್ರೋಧತಾಮ್ರಾಕ್ಷನಾಗಿ, ಅಮೋಘವಾದ

ಯಸ್ಯ ಪಾರ್ಶ್ವೇಷು ನಿಖಿಲಾಃ ಕಾಲಪಾಶಾಃ ಪ್ರತಿಷ್ಠಿತಾಃ ।
ಪಾವಕಾಶನಿಸಂಕಾಶೋ ಮುದ್ಗರೋ ಮೂರ್ತಿಮಾನ್ ಸ್ಥಿತಃ ॥ ೩೫
ದರ್ಶನಾದೇವ ಯಃ ಪ್ರಾಣಾನ್ ಪ್ರಾಣಿನಾಮುಪಕರ್ಷತಿ ।
ಕಿಂ ಪುನಃ ಸ್ಪೃಶ್ಯಮಾನಸ್ಯ ಪಾತ್ಯಮಾನಸ್ಯ ವಾ ಪುನಃ ॥ ೩೬
ಸ ಜ್ವಾಲಾಪರಿವಾರಸ್ತು ನಿರ್ದಹನ್ನಿವ ರಾಕ್ಷಸಮ್ ।
ತೇನ ಸ್ಪೃಷ್ಟೋ ಬಲವತಾ ಮಹಾಪ್ರಹರಣೋಽಸ್ಫುರತ್ ॥ ೩೭
ತತೋ ವಿದುದ್ರುವುಃ ಸರ್ವೇ ತಸ್ಮಾತ್ತ್ರಸ್ತಾ ರಣಾಜಿರೇ ।
ಸುರಾಶ್ಚ ಕ್ಷುಭಿತಾಃ ಸರ್ವೇ ದೃಷ್ಟ್ವಾ ದಂಡೋದ್ಯತಂ ಯಮಮ್ ॥
ತಸ್ಮಿನ್ ಪ್ರಹರ್ತುಕಾಮೇ ತು ಯಮೇ ದಂಡೇನ ರಾವಣಮ್ ।
ಯಮಂ ಪಿತಾಮಹಃ ಸಾಕ್ಷಾದ್ದರ್ಶಯಿತ್ವೇದಮಬ್ರವೀತ್ ॥ ೩೯
ವೈವಸ್ವತ ಮಹಾಬಾಹೋ ನ ಖಲ್ವಮಿತವಿಕ್ರಮ ।
ನ ಹಂತವ್ಯಸ್ತ್ವಯಾ ತೇನ ದಂಡೇನೈಷ ನಿಶಾಚರಃ ॥ ೪೦

---

ಕಾಲದಂಡವನ್ನು ಕೈಯಿಂದ ತೂಗಿದನು ! (೩೩-೩೪) ಆ ಕಾಲದಂಡದ ಪಾರ್ಶ್ವದಲ್ಲಿ ನಿಖಿಲಕಾಲಪಾಶಗಳೂ ಸಜ್ಜಾದವು ಅಗ್ನಿಯಂತೆಯೂ ಸಿಡಿಲಿನಂತೆಯೂ ಉಗ್ರವಾದ ಮುದ್ಗರವು ಮೂರ್ತಿಮತ್ತಾಗಿ ಬಂದು ನಿಂತಿತು ರಾಘವ, ಕಾಲದಂಡವೆಂದರೆ ಸಾಮಾನ್ಯವೆ ? ದರ್ಶನಮಾತ್ರದಿಂದಲೇ ಅದು ಸಮಸ್ತ ಪ್ರಾಣಿಗಳ ಪ್ರಾಣವನ್ನೂ ಕಿತ್ತೆಳೆಯುವುದು ! ಇನ್ನು ಅದರ ಸ್ಪರ್ಶವಾದರೆ ಅಥವಾ ರಭಸದಿಂದ ಬಂದೆರಗಿದರೆ, ಹೇಳಬೇಕಾದ್ದೇನು ? (೩೫-೩೬) ಬಲಾಢ್ಯನಾದ ಯಮನು ಆ ಘೋರಾಯುಧವನ್ನು ಹಿಡಿದು ತೂಗಿದೊಡನೆ, ಜ್ವಾಲಾಕರಾಳವಾಗಿ ಸ್ಫುರಿಸುತ್ತ ರಾವಣನನ್ನು ಸುಟ್ಟು ಬೂದಿಮಾಡುವುದೋ ಎಂಬಂತೆ ಭುಗಿಲೆಂದಿತು ರಣಾಂಗಣದಲ್ಲಿದ್ದ ಸಮಸ್ತರೂ ಹೆದರಿ ದಿಕ್ಕುಗೆಟ್ಟು ಓಡಿಹೋದರು ಯಮನು ದಂಡಧಾರಿಯಾದುದನ್ನು ನೋಡಿ ಅಲ್ಲಿದ್ದ ದೇವತೆಗಳು ತಲ್ಲಣಿಸಿ ಕಳವಳಿಸಿದರು (೩೭-೩೮) ಇನ್ನೇನು, ಯಮನು ಕಾಲದಂಡವನ್ನು ಬೀಸಬೇಕು—ಎನ್ನುವಷ್ಟರಲ್ಲಿ ಬ್ರಹ್ಮದೇವನು ಪ್ರತ್ಯಕ್ಷನಾಗಿ ಬಂದು ಹೀಗೆಂದನು “ವೈವಸ್ವತ, ನಿಲ್ಲು ನಿಲ್ಲು , ಬೇಡ , ಮಹಾಬಾಹು, ನೀನು ಅಮಿತವಿಕ್ರಮನೆಂಬುದು

ವರಃ ಖಲು ಮಯೈತಸ್ಮೈ ದತ್ತಸ್ತ್ರಿದಶಪುಂಗವ ।
ಸ ತ್ವಯಾ ನಾನೃತಃ ಕಾರ್ಯೋ ಯನ್ಮಯಾ ವ್ಯಾಹೃತಂ ವಚಃ ॥
ಯೋ ಹಿ ಮಾಮನೃತಂ ಕುರ್ಯಾದ್ದೇವೋ ವಾ ಮಾನುಷೋಽಪಿ ವಾ ।
ತ್ರೈಲೋಕ್ಯಮನೃತಂ ತೇನ ಕೃತಂ ಸ್ಯಾನ್ನಾತ್ರ ಸಂಶಯಃ ॥ ೪೨
ಕ್ರುದ್ಧೇನ ವಿಪ್ರಮುಕ್ತೋಽಯಂ ನಿರ್ವಿಶೇಷಂ ಪ್ರಿಯಾಪ್ರಿಯೇ ।
ಪ್ರಜಾಃ ಸಂಹರತೇ ರೌದ್ರೋ ಲೋಕತ್ರಯಭಯಾವಹಃ ॥ ೪೩
ಅಮೋಘೋ ಹ್ಯೇಷ ಸರ್ವೇಷಾಂ ಪ್ರಾಣಿನಾಮಮಿತಪ್ರಭಃ ।
ಕಾಲದಂಡೋ ಮಯಾ ಸೃಷ್ಟಃ ಪೂರ್ವಂ ಮೃತ್ಯುಪುರಸ್ಕೃತಃ ॥ ೪೪
ತಸ್ಯ ಖಲ್ವೇಷ ತೇ ಸೌಮ್ಯ ಪಾತ್ಯೋ ರಾವಣಮೂರ್ಧನಿ ।
ನ ಹ್ಯಸ್ಮಿನ್ ಪತಿತೇ ಕಶ್ಚಿನ್ಮುಹೂರ್ತಮಪಿ ಜೀವತಿ ॥ ೪೫
ಯದಿ ಹ್ಯಸ್ಮಿನ್ನಿಪತಿತೇ ನ ಮ್ರಿಯೇತೈಷ ರಾಕ್ಷಸಃ ।
ಮ್ರಿಯತೇ ವಾ ದಶಗ್ರೀವಸ್ತದಾ ಹ್ಯುಭಯತೋಽನೃತಮ್ ॥ ೪೬

---

ಸತ್ಯ ಕಾಲದಂಡವನ್ನು ಈ ರಾಕ್ಷಸನಮೇಲೆ ಪ್ರಯೋಗಿಸಬೇಡ ! (೩೯-೪೦) ದೇವಾದಿಗಳಿಗೆ ಅವಧ್ಯನಾಗೆಂದು ನಾನು ಈತನಿಗೆ ವರವನ್ನು ಕೊಟ್ಟಿದ್ದೇನೆ ನಾನು ಕೊಟ್ಟ ವರವನ್ನು ನೀನು ಸುಳ್ಳುಮಾಡಬಾರದು ! ದೇವತೆಯಾಗಲಿ ಮನುಷ್ಯನಾಗಲಿ ನಾನು ಅನೃತವಾದಿಯೆಂದು ಸಿದ್ಧಪಡಿಸಿದರೆ, ಮೂರು ಲೋಕಗಳೂ ಅನೃತಮಯವಾದಾವು ! (೪೧-೪೨) ಲೋಕತ್ರಯಭೀಷಣವಾದ ಈ ಉಗ್ರಾಯುಧವನ್ನು ನೀನು ಪ್ರಯೋಗಿಸಿದರೆ, ನನಗೆ ಪ್ರಿಯನಾಗಿರಲಿ ಅಪ್ರಿಯನಾಗಿರಲಿ ಆತನನ್ನು ಈ ಕಾಲದಂಡವು ಯಾವ ಭೇದವೂ ಇಲ್ಲದೆ ವಿಧ್ವಂಸಗೊಳಿಸುವುದು ಸರ್ವಪ್ರಾಣಿಗಳಿಗೂ ಮೃತ್ಯುವನ್ನು ತರಲೆಂದು ಅಮೋಘವೂ ದಿವ್ಯಪ್ರಭಾಸಂವಲಿತವೂ ಆದ ಈ ಕಾಲದಂಡವನ್ನು ನಾನೇ ಅಲ್ಲವೆ ನಿರ್ಮಿಸಿದ್ದು? (೪೩-೪೪) ಆದ್ದರಿಂದ, ಸೌಮ್ಯ-ಯಮರಾಜ ! ರಾವಣನಮೇಲೆ ಇದನ್ನು ಪ್ರಯೋಗಿಸಬೇಡ ಇದರಿಂದ ತಾಡಿತನಾದ ಯಾವನೂ ಒಂದು ಕ್ಷಣವೂ ಜೀವಿಸಲಾರ ಧರ್ಮರಾಜ, ಈ ದಂಡಾಯುಧವನ್ನು ಪ್ರಯೋಗಿಸಿದಾಗ ದಶಗ್ರೀವನು ಸತ್ತರೂ ಸಾಯದಿದ್ದರೂ—ಉಭಯ

ತನ್ನಿವರ್ತಯ ಲಂಕೇಶಾದ್ದಂಡಮೇತಂ ಸಮುದ್ಯತಮ್ ।
ಸತ್ಯಂ ಚ ಮಾಂ ಕುರುಷ್ವಾದ್ಯ ಲೋಕಾಂಸ್ತ್ವಂ ಯದ್ಯವೇಕ್ಷಸೇ ॥
ಏವಮುಕ್ತಸ್ತು ಧರ್ಮಾತ್ಮಾ ಪ್ರತ್ಯುವಾಚ ಯಮಸ್ತದಾ ।
ಏಷ ವ್ಯಾವರ್ತಿತೋ ದಂಡಃ ಪ್ರಭವಿಷ್ಣುರ್ಹಿ ನೋ ಭವಾನ್ ॥ ೪೮
ಕಿಂ ನ್ವಿದಾನೀಂ ಮಯಾ ಶಕ್ಯಂ ಕರ್ತುಂ ರಣಗತೇನ ಹಿ ।
ನ ಮಯಾ ಯದ್ಯಯಂ ಶಕ್ಯೋ ಹಂತುಂ ವರಪುರಸ್ಕೃತಃ ॥ ೪೯
ಏಷ ತಸ್ಮಾತ್ ಪ್ರಣಶ್ಯಾಮಿ ದರ್ಶನಾದದ್ಯ ರಕ್ಷಸಃ ।
ಇತ್ಯುಕ್ತ್ವಾ ಸರಥಃ ಸಾಶ್ವಸ್ತತ್ರೈವಾಂತರಧೀಯತ ॥ ೫೦
ದಶಗ್ರೀವಸ್ತು ತಂ ಜಿತ್ವಾ ನಾಮ ವಿಶ್ರಾವ್ಯ ಚಾತ್ಮನಃ ।
ಆರುಹ್ಯ ಪುಷ್ಪಕಂ ಭೂಯೋ ನಿಷ್ಕ್ರಾಂತೋ ಯಮಸಾದನಾತ್ ॥
ಸ ತು ವೈವಸ್ವತೋ ದೇವೈಃ ಸಹ ಬ್ರಹ್ಮಪುರೋಗಮೈಃ ।
ಜಗಾಮ ತ್ರಿದಿವಂ ಹೃಷ್ಟೋ ನಾರದಶ್ಚ ಮಹಾಮುನಿಃ । ೫೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವಾವಿಂಶಃ ಸರ್ಗಃ

---

ಪಕ್ಷದಲ್ಲಿಯೂ ನಾನು ಸುಳ್ಳಾಡಿದಂತಾಗುವುದು ! (೪೫-೪೬) ಆದ್ದರಿಂದ ಕಾಲದಂಡವನ್ನು ಲಂಕೇಶ್ವರನಮೇಲೆ ಪ್ರಯೋಗಿಸಬೇಡ ಲೋಕಗಳು ನಿಯಮಬದ್ಧವಾಗಿ ನಡೆಯಬೇಕೆಂದಿದ್ದರೆ, ನಾನು ಸತ್ಯವಾದಿಯೆಂಬ ಖ್ಯಾತಿಯನ್ನು ಉಳಿಸು !" ಎಂದನು ಆಗ ಧರ್ಮಾತ್ಮನಾದ ಯಮನು "ಬ್ರಹ್ಮದೇವ, ನೀನು ನಮಗೆ ಪ್ರಭುವಾಗಿದ್ದೀಯೆ ನಿನ್ನ ಆಜ್ಞೆಯಂತೆ, ಇದೋ, ಕಾಲದಂಡವನ್ನು ಉಪಸಂಹರಿಸುತ್ತೇನೆ (೪೭-೪೮) ವರಪುರಸ್ಕೃತನಾದ ಈ ರಾಕ್ಷಸನನ್ನು ನಾನು ಕೊಲ್ಲಬಾರದಾದರೆ, ರಣಭೂಮಿಯಲ್ಲಿ ನಾನು ಈಗ ಮಾಡತಕ್ಕದ್ದೇನು ? ಹಾಗಾದರೆ, ರಾವಣನಿಗೆ ಕಾಣದಂತೆ ನಾನು ಅದೃಶ್ಯನಾಗುವೆನು !" ಎಂದು ನುಡಿದು, ರಥಾಶ್ವಗಳೊಡನೆ ಕೂಡಲೇ ಅಂತರ್ಹಿತನಾದನು (೪೯-೫೦) ದಶಗ್ರೀವನು ಈ ಬಗೆಯಲ್ಲಿ ಯಮನನ್ನು ಜಯಿಸಿ, ಎಲ್ಲೆಲ್ಲಿಯೂ ತನ್ನ ಹೆಸರನ್ನು ಘೋಷಿಸಿ, ಪುಷ್ಪಕಾರೂಢನಾಗಿ ಯಮಲೋಕದಿಂದ ಹೊರಟುಹೋದನು ಬ್ರಹ್ಮನ ನುಡಿ ಸತ್ಯವಾಯಿತೆಂದು ಯಮನೂ ದೇವತೆಗಳೂ ಸಂತುಷ್ಟರಾದರು ಬ್ರಹ್ಮನೂ ಸಂತೃಪ್ತನಾಗಿ ತನ್ನ ಲೋಕಕ್ಕೆ ಹೊರಟುಹೋದನು ನಾರದಮುನಿಗಳಿಗೆ ಆನಂದವಾಯಿತು ! (೫೧-೫೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತೆರಡನೆಯ ಸರ್ಗ

# ತ್ರಯೋವಿಂಶಃ ಸರ್ಗಃ

## ವರುಣಜಯಃ

ತತೋ ಜಿತ್ವಾ ದಶಗ್ರೀವೋ ಯಮಂ ತ್ರಿದಶಪುಂಗವಮ್ ।
ರಾವಣಸ್ತು ರಣಶ್ಲಾಘೀ ಸ್ವಸಹಾಯಾನ್ ದದರ್ಶ ಹ ॥ ೧
ತತೋ ರುಧಿರಸಿಕ್ತಾಂಗಂ ಪ್ರಹಾರೈರ್ಜರ್ಜರೀಕೃತಮ್ ।
ರಾವಣಂ ರಾಕ್ಷಸಾ ದೃಷ್ಟ್ವಾ ವಿಸ್ಮಯಂ ಸಮುಪಾಗಮನ್ ॥ ೨
ಜಯೇನ ವರ್ಧಯಿತ್ವಾ ಚ ಮಾರೀಚಪ್ರಮುಖಾಸ್ತತಃ ।
ಪುಷ್ಪಕಂ ಭೇಜಿರೇ ಸರ್ವೇ ಸಾಂತ್ವಿತಾ ರಾವಣೇನ ತು ॥ ೩
ತತೋ ರಸಾತಲಂ ಗಚ್ಛನ್ ಪ್ರವಿಷ್ಟಃ ಪಯಸಾಂ ನಿಧಿಮ್ ।
ದೈತ್ಯೋರಗಗಣಾಧ್ಯುಷ್ಟಂ ವರುಣೇನ ಸುರಕ್ಷಿತಮ್ ॥ ೪
ಸ ತು ಭೋಗವತೀಂ ಗತ್ವಾ ಪುರೀಂ ವಾಸುಕಿಪಾಲಿತಾಮ್ ।
ಕೃತ್ವಾ ನಾಗಾನ್ ವಶೇ ಹೃಷ್ಟೋ ಯಯೌ ಮಣಿಮಯೀಂ ಪುರೀಂ

## ಸರ್ಗ ೨೩

ರಾವಣನು ವರುಣಲೋಕಕ್ಕೆ ಹೋಗುವುದು ದಾರಿಯಲ್ಲಿ ನಿವಾತಕವಚರೊಡನೆ ಸಖ್ಯ ಕಾಲಕೇಯರ ಸಂಹಾರ ವರುಣಪುತ್ರರ ಪರಾಜಯ

ಶ್ರೀರಾಮ, ರಣಶ್ಲಾಘಿಯಾದ ದಶಗ್ರೀವನು ತ್ರಿದಶೋತ್ತಮನಾದ ಯಮನನ್ನು ಜಯಿಸಿ, ತನ್ನ ಸಚಿವರನ್ನು ಸಂದರ್ಶಿಸಿದನು ರಾವಣನು ರಕ್ತಸಿಕ್ತನಾಗಿ ಯಮನ ಪ್ರಹಾರಗಳಿಂದ ಜರ್ಜರಿತನಾಗಿದ್ದನು ಸಚಿವರು ವಿಜಯಶಾಲಿಯಾದ ರಾಕ್ಷಸೇಶ್ವರನನ್ನು ನೋಡಿ ವಿಸ್ಮಿತರಾಗಿ "ಜಯ ಮಹಾರಾಜ!" ಎಂದು ಅಭಿನಂದಿಸಿದರು (೧-೨). ದಶಗ್ರೀವನು ಮಾರೀಚಾದಿಗಳಿಗೆ ಧೈರ್ಯವನ್ನು ಹೇಳಿ ಅವರೊಡನೆ ಪುಷ್ಪಕವನ್ನೇರಿ, ರಸಾತಳಾಭಿಮುಖನಾಗಿ ಸಮುದ್ರದಲ್ಲಿ ನುಗ್ಗಿದನು ಸಮುದ್ರವಾದರೋ ದೈತ್ಯರಿಗೂ ಉರಗರಿಗೂ ಆವಾಸಸ್ಥಾನವಾದದ್ದು ವರುಣನಿಂದ ರಕ್ಷಿತವಾದದ್ದು. ಅನಂತರ ವಾಸುಕಿಪಾಲಿತವಾದ ಭೋಗವತೀನಗರಿಯನ್ನಾಕ್ರಮಿಸಿ, ನಾಗರನ್ನು ಗೆದ್ದು ವಶಪಡಿಸಿಕೊಂಡು, ಮಣಿಮಯಪುರಕ್ಕೆ

ನಿವಾತಕವಚಾಸ್ತತ್ರ ದೈತ್ಯಾ ಲಬ್ಧವರಾ ವಸನ್ ।
ರಾಕ್ಷಸಸ್ತಾನ್ ಸಮಾಗಮ್ಯ ಯುದ್ಧಾಯ ಸಮುಪಾಹ್ವಯತ್ ॥ ೬

ತೇ ತು ಸರ್ವೇ ಸುವಿಕ್ರಾಂತಾ ದೈತೇಯಾ ಬಲಶಾಲಿನಃ ।
ನಾನಾಪ್ರಹರಣಾಸ್ತತ್ರ ಪ್ರಹೃಷ್ಟಾ ಯುದ್ಧದುರ್ಮದಾಃ ॥ ೭

ಶೂಲೈಸ್ತ್ರಿಶೂಲೈಃ ಕುಲಿಶೈಃ ಪಟ್ಟಿಸಾಸಿಪರಶ್ವಧೈಃ ।
ಅನ್ಯೋಽನ್ಯಂ ಬಿಭಿದುಃ ಕ್ರುದ್ಧಾ ರಾಕ್ಷಸಾ ದಾನವಾಸ್ತಥಾ ॥ ೮

ತೇಷಾಂ ತು ಯುಧ್ಯಮಾನಾನಾಂ ಸಾಗ್ರಃ ಸಂವತ್ಸರೋ ಗತಃ ।
ನ ಚಾನ್ಯತರಯೋಸ್ತತ್ರ ವಿಜಯೋ ವಾ ಕ್ಷಯೋಽಪಿ ವಾ ॥ ೯

ತತಃ ಪಿತಾಮಹಸ್ತತ್ರ ತ್ರೈಲೋಕ್ಯಗತಿರವ್ಯಯಃ ।
ಆಜಗಾಮ ದ್ರುತಂ ದೇವೋ ವಿಮಾನವರಮಾಸ್ಥಿತಃ ॥ ೧೦

ನಿವಾತಕವಚಾನಾಂ ತು ನಿವಾರ್ಯ ರಣಕರ್ಮ ತತ್ ।
ವೃದ್ಧಃ ಪಿತಾಮಹೋ ವಾಕ್ಯಮುವಾಚ ವಿದಿತಾರ್ಥವತ್ ॥ ೧೧

---

ಧಾವಿಸಿದನು (೩-೫) ಅಲ್ಲಿ ನಿವಾತಕವಚರೆಂಬ ದೈತ್ಯರು ವರಬಲದಿಂದ ಪ್ರಬಲರಾಗಿದ್ದರು ದಶಗ್ರೀವನು ಅವರನ್ನು ಯುದ್ಧಕ್ಕೆ ಆಹ್ವಾನಿಸಿದನು ನಿವಾತಕವಚರು ಮಹಾಪರಾಕ್ರಮಿಗಳು ಯುದ್ಧದುರ್ಮದರು. ಅವರು ಕ್ರುದ್ಧರಾಗಿ ಶೂಲ, ಕುಲಿಶ, ಪಟ್ಟಿಸಾದ್ಯಾಯುಧಗಳಿಂದ ಸನ್ನದ್ಧರಾಗಿ, ಯುದ್ಧಕ್ಕೆ ಬಂದರು (೬-೮) ರಾವಣನಿಗೂ ಅವರಿಗೂ ಘೋರವಾದ ಕಾಳಗವು ನಡೆಯಿತು ಒಂದು ಸಂವತ್ಸರಪೂರ್ತಿಯಾಗಿ ಹೋರಾಟವು ನಡೆದರೂ, ಯಾರಿಗೆ ಜಯ—ಯಾರಿಗೆ ಪರಾಜಯವೆಂಬುದೇ ನಿಶ್ಚಿತವಾಗಲಿಲ್ಲ ಆಗ ತ್ರಿಲೋಕೇಶ್ವರನೂ ಅವ್ಯಯನೂ ಆದ ಬ್ರಹ್ಮನು ವಿಮಾನಾರೂಢನಾಗಿ ಬಂದು ರಣೋದ್ಯೋಗವನ್ನು ತ್ಯಜಿಸುವಂತೆ ನಿವಾತಕವಚರಿಗೆ ತಿಳಿಸಿದನು (೯-೧೦) ಅವನು ಅರ್ಥವತ್ತಾದ ನುಡಿಗಳಿಂದ "ಎಲೈ ನಿವಾತಕವಚರೆ, ಈ ರಾವಣನನ್ನು ಗೆಲ್ಲುವುದು ದೇವಾಸುರರಿಗೂ ಶಕ್ಯವಲ್ಲ ನೀವು ದೇವ

ನ ಹ್ಯಯಂ ರಾವಣೋ ಯುದ್ಧೇ ಶಕ್ಯೋ ಜೇತುಂ ಸುರಾಸುರೈಃ ।
ನ ಭವಂತಃ ಕ್ಷಯಂ ನೇತುಮಪಿ ಸಾಮರದಾನವೈಃ ॥ ೧೨

ರಾಕ್ಷಸಸ್ಯ ಸಖಿತ್ವಂ ಚ ಭವದ್ಭಿಃ ಸಹ ರೋಚತೇ ।
ಅವಿಭಕ್ತಾಶ್ಚ ಸರ್ವಾರ್ಥಾಃ ಸುಹೃದಾಂ ನಾತ್ರ ಸಂಶಯಃ ॥ ೧೩

ತತೋಽಗ್ನಿಸಾಕ್ಷಿಕಂ ಸಖ್ಯಂ ಕೃತವಾಂಸ್ತತ್ರ ರಾವಣಃ ।
ನಿವಾತಕವಚೈಃ ಸಾರ್ಧಂ ಪ್ರೀತಿಮಾನಭವತ್ತದಾ ॥ ೧೪

ಅರ್ಚಿತಸ್ತೈರ್ಯಥಾನ್ಯಾಯಂ ಸಂವತ್ಸರಮುಷೋಷಿತಃ ।
ಸ್ವಪುರಾನ್ನಿರ್ವಿಶೇಷಂ ಚ ಪ್ರಿಯಂ ಪ್ರಾಪ್ತೋ ದಶಾನನಃ ॥ ೧೫

ತತ್ರೋಪಧಾರ್ಯ ಮಾಯಾನಾಂ ಶತಮೇಕಂ ಸಮಾಪ್ತವಾನ್ ।
ಸಲಿಲೇಂದ್ರಪುರಾನ್ವೇಷೀ ಭ್ರಮತಿ ಸ್ಮ ರಸಾತಲಮ್ ॥ ೧೬

ತತೋಽಶ್ಮನಗರಂ ನಾಮ ಕಾಲಕೇಯೈರಧಿಷ್ಠಿತಮ್ ।
ಗತ್ವಾತು ಕಾಲಕೇಯಾಂಶ್ಚ ಹತ್ವಾ ತತ್ರ ಬಲೋತ್ಕಟಾನ್ ॥ ೧೭

---

ದಾನವರ ನೆರವನ್ನು ಪಡೆದರೂ ಇವನನ್ನು ಜಯಿಸಲಾರಿರಿ ಆದ್ದರಿಂದ ನೀವು ಈತನೊಡನೆ ಸಖ್ಯವನ್ನು ಬೆಳೆಸುವುದು ಯುಕ್ತವೆಂದು ನನಗೆ ತೋರುತ್ತದೆ ನೀವು ಮಿತ್ರರಾದರೆ, ಸಕಲಭೋಗಗಳೂ ಜಯಾಪಜಯಗಳೂ ಉಭಯರಿಗೂ ಸಮವಾಗಿರುತ್ತವೆ" ಎಂದನು (೧೧-೧೩) ಅನಂತರ ರಾವಣನು ನಿವಾತಕವಚರೊಡನೆ ಅಗ್ನಿಸಾಕ್ಷಿಕವಾಗಿ ಸಖ್ಯವನ್ನು ಬೆಳೆಸಿ ಸಂತೃಪ್ತನಾದನು ನಿವಾತಕವಚರು ದಶಗ್ರೀವನನ್ನು ಯಥೋಚಿತವಾಗಿ ಸತ್ಕರಿಸಿದರು ಲಂಕೆಯಲ್ಲಿದ್ದಂತೆ ಸುಖವಾಗಿ ಒಂದು ವರ್ಷವನ್ನು ಮಣಿಮಯಪುರದಲ್ಲಿ ರಾವಣನು ಕಳೆದನು (೧೪-೧೫) ಅಲ್ಲಿರುವಾಗ ರಾವಣನು ನಿವಾತಕವಚರಿಂದ ಒಂದು ನೂರು ಮಾಯಾವಿದ್ಯೆಗಳನ್ನು ಕಲಿತನು! ಆಮೇಲೆ ಜಲಾಧಿಪತಿಯಾದ ವರುಣನ ನಗರವನ್ನು ಹುಡುಕುತ್ತ ದಶಗ್ರೀವನು ರಸಾತಳದಲ್ಲಿ ಸುತ್ತುತ್ತಿರುವಾಗ, ಕಾಲಕೇಯರ ಆವಾಸವಾದ ಅಶ್ಮನಗರಕ್ಕೆ ಬಂದನು. ಬಲೋತ್ಕಟರಾದ ಕಾಲಕೇಯರನ್ನು ರಾವಣನು

ಶೂರ್ಪಣಖ್ಯಾಶ್ಚ ಭರ್ತಾರಮಸಿನಾ ಪ್ರಾಚ್ಛಿನತ್ತದಾ ।
ಶ್ಯಾಲಂ ಚ ಬಲವಂತಂ ಚ ವಿದ್ಯುಜ್ಜಿಹ್ವಂ ಬಲೋತ್ಕಟಮ್ ॥ ೧೮

ಜಿಹ್ವಯಾ ಸಂಲಿಹಂತಂ ಚ ರಾಕ್ಷಸಂ ಸಮರೇ ತಥಾ ।
ತಂ ವಿಜಿತ್ಯ ಮುಹೂರ್ತೇನ ಜಘ್ನೇ ದೈತ್ಯಾಂಶ್ಚತುಃಶತಮ್ ॥ ೧೯

ತತಃ ಪಾಂಡರಮೇಘಾಭಂ ಕೈಲಾಸಮಿವ ಭಾಸ್ವರಮ್ ।
ವರುಣಸ್ಯಾಲಯಂ ದಿವ್ಯಮಪಶ್ಯದ್ರಾಕ್ಷಸಾಧಿಪಃ ॥ ೨೦

ಕ್ಷರಂತೀಂ ಚ ಪಯಸ್ತತ್ರ ಸುರಭಿಂ ಗಾಮವಸ್ಥಿತಾಮ್ ।
ಯಸ್ಯಾಃ ಪಯೋಽಭಿನಿಷ್ಯಂದಾತ್ ಕ್ಷೀರೋದೋ ನಾಮ ಸಾಗರಃ ॥

ದದರ್ಶ ರಾವಣಸ್ತತ್ರ ಗೋವೃಷೇಂದ್ರವರಾರಣಿಮ್ ।
ಯಸ್ಮಾಚ್ಚಂದ್ರಃ ಪ್ರಭವತಿ ಶೀತರಶ್ಮಿರ್ನಿಶಾಕರಃ ॥ ೨೨

ಯಂ ಸಮಾಶ್ರಿತ್ಯ ಜೀವಂತಿ ಫೇನಪಾಃ ಪರಮರ್ಷಯಃ ।
ಅಮೃತಂ ಯತ್ರ ಚೋತ್ಪನ್ನಂ ಸ್ವಧಾ ಚ ಸ್ವಧಭೋಜಿನಾಮ್ ॥

---

ಸಂಹರಿಸಿದನು (೧೬-೧೭) ರಾಘವ, ಶೂರ್ಪಣಖೆಯ ಗಂಡನಾದ ವಿದ್ಯುಜ್ಜಿಹ್ವನೆಂಬ ರಾಕ್ಷಸನು ಕಾಲಕೇಯರಲ್ಲಿ ಒಬ್ಬನು ರಾವಣನ ಮೈದುನ ಬಲಾಢ್ಯನಾದ ಆ ರಾಕ್ಷಸನು ರಣಾಂಗಣದಲ್ಲಿ ರಾವಣನ ಸಚಿವರನ್ನು ನುಂಗುವುದಕ್ಕಾಗಿ ನಾಲಗೆಯನ್ನು ಚಾಚಿಕೊಂಡು ಬಂದಾಗ, ರಾವಣನು ಅವನನ್ನೂ ವಧಿಸಿದನು! ಅವನನ್ನು ವಧಿಸಿದಮೇಲೆ, ನಾನೂರು ಮಂದಿ ಕಾಲಕೇಯರನ್ನೂ ಕೊಂದನು (೧೮-೧೯) ಆಮೇಲೆ ಬಿಳಿಯಮೋಡದಂತೆಯೂ ಕೈಲಾಸಗಿರಿಯಂತೆಯೂ ಶುಭ್ರವೂ ಉನ್ನತವೂ ಆಗಿದ್ದ ದಿವ್ಯವಾದ ವರುಣಭವನವು ಗೋಚರಿಸಿತು ಅಲ್ಲದೆ ಅಲ್ಲಿ ಹಾಲನ್ನು ಸುರಿಸುತ್ತಿದ್ದ ದಿವ್ಯಧೇನುವೂ ಕಾಣಿಸಿತು. ಶಿವನ ವಾಹನವಾದ ಮಹಾವೃಷಭಕ್ಕೆ ಮಾತೆಯಾದ ಆ ಧೇನುವನ್ನು ರಾವಣನು ವೀಕ್ಷಿಸಿದನು ಅದರ ಹಾಲಿನಿಂದಲೇ ಕ್ಷೀರಸಾಗರವು ನಿರ್ಮಿತವಾಗಿದೆ ಶೀತರಶ್ಮಿಯಾದ ಚಂದ್ರನು ಆ ಕ್ಷೀರಸಾಗರದಿಂದಲೇ ಅಲ್ಲವೆ ಉದಯಿಸಿದ್ದು? (೨೦-೨೨). ಫೇನಪರೆಂಬ ಋಷಿಗಳು ಆ ಕ್ಷೀರಸಮುದ್ರವನ್ನಾಶ್ರಯಿಸಿ ಜೀವಿಸುತ್ತಾರೆ ಅಲ್ಲಿಯೇ ದೇವತೆಗಳ ಆಹಾರವಾದ

ಯಾಂ ಬ್ರುವಂತಿ ನರಾ ಲೋಕೇ ಸುರಭಿಂ ನಾಮ ನಾಮತಃ ।
ಪ್ರದಕ್ಷಿಣಂ ತು ತಾಂ ಕೃತ್ವಾ ರಾವಣಃ ಪರಮಾದ್ಭುತಾಮ್ ॥ ೨೪
ಪ್ರವಿವೇಶ ಮಹಾಘೋರಂ ಗುಪ್ತಂ ಬಹುವಿಧೈರ್ಬಲೈಃ ।
ತೋಯಧಾರಾಶತಾಕೀರ್ಣಂ ಶಾರದಾಭ್ರನಿಭಂ ತದಾ ॥ ೨೫
ನಿತ್ಯಪ್ರಹೃಷ್ಟಂ ದದೃಶೇ ವರುಣಸ್ಯ ಗೃಹೋತ್ತಮಮ್ ।
ತತೋ ಹತ್ವಾ ಬಲಾಧ್ಯಕ್ಷಾನ್ ಸಮರೇ ತೈಶ್ಚ ತಾಡಿತಃ ॥ ೨೬
ಅಬ್ರವೀಚ್ಚ ತತೋ ಯೋಧಾನ್ ರಾಜಾ ಶೀಘ್ರಂ ನಿವೇದ್ಯತಾಮ್।
ಯುದ್ಧಾರ್ಥೀ ರಾವಣಃ ಪ್ರಾಪ್ತಸ್ತಸ್ಯ ಯುದ್ಧಂ ಪ್ರದೀಯತಾಮ್ ॥
ವದ ವಾ ನ ಭಯಂ ತೇಽಸ್ತಿ ನಿರ್ಜಿತೋಽಸ್ಮೀತಿ ಸಾಂಜಲಿಃ ।
ಏತಸ್ಮಿನ್ನಂತರೇ ಕ್ರುದ್ಧಾ ವರುಣಸ್ಯ ಮಹಾತ್ಮನಃ ॥ ೨೮
ಪುತ್ರಾಃ ಪೌತ್ರಾಶ್ಚ ನಿಷ್ಕ್ರಾಮನ್ ಗೌಶ್ಚ ಪುಷ್ಕರ ಏವ ಚ ।
ತೇ ತು ವೀರ್ಯಗುಣೋಪೇತಾ ಬಲೈಃ ಪರಿವೃತಾಃ ಸ್ವಕೈಃ ॥ ೨೯

---

ಅಮೃತವೂ ಸ್ವಧಾಭೋಜಿಗಳಾದ ಪಿತೃದೇವತೆಗಳ ಆಹಾರವಾದ ಕವ್ಯವೂ ಉತ್ಪನ್ನವಾಗಿದೆ. ದಶಗ್ರೀವನು ವಿಸ್ಮಯಾವಹವಾದ ಆ ಮಹಾಧೇನುವಿಗೆ ಪ್ರದಕ್ಷಿಣೆಮಾಡಿ, ಘೋರವಾದ ವರುಣಭವನದಲ್ಲಿ ನುಗ್ಗಿದನು (೨೩-೨೪). ಆ ಭವನವು ನಾನಾಬಗೆಯ ಭಟರಿಂದ ರಕ್ಷಿತವಾಗಿತ್ತು. ಶರತ್ಕಾಲದ ಮೇಘದಂತೆ ಶುಭ್ರವಾಗಿಯೂ ಜಲಧಾರಾಯಂತ್ರಗಳಿಂದ ವ್ಯಾಪ್ತವಾಗಿಯೂ ಆಮೋದ-ಪ್ರಮೋದಗಳಿಂದ ಉತ್ಸವಪೂರ್ಣವಾಗಿಯೂ ಇದ್ದಿತು. ದಶಗ್ರೀವನು ಕಾವಲುಗಾರರಾದ ಭಟರಿಂದ ಹೊಡೆತವನ್ನೂ ತಿಂದು ಅವರನ್ನೂ ಬಡಿದು ಕೊಂದು ಅವಶಿಷ್ಟರಾದ ಭಟರನ್ನು ನೋಡಿ ಹೀಗೆಂದನು (೨೫-೨೬). "ಎಲೈ ಭಟರ, ನಿಮ್ಮ ಒಡೆಯನಿಗೆ ತಿಳಿಸಿರಿ. ರಾವಣನು ಯುದ್ಧಾರ್ಥಿಯಾಗಿ ಬಂದಿದ್ದಾನೆ, ಅವನಿಗೆ ಯುದ್ಧವನ್ನು ನೀಡಬೇಕಂತೆ— ಎಂದು ತಿಳಿಸಿರಿ! ಇಲ್ಲವೆ, ಕೈಕಟ್ಟಿಕೊಂಡು ಬಂದು 'ಜಿತೋಽಸ್ಮಿ' ಎಂದು ಹೇಳಲಿ! ಆಗ ಮಾತ್ರ ಅವನಿಗೆ ಭಯವಿರದು!" ಎಂದನು (೨೭). ಅಷ್ಟರಲ್ಲಿ ಮಹಾತ್ಮನಾದ ವರುಣನ ಪುತ್ರರೂ ಪೌತ್ರರೂ ಸಂಕ್ರುದ್ಧರಾಗಿ, ಗೌ ಮತ್ತು ಪುಷ್ಕರ ಎಂಬ ಬಲಾಧ್ಯಕ್ಷರೊಡನೆ ಸೇನಾಪರಿವೃತರಾಗಿ,

ಯುಕ್ತ್ವಾ ರಥಾನ್ ಕಾಮಗಮಾನುದ್ಯದ್ಭಾಸ್ಕರವರ್ಚಸಃ ।
ತತೋ ಯುದ್ಧಂ ಸಮಭವದ್ದಾರುಣಂ ರೋಮಹರ್ಷಣಮ್ ॥ ೩೦

ಸಲಿಲೇಂದ್ರಸ್ಯ ಪುತ್ರಾಣಾಂ ರಾವಣಸ್ಯ ಚ ಧೀಮತಃ ।
ಅಮಾತ್ಯೈಶ್ಚ ಮಹಾವೀರ್ಯೈರ್ದಶಗ್ರೀವಸ್ಯ ರಕ್ಷಸಃ ॥ ೩೧

ದಾರುಣಂ ತದ್ಬಲಂ ಕೃತ್ಸ್ನಂ ಕ್ಷಣೇನ ವಿನಿಪಾತಿತಮ್ ।
ಸಮೀಕ್ಷ್ಯ ಸ್ವಬಲಂ ಸಂಖ್ಯೇ ವರುಣಸ್ಯ ಸುತಾಸ್ತದಾ ॥ ೩೨

ಅರ್ದಿತಾಃ ಶರಜಾಲೇನ ನಿವೃತ್ತಾ ರಣಕರ್ಮಣಃ ।
ಮಹೀತಲಗತಾಸ್ತೇ ತು ರಾವಣಂ ದೃಶ್ಯ ಪುಷ್ಪಕೇ ॥ ೩೩

ಆಕಾಶಮಾಶು ವಿವಿಶುಃ ಸ್ಯಂದನೈಃ ಶೀಘ್ರಗಾಮಿಭಿಃ ।
ಮಹದಾಸೀತ್ತತಸ್ತೇಷಾಂ ತುಲ್ಯಸ್ಥಾನಮವಾಪ್ಯ ತತ್ ॥ ೩೪

ಆಕಾಶಯುದ್ಧಂ ತುಮುಲಂ ದೇವದಾನವಯೋರಿವ ।
ತತಸ್ತೇ ರಾವಣಂ ಯುದ್ಧೇ ಶರೈಃ ಪಾವಕಸಂನಿಭೈಃ ॥ ೩೫

ವಿಮುಖೀಕೃತ್ಯ ಸಂತುಷ್ಟಾ ವಿನೇದುರ್ವಿವಿಧಾನ್ ರವಾನ್ ।
ತತೋ ಮಹೋದರಃ ಕ್ರುದ್ಧೋ ರಾಜಾನಂ ದೃಶ್ಯ ಧರ್ಷಿತಮ್ ॥

---

ಸೂರ್ಯನಂತೆ ಬೆಳಗುವ ದಿವ್ಯರಥಗಳನ್ನೇರಿ ಯುದ್ಧಕ್ಕೆ ಬಂದರು (೨೮-೨೯) ರಾಘವ, ಮೈನವಿರೇಳಿಸುವ ಅತಿಭೀಕರಸಂಗ್ರಾಮವು ನಡೆಯಿತು ಒಂದು ಕಡೆ ವರುಣಪುತ್ರರು, ಇನ್ನೊಂದು ಕಡೆ ರಾವಣ ಮತ್ತು ಶೂರಾಗ್ರೇಸರರಾದ ಅವನ ಅಮಾತ್ಯರು (೩೦-೩೧) ವರುಣಸೇನೆಯು ಒಂದು ಕ್ಷಣದಲ್ಲಿ ವಿಧ್ವಸ್ತ ವಾಯಿತು ನೆಲದಮೇಲಿದ್ದು ಹೋರಾಡುತ್ತಿದ್ದ ವರುಣಪುತ್ರರು ಶರನಿರ್ಭಿನ್ನಗಾತ್ರರಾದರು ರಾವಣನು ಪುಷ್ಪಕದಲ್ಲಿದ್ದುದನ್ನು ನೋಡಿ ಅವರೂ ಸಹ ರಥಗಳಿಂದ ಆಕಾಶವನ್ನಡರಿ ಹೋರಾಡತೊಡಗಿದರು ಹೀಗೆ ಉಭಯರೂ ಸಮವಾಗಿ ಗಗನತಳದಲ್ಲಿ ನಿಂತು ಹೊಡೆದಾಡಿದರು ದೇವದಾನವರಿಗೆ ನಡೆಯುವಂತೆ ದಾರುಣವಾದ ಕಾಳಗವು ನಡೆಯಿತು (೩೨-೩೫) ವರುಣಪುತ್ರರು ಅಗ್ನಿತುಲ್ಯಗಳಾದ ನಿಶಿತಾಸ್ತ್ರಗಳನ್ನು ಹೊಡೆದು ರಾವಣನನ್ನು ಹಿಮ್ಮೆಟ್ಟಿಸಿ ಬೊಬ್ಬಿರಿದರು ವರುಣಪುತ್ರರಿಂದ ತನ್ನೊಡೆಯನು

ತ್ಯಕ್ತ್ವಾ ನ್ಮೃತ್ಯುಭಯಂ ವೀರೋ ಯುದ್ಧಕಾಂಕ್ಷೀ ವ್ಯಲೋಕಯತ್
ತೇನ ತೇ ದಾರುಣಾ ಯುದ್ಧೇ ಕಾಮಗಾಃ ಪವನೋಪಮಾಃ ॥ ೩೭

ಮಹೋದರೇಣ ಗದಯಾ ಹತಾ ವೈ ಪ್ರಯಯುಃ ಕ್ಷಿತಿಮ್ ।
ತೇಷಾಂ ವರುಣಪುತ್ರಾಣಾಂ ಹತ್ವಾ ಯೋಧಾನ್ ಹಯಾನ್ ಶತಾನ್

ಮುಮೋಚಾಶು ಮಹಾನಾದಂ ವಿರಥಾನ್ ಪ್ರೇಕ್ಷ್ಯ ತಾನ್ ಸ್ಥಿತಾನ್
ತೇ ತು ತೇಷಾಂ ರಥಾಃ ಸಾಶ್ವಾಃ ಸಹ ಸಾರಥಿಭಿರ್ಹತೈಃ ॥ ೩೯

ಮಹೋದರೇಣ ನಿಹತಾಃ ಪತಿತಾಃ ಪೃಥಿವೀತಲೇ ।
ತೇ ತು ತ್ಯಕ್ತ್ವಾ ರಥಾನ್ ಪುತ್ರಾ ವರುಣಸ್ಯ ಮಹಾತ್ಮನಃ ॥ ೪೦

ಆಕಾಶೇ ವಿಷ್ಠಿತಾಃ ಶೂರಾಃ ಸ್ವಪ್ರಭಾವಾನ್ನ ವಿವ್ಯಥುಃ ।
ಧನೂಂಷಿ ಕೃತ್ವಾ ಸಜ್ಜಾನಿ ವಿನಿರ್ಭಿದ್ಯ ಮಹೋದರಮ್ ॥ ೪೧

ರಾವಣಂ ಸಮರೇ ಕ್ರುದ್ಧಾಃ ಸಹಿತಾಃ ಸಮಭಿದ್ರವನ್ ।
ಸಾಯಕೈಶ್ಚಾಪವಿಭ್ರಷ್ಟೈರ್ವಜ್ರಕಲ್ಪೈಃ ಸುದಾರುಣೈಃ ॥ ೪೨

ದಾರಯಂತಿ ಸ್ಮ ಸಂಕ್ರುದ್ಧಾ ಮೇಘಾ ಇವ ಮಹಾಗಿರಿಮ್ ।
ತತಃ ಕ್ರುದ್ಧೋ ದಶಗ್ರೀವಃ ಕಾಲಾಗ್ನಿರಿವ ನಿರ್ಗತಃ ॥ ೪೩

---

ಆಕ್ರಾಂತನಾದುದನ್ನು ಕಂಡು ಮಹೋದರನು ರುಷ್ಟನಾಗಿ, ಗದೆಯನ್ನು ತೂಗುತ್ತ ಯುದ್ಧಾಪೇಕ್ಷೆಯಿಂದ ಮುಂದೆ ಬಂದನು ಸುಂಟರಗಾಳಿಯಂತೆ ಸುಳಿಯುತ್ತ ಬಿರುಸಿನಿಂದ ಹೋರಾಡುತ್ತಿದ್ದ ವರುಣಪುತ್ರರು ಮಹೋದರನ ಗದಾಘಾತದಿಂದ ಕುಸಿದು ನೆಲಕ್ಕುರುಳಿದರು (೩೬-೩೭) ಮಹೋದರನು ವರುಣಪುತ್ರರ ಯೋಧರನ್ನೂ ನೂರಾರು ರಥಾಶ್ವಗಳನ್ನೂ ಬಡಿದು ಕೊಲ್ಲಲು, ಅವರು ವಿರಥರಾಗಿ ನೆಲಕ್ಕುರುಳಿದುದನ್ನು ಕಂಡು ಆ ರಾಕ್ಷಸನು ಸಿಂಹನಾದ ಮಾಡಿದನು (೩೮) ಹೀಗೆ ರಥಾಶ್ವಗಳೂ ಸಾರಥಿಗಳೂ ಹತರಾದರೂ ಧೀರರಾದ ವರುಣಪುತ್ರರು ಕಂಗೆಡದೆ, ತಮ್ಮ ತೇಜೋಬಲದಿಂದಲೇ ಮತ್ತೆ ಗಗನವನ್ನಡರಿ ಧನುಸ್ಸನ್ನು ಸಜ್ಜುಗೊಳಿಸಿ ಮಹೋದರನನ್ನು ಭಗ್ನಗೊಳಿಸಿ ಎಲ್ಲರೂ ಒಟ್ಟಾಗಿ ರಾವಣನನ್ನು ಸುತ್ತುಗಟ್ಟಿದರು (೩೯-೪೧). ಕಾರ್ಮೋಡಗಳು ಮಹಾಗಿರಿಯನ್ನು ಮುತ್ತುವಂತೆ ಮುತ್ತಿ, ಸಿಡಿಲುಗಳಂತಿರುವ ದಾರುಣಾಸ್ತ್ರಗಳಿಂದ ದಶಕಂಠನನ್ನು ಭೇದಿಸಿದರು. ದಶಕಂಠನನು

ಶರವರ್ಷೈರ್ಮಹಾಘೋರೈಸ್ತೇಷಾಂ ಮರ್ಮಸ್ವತಾಡಯತ್।
ತತಸ್ತೇನೈವ ಸಹಸಾ ಸೀದಂತಿ ಸ್ಮ ಪದಾತಯಃ ॥ ೪೪

ಮುಸಲಾನಿ ವಿಚಿತ್ರಾಣಿ ತತೋ ಭಲ್ಲಶತಾನಿ ಚ ।
ಪಟ್ಟಿಸಾಂಶ್ಚೈವ ಶಕ್ತೀಶ್ಚ ಶತಘ್ನೀತೋಮರಾಂಸ್ತಥಾ ॥ ೪೫

ಪಾತಯಾಮಾಸ ದುರ್ಧರ್ಷಸ್ತೇಷಾಮುಪರಿ ವಿಷ್ಠಿತಃ ।
ಅಪವಿದ್ಧಾಸ್ತು ತೇ ವೀರಾ ವಿನಿಷ್ಪೇತುಃ ಪದಾತಯಃ ॥ ೪೬

ಮಹಾಪಂಕಮಿವಾಸಾದ್ಯ ಕುಂಜರಾಃ ಷಷ್ಠಿಹಾಯನಾಃ ।
ಸೀದಮಾನಾನ್ ಸುತಾನ್ ದೃಷ್ಟ್ವಾ ವಿಹ್ವಲಾನ್ ಸುಮಹೌಜಸಃ ॥

ನನಾದ ರಾವಣೋ ಹರ್ಷಾನ್ಮಹಾನಂಬುಧರೋ ಯಥಾ ।
ತತೋ ರಕ್ಷೋ ಮಹಾನಾದಾನ್ ಮುಕ್ತ್ವಾ ಹಂತಿ ಸ್ಮ ವಾರುಣಾನ್॥

ನಾನಾಪ್ರಹರಣೋಪೇತೈರ್ಧಾರಾಪಾತೈರಿವಾಂಬುದಃ ।
ತತಸ್ತೇ ವಿಮುಖಾಃ ಸರ್ವೇ ಪತಿತಾ ಧರಣೀತಲೇ ॥ ೪೯

ರಣಾತ್ ಸ್ವಪುರುಷೈಃ ಶೀಘ್ರಂ ಗೃಹಾಣ್ಯೇವ ಪ್ರವೇಶಿತಾಃ ।
ತಾನಬ್ರವೀತ್ತತೋ ರಕ್ಷೋ ವರುಣಾಯ ನಿವೇದ್ಯತಾಮ್ ॥ ೫೦

---

ಕಾಲಾಗ್ನಿಯಂತೆ ಸಿಡಿದೆದ್ದು ಘೋರವಾದ ಶರವೃಷ್ಟಿಯನ್ನು ಸುರಿಸಿ, ಮುಸಲ ಭಲ್ಲ ಪಟ್ಟಸ ಶಕ್ತಿ ಶತಘ್ನಿ ತೋಮರ—ಮುಂತಾದ ಆಯುಧಗಳನ್ನು ತೆರಪಿಲ್ಲದೆ ಪ್ರಯೋಗಿಸಿ ವರುಣಪುತ್ರರ ಮರ್ಮಸ್ಥಳಗಳನ್ನು ನಿರ್ಭೇದಿಸಿದನು (೪೨-೪೫) ವೀರರಾದ ವರುಣಪುತ್ರರು ರಥಹೀನರಾಗಿದ್ದರು ಆ ತೇಜಸ್ವಿಗಳು ರಾವಣನ ಉಬ್ಬರವನ್ನು ತಡೆಯಲಾರದೆ, ಅರುವತ್ತುವರ್ಷದ ಮಹಾಗಜಗಳು ಆಳವಾದ ಕೆಸರಿನಲ್ಲಿ ಸಿಕ್ಕಿಕೊಂಡಂತೆ ತತ್ತರಿಸಿ ಕುಸಿದರು ಅವರ ದುರವಸ್ಥೆಯನ್ನು ಕಂಡು ರಾವಣನು ಹರ್ಷದಿಂದ ಮಹಾಮೇಘದಂತೆ ಅಬ್ಬರಿಸಿದನು ಅಬ್ಬರಿಸುತ್ತಲೇ ವರುಣಪುತ್ರರನ್ನು ಅಪ್ಪಳಿಸುತ್ತಿದ್ದನು (೪೬-೪೮). ಮೋಡವು ಧಾರಾಕಾರವಾಗಿ ಮಳೆ ಸುರಿಸುವಂತೆ ತೆರಪಿಲ್ಲದೆ ವಿವಿಧಾಯುಧಗಳನ್ನು ಅವನು ಪ್ರಯೋಗಿಸಲಾಗಿ, ವರುಣಪುತ್ರರು ವಿಮುಖರಾಗಿ ಧರೆಗಿಳಿದರು ವರುಣ ಪರಿವಾರದವರು ತಡಮಾಡದೆ ಅವರನ್ನು ಅವರವರ ಮನೆಗಳಿಗೆ ಶುಶ್ರೂಷೆಗಾಗಿ ಕರೆದೊಯ್ದರು ರಾವಣನು "ಎಲೈ ಭಟರೆ,

ರಾವಣಂ ತ್ವಬ್ರವೀನ್ಮಂತ್ರೀ ಪ್ರಭಾಸೋ ನಾಮ ವಾರುಣಃ ।
ಗತಃ ಖಲು ಮಹಾರಾಜೋ ಬ್ರಹ್ಮಲೋಕಂ ಜಲೇಶ್ವರಃ ॥ ೫೧

ಗಾಂಧರ್ವಂ ವರುಣಃ ಶ್ರೋತುಂ ಯಂ ತ್ವಮಾಹ್ವಯಸೇ ಯುಧಿ ।
ತತ್ ಕಿಂ ತವ ವೃಥಾ ವೀರ ಪರಿಶ್ರಮ್ಯ ಗತೇ ನೃಪೇ ॥ ೫೨

ಯೇ ತು ಸನ್ನಿಹಿತಾ ವೀರಾಃ ಕುಮಾರಾಸ್ತೇ ಪರಾಜಿತಾಃ ।
ರಾಕ್ಷಸೇಂದ್ರಸ್ತು ತಚ್ಛ್ರುತ್ವಾ ನಾಮ ವಿಶ್ರಾವ್ಯ ಚಾತ್ಮನಃ ॥ ೫೩

ಹರ್ಷಾನ್ನಾದಂ ವಿಮುಂಚನ್ ವೈ ನಿಷ್ಕ್ರಾಂತೋ ವರುಣಾಲಯಾತ್
ಆಗತಸ್ತು ಪಥಾ ಯೇನ ತೇನೈವ ವಿನಿವೃತ್ಯ ಸಃ ॥ ೫೪

ಲಂಕಾಮಭಿಮುಖೋ ರಕ್ಷೋ ನಭಃಸ್ಥಲಗತೋ ಯಯೌ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರಯೋವಿಂಶಃ ಸರ್ಗಃ



ವರುಣನಿಗೆ ತಿಳಿಸಿರಿ!" ಎಂದನು (೪೯-೫೦) ಆಗ ಪ್ರಭಾಸನೆಂಬ ವರುಣ ಸಚಿವನು ಬಂದು "ಅಯ್ಯಾ—ದಶಗ್ರೀವ, ನಮ್ಮ ಮಹಾರಾಜನಾದ ವರುಣನು ಗಂಧರ್ವಗಾನವನ್ನು ಕೇಳುವುದಕ್ಕಾಗಿ ಬ್ರಹ್ಮಲೋಕಕ್ಕೆ ಹೋಗಿದ್ದಾನೆ ಆತನನ್ನು ಯುದ್ಧಕ್ಕಾಗಿ ಕರೆಯುವೆಯಲ್ಲ ಮಹಾರಾಜನಿಲ್ಲದಾಗ ನಿನ್ನ ಈ ಶ್ರಮವೆಲ್ಲವೂ ವ್ಯರ್ಥವಲ್ಲವೆ? (೫೧-೫೨) ಇಲ್ಲಿರುವ ರಾಜಕುಮಾರರೆಲ್ಲರೂ ಪರಾಜಿತರಾದರು" ಎಂದನು ರಾಕ್ಷಸೇಂದ್ರನು ಆ ಮಂತ್ರಿಯ ನುಡಿಯನ್ನು ಕೇಳಿ "ಓಹೋ! ರಾವಣನಿಗೆ ದಿಗ್ವಿಜಯವಾಯಿತು. ಬಂದವನು ರಾವಣ!" ಎಂದು ತನ್ನ ಹೆಸರನ್ನು ಘೋಷಿಸಿ, ಹರ್ಷದಿಂದ ಸಿಂಹನಾದಮಾಡುತ್ತ ವರುಣಲೋಕದಿಂದ ಹೊರಟನು. ತಾನು ಹೋದ ದ್ವಾರಿಯಿಂದಲೇ ಹಿಂದಿರುಗಿ, ಆಕಾಶಮಾರ್ಗವಾಗಿ ಲಂಕಾಭಿಮುಖನಾಗಿ ಬಂದನು (೫೩-೫೪)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತುಮೂರನೆಯ ಸರ್ಗ



## ಚತುರ್ವಿಂಶಃ ಸರ್ಗಃ

### ಖರಶೂರ್ಪಣಖಾದಂಡಕಾನಿವಾಸಾದೇಶಃ

ನಿವರ್ತಮಾನಃ ಸಂಹೃಷ್ಟೋ ರಾವಣಃ ಸುದುರಾತ್ಮವಾನ್ ।
ಜಹ್ರೇ ಪಥಿ ನರೇಂದ್ರರ್ಷಿದೇವಗಂಧರ್ವಕನ್ಯಕಾಃ ॥ ೧

ದರ್ಶನೀಯಾಂ ಹಿ ಯಾಂ ರಕ್ಷಃ ಕನ್ಯಾಂ ಸ್ತ್ರೀಂ ವಾಥ ಪಶ್ಯತಿ ।
ಹತ್ವಾ ಬಂಧುಜನಂ ತಸ್ಯಾ ವಿಮಾನೇ ತಾಂ ರುರೋಧ ಹ ॥ ೨

ಏವಂ ಪನ್ನಗಕನ್ಯಾಶ್ಚ ರಾಕ್ಷಸಾಸುರಮಾನುಷೀಃ ।
ಯಕ್ಷದಾನವಕನ್ಯಾಶ್ಚ ವಿಮಾನೇ ಸೋಽಧ್ಯರೋಪಯತ್ ॥ ೩

ತಾಶ್ಚ ಸರ್ವಾಃ ಸಮಂ ದುಃಖಾನ್ಮುಮುಚುರ್ಬಾಷ್ಪಜಂ ಜಲಮ್ ।
ತುಲ್ಯಮಗ್ನ್ಯರ್ಚಿಷಾಂ ತತ್ರ ಶೋಕಾಗ್ನಿಭಯಸಂಭವಮ್ ॥ ೪

## ಸರ್ಗ ೨೪

ಬಲೈಶ್ವರ್ಯಮತ್ತನಾದ ರಾವಣನು ಸುಂದರ ಸ್ತ್ರೀಯರನ್ನು ಬಲಾತ್ಕಾರದಿಂದ ಅಪಹರಿಸುವುದು  ಶೂರ್ಪಣಖೆಯನ್ನು ಸಂತೈಸಿ, ಖರನೊಡನೆ ದಂಡಕಾರಣ್ಯಕ್ಕೆ ಕಳಿಸುವುದು

ಶ್ರೀರಾಮ, ಹೀಗೆ ವಿಜಯಶಾಲಿಯಾಗಿ ರಾವಣನು ಹಿಂದಿರುಗುವಾಗ, ದಾರಿಯಲ್ಲಿ ಕಂಡಕಂಡ ರಾಜರ್ಷಿ ಕನ್ಯೆಯರನ್ನೂ ದೇವಗಂಧರ್ವಸ್ತ್ರೀಯರನ್ನೂ ಆ ದುರಾತ್ಮನು ಅಪಹರಿಸಿ ತರುತ್ತಿದ್ದನು. ಅವಳು ಕನ್ಯೆಯಾಗಿರಲಿ, ಪರವನಿತೆಯಾಗಿರಲಿ—ಯಾವಳು ಸುಂದರಿಯಾಗಿ ತೋರುವಳೋ ಅವಳ ಬಂಧುಗಳನ್ನು ಕೊಂದು ಅವಳನ್ನು ಆ ರಾಕ್ಷಸನು ವಿಮಾನದಲ್ಲಿ ಸೆರೆಹಿಡಿದು ತಂದನು (೧-೨) ಹೀಗೆ ನಾಗಕನ್ಯೆಯರನ್ನೂ ರಾಕ್ಷಸಾಸುರ ಮಾನುಷ ಸ್ತ್ರೀಯರನ್ನೂ ಯಕ್ಷ-ದಾನವಾಂಗನೆಯರನ್ನೂ ಪುಷ್ಪಕ ವಿಮಾನದಲ್ಲಿ ತುಂಬಿದನು. ಶೋಕಾಗ್ನಿಯಿಂದಲೂ ಭಯದಿಂದಲೂ ಬಸವಳಿದ ಆ ಸ್ತ್ರೀಯರು ಬೆಂಕಿಯ ಕಿಡಿಗಳಂತೆ ಬಿಸಿಬಿಸಿಯಾದ ಕಂಬನಿಯನ್ನು

ತಾಭಿಃ ಸರ್ವಾನವದ್ಯಾಭಿರ್ನದೀಭಿರಿವ ಸಾಗರಃ ।
ಆಪೂರಿತಂ ವಿಮಾನಂ ತದ್ಭಯಶೋಕಾಶಿವಾಶ್ರುಭಿಃ ॥ ೫

ನಾಗಗಂಧರ್ವಕನ್ಯಾಶ್ಚ ಮಹರ್ಷಿತನಯಾಶ್ಚ ಯಾಃ ।
ದೈತ್ಯದಾನವಕನ್ಯಾಶ್ಚ ವಿಮಾನೇ ಶತಶೋಽರುದನ್ ॥ ೬

ದೀರ್ಘಕೇಶ್ಯಃ ಸುಚಾರ್ವಂಗ್ಯಃ ಪೂರ್ಣಚಂದ್ರನಿಭಾನನಾಃ ।
ಪೀನಸ್ತನ್ಯಸ್ತಥಾ ವಜ್ರವೇದಿಮಧ್ಯಸಮಪ್ರಭಾಃ ॥ ೭

ರಥಕೂಬರಸಂಕಾಶೈಃ ಶ್ರೋಣಿದೇಶೈರ್ಮನೋಹರಾಃ ।
ಸ್ತ್ರಿಯಃ ಸುರಾಂಗನಾಪ್ರಖ್ಯಾ ನಿಷ್ಟಪ್ತಕನಕಪ್ರಭಾಃ ॥ ೮

ಶೋಕದುಃಖಭಯತ್ರಸ್ತಾ ವಿಹ್ವಲಾಶ್ಚ ಸುಮಧ್ಯಮಾಃ ।
ತಾಸಾಂ ನಿಃಶ್ವಾಸವಾತೇನ ಸರ್ವತಃ ಸಂಪ್ರದೀಪಿತಮ್ ॥ ೯

ಅಗ್ನಿಹೋತ್ರಮಿವಾಭಾತಿ ಸಂನಿರುದ್ಧಾಗ್ನಿ ಪುಷ್ಪಕಮ್ ।
ದಶಗ್ರೀವವಶಂ ಪ್ರಾಪ್ತಾಸ್ತಾಸು ಶೋಕಾಕುಲಾಃ ಸ್ತ್ರಿಯಃ ॥ ೧೦

---

ಹರಿಸುತ್ತಿದ್ದರು (೩-೪) ಹೊಳೆಗಳಿಂದ ಕಡಲು ತುಂಬುವಂತೆ ಶೋಕದಿಂದ ಕಳವಳಿಸುತ್ತ ಕಂಬನಿಗರೆವ ಆ ಸುಂದರಿಯರಿಂದ ಪುಷ್ಪಕ ವಿಮಾನವು ತುಂಬಿತ್ತು ನಾಗ ಗಂಧರ್ವಕನ್ಯೆಯರೂ ಮಹರ್ಷಿಸುತೆಯರೂ ದೈತ್ಯ ದಾನವರ ಕುವರಿಯರೂ ನೂರಾರು ಸಂಖ್ಯೆಯಲ್ಲಿ ನೇರಿ ವಿಮಾನದಲ್ಲಿ ಅಳುತ್ತಿದ್ದರು ಅವರೆಲ್ಲರೂ ನೀಳವಾದ ಕೇಶರಾಶಿಯುಳ್ಳವರು, ಸುಂದರಾಂಗಿಯರು, ಪೂರ್ಣಚಂದ್ರಾನನೆಯರು, ಪೀನಸ್ತನಿಯರು, ವಜ್ರ ದಂತೆಯೂ ವೇದಿಮಧ್ಯದ ಜ್ವಾಲೆಯಂತೆಯೂ ಮಿರುಮಿರುಗುವ ದೇಹಕಾಂತಿ ಯುಳ್ಳವರು (೫-೭) ತೇರಿನ ಮೂಕಿಯಂತೆ ವಿಶಾಲವಾದ ಶ್ರೋಣಿಪ್ರದೇಶ ಗಳಿಂದ ಶೋಭಿಸತಕ್ಕವರು, ಎಲ್ಲರೂ ಅಪರಂಜಿಯ ಮೈಬಣ್ಣದವರಾಗಿ ಅಪ್ಸರೆಯರಂತೆ ವಿರಾಜಿಸುವ ಲಲನೆಯರು ಆ ಚೆಲುವೆಯರು ದಿಕ್ಕುಗಾಣದೆ ಕಂಗೆಟ್ಟು ಕಳವಳಿಸಿ ಭಯದಿಂದ ನಡುನಡುಗಿ ಉಸ್ಸೆಂದು ಬಿಸಿಯುಸಿರು ಬಿಡುತ್ತಿರಲು, ಉರಿಯುವಂತಿದ್ದ ಪುಷ್ಪಕ ವಿಮಾನವು ಅಗ್ನಿಕುಂಡದಂತೆ ಕಾಣಿಸುತ್ತಿತ್ತು (೮-೯) ದಶಗ್ರೀವನ ವಶಕ್ಕೆ ಸಿಕ್ಕಿದ ಆ ವನಿತೆಯರ

ದೀನವಕ್ತ್ರೇಕ್ಷಣಾಃ ಶ್ಯಾಮಾ ಮೃಗ್ಯಃ ಸಿಂಹವಶಾ ಇವ ।
ಕಾಚಿಚ್ಚಿಂತಯತೀ ತತ್ರ ಕಿಂ ನುಂ ಮಾಂ ಭಕ್ಷಯಿಷ್ಯತಿ ॥ ೧೧

ಕಾಚಿದ್ಧಧ್ಯೌ ಸುದುಃಖಾರ್ತಾ ಅಪಿ ಮಾಂ ಮಾರಯೇದಯಮ್ ।
ಇತಿ ಮಾತೃಪಿತೄನ್ ಸ್ಮೃತ್ವಾ ಭರ್ತೄನ್ ಭ್ರಾತೄಂಸ್ತಥೈವ ಚ ॥

ದುಃಖಶೋಕಸಮಾವಿಷ್ಟಾ ವಿಲೇಪುಃ ಸಹಿತಾಃ ಸ್ತ್ರಿಯಃ ।
ಕಥಂ ನು ಖಲು ಮೇ ಪುತ್ರೋ ಭವಿಷ್ಯತಿ ಮಯಾ ವಿನಾ ॥ ೧೩

ಮಾತಾ ಕಥಂ ಕಥಂ ಭ್ರಾತಾ ನಿಮಗ್ನಾಃ ಶೋಕಸಾಗರೇ ।
ಹಾ ಕಥಂ ನು ಕರಿಷ್ಯಾಮಿ ಭರ್ತುಸ್ತಸ್ಮಾದಹಂ ವಿನಾ ॥ ೧೪

ಮೃತ್ಯೋ ಪ್ರಸಾದಯಾಮಿ ತ್ವಾಂ ನಯ ಮಾಂ ದುಃಖಭಾಗಿನೀಮ್
ಕಿಂನು ತದ್‌ದುಷ್ಕೃತಂ ಕರ್ಮ ಪುರಾ ದೇಹಾಂತರೇ ಕೃತಮ್ ॥ ೧೫

ಏವಂ ಸ್ಮ ದುಃಖಿತಾಃ ಸರ್ವಾಃ ಪತಿತಾಃ ಶೋಕಸಾಗರೇ ।
ನ ಖಲ್ವಿದಾನೀಂ ಪಶ್ಯಾಮೋ ದುಃಖಸ್ಯಾಸ್ಯಾಂತಮಾತ್ಮನಃ ॥ ೧೬

---

ಮುಖದಲ್ಲಿಯೂ ಕಣ್ಣಲ್ಲಿಯೂ ದೈನ್ಯವು ತುಂಬಿಕೊಂಡಿತ್ತು ಸಿಂಹದ ವಶಕ್ಕೆ ಬಂದ ಹೆಣ್ಣುಜಿಂಕೆಗಳಂತೆ ಶೋಕಾವಿಷ್ಟರಾಗಿದ್ದರು 'ಓ! ಈ ರಾಕ್ಷಸನು ನನ್ನನ್ನು ತಿಂದುಬಿಡುವನು' ಎಂದು ಒಬ್ಬಳು ಚಿಂತಿಸಿದಳು (೧೦-೧೧) ಇನ್ನೊಬ್ಬಳು ದುಃಖಾರ್ತೆಯಾಗಿ 'ಈತನು ನನ್ನನ್ನು ಕೊಲ್ಲಿಸುವನು' ಎಂದು ಆಲೋಚಿಸಿದಳು ಈ ಪ್ರಕಾರದಲ್ಲಿ ಶೋಕಾಕುಲರಾದ ಆ ಸ್ತ್ರೀಯರು ತಮ್ಮ ತಾಯಿತಂದೆಯರನ್ನೂ ಗಂಡಂದಿರನ್ನೂ ಅಣ್ಣತಮ್ಮಂದಿರನ್ನೂ ನೆನೆನೆನೆದು ಅತ್ತರು "ಅಯ್ಯೊ - ನನ್ನನ್ನಗಲಿದ ಮಗನ ಪರಿಸ್ಥಿತಿ ಏನು? ನನ್ನ ತಾಯಿಯ ಗತಿಯೇನು? ನನ್ನ ಸೋದರನು ಏನಾಗುವನೋ! ಹಾ ಹಾ! ನನ್ನ ಕಾಂತನನ್ನಗಲಿದೆನಲ್ಲ, ಏನು ಮಾಡಲಿ? (೧೨-೧೪) ಓ ಮೃತ್ಯು ದೇವತೆಯೆ, ಬೇಡಿಕೊಳ್ಳುತ್ತೇನೆ, ಪ್ರಸನ್ನನಾಗು. ದುಃಖಭಾಗಿನಿಯಾದ ನನ್ನನ್ನು ಒಯ್ದುಬಿಡು ಅಯ್ಯೊ, ಜನ್ಮಾಂತರದಲ್ಲಿ ಯಾವ ಪಾಪಕೃತ್ಯವನ್ನು ಮಾಡಿದ್ದೆವೋ ಈ ಶೋಕಸಾಗರದಲ್ಲಿ ಮುಳುಗಿಹೋದೆವಲ್ಲ!

ಅಹೋ ಧಿಙ್ಮಾನುಷಂ ಲೋಕಂ ನಾಸ್ತಿ ಖಲ್ವಧಮಃ ಪರಃ ।
ಯದ್ದುರ್ಬಲಾ ಬಲವತಾ ಭರ್ತಾರೋ ರಾವಣೇನ ನಃ ॥ ೧೭

ಸೂರ್ಯೇಣೋದಯತಾ ಕಾಲೇ ನಕ್ಷತ್ರಾಣೀವ ನಾಶಿತಾಃ ।
ಅಹೋ ಸುಬಲವದ್ರಕ್ಷೋ ವಧೋಪಾಯೇಷು ರಜ್ಯತೇ ॥ ೧೮

ಅಹೋ ದುರ್ವೃತ್ತಮಾಸ್ಥಾಯ ನಾತ್ಮಾನಂ ವೈ ಜುಗುಪ್ಸತೇ ।
ಸರ್ವಥಾ ಸದೃಶಸ್ತಾವದ್ವಿಕ್ರಮೋಽಸ್ಯ ದುರಾತ್ಮನಃ ॥ ೧೯

ಇದಂ ತ್ವಸದೃಶಂ ಕರ್ಮ ಪರದಾರಾಭಿಮರ್ಶನಮ್ ।
ಯಸ್ಮಾದೇಷ ಪರಕ್ಯಾಸು ರಮತೇ ರಾಕ್ಷಸಾಧಮಃ ॥ ೨೦

ತಸ್ಮಾದ್ವೈ ಸ್ತ್ರೀಕೃತೇನೈವ ಪ್ರಾಪ್ಸ್ಯತೇ ದುರ್ಮತಿರ್ವಧಮ್ ।
ಸತೀಭಿರ್ವರನಾರೀಭಿರೇವಂ ವಾಕ್ಯೇಽಭ್ಯುದೀರಿತೇ ॥ ೨೧

ನೇದುರ್ದುಂದುಭಯಃ ಖಸ್ಥಾಃ ಪುಷ್ಪವೃಷ್ಟಿಃ ಪಪಾತ ಚ ।
ಶಪ್ತಃ ಸ್ತ್ರೀಭಿಃ ಸ ತು ಸಮಂ ಹತೌಜಾ ಇವ ನಿಷ್ಪ್ರಭಃ ॥ ೨೨

---

ಈ ದುಃಖಕ್ಕೆ ಪಾರವೇ ಕಾಣದಲ್ಲ (೧೫-೧೬) ಹಾ ಅಯ್ಯೋ, ಈ ಮನುಷ್ಯ ಜನ್ಮಕ್ಕೆ ಧಿಕ್ಕಾರ! ಇದಕ್ಕಿಂತ ನೀಚಜನ್ಮ ಇನ್ನೊಂದಿಲ್ಲ ಪ್ರಬಲನಾದ ಈ ರಾವಣನು ನಮ್ಮ ಗಂಡಂದಿರನ್ನು ಕೊಂದುಬಿಟ್ಟನೆ! ಸೂರ್ಯೋದಯ ವಾದಾಗ ನಕ್ಷತ್ರಗಳಂತೆ ಕಣ್ಮರೆಯಾದರೆ! ಅಬ್ಬಾ! ಈ ರಾಕ್ಷಸನು ಎಷ್ಟು ಬಲಶಾಲಿ! ಪರರನ್ನು ಕೊಲ್ಲುವುದೆಂದರ ಇವನಿಗೊಂದು ಆನಂದಕರವಾದ ಆಟವಾಯಿತಲ್ಲ! (೧೭-೧೮) ಆಹಾ! ಎಂತಹ ದೌಷ್ಟ್ಯವಿದು! ತನ್ನ ಕೆಟ್ಟನಡತೆಗಾಗಿ ಈ ರಾಕ್ಷಸನಿಗೆ ಹೇಸಿಕೆಯೂ ಆಗದಲ್ಲ ಈ ದುರಾತ್ಮನು ತಪೋಬಲದಿಂದ ಅದ್ಭುತ ಪರಾಕ್ರಮವನ್ನು ಸಂಪಾದಿಸಿದ್ದಾನೆ ಅದೇನೋ ಸರಿ. ಆದರೆ ಪರಸ್ತ್ರೀಯರಮೇಲೆ ಕೈಮಾಡುವುದು ಸರ್ವಥಾ ಅಯುಕ್ತ. ಈ ಅಧಮನು ಪರವನಿತೆಯರಲ್ಲಿ ಆಸಕ್ತನಾಗಿದ್ದಾನೆ" ಎಂದು ಆ ಸ್ತ್ರೀಯರು ಗೋಳಾಡಿದರು (೧೯-೨೦) "ಆದ್ದರಿಂದ ಒಂದಲ್ಲ ಒಂದು ದಿನ ಸ್ತ್ರೀನಿಮಿತ್ತ ವಾಗಿಯೇ ಈತನು ಸಾಯುವನು!" ಎಂದು ಪತಿವ್ರತೆಯರಾದ ಆ ಸಾಧ್ವಿಯರು ನುಡಿದರು ಒಡನೆಯೇ ದೇವದುಂದುಭಿಗಳು ಮೊಳಗಿದವು. ಆಕಾಶದಿಂದ ಹೂವಳೆ ಸುರಿಯಿತು ಈ ರೀತಿಯಲ್ಲಿ ಆ ಗರತಿಯರು ಶಪಿಸ

ಪತಿವ್ರತಾಭಿಃ ಸಾಧ್ವೀಭಿರ್ಭರ್ತೃಭಿರ್ಗೃಹೈಸ್ಸಹ |
ಏವಂ ವಿಲಪಿತಂ ತಾಸಾಂ ಶೃಣ್ವನ್ ರಾಕ್ಷಸಪುಂಗವಃ || ೨೩

ಪ್ರವಿವೇಶ ಪುರೀಂ ಲಂಕಾಂ ಪೂಜ್ಯಮಾನೋ ನಿಶಾಚರೈಃ |
ಏತಸ್ಮಿನ್ನಂತರೇ ಘೋರಾ ರಾಕ್ಷಸೀ ಕಾಮರೂಪಿಣೀ || ೨೪

ಸಹಸಾ ಪತಿತಾ ಭೂಮೌ ಭಗಿನೀ ರಾವಣಸ್ಯ ಸಾ |
ತಾಂ ಸ್ವಸಾರಂ ಸಮುತ್ಥಾಪ್ಯ ರಾವಣಃ ಪರಿಸಾಂತ್ವಯನ್ || ೨೫

ಅಬ್ರವೀತ್ ಕಿಮಿದಂ ಭದ್ರೇ ವಕ್ತುಕಾಮಾಸಿ ಮೇ ದ್ರುತಮ್ |
ಸಾ ಬಾಷ್ಪಪರಿರುದ್ಧಾಕ್ಷೀ ರಕ್ತಾಕ್ಷೀ ವಾಕ್ಯಮಬ್ರವೀತ್ || ೨೬

ಕೃತಾಸ್ಮಿ ವಿಧವಾ ರಾಜಂಸ್ತ್ವಯಾ ಬಲವತಾ ಬಲಾತ್ |
ಏತೇ ರಾಜಂಸ್ತ್ವಯಾ ವೀರಾ ದೈತ್ಯಾ ವಿನಿಹತಾ ರಣೇ || ೨೭

ಕಾಲಕೇಯಾ ಇತಿ ಖ್ಯಾತಾಃ ಸಹಸ್ರಾಣಿ ಚತುರ್ದಶ |
ಪ್ರಾಣೇಭ್ಯೋಽಪಿ ಗರೀಯಾನ್ ಮೇ ತತ್ರ ಭರ್ತಾ ಮಹಾಬಲಃ ||

---

ಲಾಗಿ, ರಾವಣನು ಕಳೆಗುಂದಿದನು ಅವನು ಖಿನ್ನನಾದನು (೨೧-೨೨) ಆದರೇನು? ಶ್ರೀರಾಮ, ಆ ರಾಕ್ಷಸನು ಸ್ತ್ರೀಯರ ಗೋಳಾಟವನ್ನು ಒಂದು ಕಿವಿಯಿಂದ ಕೇಳುತ್ತಲೇ, ಇತ್ತ ಲಂಕಾನಗರವನ್ನು ಪ್ರವೇಶಿಸಿದನು ನಗರದಲ್ಲಿದ್ದ ರಾಕ್ಷಸರು ಅವನನ್ನು ಆದರದಿಂದ ಸ್ವಾಗತಿಸಿದರು (೨೩) ಅಷ್ಟರಲ್ಲಿ ದಶಗ್ರೀವನ ತಂಗಿಯೂ ಕಾಮರೂಪಿಣಿಯೂ ಆದ ಶೂರ್ಪಣಖೆಯು ಭೀಕರಾಕೃತಿಯಲ್ಲಿ ಬಂದು, ರಾವಣನೆದುರಿಗೆ ನೆಲದಮೇಲೆ ಅಡ್ಡಬಿದ್ದಳು ರಾವಣನು ಅವಳನ್ನೆಬ್ಬಿಸಿ ಸಂತೈಸುತ್ತ "ತಂಗಿ, ಇದೇನು? ಏನು ಹೇಳಬೇಕೆಂದಿರುವೆ? ತಡಮಾಡದೆ ತಿಳಿಸು" ಎಂದು ಕೇಳಿದನು (೨೪-೨೫) ಅವಳ ಕಣ್ಣು ಕೆಂಪಡರಿತ್ತು ಕಂಬನಿ ಸುರಿಯುತ್ತಿತ್ತು ಅವಳು "ಮಹಾರಾಜ, ನಾನು ವಿಧವೆಯಾದೆನು! ಬಲಶಾಲಿಯಾದ ನೀನೇ ಹರದಿಂದ ಹೀಗೆ ಮಾಡಿದ್ದೀಯೆ! ಕಾಲಕೇಯರೆಂಬ ಹದಿನಾಲ್ಕು ಸಾವಿರ ದೈತ್ಯರನ್ನು ಸಂಹರಿಸಿದ್ದೀಯೆ ಅವರಲ್ಲೊಬ್ಬನಾದ ನನ್ನ ಗಂಡನನ್ನು—ನನ್ನ

ಸೋಽಪಿ ತ್ವಯಾ ಹತಸ್ತಾತ ರಿಪುಣಾ ಭ್ರಾತೃಗೃಧ್ನುನಾ ।
ತ್ವಯಾಸ್ಮಿ ನಿಹತಾ ರಾಜನ್ ಸ್ವಯಮೇವ ಹಿ ಬಂಧುನಾ ॥ ೨೯

ರಾಜನ್ ವೈಧವ್ಯಶಬ್ದಂ ಚ ಭೋಕ್ಷ್ಯಾಮಿ ತ್ವತ್ಕೃತೇ ಹ್ಯಹಮ್ ।
ನನು ನಾಮ ತ್ವಯಾ ರಕ್ಷ್ಯೋ ಜಾಮಾತಾ ಸಮರೇಷ್ವಪಿ ॥ ೩೦

ಸ ತ್ವಯಾ ನಿಹತೋ ಯುದ್ಧೇ ಸ್ವಯಮೇವ ನ ಲಜ್ಜಸೇ ।
ಏವಮುಕ್ತೋ ದಶಗ್ರೀವೋ ಭಗಿನ್ಯಾಕ್ರೋಶಮಾನಯಾ ॥ ೩೧

ಅಬ್ರವೀತ್ ಸಾಂತ್ವಯಿತ್ವಾ ತಾಂ ಸಾಮಪೂರ್ವಮಿದಂ ವಚಃ ।
ಅಲಂ ವತ್ಸೇ ರುದಿತ್ವಾ ತೇ ನ ಭೇತವ್ಯಂ ಚ ಸರ್ವಶಃ ॥ ೩೨

ದಾನಮಾನಪ್ರಸಾದೈಸ್ತ್ವಾಂ ತೋಷಯಿಷ್ಯಾಮಿ ಯತ್ನತಃ ।
ಯುದ್ಧಪ್ರಮತ್ತೋ ವ್ಯಾಕ್ಷಿಪ್ತೋ ಜಯಕಾಂಕ್ಷೀ ಕ್ಷಿಪನ್ ಶರಾನ್ ॥

ನಾವಗಚ್ಛಾಮಿ ಯುದ್ಧೇಷು ಸ್ವಾನ್ ಪರಾನ್ ವಾಪ್ಯಹಂ ಶುಭೇ ।
ಜಾಮಾತರಂ ನ ಜಾನೇ ಸ್ಮ ಪ್ರಹರನ್ ಯುದ್ಧದುರ್ಮದಃ ॥ ೩೪

---

ಪ್ರಾಣಕ್ಕಿಂತಲೂ ಪ್ರಿಯನಾದ ಪತಿಯನ್ನು ವಧಿಸಿದೆಯಲ್ಲ! ಅಣ್ಣನೆಂಬ ಹೆಸರಿನ ವೈರಿ ನೀನು! ಬಂಧುವಾದ ನೀನೇ ನನ್ನನ್ನು ಕೆಡಿಸಿದೆ (೨೬-೨೯). ಮಹಾರಾಜ, ನಿನ್ನಿಂದ ನನಗೆ 'ಮುಂಡೆ' ಎಂಬ ಬಿರುದು ಬಂದಿತು! ಎಂತಹ ಸಮರ ಒದಗಿದರೂ ಮನೆಯ ಅಳಿಯನನ್ನು ನೀನು ರಕ್ಷಿಸಬೇಕಲ್ಲವೆ? ಅದನ್ನು ಬಿಟ್ಟು ನೀನೇ ನಿನ್ನ ಕೈಯಿಂದ ಅವನನ್ನು ಕೊಂದೆಯಲ್ಲ! ನಿನಗೆ ನಾಚಿಕೆ ಇಲ್ಲವೆ?" ಎಂದಳು (೩೦-೩೧) ಹೀಗೆ ಆಕ್ರೋಶದಿಂದ ಶೂರ್ಪಣಖೆಯು ಕೂಗಾಡುತ್ತಿರಲು, ರಾವಣನು ಅವಳನ್ನು ಸಮಾಧಾನಪಡಿಸುತ್ತ ಸಾಮದಿಂದ "ವತ್ಸೆ, ಅಳಬೇಡ, ಹೆದರಬೇಡ. ನಿನಗೆ ಏನು ಬೇಕಾದರೂ ಕೊಡುವೆನು ಆದರದಿಂದ ನೋಡಿಕೊಳ್ಳುವೆನು ನಿನ್ನ ಮನಕ್ಕೆ ಚ್ಯುತಿಯಿಲ್ಲದಂತೆ ಗೌರವಿಸುವ ಭಾರ ನನ್ನದು ತಂಗಿ, ನಾನು ರಣಭೂಮಿಯಲ್ಲಿ ನುಗ್ಗಿದಾಗ ಮೈಮೇಲೆ ಪ್ರಜ್ಞೆಯೇ ಇರುವುದಿಲ್ಲ. ಮನಸ್ಸು ವಿಕ್ಷಿಪ್ತವಾಗಿರುತ್ತದೆ ವಿಜಯವೊಂದೇ ನನ್ನ ಗುರಿಯಾಗಿರುತ್ತದೆ (೩೨-೩೩) ಶರಗಳನ್ನು ಒಂದೇ ಸಮನೆ ತೂರುತ್ತಿರುವೆನೇ ಹೊರತು, ನನ್ನವರು ಯಾರು, ಪರರು ಯಾರು – ಎಂಬ ಅರಿವೇ ನನಗಿರುವುದಿಲ್ಲ!

ತೇನಾಸೌ ನಿಹತಃ ಸಂಖ್ಯೇ ಮಯಾ ಭರ್ತಾ ತವ ಸ್ವಸಃ ।
ಅಸ್ಮಿನ್ ಕಾಲೇ ತು ಯತ್ಪ್ರಾಪ್ತಂ ತತ್ಕರಿಷ್ಯಾಮಿ ತೇ ಹಿತಮ್ ॥
ಭ್ರಾತುರೈಶ್ವರ್ಯಯುಕ್ತಸ್ಯ ಖರಸ್ಯ ವಸ ಪಾರ್ಶ್ವತಃ ।
ಚತುರ್ದಶಾನಾಂ ಭ್ರಾತಾ ತೇ ಸಹಸ್ರಾಣಾಂ ಭವಿಷ್ಯತಿ ॥ ೩೬
ಪ್ರಭುಃ ಪ್ರಯಾಣೇ ದಾನೇ ಚ ರಾಕ್ಷಸಾನಾಂ ಮಹಾಬಲಃ ।
ತತ್ರ ಮಾತೃಷ್ವಸೇಯಸ್ತೇ ಭ್ರಾತಾಯಂ ವೈ ಖರಃ ಪ್ರಭುಃ ॥ ೩೭
ಭವಿಷ್ಯತಿ ತವಾದೇಶಂ ಸದಾ ಕುರ್ವನ್ನಿಶಾಚರಃ ।
ಶೀಘ್ರಂ ಗಚ್ಛತ್ವಯಂ ವೀರೋ ದಂಡಕಾನ್ ಪರಿರಕ್ಷಿತುಮ್ ॥ ೩೮
ದೂಷಣೋಽಸ್ಯ ಬಲಾಧ್ಯಕ್ಷೋ ಭವಿಷ್ಯತಿ ಮಹಾಬಲಃ ।
ತತ್ರ ತೇ ವಚನಂ ಶೂರಃ ಕರಿಷ್ಯತಿ ಸದಾ ಖರಃ ॥ ೩೯
ರಕ್ಷಸಾಂ ಕಾಮರೂಪಾಣಾಂ ಪ್ರಭುರೇಷ ಭವಿಷ್ಯತಿ ।
ಏವಮುಕ್ತ್ವಾ ದಶಗ್ರೀವಃ ಸೈನ್ಯಮಸ್ಯಾದಿದೇಶ ಹ ॥ ೪೦

---

ತಂಗಿ, ಯುದ್ಧೋನ್ಮತ್ತನಾದ ನನಗ ಮನೆಯ ಅಳಿಯುನೆಂಬ ಸ್ಮರಣೆಯೇ ಆಗಲಿಲ್ಲ! ಆದ್ದರಿಂದ, ವತ್ಸೆ, ನಿನ್ನ ಗಂಡನನ್ನು ನಾನು ಕೊಂದುಬಿಟ್ಟೆನೆಂದು ಕಾಣುತ್ತದೆ! ಆದದ್ದು ಆಗಿಹೋಯಿತು ಈ ಸಂದರ್ಭದಲ್ಲಿ ಇನ್ನು ನಿನಗೆ ಹಿತಕರವಾದುದನ್ನು ಕೈಗೊಳ್ಳುವೆನು (೩೪-೩೫) ನಮ್ಮ ಸೋದರನಾದ ಖರನು ಐಶ್ವರ್ಯಯುಕ್ತನಾಗಿದ್ದಾನೆ ನೀನು ಆತನ ಬಳಿಯಲ್ಲಿ ವಾಸ ವಾಗಿರು ಆತನನ್ನು ಹದಿನಾಲ್ಕು ಸಾವಿರ ರಾಕ್ಷಸ ಸೇನೆಗಳಿಗೆ ಅಧಿಪತಿ ಯನ್ನಾಗಿ ಮಾಡುವೆನು ಬಲಶಾಲಿಯಾದ ಖರನು ಆ ಯೋಧರನ್ನು ಕರೆದೊಯ್ದು ಅವರಿಗೆ ವೇತನವನ್ನಿತ್ತು ಪೋಷಿಸಲು ಸಮರ್ಥನಾಗಿದ್ದಾನೆ. ನಮ್ಮ ಚಿಕ್ಕಮ್ಮನ ಮಗನಾದ ಖರನು ಬಹಳ ದಕ್ಷ (೩೬-೩೭). ಆತನು ನಿನ್ನ ಆಜ್ಞೆಯನ್ನು ತಪ್ಪದೆ ಪಾಲಿಸುವನು ಆ ವೀರನು ಕೂಡಲೇ ಹೋಗಿ ದಂಡಕಾರಣ್ಯವನ್ನು ರಕ್ಷಿಸುತ್ತಿರಲಿ ಪರಾಕ್ರಮಿಯಾದ ದೂಷಣನು ಖರನ ಸೇನಾಪತಿಯಾಗಿರಲಿ ತಂಗಿ-ಶೂರ್ಪಣಖೆ, ಆ ದಂಡಕಾರಣ್ಯದಲ್ಲಿ ಖರನು ನಿನ್ನ ಆದೇಶವನ್ನು ಮೀರದೆ ನಡೆದುಕೊಳ್ಳಲಿ (೩೮-೩೯) ಕಾಮರೂಪಿ ಗಳಾದ ರಾಕ್ಷಸರಿಗೆ ಆತನನ್ನು ಪ್ರಭುವಾಗಿ ನಿಯಮಿಸುತ್ತೇನೆ" ಎಂದು

ಚತುರ್ದಶ ಸಹಸ್ರಾಣಿ ರಕ್ಷಸಾಂ ವೀರ್ಯಶಾಲಿನಾಮ್ ।
ಸ ತೈಃ ಪರಿವೃತಃ ಸರ್ವೈ ರಾಕ್ಷಸೈರ್ಘೋರದರ್ಶನೈಃ ॥ ೪೧

ಅಗಚ್ಛತ ಖರಃ ಶೀಘ್ರಂ ದಂಡಕಾನಕುತೋಭಯಃ ।
ಸ ತತ್ರ ಕಾರಯಾಮಾಸ ರಾಜ್ಯಂ ನಿಹತಕಂಟಕಮ್ ॥ ೪೨

ಸಾ ಚ ಶೂರ್ಪಣಖಾ ತತ್ರ ನ್ಯವಸದ್ದಂಡಕಾವನೇ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುರ್ವಿಂಶಃ ಸರ್ಗಃ



ಹೇಳಿದನು ಅನಂತರ ಖರನಿಗೆ ತನ್ನ ಆಜ್ಞೆಯನ್ನು ತಿಳಿಸಿ, ವೀರರಾದ ಹದಿನಾಲ್ಕುಸಾವಿರ ರಾಕ್ಷಸರು ಖರನೊಡನೆ ಹೋಗಬೇಕೆಂದು ನಿಯಮಿಸಿದನು (೪೦) ಘೋರರೂಪಿಗಳಾದ ಆ ರಾಕ್ಷಸಯೋಧರೊಡನೆ ಶೀಘ್ರವಾಗಿ ಹೊರಟು, ಖರನು ನಿರ್ಭೀತಿಯಿಂದ ದಂಡಕಾರಣ್ಯಕ್ಕೆ ಹೋದನು. ಅಲ್ಲಿ ವಿರೋಧಿಗಳನ್ನು ಸದೆಬಡಿದು ಒಂದು ಪ್ರದೇಶದಲ್ಲಿ ರಾಜ್ಯವನ್ನು ಸ್ಥಾಪಿಸಿಕೊಂಡು ಬೀಡುಬಿಟ್ಟನು ಶೂರ್ಪಣಖಯೂ ಹೋಗಿ ಖರನೊಡನೆ ದಂಡಕಾರಣ್ಯದಲ್ಲಿ ನೆಲೆಸಿದಳು (೪೧-೪೨).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತುನಾಲ್ಕನೆಯ ಸರ್ಗ



## ಪಂಚವಿಂಶಃ ಸರ್ಗಃ

### ಮಧುವಧವಾರಣಮ್

ಸ ತು ದತ್ತ್ವಾ ದಶಗ್ರೀವೋ ವನಂ ಘೋರಂ ಖರಸ್ಯ ತತ್ ।
ಭಗಿನೀಂ ಚ ಸಮಾಶ್ವಾಸ್ಯ ಹೃಷ್ಟಃ ಸ್ವಸ್ಥತರೋಽಭವತ್ ॥ ೧

ತತೋ ನಿಕುಂಭಿಲಾ ನಾಮ ಲಂಕೋಪವನಮುತ್ತಮಮ್ ।
ತದ್ರಾಕ್ಷಸೇಂದ್ರೋ ಬಲವಾನ್ ಪ್ರವಿವೇಶ ಸಹಾನುಗಃ ॥ ೨

ತತೋ ಯೂಪಶತಾಕೀರ್ಣಂ ಸೌಮ್ಯಚೈತ್ಯೋಪಶೋಭಿತಮ್ ।
ದದರ್ಶ ವಿಷ್ಠಿತಂ ಯಜ್ಞಂ ಶ್ರಿಯಾ ಸಂಪ್ರಜ್ವಲನ್ನಿವ ॥ ೩

ತತಃ ಕೃಷ್ಣಾಜಿನಧರಂ ಕಮಂಡಲುಶಿಖಾಧ್ವಜಮ್ ।
ದದರ್ಶ ಸ್ವಸುತಂ ತತ್ರ ಮೇಘನಾದಂ ಭಯಾವಹಮ್ ॥ ೪

### ಸರ್ಗ ೨೫

ಸೋದರಿಯಾದ ಕುಂಭೀನಸಿಯನ್ನು ಮಧುವೆಂಬ ರಾಕ್ಷಸನು ಅಪಹರಿಸಿದ್ದಾನೆಂದು ವಿಭೀಷಣನು ರಾವಣನಿಗೆ ತಿಳಿಸುವುದು ರಾವಣನು ಮಧುವನ್ನು ವಧಿಸಲು ಹೋಗುವುದು ಕುಂಭೀನಸಿಯು ಅವನನ್ನು ತಡೆಯುವುದು

ಶ್ರೀರಾಮ, ಈ ರೀತಿಯಲ್ಲಿ ದಶಗ್ರೀವನು ಘೋರವಾದ ರಾಕ್ಷಸ ಸೇನೆಯ ಒಂದು ಭಾಗವನ್ನು ಖರನ ವಶಕ್ಕೆ ಒಪ್ಪಿಸಿದನಲ್ಲದೆ, ತಂಗಿಯಾದ ಶೂರ್ಪಣಖೆಯನ್ನು ಸಂತೈಸಿದನು ಆಗ ಅವನ ಮನಸ್ಸಿಗೆ ನೆಮ್ಮದಿ ಯೆನಿಸಿತು ಅನಂತರ ಆ ರಾಕ್ಷಸೇಂದ್ರನು ನಿಕುಂಭಿಳೆಯೆಂಬ ಲಂಕೋಪವನಕ್ಕೆ ಪರಿವಾರಸಮೇತನಾಗಿ ಹೋದನು (೧-೨) ಅಲ್ಲಿ ಸೌಮ್ಯವಾದ ದೇವಾಲಯದೆದುರಿಗೆ ನೂರಾರು ಯೂಪಸ್ತಂಭಗಳಿಂದ ಯುಕ್ತವಾದ ಒಂದು ಯಾಗವು ನಡೆಯುತ್ತಿತ್ತು ರಾವಣನು ವೈಭವದಿಂದ ಹೋಗಿ ಅದನ್ನು ನೋಡಿದನು ಆತನ ಮಗನಾದ ಮೇಘನಾದನು ಕೃಷ್ಣಾಜಿನವನ್ನು ಧರಿಸಿ ಶಿಖೆಯನ್ನು ಬಿಡಿಸಿ ಕಮಂಡಲು ದಂಡಧ್ವಜಗಳನ್ನು ಹಿಡಿದು ಯಜ್ಞದೀಕ್ಷಿತ

ತಂ ಸಮಾಸಾದ್ಯ ಲಂಕೇಶಃ ಪರಿಷ್ವಜ್ಯಾಥ ಬಾಹುಭಿಃ ।
ಅಬ್ರವೀತ್ ಕಿಮಿದಂ ವತ್ಸ ವರ್ತಸೇ ಬ್ರೂಹಿ ತತ್ತ್ವತಃ ॥ ೫

ಉಶನಾ ತ್ವಬ್ರವೀತ್ತತ್ರ ಯಜ್ಞಸಂಪತ್ಸಮೃದ್ಧಯೇ ।
ರಾವಣಂ ರಾಕ್ಷಸಶ್ರೇಷ್ಠಂ ದ್ವಿಜಶ್ರೇಷ್ಠೋ ಮಹಾತಪಾಃ ॥ ೬

ಅಹಮಾಖ್ಯಾಮಿ ತೇ ರಾಜನ್ ಶ್ರೂಯತಾಂ ಸರ್ವಮೇವ ತತ್ ।
ಯಜ್ಞಾಸ್ತೇ ಸಪ್ತ ಪುತ್ರೇಣ ಪ್ರಾಪ್ತಾಃ ಸುಬಹುವಿಸ್ತರಾಃ ॥ ೭

ಅಗ್ನಿಷ್ಟೋಮೋಽಶ್ವಮೇಧಶ್ಚ ಯಜ್ಞೋ ಬಹುಸುವರ್ಣಕಃ ।
ರಾಜಸೂಯಸ್ತಥಾ ಯಜ್ಞೋ ಗೋಮೇಧೋ ವೈಷ್ಣವಸ್ತಥಾ ॥ ೮

ಮಾಹೇಶ್ವರೇ ಪ್ರವೃತ್ತೇ ತು ಯಜ್ಞೇ ಪುಂಭಿಃ ಸುದುರ್ಲಭೇ ।
ವರಾಂಸ್ತೇ ಲಬ್ಧವಾನ್ ಪುತ್ರಃ ಸಾಕ್ಷಾತ್ ಪಶುಪತೇರಿಹ ॥ ೯

ಕಾಮಗಂ ಸ್ಯಂದನಂ ದಿವ್ಯಮಂತರಿಕ್ಷಚರಂ ಧ್ರುವಮ್ ।
ಮಾಯಾಂ ಚ ತಾಮಸೀಂ ನಾಮ ಯಯಾ ಸಂಪದ್ಯತೇ ತಮಃ ॥

---

ನಾಗಿರುವದನ್ನು ರಾವಣನು ಕಂಡನು (೩-೪) ಲಂಕೇಶ್ವರನು ಪುತ್ರನ ಬಳಿಗೆ ಹೋಗಿ ಅವನನ್ನು ಆಲಿಂಗಿಸಿಕೊಂಡು "ವತ್ಸ, ಇದೇನು? ಏನು ಮಾಡುತ್ತಿರುವೆ?" ಎಂದು ಕೇಳಿದನು ಆಗ ಯಜ್ಞವು ಸಾಂಗವಾಗಿ ನೆರವೇರುವುದಕ್ಕಾಗಿ ಮೇಘನಾದನು ಮೌನವ್ರತವನ್ನು ತ್ಯಜಿಸದಿರಲೆಂಬ ಉದ್ದೇಶದಿಂದ, ತಪಸ್ವಿಯೂ ದ್ವಿಜೋತ್ತಮನೂ ಆದ ಶುಕ್ರಾಚಾರ್ಯನು ಹೀಗೆಂದನು (೫-೬) "ಮಹಾರಾಜ, ಆ ವಿಷಯವನ್ನು ನಾನು ಹೇಳುತ್ತೇನೆ, ಕೇಳು. ನಿನ್ನ ಪುತ್ರನು ಬಹು ವಿಸ್ತೃತವಾದ ಸಪ್ತಯಜ್ಞಗಳನ್ನು ನಡೆಸಿದ್ದಾನೆ ಅಗ್ನಿಷ್ಟೋಮ, ಅಶ್ವಮೇಧ, ಬಹುಸುವರ್ಣಕ, ರಾಜಸೂಯ, ಗೋಮೇಧ, ವೈಷ್ಣವ – ಎಂಬ ಯಾಗಗಳನ್ನು ನಡೆಸಿ ಮಾಹೇಶ್ವರಯಾಗವನ್ನಾರಂಭಿಸಿದನು ಈ ಯಾಗವು ಕಷ್ಟಸಾಧ್ಯವಾದುದು. ಈ ಯಾಗದಲ್ಲಿ ಸಾಕ್ಷಾತ್ ಶಿವನಿಂದ ನಿನ್ನ ಪುತ್ರನು ವರವನ್ನು ಪಡೆದಿದ್ದಾನೆ (೭-೯) ಅಂತರಿಕ್ಷದಲ್ಲಿ ಸಂಚರಿಸಬಲ್ಲ ಕಾಮಗಾಮಿಯಾದ ರಥವನ್ನೂ ತಾಮಸಿಯೆಂಬ ಮಾಯಾಶಕ್ತಿಯನ್ನೂ ಪಡೆದಿದ್ದಾನೆ.

ಏತಯಾ ಕಿಲ ಸಂಗ್ರಾಮೇ ಮಾಯಯಾ ರಾಕ್ಷಸೇಶ್ವರ ।
ಪ್ರಯುಕ್ತಯಾ ಗತಿಃ ಶಕ್ಯಾ ನ ಹಿ ಜ್ಞಾತುಂ ಸುರಾಸುರೈಃ ॥ ೧೧
ಅಕ್ಷಯಾವಿಷುಧೀ ಬಾಣೈಶ್ಚಾಪಂ ಚಾಪಿ ಸುದುರ್ಜಯಮ್ ।
ಅಸ್ತ್ರಂ ಚ ಬಲವದ್ರಾಜನ್ ಶತ್ರುವಿಧ್ವಂಸನಂ ರಣೇ ॥ ೧೨
ಏತಾನ್ ಸರ್ವಾನ್ ವರಾನ್ ಲಬ್ಧ್ವಾ ಪುತ್ರಸ್ತೇಽಯಂ ದಶಾನನ ।
ಅದ್ಯ ಯಜ್ಞಸಮಾಪ್ತೌ ಚ ತ್ವಾಂ ದಿದೃಕ್ಷುಃ ಸ್ಥಿತೋ ಹ್ಯಹಮ್ ॥
ತತೋಽಬ್ರವೀದ್ದಶಗ್ರೀವೋ ನ ಶೋಭನಮಿದಂ ಕೃತಮ್ ।
ಪೂಜಿತಾಃ ಶತ್ರವೋ ಯಸ್ಮಾದ್ ದ್ರವ್ಯೈರಿಂದ್ರಪುರೋಗಮಾಃ ॥
ಏಹೀದಾನೀಂ ಕೃತಂ ವಿದ್ಧಿ ಸುಕೃತಂ ತನ್ನ ಸಂಶಯಃ ।
ಆಗಚ್ಛ ಸೌಮ್ಯ ಗಚ್ಛಾಮಃ ಸ್ವಮೇವ ಭವನಂ ಪ್ರತಿ ॥ ೧೫
ತತೋ ಗತ್ವಾ ದಶಗ್ರೀವಃ ಸಪುತ್ರಃ ಸವಿಭೀಷಣಃ ।
ಸ್ತ್ರಿಯೋಽವತಾರಯಾಮಾಸ ಸರ್ವಾಸ್ತಾ ಬಾಷ್ಪಗದ್ಗದಾಃ ॥ ೧೬

ಈ ಮಾಯಾಶಕ್ತಿಯಿಂದ, ರಾಕ್ಷಸೇಶ್ವರ, ಶತ್ರುಗಳ ಕಣ್ಣಿಗೆ ಕತ್ತಲೆ ಕವಿಯುವಂತೆ ಮಾಡಬಹುದು ಇದನ್ನು ಪ್ರಯೋಗಿಸತಕ್ಕವನು ಎಲ್ಲಿರುವನೆಂದು ತಿಳಿಯಲು ಸುರಾಸುರರಿಗೂ ಶಕ್ಯವಿಲ್ಲ (೧೦-೧೧) ಅಲ್ಲದೆ ಬಾಣಗಳಿಂದ ತುಂಬಿರುವ ಅಕ್ಷಯವಾದ ಎರಡು ಬತ್ತಳಿಕೆಗಳನ್ನೂ ದುರ್ಭೇದ್ಯವಾದ ಚಾಪವನ್ನೂ ವೈರಿವಿಧ್ವಂಸಕರವಾದ ಮಂತ್ರಾಸ್ತ್ರವನ್ನೂ ಮಹೇಶ್ವರನಿಂದ ವರವಾಗಿ ಪಡೆದಿದ್ದಾನೆ ಈ ಮಾಹೇಶ್ವರ ಯಾಗವು ಈ ದಿನ ಸಮಾಪ್ತವಾದ ಮೇಲೆ ನಾವೀರ್ವರೂ ಬಂದು ನಿನ್ನನ್ನು ಕಾಣಬೇಕೆಂದಿದ್ದೆವು" ಎಂದನು (೧೨-೧೩) ಆಗ ದಶಗ್ರೀವನು "ನಮ್ಮ ವೈರಿಗಳಾದ ಇಂದ್ರಾದಿ ದೇವತೆಗಳನ್ನು ಯಜ್ಞದಲ್ಲಿ ಪೂಜಿಸಿದ್ದು ಮಾತ್ರ ಸರಿಯಲ್ಲ!" ಎಂದು ಉದ್ಗರಿಸಿದನು ಅನಂತರ ಮೇಘನಾದನ ಕಡೆಗೆ ತಿರುಗಿ "ವತ್ಸ, ಆದದ್ದಾಯಿತು ಒಳ್ಳೆಯದೇ ಸರಿ ಇನ್ನು ಬಾ, ಅರಮನೆಗೆ ಹೋಗೋಣ" ಎಂದು ಹೇಳಿ ಅವನನ್ನು ಕರೆದುಕೊಂಡು ವಿಭೀಷಣನೊಡನೆ ಅರಮನೆಗೆ ನಡೆದನು (೧೪-೧೫) ಅಲ್ಲಿ ತಾನು ಸೆರೆಹಿಡಿದು ತಂದಿದ್ದ ನಾರೀಮಣಿಗಳನ್ನು ವಿಮಾನದಿಂದ ಕೆಳಗಿಳಿಸಿದನು ಅವರೆಲ್ಲರೂ ಕಂಬನಿಮಿಡಿಯುತ್ತಿದ್ದರು ಧರ್ಮಾತ್ಮ

ಲಕ್ಷಿಣ್ಯೋ ರತ್ನಭೂತಾಶ್ಚ ದೇವದಾನವರಕ್ಷಸಾಮ್ |
ತಸ್ಯ ತಾಸು ಮತಿಂ ಜ್ಞಾತ್ವಾ ಧರ್ಮಾತ್ಮಾ ವಾಕ್ಯಮಬ್ರವೀತ್ || ೧೭

ಈದೃಶೈಸ್ತ್ವಂ ಸಮಾಚಾರೈರ್ಯಶೋಽರ್ಥಕುಲನಾಶನೈಃ |
ಧರ್ಷಣಂ ಜ್ಞಾತಿನಾಂ ಜ್ಞಾತ್ವಾ ಸ್ವಮತೇನ ವಿಚೇಷ್ಟಸೇ || ೧೮

ಜ್ಞಾತೀಂಸ್ತಾನ್ ಧರ್ಷಯಿತ್ವೇಮಾಸ್ತ್ವಯಾನೀತಾಃ ವರಾಂಗನಾಃ |
ತ್ವಾಮತಿಕ್ರಮ್ಯ ಮಧುನಾ ರಾಜನ್ ಕುಂಭೀನಸೀ ಹೃತಾ || ೧೯

ರಾವಣಸ್ತ್ವಬ್ರವೀದ್ವಾಕ್ಯಂ ನಾವಗಚ್ಛಾಮಿ ಕಿಂ ನ್ವಿದಮ್ |
ಕೋಽಯಂ ಯಸ್ತು ತ್ವಯಾಖ್ಯಾತೋ ಮಧುರಿತ್ಯೇವ ನಾಮತಃ ||

ವಿಭೀಷಣಸ್ತು ಸಂಕ್ರುದ್ಧೋ ಭ್ರಾತರಂ ವಾಕ್ಯಮಬ್ರವೀತ್ |
ಶ್ರೂಯತಾಮಸ್ಯ ಪಾಪಸ್ಯ ಕರ್ಮಣಃ ಫಲಮಾಗತಮ್ || ೨೧

ಮಾತಾಮಹಸ್ಯ ಯೋಽಸ್ಮಾಕಂ ಜ್ಯೇಷ್ಠೋ ಭ್ರಾತಾ ಸುಮಾಲಿನಃ |
ಮಾಲ್ಯವಾನಿತಿ ವಿಖ್ಯಾತೋ ವೃದ್ಧಃ ಪ್ರಾಜ್ಞೋ ನಿಶಾಚರಃ || ೨೨

---

ನಾದ ವಿಭೀಷಣನಿಗೆ ಅವರು ಗೋಚರಿಸಿದರು ರಾವಣನ ದುರುದ್ದೇಶವನ್ನು ಕಂಡು ವಿಭೀಷಣನು "ಅಣ್ಣಾ, ಈ ಬಗೆಯ ನಿನ್ನ ನಡತೆಯು ನಮ್ಮ ಕೀರ್ತಿಗೆ ಕಳಂಕವನ್ನು ತರುತ್ತದೆ ಇದರಿಂದ ನಮ್ಮ ಐಶ್ವರ್ಯವೂ ಕುಲವೂ ಕ್ಷಯಿಸುತ್ತವೆ ಈ ಸ್ತ್ರೀಯರ ಬಂಧುಗಳನ್ನು ಪೀಡಿಸುವುದು ಅಯುಕ್ತವೆಂದು ತಿಳಿದಿದ್ದರೂ, ಶಾಸ್ತ್ರಮರ್ಯಾದೆಯನ್ನುಲ್ಲಂಘಿಸಿ ಮನಬಂದಂತೆ ನಡೆಯುವೆಯಲ್ಲ (೧೭-೧೮) ಇವರ ಬಂಧುಗಳನ್ನು ವಿಧ್ವಂಸಗೊಳಿಸಿ ಈ ಕುಲಾಂಗನೆಯರನ್ನು ಬಲಾತ್ಕರಿಸಿ ತಂದಿದ್ದೀಯೆ ಇಲ್ಲಿ ಏನಾಗಿದೆ ಗೊತ್ತೆ ? ಕುಂಭೀನಸಿಯನ್ನು ಮಧುವು ಅಪಹರಿಸಿಕೊಂಡು ಹೋದನು !" ಎಂದನು (೧೯) ಅದನ್ನು ಕೇಳಿ ರಾವಣನು "ವಿಭೀಷಣ, ಏನು ನೀನು ಹೇಳುತ್ತಿರುವುದು ? ನನಗೊಂದೂ ಅರ್ಥವಾಗಲಿಲ್ಲ ! ಮಧು ಎಂದು ಯಾರ ಹೆಸರನ್ನೋ ಹೇಳಿದೆಯಲ್ಲ, ಯಾರವನು ?" ಎಂದು ಕೇಳಿದನು ವಿಭೀಷಣನು ಸಿಟ್ಟಿನಿಂದ ಇಂತೆಂದನು : "ಮಹಾರಾಜ, ನಿನ್ನ ಪಾಪಕರ್ಮದ ಫಲವು ಹೇಗೆ ಒದಗಿ ಬಂತೆಂಬುದನ್ನು ಕೇಳು ! ನಮ್ಮ ಮಾತಾಮಹನಾದ ಸುಮಾಲಿಗೆ ಮಾಲ್ಯ

ಪಿತಾ ಜ್ಯೇಷ್ಠೋ ಜನನ್ಯಾ ನೋ ಹ್ಯಸ್ಮಾಕಂ ಚಾರ್ಯಕೋಽಭವತ್
ತಸ್ಯ ಕುಂಭೀನಸೀ ನಾಮ ದುಹಿತುರ್ದುಹಿತಾಭವತ್ ॥ ೨೩

ಮಾತೃಷ್ವಸುರಥಾಸ್ಮಾಕಂ ಸಾ ಚ ಕನ್ಯಾನಲೋದ್ಭವಾ ।
ಭವತ್ಯಸ್ಮಾಕಮೇವೈಷಾ ಭ್ರಾತೄಣಾಂ ಧರ್ಮತಃ ಸ್ವಸಾ ॥ ೨೪

ಸಾ ಹೃತಾ ಮಧುನಾ ರಾಜನ್ ರಾಕ್ಷಸೇನ ಬಲೀಯಸಾ ।
ಯಜ್ಞಪ್ರವೃತ್ತೇ ಪುತ್ರೇ ತು ಮಯಿ ಚಾಂತರ್ಜಲೋಷಿತೇ ॥ ೨೫

ಕುಂಭಕರ್ಣೇ ಮಹಾರಾಜ ನಿದ್ರಾಮನುಭವತ್ಯಥ ।
ನಿಹತ್ಯ ರಾಕ್ಷಸಶ್ರೇಷ್ಠಾನಮಾತ್ಯಾನಿಹ ಸಂಮತಾನ್ ॥ ೨೬

ಧರ್ಷಯಿತ್ವಾ ಹೃತಾ ಸಾ ತು ಗುಪ್ತಾಪ್ಯಂತಃಪುರೇ ತವ ।
ಶ್ರುತ್ವಾಪಿ ತನ್ಮಹಾರಾಜ ಕ್ಷಾಂತಮೇವ ಹತೋ ನ ಸಃ ॥ ೨೭

---

ವಂತನು ಅಣ್ಣನಷ್ಟೆ (೨೦–೨೨) ವೃದ್ಧನೂ ಪ್ರಾಜ್ಞನೂ ವಿಖ್ಯಾತನೂ ಆದ ಮಾಲ್ಯವಂತನು ನಮ್ಮ ತಾಯಿಗೆ ದೊಡ್ಡಪ್ಪನಾಗಬೇಕು ಆದ್ದರಿಂದ ಅವನು ನಮಗೆ ಪೂಜ್ಯನಾದ ಅಜ್ಜನಾಗುತ್ತಾನೆ ಅವನ ಮಗಳು ಅನಲೆ. ಅವಳು ನಮ್ಮ ತಾಯಿಗೆ ಸೋದರಿಯಾಗುತ್ತಾಳೆ ಅನಲೆಯ ಮಗಳು ಕುಂಭೀನಸಿ * ಆಕೆ ಧರ್ಮತಃ ನಮ್ಮೆಲ್ಲರಿಗೂ ಭಗಿನಿ (೨೩-೨೪) ಮಹಾರಾಜ, ಪ್ರಬಲನಾದ ಮಧುವೆಂಬ ರಾಕ್ಷಸನು ಅವಳನ್ನು ಅಪಹರಿಸಿಕೊಂಡು ಹೋದನು. ಆ ಸಮಯದಲ್ಲಿ ನಿನ್ನ ಪುತ್ರನಾದ ಮೇಘನಾದನು ಯಜ್ಞಕಾರ್ಯದಲ್ಲಿ ದೀಕ್ಷಿತನಾಗಿದ್ದನು. ನಾನು ಜಲಮಧ್ಯದಲ್ಲಿ ತಪಸ್ಸನ್ನಾಚರಿಸುತ್ತಿದ್ದೆನು (೨೫). ಕುಂಭಕರ್ಣನು ನಿದ್ರಿಸುತ್ತಿದ್ದನು! ರಾಕ್ಷಸಶ್ರೇಷ್ಠರಾದ ಅಮಾತ್ಯರನ್ನು ಸಂಹರಿಸಿ, ನಿನ್ನ ಅಂತಃಪುರದಲ್ಲಿ ರಕ್ಷಿತಳಾಗಿದ್ದ ಕುಂಭೀನಸಿಯನ್ನು ಆ ರಾಕ್ಷಸನು ಒಯ್ದಿದ್ದಾನೆ. ಈ ವೃತ್ತಾಂತವನ್ನು ಆಮೇಲೆ ಕೇಳಿಯೂ

* ಹಿಂದೆ ಐದನೆಯ ಸರ್ಗದಲ್ಲಿ ಸುಮಾಲಿಯ ಪುತ್ರಿಯೂ ಕೈಕಸಿಯ ತಂಗಿಯೂ ಆದ ಕುಂಭೀನಸಿಯೊಬ್ಬಳನ್ನು ಹೇಳಿದೆ. ಈಕೆ ಆ ಕುಂಭೀನಸಿಯಲ್ಲ ಇವಳು ಮಾಲ್ಯವಂತನ ಮೊಮ್ಮಗಳು

ಯಸ್ಮಾದವಶ್ಯಂ ದಾತವ್ಯಾ ಕನ್ಯಾ ಭರ್ತ್ರೇ ಹಿ ಭ್ರಾತೃಭಿಃ ।
ತದೇತತ್ ಕರ್ಮಣೋ ಹ್ಯಸ್ಯ ಫಲಂ ಪಾಪಸ್ಯ ದುರ್ಮತೇ ॥ ೨೮

ಅಸ್ಮಿನ್ನೇವಾಭಿಸಂಪ್ರಾಪ್ತಂ ಲೋಕೇ ವಿದಿತಮಸ್ತು ತೇ ।
ವಿಭೀಷಣವಚಃ ಶ್ರುತ್ವಾ ರಾಕ್ಷಸೇಂದ್ರಃ ಸ ರಾವಣಃ ॥ ೨೯

ದೌರಾತ್ಮ್ಯೇನಾತ್ಮನೋದ್ಧೂತಸ್ತಪ್ತಾಂಭಾ ಇವ ಸಾಗರಃ ।
ತತೋಽಬ್ರವೀದ್ದಶಗ್ರೀವಃ ಕ್ರುದ್ಧಃ ಸಂರಕ್ತಲೋಚನಃ ॥ ೩೦

ಕಲ್ಪ್ಯತಾಂ ಮೇ ರಥಃ ಶೀಘ್ರಂ ಶೂರಾಃ ಸಜ್ಜೀಭವಂತು ನಃ ।
ಭ್ರಾತಾ ಮೇ ಕುಂಭಕರ್ಣಶ್ಚ ಯೇ ಚ ಮುಖ್ಯಾ ನಿಶಾಚರಾಃ ॥ ೩೧

ವಾಹನಾನ್ಯಧಿರೋಹಂತು ನಾನಾಪ್ರಹರಣಾಯುಧಾಃ ।
ಅದ್ಯ ತಂ ಸಮರೇ ಹತ್ವಾ ಮಧುಂ ರಾವಣನಿರ್ಭಯಮ್ ॥ ೩೨

ಸುರಲೋಕಂ ಗಮಿಷ್ಯಾಮಿ ಯುದ್ಧಾಕಾಂಕ್ಷೀ ಸುಹೃದ್ವೃತಃ ।
ಅಕ್ಷೌಹಿಣೀಸಹಸ್ರಾಣಿ ಚತ್ವಾರ್ಯಗ್ರ್ಯಾಣಿ ರಕ್ಷಸಾಮ್ ॥ ೩೩

---

ನಾವು ಸುಮ್ಮನಾದೆವು ಅವನನ್ನು ಕೊಲ್ಲಲಿಲ್ಲ (೨೬-೨೭) ಏಕೆಂದರೆ, ಹೇಗಿದ್ದರೂ ಆ ಕನ್ಯೆಯನ್ನು ಭ್ರಾತೃಗಳಾದ ನಾವು ವರನೊಬ್ಬನಿಗೆ ಮದುವೆ ಮಾಡಿಕೊಡಬೇಕಲ್ಲವೆ? ಒಟ್ಟಿನಲ್ಲಿ ಇದೆಲ್ಲವೂ ನಿನ್ನ ಪಾಪಕರ್ಮದ ಫಲ! ಈಗಲೇ ಇದು ಫಲವನ್ನು ಕೊಡಲಾರಂಭಿಸಿತೆಂದು ತಿಳಿ!" ಎಂದು ಹೇಳಿದನು (೨೮-೨೯) ವಿಭೀಷಣನ ವಚನವನ್ನಾಲಿಸಿ ರಾವಣನು ಕುದಿಯುವ ಸಮುದ್ರದಂತಾದನು ದೌರ್ಜನ್ಯವೇ ಅವನನ್ನು ಮತ್ತಷ್ಟು ಕೆರಳಿಸಿತು ಕಣ್ಣುಗಳು ಕೆಂಪಡರಿದವು ಅವನು ರೋಷಾವಿಷ್ಟನಾಗಿ "ಸಿದ್ಧವಾಗಲಿ ನನ್ನ ರಥ! ಶೂರರೆಲ್ಲರೂ ಯುದ್ಧಸನ್ನದ್ಧರಾಗಿ ಹೊರಡಲಿ ನನ್ನ ತಮ್ಮನಾದ ಕುಂಭಕರ್ಣನೂ ಇತರ ವೀರಯೋಧರೂ ವಿವಿಧಾಯುಧಗಳನ್ನು ಧರಿಸಿ ವಾಹನಗಳನ್ನೇರಲಿ (೩೦-೩೧) ಈ ರಾವಣನಿಗೂ ಹೆದರದ ಮಧುವೆಂಬವನು ಯಾವನು? ಅವನನ್ನು ಈಗಲೇ ವಧಿಸಿ ದೇವಲೋಕಕ್ಕೆ ಧಾಳಿಯಿಡುವೆನು! ನನ್ನ ಪರಿವಾರದೊಂದಿಗೆ ನುಗ್ಗುವೆನು" ಎಂದು ಅಬ್ಬರಿಸಿದನು ಯುದ್ಧೋತ್ಸಾಹಿಗಳಾದ ನಾಲ್ಕುಸಾವಿರ ಅಕ್ಷೌಹಿಣೀ ಬಲಗಳು ಹೊರಟವು ಇಂದ್ರಜಿತು ಸೇನಾಗ್ರಣಿಯಾಗಿ ಸೈನಿಕರನ್ನು ಕರೆದುಕೊಂಡು ಸಾಗಿದನು

ನಾನಾಪ್ರಹರಣಾನ್ಯಾಶು ನಿರ್ಯಯುರ್ಯುದ್ಧಕಾಂಕ್ಷಿಣಾಮ್ ।
ಇಂದ್ರಜಿತ್ತ್ವಗ್ರಜಿತ್ ಸೈನ್ಯಾತ್ ಸೈನಿಕಾನ್ ಪರಿಗೃಹ್ಯ ಚ ॥ ೩೪

ಜಗಾಮ ರಾವಣೋ ಮಧ್ಯೇ ಕುಂಭಕರ್ಣಶ್ಚ ಪೃಷ್ಠತಃ ।
ವಿಭೀಷಣಶ್ಚ ಧರ್ಮಾತ್ಮಾ ಲಂಕಾಯಾಂ ಧರ್ಮಮಾಚರತ್ ॥ ೩೫

ಶೇಷಾಃ ಸರ್ವೇ ಮಹಾಭಾಗಾ ಯಯುರ್ಮಧುಪುರಂ ಪ್ರತಿ ।
ಖರೈರುಷ್ಟ್ರೈರ್ಹಯೈರ್ದೀಪ್ತೈಃ ಶಿಂಶುಮಾರೈರ್ಮಹೋರಗೈಃ ॥ ೩೬

ರಾಕ್ಷಸಾಃ ಪ್ರಯಯುಃ ಸರ್ವೇ ಕೃತ್ವಾಕಾಶಂ ನಿರಂತರಮ್ ।
ದೈತ್ಯಾಶ್ಚ ಶತಶಸ್ತತ್ರ ಕೃತವೈರಾಶ್ಚ ದೈವತೈಃ ॥ ೩೭

ರಾವಣಂ ಪ್ರೇಕ್ಷ್ಯ ಗಚ್ಛಂತಮನ್ವಗಚ್ಛನ್ ಹಿ ಪೃಷ್ಠತಃ ।
ಸ ತು ಗತ್ವಾ ಮಧುಪುರಂ ಪ್ರವಿಶ್ಯ ಚ ದಶಾನನಃ ॥ ೩೮

ನ ದದರ್ಶ ಮಧುಂ ತತ್ರ ಭಗಿನೀಂ ತತ್ರ ದೃಷ್ಟವಾನ್ ।
ಸಾ ಚ ಪ್ರಹ್ವಾಂಜಲಿರ್ಭೂತ್ವಾ ಶಿರಸಾ ಚರಣೌ ಗತಾ ॥ ೩೯

ತಸ್ಯ ರಾಕ್ಷಸರಾಜಸ್ಯ ತ್ರಸ್ತಾ ಕುಂಭೀನಸೀ ತದಾ ।
ತಾಂ ಸಮುತ್ಥಾಪಯಾಮಾಸ ನ ಭೇತವ್ಯಮಿತಿ ಬ್ರುವನ್ ॥ ೪೦

---

(೩೨-೩೩) ಸೇನಾಮಧ್ಯದಲ್ಲಿ ರಾವಣನಿದ್ದನು ಅವನ ಹಿಂದೆ ಕುಂಭಕರ್ಣ ನಿದ್ದನು ಧರ್ಮಾತ್ಮನಾದ ವಿಭೀಷಣನಾದರೋ ಧರ್ಮಕಾರ್ಯದಲ್ಲಿ ನಿರತ ನಾಗಿ ಲಂಕೆಯಲ್ಲೇ ಉಳಿದನು ಉಳಿದ ರಾಕ್ಷಸರೆಲ್ಲರೂ ಖರ, ಉಷ್ಟ್ರ, ಅಶ್ವ, ಮೊಸಳೆ, ಮಹೋರಗ – ಮುಂತಾದ ವಾಹನಗಳನ್ನೇರಿ ಗಗನಮಾರ್ಗದಲ್ಲಿ ಕಿಕ್ಕಿರಿದು ನಡೆದರು (೩೪-೩೬) ದೇವತೆಗಳೊಡನೆ ವೈರವನ್ನು ಬೆಳೆಸಿದ ಬಹುಮಂದಿ ರಾಕ್ಷಸರು ಇದೇ ಸಮಯವೆಂದು ರಾವಣನನ್ನು ಹಿಂಬಾಲಿಸಿದರು. ಶ್ರೀರಾಮ, ಈ ಪ್ರಕಾರದಲ್ಲಿ ದಶಗ್ರೀವನು ಮಧುಪುರಕ್ಕೆ ಹೋಗಿ ಅರಮನೆ ಯನ್ನು ನುಗ್ಗಿದರೂ ಮಧುವು ಗೋಚರಿಸಲಿಲ್ಲ ತನ್ನ ತಂಗಿಯಾದ ಕುಂಭೀನಸಿಯು ಕಾಣಿಸಿಕೊಂಡಳು ಅವಳು ಕೈಮುಗಿದುಕೊಂಡು ರಾವಣನ ಪಾದಗಳಿಗೆ ತಲೆಬಾಗಿ ವಂದಿಸಿದಳು (೩೭-೩೯) ರಾವಣನ ಉದ್ದೇಶ ವನ್ನರಿತು ಕುಂಭೀನಸಿಯು ಭೀತಳಾದಳು ರಾವಣನು ಅವಳನ್ನು ಮೇಲೆತ್ತಿ

*

ರಾವಣೋ ರಾಕ್ಷಸಶ್ರೇಷ್ಠಃ ಕಿಂ ಚಾಪಿ ಕರವಾಣಿ ತೇ ।
ಸಾಬ್ರವೀದ್ಯದಿ ಮೇ ರಾಜನ್ ಪ್ರಸನ್ನಸ್ತ್ವಂ ಮಹಾಭುಜ ॥ ೪೧
ಭರ್ತಾರಂ ನ ಮಮೇಹಾದ್ಯ ಹಂತುಮರ್ಹಸಿ ಮಾನದ ।
ನ ಹೀದೃಶಂ ಭಯಂ ಕಿಂಚಿತ್ ಕುಲಸ್ತ್ರೀಣಾಮಿಹೋಚ್ಯತೇ ॥ ೪೨
ಭಯಾನಾಮಪಿ ಸರ್ವೇಷಾಂ ವೈಧವ್ಯಂ ವ್ಯಸನಂ ಮಹತ್ ।
ಸತ್ಯವಾಗ್ಭವ ರಾಜೇಂದ್ರ ಮಾಮವೇಕ್ಷಸ್ವ ಯಾಚತೀಮ್ ॥ ೪೩
ತ್ವಯಾಪ್ಯುಕ್ತಂ ಮಹಾರಾಜ ನ ಭೇತವ್ಯಮಿತಿ ಸ್ವಯಮ್ ।
ರಾವಣಸ್ತ್ವಬ್ರವೀದ್ಧೃಷ್ಟಃ ಸ್ವಸಾರಂ ತತ್ರ ಸಂಸ್ಥಿತಾಮ್ ॥ ೪೪
ಕ್ವ ಚಾಸೌ ತವ ಭರ್ತಾ ವೈ ಮಮ ಶೀಘ್ರಂ ನಿವೇದ್ಯತಾಮ್ ।
ಸಹ ತೇನ ಗಮಿಷ್ಯಾಮಿ ಸುರಲೋಕಂ ಜಯಾಯ ಹಿ ॥ ೪೫
ತವ ಕಾರುಣ್ಯಸೌಹಾರ್ದಾನ್ನಿವೃತ್ತೋಽಸ್ಮಿ ಮಧೋರ್ವಧಾತ್ ।
ಇತ್ಯುಕ್ತಾ ಸಾ ಸಮುತ್ಥಾಪ್ಯ ಪ್ರಸುಪ್ತಂ ತಂ ನಿಶಾಚರಮ್ ॥ ೪೬
ಅಬ್ರವೀತ್ ಸಂಪ್ರಹೃಷ್ಟೇವ ರಾಕ್ಷಸೀ ಸಾ ಪತಿಂ ವಚಃ ।
ಏಷ ಪ್ರಾಪ್ತೋ ದಶಗ್ರೀವೋ ಮಮ ಭ್ರಾತಾ ಮಹಾಬಲಃ ॥ ೪೭

---

"ತಂಗಿ, ಹೆದರಬೇಡ ರಾಕ್ಷಸಶ್ರೇಷ್ಠನಾದ ಈ ರಾವಣನಿಂದ ನಿನಗೇನಾಗಬೇಕು, ನಡೆಸಿಕೊಡುತ್ತೇನೆ, ಹೇಳು!" ಎಂದು ಕೇಳಿದನು (೪೦-೪೧). ಅವಳು ಬದ್ಧಾಂಜಲಿಯಾಗಿ "ಮಹಾರಾಜ-ಮಹಾಭುಜ, ಪ್ರಸನ್ನನಾಗು. ನನ್ನ ಪತಿಯನ್ನು ಕೊಲ್ಲಬೇಡ ನನ್ನ ಮಾನವನ್ನುಳಿಸು ಕುಲಸ್ತ್ರೀಯರಿಗೆ ವೈಧವ್ಯಕ್ಕಿಂತ ದೊಡ್ಡ ವಿಪತ್ತಿಲ್ಲ ರಾಜೇಂದ್ರ, ಸತ್ಯವಾದಿಯಾಗಿ ನನ್ನ ಪತಿಯನ್ನುಳಿಸು ಕೈಜೋಡಿಸಿ ಬೇಡುವ ನನ್ನನ್ನು ನೋಡು (೪೨-೪೩) 'ಹೆದರಬೇಡ' ಎಂದು ನೀನೇ ಹೇಳಿದ್ದೀಯೆ" ಎಂದಳು ರಾವಣನು ಸಂತುಷ್ಟನಾಗಿ "ಒಳ್ಳೆಯದು ನಿನ್ನ ಗಂಡನೆಲ್ಲಿರುವನು? ತಿಳಿಸು ನಾನು ದೇವಲೋಕವನ್ನು ಜಯಿಸುವುದಕ್ಕಾಗಿ ಹೊರಟಿದ್ದೇನೆ ಅವನೂ ನನ್ನೊಡನೆ ಬರಲಿ ನಿನ್ನ ಮೇಲಿರುವ ಕಾರುಣ್ಯ ಸುಹೃದ್ಭಾವಗಳಿಗೆ ವಶನಾಗಿ ಮಧುವನ್ನು ಸಂಹರಿಸುವ ಉದ್ದೇಶವನ್ನು ತ್ಯಜಿಸಿದ್ದೇನೆ!" ಎಂದನು (೪೪-೪೬). ಆಗ ಕುಂಭೀನಸಿಯು ಸಂತುಷ್ಟಳಾದಳು. ಅವಳು ನಿದ್ರಿಸುತ್ತಿದ್ದ ತನ್ನ

ಸುರಲೋಕಜಯಾಕಾಂಕ್ಷೀ ಸಾಹಾಯ್ಯೇ ತ್ವಾಂ ವೃಣೋತಿ ಚ ।
ತದಸ್ಯ ತ್ವಂ ಸಹಾಯಾರ್ಥಂ ಸಬಂಧುರ್ಗಚ್ಛ ರಾಕ್ಷಸ ॥ ೪೮

ಸ್ನಿಗ್ಧಸ್ಯ ಭಜಮಾನಸ್ಯ ಯುಕ್ತಮರ್ಥಾಯ ಕಲ್ಪಿತುಮ್ ।
ತಸ್ಯಾಸ್ತದ್ವಚನಂ ಶ್ರುತ್ವಾ ತಥೇತ್ಯಾಹ ಮಧುರ್ವಚಃ ॥ ೪೯

ದದರ್ಶ ರಾಕ್ಷಸಶ್ರೇಷ್ಠಂ ಯಥಾನ್ಯಾಯಮುಪೇತ್ಯ ಸಃ ।
ಪೂಜಯಾಮಾಸ ಧರ್ಮೇಣ ರಾವಣಂ ರಾಕ್ಷಸಾಧಿಪಮ್ ॥ ೫೦

ಪ್ರಾಪ್ಯ ಪೂಜಾಂ ದಶಗ್ರೀವೋ ಮಧುವೇಶ್ಮನಿ ವೀರ್ಯವಾನ್ ।
ತತ್ರ ಚೈಕಾಂ ನಿಶಾಮುಷ್ಯ ಗಮನಾಯೋಪಚಕ್ರಮೇ ॥ ೫೧

ತತಃ ಕೈಲಾಸಮಾಸಾದ್ಯ ಶೈಲಂ ವೈಶ್ರವಣಾಲಯಮ್ ।
ರಾಕ್ಷಸೇಂದ್ರೋ ಮಹೇಂದ್ರಾಭಃ ಸೇನಾಮುಪನಿವೇಶಯತ್ ॥ ೫೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚವಿಂಶಃ ಸರ್ಗಃ

---

ಗಂಡನನ್ನೆಬ್ಬಿಸಿ "ನನ್ನ ಅಣ್ಣನೂ ಪರಾಕ್ರಮಿಯೂ ಆದ ದಶಗ್ರೀವನು ಬಂದಿದ್ದಾನೆ ಅವನು ಸುರಲೋಕವನ್ನು ಜಯಿಸಬೇಕೆಂದಿದ್ದಾನೆ ಅದಕ್ಕಾಗಿ ನಿನ್ನ ನೆರವನ್ನು ಕೇಳುತ್ತಿದ್ದಾನೆ ಆದ್ದರಿಂದ ಅವನ ಸಹಾಯಕ್ಕಾಗಿ ನೀನು ಸೇನಾಪರಿವೃತನಾಗಿ ಹೋಗುವುದೊಳ್ಳೆಯದು (೪೭-೪೮) ಸ್ನೇಹದಿಂದ ನಿನ್ನನ್ನು ಆಶ್ರಯಿಸಿದವನಿಗೆ ಉಪಕರಿಸುವುದು ಯುಕ್ತವಲ್ಲವೆ?" ಎಂದಳು ಅವಳ ಮಾತನ್ನು ಕೇಳಿ ಮಧುವು 'ಆಗಲಿ' ಎಂದು ನುಡಿದು ಉಚಿತವೇಷದಲ್ಲಿ ಬಂದು, ರಾಕ್ಷಸೇಂದ್ರನಾದ ರಾವಣನನ್ನು ಯೋಗ್ಯರೀತಿಯಲ್ಲಿ ಆದರಿಸಿ ಸತ್ಕರಿಸಿದನು (೪೯-೫೦) ವೀರಾಗ್ರಗಣ್ಯನಾದ ರಾವಣನು ಮಧುವಿನ ಸತ್ಕಾರವನ್ನು ಸ್ವೀಕರಿಸಿ ಅವನ ಮನೆಯಲ್ಲಿ ಒಂದು ರಾತ್ರಿ ಉಳಿದು, ಮಾರನೆಯ ದಿನ ಪ್ರಯಾಣಕ್ಕೆ ಸಿದ್ಧನಾದನು ಮಹೇಂದ್ರನಂತೆ ತೇಜಸ್ವಿಯಾದ ರಾವಣನು ಸೇನಾಸಮೇತನಾಗಿ ಹೊರಟು, ವೈಶ್ರವಣನ ವಾಸಸ್ಥಾನವಾದ ಕೈಲಾಸಗಿರಿಗೆ ಬಂದು ಬೀಡುಬಿಟ್ಟನು (೫೧-೫೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತೈದನೆಯ ಸರ್ಗ

## ಷಡ್ವಿಂಶಃ ಸರ್ಗಃ

### ನಲಕೂಬರಶಾಪಃ

ಸ ತು ತತ್ರ ದಶಗ್ರೀವಃ ಸಹ ಸೈನ್ಯೇನ ವೀರ್ಯವಾನ್ ।
ಅಸ್ತಂ ಪ್ರಾಪ್ತೇ ದಿನಕರೇ ನಿವಾಸಂ ಸಮರೋಚಯತ್ ॥ ೧

ಉದಿತೇ ವಿಮಲೇ ಚಂದ್ರೇ ತುಲ್ಯಪರ್ವತವರ್ಚಸಿ ।
ಪ್ರಸುಪ್ತಂ ಸುಮಹತ್ ಸೈನ್ಯಂ ನಾನಾಪ್ರಹರಣಾಯುಧಮ್ ॥ ೨

ರಾವಣಸ್ತು ಮಹಾವೀರ್ಯೋ ನಿಷಣ್ಣಃ ಶೈಲಮೂರ್ಧನಿ ।
ಸ ದದರ್ಶ ಗುಣಾಂಸ್ತತ್ರ ಚಂದ್ರಪಾದಸುಶೋಭಿತಾನ್ ॥ ೩

ಕರ್ಣಿಕಾರವನೈರ್ದೀಪ್ತೈಃ ಕದಂಬಗಹನೈಸ್ತಥಾ ।
ಪದ್ಮಿನೀಭಿಶ್ಚ ಫುಲ್ಲಾಭಿರ್ಮಂದಾಕಿನ್ಯಾ ಜಲೈರಪಿ ॥ ೪

ಚಂಪಕಾಶೋಕಪುನ್ನಾಗಮಂದಾರತರುಭಿಸ್ತಥಾ ।
ಚೂತಪಾಟಲಲೋಧ್ರೈಶ್ಚ ಪ್ರಿಯಂಗ್ವರ್ಜುನಕೇತಕೈಃ ॥ ೫

## ಸರ್ಗ ೨೬

### ರಾವಣನು ರಂಭೆಯನ್ನು ಬಲಾತ್ಕರಿಸುವುದು ನಳಕೂಬರನಿಂದ ಶಾಪ

ಶ್ರೀರಾಮ, ಅಷ್ಟುಹೊತ್ತಿಗೆ ಸೂರ್ಯನು ಮುಳುಗಿದ್ದರಿಂದ ದಶಗ್ರೀವನು ಸೇನಾಸಹಿತನಾಗಿ ಆ ಕೈಲಾಸದ ತಪ್ಪಲಿನಲ್ಲಿ ವಿಶ್ರಮಿಸಬೇಕೆಂದು ಇಚ್ಛಿಸಿದನು ಕೈಲಾಸಶೈಲದಂತೆ ಶುಭ್ರವರ್ಣನಾಗಿ ತೊಳಗುವ ಚಂದ್ರನು ಉದಯಿಸಿದನು ವಿವಿಧಾಯುಧಗಳಿಂದ ಸಜ್ಜಾಗಿದ್ದ ಅವನ ಮಹಾಸೇನೆಯು ನಿದ್ರಿಸತೊಡಗಿತು (೧-೨) ವೀರಾಗ್ರಗಣ್ಯನಾದ ರಾವಣನಾದರೋ ಆ ಶೈಲಶಿಖರದಲ್ಲಿ ಮಂಡಿಸಿ, ಬೆಳದಿಂಗಳಿನ ಸೌಂದರ್ಯವನ್ನು ಸವಿಯುತ್ತಿದ್ದನು ಸುತ್ತಲಿನ ಉಪವನಗಳಲ್ಲಿ ಕರ್ಣಿಕಾರ ಕದಂಬ ಮುಂತಾದ ಸುಮಮಯ ಲತಾವೃಕ್ಷಗಳು ಸೊಂಪಾಗಿ ಬೆಳೆದಿದ್ದವು ತಾವರೆಕೊಳಗಳಲ್ಲಿ ಕುಮುದಾದಿ ಜಲಪುಷ್ಪಗಳು ಅರಳಿದ್ದವು. ಮಂದಾಕಿನೀ ಜಲವು ಸಳಸಳ ಎಂದು ಹರಿಯುತ್ತಿತ್ತು (೩-೪). ಸಂಪಿಗೆ, ಅಶೋಕ, ಪುನ್ನಾಗ, ಮಂದಾರ,

ತಗರೈರ್ನಾರಿಕೇಲೈಶ್ಚ ಪ್ರಿಯಾಲಪನಸೈಸ್ತಥಾ ।
ಆರಗ್ವಧೈಸ್ತಮಾಲೈಶ್ಚ ಪ್ರಿಯಾಲಬಕುಲೈರಪಿ ॥ ೬

ಏತೈರನ್ಯೈಶ್ಚ ತರುಭಿರುದ್ಭಾಸಿತವನಾಂತರೇ ।
ಕಿಂನರಾ ಮದನೇನಾರ್ತಾ ರಕ್ತಾ ಮಧುರಕಂಠಿನಃ ॥ ೭

ಸಮಂ ಸಂಪ್ರಜಗುರ್ಯತ್ರ ಮನಸ್ತುಷ್ಟಿವಿವರ್ಧನಮ್ ।
ವಿದ್ಯಾಧರಾ ಮದಕ್ಷೀಬಾ ಮದರಕ್ತಾಂತಲೋಚನಾಃ ॥ ೮

ಯೋಷಿದ್ಭಿಃ ಸಹ ಸಂಕ್ರಾಂತಾಶ್ಚಿಕ್ರೀಡುರ್ಜಹೃಷುಶ್ಚ ವೈ ।
ಘಂಟಾನಾಮಿವ ಸಂನಾದಃ ಶುಶ್ರುವೇ ಮಧುರಸ್ವರಃ ॥ ೯

ಅಪ್ಸರೋಗಣಸಂಘಾನಾಂ ಗಾಯತಾಂ ಧನದಾಲಯೇ ।
ಪುಷ್ಪವರ್ಷಾಣಿ ಮುಂಚಂತೋ ನಗಾಃ ಪವನತಾಡಿತಾಃ ॥ ೧೦

ಶೈಲಂ ತಂ ವಾಸಯಂತೀವ ಮಧುಮಾಧವಗಂಧಿನಃ ।
ಮಧುಪುಷ್ಪರಜಃಪೃಕ್ತಂ ಗಂಧಮಾದಾಯ ಪುಷ್ಕಲಮ್ ॥ ೧೧

---

ಮಾವು, ಪಾದರಿ, ಲೋಧ್ರ, ಪ್ರಿಯಂಗು, ಮತ್ತಿ, ಕೇದಗೆ, ತಗರ, ತೆಂಗು, ಪ್ರಿಯಾಲ, ಹಲಸು, ಕಕ್ಕೆ, ಹೊಂಗೆ, ಬಕುಳ—ಮೊದಲಾದ ಮರಗಳು ವನದ ಕಳೆಯನ್ನು ಹೆಚ್ಚಿಸಿದ್ದವು (೫-೬) ಶೃಂಗಾರಿಗಳಾದ ಕಿನ್ನರರು ಅನುರಕ್ತರಾಗಿ ಮಂಜುಲಕಂಠದಿಂದ ಹಾಡುತ್ತಿದ್ದರು ಮಾನಸೋಲ್ಲಾಸಕರ ವಾದ ಸನ್ನಿವೇಶವು ಪಸರಿಸಿತ್ತು ಮದ್ಯಪಾನದಿಂದ ಕೆಂಪಡರಿದ ಕಣ್ಣು ಗಳುಳ್ಳ ಪಾನೋನ್ಮತ್ತರಾದ ವಿದ್ಯಾಧರರು ತರುಣಿಯರೊಂದಿಗೆ ಕ್ರೀಡಿಸುತ್ತ ಹರ್ಷಾವೇಶದಲ್ಲಿದ್ದರು ಆ ಪರ್ವತದಲ್ಲಿ ಹಾಡುತ್ತಿದ್ದ ಅಪ್ಸರೆಯರ ಸಂಗೀತದ ಮಧುರನಾದವು ಕಿರುಗಂಟೆಗಳ ಇಂಚರದಂತೆ ಕೇಳಿಸುತ್ತಿತ್ತು (೭-೯). ವಸಂತಸಮಯದ ಸಕಲಕುಸುಮಗಳ ಸೌರಭವನ್ನು ಬೀರುವ ಮರಗಳು ಮಂದಮಾರುತದಿಂದ ಸ್ಪಂದಿಸಿ ಹೂಮಳೆಗರೆಯುತ್ತ, ಕೈಲಾಸಶೈಲಕ್ಕೆ ಪರಿಮಳವನ್ನು ಲೇಪಿಸುತ್ತಿವೆಯೋ ಎಂಬಂತೆ ಕಾಣಿಸುತ್ತಿದ್ದವು. ವಾಸಂತಿಕ ಸುಮಕಣಗಳ ಸುಗಂಧವನ್ನು ಹೊತ್ತ ಗಾಳಿ ಹಿತಕರವಾಗಿ ಬೀಸುತ್ತಿತ್ತು ಹಾಗೆಯೇ ರಾವಣನ ಕಾಮವು ವರ್ಧಿಸುತ್ತಿತ್ತು ! (೧೦-೧೧).

ಪ್ರವವೌ ವರ್ಧಯನ್ ಕಾಮಂ ರಾವಣಸ್ಯ ಸುಖೋಽನಿಲಃ ।
ಗೇಯಾತ್ ಪುಷ್ಪಸಮೃದ್ಧ್ಯಾ ಚ ಶೈತ್ಯಾದ್ವಾಯೋರ್ಗಿರೇರ್ಗುಣಾತ್

ಪ್ರವೃತ್ತಾಯಾಂ ರಜನ್ಯಾಂ ಚ ಚಂದ್ರಸ್ಯೋದಯನೇನ ಚ ।
ರಾವಣಃ ಸುಮಹಾವೀರ್ಯಃ ಕಾಮಸ್ಯ ವಶಮಾಗತಃ ॥ ೧೩

ವಿನಿಶ್ವಸ್ಯ ವಿನಿಶ್ವಸ್ಯ ಶಶಿನಂ ಸಮವೈಕ್ಷತ ।
ಏತಸ್ಮಿನ್ನಂತರೇ ತತ್ರ ದಿವ್ಯಾಭರಣಭೂಷಿತಾ ॥ ೧೪

ಸರ್ವಾಪ್ಸರೋವರಾ ರಂಭಾ ದಿವ್ಯಪುಷ್ಪವಿಭೂಷಿತಾ ।
ದಿವ್ಯಚಂದನಲಿಪ್ತಾಂಗೀ ಮಂದಾರಕೃತಮೂರ್ಧಜಾ ॥ ೧೫

ದಿವ್ಯೋತ್ಸವಕೃತಾರಂಭಾ ಪೂರ್ಣಚಂದ್ರನಿಭಾನನಾ ।
ಚಕ್ಷುರ್ಮನೋಹರಂ ಪೀನಂ ಮೇಖಲಾದಾಮಭೂಷಿತಮ್ ॥ ೧೬

ಸಮುದ್ವಹಂತೀ ಜಘನಂ ರತಿಪ್ರಾಭೃತಮುತ್ತಮಮ್ ।
ಕೃತೈರ್ವಿಶೇಷಕೈರಾರ್ದ್ರೈಃ ಷಡರ್ತುಕುಸುಮೋದ್ಭವೈಃ ॥ ೧೭

---

ಎಲ್ಲೆಡೆಯೂ ಸಂಗೀತದ ಮಧುರನಾದ, ಹೂಗಳ ಸಮೃದ್ಧಿ, ತಂಪಾದ ಗಾಳಿ, ರಮಣೀಯವಾದ ಕೈಲಾಸ ಪರಿಸರ, ಮನೋಹರವಾದ ರಜನಿ, ಇದರ ಮೇಲೆ ಚಂದ್ರೋದಯ—ರಾವಣನು ಕಾಮೋನ್ಮತ್ತನಾದನು! (೧೨-೧೩) ನಿಟ್ಟುಸಿರು ಬಿಡುತ್ತ ಬಿಡುತ್ತ ಚಂದ್ರನನ್ನೇ ನೋಡತೊಡಗಿದನು ಆ ಸಮಯದಲ್ಲಿ ರಂಭೆಯು ದಿವ್ಯಾಭರಣಭೂಷಿತೆಯಾಗಿ ಅವನೆದುರಿಗೆ ಸುಳಿದಳು. ಅವಳು ಅಪ್ಸರೆಯರಲ್ಲಿ ಅನುಪಮ ಸುಂದರಿ ದಿವ್ಯಪುಷ್ಪಗಳನ್ನು ಧರಿಸಿ ದಿವ್ಯಚಂದನವನ್ನು ಲೇಪಿಸಿಕೊಂಡಿದ್ದಳು ತಲೆಯಲ್ಲಿ ಮಂದಾರಮಾಲೆಯನ್ನು ಮುಡಿದಿದ್ದಳು (೧೪-೧೫) ಕುಬೇರಭವನದಲ್ಲಿ ನಡೆಯುವ ಒಂದು ದಿವ್ಯೋತ್ಸವಕ್ಕೆ ಸಿದ್ಧಳಾಗಿ ಹೊರಟಿದ್ದಳು ಪೂರ್ಣಚಂದ್ರಾನನೆಯಾದ ರಂಭೆಯ ಮೇಖಲಾದಾಮಭೂಷಿತವಾದ ಪೀನಜಘನವು ರಾವಣನ ಕಣ್ಣಿಗೆ ಮನೋಜ್ಞವಾಗಿಯೂ ರತಿವರ್ಧಕವಾಗಿಯೂ ಗೋಚರಿಸಿತು (೧೬) ಕಸ್ತೂರಿ ಮೊದಲಾದ್ದರಿಂದ ಬರೆದ ಕೆನ್ನೆಯ ಚಿತ್ತಾರ, ಹಣೆಯ ತಿಲಕ, ಆರು ಋತುಗಳಲ್ಲಿಯೂ ದೊರೆಯುವ ಕುಸುಮಗಳ ಅಲಂಕಾರ, ದೇಹಕಾಂತಿ,

ಬಭಾವನ್ಯೇತಮೇವ ಶ್ರೀಃ ಕಾಂತಿಶ್ರೀದ್ಯುತಿಕೀರ್ತಿಭಿಃ ।
ನೀಲಂ ಸತೋಯಮೇಘಾಭಂ ವಸ್ತ್ರಂ ಸಮವಗುಂಠಿತಾ ॥ ೧೮

ಯಸ್ಯಾ ವಕ್ತ್ರಂ ಶಶಿನಿಭಂ ಭ್ರುವೌ ಚಾಪನಿಭೇ ಶುಭೇ ।
ಊರೂ ಕರಿಕರಾಕಾರೌ ಕರೌ ಪಲ್ಲವಕೋಮಲೌ ॥ ೧೯

ಸೈನ್ಯಮಧ್ಯೇನ ಗಚ್ಛಂತೀ ರಾವಣೇನೋಪವೀಕ್ಷಿತಾ ।
ತಾಂ ಸಮುತ್ಥಾಯ ಗಚ್ಛಂತೀಂ ಕಾಮಬಾಣವಶಂ ಗತಃ ॥ ೨೦

ಕರೇ ಗೃಹೀತ್ವಾ ಲಜ್ಜಂತೀಂ ಸ್ಮಯಮಾನೋಽಭ್ಯಭಾಷತ ।
ಕ್ವ ಗಚ್ಛಸಿ ವರಾರೋಹೇ ಕಾಂ ಸಿದ್ಧಿಂ ಭಜಸೇ ಸ್ವಯಮ್ ॥ ೨೧

ಕಸ್ಯಾಭ್ಯುದಯಕಾಲೋಽಯಂ ಯಸ್ತ್ವಾಂ ಸಮುಪಭೋಕ್ಷ್ಯತೇ ।
ತ್ವದಾನನರಸಸ್ಯಾದ್ಯ ಪದ್ಮೋತ್ಪಲಸುಗಂಧಿನಃ ॥ ೨೨

ಸುಧಾಮೃತರಸಸ್ಯೇವ ಕೋಽದ್ಯ ತೃಪ್ತಿಂ ಗಮಿಷ್ಯತಿ ।
ಸ್ವರ್ಣಕುಂಭನಿಭೌ ಪೀನೌ ಶುಭೌ ಭೀರು ನಿರಂತರೌ ॥ ೨೩

---

ಸೌಂದರ್ಯ, ಲಾವಣ್ಯ, ಕೀರ್ತಿ—ಇವುಗಳಿಂದೊಪ್ಪುವ ರಂಭೆಯು ಮತ್ತೊಬ್ಬ ಲಕ್ಷ್ಮಿಯೋ ಎಂಬಂತೆ ಕಂಗೊಳಿಸಿದಳು ಕಾರ್ಮೋಡದಂತಿದ್ದ ನೀಲವಸ್ತ್ರವನ್ನು ಹೊದೆದಿದ್ದಳು (೧೭-೧೮) ಆಕೆಯ ಮುಖವು ಚಂದ್ರನಂತೆಯೂ ತಿದ್ದಿದ ಹುಬ್ಬುಗಳು ಬಿಲ್ಲಿನಂತೆಯೂ ತೊಡೆಗಳು ಆನೆಯ ಸೊಂಡಿಲಂತೆಯೂ ಕರತಲಗಳು ಚಿಗುರೆಲೆಗಳಂತೆಯೂ ಇದ್ದವು. ಅವಳು ಸೇನಾಸಮೀಪದಲ್ಲಿ ಹೋಗುತ್ತಿರುವುದು ರಾವಣನಿಗೆ ಕಾಣಿಸಿತು. ಕಾಮಾರ್ತನಾದ ರಾವಣನು ಒಡನೆಯೇ ಹೋಗಿ ಅವಳ ಕೈಯನ್ನು ಹಿಡಿದನು! (೧೯-೨೦) ನಾಚುತ್ತಿದ್ದ ರಂಭೆಯನ್ನು ನೋಡಿ ರಾವಣನು ಮಂದಹಾಸದಿಂದ ಹೀಗೆಂದನು. "ಎಲೆ ಚೆಲುವೆ, ಎಲ್ಲಿಗೆ ಹೋಗುತ್ತಿದ್ದೀಯೆ? ಯಾರ ಕಾರ್ಯಸಿದ್ಧಿಗಾಗಿ ಹೋಗುವೆ? ನಿನ್ನನ್ನು ಭೋಗಿಸುವ ಅಭ್ಯುದಯ ಕಾಲವು ಯಾರಿಗೆ ಪ್ರಾಪ್ತವಾಗಿದೆ? ಪದ್ಮದಂತೆಯೂ ಉತ್ಪಲದಂತೆಯೂ ಪರಿಮಳವನ್ನು ಬೀರುವ ನಿನ್ನ ಮುಖವನ್ನು ಚುಂಬಿಸಿ ಅಧರಾಮೃತವನ್ನು ಹೀರಿ ತೃಪ್ತಿಗೊಳ್ಳುವ ಭಾಗ್ಯವು ಯಾವ ಪುಣ್ಯಾತ್ಮನಿಗೆ ಲಭಿಸುವುದು? ಮನೋಹರೆ, ಬೆದರುವೆ ಏಕೆ? ಸುವರ್ಣಕಲಶಗಳಂತಿರುವ ನಿನ್ನ

ಕಸ್ಯೋರಃಸ್ಥಲಸಂಸ್ಪರ್ಶಂ ದಾಸ್ಯತಸ್ತೇ ಕುಚಾವಿಮೌ ।
ಸುವರ್ಣಚಕ್ರಪ್ರತಿಮಂ ಸ್ವರ್ಣದಾಮಚಿತಂ ಪೃಥು ॥ ೨೪

ಅಧ್ಯಾರೋಹತಿ ಕಸ್ತೇಽದ್ಯ ಜಘನಂ ಸ್ವರ್ಗರೂಪಿಣಮ್ ।
ಮದ್ವಿಶಿಷ್ಟಃ ಪುಮಾನ್ ಕೋಽದ್ಯ ಶಕ್ರೋ ವಿಷ್ಣುರಥಾಶ್ವಿನೌ ॥ ೨೫

ಮಾಮತೀತ್ಯ ಹಿ ಯಂ ಚ ತ್ವಂ ಯಾಸಿ ಭೀರು ನ ಶೋಭನಮ್ ।
ವಿಶ್ರಮ ತ್ವಂ ಪೃಥುಶ್ರೋಣಿ ಶಿಲಾತಲಮಿದಂ ಶುಭಮ್ ॥ ೨೬

ತ್ರೈಲೋಕ್ಯೇ ಯಃ ಪ್ರಭುಶ್ಚೈವ ಮದನ್ಯೋ ನೈವ ವಿದ್ಯತೇ ।
ತದೇವಂ ಪ್ರಾಂಜಲಿಃ ಪ್ರಹ್ವೋ ಯಾಚತೇ ತ್ವಾಂ ದಶಾನನಃ ॥ ೨೭

ಭರ್ತುರ್ಭರ್ತಾ ವಿಧಾತಾ ಚ ತ್ರೈಲೋಕ್ಯಸ್ಯ ಭಜಸ್ವ ಮಾಮ್ ।
ಏವಮುಕ್ತಾಬ್ರವೀದ್ರಂಭಾ ವೇಪಮಾನಾ ಕೃತಾಂಜಲಿಃ ॥ ೨೮

ಪ್ರಸೀದ ನಾರ್ಹಸೇ ವಕ್ತುಮೀದೃಶಂ ತ್ವಂ ಹಿ ಮೇ ಗುರುಃ ।
ಅನ್ಯೇಭ್ಯೋ ಹಿ ತ್ವಯಾ ರಕ್ಷ್ಯಾ ಪ್ರಾಪ್ನುಯಾಂ ಧರ್ಷಣಂ ಯದಿ॥

---

ಪೀನಸ್ತನಗಳು ನಿರಂತರವಾಗಿ ಬೆಳೆದು ಎಷ್ಟು ಮನೋರಮವಾಗಿವೆ! (೨೧-೨೩) ಇವು ಯಾವ ಪುಣ್ಯಾತ್ಮನ ಎದೆಗೆ ಸ್ಪರ್ಶಸುಖವನ್ನು ನೀಡುತ್ತವೆ? ಚಿನ್ನದ ಒಡ್ಯಾಣದಿಂದ ಭೂಷಿತವಾಗಿ ಚಿನ್ನದ ಚಕ್ರದಂತಿರುವ ನಿನ್ನ ಜಘನವನ್ನೇರಿ ಸ್ವರ್ಗಸುಖವನ್ನನುಭವಿಸುವ ಭಾಗ್ಯಶಾಲಿ ಯಾರು? ಸುಂದರಿ, ನನಗಿಂತ ಉತ್ತಮನಾದ ಪುರುಷನು ಯಾವನಿದ್ದಾನೆ? ಇಂದ್ರನೊ? ವಿಷ್ಣುವೊ? ಅಶ್ವಿನೀದೇವತೆಗಳೊ? (ಅವರಲ್ಲಿ ಯಾರೂ ನನಗೆ ಸಮರಲ್ಲ) (೨೪-೨೫) ನನ್ನನ್ನು ಉಲ್ಲಂಘಿಸಿ ಅವನ ಬಳಿಗೆ ಸಾಗುವುದು ಯುಕ್ತವಲ್ಲ ಭೀರು, ಈ ಶಿಲಾತಲವು ಚೆನ್ನಾಗಿದೆ. ಇಲ್ಲಿ ವಿಶ್ರಮಿಸು ಮೂರು ಲೋಕಗಳಿಗೂ ಪ್ರಭುವೆನಿಸಿದವನು ನಾನೊಬ್ಬನೇ ಇನ್ನೊಬ್ಬನಿಲ್ಲ. ಇದೋ, ಪ್ರಾಂಜಲಿಯಾಗಿ ವಿನಯದಿಂದ ಬೇಡುತ್ತೇನೆ ನಾನು ದಶಗ್ರೀವನೆಂದು ತಿಳಿ. ತ್ರಿಲೋಕಗಳ ಪ್ರಭುವಿಗೂ ನಾನು ಪ್ರಭು! ಲೋಕತ್ರಯದ ಆಗುಹೋಗುಗಳೆಲ್ಲ ನನ್ನ ಮುಷ್ಟಿಯಲ್ಲಿವೆ ನನ್ನನ್ನು ಸೇರು" ಎಂದನು (೨೬-೨೭). ರಾವಣನ ನುಡಿಯನ್ನು ಕೇಳಿ ರಂಭೆಯು ತರತರನೆ ನಡುಗಿದಳು ಅವಳು ಕೈಮುಗಿದುಕೊಂಡು "ಪ್ರಭು, ನನ್ನನ್ನು ಮನ್ನಿಸು. ನೀನು ಹೀಗೆನ್ನುವುದು

ತದ್ಧರ್ಮತಃ ಸ್ನುಷಾ ತೇಽಹಂ ತತ್ತ್ವಮೇವ ಬ್ರವೀಮಿ ತೇ ।
ಅಥಾಬ್ರವೀದ್ದಶಗ್ರೀವಶ್ಚರಣಾಧೋಮುಖೀಂ ಸ್ಥಿತಾಮ್ ॥ ೩೦

ರೋಮಹರ್ಷಮನುಪ್ರಾಪ್ತಾಂ ದೃಷ್ಟಮಾತ್ರೇಣ ತಾಂ ತದಾ ।
ಸುತಸ್ಯ ಯದಿ ಮೇ ಭಾರ್ಯಾ ತತಸ್ತ್ವಂ ಹಿ ಸ್ನುಷಾ ಭವೇಃ ॥ ೩೧

ಬಾಢಮಿತ್ಯೇವ ಸಾ ರಂಭಾ ಪ್ರಾಹ ರಾವಣಮುತ್ತರಮ್ ।
ಧರ್ಮತಸ್ತೇ ಸುತಸ್ಯಾಹಂ ಭಾರ್ಯಾ ರಾಕ್ಷಸಪುಂಗವ ॥ ೩೨

ಪುತ್ರಃ ಪ್ರಿಯತರಃ ಪ್ರಾಣೈರ್ಭ್ರಾತುರ್ವೈಶ್ರವಣಸ್ಯ ತೇ ।
ವಿಖ್ಯಾತಸ್ತ್ರಿಷು ಲೋಕೇಷು ನಲಕೂಬರ ಇತ್ಯಯಮ್ ॥ ೩೩

ಧರ್ಮತೋ ಯೋ ಭವೇದ್ವಿಪ್ರಃ ಕ್ಷತ್ರಿಯೋ ವೀರ್ಯತೋ ಭವೇತ್
ಕ್ರೋಧಾದ್ಯಶ್ಚ ಭವೇದಗ್ನಿಃ ಕ್ಷಾಂತ್ಯಾ ಚ ವಸುಧಾಸಮಃ ॥ ೩೪

ತಸ್ಯಾಸ್ಮಿ ಕೃತಸಂಕೇತಾ ಲೋಕಪಾಲಸುತಸ್ಯ ವೈ ।
ತಮುದ್ದಿಶ್ಯ ತು ಮೇ ಸರ್ವಂ ವಿಭೂಷಣಮಿದಂ ಕೃತಮ್ ॥ ೩೫

---

ತರವಲ್ಲ ನನಗೆ ಮಾವನಾಗಿ ಗುರುಸ್ಥಾನದಲ್ಲಿದ್ದೀಯೆ. ಇತರರ ಬಲಾತ್ಕಾರಕ್ಕೆ ನಾನು ಒಳಗಾದರೆ ರಕ್ಷಿಸಬೇಕಾದವನು ನೀನು ಧರ್ಮದಿಂದ ನಿನಗೆ ನಾನು ಸೊಸೆಯಾಗಬೇಕು ಸತ್ಯವನ್ನೇ ಹೇಳುತ್ತಿದ್ದೇನೆ" ಎಂದಳು (೨೮-೩೦) ಅವಳು ಪಾದಗಳನ್ನೇ ನೋಡುತ್ತ ಹೆದರಿ ರೋಮಾಂಚಗೊಂಡು ಬಾಗಿ ನಿಂತಿದ್ದಳು ರಾವಣನು "ರಂಭೆ, ನನ್ನ ಮಗನಿಗೆ ಮಡದಿಯಾದರಲ್ಲವೆ ನೀನು ಸೊಸೆಯಾಗುತ್ತೀಯೆ?" ಎಂದು ಕೇಳಿದನು ರಂಭೆಯು "ದಿಟ, ರಾಕ್ಷಸಪುಂಗವ, ನಿನ್ನ ಮಗನಿಗೆ ನಾನು ಮಡದಿಯಾಗಿದ್ದೇನೆ ನಿನ್ನ ಅಣ್ಣನಾದ ವೈಶ್ರವಣನಿಗೆ ಅತ್ಯಂತ ಪ್ರಿಯನಾದ ನಳಕೂಬರನೆಂಬ ಲೋಕ ವಿಖ್ಯಾತನಾದ ಪುತ್ರನಿದ್ದಾನಲ್ಲವೆ? (೩೧-೩೩). ಅವನು ಧರ್ಮಾಚರಣೆ ಯಲ್ಲಿ ವಿಪ್ರನೆಂದೂ ಶೌರ್ಯದಲ್ಲಿ ಕ್ಷತ್ರಿಯನೆಂದೂ ಖ್ಯಾತಿ ಗಳಿಸಿದ್ದಾನೆ ಸಿಟ್ಟು ಬಂದರೆ ಸಾಕ್ಷಾತ್ ಅಗ್ನಿಯೇ ಅವನು ತಾಳ್ಮೆಯಲ್ಲಿ ಭೂದೇವಿಗೆ ಸಮಾನ ಆ ಲೋಕಪಾಲತನಯನೊಡನೆ ನಾನು ಸಂಕೇತಮಾಡಿಕೊಂಡಿದ್ದೇನೆ. ಈಗ ನಾನು ಮಾಡಿಕೊಂಡಿರುವ ಶೃಂಗಾರವೆಲ್ಲವೂ ಆತನಿಗೋಸ್ಕರ

ತಥಾ ತಸ್ಯ ಹಿ ನಾನ್ಯಸ್ಯ ಭಾವೋ ಮಾಂ ಪ್ರತಿ ತಿಷ್ಠತಿ ।
ತೇನ ಸತ್ಯೇನ ಮಾಂ ರಾಜನ್ ಮೋಕ್ತುಮರ್ಹಸ್ಯರಿಂದಮ ॥ ೩೬

ಸ ಹಿ ತಿಷ್ಠತಿ ಧರ್ಮಾತ್ಮಾ ಮಾಂ ಪ್ರತೀಕ್ಷನ್ ಸಮುತ್ಸುಕಃ ।
ತತ್ರ ವಿಘ್ನಂ ಸುತಸ್ಯೇಹ ಕರ್ತುಂ ನಾರ್ಹಸಿ ಮುಂಚ ಮಾಮ್ ॥

ಸದ್ಭಿರಾಚರಿತಂ ಮಾರ್ಗಂ ಗಚ್ಛ ರಾಕ್ಷಸಪುಂಗವ ।
ಮಾನನೀಯೋ ಮಮ ತ್ವಂ ಹಿ ಪಾಲನೀಯಾ ತಥಾಸ್ಮಿ ತೇ ॥ ೩೮

ಏವಮುಕ್ತೋ ದಶಗ್ರೀವಃ ಪ್ರತ್ಯುವಾಚ ವಿನೀತವತ್ ।
ಸ್ನುಷಾಸ್ಮಿ ಯದವೋಚಸ್ತ್ವಮೇಕಪತ್ನೀಷ್ವಯಂ ಕ್ರಮಃ ॥ ೩೯

ದೇವಲೋಕಸ್ಥಿತಿರಿಯಂ ಸುರಾಣಾಂ ಶಾಶ್ವತೀ ಮತಾ ।
ಪತಿರಪ್ಸರಸಾಂ ನಾಸ್ತಿ ನ ಚೈಕಸ್ತ್ರೀಪರಿಗ್ರಹಃ ॥ ೪೦

ಏವಮುಕ್ತ್ವಾ ಸ ತಾಂ ರಕ್ಷೋ ನಿವೇಶ್ಯ ಚ ಶಿಲಾತಲೇ ।
ಕಾಮಭೋಗಾಭಿಸಂಸಕ್ತೋ ಮೈಥುನಾಯೋಪಚಕ್ರಮೇ ॥ ೪೧

---

ಹಾಗೆಯೇ ನಳಕೂಬರನ ಪ್ರೇಮವೆಲ್ಲವೂ ನನಗೆ ಮೀಸಲು ಆದ್ದರಿಂದ, ಮಹಾರಾಜ, ನನ್ನನ್ನು ಬಿಟ್ಟುಬಿಡುವುದು ನಿನಗೆ ಉಚಿತವಾಗಿದೆ (೩೪-೩೬) ಆ ಧರ್ಮಾತ್ಮನು ನನ್ನನ್ನು ಪ್ರತೀಕ್ಷಿಸುತ್ತ ಉತ್ಕಂಠಿತನಾಗಿದ್ದಾನೆ ನಿನ್ನ ಮಗನ ಇಷ್ಟಕ್ಕೆ ಅಡ್ಡಿಯನ್ನೊಡ್ಡುವುದು ಸರಿಯಲ್ಲ ನನ್ನನ್ನು ಬಿಟ್ಟುಬಿಡು. ರಾಕ್ಷಸೋತ್ತಮ, ಸಜ್ಜನರು ಹೋದ ದಾರಿಯಲ್ಲಿ ಹೋಗು ನನಗೆ ನೀನು ಮಾನನೀಯ. ನಿನಗೆ ನಾನು ಪಾಲನೀಯಳು" ಎಂದು ಹೇಳಿದಳು (೩೭-೩೮) ಆ ಮಾತನ್ನು ಕೇಳಿ ದಶಗ್ರೀವನು ಮೆಲ್ಲುಡಿಯಿಂದಲೇ "ರಂಭೆ, ಸೊಸೆಯೆಂದು ಹೇಳುವೆಯಲ್ಲ, ಈ ಕ್ರಮವು ಒಬ್ಬನಿಗೇ ಮಡದಿಯಾಗಿರುವ ಸ್ತ್ರೀಯರಲ್ಲಿ ಘಟಿಸುತ್ತದೆ ನೀನು ಅಪ್ಸರೆ, ಅಪ್ಸರೆಯರಿಗೆ ಒಬ್ಬನೇ ಪತಿಯೆಂಬ ನಿಯಮ ಎಲ್ಲಿದೆ? ದೇವತೆಗಳು ಒಬ್ಬಳನ್ನೇ ಪತ್ನಿಯೆಂದು ತಿಳಿಯುವ ಪರಿಪಾಟಿ ಎಲ್ಲಿದೆ? ದೇವಲೋಕದಲ್ಲಿ ಯಾರು ಯಾರನ್ನಾದರೂ ಭೋಗಿಸಬಹುದೆಂಬುದು ಅನಾದಿಯಾದ ಸಂಪ್ರದಾಯ" ಎಂದು ಹೇಳಿ ರಂಭೆಯನ್ನು ಶಿಲಾತಲದಲ್ಲಿ ಎಳೆದು ಮಲಗಿಸಿ ಬಲಾತ್ಕಾರದಿಂದ ಭೋಗಿಸಿದನು

ಸಾ ವಿಭುಕ್ತಾ ತತೋ ರಂಭಾ ಭ್ರಷ್ಟಮಾಲ್ಯವಿಭೂಷಣಾ ।
ಗಜೇಂದ್ರಾಕ್ರೀಡಮಥಿತಾ ನದೀವಾಕುಲತಾಂ ಗತಾ ॥ ೪೨

ಲುಲಿತಾಕುಲಕೇಶಾಂತಾ ಕರವೇಪಿತಪಲ್ಲವಾ ।
ಪವನೇನಾವಧೂತೇವ ಲತಾ ಕುಸುಮಶಾಲಿನೀ ॥ ೪೩

ಸಾ ವೇಪಮಾನಾ ಲಜ್ಜಂತೀ ಭೀತಾ ಕರಕೃತಾಂಜಲಿಃ ।
ನಲಕೂಬರಮಾಸಾದ್ಯ ಪಾದಯೋರ್ನಿಪಪಾತ ಹ ॥ ೪೪

ತದವಸ್ಥಾಂ ಚ ತಾಂ ದೃಷ್ಟ್ವಾ ಮಹಾತ್ಮಾ ನಲಕೂಬರಃ ।
ಅಬ್ರವೀತ್ ಕಿಮಿದಂ ಭದ್ರೇ ಪಾದಯೋಃ ಪತಿತಾಸಿ ಮೇ ॥ ೪೫

ಸಾ ವೈ ನಿಃಶ್ವಸಮಾನಾ ತು ವೇಪಮಾನಾ ಕೃತಾಂಜಲಿಃ ।
ತಸ್ಮೈ ಸರ್ವಂ ಯಥಾತತ್ತ್ವಮಾಖ್ಯಾತುಮುಪಚಕ್ರಮೇ ॥ ೪೬

ಏಷ ದೇವ ದಶಗ್ರೀವಃ ಪ್ರಾಪ್ತೋ ಗಂತುಂ ತ್ರಿವಿಷ್ಟಪಮ್ ।
ತೇನ ಸೈನ್ಯಸಹಾಯೇನ ನಿಶೇಯಂ ಪರಿಣಾಮಿತಾ ॥ ೪೭

---

(೩೯-೪೧) ಅನಂತರ ಇನ್ನು ಹೋಗೆಂದು ಅವಳನ್ನು ಬಿಟ್ಟನು ರಂಭೆಯ ಮಾಲ್ಯಭೂಷಣಗಳು ಕಿತ್ತು ತೂರಾಡಿದ್ದವು ಸಲಗವು ಕ್ರೀಡಿಸಿ ಈಡಾಡಿದ ನದಿಯಂತೆ ಅವಳು ವ್ಯಾಕುಲಿತಳಾಗಿದ್ದಳು ಮುಂಗುರುಳು ಕೆದರಿತ್ತು ಕರಪಲ್ಲವಗಳು ನಡುಗುತ್ತಿದ್ದವು ಬಿರುಗಾಳಿಯ ರಭಸಕ್ಕೆ ಸಿಕ್ಕಿದ ಹೂವರಳಿದ ಬಳ್ಳಿಯಂತೆ ಅವಳ ಪರಿಸ್ಥಿತಿಯಾಗಿತ್ತು (೪೨-೪೩) ರಂಭೆಯು ನಡುಗುತ್ತ ನಾಚುತ್ತ ಅಂಜುತ್ತ ಕೈಮುಗಿದುಕೊಂಡು ನಳಕೂಬರನ ಬಳಿಗೆ ಹೋಗಿ ಅವನ ಪಾದಗಳಮೇಲೆ ಬಿದ್ದಳು ಆ ರೀತಿಯಲ್ಲಿ ಬಂದು ಬಿದ್ದ ರಂಭೆಯನ್ನು ನೋಡಿ ನಳಕೂಬರನು "ಭದ್ರೆ, ಏನಿದು? ನನ್ನ ಕಾಲ್ಬುಡದಲ್ಲಿ ಅಡ್ಡಬೀಳುವ ಕಾರಣವೇನು?" ಎಂದು ಕೇಳಿದನು (೪೪-೪೫) ರಂಭೆಯು ನಿಡುಸುಯ್ಯುತ್ತ ಭಯದಿಂದ ಕಂಪಿಸುತ್ತ, ಬದ್ಧಾಂಜಲಿಯಾಗಿ ನಡೆದ ವೃತ್ತಾಂತವನ್ನು ನಿವೇದಿಸಿದಳು: "ದೇವ, ದಶಗ್ರೀವನು, ಸ್ವರ್ಗಕ್ಕೆ ಧಾಳಿಯಿಡಲು ಸೈನ್ಯ ಸಮೇತನಾಗಿ ಬಂದು ಇಲ್ಲಿಗೆ ಸಮೀಪದಲ್ಲಿ ಈ ರಾತ್ರಿ ತಂಗಿದ್ದಾನೆ

ಆಯಾಂತೀ ತೇನ ದೃಷ್ಟಾಸ್ಮಿ ತ್ವತ್ಸಕಾಶಮರಿಂದಮ ।
ಗೃಹೀತಾ ತೇನ ಪೃಷ್ಟಾಸ್ಮಿ ಕಸ್ಯ ತ್ವಮಿತಿ ರಕ್ಷಸಾ ॥ ೪೮

ಮಯಾ ತು ಸರ್ವಂ ಯತ್ ಸತ್ಯಂ ತಸ್ಮೈ ಸರ್ವಂ ನಿವೇದಿತಮ್ ।
ಕಾಮಮೋಹಾಭಿಭೂತಾತ್ಮಾ ನಾಶ್ರೌಷೀತ್ತದ್ವಚೋ ಮಮ ॥ ೪೯

ಯಾಚ್ಯಮಾನೋ ಮಯಾ ದೇವ ಸ್ನುಷಾ ತೇಽಹಮಿತಿ ಪ್ರಭೋ ।
ತತ್ ಸರ್ವಂ ಪೃಷ್ಠತಃ ಕೃತ್ವಾ ಬಲಾತ್ತೇನಾಸ್ಮಿ ಧರ್ಷಿತಾ ॥ ೫೦

ಏವಂ ತ್ವಮಪರಾಧಂ ಮೇ ಕ್ಷಂತುಮರ್ಹಸಿ ಸುವ್ರತ ।
ನ ಹಿ ತುಲ್ಯಬಲಂ ಸೌಮ್ಯ ಸ್ತ್ರಿಯಾಶ್ಚ ಪುರುಷಸ್ಯ ಚ ॥ ೫೧

ಏತಚ್ಛ್ರುತ್ವಾ ತು ಸಂಕ್ರುದ್ಧಸ್ತದಾ ವೈಶ್ರವಣಾತ್ಮಜಃ ।
ಧರ್ಷಣಾಂ ತಾಂ ಪರಾಂ ಶ್ರುತ್ವಾ ಧ್ಯಾನಂ ಸಂಪ್ರವಿವೇಶ ಹ ॥ ೫೨

ತಸ್ಯ ತತ್ ಕರ್ಮ ವಿಜ್ಞಾಯ ತದಾ ವೈಶ್ರವಣಾತ್ಮಜಃ ।
ಮುಹೂರ್ತಾತ್ ಕ್ರೋಧತಾಮ್ರಾಕ್ಷಸ್ತೋಯಂ ಜಗ್ರಾಹ ಪಾಣಿನಾ

---

(೪೬-೪೭) ನಾನು ನಿನ್ನ ಬಳಿಗೆ ಬರುತ್ತಿರುವಾಗ, ವೀರಾಗ್ರಣಿ, ಆತನು ನೋಡಿದನು ಒಡನೆಯೇ ಅವನು ನನ್ನನ್ನು ಹಿಡಿದು ನಿಲ್ಲಿಸಿ 'ನೀನು ಯಾರ ಕಾಂತೆ?' ಎಂದು ಕೇಳಿದನು ನಾನು ಸತ್ಯವಾದ ಸಂಗತಿಯನ್ನು ತಿಳಿಸಿದೆನು. ಕಾಮಾಂಧನಾದ ಆ ಮೂಢನು ನನ್ನ ಮಾತಿಗೆ ಕಿವಿಗೊಡಲಿಲ್ಲ (೪೮-೪೯). 'ನಾನು ನಿನಗೆ ಸೊಸೆಯಾಗಬೇಕು' ಎಂದು ಹೇಳಿ ಎಷ್ಟು ಬೇಡಿಕೊಂಡರೂ, ಪ್ರಭು, ಅದೊಂದನ್ನೂ ಲೆಕ್ಕಕ್ಕೆ ತಾರದೆ ನನ್ನನ್ನು ಬಲಾತ್ಕರಿಸಿದ್ದಾನೆ ದೇವ, ಈ ರೀತಿಯಲ್ಲಿ ನಡೆದ ನನ್ನ ಅಪರಾಧವನ್ನು ಕ್ಷಮಿಸು ಎಷ್ಟಾದರೂ, ಸೌಮ್ಯ, ಹೆಂಗಸಿಗೆ ಗಂಡಸನ್ನೆದುರಿಸುವಷ್ಟು ಬಲವಿರುವುದಿಲ್ಲ" ಎಂದಳು (೫೦-೫೧) ರಂಭೆಯಮೇಲೆ ಬಲಾತ್ಕಾರವು ನಡೆಯಿತೆಂಬುದನ್ನು ಕೇಳಿ ವೈಶ್ರವಣತನಯನಾದ ನಳಕೂಬರನು ಸಂಕ್ರುದ್ಧನಾದನು ಒಡನೆಯೇ ಧ್ಯಾನನಿಷ್ಠನಾಗಿ ರಾವಣನು ನಡೆಸಿದ ದುಷ್ಕೃತ್ಯವು ಸತ್ಯವೆಂಬುದನ್ನರಿತನು ಅವನ ಕಣ್ಣುಗಳು ಕೆಂಪಡರಿದವು ಕೂಡಲೆ ಅಂಜಲಿಯಲ್ಲಿ ನೀರನ್ನು

ಗೃಹೀತ್ವಾ ಸಲಿಲಂ ಸರ್ವಮುಪಸ್ಪೃಶ್ಯ ಯಥಾವಿಧಿ ।
ಉತ್ಸಸರ್ಜ ಯಥಾಶಾಪಂ ರಾಕ್ಷಸೇಂದ್ರಾಯ ದಾರುಣಮ್ ॥ ೫೪

ಅಕಾಮಾ ತೇನ ಯಸ್ಮಾತ್ತ್ವಂ ಬಲಾದ್ಭದ್ರೇ ಪ್ರಧರ್ಷಿತಾ ।
ತಸ್ಮಾತ್ ಸ ಯುವತೀಮನ್ಯಾಂ ನಾಕಾಮಾಮುಪಯಾಸ್ಯತಿ ॥ ೫೫

ಯದಾ ಹ್ಯಕಾಮಾಂ ಕಾಮಾರ್ತೋ ಧರ್ಷಯಿಷ್ಯತಿ ಯೋಷಿತಮ್
ಮೂರ್ಧಾ ತು ಸಪ್ತಧಾ ತಸ್ಯ ಶಕಲೀಭವಿತಾ ತದಾ ॥ ೫೬

ತಸ್ಮಿನ್ನುದಾಹೃತೇ ಶಾಪೇ ಜ್ವಲಿತಾಗ್ನಿಸಮಪ್ರಭೇ ।
ದೇವದುಂದುಭಯೋ ನೇದುಃ ಪುಷ್ಪವೃಷ್ಟಿಶ್ಚ ಖಾಚ್ಚ್ಯುತಾ ॥ ೫೭

ಪಿತಾಮಹಮುಖಾಶ್ಚೈವ ಸರ್ವೇ ದೇವಾಃ ಪ್ರಹರ್ಷಿತಾಃ ।
ಜ್ಞಾತ್ವಾ ಲೋಕಗತಿಂ ಸರ್ವಾಂ ತಸ್ಯ ಮೃತ್ಯುಂ ಚ ರಕ್ಷಸಃ ॥ ೫೮

ಋಷಯಃ ಪಿತರಶ್ಚೈವ ಪ್ರೀತಿಮಾಪುರನುತ್ತಮಾಮ್ ।
ಶ್ರುತ್ವಾ ತು ಸ ದಶಗ್ರೀವಸ್ತಂ ಶಾಪಂ ರೋಮಹರ್ಷಣಮ್ ॥ ೫೯

---

ತೆಗೆದುಕೊಂಡು ವಿಧಿಪ್ರಕಾರವಾಗಿ ಚಕ್ಷುರಾದೀಂದ್ರಿಯಗಳಿಗೆ ಸ್ಪರ್ಶಿಸಿ, ನಳಕೂಬರನು ರಾವಣನಿಗೆ ದಾರುಣವಾದ ಶಾಪವನ್ನಿತ್ತನು (೫೨-೫೪) : "ಭದ್ರೆ, ಅಕಾಮಳಾದ ನಿನ್ನನ್ನು ರಾವಣನು ಬಲಾತ್ಕರಿಸಿ ಧರ್ಷಿಸಿದ್ದಾನೆ ಇಂದಿನಿಂದ ಅವನು ಅಕಾಮಳಾದ ಯಾವ ಪರಯುವತಿಯನ್ನೂ ಬಲಾತ್ಕರಿಸ ಕೂಡದು ಪ್ರೇಮವಿಲ್ಲದ ಯಾವ ಸ್ತ್ರೀಯನ್ನಾದರೂ ಅವನು ಕಾಮಾರ್ತನಾಗಿ ಧರ್ಷಿಸಿದರೆ, ಅವನ ತಲೆಯು ಏಳು ಸೀಳಾಗಿ ಒಡೆದುಹೋಗಲಿ!" ಎಂದು ಶಪಿಸಿದನು (೫೫-೫೬) ನಳಕೂಬರನು ಪ್ರಜ್ವಲಿಸುವ ಅಗ್ನಿಯಂತೆ ಪ್ರಖರವಾದ ಆ ಕ್ರೂರಶಾಪವನ್ನಿತ್ತೊಡನೆ, ದೇವದುಂದುಭಿಗಳು ಮೊಳಗಿದವು ಅಂಬರದಿಂದ ಹೂಮಳೆ ಸುರಿಯಿತು ರಾವಣನಿಂದ ಲೋಕಗಳಿಗೊದಗಿದ್ದ ದುರವಸ್ಥೆಯನ್ನು ತಿಳಿದಿದ್ದ ಬ್ರಹ್ಮಾದಿದೇವತೆಗಳು ಮರಣಾಂತವಾದ ಈ ಶಾಪವನ್ನು ಕೇಳಿ ಸಂತೋಷಿಸಿದರು ಋಷಿಗಳಿಗೂ ಪಿತೃಗಳಿಗೂ ಪರಮಾನಂದವಾಯಿತು (೫೭-೫೮) ರೋಮಾಂಚಕರವಾದ ಆ ಶಾಪ

ನಾರೀಷು ಮೈಥುನೇ ಭಾವಂ ನಾಕಾಮಾಸ್ವಭ್ಯರೋಚಯತ್ ।
ತೇನ ನೀತಾಃ ಸ್ತ್ರಿಯಃ ಪ್ರೀತಿಮಾಪುಃ ಸರ್ವಾಃ ಪತಿವ್ರತಾಃ ॥ ೬೦

ನಲಕೂಬರನಿರ್ಮುಕ್ತಂ ಶಾಪಂ ಶ್ರುತ್ವಾ ಮನಃಪ್ರಿಯಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಡ್ವಿಂಶಃ ಸರ್ಗಃ



ವೃತ್ತಾಂತವು ದಶಗ್ರೀವನಿಗೆ ತಿಳಿಯಿತು ಅಲ್ಲಿಂದ ಮುಂದೆ ಆತನು ಅಕಾಮರಾದ ಸ್ತ್ರೀಯರಲ್ಲಿ ಬಲಾತ್ಕಾರದ ಸಂಭೋಗವನ್ನು ತ್ಯಜಿಸಿದನು ನಳಕೂಬರನ ಶಾಪವನ್ನು ಕೇಳಿ ಪತಿವ್ರತೆಯರಾದ ಸ್ತ್ರೀಯರೆಲ್ಲರೂ ಆನಂದಿಸಿದರು * (೫೯–೬೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತಾರನೆಯ ಸರ್ಗ



* ಈ ಶಾಪವೃತ್ತಾಂತವನ್ನು ಶ್ರೀರಾಮನಿಗೆ ಹೇಳುವುದರಲ್ಲಿ ಇನ್ನೊಂದು ಉದ್ದೇಶ ಉಂಟು ಸೀತಾದೇವಿಯು ರಾವಣನ ಬಲಾತ್ಕಾರಕ್ಕೆ ಒಳಗಾಗಲಿಲ್ಲವೆಂದೂ ಅವಳು ಸರ್ವಥಾ ಪರಿಶುದ್ಧಳೆಂದೂ ತಿಳಿಸುವುದೇ ಅಗಸ್ತ್ಯರ ಆಶಯ

## ಸಪ್ತವಿಂಶಃ ಸರ್ಗಃ

### ಸುಮಾಲಿವಧಃ

ಕೈಲಾಸಂ ಲಂಘಯಿತ್ವಾಥ ದಶಗ್ರೀವಃ ಸ ರಾವಣಃ ।
ಆಸಸಾದ ಮಹಾತೇಜಾ ಇಂದ್ರಲೋಕಂ ನಿಶಾಚರಃ ॥ ೧

ತಸ್ಯ ರಾಕ್ಷಸಸೈನ್ಯಸ್ಯ ಸಮಂತಾದುಪಯಾಸ್ಯತಃ ।
ದೇವಲೋಕಂ ಯಯೌ ಶಬ್ದೋ ಮಥ್ಯಮಾನಾರ್ಣವೋಪಮಃ ॥ ೨

ಶ್ರುತ್ವಾ ತು ರಾವಣಂ ಪ್ರಾಪ್ತಮಿಂದ್ರಶ್ಚಲಿತ ಆಸನಾತ್ ।
ಅಬ್ರವೀತ್ತತ್ರ ತಾನ್ ದೇವಾನ್ ಸರ್ವಾನೇವ ಸಮಾಗತಾನ್ ॥ ೩

ಆದಿತ್ಯಾನ್ ಸವಸೂನ್ ರುದ್ರಾನ್ ವಿಶ್ವಾನ್ ಸಾಧ್ಯಾನ್ ಮರುದ್ಗಣಾನ್
ಸಜ್ಜೀಭವತ ಯುದ್ಧಾರ್ಥಂ ರಾವಣಸ್ಯ ದುರಾತ್ಮನಃ ॥ ೪

## ಸರ್ಗ ೨೭

ರಾವಣನನ್ನು ಸಂಹರಿಸಬೇಕೆಂದು ಇಂದ್ರನು ವಿಷ್ಣುವನ್ನು ಪ್ರಾರ್ಥಿಸುವುದು.
ವರಗರ್ವಿತನಾದ ರಾವಣನನ್ನು ವಧಿಸಲು ಇದು ಸಮಯವಲ್ಲವೆಂದೂ
ಸಮಯ ಬಂದಾಗ ವಧಿಸುವೆನೆಂದೂ ವಿಷ್ಣುವಿನ ಪ್ರತ್ಯುತ್ತರ
ಸಾವಿತ್ರನೆಂಬ ವಸುವಿನಿಂದ ಸುಮಾಲಿಯ ವಧೆ

ಶ್ರೀರಾಮ, ಅನಂತರ ಮಹಾತೇಜಸ್ವಿಯಾದ ದಶಗ್ರೀವನು ಕೈಲಾಸವನ್ನು ದಾಟಿ ಇಂದ್ರಲೋಕದ ಕಡೆಗೆ ಸಾಗಿದನು ಸುತ್ತಲೂ ಮುತ್ತಲು ಬರುತ್ತಿದ್ದ ರಾಕ್ಷಸಸೇನೆಯ ಕೋಲಾಹಲೋದ್ಘೋಷವು, ಕಡೆಯಲ್ಪಡುವ ಕಡಲಿನ ಒಡಲಿನಿಂದೆದ್ದು ಬಂದಂತೆ ಸುರಲೋಕವನ್ನಡರಿತು (೧-೨). 'ಹೋ! ರಾವಣನು ಬಂದನು!' ಎನ್ನುತ್ತ ದೇವೇಂದ್ರನು ಸಿಂಹಾಸನದಿಂದೆದ್ದು ಅಲ್ಲಿ ನೆರೆದಿದ್ದ ಆದಿತ್ಯ, ವಸು, ರುದ್ರ, ವಿಶ್ವ, ಸಾಧ್ಯ, ಮರುತ್ತು ಮುಂತಾದ ದೇವಗಣಗಳನ್ನುದ್ದೇಶಿಸಿ "ದೇವತೆಗಳೆ, ದುರಾತ್ಮನಾದ ದಶಗ್ರೀವನು ದಂಡೆತ್ತಿ ಬರುತ್ತಿದ್ದಾನೆ ಸಮರಕ್ಕೆ ಸಜ್ಜಾಗಿರಿ!" ಎಂದನು

ಏವಮುಕ್ತಾಸ್ತು ಶಕ್ರೇಣ ದೇವಾಃ ಶಕ್ರಸಮಾ ಯುಧಿ ।
ಸಂನಹ್ಯ ಸುಮಹಾಸತ್ತ್ವಾ ಯುದ್ಧಶ್ರದ್ಧಾಸಮನ್ವಿತಾಃ ॥ ೫

ಸ ತು ದೀನಃ ಪರಿತ್ರಸ್ತೋ ಮಹೇಂದ್ರೋ ರಾವಣಂ ಪ್ರತಿ ।
ವಿಷ್ಣೋಃ ಸಮೀಪಮಾಗಮ್ಯ ವಾಕ್ಯಮೇತದುವಾಚ ಹ ॥ ೬

ವಿಷ್ಣೋ ಕಥಂ ಕರಿಷ್ಯಾಮಿ ಮಹಾವೀರ್ಯಪರಾಕ್ರಮಃ ।
ಅಸೌ ಹಿ ಬಲವಾನ್ ರಕ್ಷೋ ಯುದ್ಧಾರ್ಥಮಭಿವರ್ತತೇ ॥ ೭

ವರಪ್ರದಾನಾದ್ಬಲವಾನ್ನ ಖಲ್ವನ್ಯೇನ ಹೇತುನಾ ।
ತತ್ತು ಸತ್ಯಂ ವಚಃ ಕಾರ್ಯಂ ಯದುಕ್ತಂ ಪದ್ಮಯೋನಿನಾ ॥ ೮

ತದ್ಯಥಾ ನಮುಚಿರ್ವೃತ್ರೋ ಬಲಿರ್ನರಕಶಂಬರೌ ।
ತ್ವದ್ಬಲಂ ಸಮವಷ್ಟಭ್ಯ ಮಯಾ ದಗ್ಧಾಸ್ತಥಾ ಕುರು ॥ ೯

ನ ಹ್ಯನ್ಯೋ ದೇವ ದೇವೇಶ ತ್ವಾಮೃತೇ ಮಧುಸೂದನ ।
ಗತಿಃ ಪರಾಯಣಂ ಚಾಸ್ತಿ ತ್ರೈಲೋಕ್ಯೇ ಸಚರಾಚರೇ ॥ ೧೦

ತ್ವಂ ಹಿ ನಾರಾಯಣಃ ಶ್ರೀಮಾನ್ ಪದ್ಮನಾಭಃ ಸನಾತನಃ ।
ತ್ವಯೇಮೇ ಸ್ಥಾಪಿತಾ ಲೋಕಾಃ ಶಕ್ರಶ್ಚಾಹಂ ಸುರೇಶ್ವರಃ ॥ ೧೧

---

(೩-೪) ಇಂದ್ರನ ಆಜ್ಞೆಯಂತೆ ಶೂರರಾದ ಆ ದೇವತೆಗಳೆಲ್ಲರೂ ಯುದ್ಧಶ್ರದ್ಧೆಯಿಂದ ಸಿದ್ಧರಾದರು ಆದರೆ ಇಂದ್ರನೇ ರಾವಣನಿಗೆ ಹೆದರಿ ದೀನನಾಗಿ ವಿಷ್ಣುವಿನ ಬಳಿಗೆ ಹೋಗಿ ಹೀಗೆ ನಿವೇದಿಸಿದನು "ಹೇ ಪ್ರಭು, ಪ್ರಬಲ ಪರಾಕ್ರಮಿಯೂ ಬಲಾಢ್ಯನೂ ಆದ ರಾವಣನು ಯುದ್ಧಕ್ಕಾಗಿ ಬರುತ್ತಿದ್ದಾನೆ (೫-೭) ಅವನ ಬಲವೆಲ್ಲವೂ ವರದಾನದಿಂದ ಲಭಿಸಿದ್ದೇ ಹೊರತು ಬೇರೆಯಲ್ಲ. ಬ್ರಹ್ಮದೇವನ ನುಡಿಯನ್ನು ದಿಟವಾಗುವಂತೆ ಉಳಿಸಬೇಕಾಗಿದೆ. ಹಿಂದೆ ನಿನ್ನ ಬೆಂಬಲದಿಂದಲೇ ನಮುಚಿ, ವೃತ್ರ, ಬಲಿ, ನರಕ ಶಂಬರ— ಮುಂತಾದವರ ಪೀಡೆಯನ್ನು ನಾನು ನಿವಾರಿಸಿಕೊಂಡೆನು ಅದರಂತೆ ಈಗಲೂ ಯಾವುದಾದರೊಂದು ಉಪಾಯವನ್ನು ಹೇಳು (೭-೯) ಹೇ ದೇವೇಶ-ಮಧುಸೂದನ, ನಿನ್ನನ್ನುಳಿದು ನನಗೆ ಬೇರೆ ಗತಿ ಇಲ್ಲ ಲೋಕತ್ರಯದಲ್ಲಿಯೂ ನೀನೇ ನನಗೆ ಆಶ್ರಯದಾತನು ಸನಾತನನೂ ಪದ್ಮನಾಭನೂ ಆದ ಶ್ರೀಮನ್ನಾರಾಯಣನಲ್ಲವೆ ನೀನು? ಸಕಲಲೋಕಗಳನ್ನೂ ನೆಲೆಗೊಳಿಸಿ

ತ್ವಯಾ ಸೃಷ್ಟಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಮ್ ।
ತ್ವಾಮೇವ ಭಗವನ್ ಸರ್ವೇ ಪ್ರವಿಶಂತಿ ಯುಗಕ್ಷಯೇ ॥ ೧೨

ತದಾಚಕ್ಷ್ವ ಯಥಾ ತತ್ತ್ವಂ ದೇವದೇವ ಮಮ ಸ್ವಯಮ್ ।
ಅಪಿ ಚಕ್ರಸಹಾಯಸ್ತ್ವಂ ಯೋತ್ಸ್ಯಸೇ ರಾವಣಂ ಪ್ರಭೋ ॥ ೧೩

ಏವಮುಕ್ತಃ ಸ ಶಕ್ರೇಣ ದೇವೋ ನಾರಾಯಣಃ ಪ್ರಭುಃ ।
ಅಬ್ರವೀನ್ನ ಪರಿತ್ರಾಸಃ ಕಾರ್ಯಸ್ತೇ ಶ್ರೂಯತಾಂ ಚ ಮೇ ॥ ೧೪

ನ ತಾವದೇಷ ದುಷ್ಟಾತ್ಮಾ ಶಕ್ಯೋ ಜೇತುಂ ಸುರಾಸುರೈಃ ।
ಹಂತುಂ ಚಾಪಿ ಸಮಾಸಾದ್ಯ ವರದಾನೇನ ದುರ್ಜಯಃ ॥ ೧೫

ಸರ್ವಥಾ ತು ಮಹತ್ ಕರ್ಮ ಕರಿಷ್ಯತಿ ಬಲೋತ್ಕಟಃ ।
ರಾಕ್ಷಸಃ ಪುತ್ರಸಹಿತೋ ದೃಷ್ಟಮೇತನ್ನಿಸರ್ಗತಃ ॥ ೧೬

ಯತ್ತು ಮಾಂ ತ್ವಮಭಾಷಿಷ್ಠಾ ಯುಧ್ಯಸ್ವೇತಿ ಸುರೇಶ್ವರ ।
ನಾಹಂ ತಂ ಪ್ರತಿಯೋತ್ಸ್ಯಾಮಿ ರಾವಣಂ ರಾಕ್ಷಸಂ ಯುಧಿ ॥ ೧೭

---

ಪಾಲಿಸತಕ್ಕವನು ನೀನೇ ದೇವೇಂದ್ರನನ್ನಾಗಿ ನನ್ನನ್ನು ನಿಯಮಿಸಿದವನೂ ನೀನೇ (೧೦-೧೧) ಚರಾಚರಾತ್ಮಕವಾದ ಈ ವಿಶ್ವವನ್ನು ಸೃಜಿಸಿದವನು ನೀನೇ ಹೇ ಭಗವನ್, ಸಮಸ್ತಜೀವಜಾತಗಳೂ ಪ್ರಳಯಕಾಲದಲ್ಲಿ ನಿನ್ನಲ್ಲಿಯೇ ಲೀನವಾಗುತ್ತವೆ. ಆದ್ದರಿಂದ, ಹೇ ದೇವದೇವ, ನನಗೆ ಸತ್ಯವನ್ನು ತಿಳಿಸು. ಪ್ರಭು, ಚಕ್ರಾಯುಧಧಾರಿಯಾಗಿ ರಾವಣನೊಡನೆ ಯುದ್ಧಮಾಡುವೆಯಾ ?" ಎಂದನು (೧೨-೧೩) ಆಗ ಶ್ರೀಮನ್ನಾರಾಯಣನು "ಶಕ್ರ, ಹೆದರಬೇಡ. ನನ್ನ ನುಡಿಯನ್ನಾಲಿಸು ಆ ದುರುಳನು ಈಗ ವರದಾನದಿಂದ ದುರ್ಜಯನಾಗಿದ್ದಾನೆ ಸುರಾಸುರರಿಂದಲೂ ಅವನನ್ನು ಗೆಲ್ಲಲು ಶಕ್ಯವಿಲ್ಲ ಸಂಹರಿಸುವುದಂತೂ ಸಾಧ್ಯವೇ ಇಲ್ಲ (೧೪-೧೫) ಬಲೋದ್ಧತನಾದ ಆ ರಾಕ್ಷಸನು ಪುತ್ರನಾದ ಮೇಘನಾದನೊಡನೆ ಸೇರಿ ಬಂದಿದ್ದಾನೆ. ಉಗ್ರವಾಗಿ ಅವನು ಹೋರಾಡುವುದು ನಿಶ್ಚಯ ಅಸಮಸಾಹಸವನ್ನೆಸಗುವುದು ರಾವಣನ ಸ್ವಭಾವ ಇದು ನಮಗೆ ಗೊತ್ತಿರುವ ಸಂಗತಿ ದೇವೇಂದ್ರ, ನಾನು ಅವನೊಡನೆ ಯುದ್ಧಮಾಡಬೇಕೆಂದು ಹೇಳಿದೆಯಷ್ಟೆ. ಈಗ ನಾನು

*

ನಾಹತ್ವಾ ಸಮರೇ ಶತ್ರುಂ ವಿಷ್ಣುಃ ಪ್ರತಿನಿವರ್ತತೇ ।
ದುರ್ಲಭಶ್ಚೈವ ಕಾಮೋಽದ್ಯ ವರಗುಪ್ತಾದ್ಧಿ ರಾವಣಾತ್ ॥ ೧೮

ಪ್ರತಿಜಾನೇ ಚ ದೇವೇಂದ್ರ ತ್ವತ್ಸಮೀಪೇ ಶತಕ್ರತೋ ।
ಭವಿತಾಸ್ಮಿ ಯಥಾಸ್ಯಾಹಂ ರಕ್ಷಸೋ ಮೃತ್ಯುಕಾರಣಮ್ ॥ ೧೯

ಅಹಮೇವ ನಿಹಂತಾಸ್ಮಿ ರಾವಣಂ ಸಪುರಃಸರಮ್ ।
ದೇವತಾ ನಂದಯಿಷ್ಯಾಮಿ ಜ್ಞಾತ್ವಾ ಕಾಲಮುಪಾಗತಮ್ ॥ ೨೦

ಏತತ್ತೇ ಕಥಿತಂ ತತ್ತ್ವಂ ದೇವರಾಜ ಶಚೀಪತೇ ।
ಯುಧ್ಯಸ್ವ ವಿಗತತ್ರಾಸಃ ಸುರೈಃ ಸಾರ್ಧಂ ಮಹಾಬಲ ॥ ೨೧

ತತೋ ರುದ್ರಾಃ ಸಹಾದಿತ್ಯಾ ವಸವೋ ಮರುತೋಽಶ್ವಿನೌ ।
ಸಂನದ್ಧಾ ನಿರ್ಯಯುಸ್ತೂರ್ಣಂ ರಾಕ್ಷಸಾನಭಿತಃ ಪುರಾತ್ ॥ ೨೨

ಏತಸ್ಮಿನ್ನಂತರೇ ನಾದಃ ಶುಶ್ರುವೇ ರಜನೀಕ್ಷಯೇ ।
ತಸ್ಯ ರಾವಣಸೈನ್ಯಸ್ಯ ಪ್ರಯುದ್ಧಸ್ಯ ಸಮಂತತಃ ॥ ೨೩

---

ರಾವಣನೊಡನೆ ಹೋರಾಟಕ್ಕೆ ಇಳಿಯುವುದಿಲ್ಲ! ಈ ವಿಷ್ಣುವು ರಣರಂಗದಲ್ಲಿ ಶತ್ರುವನ್ನು ಕೊಲ್ಲದೆ ಹಿಂದಿರುಗಲಿಕ್ಕಿಲ್ಲ! ಈಗ ರಾವಣನು ವರಬಲದಿಂದ ಸುರಕ್ಷಿತನಾಗಿರುವ ಕಾರಣ, ಇಷ್ಟವು ಈಡೇರಲಾರದು (೧೬-೧೮) ಆದರೆ, ಸುರೇಶ್ವರ, ನಿನಗೆ ಮಾತುಕೊಡುವೆನು, ಕೇಳು ಆತನ ಮರಣಕ್ಕೆ ನಾನೇ ಕಾರಣನಾಗುವೆನು ರಾವಣನನ್ನು ಬಂಧುಬಳಗಸಹಿತವಾಗಿ ನಾನೇ ಕೊಲ್ಲುವೆನು! ಅವನನ್ನು ಕೊಂದು ದೇವತೆಗಳನ್ನು ಆಹ್ಲಾದಗೊಳಿಸುವೆನು ತಕ್ಕ ಕಾಲವು ಬಂದಾಗ ಈ ಕಾರ್ಯವು ನಡೆಯುವುದು ದೇವರಾಜ— ಶಚೀಪತಿ, ಸತ್ಯವನ್ನು ನಿನಗೆ ತಿಳಿಸಿದ್ದೇನೆ ಈಗ ಸಕಲದೇವತೆಗಳೊಡನೆ ಸಹಿತನಾಗಿ ನೀನು ನಿರ್ಭೀತಿಯಿಂದ ಯುದ್ಧಮಾಡು ನೀನು ಪರಾಕ್ರಮಿಯುಲ್ಲವೆ?" ಎಂದು ತಿಳಿಸಿದನು (೧೯-೨೧) ರಾಘವ, ಇತ್ತಲಾಗಿ ರುದ್ರ, ಆದಿತ್ಯ, ವಸು, ಮರುತ್ತು, ಅಶ್ವಿನೀದೇವತೆಗಳು—ಮೊದಲಾದವರು ಯುದ್ಧಸನ್ನದ್ಧರಾಗಿ ರಾಕ್ಷಸರನ್ನೆದುರಿಸುವುದಕ್ಕೋಸ್ಕರ ಅಮರಾವತಿಯಿಂದ ಬೇಗ ಬೇಗನೆ ಹೊರಟರು ರಾತ್ರಿ ಕಳೆಯಿತು ಅಷ್ಟರಲ್ಲಿ ಯುದ್ಧೋನ್ಮುಖರಾಗಿ

ತೇ ಪ್ರಯುದ್ಧಾ ಮಹಾವೀರ್ಯಾ ಹ್ಯನ್ಯೋನ್ಯಮಭಿವೀಕ್ಷ್ಯ ವೈ ।
ಸಂಗ್ರಾಮಮೇವಾಭಿಮುಖಾ ಹ್ಯಭ್ಯವರ್ತಂತ ಹೃಷ್ಟವತ್ ॥ ೨೪

ತತೋ ದೈವತಸೈನ್ಯಾನಾಂ ಸಂಕ್ಷೋಭಃ ಸಮಜಾಯತ ।
ತದಕ್ಷಯಂ ಮಹಾಸೈನ್ಯಂ ದೃಷ್ಟ್ವಾ ಸಮರಮೂರ್ಧನಿ ॥ ೨೫

ತತೋ ಯುದ್ಧಂ ಸಮಭವದ್ದೇವದಾನವರಕ್ಷಸಾಮ್ ।
ಘೋರಂ ತುಮುಲನಿರ್ಹ್ರಾದಂ ನಾನಾಪ್ರಹರಣೋದ್ಯತಮ್ ॥ ೨೬

ಏತಸ್ಮಿನ್ನಂತರೇ ಶೂರಾ ರಾಕ್ಷಸಾ ಘೋರದರ್ಶನಾಃ ।
ಯುದ್ಧಾರ್ಥಂ ಸಮವರ್ತಂತ ಸಚಿವಾ ರಾವಣಸ್ಯ ತೇ ॥ ೨೭

ಮಾರೀಚಶ್ಚ ಪ್ರಹಸ್ತಶ್ಚ ಮಹಾಪಾರ್ಶ್ವ ಮಹೋದರೌ ।
ಅಕಂಪನೋ ನಿಕುಂಭಶ್ಚ ಶುಕಃ ಸಾರಣ ಏವ ಚ ॥ ೨೮

ಸಂಹ್ಲಾದೋ ಧೂಮಕೇತುಶ್ಚ ಮಹಾದಂಷ್ಟ್ರೋ ಘಟೋದರಃ ।
ಜಂಬುಮಾಲೀ ಮಹಾಹ್ರಾದೋ ವಿರೂಪಾಕ್ಷಶ್ಚ ರಾಕ್ಷಸಃ ॥ ೨೯

ಸುಪ್ತಘ್ನೋ ಯಜ್ಞಕೋಪಶ್ಚ ದುರ್ಮುಖೋ ದೂಷಣಃ ಖರಃ ।
ತ್ರಿಶಿರಾಃ ಕರವೀರಾಕ್ಷಃ ಸೂರ್ಯಶತ್ರುಶ್ಚ ರಾಕ್ಷಸಃ ॥ ೩೦

---

ಬರುತ್ತಿದ್ದ ರಾವಣಸೇನೆಯ ಕೋಲಾಹಲವು ಸ್ಪಷ್ಟವಾಗಿ ಕೇಳಿಸಿತು ಉಭಯ ಪಕ್ಷದ ವೀರರೂ ಒಬ್ಬರನ್ನೊಬ್ಬರು ನೋಡಿದರು ಉತ್ಸಾಹದಿಂದ ಮುನ್ನುಗ್ಗಿದರು (೨೨-೨೪) ಅಪಾರವಾದ ರಾಕ್ಷಸಪಡೆಯನ್ನು ಕಂಡು ದೇವಸೈನ್ಯವು ಕ್ಷುಬ್ಧವಾಯಿತು ಒಡನೆಯೇ ಉಭಯ ಸೇನೆಗಳಿಗೂ ಕೈಕೈ ಮಿಲಾಯಿಸಿತು ಘೋರವಾದ ತುಮುಲಯುದ್ಧವು ಆರಂಭಿಸಿತು ವಿವಿಧಾಯುಧಗಳು ಝುಳಪಿಸಿದವು (೨೫-೨೬) ಆ ಸಮಯದಲ್ಲಿ ರಾವಣಸಚಿವರಾದ ಮಾರೀಚ, ಪ್ರಹಸ್ತ, ಮಹಾಪಾರ್ಶ್ವ, ಮಹೋದರ, ಅಕಂಪನ, ನಿಕುಂಭ, ಶುಕ, ಸಾರಣ, ಸಂಹ್ಲಾದ, ಧೂಮಕೇತು, ಮಹಾದಂಷ್ಟ್ರ, ಘಟೋದರ, ಜಂಬುಮಾಲಿ, ಮಹಾಹ್ರಾದ, ವಿರೂಪಾಕ್ಷ, ಸುಪ್ತಘ್ನ, ಯಜ್ಞಕೋಪ, ದುರ್ಮುಖ, ದೂಷಣ, ಖರ, ತ್ರಿಶಿರ, ಕರವೀರಾಕ್ಷ, ಸೂರ್ಯಶತ್ರು,

ಮಹಾಕಾಯೋಽತಿಕಾಯಶ್ಚ ದೇವಾಂತಕನರಾಂತಕೌ ।
ಏತೈಃ ಸರ್ವೈಃ ಪರಿವೃತೋ ಮಹಾವೀರ್ಯೋ ಮಹಾಬಲಃ ॥ ೩೧
ರಾವಣಸ್ಯಾರ್ಯಕಃ ಸೈನ್ಯಂ ಸುಮಾಲೀ ಪ್ರವಿವೇಶ ಹ ।
ಸದೈವತಗಣಾನ್ ಸರ್ವಾನ್ನಾನಾಪ್ರಹರಣೈಃ ಶಿತೈಃ ॥ ೩೨
ವ್ಯಧ್ವಂಸಯತ್ ಸುಸಂಕ್ರುದ್ಧೋ ವಾಯುರ್ಜಲಧರಾನಿವ ।
ತದ್ದೈವತಬಲಂ ರಾಮ ಹನ್ಯಮಾನಂ ನಿಶಾಚರೈಃ ॥ ೩೩
ಪ್ರಣುನ್ನಂ ಸರ್ವತೋ ದಿಗ್ಭ್ಯಃ ಸಿಂಹನುನ್ನಾ ಮೃಗಾ ಇವ ।
ಏತಸ್ಮಿನ್ನಂತರೇ ಶೂರೋ ವಸೂನಾಮಷ್ಟಮೋ ವಸುಃ ॥ ೩೪
ಸಾವಿತ್ರ ಇತಿ ವಿಖ್ಯಾತಃ ಪ್ರವಿವೇಶ ರಣಾಜಿರಮ್ ।
ಸೈನ್ಯೈಃ ಪರಿವೃತೋ ಹೃಷ್ಟೋ ನಾನಾಪ್ರಹರಣೋದ್ಯತೈಃ । ೩೫
ತ್ರಾಸಯನ್ ಶತ್ರುಸೈನ್ಯಾನಿ ಸಿಂಹಃ ಕ್ಷುದ್ರಮೃಗಾನಿವ ।
ತಥಾದಿತ್ಯೌ ಮಹಾವೀರ್ಯೌ ತ್ವಷ್ಟಾ ಪೂಷಾ ಚ ದಂಶಿತೌ ॥ ೩೬

---

ಮಹಾಕಾಯ, ಅತಿಕಾಯ, ದೇವಾಂತಕ, ನರಾಂತಕ—ಮೊದಲಾದ ಘೋರಾಕಾರದ ರಾಕ್ಷಸರು ಯುದ್ಧಾಪೇಕ್ಷಿಗಳಾಗಿ ರಣರಂಗದಲ್ಲಿ ನುಗ್ಗಿದರು (೨೭-೩೧) ಆ ನಿಶಾಚರರೊಡನೆ ಅದ್ಭುತಪರಾಕ್ರಮಿಯೂ ರಾವಣನ ಮಾತಾಮಹನೂ ಆದ ಸುಮಾಲಿಯು ಸಂಗ್ರಾಮಭೂಮಿಯನ್ನು ಪ್ರವೇಶಿಸಿದನು ಆತನು ಕ್ರೋಧಾವಿಷ್ಟನಾಗಿ ಹರಿತವಾದ ನಾನಾಪ್ರಹರಣಗಳನ್ನು ಪ್ರಯೋಗಿಸಿ, ಬಿರುಗಾಳಿಯು ಮೋಡಗಳನ್ನು ಚದರಿಸುವಂತೆ, ದೇವಗಣಗಳನ್ನು ಹೊಡೆದು ಬಡಿದು ಚದರಿಸಿ ವಿಧ್ವಂಸಗೊಳಿಸಿದನು (೩೨-೩೩) ಶ್ರೀರಾಮ, ಏನು ಹೇಳಲಿ! ಸಿಂಹಗಳ ಆಕ್ರಮಣಕ್ಕೆ ಸಿಕ್ಕಿದ ಜಿಂಕೆಗಳಂತೆ ದೇವತೆಗಳ ಗತಿಯಾಯಿತು ನಿಶಾಚರರ ಹೊಡೆತವನ್ನು ತಾಳಲಾರದೆ ಅವರು ದಿಕ್ಕು ದಿಕ್ಕಿಗೆ ಓಡಿಹೋದರು ಆ ಸಮಯದಲ್ಲಿ ಸಾವಿತ್ರನೆಂದು ವಿಖ್ಯಾತನೂ ಶೂರನೂ ಆದ ಅಷ್ಟವಸುಗಳಲ್ಲೊಬ್ಬನು ರಣರಂಗವನ್ನು ಪ್ರವೇಶಿಸಿದನು. ನಾನಾಯುಧಗಳನ್ನು ಹಿಡಿದ ಸೈನಿಕರೊಡನೆ ಅವನು ಉತ್ಸಾಹದಿಂದ ಬಂದನು (೩೪-೩೫) ಸಿಂಹವು ಕ್ಷುದ್ರಮೃಗಗಳನ್ನು ತಲ್ಲಣಗೊಳಿಸುವಂತೆ ರಾಕ್ಷಸಸೇನೆಯನ್ನು ತಲ್ಲಣಗೊಳಿಸಿದನು. ಹಾಗೆಯೇ ತ್ವಷ್ಟ,

ನಿರ್ಭಯೌ ಸಹ ಸೈನ್ಯೇನ ತದಾ ಪ್ರವಿಶತಾಂ ರಣೇ ।
ತತೋ ಯುದ್ಧಂ ಸಮಭವತ್ ಸುರಾಣಾಂ ಸಹ ರಾಕ್ಷಸೈಃ ॥ ೩೭

ಕ್ರುದ್ಧಾನಾಂ ರಕ್ಷಸಾಂ ಕೀರ್ತಿಂ ಸಮರೇಷ್ವನಿವರ್ತಿನಾಮ್ ।
ತತಸ್ತೇ ರಾಕ್ಷಸಾಃ ಸರ್ವೇ ವಿಬುಧಾನ್ ಸಮರೇ ಸ್ಥಿತಾನ್ ॥ ೩೮

ನಾನಾಪ್ರಹರಣೈರ್ಘೋರೈರ್ಜಘ್ನುಃ ಶತಸಹಸ್ರಶಃ ।
ದೇವಾಶ್ಚ ರಾಕ್ಷಸಾನ್ ಘೋರಾನ್ ಮಹಾಬಲಪರಾಕ್ರಮಾನ್ ॥

ಸಮರೇ ವಿಮಲೈಃ ಶಸ್ತ್ರೈರುಪನಿನ್ಯುರ್ಯಮಕ್ಷಯಮ್ ।
ಏತಸ್ಮಿನ್ನಂತರೇ ರಾಮ ಸುಮಾಲೀ ನಾಮ ರಾಕ್ಷಸಃ ॥ ೪೦

ನಾನಾಪ್ರಹರಣೈಃ ಕ್ರುದ್ಧಸ್ತತ್ಸೈನ್ಯಂ ಸೋಽಭ್ಯವರ್ತತ ।
ಸ ದೈವತಬಲಂ ಸರ್ವಂ ನಾನಾಪ್ರಹರಣೈಃ ಶಿತೈಃ ॥ ೪೧

ವ್ಯಧ್ವಂಸಯತ ಸಂಕ್ರುದ್ಧೋ ವಾಯುರ್ಜಲಧರಂ ಯಥಾ ।
ತೇ ಮಹಾಬಾಣವರ್ಷೈಶ್ಚ ಶೂಲಪ್ರಾಸೈಃ ಸುದಾರುಣೈಃ ॥ ೪೨

---

ಪೂಷ ಎಂಬ ಇಬ್ಬರು ಆದಿತ್ಯರು ಕವಚಧಾರಿಗಳಾಗಿ ತಮ್ಮ ಸೇನೆಗಳೊಡನೆ ನಿರ್ಭಯವಾಗಿ ರಣರಂಗಕ್ಕೆ ನುಗ್ಗಿ ಬಂದರು ದೇವತೆಗಳಿಗೂ ರಾಕ್ಷಸರಿಗೂ ಘನಘೋರಸಂಗ್ರಾಮವು ತೊಡಗಿತು (೩೬-೩೭) 'ರಾಕ್ಷಸರು ಸಮರ ಭೂಮಿಯಿಂದ ಹಿಂದೆಗೆಯತಕ್ಕವರಲ್ಲ' ಎಂಬ ಕೀರ್ತಿಘೋಷವನ್ನು ಕೇಳಿ ದೇವತೆಗಳು ಸಂಕ್ರುದ್ಧರಾಗಿ ಹೋರಾಡತೊಡಗಿದರು ಆ ನಿಶಾಚರರು ವಿವಿಧಾಯುಧಗಳಿಂದ ದೇವತೆಗಳನ್ನು ನೂರರಂತೆ-ಸಾವಿರದಂತೆ ಬಡಿದು ಬಡಿದು ಕೆಡವಿದರು ವಿಖ್ಯಾತಪೌರುಷರಾದ ಆ ನಿಶಾಚರರನ್ನು ದೇವತೆಗಳೂ ನಿಶಿತಶಸ್ತ್ರಗಳಿಂದ ಕಡಿದು ಕಡಿದು ಕೊಂದರು (೩೮-೪೦) ಶ್ರೀರಾಮ, ಅಷ್ಟುಹೊತ್ತಿಗೆ ರಾಕ್ಷಸನಾದ ಸುಮಾಲಿಯು ಕುಪಿತನಾಗಿ ಬಗೆಬಗೆಯ ನಿಶಿತಾಸ್ತ್ರಗಳನ್ನು ಪ್ರಯೋಗಿಸಿ, ಬಿರುಗಾಳಿಯು ಮೇಘವನ್ನು ಜರ್ಜರ ಗೊಳಿಸುವಂತೆ ದೇವಸೇನೆಯನ್ನು ವಿಧ್ವಂಸಿಸತೊಡಗಿದನು ಬಾಣವೃಷ್ಟಿ ಗಳಿಂದಲೂ ಅತ್ಯುಗ್ರಗಳಾದ ಶೂಲಪ್ರಾಸಗಳಿಂದಲೂ ಆಹತರಾದ ದೇವತೆಗಳು ಅವನನ್ನೆದುರಿಸಿ ನಿಲ್ಲಲಾರದೆಹೋದರು (೪೧-೪೨).

ಹನ್ಯಮಾನಾಃ ಸುರಾಃ ಸರ್ವೇ ನ ವ್ಯತಿಷ್ಠಂತ ಸಂಹತಾಃ ।
ತತೋ ವಿದ್ರಾವ್ಯಮಾಣೇಷು ದೈವತೇಷು ಸುಮಾಲಿನಾ ॥ ೪೩
ವಸೂನಾಮಷ್ಟಮಃ ಕ್ರುದ್ಧಃ ಸಾವಿತ್ರೋ ವೈ ವ್ಯವಸ್ಥಿತಃ ।
ಸಂವೃತಃ ಸ್ವೈರಥಾನೀಕೈಃ ಪ್ರಹರಂತಂ ನಿಶಾಚರಮ್ ॥ ೪೪
ವಿಕ್ರಮೇಣ ಮಹಾತೇಜಾ ವಾರಯಾಮಾಸ ಸಂಯುಗೇ ।
ತತಸ್ತಯೋರ್ಮಹಾಯುದ್ಧಮಭವದ್ರೋಮಹರ್ಷಣಮ್ ॥ ೪೫
ಸುಮಾಲಿನೋ ವಸೋಶ್ಚೈವ ಸಮರೇಷ್ವನಿವರ್ತಿನೋಃ ।
ತತಸ್ತಸ್ಯ ಮಹಾಬಾಣೈರ್ವಸುನಾ ಸುಮಹಾತ್ಮನಾ ॥ ೪೬
ನಿಹತಃ ಪನ್ನಗರಥಃ ಕ್ಷಣೇನ ವಿನಿಪಾತಿತಃ ।
ಹತ್ವಾ ತು ಸಂಯುಗೇ ತಸ್ಯ ರಥಂ ಬಾಣಶತೈಶ್ಚಿತಮ್ ॥ ೪೭
ಗದಾಂ ತಸ್ಯ ವಧಾರ್ಥಾಯ ವಸುರ್ಜಗ್ರಾಹ ಪಾಣಿನಾ ।
ತತಃ ಪ್ರಗೃಹ್ಯ ದೀಪ್ತಾಗ್ರಾಂ ಕಾಲದಂಡೋಪಮಾಂ ಗದಾಮ್ ॥
ತಾಂ ಮೂರ್ಧ್ನಿ ಪಾತಯಾಮಾಸ ಸಾವಿತ್ರೋ ವೈ ಸುಮಾಲಿನಃ ।
ಸಾ ತಸ್ಯೋಪರಿ ಚೋಲ್ಕಾಭಾ ಪತಂತೀವ ಬಭೌ ಗದಾ ॥ ೪೯

---

ಹೀಗೆ ಸುಮಾಲಿಯಿಂದ ಸುರಸೇನೆಯು ವಿಧ್ವಸ್ತವಾಗುತ್ತಿರಲು, ಅಷ್ಟಮವಸುವಾದ ಸಾವಿತ್ರನು ಸೇನಾಪರಿವೃತ್ತನಾಗಿ ನುಗ್ಗಿ ತನ್ನ ಪರಾಕ್ರಮದಿಂದ ಸುಮಾಲಿಯನ್ನು ಅಡ್ಡಗಟ್ಟಿದನು ತೇಜಸ್ವಿಯಾದ ಸಾವಿತ್ರನಿಗೂ ಸುಮಾಲಿಗೂ ರೋಮಾಂಚಕರವಾದ ಭೀಕರ ಕದನವು ನಡೆಯಿತು (೪೩-೪೫) ಇಬ್ಬರೂ ಹಿಮ್ಮೆಟ್ಟದೆ ಹೋರಾಡಿದರು ಮಹಾಧೀರನಾದ ಸಾವಿತ್ರನು ಘೋರಬಾಣಗಳಿಂದ ಸುಮಾಲಿಯ ಸರ್ಪರಥವನ್ನು ಒಂದು ಕ್ಷಣದಲ್ಲಿ ಭಗ್ನಗೊಳಿಸಿ ಉರುಳಿಸಿದನು ನೂರಾರು ಬಾಣಗಳಿಂದ ಚುಚ್ಚಲ್ಪಟ್ಟ ರಥರೂಪವಾದ ಆ ಮಹಾಸರ್ಪವು ಹತವಾಯಿತು (೪೬-೪೭) ಒಡನೆಯೇ ಸಾವಿತ್ರನು ಸುಮಾಲಿಯನ್ನು ವಧಿಸಬೇಕೆಂದು ಗದೆಯನ್ನು ಕೈಗೆತ್ತಿಕೊಂಡನು. ಕಾಲದಂಡದಂತೆ ಪ್ರಜ್ವಲಿಸುತ್ತಿದ್ದ ಆ ಮಹಾಗದೆಯನ್ನು ತೂಗಿ ಸುಮಾಲಿಯ ತಲೆಯಮೇಲೆ ಇಡಿದನು ದೇವೇಂದ್ರನ ವಜ್ರಾಯುಧವು ಗಿರಿಶಿಖರವನ್ನಪ್ಪಳಿಸುವಂತೆ, ಉಲ್ಕೆಯಂತಿದ್ದ ಆ ಗದೆಯು ಮೊರೆಯುತ್ತ ಸುಮಾಲಿಯ

ಇಂದ್ರಪ್ರಮುಕ್ತಾ ಗರ್ಜಂತೀ ಗಿರಾವಿವ ಮಹಾಶನಿಃ ।
ತಸ್ಯ ನೈವಾಸ್ಥಿ ನ ಶಿರೋ ನ ಮಾಂಸಂ ದದೃಶೇ ತದಾ ॥ ೫೦

ಗದಯಾ ಭಸ್ಮತಾಂ ನೀತಂ ನಿಹತಸ್ಯ ರಣಾಜಿರೇ ।
ತಂ ದೃಷ್ಟ್ವಾ ನಿಹತಂ ಸಂಖ್ಯೇ ರಾಕ್ಷಸಾಸ್ತೇ ಸಮಂತತಃ ॥ ೫೧

ವ್ಯದ್ರವನ್ ಸಹಿತಾಃ ಸರ್ವೇ ಕ್ರೋಶಮಾನಾಃ ಪರಸ್ಪರಮ್ ।
ವಿದ್ರಾವ್ಯಮಾಣಾ ವಸುನಾ ರಾಕ್ಷಸಾ ನಾವತಸ್ಥಿರೇ ॥ ೫೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತವಿಂಶಃ ಸರ್ಗಃ



ಶಿರಸ್ಸಿಗೆ ಬಡಿಯಿತು ಮರುಕ್ಷಣದಲ್ಲಿ ಆ ರಾಕ್ಷಸನ ಮೂಳೆಯಾಗಲಿ ತಲೆಯಾಗಲಿ ಮಾಂಸಪಿಂಡವಾಗಲಿ ಒಂದೂ ಕಾಣಿಸಲಿಲ್ಲ! (೪೮-೫೦). ಗದೆಯ ತೀಕ್ಷ್ಣತೆಯಿಂದ ಎಲ್ಲವೂ ಸುಟ್ಟು ಬೂದಿಯಾಯಿತು! ಸುಮಾಲಿಯು ಸತ್ತುದನ್ನು ನೋಡಿ ರಾಕ್ಷಸರೆಲ್ಲರೂ ಅರಚುತ್ತ ಒಬ್ಬರನ್ನೊಬ್ಬರು ಕೂಗಿ ಕರೆಯುತ್ತ ರಣಭೂಮಿಯಿಂದ ಓಡಲಾರಂಭಿಸಿದರು ವಸುಶ್ರೇಷ್ಠನಾದ ಸಾವಿತ್ರನು ಅಟ್ಟಿಸಿಕೊಂಡು ಹೋಗಲು, ಅವರು ನಿಲ್ಲಲಾರದೆ ಪಲಾಯನ ಮಾಡಿದರು (೫೧-೫೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತೇಳನೆಯ ಸರ್ಗ



## ಅಷ್ಟಾವಿಂಶಃ ಸರ್ಗಃ

### ಜಯಂತಾಪವಾಹನಮ್

ಸುಮಾಲಿನಂ ಹತಂ ದೃಷ್ಟ್ವಾ ವಸುನಾ ಭಸ್ಮಸಾತ್ಕೃತಮ್ ।
ಸ್ವಸೈನ್ಯಂ ವಿದ್ರುತಂ ಚಾಪಿ ಲಕ್ಷಯಿತ್ವಾರ್ದಿತಂ ಸುರೈಃ ॥ ೧

ತತಃ ಸ ಬಲವಾನ್ ಕ್ರುದ್ಧೋ ರಾವಣಸ್ಯ ಸುತಸ್ತದಾ ।
ನಿವರ್ತ್ಯ ರಾಕ್ಷಸಾನ್ ಸರ್ವಾನ್ ಮೇಘನಾದೋ ವ್ಯವಸ್ಥಿತಃ ॥ ೨

ಸುರಥೇನಾಗ್ನಿವರ್ಣೇನ ಕಾಮಗೇನ ಮಹಾರಥಃ ।
ಅಭಿದುದ್ರಾವ ಸೇನಾಂ ತಾಂ ವನಾನ್ಯಗ್ನಿರಿವ ಜ್ವಲನ್ ॥ ೩

ತತಃ ಪ್ರವಿಶತಸ್ತಸ್ಯ ವಿವಿಧಾಯುಧಧಾರಿಣಃ ।
ವಿದುದ್ರುವುರ್ದಿಶಃ ಸರ್ವಾ ದರ್ಶನಾದೇವ ದೇವತಾಃ ॥ ೪

## ಸರ್ಗ ೨೮

ಜಯಂತನಿಗೂ ಮೇಘನಾದನಿಗೂ ಘೋರವಾದ ಯುದ್ಧ ಪುಲೋಮನು ಜಯಂತನನ್ನೆತ್ತಿಕೊಂಡು ಸಮುದ್ರವನ್ನು ಪ್ರವೇಶಿಸುವುದು ಕ್ರುದ್ಧನಾದ ದೇವೇಂದ್ರನಿಗೂ ರಾವಣನಿಗೂ ಭೀಕರ ಸಂಗ್ರಾಮ

ಶ್ರೀರಾಮ, ಸಾವಿತ್ರನೆಂಬ ವಸುವು ಹೀಗೆ ಸುಮಾಲಿಯನ್ನು ಕೊಂದು ಭಸ್ಮೀಕರಿಸಿದುದನ್ನು ರಾವಣಸುತನಾದ ಮೇಘನಾದನು ನೋಡಿದನು ತನ್ನ ರಾಕ್ಷಸಸೇನೆಯು ಹೆದರಿ ದಿಕ್ಕುದಿಕ್ಕಿಗೆ ಓಡುವುದನ್ನೂ ಕಂಡನು ಒಡನೆಯೇ ಆ ಬಲಾಢ್ಯನು ಸಮಸ್ತ ರಾಕ್ಷಸರನ್ನೂ ಸಂತೈಸಿ ಹಿಂದಿರುಗಿಸಿ ತಾನು ಯುದ್ಧಸನ್ನದ್ಧನಾದನು (೧-೨) ಆ ಮಹಾರಥನು ಅಗ್ನಿಯಂತೆ ಹೊಳೆಯುತ್ತಿದ್ದ ಕಾಮಗಾಮಿಯಾದ ದಿವ್ಯರಥವನ್ನೇರಿ, ಕಾಳ್ಗಿಚ್ಚು ಕಾಡನ್ನುರುಬುವಂತೆ ದೇವಸೇನೆಯನ್ನು ಉರುಬುತ್ತ ನುಗ್ಗಿದನು ವಿವಿಧಾಯುಧಗಳಿಂದ ಸಜ್ಜಾಗಿ ನುಗ್ಗಿಬರುವ ಮೇಘನಾದನನ್ನು ಕಂಡೊಡನೆ ದೇವತೆಗಳು ದಿಕ್ಕುದಿಕ್ಕಿಗೆ

ನ ಬಭೂವ ತದಾ ಕಶ್ಚಿದ್ಯುಯುತ್ಸೋರಸ್ಯ ಸಂಮುಖೇ ।
ಸರ್ವಾನಾವಿಧ್ಯ ವಿತ್ರಸ್ತಾಂಸ್ತತಃ ಶಕ್ರೋಽಬ್ರವೀತ್ ಸುರಾನ್ ॥ ೫

ನ ಭೇತವ್ಯಂ ನ ಗಂತವ್ಯಂ ನಿವರ್ತಧ್ವಂ ರಣೇ ಸುರಾಃ ।
ಏಷ ಗಚ್ಛತಿ ಪುತ್ರೋ ಮೇ ಯುದ್ಧಾರ್ಥಮಪರಾಜಿತಃ ॥ ೬

ತತಃ ಶಕ್ರಸುತೋ ದೇವೋ ಜಯಂತ ಇತಿ ವಿಶ್ರುತಃ ।
ರಥೇನಾದ್ಭುತಕಲ್ಪೇನ ಸಂಗ್ರಾಮೇ ಸೋಽಭ್ಯವರ್ತತ ॥ ೭

ತತಸ್ತೇ ತ್ರಿದಶಾಃ ಸರ್ವೇ ಪರಿವಾರ್ಯ ಶಚೀಸುತಮ್ ।
ರಾವಣಸ್ಯ ಸುತಂ ಯುದ್ಧೇ ಸಮಾಸಾದ್ಯ ಪ್ರಜಘ್ನಿರೇ ॥ ೮

ತೇಷಾಂ ಯುದ್ಧಂ ಸಮಭವತ್ ಸದೃಶಂ ದೇವರಕ್ಷಸಾಮ್ ।
ಮಹೇಂದ್ರಸ್ಯ ಚ ಪುತ್ರಸ್ಯ ರಾಕ್ಷಸೇಂದ್ರಸುತಸ್ಯ ಚ ॥ ೯

ತತೋ ಮಾತಲಿಪುತ್ರೇ ತು ಗೋಮುಖೇ ರಾಕ್ಷಸಾತ್ಮಜಃ ।
ಸಾರಥೌ ಪಾತಯಾಮಾಸ ಶರಾನ್ ಕನಕಭೂಷಣಾನ್ ॥ ೧೦

---

ಓಡಿದರು (೩-೪) ಅತನನ್ನೆದುರಿಸುವ ವೀರನೊಬ್ಬನೂ ಕಾಣಲಿಲ್ಲ ಸರ್ವ ದೇವಗಣಗಳೂ ವಿತ್ರಸ್ತರಾಗಿ ಧಾವಿಸುವುದನ್ನು ನೋಡಿ, ದೇವೇಂದ್ರನು "ಎಲೈ ದೇವತೆಗಳೆ, ಹೆದರಬೇಡಿರಿ; ಓಡಿಹೋಗದಿರಿ, ಹಿಂದಿರುಗಿ ಬನ್ನಿರಿ. ಇದೋ, ಸೋಲನ್ನೇ ಅರಿಯದ ನನ್ನ ಪುತ್ರನು ಯುದ್ಧಕ್ಕೆ ನಿರ್ಗಮಿಸುತ್ತಿದ್ದಾನೆ" ಎಂದು ಕೂಗಿ ಹೇಳಿದನು (೫-೬) ಅಷ್ಟರಲ್ಲಿ ಇಂದ್ರಪುತ್ರನೂ ವಿಖ್ಯಾತನೂ ಆದ ಜಯಂತನು ಅದ್ಭುತವಾದ ಒಂದು ರಥವನ್ನೇರಿ ರಣಭೂಮಿಯನ್ನು ಪ್ರವೇಶಿಸಿದನು. ಆಗ ದೇವತೆಗಳು ಹಿಂದಿರುಗಿ ಬಂದು ಶಚೀಪುತ್ರನಾದ ಜಯಂತನೊಡನೆ ಸೇರಿ ಮೇಘನಾದನನ್ನೆದುರಿಸಿ ಹೋರಾಡಲಾರಂಭಿಸಿದರು (೭-೮) ರಾಘವ, ದೇವಾಸುರರಿಗೆ ಸರಿಯೆನಿಸಿದ ಭೀಕರಕಾಳಗವು ತೊಡಗಿತು. ಇತ್ತ ಮಹೇಂದ್ರಾತ್ಮಜನಾದ ಜಯಂತನಿಗೂ ರಾಕ್ಷಸೇಂದ್ರಾತ್ಮಜನಾದ ಮೇಘನಾದನಿಗೂ ಘೋರಯುದ್ಧವು ಸಮನಿಸಿತು ಮೇಘನಾದನು ಮಾತಲಿಪುತ್ರನೂ ಜಯಂತನ ಸಾರಥಿಯೂ ಆದ ಗೋಮುಖನಮೇಲೆ ಕನಕಪುಂಖಾಂಕಿತ ಶರಗಳನ್ನು ಬಿಗಿದನು ಜಯಂತನೂ

ಶಚೀಸುತಶ್ಚಾಪಿ ತಥಾ ಜಯಂತಸ್ತಸ್ಯ ಸಾರಥಿಮ್ ।
ತಂ ಚಾಪಿ ರಾವಣಿಃ ಕ್ರುದ್ಧಃ ಸಮಂತಾತ್ ಪ್ರತ್ಯವಿಧ್ಯತ ॥ ೧೧

ಸ ಹಿ ಕ್ರೋಧಸಮಾವಿಷ್ಟೋ ಬಲೀ ವಿಸ್ಫಾರಿತೇಕ್ಷಣಃ ।
ರಾವಣಿಃ ಶಕ್ರತನಯಂ ಶರವರ್ಷೈರವಾಕಿರತ್ ॥ ೧೨

ತತೋ ನಾನಾಪ್ರಹರಣಾನ್ ಶಿತಧಾರಾನ್ ಸಹಸ್ರಶಃ ।
ಪಾತಯಾಮಾಸ ಸಂಕ್ರುದ್ಧಃ ಸುರಸೈನ್ಯೇಷು ರಾವಣಿಃ ॥ ೧೩

ಶತಘ್ನೀಮುಸಲಪ್ರಾಸಗದಾಖಡ್ಗಪರಶ್ವಧಾನ್ ।
ಮಹಾಂತಿ ಗಿರಿಶೃಂಗಾಣಿ ಪಾತಯಾಮಾಸ ರಾವಣಿಃ ॥ ೧೪

ತತಃ ಪ್ರವ್ಯಥಿತಾ ಲೋಕಾಃ ಸಂಜಜ್ಞೇ ಚ ತಮೋ ಮಹತ್ ।
ತಸ್ಯ ರಾವಣಪುತ್ರಸ್ಯ ಶತ್ರುಸೈನ್ಯಾನಿ ನಿಘ್ನತಃ ॥ ೧೫

ತತಸ್ತದ್ದೈವತಬಲಂ ಸಮಂತಾತ್ತಂ ಶಚೀಸುತಮ್ ।
ಬಹುಪ್ರಕಾರಮಸ್ವಸ್ಥಮಭವಚ್ಛರಪೀಡಿತಮ್ ॥ ೧೬

ನಾಭ್ಯಜಾನಂತ ಚಾನ್ಯೋನ್ಯಂ ರಕ್ಷೋ ವಾ ದೇವತಾಥವಾ ।
ತತ್ರ ತತ್ರ ವಿಪರ್ಯಸ್ತಂ ಸಮಂತಾತ್ ಪರಿಧಾವತಿ ॥ ೧೭

---

ಕ್ರುದ್ಧನಾಗಿ ಮೇಘನಾದನ ಸಾರಥಿಯನ್ನು ಅಸ್ತ್ರಗಳಿಂದ ಬಾರಿಸಿದನು. ಆಗ ರಾವಣಿಯು ಕ್ರುದ್ಧನಾಗಿ ಜಯಂತನ ಸರ್ವಾಂಗಗಳಿಗೂ ಬಾಣಗಳಿಂದ ಹೊಡೆದನು (೯-೧೧) ಬಲಶಾಲಿಯಾದ ಮೇಘನಾದನ ಕಣ್ಣುಗಳು ಕೋಪದಿಂದ ಕೆದರಿ ಕಿಡಿಗರೆದವು ಆತನು ಜಯಂತನಮೇಲೆ ಶರಗಳ ಮಳೆಗರೆದು, ನಿಶಿತಾಗ್ರಗಳಾದ ವಿವಿಧಾಯುಧಗಳನ್ನು ಸುರಸೇನೆಯಮೇಲೆ ಸುರಿದನು ಶತಘ್ನಿ, ಮುಸಲ, ಪ್ರಾಸ, ಗದೆ, ಖಡ್ಗ, ಪರಶು, ಗಿರಿಶೃಂಗಾದಿಗಳನ್ನು ರಾವಣಿಯು ರೋಷದಿಂದ ತೂರಿದನು (೧೨-೧೪) ಆತನ ಮಾಯೆಯಿಂದ ಎಲ್ಲೆಲ್ಲಿಯೂ ಕತ್ತಲೆಯು ಪ್ರಸರಿಸಿತು ಸಕಲರೂ ವ್ಯಥಿತರಾದರು. ರಾವಣಿಯಾದರೋ ಒಂದೇ ಸಮನಾಗಿ ಶತ್ರುಸೇನೆಯನ್ನು ಮರ್ದಿಸುತ್ತಲೇ ಇದ್ದನು ಜಯಂತನ ಸುತ್ತಲೂ ನೆರೆದಿದ್ದ ದೇವಯೋಧರು ಶರಘಾತಗಳಿಂದ ಜರ್ಜರಿತರಾಗಿ ದಿಕ್ಕುಗಾಣದೆ ವಿಷಣ್ಣರಾದರು (೧೫-೧೬) ಅಂಧಕಾರದಲ್ಲಿ ದೇವತೆಗಳು ಯಾರು, ರಾಕ್ಷಸರು ಯಾರು—ಎಂಬುದೇ ತಿಳಿಯಲಿಲ್ಲ

ದೇವಾ ದೇವಾನ್ನಿಜಘ್ನುಸ್ತೇ ರಾಕ್ಷಸಾ ರಾಕ್ಷಸಾಂಸ್ತಥಾ ।
ಸಂಮೂಢಾಸ್ತಮಸಾಚ್ಛನ್ನಾ ವ್ಯದ್ರವನ್ನಪರೇ ತದಾ ॥ ೧೮

ಏತಸ್ಮಿನ್ನಂತರೇ ವೀರಃ ಪುಲೋಮಾ ನಾಮ ವೀರ್ಯವಾನ್ ।
ದೈತ್ಯೇಂದ್ರಸ್ತೇನ ಸಂಗೃಹ್ಯ ಶಚೀಪುತ್ರೋಽಪವಾಹಿತಃ ॥ ೧೯

ಸಂಗೃಹ್ಯ ತಂ ತು ದೌಹಿತ್ರಂ ಪ್ರವಿಷ್ಟಃ ಸಾಗರಂ ತದಾ ।
ಆರ್ಯಕಃ ಸ ಹಿ ತಸ್ಯಾಸೀತ್ ಪುಲೋಮಾ ಯೇನ ಸಾ ಶಚೀ ॥

ಜ್ಞಾತ್ವಾ ಪ್ರಣಾಶಂ ತು ತದಾ ಜಯಂತಸ್ಯಾಥ ದೇವತಾಃ ।
ಅಪ್ರಹೃಷ್ಟಾಸ್ತತಃ ಸರ್ವಾ ವ್ಯಥಿತಾಃ ಸಂಪ್ರದುದ್ರುವುಃ ॥ ೨೦

ರಾವಣಿಸ್ತ್ವಥ ಸಂಕ್ರುದ್ಧೋ ಬಲೈಃ ಪರಿವೃತಃ ಸ್ವಕೈಃ ।
ಅಭ್ಯಧಾವತ ದೇವಾಂಸ್ತಾನ್ ಮುಮೋಚ ಚ ಮಹಾಸ್ವನಮ್ ॥

ದೃಷ್ಟ್ವಾ ಪ್ರಣಾಶಂ ಪುತ್ರಸ್ಯ ದೈವತೇಷು ಚ ವಿದ್ರುತಮ್ ।
ಮಾತಲಿಂ ಚಾಹ ದೇವೇಶೋ ರಥಃ ಸಮುಪನೀಯತಾಮ್ ॥ ೨೨

---

ದೇವತೆಗಳು ದೇವತೆಗಳನ್ನೂ ರಾಕ್ಷಸರು ರಾಕ್ಷಸರನ್ನೂ ಪ್ರಹರಿಸಿದರು ಕೆಲವರು ದಿಕ್ಕುಗಾಣದೆ ಕಂಗೆಟ್ಟು ಓಡಿಹೋದರು (೧೭-೧೮) ಆ ಸಮಯದಲ್ಲಿ ಪುಲೋಮನೆಂಬ ದೈತ್ಯೇಂದ್ರನು ತನ್ನ ಮೊಮ್ಮಗನೂ ಶಚೀಪುತ್ರನೂ ಆದ ಜಯಂತನನ್ನು ಎತ್ತಿಕೊಂಡು ಹೋಗಿ, ಅವನನ್ನು ರಕ್ಷಿಸುವುದಕ್ಕಾಗಿ ಸಮುದ್ರವನ್ನು ಪ್ರವೇಶಿಸಿದನು ! ಪುಲೋಮನು ಜಯಂತನ ಮಾತಾಮಹ ಶಚಿಯು ಪುಲೋಮನ ಮಗಳಾದ್ದರಿಂದ ಪೌಲೋಮಿಯೆಂದು ಹೆಸರನ್ನು ಪಡೆದಿದ್ದಾಳೆ (೧೯-೨೦) ಜಯಂತನು ಎಲ್ಲಿಯೂ ಕಾಣದಿರಲು ದೇವತೆಗಳು ಖಿನ್ನರಾಗಿ ಭಯದಿಂದ ಚದರಿದರು ಆಗ ಮೇಘನಾದನು ತನ್ನ ಪಡೆಯಿಂದ ಪರಿವೃತನಾಗಿ, ಓಡುತ್ತಿದ್ದ ದೇವತೆಗಳನ್ನು ಬೆನ್ನಟ್ಟಿಹೋಗಿ ಬೊಬ್ಬಿರಿದನು (೨೧-೨೨) ಆಗ ದೇವೇಶ್ವರನು ತನ್ನ ಪುತ್ರನಾದ ಜಯಂತನು ಕಣ್ಮರೆಯಾದುದನ್ನೂ ದೇವತೆಗಳು ಪಲಾಯನಮಾಡುವುದನ್ನೂ ಕಂಡು, "ಮಾತಲಿ, ನನ್ನ ರಥವನ್ನು ತೆಗೆದುಕೊಂಡು ಬಾ" ಎಂದು ಸಾರಥಿಗೆ

ಸ ತು ದಿವ್ಯೋ ಮಹಾಭೀಮಃ ಸಜ್ಜ ಏವ ಮಹಾರಥಃ ।
ಉಪಸ್ಥಿತೋ ಮಾತಲಿನಾ ವಾಹ್ಯಮಾನೋ ಮಹಾಜವಃ ॥ ೨೪

ತತೋ ಮೇಘಾ ರಥೇ ತಸ್ಮಿಂಸ್ತಡಿದ್ವಂತೋ ಮಹಾಬಲಾಃ ।
ಅಗ್ರತೋ ವಾಯುಚಪಲಾ ನೇದುಃ ಪರಮನಿಃಸ್ವನಾಃ ॥ ೨೫

ನಾನಾವಾದ್ಯಾನಿ ವಾದ್ಯಂತ ಗಂಧರ್ವಾಶ್ಚ ಸಮಾಹಿತಾಃ ।
ನನೃತುಶ್ಚಾಪ್ಸರಃಸಂಘಾ ನಿರ್ಯಾತೇ ತ್ರಿದಶೇಶ್ವರೇ ॥ ೨೬

ರುದ್ರೈರ್ವಸುಭಿರಾದಿತ್ಯೈಃ ಸಾಧ್ಯೈಶ್ಚ ಸಮರುದ್ಗಣೈಃ ।
ವೃತೋ ನಾನಾಪ್ರಹರಣೈರ್ನಿರ್ಯಯೌ ತ್ರಿದಶಾಧಿಪಃ ॥ ೨೭

ನಿರ್ಗಚ್ಛತಸ್ತು ಶಕ್ರಸ್ಯ ಪರುಷಂ ಪವನೋ ವವೌ ।
ಭಾಸ್ಕರೋ ನಿಷ್ಪ್ರಭಶ್ಚಾಸೀನ್ಮಹೋಲ್ಕಾಶ್ಚ ಪ್ರಪೇದಿರೇ ॥ ೨೮

ಏತಸ್ಮಿನ್ನಂತರೇ ವೀರೋ ದಶಗ್ರೀವಃ ಪ್ರತಾಪವಾನ್ ।
ಆರುರೋಹ ರಥಂ ದಿವ್ಯಂ ನಿರ್ಮಿತಂ ವಿಶ್ವಕರ್ಮಣಾ ॥ ೨೯

---

ಆಜ್ಞಾಪಿಸಿದನು ಒಡನೆಯೇ ಮಾತಲಿಯು ದಿವ್ಯವೂ ಭೀಮಾಕಾರವೂ ಆದ ಮಹಾರಥವನ್ನು ಸಜ್ಜುಪಡಿಸಿ ಅದ್ಭುತವೇಗದಿಂದೋಡಿಸುತ್ತ ಇಂದ್ರನ ಬಳಿಗೆ ತಂದು ನಿಲ್ಲಿಸಿದನು (೨೩-೨೪) ಇಂದ್ರನು ರಥವನ್ನೇರಲು ಅದರೆದುರಿಗೆ ಬಿರುಗಾಳಿಯಿಂದ ದೂಡಲ್ಪಟ್ಟ ಕಾರ್ಮೋಡಗಳು ಮಿಂಚಿನೊಡನೆ ಮಿಂಚುತ್ತ ಮಹಾಧ್ವನಿಯಿಂದ ಗುಡುಗಿದವು ಗಂಧರ್ವರು ಬಂದು ನೆರೆದು ನಾನಾ ವಾದ್ಯಗಳನ್ನು ನುಡಿಸಿದರು ಅಪ್ಸರೆಯರು ನರ್ತಿಸಿದರು ಆ ತ್ರಿದಶೇಶ್ವರನು ವಸು, ರುದ್ರ, ಆದಿತ್ಯ, ಸಾಧ್ಯ, ಮರುತ್ತುಗಳು ಮುಂತಾದ ದೇವಗಣಗಳಿಂದ ಪರಿವೃತನಾಗಿ ಸಾಗಿದನು (೨೫-೨೭) ಈ ರೀತಿಯಲ್ಲಿ ದೇವೇಂದ್ರನು ಯುದ್ಧಾರ್ಥವಾಗಿ ಹೊರಡಲು ಗಾಳಿ ಕರ್ಕಶವಾಗಿ ಬೀಸಿತು ಸೂರ್ಯನು ನಿಷ್ಪ್ರಭನಾದನು ಉಲ್ಕೆಗಳು ಉದುರಿದವು ಇತ್ತ ಪ್ರತಾಪಿಯಾದ ದಶಗ್ರೀವನು ವಿಶ್ವಕರ್ಮ ನಿರ್ಮಿತವಾದ ದಿವ್ಯರಥವನ್ನೇರಿದನು. ಆ ರಥವು ಮೈನವಿರೇಳಿಸುವಂತೆ ಬೃಹದಾಕಾರವಾದ ಸರ್ಪಗಳಿಂದ ಪರಿವೇಷ್ಟಿತ

ಪನ್ನಗೈಸ್ತು ಮಹಾಭೋಗೈರ್ವೇಷ್ಟಿತಂ ರೋಮಹರ್ಷಣೈಃ ।
ತೇಷಾಂ ನಿಃಶ್ವಾಸವಾತೇನ ಪ್ರದೀಪ್ತಮಿವ ಸಂಯುಗೇ ॥ ೩೦

ದೈತ್ಯೈರ್ನಿಶಾಚರೈಶ್ಚೈವ ಸ ರಥಃ ಪರಿವಾರಿತಃ ।
ಸಮರಾಭಿಮುಖೋ ದೈತ್ಯೋ ಮಹೇಂದ್ರಂ ಸೋಽಭ್ಯವರ್ತತ ॥

ಪುತ್ರಂ ತಂ ವಾರಯಿತ್ವಾ ತು ಸ್ವಯಮೇವ ವ್ಯವಸ್ಥಿತಃ ।
ಸೋಽಪಿ ಯುದ್ಧಾದ್ವಿನಿಷ್ಕ್ರಮ್ಯ ರಾವಣಿಃ ಸಮುಪಾವಿಶತ್ ॥ ೩೨

ತತೋ ಯುದ್ಧಂ ಪ್ರವೃತ್ತಂ ತು ಸುರಾಣಾಂ ರಾಕ್ಷಸೈಃ ಸಹ ।
ಶಸ್ತ್ರಾಣಿ ವರ್ಷತಾಂ ಘೋರಂ ಮೇಘಾನಾಮಿವ ಸಂಯುಗೇ ॥ ೩೩

ಕುಂಭಕರ್ಣಸ್ತು ದುಷ್ಟಾತ್ಮಾ ನಾನಾಪ್ರಹರಣೋದ್ಯತಃ ।
ನಾಜ್ಞಾಯತ ತದಾ ಯುದ್ಧೇ ಸಹ ಕೇನಾಪ್ಯಯುಧ್ಯತ ॥ ೩೪

ದಂತೈರ್ಭುಜಾಭ್ಯಾಂ ಪದ್ಭ್ಯಾಂ ಚ ಶಕ್ತಿತೋಮರಸಾಯಕೈಃ ।
ಯೇನ ಕೇನೈವ ಸಂರಬ್ಧಸ್ತಾಡಯಾಮಾಸ ವೈ ಸುರಾನ್ ॥ ೩೫

---

ವಾಗಿತ್ತು ಆ ಸರ್ಪಗಳು ಭುಗಿಲ್ ಎಂದು ಭೋರ್ಗರೆಯುತ್ತಿರಲು, ಸ್ವರ್ಣಮಯವಾದ ರಾವಣನ ರಥವು ಬೆಂಕಿಯಿಂದ ಜ್ವಲಿಸುವುದೋ ಎಂಬಂತೆ ಕಾಣಿಸುತ್ತಿತ್ತು (೨೮-೩೦) ರಾವಣನು ದೈತ್ಯರಿಂದಲೂ ರಾಕ್ಷಸರಿಂದಲೂ ಪರಿವೃತನಾಗಿ ಮಹೇಂದ್ರನನ್ನೆದುರಿಸಲು ಸಮರಾಭಿಮುಖನಾಗಿ ನಡೆದನು. ಆತನು ತನ್ನ ಮಗನಾದ ಮೇಘನಾದನನ್ನು ತಡೆದು ತಾನೇ ದೇವತೆಗಳೊಡನೆ ಯುದ್ಧಕ್ಕೆ ನಿಂತನು ಮೇಘನಾದನು ತಂದೆಯ ಆಜ್ಞೆಯನ್ನು ಮನ್ನಿಸಿ ಯುದ್ಧಭೂಮಿಯಿಂದ ಹಿಮ್ಮೆಟ್ಟಿ ಸುಮ್ಮನಾದನು (೩೧-೩೨) ಶ್ರೀರಾಮ, ಅನಂತರ ದೇವಾಸುರರಿಗೆ ಭೀಕರವಾದ ಕಾಳಗವು ನಡೆಯಿತು ಮೇಘಗಳು ವೃಷ್ಟಿಧಾರೆಗಳನ್ನು ಸುರಿಸುವಂತೆ ಅವರು ಶಸ್ತ್ರಗಳನ್ನು ತೂರಾಡಿದರು. ದುರುಳನಾದ ಕುಂಭಕರ್ಣನು ನಾನಾ ಪ್ರಹರಣಗಳನ್ನು ಹಿಡಿದು ಹೋರಾಡುತ್ತಿದ್ದನು ಗುರಿಯಾಗಿ ಯಾರನ್ನೆದುರಿಸಿ ಅವನು ಹೋರಾಡುತ್ತಿದ್ದನೋ ತಿಳಿಯಲಿಲ್ಲ! ಅಂತೂ ಎದುರಿಗೆ ಸಿಕ್ಕಿದವರೊಡನೆ ಕಾದಾಡುತ್ತಿದ್ದನು! (೩೩-೩೪) ಯಾವ ಆಯುಧದಿಂದ ಯೋಧಿಸಬೇಕೆಂಬ ವಿಚಾರವನ್ನೇ ಕುಂಭಕರ್ಣನು ಮಾಡುತ್ತಿರಲಿಲ್ಲ ಒಮ್ಮೆ ಶಕ್ತಿತೋಮರಗಳಿಂದ ದೇವತೆ

ತತೋ ರುದ್ರೈರ್ಮಹಾಘೋರೈಃ ಸಂಗಮ್ಯಾಥ ನಿಶಾಚರಃ ।
ಪ್ರಯುದ್ಧಸ್ತೈಶ್ಚ ಸಂಗ್ರಾಮೇ ಕ್ಷತಃ ಶಸ್ತ್ರೈರ್ನಿರಂತರಮ್ ॥ ೩೬

ಬಭೌ ಶಸ್ತ್ರಾಚಿತತನುಃ ಕುಂಭಕರ್ಣಃ ಕ್ಷರನ್ನಸೃಕ್ ।
ವಿದ್ಯುತ್ಸ್ತನಿತನಿರ್ಘೋಷೋ ಧಾರಾವಾನಿವ ತೋಯದಃ ॥ ೩೭

ತತಸ್ತದ್ರಾಕ್ಷಸಂ ಸೈನ್ಯಂ ಪ್ರಯುದ್ಧಂ ಸಮರುದ್ಗಣೈಃ ।
ರಣೇ ವಿದ್ರಾವಿತಂ ಸರ್ವಂ ನಾನಾಪ್ರಹರಣೈಃ ಶಿತೈಃ ॥ ೩೮

ಕೇಚಿದ್ವಿನಿಹತಾಃ ಕೃತ್ತಾಶ್ಚೇಷ್ಟಂತಿ ಸ್ಮ ಮಹೀತಲೇ ।
ವಾಹನೇಷ್ವವಸಕ್ತಾಶ್ಚ ಸ್ಥಿತಾ ಏವಾಪರೇ ರಣೇ ॥ ೩೯

ರಥಾನ್ನಾಗಾನ್ ಖರಾನುಷ್ಟ್ರಾನ್ ಪನ್ನಗಾಂಸ್ತುರಗಾನ್ ರಣೇ ।
ಶಿಂಶುಮಾರಾನ್ ವರಾಹಾಂಶ್ಚ ಪಿಶಾಚವದನಾಂಸ್ತಥಾ ॥ ೪೦

---

ಗಳನ್ನು ಸದೆಯುವನು ಒಮ್ಮೆ ಶರಗಳಿಂದ ಬಿಗಿಯುವನು. ರೋಷಾವಿಷ್ಟನಾಗಿ ಒಮ್ಮೆ ಹಲ್ಲುಗಳಿಂದ ಕಚ್ಚಿ ಬಾಹುಗಳಿಂದ ತಿವಿದು ಕೈಗಳಿಂದ ಗುದ್ದಿ ಕಾಲುಗಳಿಂದ ಒದೆಯುವನು! (೩೫) ಸ್ವಲ್ಪ ಹೊತ್ತಿನಲ್ಲಿ ಕುಂಭಕರ್ಣನಿಗೂ ಮಹಾಘೋರರಾದ ರುದ್ರಗಣಗಳಿಗೂ ಹೋರಾಟ ನಡೆಯಿತು. ಅತ್ಯುಗ್ರವಾದ ಆ ಹೋರಾಟದಲ್ಲಿ ಆತನ ಸರ್ವಾಂಗಗಳೂ ಗಾಯಗೊಂಡವು. ದೇಹದಲ್ಲಿ ಶಸ್ತ್ರಗಳು ನೆಟ್ಟು ರಕ್ತವು ಚಿಮ್ಮುತ್ತಿರಲು ಘೋರವಾಗಿ ಗರ್ಜಿಸುತ್ತಿದ್ದ ಕುಂಭಕರ್ಣನು, ಮಿಂಚುಗಳಿಂದ ಸಹಿತವಾಗಿ ಧಾರಾಕಾರದ ಮಳೆಯನ್ನು ಸುರಿಸುತ್ತ ಗುಡುಗುವ ಕಾರ್ಮೋಡದಂತೆ ಗೋಚರಿಸಿದನು! (೩೬–೩೭) ಇತ್ತ ಮರುದಾದಿ ದೇವಗಣಗಳೊಡನೆ ಕಾದಾಡುತ್ತಿದ್ದ ರಾಕ್ಷಸಸೇನೆಯು ಸೋತು ಓಡಲಾರಂಭಿಸಿತು ವಿವಿಧಾಯುಧಗಳಿಂದ ರಾಕ್ಷಸರು ಹತರಾದರು ಕೆಲವರು ವಿಚ್ಛಿನ್ನದೇಹರಾಗಿ ನೆಲದಮೇಲೆ ಹೊರಳಾಡುತ್ತಿದ್ದರು. ಕೆಲವರು ಕತ್ತರಿಸಲ್ಪಟ್ಟರೂ ತಮ್ಮ ವಾಹನಗಳಲ್ಲಿಯೇ ಸಿಲುಕಿಕೊಂಡಿದ್ದರು (೩೮–೩೯). ಆ ರಾಕ್ಷಸರು ಹತರಾದರೂ ತಮ್ಮ ವಾಹನಗಳಾದ ರಥ, ಗಜ, ಖರ, ಉಷ್ಟ್ರ, ಪನ್ನಗ, ತುರಗ, ಮೊಸಳೆ, ವರಾಹ, ಪಿಶಾಚ ಮುಖಗಳಾದ ಇನ್ನಿತರ ಪ್ರಾಣಿಗಳು—ಇವುಗಳನ್ನು ಎರಡು ತೋಳುಗಳಿಂದಲೂ ಹಿಡಿದು

ತಾನ್ ಸಮಾಲಿಂಗ್ಯ ಬಾಹುಭ್ಯಾಂ ವಿಷ್ಟಬ್ಧಾಃ ಕೇಚಿದುಚ್ಛ್ರಿತಾಃ ।
ದೇವೈಸ್ತು ಶಸ್ತ್ರಸಂಭಿನ್ನಾ ಮಮ್ರಿರೇ ಚ ನಿಶಾಚರಾಃ ॥ ೪೧

ಚಿತ್ರಕರ್ಮ ಇವಾಭಾತಿ ಸ ತೇಷಾಂ ರಣಸಂಪ್ಲವಃ ।
ನಿಹತಾನಾಂ ಪ್ರಮತ್ತಾನಾಂ ರಾಕ್ಷಸಾನಾಂ ಮಹೀತಲೇ ॥ ೪೨

ಶೋಣಿತೋದಕನಿಷ್ಯಂದಕಂಕಗೃಧ್ರಸಮಾಕುಲಾ ।
ಪ್ರವೃತ್ತಾ ಸಂಯುಗಮುಖೇ ಶಸ್ತ್ರಗ್ರಾಹವತೀ ನದೀ ॥ ೪೩

ಏತಸ್ಮಿನ್ನಂತರೇ ಕ್ರುದ್ಧೋ ದಶಗ್ರೀವಃ ಪ್ರತಾಪವಾನ್ ।
ನಿರೀಕ್ಷ್ಯ ತದ್ಬಲಂ ಕೃತ್ಸ್ನಂ ದೈವತೈರ್ವಿನಿಪಾತಿತಮ್ ॥ ೪೪

ಸ ತಂ ಪ್ರತಿ ವಿಗಾಹ್ಯಾಶು ಪ್ರವೃದ್ಧಂ ಸೈನ್ಯಸಾಗರಮ್ ।
ತ್ರಿದಶಾನ್ ಸಮರೇ ನಿಘ್ನನ್ ಶಕ್ರಮೇವಾಭ್ಯವರ್ತತ ॥ ೪೫

ಆಗಾಚ್ಛಕ್ರೋ ಮಹಚ್ಚಾಪಂ ವಿಸ್ಫಾರ್ಯ ಸುಮಹಾಸ್ವನಮ್ ।
ಯಸ್ಯ ವಿಸ್ಫಾರಘೋಷೇಣ ಸ್ವನಂತಿ ಸ್ಮ ದಿಶೋ ದಶ ॥ ೪೬

ತದ್ವಿಕೃಷ್ಯ ಮಹಾಚಾಪಮಿಂದ್ರೋ ರಾವಣಮೂರ್ಧನಿ ।
ನಿಪಾತಯಾಮಾಸ ಶರಾನ್ ಪಾವಕಾದಿತ್ಯವರ್ಚಸಃ ॥ ೪೭

---

ಕೊಂಡು ಚಲಿಸದೆ ಕುಳಿತಿದ್ದರು ಕೆಲವರು ವಾಹನಗಳಲ್ಲಿ ತೂಗಾಡುತ್ತಿದ್ದರು. ಈ ರೀತಿಯಲ್ಲಿ ದೇವತೆಗಳಿಂದ ಶಸ್ತ್ರಸಂಭಿನ್ನರಾಗಿ ನಿಶಾಚರರು ಹತರಾದರು (೪೦-೪೧) ಆ ರಣರಂಗವು ಮಾಯಾನಿರ್ಮಿವಾದ ಚಿತ್ರಶಾಲೆಯಂತೆ ಆಶ್ಚರ್ಯಕರವಾಗಿ ಪರಿಣಮಿಸಿತು ನಿರ್ಭಿನ್ನಗಾತ್ರರಾಗಿ ಹತರಾದ ರಾಕ್ಷಸರ ರಕ್ತವು ಹೊಳೆಯಂತೆ ಹರಿಯಿತು ಹದ್ದುಗಳು ಮುಸುಕಿದವು ಶಸ್ತ್ರಾಸ್ತ್ರಗಳು ಆ ನೆತ್ತರಿನ ಹೊಳೆಯಲ್ಲಿ ಮೊಸಳೆಗಳಂತೆ ಗೋಚರಿಸಿದವು (೪೨-೪೩) ಹೀಗೆ ದೇವತೆಗಳಿಂದ ತನ್ನ ಸೇನೆಯು ವಿಧ್ವಸ್ತವಾದುದನ್ನು ಕಂಡು ಪ್ರತಾಪಶಾಲಿಯಾದ ದಶಗ್ರೀವನು ರೋಷಾವಿಷ್ಟನಾಗಿ ಸಾಗರೋಪಮವಾದ ದೇವಸೇನೆಯಲ್ಲಿ ನುಗ್ಗಿ ಎದುರಾಳಿಗಳನ್ನು ವಿಧ್ವಂಸಗೊಳಿಸುತ್ತ ನೇರವಾಗಿ ದೇವೇಂದ್ರನ ಕಡೆಗೆ ಧಾವಿಸಿದನು (೪೪-೪೫) ಆಗ ಇಂದ್ರನು ತನ್ನ ಮಹಾಧನುಸ್ಸನ್ನು ಜೇಗೈಯುತ್ತ ದಶದಿಕ್ಕುಗಳನ್ನೂ ಮೊಳಗಿಸುತ್ತ ರಾವಣನನ್ನೆದುರಿಸಿ, ಸೂರ್ಯಾಗ್ನಿಗಳಂತೆ ಹೊಳೆಹೊಳೆಯುವ ಕಣೆಗಳಿಂದ

ತಥೈವ ಚ ಮಹಾಬಾಹುರ್ದಶಗ್ರೀವೋ ವ್ಯವಸ್ಥಿತಃ ।
ಶಕ್ರಂ ಕಾರ್ಮುಕವಿಭ್ರಷ್ಟೈಃ ಶರವರ್ಷೈರವಾಕಿರತ್ ॥ ೪೮

ಪ್ರಯುಧ್ಯತೋರಥ ತಯೋರ್ಬಾಣವರ್ಷೈಃ ಸಮಂತತಃ ।
ನ ಜ್ಞಾಯತೇ ತದಾ ಕಿಂಚಿತ್ ಸರ್ವಂ ಹಿ ತಮಸಾವೃತಮ್ ॥ ೪೯

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟಾವಿಂಶಃ ಸರ್ಗಃ



ಆತನ ಶಿರಸ್ಸಿಗೆ ಗುರಿಯಿಟ್ಟು ಬಿಗಿದನು (೪೬-೪೭) ಮಹಾಬಾಹುವಾದ ರಾವಣನು ಇಂದ್ರನನ್ನೆದುರಿಸಿ ದೃಢವಾಗಿ ನಿಂತು, ಕಾರ್ಮುಕವನ್ನೆಳೆದೆಳೆದು ಶರಗಳ ಮಳೆಗರೆದನು ಘನಘೋರವಾದ ಸಂಗ್ರಾಮವು ಅವರೀರ್ವರಿಗೂ ತೊಡಗಲು, ಯಾರು-ಎಲ್ಲಿ-ಏನು ಎಂಬುದೊಂದೂ ತಿಳಿಯದಾಯಿತು ಶ್ರೀರಾಮ, ಎಲ್ಲೆಲ್ಲಿಯೂ ಕತ್ತಲೆಯು ಆವರಿಸಿತು (೪೮-೪೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತೆಂಟನೆಯ ಸರ್ಗ



## ಏಕೋನತ್ರಿಂಶಃ ಸರ್ಗಃ

### ವಾಸವಗ್ರಹಣಮ್

ತತಸ್ತಮಸಿ ಸಂಜಾತೇ ಸರ್ವೇ ತೇ ದೇವರಾಕ್ಷಸಾಃ ।
ಅಯುಧ್ಯಂತ ಬಲೋನ್ಮತ್ತಾಃ ಸೂದಯಂತಃ ಪರಸ್ಪರಮ್ ॥ ೧

ತತಸ್ತು ದೇವಸೈನ್ಯೇನ ರಾಕ್ಷಸಾನಾಂ ಬೃಹದ್ಬಲಮ್ ।
ದಶಾಂಶಂ ಸ್ಥಾಪಿತಂ ಯುದ್ಧೇ ಶೇಷಂ ನೀತಂ ಯಮಕ್ಷಯಮ್ ॥

ತಸ್ಮಿಂಸ್ತು ತಾಮಸೇ ಯುದ್ಧೇ ಸರ್ವೇ ತೇ ದೇವರಾಕ್ಷಸಾಃ ।
ಅನ್ಯೋನ್ಯಂ ನಾಭ್ಯಜಾನಂತ ಯುಧ್ಯಮಾನಾಃ ಪರಸ್ಪರಮ್ ॥ ೩

ಇಂದ್ರಶ್ಚ ರಾವಣಶ್ಚೈವ ರಾವಣಿಶ್ಚ ಮಹಾಬಲಃ ।
ತಸ್ಮಿಂಸ್ತಮೋಜಾಲವೃತೇ ಮೋಹಮೀಯುರ್ನ ತೇ ತ್ರಯಃ ॥ ೪

## ಸರ್ಗ ೨೯

ರಾವಣನು ಇಂದ್ರಸೇನಾಮಧ್ಯದಲ್ಲಿ ಸಿಕ್ಕಿಕೊಳ್ಳುವುದು ತಂದೆಯ
ದುರವಸ್ಥೆಯನ್ನು ತಿಳಿದು ಮೇಘನಾದನು ಹೋಗಿ ಇಂದ್ರನನ್ನು
ಸೆರೆಹಿಡಿದು ಲಂಕೆಗೆ ಕರೆದೊಯ್ಯುವುದು

ಶ್ರೀರಾಮ, ಹೀಗೆ ಶಸ್ತ್ರಾಸ್ತ್ರಗಳ ಆಚ್ಛಾದನದಿಂದ ಕತ್ತಲು ಕವಿಯಲು, ಬಲೋನ್ಮತ್ತರಾದ ದೇವರಾಕ್ಷಸರು ಅನ್ಯೋನ್ಯವಾಗಿ ಕಾದಾಡಿದರು. ರಾಕ್ಷಸರ ಬೃಹತ್ಸೇನೆಯಲ್ಲಿ ಹತ್ತರಲ್ಲೊಂದಂಶ ಉಳಿಯಿತು. ಉಳಿದುದನ್ನು ದೇವತೆಗಳು ಯಮಮಂದಿರಕ್ಕೆ ದಬ್ಬಿದರು (೧-೨) ಆ ತಮೋಯುದ್ಧದಲ್ಲಿ ದೇವರಾಕ್ಷಸರು ಒಬ್ಬರನ್ನೊಬ್ಬರು ಸರಿಯಾಗಿ ಗುರುತಿಸಲಾರದೆಯೇ ಕಾದಾಡಿದರು ಆ ಘೋರಯುದ್ಧದಲ್ಲಿ ದೇವೇಂದ್ರ, ರಾವಣ, ಮೇಘನಾದ– ಈ ಮೂವರು ಮಾತ್ರವೇ ದಿಗ್ಭ್ರಾಂತರಾಗದೆ ಇದ್ದವರು (೩-೪).

*

ಸ ತು ದೃಷ್ಟ್ವಾ ಬಲಂ ಸರ್ವಂ ನಿಹತಂ ರಾವಣಿಃ ಕ್ಷಣಾತ್ ।
ಕ್ರೋಧಮಭ್ಯಾಗಮತ್ತೀವ್ರಂ ಮಹಾನಾದಂ ಚ ಮುಕ್ತವಾನ್ ॥ ೫

ಕ್ರೋಧಾತ್ ಸೂತಂ ಚ ದುರ್ಧರ್ಷಃ ಸ್ಯಂದನಸ್ಥಮುವಾಚ ಹ ।
ಪರಸೈನ್ಯಸ್ಯ ಮಧ್ಯೇನ ಯಾವದಂತೋ ನಯಸ್ವ ಮಾಮ್ ॥ ೬

ಅದ್ಯೈತಾಂಸ್ತ್ರಿದಶಾನ್ ಸರ್ವಾನ್ ವಿಕ್ರಮೈಃ ಸಮರೇ ಸ್ವಯಮ್ ।
ನಾನಾಶಸ್ತ್ರೈರ್ಮಹಾಘೋರೈರ್ನಯಾಮಿ ಯಮಸಾದನಮ್ ॥ ೭

ಅಹಮಿಂದ್ರಂ ವಧಿಷ್ಯಾಮಿ ಧನದಂ ವರುಣಂ ಯಮಮ್ ।
ತ್ರಿದಶಾನ್ ವಿನಿಹತ್ಯಾಥ ಸ್ವಯಂ ಸ್ಥಾಸ್ಯಾಮ್ಯಥೋಪರಿ ॥ ೮

ವಿಷಾದೋ ನ ಚ ಕರ್ತವ್ಯಃ ಶೀಘ್ರಂ ವಾಹಯ ಮೇ ರಥಮ್ ।
ದ್ವಿಃ ಖಲು ತ್ವಾಂ ಬ್ರವೀಮ್ಯದ್ಯ ಯಾವದಂತೋ ನಯಸ್ವ ಮಾಮ್

ಅಯಂ ಸ ನಂದನೋದ್ದೇಶೋ ಯತ್ರ ವರ್ತಾಮಹೇ ವಯಮ್ ।
ನಯ ಮಾಮದ್ಯ ತತ್ರ ತ್ವಮುದಯೋ ಯತ್ರ ಪರ್ವತಃ ॥ ೧೦

---

ರಾವಣನಿಗೆ ತನ್ನ ಸೇನೆಯು ಹತವಾದುದನ್ನು ಕಂಡು ತೀವ್ರವಾದ ರೋಷ ಉಕ್ಕಿತು ಅವನು ಅತಿ ಭೀಕರವಾಗಿ ಒಮ್ಮೆ ಬೊಬ್ಬಿರಿದು ಸಾರಥಿಯನ್ನು ಕುರಿತು "ಸಾರಥಿ, ಶತ್ರುಸೇನಾಮಧ್ಯದಲ್ಲಿ ಈ ಸೇನೆಯ ಅಂತ್ಯದವರೆಗೂ ನನ್ನ ರಥವನ್ನು ದೌಡಾಯಿಸು! (೫-೬) ನನ್ನ ಪರಾಕ್ರಮವನ್ನು ಮೆರೆಸಿ ಭೀಕರಾಸ್ತ್ರಗಳಿಂದ ಈ ದೇವತೆಗಳನ್ನು ಈ ದಿನವೇ ಯಮ ಮಂದಿರಕ್ಕೆ ಸಾಗಿಸುವೆನು ಇಂದ್ರನನ್ನು ಮೊದಲು ಕೊಲ್ಲುವೆನು! ಅನಂತರ ಕುಬೇರ ವರುಣರನ್ನು ಕೊಂದು ಯಮನನ್ನೂ ವಧಿಸುವೆನು! ದೇವತೆಗಳೆಲ್ಲರನ್ನೂ ಸಂಹರಿಸಿ ಇವರೆಲ್ಲರನ್ನೂ ಮೆಟ್ಟಿ ನಿಲ್ಲುವೆನು! (೭-೮) ಸಾರಥಿ, ಚಿಂತಿಸಬೇಡ, ನಡೆಸು ರಥವನ್ನು ಮತ್ತೊಂದು ಸಲ ಹೇಳುತ್ತಿದ್ದೇನೆ, ನಡೆಸು ರಥವನ್ನು! ದೇವಸೇನೆಯ ಆಚೆಯ ಪಾರದವರೆಗೂ ರಥವು ನುಗ್ಗಲಿ ಇದು ನಂದನವನೋದ್ದೇಶ—ದೇವಸೇನೆಯ ಈ ಕಡೆಯ ಪಾರ್ಶ್ವ ಆಚೆಯ ಪಾರ್ಶ್ವಕ್ಕೆ—ಉದಯಪರ್ವತದವರೆಗೂ ನನ್ನನ್ನು ರಥದಲ್ಲಿ ಸಾಗಿಸು!"

ತಸ್ಯ ತದ್ವಚನಂ ಶ್ರುತ್ವಾ ತುರಂಗಾನ್ ಸ ಮನೋಜವಾನ್ ।
ಆದಿದೇಶಾಥ ಶತ್ರೂಣಾಂ ಮಧ್ಯೇನೈವ ಚ ಸಾರಥಿಃ ॥ ೧೧

ತಸ್ಯ ತಂ ನಿಶ್ಚಯಂ ಜ್ಞಾತ್ವಾ ಶಕ್ರೋ ದೇವೇಶ್ವರಸ್ತದಾ ।
ರಥಸ್ಥಃ ಸಮರಸ್ಥಾಂಸ್ತಾನ್ ದೇವಾನ್ ವಾಕ್ಯಮಥಾಬ್ರವೀತ್ ॥ ೧೨

ಸುರಾಃ ಶೃಣುತ ಮದ್ವಾಕ್ಯಂ ಯತ್ತಾವನ್ಮಮ ರೋಚತೇ ।
ಜೀವನ್ನೇವ ದಶಗ್ರೀವಃ ಸಾಧು ರಕ್ಷೋ ನಿಗೃಹ್ಯತಾಮ್ ॥ ೧೩

ಏಷ ಹ್ಯತಿಬಲಃ ಸೈನ್ಯೇ ರಥೇನ ಪವನೌಜಸಾ ।
ಗಮಿಷ್ಯತಿ ಪ್ರವೃದ್ಧೋರ್ಮಿಃ ಸಮುದ್ರ ಇವ ಪರ್ವಣಿ ॥ ೧೪

ನ ಹ್ಯೇಷ ಹಂತುಂ ಶಕ್ಯೋಽದ್ಯ ವರದಾನಾತ್ ಸುನಿರ್ಭಯಃ ।
ತದ್ಗ್ರಹೀಷ್ಯಾಮಹೇ ರಕ್ಷೋ ಯತ್ತಾ ಭವತ ಸಂಯುಗೇ ॥ ೧೫

ಯಥಾ ಬಲೌ ನಿರುದ್ಧೇ ಚ ತ್ರೈಲೋಕ್ಯಂ ಭುಜ್ಯತೇ ಮಯಾ ।
ಏವಮೇತಸ್ಯ ಪಾಪಸ್ಯ ನಿರೋಧೋ ಮಮ ರೋಚತೇ ॥ ೧೬

---

ಎಂದು ಆಜ್ಞಾಪಿಸಿದನು (೯-೧೦) ರಾವಣನ ಆಜ್ಞೆಯನ್ನು ಕೇಳಿ ಸಾರಥಿಯು ಮನೋವೇಗದಿಂದ ಧಾವಿಸುವ ರಥಾಶ್ವಗಳನ್ನು ಶತ್ರುಗಳ ಮಧ್ಯದಲ್ಲಿ ನುಗ್ಗಿಸಿದನು ರಾಕ್ಷಸೇಶ್ವರನ ನಿಶ್ಚಯವು ದೇವೇಶ್ವರನಿಗೆ ತಿಳಿಯಿತು ರಥದಲ್ಲಿ ಆಸೀನನಾಗಿದ್ದ ಆತನು ಸಮರಾಂಗಣದಲ್ಲಿದ್ದ ಸುರರನ್ನು ಕುರಿತು "ದೇವತೆಗಳೆ, ಕೇಳಿರಿ ನನಗೆ ಯುಕ್ತವೆಂದು ತೋರುವ ಒಂದು ಮಾತನ್ನು ಹೇಳುತ್ತೇನೆ ಈ ದಶಗ್ರೀವನನ್ನು ಬದುಕಿರುವಂತೆಯೇ ಸೆರೆಹಿಡಿಯಬೇಕು (೧೧-೧೩) ಬಲಾಢ್ಯನಾದ ಈ ರಾಕ್ಷಸನು ವಾಯುವೇಗದಿಂದೋಡುವ ರಥದಲ್ಲಿ ಕುಳಿತು ನಮ್ಮ ಸೇನಾಮಧ್ಯದಲ್ಲಿ ಹೋಗುತ್ತಿದ್ದಾನೆ ಪರ್ವ ಕಾಲದಲ್ಲಿ ತರಂಗೋದ್ಧತವಾದ ಸಮುದ್ರವು ನುಗ್ಗುವಂತೆ ನುಗ್ಗುತ್ತಿದ್ದಾನೆ. ಇವನನ್ನು ಸಂಹರಿಸಲು ಸಾಧ್ಯವಿಲ್ಲ ಏಕೆಂದರೆ, ಬ್ರಹ್ಮನ ವರಬಲದಿಂದ ಇವನಿಗೆ ಈಗ ಮರಣಭಯವಿಲ್ಲವಾಗಿದೆ ಆದ್ದರಿಂದ ಈತನನ್ನು ನಾವು ಸೆರೆ ಹಿಡಿಯೋಣ ನೀವೆಲ್ಲರೂ ಎಚ್ಚರಿಕೆಯಿಂದ ಹೋರಾಡಿರಿ (೧೪-೧೫) ಬಲಿಯನ್ನು ನಿರೋಧಿಸಿ ಲೋಕತ್ರಯವನ್ನೂ ನಾನು ಆಳುತ್ತಿದ್ದೇನೆ. ಹಾಗೆಯೇ ರಾವಣನನ್ನೂ ಬಂಧಿಸುವುದು ಯುಕ್ತವೆಂದು ನನಗೆ ತೋರುತ್ತದೆ"

ತತೋಽನ್ಯಂ ದೇಶಮಾಸ್ಥಾಯ ಶಕ್ರಃ ಸಂತ್ಯಜ್ಯ ರಾವಣಮ್ ।
ಅಯುಧ್ಯತ ಮಹಾರಾಜ ರಾಕ್ಷಸಾಂಸ್ತ್ರಾಸಯನ್ ರಣೇ ॥ ೧೭

ಉತ್ತರೇಣ ದಶಗ್ರೀವಃ ಪ್ರವಿವೇಶಾನಿವರ್ತಕಃ ।
ದಕ್ಷಿಣೇನ ತು ಪಾರ್ಶ್ವೇನ ಪ್ರವಿವೇಶ ಶತಕ್ರತುಃ ॥ ೧೮

ತತಃ ಸ ಯೋಜನಶತಂ ಪ್ರವಿಷ್ಟೋ ರಾಕ್ಷಸಾಧಿಪಃ ।
ದೇವತಾನಾಂ ಬಲಂ ಸರ್ವಂ ಶರವರ್ಷೈರವಾಕಿರತ್ ॥ ೧೯

ತತಃ ಶಕ್ರೋ ನಿರೀಕ್ಷ್ಯಾಥ ಪ್ರನಷ್ಟಂ ತು ಸ್ವಕಂ ಬಲಮ್ ।
ನ್ಯವರ್ತಯದಸಂಭ್ರಾಂತಃ ಸಮಾವೃತ್ಯ ದಶಾನನಮ್ ॥ ೨೦

ಏತಸ್ಮಿನ್ನಂತರೇ ನಾದೋ ಮುಕ್ತೋ ದಾನವರಾಕ್ಷಸೈಃ ।
ಹಾ ಹತಾಃ ಸ್ಮ ಇತಿ ಗ್ರಸ್ತಂ ದೃಷ್ಟ್ವಾ ಶಕ್ರೇಣ ರಾವಣಮ್ ॥ ೨೧

ತತೋ ರಥಂ ಸಮಾಸ್ಥಾಯ ರಾವಣಿಃ ಕ್ರೋಧಮೂರ್ಛಿತಃ ।
ತತ್ಸೈನ್ಯಮತಿಸಂಕ್ರುದ್ಧಃ ಪ್ರವಿವೇಶ ಸುದಾರುಣಮ್ ॥ ೨೨

---

ಎಂದು ತಿಳಿಸಿದನು ರಾಘವ, ಇಂದ್ರನು ಹೀಗೆ ತಿಳಿಸಿ ರಾವಣನಿದ್ದ ಸ್ಥಳವನ್ನು ಬಿಟ್ಟು ಬೇರೊಂದೆಡೆಗೆ ಹೋಗಿ ರಾಕ್ಷಸರೊಡನೆ ಯುದ್ಧಮಾಡತೊಡಗಿದನು. ರಾಕ್ಷಸರು ಹೆದರಿದರು (೧೬-೧೭) ರಾವಣನು ಉತ್ತರದಿಕ್ಕಿನಿಂದ ಹಿಮ್ಮೆಟ್ಟದೆ ದೇವಸೇನೆಯನ್ನು ಪ್ರವೇಶಿಸಿದ್ದನು ಇಂದ್ರನು ದಕ್ಷಿಣದಿಕ್ಕಿನಿಂದ ರಾಕ್ಷಸಸೇನೆಯನ್ನೆದುರಿಸುತ್ತ ನುಗ್ಗಿದನು ರಾಕ್ಷಸಾಧಿಪನು ಒಂದುನೂರು ಯೋಜನಗಳಷ್ಟು ದೂರ ದೇವಸೇನೆಯನ್ನು ಭೇದಿಸಿಕೊಂಡು ಹೋದನು ದೇವತೆಗಳನ್ನು ಶರವರ್ಷಗಳಿಂದ ಆಚ್ಛಾದಿಸಿದನು (೧೮-೧೯) ರಾವಣನ ಧಾಳಿಯಿಂದ ದೇವಸೈನ್ಯವು ವಿಧ್ವಸ್ತವಾಗುವುದನ್ನು ಕಂಡು ಇಂದ್ರನು ಹಿಂದಿರುಗಿ ಅವನನ್ನು ತನ್ನ ಸೇನಾಬಲದೊಡನೆ ಸುತ್ತುಗಟ್ಟಿದನು ರಾವಣನು ಇಂದ್ರನಿಂದ ಸುತ್ತುವರಿಯಲ್ಪಟ್ಟನೆಂಬುದನ್ನು ತಿಳಿದು ರಾಕ್ಷಸರು ಹಾಹಾಕಾರ ಮಾಡಿದರು. "ಅಯ್ಯೊ, ಕೆಟ್ಟೆವು!" ಎಂದು ಆರ್ತಸ್ವರದಿಂದ ಕೂಗಿದರು (೨೦-೨೧). ಆಗ ಮೇಘನಾದನು ರೋಷಾವಿಷ್ಟನಾಗಿ ರಥವನ್ನೇರಿ ದಾರುಣವಾದ ದೇವಸೇನೆಯಲ್ಲಿ ನುಗ್ಗಿದನು ಹಿಂದೆ ಈಶ್ವರನಿಂದ ಲಬ್ಧವಾದ

ತಾಂ ಪ್ರವಿಶ್ಯ ಮಹಾಮಾಯಾಂ ಪ್ರಾಪ್ತಾಂ ಗೋಪತಿನಾ ಪುರಾ ।
ಪ್ರವಿವೇಶ ಸುಸಂರಬ್ಧಸ್ತತ್ಸೈನ್ಯಂ ಸಮಭಿದ್ರವತ್ ॥ ೨೩
ಸ ಸರ್ವಾ ದೇವತಾಸ್ತ್ಯಕ್ತ್ವಾ ಶಕ್ರಮೇವಾಭ್ಯಧಾವತ ।
ಮಹೇಂದ್ರಶ್ಚ ಮಹಾತೇಜಾ ನಾಪಶ್ಯಚ್ಚ ಸುತಂ ರಿಪೋಃ ॥ ೨೪
ವಿಮುಕ್ತಕವಚಸ್ತತ್ರ ವಧ್ಯಮಾನೋಽಪಿ ರಾವಣಿಃ ।
ತ್ರಿದಶೈಃ ಸುಮಹಾವೀರ್ಯೈರ್ನ ಚಕಾರ ಚ ಕಿಂಚನ ॥ ೨೫
ಸ ಮಾತಲಿಂ ಸಮಾಯಾಂತಂ ತಾಡಯಿತ್ವಾ ಶರೋತ್ತಮೈಃ ।
ಮಹೇಂದ್ರಂ ಬಾಣವರ್ಷೇಣ ಭೂಯ ಏವಾಭ್ಯವಾಕಿರತ್ ॥ ೨೬
ತತಸ್ತ್ಯಕ್ತ್ವಾ ರಥಂ ಶಕ್ರೋ ವಿಸಸರ್ಜ ಚ ಸಾರಥಿಮ್ ।
ಐರಾವತಂ ಸಮಾರುಹ್ಯ ಮೃಗಯಾಮಾಸ ರಾವಣಿಮ್ ॥ ೨೭
ಸ ತತ್ರ ಮಾಯಾಬಲವಾನದೃಶ್ಯೋಽಥಾಂತರಿಕ್ಷಗಃ ।
ಇಂದ್ರಂ ಮಾಯಾಪರಿಕ್ಷಿಪ್ತಃ ಕೃತ್ವಾ ಸಂಪ್ರಾದ್ರವಚ್ಛರೈಃ ॥ ೨೮
ಸ ತಂ ಯಥಾ ಪರಿಶ್ರಾಂತಮಿಂದ್ರಂ ಜಜ್ಞೇಽಥ ರಾವಣಿಃ ।
ತದೈನಂ ಮಾಯಯಾ ಬದ್ಧ್ವಾ ಸ್ವಸೈನ್ಯಮಭಿತೋಽನಯತ್ ॥ ೨೯

---

ಮಾಯಾವಿದ್ಯೆಯನ್ನಾಶ್ರಯಿಸಿ, ಆತನು ದೇವತೆಗಳನ್ನು ಲೆಕ್ಕಿಸದೆ ಮುನ್ನುಗ್ಗಿ ದೇವೇಂದ್ರನನ್ನು ತರುಬಿದನು ತೇಜಸ್ವಿಯಾದ ಮಹೇಂದ್ರನಿಗೆ ವೈರಿಸುತನಾದ ಮೇಘನಾದನು (ಮಾಯಾವೃತನಾದ್ದರಿಂದ) ಗೋಚರಿಸಲಿಲ್ಲ (೨೨-೨೪) ವೀರಾಗ್ರಗಣ್ಯರಾದ ದೇವತೆಗಳಿಂದ ತಾಡಿತನಾದ ರಾವಣಿಯ ಕವಚವು ಕಿತ್ತುಹೋಯಿತು ಆದರೂ ಅವನು ಸ್ವಲ್ಪವೂ ತಲ್ಲಣಿಸಲಿಲ್ಲ. ಆ ರಾವಣಿಯು ಎದುರಾಗಿ ಬಂದ ಮಾತಲಿಯನ್ನು ತೀವ್ರಶರಗಳಿಂದ ನೋಯಿಸಿ, ಇಂದ್ರನಮೇಲೆ ಶರವೃಷ್ಟಿಯನ್ನು ಸುರಿಸಿದನು (೨೫-೨೬) ಇಂದ್ರನು ರಥದಿಂದಿಳಿದು ಸಾರಥಿಯನ್ನು ಕಳಿಸಿ ಐರಾವತವನ್ನಡರಿ ರಾವಣಿಯನ್ನು ಅರಸತೊಡಗಿದನು ಮಾಯಾಬಲದಿಂದ ಅದೃಶ್ಯನಾಗಿದ್ದ ರಾವಣಿಯು ಅಂತರಿಕ್ಷದಲ್ಲಿ ನಿಂತು, ಇಂದ್ರನನ್ನು ಮಾಯೆಯಲ್ಲಿ ಸಿಕ್ಕಿಸಿಕೊಂಡು ಶರಗಳಿಂದ ಬಾರಿಸತೊಡಗಿದನು (೨೭-೨೮) ಇಂದ್ರನು ಬಳಲಿದನು ಮೇಘನಾದನು ತನ್ನ ಮಾಯಾಶಕ್ತಿಯಿಂದ ದೇವೇಂದ್ರನನ್ನು

ತಂ ತು ದೃಷ್ಟ್ವಾ ಬಲಾತ್ತೇನ ನೀಯಮಾನಂ ಮಹಾರಣಾತ್ ।
ಮಹೇಂದ್ರಮಮರಾಃ ಸರ್ವೇ ಕಿಂ ನು ಸ್ಯಾದಿತ್ಯಚಿಂತಯನ್ ॥ ೩೦

ದೃಶ್ಯತೇ ನ ಸ ಮಾಯಾವೀ ಶಕ್ರಜಿತ್ ಸಮಿತಿಂಜಯಃ ।
ವಿದ್ಯಾವಾನಪಿ ಯೇನೇಂದ್ರೋ ಮಾಯಯಾ ನೀಯತೇ ಬಲಾತ್ ॥

ಏತಸ್ಮಿನ್ನಂತರೇ ಕ್ರುದ್ಧಾಃ ಸರ್ವೇ ಸುರಗಣಾಸ್ತದಾ ।
ರಾವಣಂ ವಿಮುಖೀಕೃತ್ಯ ಶರವರ್ಷೈರವಾಕಿರನ್ ॥ ೩೨

ರಾವಣಸ್ತು ಸಮಾಸಾದ್ಯ ಆದಿತ್ಯಾಂಶ್ಚ ವಸೂಂಸ್ತಥಾ ।
ನ ಶಶಾಕ ಸ ಸಂಗ್ರಾಮೇ ಯೋದ್ಧುಂ ಶತ್ರುಭಿರರ್ದಿತಃ ॥ ೩೩

ಸ ತಂ ದೃಷ್ಟ್ವಾ ಪರಿಮ್ಲಾನಂ ಪ್ರಹಾರೈರ್ಜರ್ಜರೀಕೃತಮ್ ।
ರಾವಣಿಃ ಪಿತರಂ ಯುದ್ಧೇಽದರ್ಶನಸ್ಥೋಽಬ್ರವೀದಿದಮ್ ॥ ೩೪

ಆಗಚ್ಛ ತಾತ ಗಚ್ಛಾಮೋ ರಣಕರ್ಮ ನಿವರ್ತತಾಮ್ ।
ಜಿತಂ ನೋ ವಿದಿತಂ ತೇಽಸ್ತು ಸ್ವಸ್ಥೋ ಭವ ಗತಜ್ವರಃ ॥ ೩೫

---

ಬಂಧಿಸಿ ತನ್ನ ಸೈನ್ಯದ ಕಡೆಗೆ ಎಳೆದುಕೊಂಡುಹೋದನು ಸಂಗ್ರಾಮ ಭೂಮಿಯಿಂದ ಬಲಾತ್ಕಾರವಾಗಿ ಎಳೆದೊಯ್ಯಲ್ಪಡುತ್ತಿದ್ದ ದೇವರಾಜನನ್ನು ನೋಡಿ ದೇವತೆಗಳು "ಅಯ್ಯೋ! ಇದೇನಿರಬಹುದು? ಮಾಯಾವಿಯಾದ ಮೇಘನಾದನು ಕಣ್ಣಿಗೆ ಕಾಣಿಸುವುದಿಲ್ಲ ಅಸುರ ಮಾಯಾನಿವಾರಕವಾದ ವಿದ್ಯೆಯನ್ನು ಬಲ್ಲ ಇಂದ್ರನನ್ನೂ ಸಹ ಈತನು ಮಾಯಾಬಲದಿಂದ ಎಳೆದೊಯ್ಯುತ್ತಿರುವನಲ್ಲ!" ಎಂದು ಕಳವಳಿಸಿದರು (೨೯-೩೧) ಒಡನೆಯೇ ಸುರರೆಲ್ಲರೂ ಕ್ರುದ್ಧರಾಗಿ ರಾವಣನನ್ನು ಹಿಮ್ಮೆಟ್ಟಿಸಿ ಶರವರ್ಷಗಳಿಂದ ಅವನನ್ನು ಆಚ್ಛಾದಿಸಿದರು ಆದಿತ್ಯ, ವಸು ಮೊದಲಾದವರೊಡನೆ ಕಾದಾಡಿದ ರಾವಣನು ಅವರಿಂದ ಪೆಟ್ಟುತಿಂದು ಹಣ್ಣಾದನು ಹೋರಾಡಲು ಅವನಿಗೆ ಶಕ್ಯವಾಗಲಿಲ್ಲ (೩೨-೩೩) ಹೊಡೆತಗಳಿಂದ ಜರ್ಜರೀಕೃತಗಾತ್ರನಾಗಿ ಆಯಾಸಗೊಂಡಿದ್ದ ತಂದೆಯನ್ನು ನೋಡಿ ರಾವಣಿಯು ಅದೃಶ್ಯನಾಗಿಯೇ "ತಂದೆಯೇ, ಲಂಕೆಗೆ ಹೋಗೋಣ, ಬಾ ಸಮರಕರ್ಮವು ಇನ್ನು ಸಾಕು ನಮಗೆ ಜಯವಾಯಿತೆಂದು ತಿಳಿ ನಿಶ್ಚಿಂತನಾಗಿ ನೆಮ್ಮದಿಯಿಂದಿರು

ಅಯಂ ಹಿ ಸುರಸೈನ್ಯಸ್ಯ ತ್ರೈಲೋಕ್ಯಸ್ಯ ಚ ಯಃ ಪ್ರಭುಃ ।
ಸ ಗೃಹೀತೋ ದೈವಬಲಾದ್ಭಗ್ನದರ್ಪಾಃ ಸುರಾಃ ಕೃತಾಃ ॥ ೩೬

ಯಥೇಷ್ಟಂ ಭುಂಕ್ಷ್ವ ಲೋಕಾಂಸ್ತ್ರೀನ್ನಿಗೃಹ್ಯಾರಾತಿಮೋಜಸಾ ।
ವೃಥಾ ಕಿಂ ತೇ ಶ್ರಮೇಣೇಹ ಯುದ್ಧಮದ್ಯ ತು ನಿಷ್ಫಲಮ್ ॥ ೩೭

ತತಸ್ತೇ ದೈವತಗಣಾ ನಿವೃತ್ತಾ ರಣಕರ್ಮಣಃ ।
ತಚ್ಛ್ರುತ್ವಾ ರಾವಣೇರ್ವಾಕ್ಯಂ ಸ್ವಸ್ಥಚೇತಾ ಬಭೂವ ಹ ॥ ೩೮

ಅಥ ರಣವಿಗತಜ್ವರಃ ಪ್ರಭು-
ರ್ವಿಜಯಮವಾಪ್ಯ ನಿಶಾಚರಾಧಿಪಃ ।
ಸ್ವಭವನಮಭಿತೋ ಜಗಾಮ ಹೃಷ್ಟಃ
ಸ್ವಸುತಮವಾಪ್ಯ ಚ ವಾಕ್ಯಮಬ್ರವೀತ್ ॥ ೩೯

ಅತಿಬಲಸದೃಶೈಃ ಪರಾಕ್ರಮೈಸ್ತೈ-
ರ್ಮಮ ಕುಲಮಾನವಿವರ್ಧನಂ ಕೃತಮ್ ।
ಯದಯಮತುಲ್ಯಬಲಸ್ತ್ವಯಾದ್ಯ ವೈ
ತ್ರಿದಶಪತಿಸ್ತ್ರಿದಶಾಶ್ಚ ನಿರ್ಜಿತಾಃ ॥ ೪೦

---

(೩೬-೩೭) ಇಲ್ಲಿ ನೋಡು ಸುರಸೇನೆಗೂ ತ್ರಿಲೋಕಗಳಿಗೂ ಪ್ರಭುವೆನಿಸಿದ ಇಂದ್ರನನ್ನು ಸೆರೆ ಹಿಡಿದು ದೇವಸೇನಾಮಧ್ಯದಿಂದ ಎಳೆದು ತಂದಿದ್ದೇನೆ ಸುರರ ದರ್ಪವನ್ನು ಭಗ್ನಗೊಳಿಸಿದ್ದೇನೆ ವೈರಿಗಳನ್ನು ದಂಡಿಸಿ ಮೂರು ಲೋಕಗಳನ್ನೂ ಯಥೇಷ್ಟವಾಗಿ ವೈಭವದಿಂದ ಭೋಗಿಸು ವ್ಯರ್ಥ ಶ್ರಮಿಸುವುದೇಕೆ? ಯುದ್ಧದಿಂದ ಇನ್ನು ಯಾವ ಪ್ರಯೋಜನವೂ ಇಲ್ಲ" ಎಂದು ಹೇಳಿದನು (೩೬-೩೭) ದೇವತೆಗಳು ಯುದ್ಧವನ್ನು ತ್ಯಜಿಸಿ ಹೊರಟರು ಮಗನ ನುಡಿಯನ್ನು ಕೇಳಿ ರಾವಣನ ಮನಸ್ಸಿಗೆ ನೆಮ್ಮದಿ ಯಾಯಿತು (೩೮) ಆ ರಾಕ್ಷಸೇಂದ್ರನು ಈ ರೀತಿಯಲ್ಲಿ ವಿಜಯವನ್ನು ಗಳಿಸಿ ಹರ್ಷದಿಂದ ಲಂಕಾಭಿಮುಖವಾಗಿ ಹೊರಟನು ತನ್ನ ತನಯನಾದ ಮೇಘನಾದನನ್ನು ನೋಡಿ "ವತ್ಸ, ನಿನ್ನ ಅಸಾಧಾರಣ ಪರಾಕ್ರಮಗಳಿಂದ ನನ್ನ ಕುಲದ ಹಿರಿಮೆಯನ್ನು ಎತ್ತಿ ಹಿಡಿದಿದ್ದೀಯೆ. ಬಲಾಢ್ಯನಾದ ಇಂದ್ರ

ನಯ ರಥಮಧಿರೋಪ್ಯ ವಾಸವಂ
ನಗರಮಿತೋ ವ್ರಜ ಸೇನಯಾ ವೃತಸ್ತ್ವಮ್ ।
ಅಹಮಪಿ ತವ ಗಚ್ಛತೋ ದ್ರುತಂ
ಸಹ ಸಚಿವೈರನುಯಾಮಿ ಪೃಷ್ಠತಃ ॥ ೪೧

ಅಥ ಸ ಬಲವೃತಃ ಸವಾಹನ-
ಸ್ತ್ರಿದಶಪತಿಂ ಪರಿಗೃಹ್ಯ ರಾವಣಿಃ ।
ಸ್ವಭವನಮಭಿಗಮ್ಯ ವೀರ್ಯವಾನ್
ಕೃತಸಮರಾನ್ ವಿಸಸರ್ಜ ರಾಕ್ಷಸಾನ್ ॥ ೪೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋನತ್ರಿಂಶಃ ಸರ್ಗಃ



ನನ್ನು ಸೆರೆಹಿಡಿದು ದೇವತೆಗಳನ್ನು ಗೆದ್ದಿರುವೆ (೩೯-೪೦) ಇಂದ್ರನನ್ನು ರಥದಲ್ಲಿ ಹೇರಿಕೊಂಡು ಸೇನಾಪರಿವೃತನಾಗಿ ಲಂಕೆಗೆ ಪ್ರಯಾಣಮಾಡು. ನಾನೂ ಸಹ ಸಚಿವರೊಡನೆ ಹಿಂಬಾಲಿಸಿ ಬರುವೆನು" ಎಂದು ತಿಳಿಸಿದನು ಶೂರಾಗ್ರಣ್ಯನಾದ ರಾವಣಿಯು ಸೆರೆಯಾಳಾದ ಇಂದ್ರನೊಡನೆ ತನ್ನ ನಗರಕ್ಕೆ ಹಿಂದಿರುಗಿದನು ಯುದ್ಧದಲ್ಲಿ ಹೋರಾಡಿದ ರಾಕ್ಷಸಯೋಧರನ್ನು ಬೀಳ್ಕೊಟ್ಟನು (೪೧-೪೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಇಪ್ಪತ್ತೊಂಬತ್ತನೆಯ ಸರ್ಗ



## ತ್ರಿಂಶಃ ಸರ್ಗಃ

### ಇಂದ್ರಪರಾಜಯಕಾರಣಕಥನಮ್

ಜಿತೇ ಮಹೇಂದ್ರೇऽತಿಬಲೇ ರಾವಣಸ್ಯ ಸುತೇನ ವೈ ।
ಪ್ರಜಾಪತಿಂ ಪುರಸ್ಕೃತ್ಯ ಯಯುರ್ಲಂಕಾಂ ಸುರಾಸ್ತದಾ ॥ ೧

ತತ್ರ ರಾವಣಮಾಸಾದ್ಯ ಪುತ್ರಭ್ರಾತೃಭಿರಾವೃತಮ್ ।
ಅಬ್ರವೀದ್ಗಗನೇ ತಿಷ್ಠನ್ ಸಾಮಪೂರ್ವಂ ಪ್ರಜಾಪತಿಃ ॥ ೨

ವತ್ಸ ರಾವಣ ತುಷ್ಟೋऽಸ್ಮಿ ಪುತ್ರಸ್ಯ ತವ ಸಂಯುಗೇ ।
ಅಹೋऽಸ್ಯ ವಿಕ್ರಮೌದಾರ್ಯಂ ತವ ತುಲ್ಯೋऽಧಿಕೋऽಪಿ ವಾ ॥ ೩

ಜಿತಂ ಹಿ ಭವತಾ ಸರ್ವಂ ತ್ರೈಲೋಕ್ಯಂ ಸ್ವೇನ ತೇಜಸಾ ।
ಕೃತಾ ಪ್ರತಿಜ್ಞಾ ಸಫಲಾ ಪ್ರೀತೋऽಸ್ಮಿ ಸ್ವಸುತೇನ ವೈ ॥ ೪

## ಸರ್ಗ ೩೦

### ಬ್ರಹ್ಮನಿಂದ ಇಂದ್ರಜಿತುವಿಗೆ ವರದಾನ ಇಂದ್ರನ ಬಿಡುಗಡೆ ಇಂದ್ರನ ಸೋಲಿಗೆ ನಿಮಿತ್ತವಾದ ಗೌತಮಮುನಿಯ ಶಾಪದ ವಿವರಣೆ

ಶ್ರೀರಾಮ, ಬಲಾಢ್ಯನಾದ ಮಹೇಂದ್ರನು ಈ ಪ್ರಕಾರವಾಗಿ ಮೇಘನಾದನಿಂದ ಪರಾಜಿತನಾಗಲು, ದೇವತೆಗಳು ಬ್ರಹ್ಮದೇವನನ್ನು ಕರೆದು ಕೊಂಡು ಲಂಕೆಗೆ ಹೋದರು ಅಲ್ಲಿ ತನ್ನ ಪುತ್ರರಿಂದಲೂ ಸೋದರರಿಂದಲೂ ಪರಿವೃತನಾಗಿ ಕುಳಿತಿದ್ದ ರಾವಣನನ್ನು ನೋಡಿ, ಬ್ರಹ್ಮದೇವನು ಗಗನ ದಲ್ಲಿಯೇ ನಿಂತು ಸಾಂತ್ವವಚನಗಳಿಂದ ಹೀಗೆಂದನು (೧-೨). "ವತ್ಸ– ರಾವಣ, ರಣಭೂಮಿಯಲ್ಲಿ ನಿನ್ನ ಮಗನು ಪ್ರಕಟಿಸಿದ ಸಾಹಸವನ್ನು ಕಂಡು ಮೆಚ್ಚಿದೆನು! ಅಬ್ಬಾ! ಅವನ ಪರಾಕ್ರಮವೆಷ್ಟು! ಶೌರ್ಯದಲ್ಲಿ ಆತನು ನಿನಗೆ ಸಮಾನನಾಗಿದ್ದಾನೆ ಅಥವಾ ನಿನಗಿಂತಲೂ ಶೂರನೆಂದರೂ ಸಲ್ಲುವುದು! (೩) ವತ್ಸ, ತೇಜೋಬಲದಿಂದ ಮೂರು ಲೋಕಗಳನ್ನೂ ಗೆದ್ದಿರುವೆ. ನಿನ್ನ ಪ್ರತಿಜ್ಞೆಯನ್ನು ಸಾಧಿಸಿರುವೆ ನಿನ್ನ ಮಗನ ವಿಕ್ರಮಾತಿಶಯ

ಅಯಂ ಚ ಪುತ್ರೋಽತಿಬಲಸ್ತವ ರಾವಣ ವೀರ್ಯವಾನ್ ।
ಜಗತೀಂದ್ರಜಿದಿತ್ಯೇವ ಪರಿಖ್ಯಾತೋ ಭವಿಷ್ಯತಿ ॥ ೫

ಬಲವಾನ್ ದುರ್ಜಯಶ್ಚೈವ ಭವಿಷ್ಯತ್ಯೇವ ರಾಕ್ಷಸಃ ।
ಯಂ ಸಮಾಶ್ರಿತ್ಯ ತೇ ರಾಜನ್ ಸ್ಥಾಪಿತಾಸ್ತ್ರಿದಶಾ ವಶೇ ॥ ೬

ತನ್ಮುಚ್ಯತಾಂ ಮಹಾಬಾಹೋ ಮಹೇಂದ್ರಃ ಪಾಕಶಾಸನಃ ।
ಕಿಂ ಚಾಸ್ಯ ಮೋಕ್ಷಣಾರ್ಥಾಯ ಪ್ರಯಚ್ಛಂತು ದಿವೌಕಸಃ ॥ ೭

ಅಥಾಬ್ರವೀನ್ಮಹಾತೇಜಾ ಇಂದ್ರಜಿತ್ ಸಮಿತಿಂಜಯಃ ।
ಅಮರತ್ವಮಹಂ ದೇವ ವೃಣೇ ಯದ್ಯೇಷಮುಚ್ಯತೇ ॥ ೮

ಚತುಷ್ಪದಾಂ ಖೇಚರಾಣಾಮನ್ಯೇಷಾಂ ಚ ಮಹೌಜಸಾಮ್ ।
ವೃಕ್ಷಗುಲ್ಮಕ್ಷುಪಲತಾತೃಣೋಪಲಮಹೀಭೃತಾಮ್ ॥ ೯

ಸರ್ವೇಽಪಿ ಜಂತವೋಽನ್ಯೋನ್ಯಂ ಭೇತವ್ಯೇ ಸತಿ ಬಿಭ್ಯತಿ ।
ಅತೋಽತ್ರ ಲೋಕೇ ಸರ್ವೇಷಾಂ ಸರ್ವಸ್ಮಾಚ್ಚ ಭವೇದ್ಭಯಮ್ ॥

---

ವನ್ನು ನೋಡಿ ಸಂತುಷ್ಟನಾಗಿದ್ದೇನೆ ನಿನ್ನ ಪುತ್ರನಾದ ಮೇಘನಾದನು, ರಾವಣ, ಅತ್ಯಂತ ಬಲಶಾಲಿ ಇವನು ಇನ್ನುಮೇಲೆ ಇಂದ್ರಜಿತುವೆಂಬ ಹೆಸರಿನಿಂದ ವಿಖ್ಯಾತನಾಗುವನು (೪-೫) ಬಲಾಢ್ಯನೂ ದುರ್ಜಯನೂ ಆಗಿ ವಿರಾಜಿಸುವನು ಲಂಕೇಶ್ವರ, ಈತನ ಬಲದಿಂದಲೇ ನೀನು ದೇವತೆಗಳನ್ನು ಜಯಿಸಿ ನಿನ್ನ ವಶದಲ್ಲಿರಿಸಿಕೊಂಡಿದ್ದೀಯೆ ಅವರೆಲ್ಲರೂ ವಶವರ್ತಿಗಳಾಗಿರುವಾಗ ಇಂದ್ರನೊಬ್ಬನನ್ನು ಸೆರೆಯಲ್ಲಿಡುವುದೇಕೆ? ವೀರಾಗ್ರೇಸರ, ಆತನನ್ನು ಸೆರೆಯಿಂದ ಬಿಡು ಬಿಡುಗಡೆಗೆ ಪ್ರತಿಫಲವಾಗಿ ದೇವತೆಗಳಿಂದ ನಿನಗೇನು ಬೇಕು? ಹೇಳು" ಎಂದನು (೬-೭) ಆಗ ತೇಜಸ್ವಿಯೂ ಶೂರಾಗ್ರೇಸರನೂ ಆದ ಮೇಘನಾದನು "ಹೇ ಬ್ರಹ್ಮದೇವ, ಇಂದ್ರನನ್ನು ಬಿಡಬೇಕಾದರೆ ನಾನು ಮರಣರಹಿತನಾಗಬೇಕೆಂಬ ವರವನ್ನು ಕೇಳಿಕೊಳ್ಳುತ್ತೇನೆ! ಈ ಜಗತ್ತಿನಲ್ಲಿ ಪಶುಪಕ್ಷಿಗಳಿಗೂ ತೇಜೋನಿಧಿಗಳಾದ ಸಕಲಭೂತಗಳಿಗೂ ಮರ, ಗಿಡ, ಪೊದೆ, ಬಳ್ಳಿ, ಕಲ್ಲು, ಬೆಟ್ಟಗಳಿಗೂ ನಿಖಿಲ ಜಂತುಗಳಿಗೂ ಮರಣಭಯವಿರುವುದರಿಂದಲೇ ಒಬ್ಬರಿಗೊಬ್ಬರು ಹೆದರುತ್ತಾರೆ ಆದ್ದರಿಂದಲೇ ಸರ್ವರಿಗೂ ಸರ್ವರಿಂದಲೂ ಭಯವುಂಟು" ಎಂದು ಹೇಳಿದನು (೮-೧೦)

ತತೋಽಬ್ರವೀನ್ಮಹಾತೇಜಾ ಮೇಘನಾದಂ ಪ್ರಜಾಪತಿಃ ।
ನಾಸ್ತಿ ಸರ್ವಾಮರತ್ವಂ ಹಿ ಕಸ್ಯಚಿತ್ ಪ್ರಾಣಿನೋ ಭುವಿ ॥ ೧೧

ಚತುಷ್ಪದಃ ಪಕ್ಷಿಣಶ್ಚ ಭೂತಾನಾಂ ವಾ ಮಹೌಜಸಾಮ್ ।
ಶ್ರುತ್ವಾ ಪಿತಾಮಹೇನೋಕ್ತಮಿಂದ್ರಜಿತ್ ಪ್ರಭುಣಾವ್ಯಯಮ್ ॥

ಅಥಾಬ್ರವೀತ್ ಸ ತತ್ರಸ್ಥಂ ಮೇಘನಾದೋ ಮಹಾಬಲಃ ।
ಶ್ರೂಯತಾಂ ವಾ ಭವೇತ್ ಸಿದ್ಧಿಃ ಶತಕ್ರತುವಿಮೋಕ್ಷಣೇ ॥ ೧೩

ಮಮೇಷ್ಟಂ ನಿತ್ಯಶೋ ಹವ್ಯೈರ್ಮಂತ್ರೈಃ ಸಂಪೂಜ್ಯ ಪಾವಕಮ್ ।
ಸಂಗ್ರಾಮಮವತರ್ತುಂ ಚ ಶತ್ರುನಿರ್ಜಯಕಾಂಕ್ಷಿಣಃ ॥ ೧೪

ಅಶ್ವಯುಕ್ತೋ ರಥೋ ಮಹ್ಯಮುತ್ತಿಷ್ಠೇತ್ತು ವಿಭಾವಸೋಃ ।
ತತ್ಸ್ಥಸ್ಯಾಮರತಾ ಸ್ಯಾನ್ಮೇ ಏಷ ಮೇ ನಿಶ್ಚಯೋ ವರಃ ॥ ೧೫

ತಸ್ಮಿನ್ ಯದ್ಯಸಮಾಪ್ತೇ ಚ ಜಪ್ಯಹೋಮೇ ವಿಭಾವಸೌ ।
ಯುಧ್ಯೇಯಂ ದೇವ ಸಂಗ್ರಾಮೇ ತದಾ ಮೇ ಸ್ಯಾದ್ವಿನಾಶನಮ್ ॥

---

ಆಗ ಪ್ರಜೇಶ್ವರನಾದ ಬ್ರಹ್ಮನು "ಈ ಲೋಕದಲ್ಲಿ ಯಾವ ಪ್ರಾಣಿಗೂ ಮರಣವಿಲ್ಲದೆ ಇರಲು ಸಾಧ್ಯವಿಲ್ಲ ಪಶುಪಕ್ಷಿಗಳಾಗಲಿ ತೇಜೋನಿಧಿಗಳಾದ ಸಕಲಭೂತಗಳಾಗಲಿ ಮರಣವನ್ನು ತಪ್ಪಿಸಿಕೊಳ್ಳಲಾಗದು" ಎಂದನು (೧೧-೧೨) ಪಿತಾಮಹನ ನುಡಿಯನ್ನು ಕೇಳಿ ಇಂದ್ರಜಿತುವು ಶಾಶ್ವತನಾದ ಆ ದೇವನನ್ನು ನೋಡಿ "ಹಾಗಾದರೆ, ಇಂದ್ರನನ್ನು ಸೆರೆಯಿಂದ ಬಿಡಲು ನಾನು ಹಾಕುವ ನಿಯಮವಿದು (೧೩) ನಾನು ಜಯಾಪೇಕ್ಷೆಯಿಂದ ಸಂಗ್ರಾಮ ಭೂಮಿಗೆ ಇಳಿಯುವ ಮುನ್ನ, ಮಂತ್ರಪೂರ್ವಕವಾಗಿ ಅಗ್ನಿಗೆ ಹವಿಸ್ಸುಗಳನ್ನರ್ಪಿಸುತ್ತೇನೆ ಆಗ ಅಶ್ವಯುಕ್ತವಾದ ದಿವ್ಯರಥವು ನನಗೋಸ್ಕರ ಅಗ್ನಿಕುಂಡದಿಂದ ಎದ್ದು ಬರಬೇಕು! ಆ ರಥದಲ್ಲಿ ಕುಳಿತಿರುವಾಗ ಸರ್ವರಿಗೂ ನಾನು ಅವಧ್ಯನಾಗಬೇಕೆಂಬುದೇ ನಾನು ಕೇಳುವ ವರ ಇದೇ ನನ್ನ ನಿಶ್ಚಯ (೧೪-೧೫) ಜಪಪೂರ್ವಕವಾದ ಆ ಹೋಮವು ಸಮಾಪ್ತವಾಗುವುದಕ್ಕೆ ಮೊದಲೇ ನಾನು ಯುದ್ಧಕ್ಕೆ ಹೊರಟಲ್ಲಿ, ದೇವ, ಆಗ ನನಗೆ ಮರಣ

ಸರ್ವೇ ಹಿ ತಪಸಾ ದೇವ ವೃಣೋತ್ಯಮರತಾಂ ಪುಮಾನ್ ।
ವಿಕ್ರಮೇಣ ಮಯಾ ತ್ವೇತದಮರತ್ವಂ ಪ್ರವರ್ತಿತಮ್ ॥ ೧೭
ಏವಮಸ್ತ್ವಿತಿ ತಂ ಚಾಹ ವಾಕ್ಯಂ ದೇವಃ ಪಿತಾಮಹಃ ।
ಮುಕ್ತಶ್ಚೇಂದ್ರಜಿತಾ ಶಕ್ರೋ ಗತಾಶ್ಚ ತ್ರಿದಿವಂ ಸುರಾಃ ॥ ೧೮
ಏತಸ್ಮಿನ್ನಂತರೇ ರಾಮ ದೀನೋ ಭ್ರಷ್ಟಾಮರದ್ಯುತಿಃ ।
ಇಂದ್ರಶ್ಚಿಂತಾಪರೀತಾತ್ಮಾ ಧ್ಯಾನತತ್ಪರತಾಂ ಗತಃ ॥ ೧೯
ತಂ ತು ದೃಷ್ಟ್ವಾ ತಥಾಭೂತಂ ಪ್ರಾಹ ದೇವಃ ಪ್ರಜಾಪತಿಃ ।
ಶತಕ್ರತೋ ಕಿಮು ಪುರಾ ಕರೋತಿ ಸ್ಮ ಸುದುಷ್ಕರಮ್ ॥ ೨೦
ಅಮರೇಂದ್ರ ಮಯಾ ಬಹ್ವ್ಯಃ ಪ್ರಜಾಃ ಸೃಷ್ಟಾಸ್ತದಾ ಪ್ರಭೋ ।
ಏಕವರ್ಣಾಃ ಸಮಾಭಾಷಾ ಏಕರೂಪಾಶ್ಚ ಸರ್ವಶಃ ॥ ೨೧
ತಾಸಾಂ ನಾಸ್ತಿ ವಿಶೇಷೋ ಹಿ ದರ್ಶನೇ ಲಕ್ಷಣೇಽಪಿ ವಾ ।
ತತೋಽಹಮೇಕಾಗ್ರಮನಾಸ್ತಾಃ ಪ್ರಜಾಃ ಪರ್ಯಚಿಂತಯಮ್ ॥

---

ವಾಗಬಹುದು ಪಿತಾಮಹ, ಸಕಲರೂ ತಪೋಬಲದಿಂದ ಅಮರತ್ವವನ್ನು ಪಡೆಯಲು ಪ್ರಯತ್ನಿಸುತ್ತಾರೆ ನಾನಾದರೋ ನನ್ನ ಭುಜಬಲದಿಂದಲೇ ಅಮರತ್ವವನ್ನು ಪಡೆಯುತ್ತಿದ್ದೇನೆ!" ಎಂದು ತಿಳಿಸಿದನು (೧೬-೧೭) ಬ್ರಹ್ಮನು "ತಥಾಸ್ತು!" ಎಂದನು ಅನಂತರ ಇಂದ್ರಜಿತು ದೇವೇಂದ್ರನನ್ನು ಸೆರೆಯಿಂದ ಬಿಡಲಾಗಿ, ದೇವತೆಗಳು ಸ್ವರ್ಗಕ್ಕೆ ಹಿಂತಿರುಗಿದರು ಶ್ರೀರಾಮ, ಆ ಸಂದರ್ಭದಲ್ಲಿ ಇಂದ್ರನು ದೀನನಾಗಿದ್ದನು ಅವನ ಮುಖದಲ್ಲಿ ದಿವ್ಯವರ್ಚಸ್ಸು ಇರಲಿಲ್ಲ ಶೂನ್ಯಮನಸ್ಕನಾಗಿ ಚಿಂತಾಗ್ರಸ್ತನಾಗಿದ್ದನು (೧೮-೧೯) ಅವನನ್ನು ನೋಡಿ ಬ್ರಹ್ಮನು ಹೀಗೆಂದನು. "ಹೇ ಶತಕ್ರತು, ಇಷ್ಟು ಶೋಕಾಕುಲನಾಗಿರುವೆಯಲ್ಲ, ಇದಕ್ಕೆ ಕಾರಣವೇನು ಗೊತ್ತೆ? ಹಿಂದೆ ಎಂತಹ ಪಾಪಕಾರ್ಯವನ್ನು ಮಾಡಿದ್ದೀಯೆಯೆಂಬುದು ನೆನಪಿನಲ್ಲಿದೆಯೆ? (೨೦) ದೇವೇಂದ್ರ, ಆರಂಭದಲ್ಲಿ ನಾನು ಕೆಲವು ಪ್ರಜಾವರ್ಗವನ್ನು ಸೃಜಿಸಿದೆನು ಆ ಪ್ರಜೆಗಳೆಲ್ಲರೂ ಒಂದೇ ಬಣ್ಣದವರೂ ಒಂದೇ ಧ್ವನಿಯುಳ್ಳವರೂ ಒಂದೇ ಬಗೆಯ ರೂಪವುಳ್ಳವರೂ ಆಗಿದ್ದರು ಅವರ ಆಕೃತಿಯಲ್ಲಾಗಲಿ ಲಕ್ಷಣದಲ್ಲಾಗಲಿ ಯಾವ ವ್ಯತ್ಯಾಸವೂ ಇರಲಿಲ್ಲ (೨೧) ಅನಂತರ ನಾನು ಆ ಜನರ ವಿಷಯವಾಗಿ ಸಾವಧಾನತೆಯಿಂದ ಆಲೋಚಿಸಿ,

ಸೋಽಹಂ ತಾಸಾಂ ವಿಶೇಷಾರ್ಥಂ ಸ್ತ್ರಿಯಮೇಕಾಂ ವಿನಿರ್ಮಮೇ ।
ಯದ್ಯತ್ ಪ್ರಜಾನಾಂ ಪ್ರತ್ಯಂಗಂ ವಿಶಿಷ್ಟಂ ತತ್ತದುದ್ಧೃತಮ್ ॥

ತತೋ ಮಯಾ ರೂಪಗುಣೈರಹಲ್ಯಾ ಸ್ತ್ರೀ ವಿನಿರ್ಮಿತಾ ।
ಹಲಂ ನಾಮೇಹ ವೈರೂಪ್ಯಂ ಹಲ್ಯಂ ತತ್ಪ್ರಭವಂ ಭವೇತ್ ॥ ೨೪

ಯಸ್ಮಾನ್ನ ವಿದ್ಯತೇ ಹಲ್ಯಂ ತೇನಾಹಲ್ಯೇತಿ ವಿಶ್ರುತಾ ।
ಅಹಲ್ಯೇತಿ ಮಯಾ ಶಕ್ರ ತಸ್ಯಾ ನಾಮ ಪ್ರವರ್ತಿತಮ್ ॥ ೨೫

ನಿರ್ಮಿತಾಯಾಂ ಚ ದೇವೇಂದ್ರ ತಸ್ಯಾಂ ನಾರ್ಯಾಂ ಸುರರ್ಷಭ ।
ಭವಿಷ್ಯತೀತಿ ಕಸ್ಯೈಷಾ ಮಮ ಚಿಂತಾ ತತೋಽಭವತ್ ॥ ೨೬

ತ್ವಂ ತು ಶಕ್ರ ತದಾ ನಾರೀಂ ಜಾನೀಷೇ ಮನಸಾ ಪ್ರಭೋ ।
ಸ್ಥಾನಾಧಿಕತಯಾ ಪತ್ನೀ ಮಮೈಷೇತಿ ಪುರಂದರ ॥ ೨೭

ಸಾ ಮಯಾ ನ್ಯಾಸಭೂತಾ ತು ಗೌತಮಸ್ಯ ಮಹಾತ್ಮನಃ ।
ನ್ಯಸ್ತಾ ಬಹೂನಿ ವರ್ಷಾಣಿ ತೇನ ನಿರ್ಯಾತಿತಾ ಚ ಹ ॥ ೨೮

---

ಅವರಲ್ಲೊಂದು ವಿಶೇಷವಿರುವುದು ಯುಕ್ತವೆಂದು ಪರಿಗಣಿಸಿ, ಮೊದಲು ಒಬ್ಬ ಸ್ತ್ರೀಯನ್ನು ನಿರ್ಮಿಸಿದೆನು! ಜನರ ಒಂದೊಂದು ಅಂಗದಲ್ಲಿಯೂ ಯಾವುದು ಸೌಂದರ್ಯಸಾರವೋ ಅದನ್ನು ತೆಗೆದು, ಆ ಸಾರಗಳಿಂದ ಸೌಂದರ್ಯನಿಧಿಯಾದ ಅಹಲ್ಯೆಯೆಂಬ ಸ್ತ್ರೀಯನ್ನು ಸೃಷ್ಟಿಸಿದೆನು! ಹಲ ಎಂದರೆ ವಿಕಾರವೆಂದರ್ಥ ಹಲ್ಯವೆಂದರೆ ವಿಕಾರಜನ್ಯವಾದ ದೋಷ (೨೨-೨೪) ಯಾರಲ್ಲಿ ಹಲ್ಯವೆಂಬುದೇ ಇಲ್ಲವೋ ಅವಳು ಅಹಲ್ಯೆ! ಆದ್ದರಿಂದ, ಇಂದ್ರ, ಅವಳಿಗೆ ಅಹಲ್ಯೆಯೆಂದು ನಾನು ಹೆಸರಿಟ್ಟೆನು ಅಂಗನೆಯನ್ನು ಸೃಜಿಸಿದ್ದೇನೋ ಆಯಿತು, ಆಮೇಲೆ ಅವಳು ಯಾರ ಪತ್ನಿಯಾಗಬೇಕೆಂದು ನನಗೆ ಚಿಂತೆಯುದ್ಭವಿಸಿತು! (೨೫-೨೬) ಆಗ, ಎಲೈ ಪುರಂದರ, ಸ್ಥಾನಬಲದಿಂದ ನೀನು ಸರ್ವಶ್ರೇಷ್ಠನೆಂದೂ ಆದುದರಿಂದ ಅವಳು ನಿನಗೇ ಪತ್ನಿಯಾಗಿ ದೊರೆಯಬೇಕೆಂದೂ ನೀನು ಮನಸ್ಸಿನಲ್ಲಿ ಗುಣಿಸುತ್ತಿದ್ದೆ! ನಾನು ಅಹಲ್ಯೆಯನ್ನು ಮಹಾತ್ಮನಾದ ಗೌತಮಮುನಿಯ ಬಳಿಯಲ್ಲಿ ನ್ಯಾಸರೂಪವಾಗಿ ಬಹುವರ್ಷಗಳವರೆಗೆ ಇಟ್ಟೆನು ಅನಂತರ ಆ ಮುನಿಯು

ತತಸ್ತಸ್ಯ ಪರಿಜ್ಞಾಯ ಮಹಾಸ್ಥೈರ್ಯಂ ಮಹಾಮುನೇಃ ।
ಜ್ಞಾತ್ವಾ ತಪಸಿ ಸಿದ್ಧಿಂ ಚ ಪತ್ನ್ಯರ್ಥಂ ಸ್ಪರ್ಶಿತಾ ತದಾ ॥ ೨೯

ಸ ತಯಾ ಸಹ ಧರ್ಮಾತ್ಮಾ ರಮತೇ ಸ್ಮ ಮಹಾಮುನಿಃ ।
ಆಸನ್ನಿರಾಶಾ ದೇವಾಸ್ತು ಗೌತಮೇ ದತ್ತಯಾ ತಯಾ ॥ ೩೦

ಸಂಕ್ರುದ್ಧಸ್ತ್ವಂ ಹಿ ಧರ್ಮಾತ್ಮನ್ ಗತ್ವಾ ತಸ್ಯಾಶ್ರಮಂ ಮುನೇಃ ।
ದೃಷ್ಟವಾಂಶ್ಚ ತದಾ ತಾಂ ಸ್ತ್ರೀಂ ದೀಪ್ತಾಮಗ್ನಿಶಿಖಾಮಿವ ॥ ೩೧

ಸಾ ತ್ವಯಾ ಧರ್ಷಿತಾ ಶಕ್ರ ಕಾಮಾರ್ತೇನ ಸಮನ್ಯುನಾ ।
ದೃಷ್ಟಸ್ತ್ವಂ ಚ ತದಾ ತೇನ ಹ್ಯಾಶ್ರಮೇ ಪರಮರ್ಷಿಣಾ ॥ ೩೨

ತತಃ ಕ್ರುದ್ಧೇನ ತೇನಾಸಿ ಶಪ್ತಃ ಪರಮತೇಜಸಾ ।
ಗತೋಽಸಿ ಯೇನ ದೇವೇಂದ್ರ ದಶಾಭಾಗವಿಪರ್ಯಯಮ್ ॥ ೩೩

ಯಸ್ಮಾನ್ಮೇ ಧರ್ಷಿತಾ ಪತ್ನೀ ತ್ವಯಾ ವಾಸವ ನಿರ್ಭಯಮ್ ।
ತಸ್ಮಾತ್ತ್ವಂ ಸಮರೇ ರಾಜನ್ ಶತ್ರುಹಸ್ತಂ ಗಮಿಷ್ಯಸಿ ॥ ೩೪

---

ಅವಳನ್ನು ನನಗೆ ಒಪ್ಪಿಸಿದನು (೨೭-೨೮) ಇಂದ್ರ, ಆ ಮಹರ್ಷಿಯ ಅದ್ಭುತವಾದ ಜಿತೇಂದ್ರಿಯತ್ವವನ್ನೂ ತಪಃಸಿದ್ಧಿಯನ್ನೂ ಕಂಡು ಮೆಚ್ಚಿ, ನಾನು ಅಹಲ್ಯೆಯನ್ನು ಗೌತಮನಿಗೆ ಕೊಟ್ಟು ಪ್ರಾಣಿಗ್ರಹಣಮಾಡಿಸಿದೆನು. ಆ ಧರ್ಮಾತ್ಮನಾದ ಮಹರ್ಷಿಯು ಅವಳೊಡನೆ ಸುಖದಲ್ಲಿದ್ದನು. ಗೌತಮನಿಗೆ ಅಹಲ್ಯೆಯನ್ನು ಕೊಟ್ಟುದರಿಂದ ದೇವತೆಗಳು ಹತಾಶರಾದರು (೨೯-೩೦) ದೇವೇಂದ್ರ, ನೀನೂ ಕ್ರುದ್ಧನಾದೆ ನೀನು ಗೌತಮಮುನಿಯ ಆಶ್ರಮಕ್ಕೆ ಹೋಗಿ ಅಗ್ನಿಶಿಖೆಯಂತೆ ವಿರಾಜಿಸುತ್ತಿದ್ದ ಅಹಲ್ಯೆಯನ್ನು ನೋಡಿ ಕಾಮಾರ್ತನಾದೆ ಮೊದಲೇ ಕೋಪದಿಂದ ಕುದಿಯುತ್ತಿದ್ದ ನೀನು ಅವಳ ಶೀಲವನ್ನು ಕೆಡಿಸಿದೆ ತೇಜೋನಿಧಿಯಾದ ಆ ಮಹರ್ಷಿಯು ನಿನ್ನನ್ನು ನೋಡಿ ರೋಷದಿಂದ ಶಪಿಸಿದನು (೩೧-೩೨) ದೇವೇಂದ್ರ, ಅಲ್ಲಿಂದ ನಿನ್ನ ಅವನತಿ ಆರಂಭವಾಯಿತು ಆ ಋಷಿಯು "ಎಲೈ ವಾಸವ, ಧರ್ಮಕ್ಕಂಜದೆ ಬಂದು ನನ್ನ ಪತ್ನಿಯನ್ನು ಅತಿಕ್ರಮಿಸಿದೆಯಾದ್ದರಿಂದ ನೀನು ಶತ್ರುಗಳಿಗೆ

ಅಯಂ ತು ಭಾವೋ ದುರ್ಬುದ್ಧೇ ಯಸ್ತ್ವಯೇಹ ಪ್ರವರ್ತಿತಃ ।
ಮಾನುಷೇಷ್ವಪಿ ಲೋಕೇಷು ಭವಿಷ್ಯತಿ ನ ಸಂಶಯಃ ॥ ೩೫

ತತ್ರಾರ್ಧಂ ತಸ್ಯ ಯಃ ಕರ್ತಾ ತ್ವಯ್ಯರ್ಧಂ ನಿಪತಿಷ್ಯತಿ ।
ನ ಚ ತೇ ಸ್ಥಾವರಂ ಸ್ಥಾನಂ ಭವಿಷ್ಯತಿ ನ ಸಂಶಯಃ ॥ ೩೬

ಯಶ್ಚ ಯಶ್ಚ ಸುರೇಂದ್ರ ಸ್ಯಾದ್ ಧ್ರುವಃ ಸ ನ ಭವಿಷ್ಯತಿ ।
ಏಷ ಶಾಪೋ ಮಯಾ ಮುಕ್ತ ಇತ್ಯಸೌ ತ್ವಾಂ ತದಾಬ್ರವೀತ್ ॥ ೩೭

ತಾಂ ತು ಭಾರ್ಯಾಂ ಸುನಿರ್ಭತ್ಸ್ಯ ಸೋಽಬ್ರವೀತ್ ಸುಮಹಾತಪಾಃ
ದುರ್ವಿನೀತೇ ವಿನಿಧ್ವಂಸ ಮಮಾಶ್ರಮಸಮೀಪತಃ ॥ ೩೮

ರೂಪಯೌವನಸಂಪನ್ನಾ ಯಸ್ಮಾತ್ತ್ವಮನವಸ್ಥಿತಾ ।
ತಸ್ಮಾದ್ರೂಪವತೀ ಲೋಕೇ ನ ತ್ವಮೇಕಾ ಭವಿಷ್ಯಸಿ ॥ ೩೯

ರೂಪಂ ಚ ತೇ ಪ್ರಜಾಃ ಸರ್ವಾ ಗಮಿಷ್ಯಂತಿ ನ ಸಂಶಯಃ ।
ಯತ್ತದೇಕಂ ಸಮಾಶ್ರಿತ್ಯ ವಿಭ್ರಮೋಽಯಮುಪಸ್ಥಿತಃ ॥ ೪೦

---

ಸೆರೆಯಾಗುತ್ತೀಯ ತ್ರಿಲೋಕಾಧಿಪತಿಯಾದ ನೀನು ಜಾರತನವನ್ನು ನಡೆಸಿದೆಯಾದ್ದರಿಂದ ಪ್ರಜೆಗಳಾದ ಮನುಷ್ಯರಲ್ಲಿಯೂ ಇನ್ನು ಜಾರತನವು ಕಂಡುಬರುವುದು ! ಸಂದೇಹವಿಲ್ಲ (೩೩-೩೫) ಇನ್ನುಮೇಲೆ ಲೋಕದಲ್ಲಿ ಯಾರು ಯಾರು ವ್ಯಭಿಚಾರವನ್ನು ನಡೆಸುವರೋ, ಅವರಿಗೆ ಆ ಪಾಪದಲ್ಲಿ ಅರ್ಧವೂ ಉಳಿದ ಪಾಪವು ನಿನ್ನ ತಲೆಗೂ ಕಟ್ಟುವುದು ! ನಿನ್ನ ಇಂದ್ರ ಪದವಿಯು ಎಂದಿಗೂ ಸ್ಥಿರವಾಗಿ ಉಳಿಯುವುದಿಲ್ಲ ಎಲೈ ದೇವೇಂದ್ರ, ನೀನೊಬ್ಬನೇ ಅಲ್ಲ, ಯಾವ ಯಾವನು ವ್ಯಭಿಚಾರಿಯಾಗುವನೋ, ಅವನ ಸ್ಥಾನವೂ ಭದ್ರವಾಗಿ ಉಳಿಯುವುದಿಲ್ಲ ! ಇದು ನಿಶ್ಚಯ ! ಇದು ನನ್ನ ಶಾಪ ! ” ಎಂದು ಶಪಿಸಿದನು (೩೬-೩೭) ಅನಂತರ ಗೌತಮನು ತನ್ನ ಮಡದಿಯನ್ನೂ ಗದರಿಸಿ “ ಎಲೌ ಧುಷ್ಟೆ, ತೊಲಗು ನನ್ನ ಆಶ್ರಮದಿಂದ ! ರೂಪಯೌವನಗಳಲ್ಲಿ ನನಗೆ ಎಣೆಯಿಲ್ಲವೆಂದು ಗರ್ವದಿಂದ ಬೀಗಿ ಚಾಪಲ್ಯದಿಂದಿ ನಡೆದೆಯಲ್ಲವೆ ? ಇನ್ನುಮೇಲೆ ನೀನೊಬ್ಬಳೇ ರೂಪವತಿಯಾಗಿರುವುದಿಲ್ಲ (೩೮-೩೯) ನಿನ್ನ ಸೌಂದರ್ಯವನ್ನು ಇತರ ಸ್ತ್ರೀಯರೂ ಪಡೆಯುವರು. ಈ ಸೌಂದರ್ಯದ ಮದದಿಂದ ತಾನೆ ನಿನ್ನ ತಲೆತಿರುಗಿತು ! ” ಎಂದನು

ತದಾಪ್ರಭೃತಿ ಭೂಯಿಷ್ಠಂ ಪ್ರಜಾ ರೂಪಸಮನ್ವಿತಾಃ ।
ಸಾ ತಂ ಪ್ರಸಾದಯಾಮಾಸ ಮಹರ್ಷಿಂ ಗೌತಮಂ ತದಾ ॥ ೪೧

ಅಜ್ಞಾನಾದ್ಧರ್ಷಿತಾ ನಾಥ ತದ್ರೂಪೇಣ ದಿವೌಕಸಾ ।
ನ ಕಾಮಕಾರಾದ್ವಿಪ್ರರ್ಷೇ ಪ್ರಸಾದಂ ಕರ್ತುಮರ್ಹಸಿ ॥ ೪೨

ಅಹಲ್ಯಯಾ ತ್ವೇವಮುಕ್ತಃ ಪ್ರತ್ಯುವಾಚ ಸ ಗೌತಮಃ ।
ಉತ್ಪತ್ಸ್ಯತಿ ಮಹಾತೇಜಾ ಇಕ್ಷ್ವಾಕೂಣಾಂ ಮಹಾರಥಃ ॥ ೪೩

ರಾಮೋ ನಾಮ ಶ್ರುತೋ ಲೋಕೇ ವನಂ ಚಾಪ್ಯುಪಯಾಸ್ಯತಿ ।
ಬ್ರಾಹ್ಮಣಾರ್ಥೇ ಮಹಾಬಾಹುರ್ವಿಷ್ಣುರ್ಮಾನುಷವಿಗ್ರಹಃ ॥ ೪೪

ತಂ ದ್ರಕ್ಷ್ಯಸಿ ಯದಾ ಭದ್ರೇ ತತಃ ಪೂತಾ ಭವಿಷ್ಯಸಿ ।
ಸ ಹಿ ಪಾವಯಿತುಂ ಶಕ್ತಸ್ತ್ವಯಾ ಯದ್‌ದುಷ್ಕೃತಂ ಕೃತಮ್ ॥ ೪೫

ತಸ್ಯಾತಿಥ್ಯಂ ಚ ಕೃತ್ವಾ ವೈ ಮತ್ಸಮೀಪಂ ಗಮಿಷ್ಯಸಿ ।
ವತ್ಸ್ಯಸಿ ತ್ವಂ ಮಯಾ ಸಾರ್ಧಂ ತದಾ ಹಿ ವರವರ್ಣಿನಿ ॥ ೪೬

---

(೪೦) ಇಂದ್ರ, ಅಲ್ಲಿಂದ ಮೊದಲು ಲೋಕದಲ್ಲಿ ಇತರ ಅಂಗನೆಯರೂ ರೂಪವತಿಯರಾದರು ಅಹಲ್ಯೆಯು ಗೌತಮಮಹರ್ಷಿಗೆ ವಂದಿಸಿ ವಿನಯದಿಂದ "ನಾಥ, ನನ್ನ ಅಜ್ಞಾನದಿಂದ ಹೀಗೆ ನಡೆಯಿತು ನಿನ್ನ ರೂಪವನ್ನೇ ಧರಿಸಿಬಂದ ಇಂದ್ರನು ನನ್ನನ್ನು ಅತಿಕ್ರಮಿಸಿದನು ಮಹರ್ಷಿಯೆ, ಇದು ನನ್ನ ಸ್ವೇಚ್ಛೆಯಿಂದ ಆದುದಲ್ಲ, ಪ್ರಸನ್ನನಾಗು" ಎಂದು ಪ್ರಾರ್ಥಿಸಿದಳು (೪೧-೪೨) ಅಹಲ್ಯೆಯು ಹೀಗೆನ್ನಲು ಗೌತಮನು "ಇರಲಿ, ಇಕ್ಷ್ವಾಕುವಂಶದಲ್ಲಿ ಮಹಾರಥನೂ ಮಹಾತೇಜಸ್ವಿಯೂ ಆದ ಶ್ರೀರಾಮನೆಂಬ ಕೀರ್ತಿಶಾಲಿಯು ಅವತರಿಸಿ, ವಿಪ್ರರ ಕಾರ್ಯನಿರ್ವಹಣೆಗಾಗಿ ಈ ವನಕ್ಕೆ ಬರುವನು ಮಹಾಬಾಹುವಾದ ಶ್ರೀಮನ್ನಾರಾಯಣನೇ ಮನುಷ್ಯರೂಪವನ್ನು ಧರಿಸಿ ಬರುವನು (೪೩-೪೪) ಅವನನ್ನು ನೀನು ಸಂದರ್ಶಿಸಿದಾಗ, ಭದ್ರೆ, ನೀನು ಪೂತಳಾಗುವೆ ನೀನು ಮಾಡಿದ ದುಷ್ಕೃತ್ಯವನ್ನು ಶುದ್ಧಿಗೊಳಿಸಲು ಆತನು ಸಮರ್ಥ ಶ್ರೀರಾಮನಿಗೆ ನೀನು ಆತಿಥ್ಯವನ್ನು ನೀಡಿ ಸತ್ಕರಿಸಿದಮೇಲೆ, ಪವಿತ್ರಳಾಗಿ ನನ್ನನ್ನು ಸೇರುವೆ ಆಮೇಲೆ, ಸುಂದರಿ, ನನ್ನೊಡನೆ ನೀನು

ಏವಮುಕ್ತ್ವಾ ಸ ವಿಪ್ರರ್ಷಿರಾಜಗಾಮ ಸ್ವಮಾಶ್ರಮಮ್ ।
ತಪಶ್ಚಚಾರ ಸುಮಹತ್ ಸಾ ಪತ್ನೀ ಬ್ರಹ್ಮವಾದಿನಃ ॥ ೪೭

ಶಾಪೋತ್ಸರ್ಗಾದ್ಧಿ ತಸ್ಯೇದಂ ಮುನೇಃ ಸರ್ವಮುಪಸ್ಥಿತಮ್ ।
ತತ್ಸ್ಮರ ತ್ವಂ ಮಹಾಬಾಹೋ ದುಷ್ಕೃತಂ ಯತ್ತ್ವಯಾ ಕೃತಮ್ ॥

ತೇನ ತ್ವಂ ಗ್ರಹಣಂ ಶತ್ರೋರ್ಯಾತೋ ನಾನ್ಯೇನ ವಾಸವ ।
ಶೀಘ್ರಂ ವೈ ಯಜ ಯಜ್ಞಂ ತ್ವಂ ವೈಷ್ಣವಂ ಸುಸಮಾಹಿತಃ ॥ ೪೯

ಪಾವಿತಸ್ತೇನ ಯಜ್ಞೇನ ಯಾಸ್ಯಸೇ ತ್ರಿದಿವಂ ತತಃ ।
ಪುತ್ರಶ್ಚ ತವ ದೇವೇಂದ್ರ ನ ವಿನಷ್ಟೋ ಮಹಾರಣೇ ॥ ೫೦

ನೀತಃ ಸನ್ನಿಹಿತಶ್ಚೈವ ಆರ್ಯಕೇಣ ಮಹೋದಧೌ ।
ಏತಚ್ಛ್ರುತ್ವಾ ಮಹೇಂದ್ರಸ್ತು ಯಜ್ಞಮಿಷ್ಟ್ವಾ ಚ ವೈಷ್ಣವಮ್ ॥

ಪುನಸ್ತ್ರಿದಿವಮಾಕ್ರಾಮದನ್ವಶಾಸಚ್ಚ ದೇವರಾಟ್ ।
ಏತದಿಂದ್ರಜಿತೋ ನಾಮ ಬಲಂ ಯತ್ ಕೀರ್ತಿತಂ ಮಯಾ ॥ ೫೧

---

ಇರಬಹುದು" ಎಂದು ಹೇಳಿ ತನ್ನ ಆಶ್ರಮಕ್ಕೆ ಹೋದನು ಬ್ರಹ್ಮಜ್ಞಾನಿಯಾದ ಆತನ ಪತ್ನಿಯು ಉಗ್ರವಾದ ತಪಸ್ಸಿನಲ್ಲಿ ನಿರತಳಾದಳು (೪೫-೪೭). ಇಂದ್ರ, ಗೌತಮಮುನಿಯು ಶಾಪದ ದೆಸೆಯಿಂದ ನಿನಗೆ ಈ ಅನರ್ಥವು ಸಂಭವಿಸಿತು ನೀನು ಮಾಡಿದ ಆ ದುಷ್ಕೃತ್ಯವನ್ನೀಗ ಸ್ಮರಿಸಿಕೊ! ಆದ್ದರಿಂದಲೇ ನೀನು ಶತ್ರುವಿಗೆ ಸೆರೆಯಾದೆ ಇನ್ನು ಯಾವ ಕಾರಣವೂ ಇಲ್ಲ ನೀನೀಗ ಶಾಂತಮನಸ್ಕನಾಗಿ ವೈಷ್ಣವಯಾಗವನ್ನು ಮಾಡು (೪೮-೪೯) ಅದರಿಂದ ಪರಿಶುದ್ಧನಾಗಿ ಮತ್ತೆ ದೇವಲೋಕದಲ್ಲಿ ಸ್ವಸ್ಥಾನವನ್ನು ಸೇರುವೆ ನಿನ್ನ ಮಗನಾದ ಜಯಂತನು ಯುದ್ಧದಲ್ಲಿ ಮೃತನಾಗಿಲ್ಲ, ಚಿಂತಿಸಬೇಡ ಅವನ ಮಾತಾಮಹನು ಸಮುದ್ರತಳಕ್ಕೆ ಕರೆದೊಯ್ದಿದ್ದಾನೆ ಜಯಂತನು ಅಲ್ಲಿ ಕುಶಲದಿಂದಿದ್ದಾನೆ" ಎಂದನು ಆಮೇಲೆ ಇಂದ್ರನು ವೈಷ್ಣವ ಯಾಗವನ್ನು ಮಾಡಿ ದೇವಲೋಕದಲ್ಲಿ ಮೊದಲಿನಂತೆ ಇಂದ್ರಪದವಿಯಲ್ಲಿ ಪ್ರತಿಷ್ಠಿತನಾದನು (೫೦-೫೧) ರಾಘವ, ಇಂದ್ರಜಿತುವಿನ ಪರಾಕ್ರಮವು ಇಂತಹದು ದೇವೇಂದ್ರನೇ ಅವನಿಗೆ ಸೋತುಹೋದನು.

*

ನಿರ್ಜಿತಸ್ತೇನ ದೇವೇಂದ್ರಃ ಪ್ರಾಣಿನೋಽನ್ಯೇ ತು ಕಿಂ ಪುನಃ ।
ಆಶ್ಚರ್ಯಮಿತಿ ರಾಮಶ್ಚ ಲಕ್ಷ್ಮಣಶ್ಚಾಬ್ರವೀತ್ತದಾ ॥ ೫೩

ಅಗಸ್ತ್ಯವಚನಂ ಶ್ರುತ್ವಾ ವಾನರಾ ರಾಕ್ಷಸಾಸ್ತದಾ ।
ವಿಭೀಷಣಸ್ತು ರಾಮಸ್ಯ ಪಾರ್ಶ್ವಸ್ಥೋ ವಾಕ್ಯಮಬ್ರವೀತ್ ॥ ೫೪

ಆಶ್ಚರ್ಯಂ ಸ್ಮಾರಿತೋಽಸ್ಮ್ಯದ್ಯ ಯತ್ತದ್‌ದೃಷ್ಟಂ ಪುರಾತನಮ್ ।
ಅಗಸ್ತ್ಯಂ ತ್ವಬ್ರವೀದ್ರಾಮಃ ಸತ್ಯಮೇತಚ್ಛ್ರುತಂ ಚ ಮೇ ॥ ೫೫

ಏವಂ ರಾಮ ಸಮುದ್ಭೂತೋ ರಾವಣೋ ಲೋಕಕಂಟಕಃ ।
ಸಪುತ್ರೋ ಯೇನ ಸಂಗ್ರಾಮೇ ಜಿತಃ ಶಕ್ರಃ ಸುರೇಶ್ವರಃ ॥ ೫೬

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರಿಂಶಃ ಸರ್ಗಃ



ಇನ್ನು ಇತರರ ವಿಷಯದಲ್ಲಿ ಹೇಳತಕ್ಕದ್ದೇನು ? " ಎಂಬುದಾಗಿ ಅಗಸ್ತ್ಯರು ಹೇಳಿದರು ಅದನ್ನು ಕೇಳಿ ಶ್ರೀರಾಮಲಕ್ಷ್ಮಣರು " ಅಹೋ ! ಅದ್ಭುತ ! " ಎಂದು ಉದ್ಗರಿಸಿದರು (೫೨-೫೩) ಅಲ್ಲಿದ್ದ ವಾನರರೂ ರಾಕ್ಷಸರೂ ಆಶ್ಚರ್ಯಚಕಿತರಾದರು ಶ್ರೀರಾಮನ ಬಳಿಯಲ್ಲಿದ್ದ ವಿಭೀಷಣನು " ಆಹಾ ! ಏನಚ್ಚರಿ ! ಹಿಂದೆ ನಾನು ನೋಡಿದ್ದು ನೆನಪಾಗಿ ಕಣ್ಣಿಗೆ ಕಟ್ಟಿದಂತಾಯಿತು ! " ಎಂದನು ಶ್ರೀರಾಮನು " ಅಗಸ್ತ್ಯಮಹರ್ಷಿಗಳೆ, ನೀವು ಹೇಳಿದುದು ಸತ್ಯ ಈ ವಿಷಯವನ್ನು ನಾನು ಕೇಳಿದ್ದೆನು " ಎಂದು ನುಡಿದನು ಅಗಸ್ತ್ಯರು " ರಘುನಾಥ, ರಣಭೂಮಿಯಲ್ಲಿ ಯಾವಾತನು ಪುತ್ರಸಹಿತನಾದ ಸುರೇಶ್ವರನನ್ನೇ ಪರಾಜಯಗೊಳಿಸಿದನೋ, ಅಂತಹ ರಾವಣನು ಈ ಪ್ರಕಾರದಲ್ಲಿ ಲೋಕಕಂಟಕನಾಗಿ ಮೆರೆದನು " ಎಂದು ನುಡಿದರು (೫೪-೫೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತನೆಯ ಸರ್ಗ



## ಏಕತ್ರಿಂಶಃ ಸರ್ಗಃ

### ರಾವಣನರ್ಮದಾವಗಾಹಃ

ತತೋ ರಾಮೋ ಮಹಾತೇಜಾ ವಿಸ್ಮಯಾತ್ ಪುನರೇವ ಹಿ ।
ಉವಾಚ ಪ್ರಣತೋ ವಾಕ್ಯಮಗಸ್ತ್ಯಮೃಷಿಸತ್ತಮಮ್ ॥ ೧

ಭಗವನ್ ರಾಕ್ಷಸಃ ಕ್ರೂರೋ ಯದಾಪ್ರಭೃತಿ ಮೇದಿನೀಮ್ ।
ಪರ್ಯಟತ್ ಕಿಂ ತದಾ ಲೋಕಾಃ ಶೂನ್ಯಾ ಆಸನ್ ದ್ವಿಜೋತ್ತಮ ॥

ರಾಜಾ ವಾ ರಾಜಮಾತ್ರೋ ವಾ ಕಿಂ ತದಾ ನಾತ್ರ ಕಶ್ಚನ ।
ಧರ್ಷಣಂ ಯೇನ ನ ಪ್ರಾಪ್ತೋ ರಾವಣೋ ರಾಕ್ಷಸೇಶ್ವರಃ ॥ ೩

ಉತಾಹೋ ಹತವೀರ್ಯಾಸ್ತೇ ಬಭೂವುಃ ಪೃಥಿವೀಕ್ಷಿತಃ ।
ಬಹಿಷ್ಕೃತಾ ವರಾಸ್ತ್ರೈಶ್ಚ ಬಹವೋ ನಿರ್ಜಿತಾ ನೃಪಾಃ ॥ ೪

ರಾಘವಸ್ಯ ವಚಃ ಶ್ರುತ್ವಾ ಹ್ಯಗಸ್ತ್ಯೋ ಭಗವಾನೃಷಿಃ ।
ಉವಾಚ ರಾಮಂ ಪ್ರಹಸನ್ ಪಿತಾಮಹ ಇವೇಶ್ವರಮ್ ॥ ೫

## ಸರ್ಗ ೩೧

ಪುನಃ ಶ್ರೀರಾಮನ ಪ್ರಶ್ನೆ  ನರ್ಮದಾ ನದಿಯಲ್ಲಿ ರಾವಣನು ಸ್ನಾನ ಮಾಡುವುದು, ಲಿಂಗಾರ್ಚನೆ – ಮುಂತಾದುದನ್ನು ಅಗಸ್ತ್ಯರು ತಿಳಿಸುವುದು.

ಅನಂತರ ವಿಸ್ಮಿತನಾದ ಶ್ರೀರಾಮನು ಅಗಸ್ತ್ಯಮಹರ್ಷಿಗಳಿಗೆ ವಂದಿಸಿ ಮತ್ತೆ ಪ್ರಶ್ನೆಮಾಡಿದನು. "ಭಗವನ್, ಕ್ರೂರನಾದ ಆ ರಾಕ್ಷಸನು ಆ ಪ್ರಕಾರವಾಗಿ ಜನರನ್ನು ಪೀಡಿಸುತ್ತ ಅಲೆಯುವಾಗ ಜಗತ್ತು ಶೂನ್ಯವಾಗಿತ್ತೆ? ಯಾವನಾದರೊಬ್ಬ ಕ್ಷತ್ರಿಯ ರಾಜನೋ ಇನ್ನೊಬ್ಬ ಸಮರ್ಥನಾದ ಭೂಪಾಲನೋ ಇರಲಿಲ್ಲವೆ? ಅವರು ಯಾರೂ ರಾವಣನನ್ನು ಅಡ್ಡಗಟ್ಟಲಿಲ್ಲವೆ? (೧-೩). ಅಥವಾ ರಾಜರೆಲ್ಲರೂ ಹತವೀರ್ಯರಾಗಿದ್ದರೆ? ದಿವ್ಯಾಸ್ತ್ರಗಳಿಲ್ಲದೆ ಅವರು ಸೋತುಹೋದರೆ?" ಎಂದು ಕೇಳಿದನು. ರಾಘವನ ನುಡಿಯನ್ನು ಕೇಳಿ ಅಗಸ್ತ್ಯಮುನಿಗಳು, ಪಿತಾಮಹನು ಪರಮೇಶ್ವರನಿಗೆ ಹೇಳುವಂತೆ, ಕಿರುನಗೆಯನ್ನು ಬೀರುತ್ತ ಹೀಗೆಂದರು

ಇತ್ಯೇವಂ ಬಾಧಮಾನಸ್ತು ಪಾರ್ಥಿವಾನ್ ಪಾರ್ಥಿವರ್ಷಭ ।
ಚಚಾರ ರಾವಣೋ ರಾಮ ಪೃಥಿವೀಂ ಪೃಥಿವೀಪತೇ ॥ ೬

ತತೋ ಮಾಹಿಷ್ಮತೀಂ ನಾಮ ಪುರೀಂ ಸ್ವರ್ಗಪುರೀಪ್ರಭಾಮ್ ।
ಸಂಪ್ರಾಪ್ತೋ ಯತ್ರ ಸಾನ್ನಿಧ್ಯಂ ಸದಾಸೀದ್ವಸುರೇತಸಃ ॥ ೭

ತುಲ್ಯ ಆಸೀನ್ನೃಪಸ್ತಸ್ಯ ಪ್ರಭಾವಾದ್ವಸುರೇತಸಃ ।
ಅರ್ಜುನೋ ನಾಮ ಯತ್ರಾಗ್ನಿಃ ಶರಕುಂಡೇಶಯಃ ಸದಾ ॥ ೮

ಯಮೇವ ದಿವಸಂ ಸೋಽಥ ಹೈಹಯಾಧಿಪತಿರ್ಬಲೀ ।
ಅರ್ಜುನೋ ನರ್ಮದಾಂ ರಂತುಂ ಗತಃ ಸ್ತ್ರೀಭಿಃ ಸಹೇಶ್ವರಃ ॥ ೯

ತಮೇವ ದಿವಸಂ ಸೋಽಥ ರಾವಣಸ್ತತ್ರ ಆಗತಃ ।
ರಾವಣೋ ರಾಕ್ಷಸೇಂದ್ರಸ್ತು ತಸ್ಯಾಮಾತ್ಯಾನಪೃಚ್ಛತ ॥ ೧೦

ಕ್ವಾರ್ಜುನೋ ನೃಪತಿಃ ಶೀಘ್ರಂ ಸಮ್ಯಗಾಖ್ಯಾತುಮರ್ಹಥ ।
ರಾವಣೋಽಹಮನುಪ್ರಾಪ್ತೋ ಯುದ್ಧೇಪ್ಸುರ್ನೃವರೇಣ ಹ ॥ ೧೧

---

(೪-೫). "ಮಹಾರಾಜ, ರಾವಣನು ಲೋಕಕಂಟಕನಾಗಿ ಜನರನ್ನು ಪೀಡಿಸುತ್ತ ಅಲೆಯುತ್ತಿರುವಾಗ, ಒಮ್ಮೆ ಸ್ವರ್ಗದಂತೆ ವಿರಾಜಿಸುತ್ತಿದ್ದ ಮಾಹಿಷ್ಮತೀನಗರಕ್ಕೆ ಹೋದನು ಆ ನಗರವನ್ನು (ಪ್ರಾಕಾರರೂಪದಿಂದ) ರಕ್ಷಿಸುತ್ತ ಅಗ್ನಿಯು ಸದಾ ಸನ್ನಿಹಿತನಾಗಿರುತ್ತಿದ್ದನು ಅಗ್ನಿಯ ಅನುಗ್ರಹ ದಿಂದ ಅಲ್ಲಿಯ ರಾಜನಾದ ಕಾರ್ತವೀರ್ಯಾರ್ಜುನನು ಅಗ್ನಿಯಂತೆ ಅಪ್ರತಿಮ ತೇಜಸ್ವಿಯಾಗಿದ್ದನು ಅಲ್ಲದೆ ದರ್ಭಾಸ್ತೃತವಾದ ಆತನ ಯಜ್ಞವೇದಿಕೆಯಲ್ಲಿ ಅಗ್ನಿದೇವನು ಆರದೆ ಸದಾ ನೆಲೆಸಿದ್ದನು! (೬-೮) ಹೈಹಯಾಧಿಪತಿಯಾದ ಆ ಕಾರ್ತವೀರ್ಯನು ತನ್ನ ಪತ್ನಿಯರೊಂದಿಗೆ ಜಲಕೇಳಿಯನ್ನಾಡಲು ನರ್ಮದಾನದಿಗೆ ಹೋಗಿದ್ದನು ಆ ದಿವಸವೇ ರಾವಣನು ಮಾಹಿಷ್ಮತಿಗೆ ಬಂದಿಳಿದನು. ಒಡನೆಯೇ ರಾಕ್ಷಸೇಂದ್ರನು ಅರ್ಜುನನ ಅಮಾತ್ಯರನ್ನು ಕಂಡು "ನಿಮ್ಮ ರಾಜನಾದ ಅರ್ಜುನನೆಲ್ಲಿರುವನು? ದಿಟವನ್ನು ಹೇಳಿರಿ ನಾನು ರಾವಣ! ಆತನೊಡನೆ ಯುದ್ಧಾರ್ಥಿಯಾಗಿ ಬಂದಿದ್ದೇನೆ (೯-೧೧)

ಮಮಾಗಮನಮವ್ಯಗ್ರೇ ಯುಷ್ಮಾಭಿಃ ಸಂನಿವೇದ್ಯತಾಮ್ ।
ಇತ್ಯೇವಂ ರಾವಣೋಕ್ತಾಸ್ತೇ ಅಮಾತ್ಯಾಃ ಸುವಿಪಶ್ಚಿತಃ ॥ ೧೨
ಅಬ್ರುವನ್ ರಾಕ್ಷಸಪತಿಮಸಾಂನಿಧ್ಯಂ ಮಹೀಪತೇಃ ।
ಶ್ರುತ್ವಾ ವಿಶ್ರವಸಃ ಪುತ್ರಃ ಪೌರಾಣಾಮರ್ಜುನಂ ಗತಮ್ ॥ ೧೩
ಅಪಸೃತ್ಯಾಗತೋ ವಿಂಧ್ಯಂ ಹಿಮವತ್ಸನ್ನಿಭಂ ಗಿರಿಮ್ ।
ಸ ತಮಭ್ರಮಿವಾವಿಷ್ಟಮುದ್ಭ್ರಾಂತಮಿವ ಮೇದಿನೀಮ್ ॥ ೧೪
ಅಪಶ್ಯದ್ರಾವಣೋ ವಿಂಧ್ಯಮಾಲಿಖಂತಮಿವಾಂಬರಮ್ ।
ಸಹಸ್ರಶಿಖರೋಪೇತಂ ಸಿಂಹಾಧ್ಯುಷಿತಕಂದರಮ್ ॥ ೧೫
ಪ್ರಪಾತಪತಿತೈಃ ಶೀತೈಃ ಸಾಟ್ಟಹಾಸಮಿವಾಂಬುಭಿಃ ।
ದೇವದಾನವಗಂಧರ್ವೈಃ ಸಾಪ್ಸರೋಗಣಕಿಂನರೈಃ ॥ ೧೬
ಸಸ್ತ್ರೀಭಿಃ ಕ್ರೀಡಮಾನೈಶ್ಚ ಸ್ವರ್ಗಭೂತಂ ಮಹೋಚ್ಛ್ರಯಮ್ ।
ನದೀಭಿಃ ಸ್ಯಂದಮಾನಾಭಿಃ ಸ್ಫಾಟಿಕಪ್ರತಿಮಂ ಜಲಮ್ ॥ ೧೭

---

ನಾನು ಬಂದಿರುವೆನೆಂದು ನಿಮ್ಮ ಪ್ರಭುವಿಗೆ ತಿಳಿಸಿರಿ" ಎಂದನು ರಾವಣನ ಮಾತನ್ನು ಕೇಳಿ ಜಾಣಾಕ್ಷರಾದ ಅಮಾತ್ಯರು "ನಮ್ಮೊಡೆಯನು ರಾಜಧಾನಿ ಯಲ್ಲಿಲ್ಲ" ಎಂದರು ಕಾರ್ತವೀರ್ಯನು ನಗರದಿಂದ ಹೊರಟುಹೋಗಿರುವ ನೆಂಬ ನುಡಿಯನ್ನು ಕೇಳಿ ರಾವಣನು ಹಿಂದಿರುಗಿ, ಹಿಮಾಚಲಸದೃಶವಾದ ವಿಂಧ್ಯಶೈಲಕ್ಕೆ ಹೋದನು ಆ ಶೈಲವಾದರೋ ಆಗಸದಲ್ಲಿ ಬಿತ್ತರಿಸಿದ ಮಹಾಮೇಘದಂತೆಯೂ ಭೂಮಿಯನ್ನು ಭೇದಿಸಿ ಮೇಲೆದ್ದಂತೆಯೂ ಕಾಣಿಸುತ್ತಿತ್ತು (೧೨-೧೪) ಅನಂತಶಿಖರಭೂಷಿತವಾಗಿಯೂ ಸಿಂಹ ಗಳಿರುವ ಗುಹೆಗಳಿಂದ ಯುಕ್ತವಾಗಿಯೂ ಇದ್ದ ವಿಂಧ್ಯವು ನಭೋಮಂಡಲ ವನ್ನು ಕೊರೆಯುವುದೋ ಎಂಬಂತೆ ಉನ್ನತವಾಗಿತ್ತು ಉನ್ನತವಾದ ಕೊರಕಲುಗಳಿಂದ ಶೀತಜಲಪ್ರವಾಹಗಳು ರಭಸದಿಂದ ಧುಮುಕುತ್ತಿರಲು, ವಿಂಧ್ಯವು ಘರ್ಘರಧ್ವನಿಯಿಂದ ಕೇಕೆಹಾಕಿ ನಗುವುದೋ ಎಂಬಂತೆ ಭಾಸವಾಗುತ್ತಿತ್ತು ದೇವ ದಾನವ ಗಂಧರ್ವ ಕಿನ್ನರರು ಅಪ್ಸರೆಯರೊಡನೆ ವಿಹರಿಸುತ್ತಿರುವಾಗ, ವೈಭವಶಾಲಿಯಾದ ಸ್ವರ್ಗವೋ ಎಂಬಂತೆ ರಂಜಿಸು ತ್ತಿತ್ತು (೧೫-೧೬) ಸ್ಫಟಿಕದಂತೆ ಸ್ವಚ್ಛವಾದ ಜಲವನ್ನು ಹೊತ್ತು ನದಿಗಳು

ಫಣಾಭಿಶ್ಚಲಜಿಹ್ವಾಭಿರನಂತಮಿವ ವಿಷ್ಠಿತಮ್ ।
ಉತ್ಕ್ರಾಮಂತಂ ದರೀಮಂತಂ ಹಿಮವತ್ಸಂನಿಭಂ ಗಿರಿಮ್ ॥ ೧೮
ಪಶ್ಯಮಾನಸ್ತತೋ ವಿಂಧ್ಯಂ ರಾವಣೋ ನರ್ಮದಾಂ ಯಯೌ ।
ಚಲೋಪಲಜಲಾಂ ಪುಣ್ಯಾಂ ಪಶ್ಚಿಮೋದಧಿಗಾಮಿನೀಮ್ ॥ ೧೯
ಮಹಿಷೈಃ ಸಮರೈಃ ಸಿಂಹೈಃ ಶಾರ್ದೂಲರ್ಕ್ಷಗಜೋತ್ತಮೈಃ ।
ಉಷ್ಣಾಭಿತಪ್ತೈಸ್ತೃಷಿತೈಃ ಸಂಕ್ಷೋಭಿತಜಲಾಶಯಾಮ್ ॥ ೨೦
ಚಕ್ರವಾಕೈಃ ಸಕಾರಂಡೈಃ ಸಹಂಸಜಲಕುಕ್ಕುಟೈಃ ।
ಸಾರಸೈಶ್ಚ ಸದಾ ಮತ್ತೈಃ ಸುಕೂಜದ್ಭಿಃ ಸಮಾವೃತಮ್ ॥ ೨೧
ಫುಲ್ಲದ್ರುಮಕೃತೋತ್ತಂಸಾಂ ಚಕ್ರವಾಕಯುಗಸ್ತನೀಮ್ ।
ವಿಸ್ತೀರ್ಣಪುಲಿನಶ್ರೋಣೀಂ ಹಂಸಾವಲಿಸುಮೇಖಲಾಮ್ ॥ ೨೨
ಪುಷ್ಪರೇಣ್ವನುಲಿಪ್ತಾಂಗೀಂ ಜಲಫೇನಾಮಲಾಂಶುಕಾಮ್ ।
ಜಲಾವಗಾಹಸಂಸ್ಪರ್ಶಾಂ ಫುಲ್ಲೋತ್ಪಲಶುಭೇಕ್ಷಣಾಮ್ ॥ ೨೩

---

ಸಾಗುತ್ತಿರಲು, ನಾಲಿಗೆಗಳನ್ನಲ್ಲಾಡಿಸುತ್ತಿರುವ ಸಹಸ್ರಫಣಾಮಂಡಿತನಾದ ಆದಿಶೇಷನಂತೆ ವಿಂಧ್ಯರಾಜನು ಶೋಭಿಸುತ್ತಿದ್ದನು! ಹಿಮಾಲಯದಂತೆ ಉನ್ನತವಾಗಿ ಗುಹಾಮಂಡಿತವಾದ ಆ ಪರ್ವತವನ್ನು ನೋಡುತ್ತ ರಾವಣನು ನರ್ಮದಾನದಿಗೆ ಬಂದನು ಆ ಪುಣ್ಯನದಿಯು ಬಂಡೆಗಳಮೇಲೆ ಧುಮುಕುತ್ತ ಪಡವಲ ಕಡಲಿಗೆ ಸಾಗುತ್ತಿತ್ತು (೧೭-೧೯) ಬಿಸಿಲಿಂದ ಬಳಲಿ ಬಾಯಾರಿದ ಕಾಡುಕೋಣ, ಜಿಂಕೆ, ಸಿಂಹ, ಶಾರ್ದೂಲ, ಕರಡಿ, ಆನೆ ಮುಂತಾದ ಪ್ರಾಣಿಗಳು ನದಿಯ ನೀರಲ್ಲಿ ನುಗ್ಗಿ ನೀರನ್ನು ಕುಡಿದು ಈಡಾಡುತ್ತಿದ್ದವು ಚಕ್ರವಾಕ, ಕಾರಂಡ, ಹಂಸ, ನೀರ್ಗೋಳಿ, ಸಾರಸ ಮುಂತಾದ ಪಕ್ಷಿಗಳು ಮದಿಸಿ ಕೂಗುತ್ತಿದ್ದವು (೨೦-೨೧) ನರ್ಮದಾನದಿಯೇ ಓರ್ವ ಮನೋಹರೆಯಾದ ಅಂಗನೆ! ಅರಳಿದ ಜಲಪುಷ್ಪಗಳನ್ನು ಮುಡಿದುಕೊಂಡಿರುವಳು ಚಕ್ರವಾಕಯುಗಳವೇ ಅವಳ ಸ್ತನದ್ವಯ ಪುಲಿನವೇ ವಿಶಾಲವಾದ ಶ್ರೋಣೀತಟ. ಹಂಸಮಾಲೆಯೇ ಮೇಖಲೆ ಆ ಸುಂದರಿಯು ಪುಷ್ಪರೇಣುಗಳನ್ನು ಮೈಗೆ ತೊಡೆದುಕೊಂಡಿರುವಳು ನೀರಿನ ನೊರೆಯೆಂಬ ಬಿಳಿಯ ಸೀರೆಯನ್ನುಟ್ಟಿರುವಳು ನೀರಲ್ಲಿಳಿದವರಿಗೆ ಆಕೆಯ ಸುಖಸ್ಪರ್ಶ ದೊರೆಯು

ಪುಷ್ಪಕಾದವರುಹ್ಯಾಶು ನರ್ಮದಾಂ ಸರಿತಾಂ ವರಾಮ್ ।
ಇಷ್ಟಾಮಿವ ವರಾಂ ನಾರೀಮವಗಾಹ್ಯ ದಶಾನನಃ ॥ ೨೪

ಸ ತಸ್ಯಾಃ ಪುಲಿನೇ ರಮ್ಯೇ ನಾನಾಮುನಿನಿಷೇವಿತೇ ।
ಉಪೋಪವಿಷ್ಟೈಃ ಸಚಿವೈಃ ಸಾರ್ಧಂ ರಾಕ್ಷಸಪುಂಗವಃ ॥ ೨೫

ಪ್ರಖ್ಯಾಯ ನರ್ಮದಾಂ ಚಾಥ ಗಂಗೇಯಮಿತಿ ರಾವಣಃ ।
ನರ್ಮದಾದರ್ಶಜಂ ಹರ್ಷಮಾಪ್ತವಾನ್ ರಾಕ್ಷಸಾಧಿಪಃ ॥ ೨೬

ತತಃ ಸಲೀಲಂ ಪ್ರಹಸನ್ ರಾವಣೋ ರಾಕ್ಷಸೇಶ್ವರಃ ।
ಉವಾಚ ಸಚಿವಾಂಸ್ತತ್ರ ಪ್ರಹಸ್ತಶುಕಸಾರಣಾನ್ ॥ ೨೭

ಏಷ ರಶ್ಮಿಸಹಸ್ರೇಣ ಜಗತ್ಕೃತ್ವೇವ ಕಾಂಚನಮ್ ।
ತೀಕ್ಷ್ಣತಾಪಕರಃ ಸೂರ್ಯೋ ನಭಸೋಽರ್ಧಂ ಸಮಾಶ್ರಿತಃ ॥ ೨೮

ಮಾಮಾಸೀನಂ ವಿದಿತ್ವೇಹ ಚಂದ್ರಾಯತಿ ದಿವಾಕರಃ ।
ನರ್ಮದಾಜಲಶೀತಶ್ಚ ಸುಗಂಧಿಃ ಶ್ರಮನಾಶನಃ ॥ ೨೯

---

ವುದು! ಅರಳಿದ ಕುವಲಯಗಳೇ ಅವಳ ಮುಗ್ಧನೇತ್ರಗಳು (೨೨-೨೩) ಒಡನೆಯೇ ದಶಾನನನು ಪುಷ್ಪಕವಿಮಾನದಿಂದಿಳಿದು, ಉತ್ತಮ ನಾಯಿಕೆಯಾದ ಕಾಂತೆಯಂತಿದ್ದ ನರ್ಮದಾನದಿಯಲ್ಲಿ ಮುಳುಗಿ ವಿಹರಿಸಿ ಸ್ನಾನ ಮಾಡಿದನು! ಅನಂತರ ಆ ರಾಕ್ಷಸಪುಂಗವನು ದಡವನ್ನು ಹತ್ತಿದನು. ನದೀತೀರವು ಮಹರ್ಷಿಗಳಿಂದ ಸೇವಿತವಾಗಿತ್ತು ರಾವಣನು ತನ್ನ ಸಚಿವರೊಡನೆ ಸೇರಿ "ಆಹಾ! ಈ ನರ್ಮದೆಯು ಎಷ್ಟು ಆನಂದಕರವಾಗಿದೆ! ಇದು ಸಾಕ್ಷಾತ್ ಗಂಗಾನದಿಯೇ!" ಎಂದು ಹೊಗಳುತ್ತ ಹರ್ಷಿಸಿದನು (೨೪-೨೬) ಆಮೇಲೆ ರಾಕ್ಷಸೇಶ್ವರನು ವಿನೋದದಿಂದ ನಗುತ್ತ ಪ್ರಹಸ್ತಾದಿ ಸಚಿವರನ್ನು ಕುರಿತು ಹೀಗೆಂದನು. "ಮಂತ್ರಿಗಳೆ, ಅಲ್ಲಿ ನೋಡಿರಿ. ಖರಕಿರಣನಾದ ಸೂರ್ಯನು ಗಗನದ ಅರ್ಧಭಾಗವನ್ನಡರಿದ್ದಾನೆ ತನ್ನ ಸಹಸ್ರಕಿರಣಗಳಿಂದ ಜಗತ್ತನ್ನೇ ಬಂಗಾರವಾಗಿ ಪರಿವರ್ತಿಸುತ್ತಿರುವಂತೆ ಕಾಣುತ್ತಾನೆ! (೨೭-೨೮). ಆದರೆ ನಾನು ಇಲ್ಲಿರುವೆನೆಂದರಿತು ಸೂರ್ಯನು ಚಂದ್ರನಂತೆ ಶೀತಲನಾಗಿದ್ದಾನೆ! ವಾಯುವೂ ಸಹ ನನಗೆ ಅಂಜಿ

ಮದ್ಭಯಾದನಿಲೋಽಪ್ಯತ್ರ ವಾತ್ಯೇಷ ಸುಸಮಾಹಿತಃ ।
ಇಯಂ ಚಾಪಿ ಸರಿಚ್ಛ್ರೇಷ್ಠಾ ನರ್ಮದಾ ನರ್ಮವರ್ಧಿನೀ ॥ ೩೦

ನಕ್ರಮೀನವಿಹಂಗೋರ್ಮಿಃ ಸಭಯೇವಾಂಗನಾ ಸ್ಥಿತಾ ।
ತದ್ಭವಂತಃ ಕ್ಷತಾಃ ಶಸ್ತ್ರೈರ್ನೃಪೈರಿಂದ್ರಸಮೈರ್ಯುಧಿ ॥ ೩೧

ಚಂದನಸ್ಯ ರಸೇನೇವ ರುಧಿರೇಣ ಸಮುಕ್ಷಿತಾಃ ।
ತೇ ಯೂಯಮವಗಾಹಧ್ವಂ ನರ್ಮದಾಂ ಶರ್ಮದಾಂ ಶುಭಾಮ್॥

ಮಹಾಪದ್ಮಮುಖಾ ಮತ್ತಾ ಗಂಗಾಮಿವ ಮಹಾಗಜಾಃ ।
ಅಸ್ಯಾಂ ಸ್ನಾತ್ವಾ ಮಹಾನದ್ಯಾಂ ಪಾಪ್ಮಾನಂ ವಿಪ್ರಮೋಕ್ಷ್ಯಥ ॥

ಅಹಮಪ್ಯದ್ಯ ಪುಲಿನೇ ಶರದಿಂದುಸಮಪ್ರಭೇ ।
ಪುಷ್ಪೋಪಹಾರಂ ಶನಕೈಃ ಕರಿಷ್ಯಾಮಿ ಕಪರ್ದಿನಃ ॥ ೩೪

---

ನರ್ಮದಾಜಲ ಸಂಸರ್ಗದಿಂದ ತಂಪಾಗಿ ನನ್ನ ಶ್ರಮವನ್ನು ಪರಿಹರಿಸುವುದಕ್ಕಾಗಿ ಮೆಲ್ಲನೆ ಎಚ್ಚರಿಕೆಯಿಂದ ಬೀಸುತ್ತಿದ್ದಾನೆ! ಶ್ರೇಷ್ಠನದಿಯಾದ ಈ ನರ್ಮದೆಯೂ ಸಹ ನನಗೆ *ನರ್ಮದಾಯಿನಿಯೇ ಆದಳು (೨೯-೩೦) ಅಲ್ಲಿ ನೋಡಿರಿ! ನಕ್ರಮೀನಗಳಿಂದಲೂ ಹಕ್ಕಿಗಳಿಂದಲೂ ಜನಿಸಿದ ಅಲೆಗಳೊಡನೆ, ಭಯದಿಂದ ನಡುಗುವ ಅಂಗನೆಯಂತೆ ಕಾಣಿಸುವಳು! ಈಗ ನೀವಾದರೋ ಇಂದ್ರಸಮಾನ ಪರಾಕ್ರಮಿಗಳಾದ ರಾಜರೊಡನೆ ಹೋರಾಡಿ ಶಸ್ತ್ರಗಳಿಂದ ಗಾಯಗೊಂಡಿದ್ದೀರಿ (೩೧) ಚಂದನರಸದಂತಿರುವ ನೆತ್ತರಲ್ಲಿ ನೆನೆದಿದ್ದೀರಿ. ‡ಶರ್ಮದೆಯಾದ ನರ್ಮದೆಯಲ್ಲಿ ನೀವೂ ಸ್ನಾನಮಾಡಿರಿ. ಪುಂಡರೀಕವೇ ಮೊದಲಾದ ಮದಿಸಿದ ದಿಗ್ಗಜಗಳು ಗಂಗೆಯಲ್ಲಿಳಿಯುವಂತೆ, ಈ ನದಿಯಲ್ಲಿಳಿಯಿರಿ. ಈ ಮಹಾನದಿಯಲ್ಲಿ ಮುಳುಗಿ ನಿಮ್ಮ ಪಾಪವನ್ನು ತೊಡೆದುಹಾಕಿರಿ! (೩೨-೩೩) ಶರಚ್ಚಂದ್ರ ಬಂಧುರವಾದ ಈ ಪುಲಿನದಲ್ಲಿ ನಾನು ಪುಷ್ಪಗಳನ್ನರ್ಪಿಸಿ ಪರಮೇಶ್ವರನನ್ನು ವಿರಾಮವಾಗಿ ಪೂಜಿಸುವೆನು"

---

* ನರ್ಮ = ಹರ್ಷ, ಪ್ರೇಮ, ವಿಲಾಸ

‡ ಶರ್ಮ = ಸುಖ.

ರಾವಣೇನೈವಮುಕ್ತಾಸ್ತು ಪ್ರಹಸ್ತಶುಕಸಾರಣಾಃ ।
ಸಮಹೋದರಧೂಮ್ರಾಕ್ಷಾ ನರ್ಮದಾಂ ವಿಜಗಾಹಿರೇ ॥ ೩೫

ರಾಕ್ಷಸೇಂದ್ರಗಜೈಸ್ತೈಸ್ತು ಕ್ಷೋಭಿತಾ ನರ್ಮದಾ ನದೀ ।
ವಾಮನಾಂಜನಪದ್ಮಾದ್ಯೈರ್ಗಂಗಾ ಇವ ಮಹಾಗಜೈಃ ॥ ೩೬

ತತಸ್ತೇ ರಾಕ್ಷಸಾಃ ಸ್ನಾತ್ವಾ ನರ್ಮದಾಯಾಂ ಮಹಾಬಲಾಃ ।
ಉತ್ತೀರ್ಯ ಪುಷ್ಪಾಣ್ಯಾಜಹ್ರುರ್ಬಲ್ಯರ್ಥಂ ರಾವಣಸ್ಯ ತು ॥ ೩೭

ನರ್ಮದಾಪುಲಿನೇ ಹೃದ್ಯೇ ಶುಭ್ರಾಭ್ರಸದೃಶಪ್ರಭೇ ।
ರಾಕ್ಷಸೈಸ್ತು ಮುಹೂರ್ತೇನ ಕೃತಃ ಪುಷ್ಪಮಯೋ ಗಿರಿಃ ॥ ೩೮

ಪುಷ್ಪೇಷೂಪಹೃತೇಷ್ವೇವಂ ರಾವಣೋ ರಾಕ್ಷಸೇಶ್ವರಃ ।
ಅವತೀರ್ಣೋ ನದೀಂ ಸ್ನಾತುಂ ಗಂಗಾಮಿವ ಮಹಾಗಜಃ ॥ ೩೯

ತತ್ರ ಸ್ನಾತ್ವಾ ಚ ವಿಧಿವಜ್ಜಪ್ತ್ವಾ ಜಪ್ಯಮನುತ್ತಮಮ್ ।
ನರ್ಮದಾಸಲಿಲಾತ್ತಸ್ಮಾದುತ್ತತಾರ ಸ ರಾವಣಃ ॥ ೪೦

---

ಎಂದನು. ರಾವಣನು ಹೀಗೆನ್ನಲು ಪ್ರಹಸ್ತ, ಶುಕ, ಸಾರಣ, ಮಹೋದರ, ಧೂಮ್ರಾಕ್ಷ–ಮುಂತಾದವರು ನದಿಯನ್ನು ಪ್ರವೇಶಿಸಿದರು ಮತ್ತಮಾತಂಗಗಳಂತಿದ್ದ ಆ ರಾಕ್ಷಸೇಂದ್ರರು ವಾಮನ, ಅಂಜನ, ಪುಂಡರೀಕ–ಮುಂತಾದ ದಿಗ್ಗಜಗಳು ಗಂಗಾನದಿಯಲ್ಲಿ ನುಗ್ಗಿ ಈಡಾಡುವಂತೆ ನರ್ಮದಾನದಿಯನ್ನು ಈಡಾಡಿದರು (೩೫–೩೬) ಹೀಗೆ ಆ ರಾಕ್ಷಸರು ನದಿಯಲ್ಲಿ ಮಿಂದು ಶಿವಾರ್ಚನೆಗಾಗಿ ರಾವಣನಿಗೆ ಹೂಗಳನ್ನು ಕಿತ್ತುತಂದರು ಬಿಳಿಯ ಮೋಡದಂತೆ ಬೆಳ್ಳಗಿದ್ದ ನರ್ಮದಾತೀರದ ಮರಳು ದಿಣ್ಣೆಯಮೇಲೆ ಆ ರಾಕ್ಷಸರು ಬೆಟ್ಟದಂತೆ ಪುಷ್ಪರಾಶಿಯನ್ನು ತಂದೊಟ್ಟಿದರು ಹೂಗಳನ್ನು ತಂದು ಪೇರಿಸಿದಮೇಲೆ ರಾಕ್ಷಸೇಶ್ವರನು ಮತ್ತೆ ಸ್ನಾನಕ್ಕಾಗಿ ನದಿಯಲ್ಲಿಳಿದನು (೩೭–೩೯). ಮಹಾಗಜವು ಗಂಗೆಯಲ್ಲಿಳಿಯುವಂತೆ ಇಳಿದು ಸ್ನಾನಮಾಡಿ, ವಿಧಿಪೂರ್ವಕವಾಗಿ ಮಂತ್ರಗಳನ್ನು ಜಪಿಸಿ, ನರ್ಮದಾಜಲದಿಂದ ರಾವಣನು ದಡಕ್ಕೆ ಬಂದನು ಅನಂತರ ರಾಕ್ಷಸೇಂದ್ರನು ಒದ್ದೆಯ ಬಟ್ಟೆಯನ್ನು ಬಿಚ್ಚಿ

ತತ್ರ ಕ್ಲಿನ್ನಾಂಬರಂ ತ್ಯಕ್ತ್ವಾ ಶುಕ್ಲವಸ್ತ್ರಸಮಾವೃತಮ್ ।
ರಾವಣಂ ಪ್ರಾಂಜಲಿಂ ಯಾಂತಮನ್ವಯುಃ ಸರ್ವರಾಕ್ಷಸಾಃ ॥ ೪೧

ತದ್ಗತೀವಶಮಾಪನ್ನಾ ಮೂರ್ತಿಮಂತ ಇವಾಚಲಾಃ ।
ಯತ್ರ ಯತ್ರ ಚ ಯಾತಿ ಸ್ಮ ರಾವಣೋ ರಾಕ್ಷಸೇಶ್ವರಃ ॥ ೪೨

ಜಾಂಬೂನದಮಯಂ ಲಿಂಗಂ ತತ್ರ ತತ್ರ ಸ್ಮ ನೀಯತೇ ।
ವಾಲುಕಾವೇದಿಮಧ್ಯೇ ತು ತಲ್ಲಿಂಗಂ ಸ್ಥಾಪ್ಯ ರಾವಣಃ ॥ ೪೩

ಅರ್ಚಯಾಮಾಸ ಗಂಧೈಶ್ಚ ಪುಷ್ಪೈಶ್ಚಾಮೃತಗಂಧಿಭಿಃ ॥

ತತಃ ಸತಾಮಾರ್ತಿಹರಂ ಪರಂ ವರಂ
ವರಪ್ರದಂ ಚಂದ್ರಮಯೂಖಭೂಷಣಮ್ ।
ಸಮರ್ಚಯಿತ್ವಾ ಸ ನಿಶಾಚರೋ ಜಗೌ
ಪ್ರಸಾರ್ಯ ಹಸ್ತಾನ್ ಪ್ರನನರ್ತ ಚಾಗ್ರತಃ ॥ ೪೪

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕತ್ರಿಂಶಃ ಸರ್ಗಃ

---

ಶುಭ್ರ ವಸ್ತ್ರವನ್ನು ಧರಿಸಿದನು ಆಮೇಲೆ ಶಿವಪೂಜಾರ್ಥವಾಗಿ ರಾವಣನು ಭಕ್ತಿಯಿಂದ ಕೈಮುಗಿದುಕೊಂಡು ಹೋಗುತ್ತಿರಲು, ಮೂರ್ತಿಮಂತರಾದ ಪರ್ವತಗಳಂತೆ ಪ್ರಹಸ್ತಾದಿಗಳು ಅವನನ್ನು ಹಿಂಬಾಲಿಸಿ ಹೋದರು (೪೦-೪೧) ರಾವಣನು ಎಲ್ಲಿಗೆ ಹೋದರೂ ಸುವರ್ಣಮಯವಾದ ಶಿವಲಿಂಗವನ್ನು ತನ್ನ ಜೊತೆಯಲ್ಲಿ ತೆಗೆದುಕೊಂಡು ಹೋಗುತ್ತಿದ್ದನು. ಮರಳಿನ ವೇದಿಕೆಯನ್ನು ರಚಿಸಿ ಅದರ ಮಧ್ಯದಲ್ಲಿ ಆ ಲಿಂಗವನ್ನು ಸ್ಥಾಪಿಸಿ, ಮಕರಂದಭರಿತ ಪುಷ್ಪಗಂಧಾದಿಗಳಿಂದ ರಾವಣನು ಈಶ್ವರನನ್ನು ಪೂಜಿಸಿದನು (೪೨-೪೩) ಸಜ್ಜನರ ಸಂಕಷ್ಟಗಳನ್ನು ಪರಿಹರಿಸಿ ಇಷ್ಟಾರ್ಥವನ್ನು ನೀಡುವವನೂ ಚಂದ್ರಕಲಾವಿಭೂಷಿತನೂ ಆದ ಪರಮೇಶ್ವರನನ್ನು ಅರ್ಚಿಸಿ, ರಾವಣನು ಸಾಮಗಾನದಿಂದ ಸ್ತುತಿಸಿದನು ಅಲ್ಲದೆ ಭಕ್ತಿಯಿಂದ ಕೈಗಳನ್ನು ಚಾಚಿ ಈಶ್ವರಲಿಂಗದೆದುರಿಗೆ ನರ್ತಿಸಿದನು (೪೪)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತೊಂದನೆಯ ಸರ್ಗ

## ದ್ವಾತ್ರಿಂಶಃ ಸರ್ಗಃ

### ರಾವಣಗ್ರಹಣಮ್

ನರ್ಮದಾಪುಲಿನೇ ಯತ್ರ ರಾಕ್ಷಸೇಂದ್ರಃ ಸುದಾರುಣಃ ।
ಪುಷ್ಪೋಪಹಾರಂ ಕುರುತೇ ತಸ್ಮಾದ್ದೇಶಾದದೂರತಃ ॥ ೧

ಅರ್ಜುನೋ ಜಯತಾಂ ಶ್ರೇಷ್ಠೋ ಮಾಹಿಷ್ಮತ್ಯಾಃ ಪತಿಃ ಪ್ರಭುಃ ।
ಕ್ರೀಡತೇ ಸಹ ನಾರೀಭಿರ್ನರ್ಮದಾತೋಯಮಾಶ್ರಿತಃ ॥ ೨

ತಾಸಾಂ ಮಧ್ಯಗತೋ ರಾಜಾ ರರಾಜ ಚ ತದಾರ್ಜುನಃ ।
ಕರೇಣೂನಾಂ ಸಹಸ್ರಸ್ಯ ಮಧ್ಯಸ್ಥ ಇವ ಕುಂಜರಃ ॥ ೩

ಜಿಜ್ಞಾಸುಃ ಸ ತು ಬಾಹೂನಾಂ ಸಹಸ್ರಸ್ಯೋತ್ತಮಂ ಬಲಮ್ ।
ರುರೋಧ ನರ್ಮದಾವೇಗಂ ಬಾಹುಭಿರ್ಬಹುಭಿರ್ವೃತಃ ॥ ೪

ಕಾರ್ತವೀರ್ಯಭುಜಾಸಕ್ತಂ ತಜ್ಜಲಂ ಪ್ರಾಪ್ಯ ನಿರ್ಮಲಮ್ ।
ಕೂಲೋಪಹಾರಂ ಕುರ್ವಾಣಂ ಪ್ರತಿಸ್ರೋತಃ ಪ್ರಧಾವತಿ ॥ ೫

### ಸರ್ಗ ೩೨

ಕಾರ್ತವೀರ್ಯನು ಯುದ್ಧದಲ್ಲಿ ರಾವಣನನ್ನು ಸೆರೆಹಿಡಿದು
ತನ್ನ ನಗರಕ್ಕೆ ಎಳೆದೊಯ್ಯುವುದು

ಶ್ರೀರಾಮ, ದಾರುಣಸ್ವಭಾವದ ರಾಕ್ಷಸೇಂದ್ರನು ನರ್ಮದಾಪುಲಿನದಲ್ಲಿ ಹೂಗಳಿಂದ ಶಿವಾರ್ಚನೆಗೈಯುತ್ತಿದ್ದನಷ್ಟೆ. ಅಲ್ಲಿಗೆ ಸ್ವಲ್ಪದೂರದಲ್ಲಿಯೇ ಮಾಹಿಷ್ಮತೀಶ್ವರನೂ ವೀರಾಗ್ರಣಿಯೂ ಆದ ಕಾರ್ತವೀರ್ಯಾರ್ಜುನನು ನರ್ಮದಾಜಲದಲ್ಲಿ ಅಂಗನೆಯರೊಡನೆ ಜಲಕೇಳಿಯನ್ನಾಡುತ್ತಿದ್ದನು (೧-೨). ಆ ರಮಣಿಯರ ಮಧ್ಯದಲ್ಲಿದ್ದ ಅರ್ಜುನನು, ಸಾವಿರಾರು ಹೆಣ್ಣಾನೆಗಳ ನಡುವೆ ಇರುವ ಗಜರಾಜನಂತೆ ಶೋಭಿಸುತ್ತಿದ್ದನು. ಆಗ ತನ್ನ ಸಾವಿರ ತೋಳುಗಳ ಬಲವನ್ನು ಪರೀಕ್ಷಿಸಬೇಕೆಂದು, ಆತನು ಬಾಹುಗಳನ್ನು ನೀಡಿ ನರ್ಮದಾ ಪ್ರವಾಹವನ್ನು ಅಡ್ಡಗಟ್ಟಿದನು! (೩-೪) ಕಾರ್ತವೀರ್ಯನ ಭುಜಗಳಿಂದ ನಿರುದ್ಧವಾದ ನರ್ಮದೆಯ ತಿಳಿನೀರು ಹಿಮ್ಮೊಗವಾಗಿ ಹರಿದು, ದಡದಲ್ಲಿ

ಸಮೀನನಕ್ರಮಕರಃ ಸಪುಷ್ಪಕುಶಸಂಸ್ತರಃ ।
ಸ ನರ್ಮದಾಂಭಸೋ ವೇಗಃ ಪ್ರಾವೃಟ್ಕಾಲ ಇವಾಬಭೌ ॥ ೬

ಸ ವೇಗಃ ಕಾರ್ತವೀರ್ಯೇಣ ಸಂಪ್ರೇಷಿತ ಇವಾಂಭಸಃ ।
ಪುಷ್ಪೋಪಹಾರಂ ಸಕಲಂ ರಾವಣಸ್ಯ ಜಹಾರ ಹ ॥ ೭

ರಾವಣೋಽರ್ಧಸಮಾಪ್ತಂ ತಮುತ್ಸೃಜ್ಯ ನಿಯಮಂ ತದಾ ।
ನರ್ಮದಾಂ ಪಶ್ಯತೇ ಕಾಂತಾಂ ಪ್ರತಿಕೂಲಾಂ ಯಥಾ ಪ್ರಿಯಾಮ್

ಪಶ್ಚಿಮೇನ ತು ತಂ ದೃಷ್ಟ್ವಾ ಸಾಗರೋದ್ಗಾರಸಂನಿಭಮ್ ।
ವರ್ಧಂತಮಂಭಸೋ ವೇಗಂ ಪೂರ್ವಾಮಾಶಾಂ ಪ್ರವಿಶ್ಯ ತು ॥ ೯

ತತೋಽನುದ್ಭ್ರಾಂತಶಕುನಾಂ ಸ್ವಭಾವೋಪರಮೇ ಸ್ಥಿತಾಮ್ ।
ನಿರ್ವಿಕಾರಾಂಗನಾಭಾಸಾಮಪಶ್ಯದ್ರಾವಣೋ ನದೀಮ್ ॥ ೧೦

---

ಲಿಂಗಾರ್ಚನೆಗೈಯುತ್ತಿದ್ದ ರಾವಣನ ಕಡೆಗೆ ನುಗ್ಗಿತು ಮೀನ, ಮಕರ, ನಕ್ರಗಳಿಂದಲೂ ಹೂ, ದರ್ಭೆಹುಲ್ಲುಗಳಿಂದಲೂ ವ್ಯಾಪ್ತವಾದ ನೀರು, ಮಳೆಗಾಲದಲ್ಲಿ ರಭಸದಿಂದ ನುಗ್ಗುವ ನದೀಪ್ರವಾಹದಂತೆ ಕಂಗೊಳಿಸಿತು (೫-೬) ಕಾರ್ತವೀರ್ಯನೇ ಉದ್ದೇಶಪೂರ್ವಕವಾಗಿ ಕಳಿಸಿದನೋ ಎಂಬಂತೆ ನುಗ್ಗಿಬಂದ ಪ್ರವಾಹವು ರಾವಣನ ಪೂಜಾಪುಷ್ಪಗಳನ್ನು ತೇಲಿಸಿಕೊಂಡು ಹೋಯಿತು! ರಾವಣನ ಲಿಂಗಾರ್ಚನೆಯು ಇನ್ನೂ ಮುಗಿದಿರಲಿಲ್ಲ ಅಷ್ಟರಲ್ಲಿಯೇ ಹೀಗಾದುದರಿಂದ ಆತನು ಅರ್ಚನೆಯನ್ನು ನಿಲ್ಲಿಸಿ, ನರ್ಮದಾ ನದಿಯನ್ನು ನೋಡುತ್ತ ನಿಂತನು ಆಗ ನರ್ಮದೆಯು, ಇದ್ದಕ್ಕಿದ್ದಂತೆ ಪ್ರತಿಕೂಲಳಾಗಿ ಜಗಳಕ್ಕೆ ನಿಂತ ಮಡದಿಯಂತೆ ಅವನಿಗೆ ಕಾಣಿಸಿದಳು! (೭-೮) ಪಶ್ಚಿಮದಿಕ್ಕಿನಿಂದ ಸಾಗರಪೂರದಂತೆ ಪೂರ್ವದಿಕ್ಕಿಗೆ ಏರಿಬರುತ್ತಿರುವ ನೀರಿನ ವೇಗವನ್ನು ರಾವಣನು ನೋಡುತ್ತ ನಿಂತನು ಅನಂತರ ನದಿಯು ಪೂರ್ಣವಾಗಿ ತುಂಬಲು, ಸಹಜವಾದ ಹರಿಯುವ ವೇಗವು ನಿಂತಿತು ನೀರುಹಕ್ಕಿಗಳು ಹಾರಾಡದೆ ಸುಮ್ಮನಾದವು. ಉದ್ವೇಗವಿಳಿದ ಅಂಗನೆಯಂತೆ ನರ್ಮದೆಯು ಪ್ರಶಾಂತಳಾಗಿ ತೋರಿದಳು! (೯-೧೦).

ಸವ್ಯೇತರಕರಾಂಗುಲ್ಯಾ ಸಶಬ್ದಂ ಚ ದಶಾನನಃ ।
ವೇಗಪ್ರಭವಮನ್ವೇಷ್ಟುಂ ಸೋऽದಿಶಚ್ಛುಕಸಾರಣೌ ॥ ೧೧

ತೌ ತು ರಾವಣಸಂದಿಷ್ಟೌ ಭ್ರಾತರೌ ಶುಕಸಾರಣೌ ।
ವ್ಯೋಮಾಂತರಗತೌ ವೀರೌ ಪ್ರಸ್ಥಿತೌ ಪಶ್ಚಿಮೋನ್ಮುಖೌ ॥ ೧೨

ಅರ್ಧಯೋಜನಮಾತ್ರಂ ತು ಗತ್ವಾ ತೌ ರಜನೀಚರೌ ।
ಪಶ್ಯೇತಾಂ ಪುರುಷಂ ತೋಯೇ ಕ್ರೀಡಂತಂ ಸಹಯೋಷಿತಮ್ ॥

ಬೃಹತ್ಸಾಲಪ್ರತೀಕಾಶಂ ತೋಯವ್ಯಾಕುಲಮೂರ್ಧಜಮ್ ।
ಮದರಕ್ತಾಂತನಯನಂ ಮದವ್ಯಾಕುಲತೇಜಸಮ್ ॥ ೧೪

ನದೀಂ ಬಾಹುಸಹಸ್ರೇಣ ರುಂಧಂತಮರಿಮರ್ದನಮ್ ।
ಗಿರಿಂ ಪಾದಸಹಸ್ರೇಣ ರುಂಧಂತಮಿವ ಮೇದಿನೀಮ್ ॥ ೧೫

ಬಾಲಾನಾಂ ವರನಾರೀಣಾಂ ಸಹಸ್ರೇಣ ಸಮಾವೃತಮ್ ।
ಸಮದಾನಾಂ ಕರೇಣೂನಾಂ ಸಹಸ್ರೇಣೇವ ಕುಂಜರಮ್ ॥ ೧೬

---

ಆಗ ದಶಗ್ರೀವನು ಹೂಂಕರಿಸಿ ಬಲಗೈ ಬೆರಳಿನಿಂದ ಶುಕಸಾರಣರನ್ನು ಕರೆದು "ನದಿಯು ಏಕೆ ಹೀಗೆ ನುಗ್ಗಿತೆಂಬುದನ್ನು ತಿಳಿದು ಬನ್ನಿರಿ" ಎಂದು ಅಪ್ಪಣೆಮಾಡಿದನು ಅವನ ಆಜ್ಞೆಯಂತೆ ಸಹೋದರರಾದ ಶುಕಸಾರಣರು ನಭೋಮಾರ್ಗವನ್ನಡರಿ ಪಶ್ಚಿಮದಿಕ್ಕಿಗೆ ತೆರಳಿದರು (೧೧-೧೨). ಆ ನಿಶಾಚರರು ಅರ್ಧಯೋಜನದವರೆಗೆ ಹೋದಾಗ, ನದೀಜಲದಲ್ಲಿ ಕ್ರೀಡಿಸುತ್ತ ಮಹಾ ಸಾಲವೃಕ್ಷದಂತೆ ಉನ್ನತಾಕಾರನಾದ ಒಬ್ಬ ಪುರುಷನನ್ನು ಕಂಡರು. ಅವನ ಕೇಶರಾಶಿಯು ನೀರಿಂದ ನೆನೆದು ಹರಡಿತ್ತು ಆತನು ಕ್ರೀಡಾವೇಶದಿಂದಾದ ಮದದಿಂದ ತೇಜಸ್ವಿಯಾಗಿಯೂ ಕೆಂಪಡರಿದ ನೇತ್ರಾಂತವುಳ್ಳವನಾಗಿಯೂ ಇದ್ದನು (೧೩-೧೪) ಆ ವೀರನು ತನ್ನ ಸಹಸ್ರಬಾಹುಗಳಿಂದ ನದಿಯನ್ನಡ್ಡಗಟ್ಟಿ, ಪರಿಸರದ ಬೆಟ್ಟಗಳಿಂದ ಭೂಮಿಯನ್ನೇ ವ್ಯಾಪಿಸಿ ನಿಂತ ಪರ್ವತರಾಜನಂತೆ ಕಂಗೊಳಿಸುತ್ತಿದ್ದನು ಸಾವಿರಾರು ರಮಣಿಯರಿಂದ ಪರಿವೃತನಾದ ಆ ಪುರುಷನು, ಮದಿಸಿದ ಹೆಣ್ಣಾನೆಗಳೊಡನೆ ವಿಹರಿಸುವ

ತಮದ್ಭುತತಮಂ ದೃಷ್ಟ್ವಾ ರಾಕ್ಷಸೌ ಶುಕಸಾರಣೌ ।
ಸಂನಿವೃತ್ತಾವುಪಾಗಮ್ಯ ರಾವಣಂ ತಮಥೋಚತುಃ ॥ ೧೭

ಬೃಹತ್ಸಾಲಪ್ರತೀಕಾಶಃ ಕೋಽಪ್ಯಸೌ ರಾಕ್ಷಸೇಶ್ವರ ।
ನರ್ಮದಾಂ ರೋಧವದ್ರುದ್ಧ್ವಾ ಕ್ರೀಡಾಪಯತಿ ಯೋಷಿತಃ ॥ ೧೮

ತೇನ ಬಾಹುಸಹಸ್ರೇಣ ಸಂನಿರುದ್ಧಜಲಾ ನದೀ ।
ಸಾಗರೋದ್ಗಾರಸಂಕಾಶಾನುದ್ಗಾರಾನ್ ಸೃಜತೇ ಮುಹುಃ ॥ ೧೯

ಇತ್ಯೇವಂ ಭಾಷಮಾಣೌ ತೌ ನಿಶಮ್ಯ ಶುಕಸಾರಣೌ ।
ರಾವಣೋಽರ್ಜುನ ಇತ್ಯುಕ್ತ್ವಾ ಪ್ರಯಯೌ ಯುದ್ಧಲಾಲಸಃ ॥ ೨೦

ಅರ್ಜುನಾಭಿಮುಖೇ ತಸ್ಮಿನ್ ರಾವಣೇ ರಾಕ್ಷಸಾಧಿಪೇ ।
ಚಂಡಃ ಪ್ರವಾತಿ ಪವನಃ ಸನಾದಃ ಸರಜಾಸ್ತದಾ ॥ ೨೧

ಸಕೃದೇವ ಕೃತೋ ರಾವಃ ಸರಕ್ತಃ ಪ್ರೇಷಿತೋ ಘನೈಃ ।
ಮಹೋದರಮಹಾಪಾರ್ಶ್ವಧೂಮ್ರಾಕ್ಷಶುಕಸಾರಣೈಃ ॥ ೨೨

---

ಸಲಗದಂತೆ ಗೋಚರಿಸಿದನು (೧೫-೧೬) ಶುಕಸಾರಣರು ಅದ್ಭುತವಾದ ಆ ದೃಶ್ಯವನ್ನು ನೋಡಿ, ಹಿಂದಿರುಗಿ ಬಂದು ರಾವಣನನ್ನು ನೋಡಿ ಇಂತೆಂದರು: "ರಾಕ್ಷಸೇಶ್ವರ, ಮಹಾಸಾಲವೃಕ್ಷದಂತೆ ಗೋಚರಿಸುವ ಒಬ್ಬಾನೊಬ್ಬ ಪುರುಷನು ಅಡ್ಡಗಟ್ಟೆಯಂತೆ ನರ್ಮದೆಯನ್ನು ತಡೆದು, ಸ್ತ್ರೀಯರೊಡನೆ ಜಲಕೇಳಿಯನ್ನಾಡುತ್ತಿದ್ದಾನೆ (೧೭-೧೮) ಅವನು ತನ್ನ ಸಹಸ್ರ ಬಾಹುಗಳಿಂದ ನದಿಯನ್ನು ಅಡ್ಡಗಟ್ಟಿದ್ದಾನೆ ಆದ್ದರಿಂದಲೇ ನದಿಯು ಹಿಮ್ಮುಖವಾಗಿ ಸಮುದ್ರದಂತೆ ನುಗ್ಗಿಬಂದಿದೆ!" ಎಂದರು ಶುಕಸಾರಣರು ಹೀಗೆಂದೊಡನೆ ರಾವಣನು "ಓಹೊ! ಅವನೇ ಅರ್ಜುನ!" ಎಂದು ಉದ್ಗರಿಸಿ ಯುದ್ಧಲಾಲಸೆಯಿಂದ ಅಲ್ಲಿಗೆ ಹೊರಟೇಬಿಟ್ಟನು (೧೯-೨೦). ರಾಕ್ಷಸೇಂದ್ರನು ಕಾರ್ತವೀರ್ಯನಿಗೆ ಅಭಿಮುಖನಾಗಿ ಹೊರಡಲು, ಚಂಡ ಮಾರುತವು ಧೂಳನ್ನು ಕೆದರಿ ಭರ್ರೆಂದು ಬೀಸಿತು ಮೋಡವು ಕೆನ್ನೀರು ಸುರಿಸುತ್ತ ಒಂದೇ ಸಲ* ಗುಡುಗಿತು ರಾವಣನು ಮಹೋದರಾದಿಗಳಿಂದ

* ಇದು ಅಪಶಕುನವೆಂದು ಅಭಿಪ್ರಾಯ

ಸಂವೃತೋ ರಾಕ್ಷಸೇಂದ್ರಸ್ತು ತತ್ರಾಗಾದ್ಯತ್ರ ಚಾರ್ಜುನಃ ।
ಅದೀರ್ಘೇಣೈವ ಕಾಲೇನ ಸ ತದಾ ರಾಕ್ಷಸೋ ಬಲೀ ॥ ೨೩

ತಂ ನರ್ಮದಾಹ್ರದಂ ಭೀಮಮಾಜಗಾಮಾಂಜನಪ್ರಭಃ ।
ಸ ತತ್ರ ಸ್ತ್ರೀಪರಿವೃತಂ ವಾಸಿತಾಭಿರಿವ ದ್ವಿಪಮ್ ॥ ೨೪

ನರೇಂದ್ರಂ ಪಶ್ಯತೇ ರಾಜಾ ರಾಕ್ಷಸಾನಾಂ ತದಾರ್ಜುನಮ್ ।
ಸ ರೋಷಾದ್ರಕ್ತನಯನೋ ರಾಕ್ಷಸೇಂದ್ರೋ ಬಲೋದ್ಧತಃ ॥ ೨೫

ಇತ್ಯೇವಮರ್ಜುನಾಮಾತ್ಯಾನಾಹ ಗಂಭೀರಯಾ ಗಿರಾ ।
ಅಮಾತ್ಯಾಃ ಕ್ಷಿಪ್ರಮಾಖ್ಯಾತ ಹೈಹಯಸ್ಯ ನೃಪಸ್ಯ ವೈ ॥ ೨೬

ಯುದ್ಧಾರ್ಥೀ ಸಮನುಪ್ರಾಪ್ತೋ ರಾವಣೋ ನಾಮ ರಾಕ್ಷಸಃ ।
ರಾವಣಸ್ಯ ವಚಃ ಶ್ರುತ್ವಾ ಮಂತ್ರಿಣೋಽಥಾರ್ಜುನಸ್ಯ ತೇ ॥ ೨೭

ಉತ್ತಸ್ಥುಃ ಸಾಯುಧಾಸ್ತ್ರಾಶ್ಚ ರಾವಣಂ ವಾಕ್ಯಮಬ್ರುವನ್ ।
ಯುದ್ಧಸ್ಯ ಕಾಲೋ ವಿಜ್ಞಾತಃ ಸಾಧು ಭೋಃ ಸಾಧು ರಾವಣ ॥

ಯಃ ಕ್ಷೀಬಂ ಸ್ತ್ರೀವೃತಂ ಚೈವ ಯೋದ್ಧುಮುತ್ಸಹಸೇ ನೃಪಮ್ ।
ಸ್ತ್ರೀಸಮಕ್ಷಂ ಕಥಂ ಯತ್ತದ್ಯೋದ್ಧುಮುತ್ಸಹಸೇಽರ್ಜುನಮ್ ॥

---

ಪರಿವೃತನಾಗಿ ಅರ್ಜುನನಿದ್ದೆಡೆಗೆ ಸಾಗಿದನು ಅಂಜನಗಿರಿಯಂತೆ ಕರಿಯನೂ ಬಲಾಢ್ಯನೂ ಆದ ಆ ರಾಕ್ಷಸನು, ಕಾರ್ತವೀರ್ಯನು ಜಲಕೇಳಿಯನ್ನಾಡುತ್ತಿದ್ದ ನರ್ಮದಾಹ್ರದಕ್ಕೆ ಶೀಘ್ರದಲ್ಲಿ ಬಂದು ಸೇರಿದನು (೨೧-೨೩). ಹೆಣ್ಣಾನೆಗಳೊಡನೆ ಮೆರೆಯುವ ಸಲಗನಂತೆ ಸ್ತ್ರೀಯರೊಡನೆ ವಿಹರಿಸುತ್ತಿದ್ದ ಅರ್ಜುನನನ್ನು ನೋಡಿ, ರಾವಣನ ನೇತ್ರಗಳು ರೋಷರಕ್ತವಾದವು. ಆ ಬಲೋದ್ಧತನು ಅರ್ಜುನನ ಸಚಿವರನ್ನು ಕರೆದು ಗಂಭೀರ ಧ್ವನಿಯಿಂದ "ಎಲೈ ಸಚಿವರೆ, ನಿಮ್ಮ ಹೈಹಯೇಶ್ವರನಿಗೆ ಈ ಮಾತನ್ನು ತಿಳಿಸಿರಿ. ರಾವಣನೆಂಬ ರಾಕ್ಷಸನು ಯುದ್ಧಾಪೇಕ್ಷೆಯಿಂದ ಬಂದಿರುವನೆಂದು ಹೇಳಿರಿ" ಎಂದನು (೨೪-೨೬) ಆಗ ಹೈಹಯರಾಜನ ಮಂತ್ರಿಗಳು ಆಯುಧಧಾರಿಗಳಾಗಿ ಎದ್ದುನಿಂತು "ಭಲೆ! ರಾವಣ, ಭಲೆ! ಯುದ್ಧ ಸಮಯವು ಯಾವುದೆಂಬುದನ್ನು ಬಹಳ ಚೆನ್ನಾಗಿ ಬಲ್ಲೆ ನೀನು! ಮಧುಪಾನಮತ್ತನಾಗಿ ಸ್ತ್ರೀಪರಿವೃತನಾದವನೊಡನೆ ಯುದ್ಧಮಾಡಲು ಬಯಸುವೆಯಲ್ಲವೆ? ಹೆಂಗಸರೆದುರಿಗೆ

ನಾಸಿತಾಮಧ್ಯಗಂ ಮತ್ತಂ ಶಾರ್ದೂಲ ಇವ ಕುಂಜರಮ್ ।
ಕ್ಷಮಸ್ವಾದ್ಯ ದಶಗ್ರೀವ ಚೋಷ್ಯತಾಂ ಶರ್ವರೀ ತ್ವಯಾ ॥ ೩೦

ಯುದ್ಧೇ ಶ್ರದ್ಧಾ ಚ ಯದ್ಯಸ್ತಿ ಶ್ವಸ್ತಾತ ಸಮರೇಽರ್ಜುನಮ್ ।
ಯದ್ಯದ್ಯಾಸ್ತಿ ಮತಿರ್ಯೋದ್ಧುಂ ಯುದ್ಧತೃಷ್ಣಾಸಮಾವೃತಾ ॥ ೩೧

ನಿಹತ್ಯಾಸ್ಮಾಂಸ್ತತೋ ಯುದ್ಧಮರ್ಜುನೇನೋಪಯಾಸ್ಯಸಿ ।
ತತಸ್ತೇ ರಾವಣಾಮಾತ್ಯೈರಮಾತ್ಯಾಃ ಪಾರ್ಥಿವಸ್ಯ ತು ॥ ೩೨

ಸೂದಿತಾಶ್ಚಾಪಿ ತೇ ಯುದ್ಧೇ ಭಕ್ಷಿತಾಶ್ಚ ಬುಭುಕ್ಷಿತೈಃ ।
ತತೋ ಹಲಹಲಾಶಬ್ದೋ ನರ್ಮದಾತೀರ ಆಬಭೌ ॥ ೩೩

ಅರ್ಜುನಸ್ಯಾನುಯಾತ್ರಾಣಾಂ ರಾವಣಸ್ಯ ಚ ಮಂತ್ರಿಣಾಮ್ ।
ಇಷುಭಿಸ್ತೋಮರೈಃ ಶೂಲೈಸ್ತ್ರಿಶೂಲೈರ್ವಜ್ರಕರ್ಷಣೈಃ ॥ ೩೪

ಸರಾವಣಾನರ್ದಯಂತಃ ಸಮಂತಾತ್ ಸಮಭಿದ್ರುತಾಃ ।
ಹೈಹಯಾಧಿಪಯೋಧಾನಾಂ ವೇಗ ಆಸೀತ್ ಸುದಾರುಣಃ ॥ ೩೫

---

ಅರ್ಜುನನೊಡನೆ ಹೇಗೆ ಹೋರಾಡುವೆಯೊ! (೨೭-೨೯). ಹೆಣ್ಣಾನೆಗಳೊಡನೆ ಕ್ರೀಡಿಸುವ ಮತ್ತಮಾತಂಗನಂತಿರುವ ಅರ್ಜುನನಮೇಲೆ ಹುಲಿಯಂತೆ ಎರಗುವೆಯಾ? ರಾವಣ, ಸ್ವಲ್ಪ ತಾಳು ಇದೊಂದು ರಾತ್ರಿ ವಿಶ್ರಮಿಸು. ಯುದ್ಧದಲ್ಲಿ ಅಷ್ಟು ಕುತೂಹಲವಿದ್ದರೆ, ನಾಳೆ ನಮ್ಮ ಅರ್ಜುನನೊಡನೆ ಹೋರಾಡಬಹುದಪ್ಪ! ಒಂದುವೇಳೆ ಈಗಲೇ ಹೋರಾಡಬೇಕೆಂಬ ಹರವಿದ್ದರೆ, ಮೊದಲು ನಮ್ಮೊಡನೆ ಯುದ್ಧಮಾಡು. ನಮ್ಮನ್ನು ಸಂಹರಿಸಿದಮೇಲೆ ಅರ್ಜುನನನ್ನೆದುರಿಸಬಹುದು" ಎಂದರು (೩೦-೩೧). ರಾಘವ, ಒಡನೆಯೇ ರಾವಣನ ಅಮಾತ್ಯರಿಗೂ ಅರ್ಜುನನ ಅಮಾತ್ಯರಿಗೂ ಕೈಕೈ ಮಿಲಾಯಿಸಿತು ಆ ರಾಕ್ಷಸರು ಯುದ್ಧದಲ್ಲಿ ಅರ್ಜುನನ ಕೆಲವು ಮಂದಿ ಅಮಾತ್ಯರನ್ನು ಕೊಂದು ತಿಂದುಬಿಟ್ಟರು! ಹೀಗೆ ನರ್ಮದಾತೀರದಲ್ಲಿ ಕಾಳಗದ ಹಲಹಲಾಶಬ್ದವು ಮೇಲೆದ್ದಿತು. ಹೈಹಯರಾಜನ ಮಂತ್ರಿಗಳು ಇಷು, ತೋಮರ, ಶೂಲ, ತ್ರಿಶೂಲ, ವಜ್ರ, ಕರ್ಷಣ ಮುಂತಾದ ಆಯುಧಗಳಿಂದ ರಾವಣನನ್ನೂ ಅವನ ಮಂತ್ರಿಗಳನ್ನೂ ಸದೆಬಡಿಯುತ್ತ ಹೋರಾಡುತ್ತ ಸುತ್ತಲೂ ಚದರಿದರು (೩೨-೩೪) ನಕ್ರತಿಮಿಂಗಿಲಾದಿಗಳಿಂದ ಸಂಕ್ಷುಬ್ಧವಾದ ಸಮುದ್ರದ ಮೊರೆತದಂತೆ, ಹೈಹಯಾಧಿಪನ

ಸನಕ್ರಮೀನಮಕರಸಮುದ್ರಸ್ಯೇವ ನಿಸ್ವನಃ ।
ರಾವಣಸ್ಯ ತು ತೇಽಮಾತ್ಯಾಃ ಪ್ರಹಸ್ತಶುಕಸಾರಣಾಃ ॥ ೩೬

ಕಾರ್ತವೀರ್ಯಬಲಂ ಕ್ರುದ್ಧಾ ನಿರ್ದಹಂತಿ ಸ್ಮ ತೇಜಸಾ ।
ಅರ್ಜುನಾಯ ತು ತತ್ ಕರ್ಮ ರಾವಣಸ್ಯ ಸಮಂತ್ರಿಣಃ ॥ ೩೭

ಕ್ರೀಡಮಾನಾಯ ಕಥಿತಂ ಪುರುಷೈರ್ದ್ವಾರರಕ್ಷಿಭಿಃ ।
ಶ್ರುತ್ವಾ ನ ಭೇತವ್ಯಮಿತಿ ಸ್ತ್ರೀಜನಂ ತಂ ತತೋಽರ್ಜುನಃ ॥ ೩೮

ಉತ್ತತಾರ ಜಲಾತ್ತಸ್ಮಾದ್ಗಂಗಾತೋಯಾದಿವಾಂಜನಃ ।
ಕ್ರೋಧದೂಷಿತನೇತ್ರಸ್ತು ಸ ತತೋಽರ್ಜುನಪಾವಕಃ ॥ ೩೯

ಪ್ರಜಜ್ವಾಲ ಮಹಾಘೋರೋ ಯುಗಾಂತ ಇವ ಪಾವಕಃ ।
ಸ ತೂರ್ಣತರಮಾದಾಯ ವರಹೇಮಾಂಗದೋ ಗದಾಮ್ ॥ ೪೦

ಅಭಿದುದ್ರಾವ ರಕ್ಷಾಂಸಿ ತಮಾಂಸೀವ ದಿವಾಕರಃ ।
ಬಾಹುವಿಕ್ಷೇಪಕರಣಾಂ ಸಮುದ್ಯಮ್ಯ ಮಹಾಗದಾಮ್ ॥ ೪೧

---

ಯೋಧರ ರಣಗರ್ಜನೆಯು ಕೇಳಿಬರುತ್ತಿತ್ತು ಪ್ರಹಸ್ತಾದಿಗಳು ಸಂಕ್ರುದ್ಧರಾಗಿ ಅವರನ್ನು ಸದೆಬಡೆಯುತ್ತಿದ್ದರು (೩೫). ಆಗ ಜಲಕ್ರೀಡಾಸ್ಥಾನವನ್ನು ತೀರದಲ್ಲಿದ್ದು ಕಾಯುತ್ತಿದ್ದ ದ್ವಾರಪಾಲಕರು ಹೋಗಿ, ರಾವಣ ಮತ್ತು ಅವನ ಮಂತ್ರಿಗಳಿಂದಾದ ಉಪದ್ರವವನ್ನು ಜಲಕೇಳಿಯಾಡುತ್ತಿದ್ದ ಕಾರ್ತವೀರ್ಯನಿಗೆ ತಿಳಿಸಿದರು ಅವರ ಹೇಳಿಕೆಯನ್ನಾಲಿಸಿ ಕಾರ್ತವೀರ್ಯನು ತನ್ನ ಸ್ತ್ರೀಯರಿಗೆ "ಹೆದರಬೇಡಿರಿ" ಎಂದು ನುಡಿದು, ಜಲಕ್ರೀಡೆಯನ್ನು ಬಿಟ್ಟಿದ್ದನು (೩೬-೩೭) ಗಂಗಾಜಲದಿಂದ ಅಂಜನ ದಿಗ್ಗಜವು ಮೇಲೆದ್ದುಬರುವಂತೆ, ನರ್ಮದಾಜಲವನ್ನು ತೊರೆದು ದಡವನ್ನು ಹತ್ತಿದನು ರೋಷದಿಂದ ಅವನ ಕಣ್ಣುಗಳು ಕೆಂಪೇರಿದವು ಅರ್ಜುನನೆಂಬ ಮಹಾಘೋರಾಗ್ನಿಯು ಪ್ರಳಯ ಕಾಲಾಗ್ನಿಯಂತೆ ಭುಗಿಲೆಂದಿತು ! (೩೮-೩೯). ಸುವರ್ಣಾಂಗದಭೂಷಿತನಾದ ಕಾರ್ತವೀರ್ಯನು ಮಹಾಗದೆಯನ್ನು ಬಾಹುಗಳಿಂದ ತಿರುಗಿಸುತ್ತ, ಸೂರ್ಯನು ಕತ್ತಲೆಯನ್ನಟ್ಟುವಂತೆ ರಾಕ್ಷಸಸಮೂಹವನ್ನು ಬೆನ್ನಟ್ಟಿಹೋದನು ಗರುಡವೇಗದಿಂದ ರಾಕ್ಷಸರ

*

ಗಾರುಡಂ ವೇಗಮಾಸ್ಥಾಯ ಚಾಪಪಾತ್ಯೈವ ಸೋಽರ್ಜುನಃ ।
ತಸ್ಯ ಮಾರ್ಗಂ ಸಮಾರುಧ್ಯ ವಿಂಧ್ಯೋಽರ್ಕಸ್ಯೇವ ಪರ್ವತಃ ॥ ೪೨
ಸ್ಥಿತೋ ವಿಂಧ್ಯ ಇವಾಕಂಪ್ಯಃ ಪ್ರಹಸ್ತೋ ಮುಸಲಾಯುಧಃ ।
ತತೋಽಸ್ಯ ಮುಸಲಂ ಘೋರಂ ಲೋಹಬದ್ಧಂ ಮಹೋದ್ಧತಃ ॥
ಪ್ರಹಸ್ತಃ ಪ್ರೇಷಯನ್ ಕ್ರುದ್ಧೋ ರರಾಸ ಚ ಯಥಾಂಬುದಃ ।
ತಸ್ಯಾಗ್ರೇ ಮುಸಲಸ್ಯಾಗ್ನಿರಶೋಕಾಪೀಡಸಂನಿಭಃ ॥ ೪೪
ಪ್ರಹಸ್ತಕರಮುಕ್ತಸ್ಯ ಬಭೂವ ಪ್ರದಹನ್ನಿವ ।
ಅಥಾಯಾಂತಂ ತು ಮುಸಲಂ ಕಾರ್ತವೀರ್ಯಸ್ತದಾರ್ಜುನಃ ॥ ೪೫
ನಿಪುಣಂ ವಂಚಯಾಮಾಸ ಗದಯಾ ಗತವಿಕ್ಲವಃ ।
ತತಸ್ತಮಭಿದುದ್ರಾವ ಪ್ರಹಸ್ತಂ ಹೈಹಯಾಧಿಪಃ ॥ ೪೬
ಭ್ರಾಮಯಾಣೋ ಗದಾಂ ಗುರ್ವೀಂ ಪಂಚಬಾಹುಶತೋಚ್ಛ್ರಯಾಂ
ತಥಾಹತೋಽತಿವೇಗೇನ ಪ್ರಹಸ್ತೋ ಗದಯಾ ತದಾ ॥ ೪೭

ಮಧ್ಯದಲ್ಲಿ ನುಗ್ಗಿಬಿಟ್ಟನು. ಅಷ್ಟರಲ್ಲಿ ಪ್ರಹಸ್ತನು ಮುಸಲಾಯುಧವನ್ನು ಧರಿಸಿ, ಸೂರ್ಯನನ್ನು ವಿಂಧ್ಯಪರ್ವತವು ಅಡ್ಡಗಟ್ಟಿದಂತೆ ಅರ್ಜುನನನ್ನು ಎದುರಿಸಿ ಅಲ್ಲಾಡದೆ ನಿಂತನು (೪೦-೪೨) ಅರ್ಜುನನು ಹತ್ತಿರ ಬಂದೊಡನೆ ಉದ್ಧತನಾದ ಪ್ರಹಸ್ತನು ತನ್ನ ಲೋಹಮಯವಾದ ಘೋರ ಮುಸಲವನ್ನು ಅವನಮೇಲೆ ಬೀಸಿ ಮೇಘದಂತೆ ಬೊಬ್ಬಿರಿದನು ಪ್ರಹಸ್ತನ ಕೈಯಿಂದ ಚಿಮ್ಮಿ ಬಂದ ಮುಸಲದ ಅಗ್ರಭಾಗದಲ್ಲಿ, ಅಶೋಕ ಪುಷ್ಪದಂತೆ ಹೊಂಬಣ್ಣದ ಬೆಂಕಿ ಸಿಡಿಯಿತು (೪೩-೪೪) ಕಾರ್ತವೀರ್ಯನು ನಿರ್ಭೀತಿಯಿಂದ ಅದನ್ನೆದುರಿಸಿ, ತನ್ನ ಗದೆಯಿಂದ ಮುಸಲಾಯುಧವನ್ನು ಬಡಿದುರುಳಿಸಿದನು ಒಡನೆಯೇ ತನ್ನ ಮಹಾಗದೆಯನ್ನು ಐನೂರು ತೋಳುಗಳಿಂದ* ಮೇಲೆತ್ತಿ ಬೀಸಿ

* ಪಂಚಬಾಹುಶತೋಚ್ಛ್ರಯಾಮ್ — ಎಂದು ಮೂಲದಲ್ಲಿದೆ. ಮೇಲೆ ಬರೆದಿರುವುದು ವ್ಯಾಖ್ಯಾನಕಾರರು ಮಾಡಿರುವ ಅರ್ಥ ಆದರೆ, ಬಾಹು=ಬಾಹು ಪ್ರಮಾಣ—ಎಂದರೆ ಸುಮಾರು ಅರ್ಧಗಜ ಉಚ್ಛ್ರಯ=ಔನ್ನತ್ಯ, ಎತ್ತರ— ಎಂದು ಅರ್ಥಮಾಡುವುದು ಸ್ವರಸವಾಗಿದೆ ಆದ್ದರಿಂದ ೨೫೦ ಗಜದಷ್ಟು ಉನ್ನತವಾದ ಗದೆಯನ್ನು ಎಂದು ಅರ್ಥ ಹೇಳಬಹುದು

ನಿಪಪಾತ ಹತಃ ಶೈಲೋ ವಜ್ರಿವಜ್ರಹತೋ ಯಥಾ ।
ಪ್ರಹಸ್ತಂ ಪತಿತಂ ದೃಷ್ಟ್ವಾ ಮಾರೀಚಶುಕಸಾರಣಾಃ ॥ ೪೮
ಸಮಹೋದರಧೂಮ್ರಾಕ್ಷಾ ಹ್ಯಪಸೃಪ್ತಾ ರಣಾಜಿರಾತ್ ।
ಅಪಕ್ರಾಂತೇಷ್ವಮಾತ್ಯೇಷು ಪ್ರಹಸ್ತೇ ವಿನಿಪಾತಿತೇ ॥ ೪೯
ರಾವಣೋಽಭ್ಯದ್ರವತ್ತೂರ್ಣಮರ್ಜುನಂ ನೃಪಸತ್ತಮಮ್ ।
ಸಹಸ್ರಬಾಹೋಸ್ತದ್ಯುದ್ಧಂ ವಿಂಶದ್ಬಾಹೋಶ್ಚ ದಾರುಣಮ್ ॥ ೫೦
ನೃಪರಾಕ್ಷಸಯೋಸ್ತತ್ರ ಚಾರಬ್ಧಂ ರೋಮಹರ್ಷಣಮ್ ।
ಸಾಗರಾವಿವ ಸಂರಬ್ಧೌ ಚಲನ್ಮೂಲಾವಿವಾಚಲೌ ॥ ೫೧
ತೇಜೋಯುಕ್ತಾವಿವಾದಿತ್ಯೌ ಪ್ರದಹಂತಾವಿವಾನಲೌ ।
ಬಲೋನ್ನತೌ ಯಥಾ ನಾಗೌ ವಾಸಿತಾರ್ಥೇ ಯಥಾ ವೃಷೌ ॥ ೫೨
ಮೇಘಾವಿವ ವಿನರ್ದಂತೌ ಸಿಂಹಾವಿವ ಬಲೋತ್ಕಟೌ ।
ರುದ್ರಕಾಲಾವಿವ ಕ್ರುದ್ಧೌ ತದಾ ತೌ ರಾಕ್ಷಸಾರ್ಜುನೌ ॥ ೫೩

---

ರಭಸದಿಂದ ಪ್ರಹಸ್ತನನ್ನು ಅಪ್ಪಳಿಸಲು, ಇಂದ್ರನ ವಜ್ರಾಯುಧದಿಂದ ಆಹತವಾದ ಪರ್ವತದಂತೆ ಅವನು ಉರುಳಿಬಿದ್ದನು (೪೫-೪೮). ಪ್ರಹಸ್ತನು ಬಿದ್ದುದನ್ನು ಕಂಡು ಮಾರೀಚ, ಶುಕ, ಸಾರಣ, ಮಹೋದರ, ಧೂಮ್ರಾಕ್ಷರು ರಣಾಂಗಣದಿಂದ ದೂರ ಸರಿದರು! ಹೀಗೆ ಪ್ರಹಸ್ತನು ಬಿದ್ದುದನ್ನೂ ಉಳಿದ ಅಮಾತ್ಯರು ಹಿಂಜರಿದುದನ್ನೂ ಕಂಡು ರಾವಣನು ಅರ್ಜುನನ್ನೆದುರಿಸಿ ನುಗ್ಗಿಹೋದನು. ರಾಘವ, ಸಹಸ್ರಬಾಹುವಿಗೂ ವಿಂಶತಿಬಾಹುವಿಗೂ ಘೋರವಾದ ಕಾಳಗವು ತೊಡಗಿತು (೪೯-೫೦) ರಾವಣಾರ್ಜುನರಿಗೆ ಮೈನವಿರೇಳಿಸುವ ಕದನವು ನಡೆಯಿತು ಅವರೀರ್ವರೂ ಉಲ್ಲೋಲಕಲ್ಲೋಲವಾಗಿ ಮೇಲೆ ನುಗ್ಗುವ ಮಹಾಸಾಗರಗಳೋ, ಬುಡವಲುಗಿ ಸಿಡಿದೆರಗುವ ಪರ್ವತಗಳೋ, ಛಲದಿಂದೆರುಗುವ ತೇಜೋಮಯರಾದ ಚಂಡಕಿರಣರೋ, ಕಿಡಿಗೆದರಿ ಸುಡತೊಡಗಿದ ಕಾಲಾಗ್ನಿಗಳೋ, ಹೆಣ್ಣಾನೆಗಾಗಿ ಬಡಿದಾಡುವ ಬಲೋದ್ರಿಕ್ತ ಮಾತಂಗಗಳೋ, ಹಸುವಿಗಾಗಿ ಹೋರಾಡುವ ಹೋರಿಗಳೋ, ಗುಡುಗುವ ಮೋಡಗಳೋ, ಗರ್ಜಿಸುವ ಸಿಂಹಗಳೋ, ಕ್ರೋಧಾವಿಷ್ಟರಾದ ಕಾಲರುದ್ರರೋ—ಎಂಬಂತೆ

ಪರಸ್ಪರಂ ಗದಾಭ್ಯಾಂ ತೌ ತಾಡಯಾಮಾಸತುರ್ಭೃಶಮ್ ।
ವಜ್ರಪ್ರಹಾರಾನಚಲಾ ಯಥಾ ಘೋರಾನ್ ವಿಷೇಹಿರೇ ॥ ೫೪

ಗದಾಪ್ರಹಾರಾಂಸ್ತೌ ತತ್ರ ಸೇಹಾತೇ ನರರಾಕ್ಷಸೌ ।
ಯಥಾಶನಿರವೇಭ್ಯಸ್ತು ಜಾಯತೇಽಥ ಪ್ರತಿಶ್ರುತಿಃ ॥ ೫೫

ತಥಾ ತಯೋರ್ಗದಾಪೋಥೈರ್ದಿಶಃ ಸರ್ವಾಃ ಪ್ರತಿಶ್ರುತಾಃ ।
ಅರ್ಜುನಸ್ಯ ಗದಾ ಸಾ ತು ಪಾತ್ಯಮಾನಾಹಿತೋರಸಿ ॥ ೫೬

ಕಾಂಚನಾಭಂ ನಭಶ್ಚಕ್ರೇ ವಿದ್ಯುತ್ಸೌದಾಮಿನೀ ಯಥಾ ।
ತಥೈವ ರಾವಣೇನಾಪಿ ಪಾತ್ಯಮಾನಾ ಮುಹುರ್ಮುಹುಃ ॥ ೫೭

ಅರ್ಜುನೋರಸಿ ನಿರ್ಭಾತಿ ಗದೋಲ್ಕೇವ ಮಹಾಗಿರೌ ।
ನಾರ್ಜುನಃ ಖೇದಮಾಯಾತಿ ನ ರಾಕ್ಷಸಗಣೇಶ್ವರಃ ॥ ೫೮

ಇದಮಾಸೀತ್ತಯೋರ್ಯುದ್ಧಂ ಯಥಾ ಪೂರ್ವಂ ಬಲೀಂದ್ರಯೋಃ
ಶೃಂಗೈರ್ಮಹರ್ಷಭೌ ಯದ್ವದ್ದಂತಾಗ್ರೈರಿವ ಕುಂಜರೌ ॥ ೫೯

---

ಗದೆಗಳಿಂದ ಒಬ್ಬರನ್ನೊಬ್ಬರು ಬಡಿದಾಡಿದರು (೫೧-೫೩) ಸಿಡಿಲುಗಳ ಹೊಡೆತಗಳನ್ನು ಬೆಟ್ಟಗಳು ಸಹಿಸಿಕೊಳ್ಳುವಂತೆ ಗದೆಗಳ ಘೋರವಾದ ಬಡಿತಗಳನ್ನು ಆ ವೀರರಿಬ್ಬರೂ ಸಹಿಸಿಕೊಂಡು ಕಾದಾಡಿದರು ಸಿಡಿಲುಗಳು ಸಿಡಿದಾಗ ದಿಕ್ಕುಗಳು ಪ್ರತಿಧ್ವನಿಸುವಂತೆ, ಅವರೀರ್ವರ ಗದಾಪ್ರಹಾರ ಗಳಿಂದ 'ಥಡ ಥಡಿಲ್, ಛಟ ಛಟಿಲ್!' ಎಂಬ ಶಬ್ದಗಳು ದಶದಿಕ್ಕು ಗಳಲ್ಲಿಯೂ ಮಾರ್ದನಿಗೊಂಡವು! (೫೪-೫೫). ಕಾರ್ತವೀರ್ಯನು ತೇಜೋಮಯವಾದ ಗದೆಯಿಂದ ಶತ್ರುವಾದ ರಾವಣನ ಎದೆಗೆ ಅಪ್ಪಳಿಸಿ ದಾಗ ಮಿಂಚು ಮಿಂಚಿದಂತಾಗಿ, ನಭೋಮಂಡಲವು ಚಿನ್ನದಂತೆ ಹೊಳೆಯು ತ್ತಿತ್ತು! ಹಾಗೆಯೇ ರಾವಣನು ಗದೆಯಿಂದ ಮತ್ತೆ ಮತ್ತೆ ಕಾರ್ತವೀರ್ಯನ ಎದೆಯನ್ನಪ್ಪಳಿಸಲು, ಮಹಾಶೈಲದಮೇಲೆ ಎರಗುವ ಉಲ್ಕೆಯಂತೆ ಗದೆಯು ಕಾಣಿಸುತ್ತಿತ್ತು! ಎಷ್ಟು ಹೊತ್ತು ಕಾದಾಡಿದರೂ ಅರ್ಜುನನೂ ದಣಿಯಲಿಲ್ಲ, ರಾಕ್ಷಸೇಂದ್ರನೂ ದಣಿಯಲಿಲ್ಲ (೫೬-೫೮) ಶ್ರೀರಾಮ, ಅವರಿಬ್ಬರಿಗೂ ನಡೆದ ಯುದ್ಧವು ಹಿಂದೆ ಬಲಿಚಕ್ರವರ್ತಿಗೂ ದೇವೇಂದ್ರನಿಗೂ ನಡೆದ

ಪರಸ್ಪರಂ ತೌ ನಿಘ್ನಂತೌ ನರರಾಕ್ಷಸಸತ್ತಮೌ ।
ತತೋಽರ್ಜುನೇನ ಕ್ರುದ್ಧೇನ ಸರ್ವಪ್ರಾಣೇನ ಸಾ ಗದಾ ॥ ೬೦

ಸ್ತನಯೋರಂತರೇ ಮುಕ್ತಾ ರಾವಣಸ್ಯ ಮಹೋರಸಿ ।
ವರದಾನಕೃತತ್ರಾಣೇ ಸಾ ಗದಾ ರಾವಣೋರಸಿ ॥ ೬೧

ದುರ್ಬಲೇವ ಯಥಾವೇಗಂ ದ್ವಿಧಾ ಭೂತ್ವಾವತತ್ ಕ್ಷಿತೌ ।
ಸ ತ್ವರ್ಜುನಪ್ರಮುಕ್ತೇನ ಗದಾಪಾತೇನ ರಾವಣಃ ॥ ೬೨

ಅಪಾಸರ್ಪದ್ಧನುರ್ಮಾತ್ರಂ ನಿಷಸಾದ ಚ ನಿಷ್ಟನನ್ ।
ಸ ವಿಹ್ವಲಂ ತದಾಲಕ್ಷ್ಯ ದಶಗ್ರೀವಂ ತತೋಽರ್ಜುನಃ ॥ ೬೩

ಸಹಸೋತ್ಪತ್ಯ ಜಗ್ರಾಹ ಗರುತ್ಮಾನಿವ ಪನ್ನಗಮ್ ।
ಸ ತಂ ಬಾಹುಸಹಸ್ರೇಣ ಬಲಾದ್ಗೃಹ್ಯ ದಶಾನನಮ್ ॥ ೬೪

ಬಬಂಧ ಬಲವಾನ್ ರಾಜಾ ಬಲಿಂ ನಾರಾಯಣೋ ಯಥಾ ।
ಬಧ್ಯಮಾನೇ ದಶಗ್ರೀವೇ ಸಿದ್ಧಚಾರಣದೇವತಾಃ ॥ ೬೫

---

ಯುದ್ಧದಂತಿತ್ತು ಬೃಹದಾಕಾರದ ಗೂಳಿಗಳು ಕೊಂಬುಗಳಿಂದಲೂ ಸಲಗಗಳು ಕೋರೆದಾಡೆಗಳಿಂದಲೂ ಕಾದಾಡುವಂತೆ ಆ ಶೂರರಿಬ್ಬರೂ ಕಾದಾಡಿದರು (೫೯-೬೦). ಕಡೆಗೆ ಅರ್ಜುನನು ರುಷ್ಟನಾಗಿ ತನ್ನ ಸರ್ವ ಬಲವನ್ನೂ ವಿನಿಯೋಗಿಸಿ, ರಾವಣನ ವಿಶಾಲವಕ್ಷದಮೇಲೆ ಗದೆಯನ್ನಪ್ಪಳಿಸಿದನು. ಆಗ ಬ್ರಹ್ಮನ ವರಬಲವು ಮಾತ್ರವೇ ರಾವಣನ ಎದೆಯನ್ನು ರಕ್ಷಿಸಿತು. ರಭಸದಿಂದ ತಾಗಿದ ಅರ್ಜುನನ ಗದೆಯು ದುರ್ಬಲವೋ ಎಂಬಂತೆ ಎರಡು ಸೀಳಾಗಿ ನೆಲದಲ್ಲಿ ಬಿದ್ದಿತು! (೬೧-೬೨) ಆದರೆ ಆ ಗದಾಪ್ರಹಾರದಿಂದ ರಾವಣನು ನೊಂದು ಒಂದು ಬಿಲ್ಲಿನಷ್ಟು ದೂರ ಹಿಂದಕ್ಕೆ ಸರಿದು 'ಉಸ್' ಎನ್ನುತ್ತ ಕುಳಿತುಬಿಟ್ಟನು ದಶಗ್ರೀವನು ಬಸವಳಿದು ವಿಹ್ವಲನಾದುದನ್ನು ಕಂಡೊಡನೆ ಅರ್ಜುನನು ಛಂಗನೆ ಮುಂದಕ್ಕೆ ಹಾರಿ, ಗರುಡನು ಸರ್ಪವನ್ನು ಹಿಡಿಯುವಂತೆ ರಾವಣನನ್ನು ಹಿಡಿದನು (೬೩-೬೪) ಬಲಾಢ್ಯನಾದ ಕಾರ್ತವೀರ್ಯನು ತನ್ನ ಸಹಸ್ರಬಾಹುಗಳಿಂದ ರಾವಣನನ್ನು ಬಲವಾಗಿ ಅಮುಕಿ ಹಿಡಿದು ಹೆಡಮುರಿಗೆ ಕಟ್ಟಿದನು ಶ್ರೀಮನ್ನಾರಾಯಣನು

ಸಾಧ್ವೀತಿ ವಾದಿನಃ ಪುಷ್ಪೈಃ ಕಿರಂತ್ಯರ್ಜುನಮೂರ್ಧನಿ ।
ವ್ಯಾಘ್ರೋ ಮೃಗಮಿವಾದಾಯ ಮೃಗರಾಡಿವ ದಂತಿನಮ್ ॥ ೬೬

ನನಾದ ಹೈಹಯೋ ರಾಜಾ ಹರ್ಷಾದಂಬುದವನ್ಮುಹುಃ ।
ಪ್ರಹಸ್ತಸ್ತು ಸಮಾಶ್ವಸ್ತೋ ದೃಷ್ಟ್ವಾ ಬದ್ಧಂ ದಶಾನನಮ್ ॥ ೬೭

ಸಹ ತೈ ರಾಕ್ಷಸೈಃ ಕ್ರುದ್ಧಶ್ಚಾಭಿದುದ್ರಾವ ಪಾರ್ಥಿವಮ್ ।
ನಕ್ತಂಚರಾಣಾಂ ವೇಗಸ್ತು ತೇಷಾಮಾಪತತಾಂ ಬಭೌ ॥ ೬೮

ಉದ್ಧೂತ ಆತಪಾಪಾಯೇ ಪಯೋದಾನಾಮಿವಾಂಬುಧೌ ।
ಮುಂಚ ಮುಂಚೇತಿ ಭಾಷಂತಸ್ತಿಷ್ಠ ತಿಷ್ಠೇತಿ ಚಾಸಕೃತ್ ॥ ೬೯

ಮುಸಲಾನಿ ಸಶೂಲಾನಿ ಹ್ಯುತ್ಸಸರ್ಜುಸ್ತದಾರ್ಜುನೇ ।
ಅಪ್ರಾಪ್ತಾನ್ಯೇವ ತಾನ್ಯಾಶು ಅಸಂಭ್ರಾಂತಸ್ತದಾರ್ಜುನಃ ॥ ೭೦

ಆಯುಧಾನ್ಯಮರಾರೀಣಾಂ ಜಗ್ರಾಹಾರಿನಿಷೂದನಃ ।
ತತಸ್ತೈರೇವ ರಕ್ಷಾಂಸಿ ದುರ್ಧರೈಃ ಪ್ರವರಾಯುಧೈಃ ॥ ೭೧

---

ಬಲಿಚಕ್ರವರ್ತಿಯನ್ನು ಬಂಧಿಸಿದಂತೆ ದಶಗ್ರೀವನನ್ನು ಬಂಧಿಸಲಾಗಿ, ಸಿದ್ಧಚಾರಣ ದೇವತೆಗಳು 'ಭಲೆ ಭಲೆ!' ಎನ್ನುತ್ತ ಅರ್ಜುನನ ಮಸ್ತಕದ ಮೇಲೆ ಹೂಮಳೆಗರೆದರು (೬೫-೬೬) ಹುಲಿಯು ಹುಲ್ಲೆಯನ್ನೂ ಕಂಠೀರವನು ಕರಿರಾಜನನ್ನೂ ಹಿಡಿದಂತೆ, ಅರ್ಜುನನು ದಶಗ್ರೀವನನ್ನು ಹಿಡಿದು ವಶಪಡಿಸಿಕೊಂಡು ಹರ್ಷೋನ್ಮತ್ತನಾಗಿ, ಗುಡುಗಿನಂತೆ ಮತ್ತೆಮತ್ತೆ ಬೊಬ್ಬಿರಿದನು ಅಷ್ಟರಲ್ಲಿ ಸಂತೈಸಿಕೊಂಡೆದ್ದ ಪ್ರಹಸ್ತನು ರಾವಣ ಬಂಧನವನ್ನು ಕಂಡು ಕೋಪದಿಂದ ಮೇಲೆದ್ದು, ಇತರ ರಾಕ್ಷಸರೊಡನೆ ಹೈಹಯೇಶ್ವರನನ್ನು ಅಟ್ಟಿಸಿಕೊಂಡುಹೋದನು (೬೭-೬೮) ಹಿಂದಿನಿಂದ ಓಡೋಡಿ ಬರುತ್ತಿದ್ದ ಆ ನಿಶಾಚರರು, ಮಳೆಗಾಲದಲ್ಲಿ ಕಡಲನ್ನು ಮುತ್ತುವ ಕರಿಯ ಮೋಡಗಳಂತೆ ಕಾಣಿಸಿದರು! 'ಬಿಡು ಬಿಡು! ನಿಲ್ಲು ನಿಲ್ಲು!' ಎಂದು ಕೂಗುತ್ತ ಕಬ್ಬರಿಯುತ್ತ ಶೂಲಮುಸಲಾದ್ಯಾಯುಧಗಳನ್ನು ಅರ್ಜುನನಮೇಲೆ ಎಡೆಬಿಡದೆ ಎಸೆದರು (೬೯-೭೦). ಶೂರಾಗ್ರಣಿಯಾದ ಅರ್ಜುನನು ನಿರ್ಭೀತಿಯಿಂದ ನಿಂತು, ರಾಕ್ಷಸರ ಆಯುಧಗಳನ್ನು ಬಳಿಗೆ

ಭಿತ್ತ್ವಾ ವಿದ್ರಾವಯಾಮಾಸ ವಾಯುರಂಬುಧರಾನಿವ ।
ರಾಕ್ಷಸಾಂಸ್ತ್ರಾಸಯಿತ್ವಾ ತು ಕಾರ್ತವೀರ್ಯೋಽರ್ಜುನಸ್ತದಾ ॥ ೭೨

ರಾವಣಂ ಗೃಹ್ಯ ನಗರಂ ಪ್ರವಿವೇಶ ಸುಹೃದ್ವೃತಃ ॥

ಸ ಕೀರ್ಯಮಾಣಃ ಕುಸುಮಾಕ್ಷತೋತ್ಕರೈ-
ರ್ದ್ವಿಜೈಃ ಸಪೌರೈಃ ಪುರುಹೂತಸನ್ನಿಭಃ ।
ತದಾರ್ಜುನಃ ಸಂಪ್ರವಿವೇಶ ತಾಂ ಪುರೀಂ
ಬಲಿಂ ನಿಗೃಹ್ಯೇವ ಸಹಸ್ರಲೋಚನಃ ॥ ೭೩

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವಾತ್ರಿಂಶಃ ಸರ್ಗಃ



ಬರುವುದರೊಳಗೆ ಇತರ ಕೈಗಳಿಂದ ಹಿಡಿದು, ಅವುಗಳಿಂದಲೇ ರಾಕ್ಷಸರನ್ನು ಹೊಡೆದೋಡಿಸಿದನು ಬಿರುಗಾಳಿಯು ಮೋಡಗಳನ್ನು ಚೆದರಿಸುವಂತೆ ಪ್ರಹಸ್ತಾದಿಗಳನ್ನು ಬೆದರಿಸಿ ಚೆದರಿಸಿ, ಕಾರ್ತವೀರ್ಯನು ರಾವಣನನ್ನು ಅಮುಕಿಹಿಡಿದು ಮಿತ್ರಪರಿವೃತನಾಗಿ ಮಾಹಿಷ್ಮತೀನಗರವನ್ನು ಪ್ರವೇಶಿಸಿದನು! (೭೧-೭೨) ಶ್ರೀರಾಮ, ಈ ರೀತಿಯಲ್ಲಿ ಕಾರ್ತವೀರ್ಯನು ಬಲಿಯನ್ನು ನಿಗ್ರಹಿಸಿದ ದೇವೇಂದ್ರನಂತೆ ವೈಭವದಿಂದ ರಾಜಧಾನಿಯನ್ನು ಪ್ರವೇಶಿಸಿದಾಗ, ಪೌರರೂ ದ್ವಿಜರೂ ಸಂತೋಷದಿಂದ ಬಂದು ಹೂಗಳನ್ನೂ ಅಕ್ಷತೆಗಳನ್ನೂ ಅವನಮೇಲೆ ಎರಚುತ್ತಿದ್ದರು (೭೩).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತೆರಡನೆಯ ಸರ್ಗ



# ತ್ರಯಸ್ತ್ರಿಂಶಃ ಸರ್ಗಃ

## ರಾವಣವಿಮೋಕ್ಷಃ

ರಾವಣಗ್ರಹಣಂ ತತ್ತು ವಾಯುಗ್ರಹಣಸಂನಿಭಮ್ ।
ತತಃ ಪುಲಸ್ತ್ಯಃ ಶುಶ್ರಾವ ಕಥಿತಂ ದಿವಿ ದೈವತೈಃ ॥ ೧

ತತಃ ಪುತ್ರಕೃತಸ್ನೇಹಾತ್ ಕಂಪ್ಯಮಾನೋ ಮಹಾಧೃತಿಃ ।
ಮಾಹಿಷ್ಮತೀಪತಿಂ ದ್ರಷ್ಟುಮಾಜಗಾಮ ಮಹಾಮುನಿಃ ॥ ೨

ಸ ವಾಯುಮಾರ್ಗಮಾಸ್ಥಾಯ ವಾಯುತುಲ್ಯಗತಿರ್ದ್ವಿಜಃ ।
ಪುರೀಂ ಮಾಹಿಷ್ಮತೀಂ ಪ್ರಾಪ್ತೋ ಮನಃಸಂಪಾತವಿಕ್ರಮಃ ॥ ೩

ಸೋಽಮರಾವತಿಸಂಕಾಶಾಂ ಹೃಷ್ಟಪುಷ್ಟಜನಾಕುಲಾಮ್ ।
ಪ್ರವಿವೇಶ ಪುರೀಂ ಬ್ರಹ್ಮಾ ಇಂದ್ರಸ್ಯೇವಾಮರಾವತೀಮ್ ॥ ೪

## ಸರ್ಗ ೩೩

ರಾವಣಬಂಧನವನ್ನು ಕೇಳಿ ಪುಲಸ್ತ್ಯರು ಮಾಹಿಷ್ಮತೀನಗರಕ್ಕೆ ಬರುವುದು
ಅವರ ವಚನವನ್ನು ಮನ್ನಿಸಿ ಕಾರ್ತವೀರ್ಯನು ರಾವಣನನ್ನು
ಸೆರೆಯಿಂದ ಬಿಡುವುದು ಅವರಿಬ್ಬರ ಮೈತ್ರಿ

ಶ್ರೀರಾಮ, ದೇವತೆಗಳು ಸ್ವರ್ಗಲೋಕದಲ್ಲಿ ರಾವಣಬಂಧನವನ್ನು ಕುರಿತು ಮಾತಾಡಿಕೊಳ್ಳುತ್ತಿದ್ದುದು ಪುಲಸ್ತ್ಯಮುನಿಗಳಿಗೆ ತಿಳಿಯಿತು. ಬಿರುಗಾಳಿಯನ್ನು ಸೆರೆಹಿಡಿದಂತೆ ವಿಸ್ಮಯಕರವಾದ ರಾವಣನ ಸೆರೆಯ ವಾರ್ತೆಯನ್ನು ಕೇಳಿ, ಧೀರಪ್ರಕೃತಿಯ ಆ ಮುನಿಗಳಿಗೂ ಸಹ ಪುತ್ರಸ್ನೇಹದಿಂದ ಅನುಕಂಪೆಯುಂಟಾಗಿ ಹೃದಯವು ಕಲಕಿತು ಮಾಹಿಷ್ಮತೀಶ್ವರನಾದ ಅರ್ಜುನನನ್ನು ನೋಡಲು ಅವರು ಬಂದರು (೧-೨). ವಾಯುವೇಗ ಮನೋವೇಗಗಳಿಂದ ಸಂಚರಿಸಬಲ್ಲ ಪುಲಸ್ತ್ಯಮಹರ್ಷಿಗಳು ಶೀಘ್ರವಾಗಿ ಅಲ್ಲಿಗೆ ಬಂದು, ಬ್ರಹ್ಮನು ಅಮರಾವತಿಯನ್ನು ಪ್ರವೇಶಿಸುವಂತೆ, ನಲಿಯುವ ಪ್ರಜೆಗಳಿಂದ ತುಂಬಿದ ಮಾಹಿಷ್ಮತಿಯನ್ನು ಪ್ರವೇಶಿಸಿದರು (೩-೪).

ಪಾದಚಾರಮಿವಾದಿತ್ಯಂ ನಿಷ್ಪತಂತಂ ಸುದುರ್ದೃಶಮ್ ।
ತತಸ್ತೇ ಪ್ರತ್ಯಭಿಜ್ಞಾಯ ಚಾರ್ಜುನಾಯ ನ್ಯವೇದಯನ್ ॥ ೫
ಪುಲಸ್ತ್ಯ ಇತಿ ವಿಜ್ಞಾಯ ವಚನಾದ್ಧೈಹಯಾಧಿಪಃ ।
ಶಿರಸ್ಯಂಜಲಿಮಾಧಾಯ ಪ್ರತ್ಯುದ್ಗಚ್ಛತ್ತಪಸ್ವಿನಮ್ ॥ ೬
ಪುರೋಹಿತೋಽಸ್ಯ ಗೃಹ್ಯಾರ್ಘ್ಯಂ ಮಧುಪರ್ಕಂ ತಥೈವ ಚ ।
ಪುರಸ್ತಾತ್ ಪ್ರಯಯೌ ರಾಜ್ಞಃ ಶಕ್ರಸ್ಯೇವ ಬೃಹಸ್ಪತಿಃ ॥ ೭
ತತಸ್ತಮೃಷಿಮಾಯಾಂತಮುದ್ಯಂತಮಿವ ಭಾಸ್ಕರಮ್ ।
ಅರ್ಜುನೋ ದೃಶ್ಯ ಸಂಭ್ರಾಂತೋ ವವಂದೇಂದ್ರ ಇವೇಶ್ವರಮ್ ॥
ಸ ತಸ್ಯ ಮಧುಪರ್ಕಂ ಗಾಂ ಪಾದ್ಯಮರ್ಘ್ಯಂ ನಿವೇದ್ಯ ಚ ।
ಪುಲಸ್ತ್ಯಮಾಹ ರಾಜೇಂದ್ರೋ ಹರ್ಷಗದ್ಗದಯಾ ಗಿರಾ ॥ ೯
ಅದ್ಯೇಯಮಮರಾವತ್ಯಾ ತುಲ್ಯಾ ಮಾಹಿಷ್ಮತೀ ಕೃತಾ ।
ಅದ್ಯಾಹಂ ತು ದ್ವಿಜೇಂದ್ರ ತ್ವಾಂ ಯಸ್ಮಾತ್ ಪಶ್ಯಾಮಿ ದುರ್ದೃಶಂ ॥

---

ಕಣ್ಣು ಕುಕ್ಕುವಷ್ಟು ತೇಜೋವಂತರಾದ ಆ ಮಹರ್ಷಿಗಳು ನಡೆದು ಬರುವ ಸೂರ್ಯನೋ ಎಂಬಂತೆ ಕೆಳಗಿಳಿದು ಬರುತ್ತಿರಲು, ಜನರು ಅವರನ್ನು ಗುರುತಿಸಿ ಒಡನೆಯೇ ಕಾರ್ತವೀರ್ಯನಿಗೆ ತಿಳಿಸಿದರು (೫). "ಆಹಾ! ಪುಲಸ್ತ್ಯಮುನಿಗಳು!" ಎಂದರಿತು ಒಡನೆಯೇ ಕಾರ್ತವೀರ್ಯನು ಮಸ್ತಕದಲ್ಲಿ ಬದ್ಧಾಂಜಲಿಯಾಗಿ ಆ ತಪಸ್ವಿಗಳನ್ನು ಸ್ವಾಗತಿಸಲು ಹೊರಟನು ಅವನ ಪುರೋಹಿತರು ಅರ್ಘ್ಯ, ಮಧುಪರ್ಕಗಳನ್ನು ತೆಗೆದುಕೊಂಡು, ಇಂದ್ರನ ಮುಂದೆ ಹೋಗುವ ಬೃಹಸ್ಪತಿಯಂತೆ ರಾಜನ ಎದುರುಗಡೆಯಲ್ಲಿ ಹೊರಟರು (೬-೭) ಉದಯಿಸಿ ಬರುವ ಭಾಸ್ಕರನಂತೆ ಭಾಸುರಕಾಂತಿಯುಕ್ತರಾಗಿ ಬರುತ್ತಿದ್ದ ಪುಲಸ್ತ್ಯರನ್ನು ನೋಡಿ, ಕಾರ್ತವೀರ್ಯನು ಕೊಂಚ ಭಯದಿಂದಲೇ ಇಂದ್ರನು ಈಶ್ವರನನ್ನು ವಂದಿಸುವಂತೆ ಭಕ್ತಿಯಿಂದ ವಂದಿಸಿದನು ಆ ರಾಜೇಂದ್ರನು ಮುನಿಗಳಿಗೆ ಅರ್ಘ್ಯ, ಪಾದ್ಯ, ಮಧುಪರ್ಕ, ಗೋವುಗಳನ್ನರ್ಪಿಸಿ ಉಪಚರಿಸಿ, ಹರ್ಷಾತಿರೇಕದಿಂದ ಗದ್ಗದಿಸುತ್ತ ಹೀಗೆಂದನು (೮-೯). "ಮಹಾತ್ಮರೆ, ಇಂದು ಮಾಹಿಷ್ಮತಿಯು ಅಮರಾವತಿಗೆ ಸಮಾನವಾಯಿತು ದುರ್ಲಭರಾದ ತಮ್ಮನ್ನು, ಹೇ ದ್ವಿಜೇಂದ್ರ, ನನ್ನ

ಅದ್ಯ ಮೇ ಕುಶಲಂ ದೇವ ಅದ್ಯ ಮೇ ಕುಶಲಂ ವ್ರತಮ್ ॥
ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ॥ ೧೧

ಯಸ್ಮಾದ್ದೇವಗಣೈರ್ವಂದ್ಯೌ ವಂದೇಽಹಂ ಚರಣೌ ತವ ।
ಇದಂ ರಾಜ್ಯಮಿಮೇ ಪುತ್ರಾ ಇಮೇ ದಾರಾ ಇಮೇ ವಯಮ್॥ ೧೨

ಬ್ರಹ್ಮರ್ಷೇ ಕಿಂ ಕುರ್ಮಿ ಕಿಂ ಕಾರ್ಯಮಾಜ್ಞಾಪಯತು ನೋ ಭವಾನ್।
ತಂ ಧರ್ಮೇಽಗ್ನಿಷು ಪುತ್ರೇಷು ಶಿವಂ ಪೃಷ್ಟ್ವಾ ಚ ಪಾರ್ಥಿವಮ್ ॥

ಪುಲಸ್ತ್ಯೋವಾಚ ರಾಜಾನಂ ಹೈಹಯಾನಾಂ ತಥಾರ್ಜುನಮ್ ।
ನರೇಂದ್ರಾಂಬುಜಪತ್ರಾಕ್ಷ ಪೂರ್ಣಚಂದ್ರನಿಭಾನನ ॥ ೧೪

ಅತುಲಂ ತೇ ಬಲಂ ಯೇನ ದಶಗ್ರೀವಸ್ತ್ವಯಾ ಜಿತಃ ।
ಭಯಾದ್ಯಸ್ಯೋಪತಿಷ್ಠೇತಾಂ ನಿಷ್ಪಂದೌ ಸಾಗರಾನಿಲೌ ॥ ೧೫

ಸೋಽಯಂ ಮೃಧೇ ತ್ವಯಾ ಬದ್ಧಃ ಪೌತ್ರೋ ಮೇ ರಣದುರ್ಜಯಃ
ಪುತ್ರಕಸ್ಯ ಯಶಃ ಪೀತಂ ನಾಮ ವಿಶ್ರಾವಿತಂ ತ್ವಯಾ ॥ ೧೬

---

ಕಣ್ಣುಗಳಿಂದ ಇಂದು ಸಾಕ್ಷಾತ್ ನೋಡುತ್ತಿರುವ ನಾನು ಎಷ್ಟು ಭಾಗ್ಯಶಾಲಿ! (೧೦) ಇಂದು ನನಗೆ ಮಂಗಳವಾಯಿತು ಇಂದು ನನ್ನ ವ್ರತವು ಫಲಿಸಿತು ಇಂದು ನನ್ನ ಜನ್ಮ ಸಫಲವಾಯಿತು ಇಂದು ನನ್ನ ತಪಸ್ಸು ಫಲವನ್ನು ಕೊಟ್ಟಿತು! ದೇವಗಣಗಳೇ ಬಂದು ಅಡ್ಡಬೀಳುವ ತಮ್ಮ ದಿವ್ಯಪಾದಗಳಿಗೆ ವಂದಿಸುವ ಭಾಗ್ಯ ಈಗ ನನಗೆ ದೊರಕಿತು ಬ್ರಹ್ಮರ್ಷಿಗಳೆ, ನನ್ನಿಂದೇನಾಗ ಬೇಕು, ಅಪ್ಪಣೆಯಾಗಲಿ ಈ ರಾಜ್ಯ, ಈ ಮಕ್ಕಳು, ಈ ಪತ್ನಿ, ಈ ನಾನು—ಎಲ್ಲರೂ ತಮ್ಮವರು" ಎಂದು ನಿವೇದಿಸಿದನು (೧೧-೧೩) ಆಗ ಪುಲಸ್ತ್ಯರು ಹೈಹಯರಾಜನನ್ನು ಕುರಿತು "ಮಹಾರಾಜ, ನಿನ್ನ ಧರ್ಮ ಕಾರ್ಯವು ಸಾಂಗವಾಗಿ ನೆರವೇರುತ್ತಿದೆಯಷ್ಟೆ? ನಿತ್ಯದ ಅಗ್ನಿಕಾರ್ಯಗಳು ನಿರ್ವಿಘ್ನವಾಗಿ ನಡೆಯುತ್ತವೆಯಲ್ಲವೆ? ಪುತ್ರಾದಿಕುಟುಂಬವರ್ಗಕ್ಕೆ ಕುಶಲವಷ್ಟೆ?" ಎಂದು ಆತನ ಕ್ಷೇಮವನ್ನು ವಿಚಾರಿಸಿ ಮತ್ತೆ ಹೀಗೆಂದರು. "ನರೇಂದ್ರ, ಅಂಬುಜದಳಾಯತಾಕ್ಷನೂ ಪೂರ್ಣಚಂದ್ರಾನನನೂ ಆದ ನಿನ್ನ ಸೌಂದರ್ಯ ಮೆಚ್ಚುವಂತಹದು (೧೪) ನಿನ್ನ ಪರಾಕ್ರಮಕ್ಕೆ ಎಣೆಯಿಲ್ಲ. ದಶಗ್ರೀವನನ್ನೇ ಪರಾಜಯಗೊಳಿಸಿದ್ದೀಯೆ ಆತನಿಗೆ ಅಂಜಿ ಸಮುದ್ರವು

ಮುದ್ವಾಕ್ಯಾದ್ಯಾಚ್ಯಮಾನೋಽದ್ಯ ಮುಂಚ ವತ್ಸಂ ದಶಾನನಮ್ ।
ಪುಲಸ್ತ್ಯಾಜ್ಞಾಂ ಪ್ರಗೃಹ್ಯೋಽಚೇ ನ ಕಿಂಚನ ವಚೋಽರ್ಜುನಃ ॥
ಮುಮೋಚ ವೈ ಪಾರ್ಥಿವೇಂದ್ರೋ ರಾಕ್ಷಸೇಂದ್ರಂ ಪ್ರಹೃಷ್ಟವತ್ ॥

ಸ ತು ಪ್ರಮುಚ್ಯ ತ್ರಿದಶಾರಿಮರ್ಜುನಃ
ಪ್ರಪೂಜ್ಯ ದಿವ್ಯಾಭರಣಸ್ರಗಂಬರೈಃ ।
ಅಹಿಂಸಕಂ ಸಖ್ಯಮುಪೇತ್ಯ ಸಾಗ್ನಿಕಂ
ಪ್ರಣಮ್ಯ ತಂ ಬ್ರಹ್ಮಸುತಂ ಗೃಹಂ ಯಯೌ ॥ ೧೮

ಪುಲಸ್ತ್ಯೇನಾಪಿ ಸಂತ್ಯಕ್ತೋ ರಾಕ್ಷಸೇಂದ್ರಃ ಪ್ರತಾಪವಾನ್ ।
ಪರಿಷ್ವಕ್ತಃ ಕೃತಾತಿಥ್ಯೋ ಲಜ್ಜಮಾನೋ ವಿನಿರ್ಜಿತಃ ॥ ೧೯
ಪಿತಾಮಹಸುತಶ್ಚಾಪಿ ಪುಲಸ್ತ್ಯೋ ಮುನಿಪುಂಗವಃ ।
ಮೋಚಯಿತ್ವಾ ದಶಗ್ರೀವಂ ಬ್ರಹ್ಮಲೋಕಂ ಜಗಾಮ ಹ ॥ ೨೦

---

ಅಲ್ಲಾಡದೆ ನಿಲ್ಲುತ್ತಿತ್ತು! ಗಾಳಿ ಬೀಸದೆ ನಿಶ್ಚಲವಾಗುತ್ತಿತ್ತು! ಅಂತಹ ಅಜೇಯನೂ ರಣಮಲ್ಲನೂ ಆದ ನನ್ನ ಮೊಮ್ಮಗನನ್ನು ನೀನು ಸೆರೆಹಿಡಿದು ಬಂಧಿಸಿಬಿಟ್ಟೆಯಲ್ಲ! ನನ್ನ ಮೊಮ್ಮಗನ ಕೀರ್ತಿಯನ್ನು ಹೀರಿ, ನಿನ್ನ ಹೆಸರು ದಿಗಂತವಿಶ್ರಾಂತವಾಗುವಂತೆ ಮಾಡಿದ್ದೀಯೆ! (೧೫-೧೬) ಹೈಹಯೇಶ್ವರ, ಈಗ ನನ್ನ ಪ್ರಾರ್ಥನೆಗೆ ಮನ್ನಣೆಯನ್ನಿತ್ತು ವತ್ಸನಾದ ರಾವಣನನ್ನು ಸೆರೆಯಿಂದ ಬಿಡು!" ಎಂದರು ಆಗ, ಶ್ರೀರಾಮ, ಕಾರ್ತವೀರ್ಯನು ಪ್ರತಿಯಾಗಿ ಒಂದು ಮಾತನ್ನೂ ಆಡದೆ ಪುಲಸ್ತ್ಯರ ಆಜ್ಞೆಯನ್ನು ಶಿರಸಾವಹಿಸಿ ಸಂತೋಷದಿಂದಲೇ ರಾವಣನನ್ನು ಬಿಡುಗಡೆಮಾಡಿದನು (೧೭). ಅರ್ಜುನನು ದೇವಶತ್ರುವಾದ ರಾವಣನನ್ನು ವಿಮೋಚನಗೊಳಿಸಿ ದಿವ್ಯವಾದ ಪುಷ್ಪಾಭರಣವಸ್ತ್ರಗಳಿಂದ ಸತ್ಕರಿಸಿ, ಇನ್ನು ಮುಂದೆ ಒಬ್ಬರನ್ನೊಬ್ಬರು ಹಿಂಸಿಸಬಾರದೆಂದು ಅಗ್ನಿಸಾಕ್ಷಿಕವಾಗಿ ಸಖ್ಯವನ್ನು ಮಾಡಿಕೊಂಡನು. ಅನಂತರ ಬ್ರಹ್ಮಪುತ್ರರಾದ ಪುಲಸ್ತ್ಯರಿಗೆ ಅಭಿವಂದಿಸಿ ರಾಜಭವನದೊಳಗೆ ಹೋದನು (೧೮) ಹೀಗೆ ಪ್ರತಾಪಶಾಲಿಯಾದ ರಾಕ್ಷಸೇಂದ್ರನು ಪರಾಜಿತನಾಗಿ ಪುಲಸ್ತ್ಯರ ದೆಸೆಯಿಂದ ಬಿಡುಗಡೆಹೊಂದಿದನು ಲಜ್ಜಿಸುತ್ತಲೇ ಅರ್ಜುನನಿಂದ ಆಲಂಗಿಸಲ್ಪಟ್ಟು ಸತ್ಕೃತನಾಗಿ, ಪುಲಸ್ತ್ಯರ ಅನುಮತಿಯನ್ನು

ಏವಂ ಸ ರಾವಣಃ ಪ್ರಾಪ್ತಃ ಕಾರ್ತವೀರ್ಯಾತ್ ಪ್ರಧರ್ಷಣಮ್ ।
ಪುಲಸ್ತ್ಯವಚನಾಚ್ಚಾಪಿ ಪುನರ್ಮುಕ್ತೋ ಮಹಾಬಲಃ ॥ ೨೧

ಏವಂ ಬಲಿಭ್ಯೋ ಬಲಿನಃ ಸಂತಿ ರಾಘವನಂದನ ।
ನಾವಜ್ಞಾ ಹಿ ಪರೇ ಕಾರ್ಯಾ ಯ ಇಚ್ಛೇತ್ ಪ್ರಿಯಮಾತ್ಮನಃ ॥

ತತಃ ಸ ರಾಜಾ ಪಿಶಿತಾಶನಾನಾಂ
ಸಹಸ್ರಬಾಹೋರುಪಲಭ್ಯ ಮೈತ್ರೀಮ್ ।
ಪುನರ್ನೃಪಾಣಾಂ ಕದನಂ ಚಕಾರ
ಚಚಾರ ಸರ್ವಾಂ ಪೃಥಿವೀಂ ಚ ದರ್ಪಾತ್ ॥ ೨೩

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರಯಸ್ತ್ರಿಂಶಃ ಸರ್ಗಃ



ಪಡೆದು ಹೊರಟುಹೋದನು! ಪುಲಸ್ತ್ಯಮಹರ್ಷಿಗಳು ರಾವಣನನ್ನು ಸೆರೆಯಿಂದ ಬಿಡಿಸಿ ಬ್ರಹ್ಮಲೋಕಕ್ಕೆ ತೆರಳಿದರು (೧೯-೨೦). ಈ ಪ್ರಕಾರದಲ್ಲಿ ಬಲಾಢ್ಯನಾದ ರಾವಣನೂ ಸಹ ಕಾರ್ತವೀರ್ಯನಿಂದ ಸೋಲನ್ನನುಭವಿಸಿ, ಪುಲಸ್ತ್ಯರಿಂದ ಬಿಡುಗಡೆ ಹೊಂದಬೇಕಾಯಿತು ರಘುನಂದನ, ಹೀಗೆ ಎಂತಹ ಬಲಶಾಲಿಗಳಾದರೂ ಅವರಿಗಿಂತ ಬಲಿಷ್ಠರು ಲೋಕದಲ್ಲಿ ಇದ್ದೇ ಇರುತ್ತಾರೆ ಶ್ರೇಯಸ್ಸನ್ನು ಬಯಸತಕ್ಕವನು ಎಂದಿಗೂ ಇತರರನ್ನು ಅವಮಾನಗೊಳಿಸಕೂಡದು (೨೧-೨೨) ಆದರೇನು? ರಾಕ್ಷಸರಾಜನಾದ ರಾವಣನು ಸಹಸ್ರಬಾಹುವಾದ ಕಾರ್ತವೀರ್ಯನೊಡನೆ ಮೈತ್ರಿಯನ್ನು ಬೆಳೆಸಿ, ಮತ್ತೆ ಸೊಕ್ಕಿನಿಂದ ಭೂಮಂಡಲದಲ್ಲಲೆಯುತ್ತ, ರಾಜರೊಡನೆ ಹೊಡೆದಾಡುತ್ತ ಹಿಂಸಾಕಾರ್ಯದಲ್ಲಿ ನಿರತನಾಗಿದ್ದನು (೨೩)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತುಮೂರನೆಯ ಸರ್ಗ



## ಚತುಸ್ತ್ರಿಂಶಃ ಸರ್ಗಃ

### ವಾಲಿರಾವಣಸಖ್ಯಮ್

ಅರ್ಜುನೇನ ವಿಮುಕ್ತಸ್ತು ರಾವಣೋ ರಾಕ್ಷಸಾಧಿಪಃ ।
ಚಚಾರ ಪೃಥಿವೀಂ ಸರ್ವಾಮನಿರ್ವಿಣ್ಣಸ್ತಥಾ ಕೃತಃ ॥ ೧

ರಾಕ್ಷಸಂ ವಾ ಮನುಷ್ಯಂ ವಾ ಶೃಣುತೇ ಯಂ ಬಲಾಧಿಕಮ್ ।
ರಾವಣಸ್ತಂ ಸಮಾಸಾದ್ಯ ಯುದ್ಧೇ ಹ್ವಯತಿ ದರ್ಪಿತಃ ॥ ೨

ತತಃ ಕದಾಚಿತ್ ಕಿಷ್ಕಿಂಧಾಂ ನಗರೀಂ ವಾಲಿಪಾಲಿತಾಮ್ ।
ಗತ್ವಾ ಹ್ವಯತಿ ಯುದ್ಧಾಯ ವಾಲಿನಂ ಹೇಮಮಾಲಿನಮ್ ॥ ೩

ತತಸ್ತು ವಾನರಾಮಾತ್ಯಸ್ತಾರಸ್ತಾರಾಪಿತಾ ಪ್ರಭುಃ ।
ಉವಾಚ ವಾನರೋ ವಾಕ್ಯಂ ಯುದ್ಧಪ್ರೇಪ್ಸುಮುಪಾಗತಮ್ ॥ ೪

### ಸರ್ಗ ೩೪

ರಾವಣನು ವಾಲಿಯೊಡನೆ ಯುದ್ಧಕ್ಕಾಗಿ ಹೋಗುವುದು ವಾಲಿಯು ಅವನನ್ನು
ಬಗಲಲ್ಲಿ ಅಮುಕಿಹಿಡಿದು ನಾಲ್ಕು ಸಮುದ್ರಗಳಿಗೂ ಹೋಗಿ
ಕಿಷ್ಕಿಂಧೆಗೆ ತಂದು ಬಿಡುವುದು ವಾಲಿ ರಾವಣರ ಸಖ್ಯ.

ಶ್ರೀರಾಮ, ಕಾರ್ತವೀರ್ಯಾರ್ಜುನನಿಂದ ವಿಮುಕ್ತನಾದ ರಾವಣನು ತನಗೊದಗಿದ ದುರವಸ್ಥೆಯಿಂದ ನಿರ್ವಿಣ್ಣನಾಗಲಿಲ್ಲ ಪುನಃ ಕದನ ಕುತೂಹಲದಿಂದ ಅಲೆಯುತ್ತಲೇ ಇದ್ದನು ಯಾವನಾದರೊಬ್ಬ ರಾಕ್ಷಸನೋ ಮನುಷ್ಯನೋ ಬಲಶಾಲಿಯೆಂದು ಅವನ ಕಿವಿಗೆ ಬಿದ್ದರೆ ಸಾಕು, ಒಡನೆಯೇ ಅವನ ಬಳಿಗೆ ಹೋಗಿ ದರ್ಪದಿಂದ ಸಮರಕ್ಕೆ ಆಹ್ವಾನಿಸುತ್ತಿದ್ದನು (೧-೨) ಹೀಗಿರಲು ಒಮ್ಮೆ ವಾಲಿ ವಾಲಿತವಾದ ಕಿಷ್ಕಿಂಧಾನಗರಕ್ಕೆ ಹೋಗಿ ಹೇಮಮಾಲಿಯಾದ ವಾಲಿಯು ಕದನಕ್ಕೆ ಬರಲೆಂದು ಕರೆಯಿತ್ತನು ಆಗ ವಾಲಿಯ ಅಮಾತ್ಯನೂ ತಾರೆಯ ತಂದೆಯೂ ಆದ ತಾರನು ರಾವಣನನ್ನು

ರಾಕ್ಷಸೇಂದ್ರ ಗತೋ ವಾಲೀ ಯಸ್ತೇ ಪ್ರತಿಬಲೋ ಭವೇತ್ ।
ಕೋಽನ್ಯಃ ಪ್ರಮುಖತಃ ಸ್ಥಾತುಂ ತವ ಶಕ್ತಃ ಪ್ಲವಂಗಮಃ ॥ ೫
ಚತುರ್ಭ್ಯೋಽಪಿ ಸಮುದ್ರೇಭ್ಯಃ ಸಂಧ್ಯಾಮನ್ವಾಸ್ಯ ರಾವಣ ।
ಇಮಂ ಮುಹೂರ್ತಮಾಯಾತಿ ವಾಲೀ ತಿಷ್ಠ ಮುಹೂರ್ತಕಮ್ ॥
ಏತಾನಸ್ಥಿಚಯಾನ್ ಪಶ್ಯ ಯ ಏತೇ ಶಂಖಪಾಂಡರಾಃ ।
ಯುದ್ಧಾರ್ಥಿನಾಮಿಮೇ ರಾಜನ್ ವಾನರಾಧಿಪತೇಜಸಾ ॥ ೭
ಯದ್ವಾಮೃತರಸಃ ಪೀತಸ್ತ್ವಯಾ ರಾವಣ ರಾಕ್ಷಸ ।
ತದಾ ವಾಲಿನಮಾಸಾದ್ಯ ತದಂತಂ ತವ ಜೀವಿತಮ್ ॥ ೮
ಪಶ್ಯೇದಾನೀಂ ಜಗಚ್ಚಿತ್ರಮಿದಂ ವಿಶ್ರವಸಃ ಸುತ ।
ಇಮಂ ಮುಹೂರ್ತಂ ತಿಷ್ಠಸ್ವ ದುರ್ಲಭಂ ತೇ ಭವಿಷ್ಯತಿ ॥ ೯
ಅಥವಾ ತ್ವರಸೇ ಮರ್ತುಂ ಗಚ್ಛ ದಕ್ಷಿಣಸಾಗರಮ್ ।
ವಾಲಿನಂ ದ್ರಕ್ಷ್ಯಸೇ ತತ್ರ ಭೂಮಿಷ್ಠಮಿವ ಪಾವಕಮ್ ॥ ೧೦

---

ಕುರಿತು "ರಾಕ್ಷಸೇಂದ್ರ, ನಿನ್ನನ್ನೆದುರಿಸಬಲ್ಲ ವಾಲಿಯು ಹೊರಗೆ ಹೋಗಿದ್ದಾನೆ ನಿನ್ನೆದುರಿಗೆ ನಿಲ್ಲಲು ಯಾವ ವಾನರನಿಗೆ ಸಾಮರ್ಥ್ಯ ಉಂಟು? (೩-೫) ವಾಲಿಯು ಚತುಃಸಮುದ್ರಗಳಿಗೂ ಹೋಗಿ ಸಂಧ್ಯಾವಂದನೆಯನ್ನಾಚರಿಸಿ, ಇನ್ನೇನು ಈಗಲೇ ಬಂದುಬಿಡುವನು ಒಂದು ಮುಹೂರ್ತ ಕಾಲ ಕಾಯುತ್ತಿರು. ರಾವಣ, ಶಂಖದಂತೆ ಬೆಳ್ಳಗಿರುವ ಈ ಮೂಳೆಯ ರಾಶಿಗಳನ್ನು ನೋಡು! ಕದನಕುತೂಹಲದಿಂದ ಬಂದ ವೀರರ ಮೂಳೆಗಳಿವು! ವಾನರೇಶ್ವರನಾದ ವಾಲಿಯ ತೇಜೋಮಹಿಮೆಯಿಂದ ಇವು ಈ ರೀತಿಯಲ್ಲಿ ಪೇರಿಸಿಬಿದ್ದಿವೆ! (೬-೭) ರಾಕ್ಷಸರಾಜ, ನೀನೇನಾದರೂ ಅಮೃತವನ್ನು ಕುಡಿದು ಬಂದಿರುವೆಯಾ? ಕುಡಿದಿದ್ದರೂ ವಾಲಿಯನ್ನೆದುರಿಸುವವರೆಗೆ ಮಾತ್ರ ನೀನು ಜೀವಿಸಬಲ್ಲೆ! ಎಲೈ ವಿಶ್ರವಸ್ಸುತ, ಅದ್ಭುತವಾದ ಈ ಜಗಚ್ಚಿತ್ರವನ್ನು ಸ್ವಲ್ಪಕಾಲ ನೋಡುತ್ತಿರು ಒಂದು ಮುಹೂರ್ತ ತಡೆದುಕೊ. ಆಮೇಲೆ ನೋಡಲು ಈ ಚಿತ್ರವು ನಿನಗೆ ದೊರಕದು! (೮-೯). ಅಥವಾ ಬೇಗನೆ ಸಾಯಬೇಕೆಂದು ನೀನು ತ್ವರೆಪಡುವುದಾದರೆ, ದಕ್ಷಿಣ ಸಮುದ್ರಕ್ಕೆ ಹೋಗು! ಭೂಮಿಗೆ ಇಳಿದು ಬಂದ ಅಗ್ನಿಯೋ ಎಂಬಂತೆ

ಸ ತು ತಾರಂ ವಿನಿರ್ಭರ್ತ್ಸ್ಯ ರಾವಣೋ ಲೋಕರಾವಣಃ ।
ಪುಷ್ಪಕಂ ತತ್ ಸಮಾರುಹ್ಯ ಪ್ರಯಯೌ ದಕ್ಷಿಣಾರ್ಣವಮ್ ॥ ೧೧
ತತ್ರ ಹೇಮಗಿರಿಪ್ರಖ್ಯಂ ತರುಣಾರ್ಕನಿಭಾನನಮ್ ।
ರಾವಣೋ ವಾಲಿನಂ ದೃಷ್ಟ್ವಾ ಸಂಧ್ಯೋಪಾಸನತತ್ಪರಮ್ ॥ ೧೨
ಪುಷ್ಪಕಾದವರುಹ್ಯಾಥ ರಾವಣೋಽಂಜನಸನ್ನಿಭಃ ।
ಗ್ರಹೀತುಂ ವಾಲಿನಂ ತೂರ್ಣಂ ನಿಃಶಬ್ದಪದಮಾವ್ರಜತ್ ॥ ೧೩
ಯದೃಚ್ಛಯಾ ತದಾ ದೃಷ್ಟೋ ವಾಲಿನಾಪಿ ಸ ರಾವಣಃ ।
ಪಾಪಾಭಿಪ್ರಾಯಕಂ ದೃಷ್ಟ್ವಾ ಚಕಾರ ನ ತು ಸಂಭ್ರಮಮ್ ॥
ಶಶಮಾಲಕ್ಷ್ಯ ಸಿಂಹೋ ವಾ ಪನ್ನಗಂ ಗರುಡೋ ಯಥಾ ।
ನ ಚಿಂತಯತಿ ತಂ ವಾಲೀ ರಾವಣಂ ಪಾಪನಿಶ್ಚಯಮ್ ॥ ೧೫
ಜಿಘೃಕ್ಷಮಾಣಮಾಯಾಂತಂ ರಾವಣಂ ಪಾಪಚೇತಸಮ್ ।
ಕಕ್ಷಾವಲಂಬಿನಂ ಕೃತ್ವಾ ಗಮಿಷ್ಯೇ ತ್ರೀನ್ ಮಹಾರ್ಣವಾನ್ ॥ ೧೬

---

ಜ್ವಲಿಸುವ ವಾಲಿಯನ್ನು ಅಲ್ಲಿ ನೀನು ಕಾಣುವೆ" ಎಂದು ಹೇಳಿದನು (೧೦) ಆ ನುಡಿಯನ್ನು ಕೇಳಿ ಲೋಕರಾವಣನೆನಿಸಿದ ರಾವಣನು ತಾರನನ್ನು ಗದರಿಸಿ ಪುಷ್ಪಕವನ್ನೇರಿ ನೇರವಾಗಿ ದಕ್ಷಿಣಸಾಗರಕ್ಕೆ ಸಾರಿದನು ಆ ಸಾಗರ ತೀರದಲ್ಲಿ ಬಾಲಸೂರ್ಯನಂತೆ ಹೊಳೆಯುವ ಮುಖವುಳ್ಳ ವಾಲಿಯು ಸುವರ್ಣಪರ್ವತದಂತೆ ಬೆಳಗುತ್ತ ಸಂಧ್ಯೋಪಾಸನೆಯಲ್ಲಿ ನಿರತನಾಗಿದ್ದನು (೧೧-೧೨) ಅವನನ್ನು ನೋಡಿ ಅಂಜನಗಿರಿಯಂತಿದ್ದ ರಾವಣನು ಪುಷ್ಪಕದಿಂದಿಳಿದು, ವಾಲಿಯನ್ನು ಬಾಹುಗಳಿಂದ ಹಿಡಿದು ಬಂಧಿಸಬೇಕೆಂದು ಶಬ್ದವಾಗದಂತೆ ಹೆಜ್ಜೆಯಿಡುತ್ತ ಅವನ ಹಿಂದುಗಡೆಯಲ್ಲಿ ಬಂದನು (೧೩) ರಾವಣನು ದುರುದ್ದೇಶದಿಂದ ಬರುತ್ತಿರುವುದು ವಾಲಿಗೆ ಕಂಡಿತು ಆದರೆ ಅವನು ಕಿಂಚಿತ್ತೂ ಸಂಭ್ರಾಂತನಾಗಲಿಲ್ಲ ಮೊಲವನ್ನು ನೋಡಿ ಸಿಂಹಕ್ಕಾಗಲಿ, ಹಾವನ್ನು ನೋಡಿ ಗರುಡನಿಗಾಗಲಿ ದಿಗಿಲಾಗುವುದೆ? ಹಾಗೆಯೇ ದುರುದ್ದೇಶದಿಂದ ತನ್ನನ್ನು ಬಂಧಿಸಬೇಕೆಂದು ಬರುತ್ತಿದ್ದ ರಾವಣನನ್ನು ವಾಲಿಯು ಲಕ್ಷಿಸಲಿಲ್ಲ (೧೪-೧೫). "ಹತ್ತಿರ ಬರಲಿ! ಪಾಪಿಯಾದ ಈ ರಾವಣನನ್ನು ಬಗಲಲ್ಲಿ ಅಮುಕಿಹಿಡಿದು ಉಳಿದ ಮೂರು ಕಡಲುಗಳಿಗೂ

ದ್ರಕ್ಷ್ಯಂತ್ಯರಿಂ ಮಮಾಂಕಸ್ಥಂ ಸ್ರಂಸದೂರುಕರಾಂಬರಮ್ ।
ಲಂಬಮಾನಂ ದಶಗ್ರೀವಂ ಗರುಡಸ್ಯೇವ ಪನ್ನಗಮ್ ॥ ೧೭

ಇತ್ಯೇವಂ ಮತಿಮಾಸ್ಥಾಯ ವಾಲೀ ಮೌನಮುಪಾಶ್ರಿತಃ ।
ಜಪನ್ ವೈ ನೈಗಮಾನ್ ಮಂತ್ರಾಂಸ್ತಸ್ಥೌ ಪರ್ವತರಾಡಿವ ॥ ೧೮

ತಾವನ್ಯೋನ್ಯಂ ಜಿಘೃಕ್ಷಂತೌ ಹರಿರಾಕ್ಷಸಪಾರ್ಥಿವೌ ।
ಪ್ರಯತ್ನವಂತೌ ತತ್ ಕರ್ಮ ಈಹತುರ್ಬಲದರ್ಪಿತೌ ॥ ೧೯

ಹಸ್ತಗ್ರಾಹಂ ತು ತಂ ಮತ್ವಾ ಪಾದಶಬ್ದೇನ ರಾವಣಮ್ ।
ಪರಾಙ್ಮುಖೋಽಪಿ ಜಗ್ರಾಹ ವಾಲೀ ಸರ್ಪಮಿವಾಂಡಜಃ ॥ ೨೦

ಗ್ರಹೀತುಕಾಮಂ ತಂ ಗೃಹ್ಯ ರಕ್ಷಸಾಮೀಶ್ವರಂ ಹರಿಃ ।
ಖಮುತ್ಪಪಾತ ವೇಗೇನ ಕೃತ್ವಾ ಕಕ್ಷಾವಲಂಬಿನಮ್ ॥ ೨೧

ತಂ ಚಾಪೀಡಯಮಾನಂ ತು ವಿತುದಂತಂ ನಖೈರ್ಮುಹುಃ ।
ಜಹಾರ ರಾವಣಂ ವಾಲೀ ಪವನಸ್ತೋಯದಂ ಯಥಾ ॥ ೨೨

---

ಹಾರಿಹೋಗುವೆನು! ಈತನ ತೊಡೆಗಳೂ ಕೈಗಳೂ ಜೋತಾಡುತ್ತಿರಲು, ಉಟ್ಟಬಟ್ಟೆಯು ಸಡಿಲವಾಗಿರಲು, ಈ ವೈರಿಯು ನನ್ನ ಬಗಲಲ್ಲಿ ನೇತಾಡುವುದನ್ನು ಜನರು ನೋಡಲಿ! ಗರುಡನು ಸರ್ಪವನ್ನು ಹಿಡಿದು ಹಾರುವಂತೆ ಈ ದಶಗ್ರೀವನನ್ನು ಹಿಡಿದು ನಭೋಮಾರ್ಗದಲ್ಲಿ ನೆಗೆಯುವೆನು!" ಎಂದು ವಾಲಿಯು ಆಲೋಚಿಸಿ ಸುಮ್ಮನಿದ್ದನು ವೇದೋಕ್ತಮಂತ್ರಗಳನ್ನು ಜಪಿಸುತ್ತ ಪರ್ವತರಾಜನಂತೆ ನಿಶ್ಚಲನಾಗಿ ಕುಳಿತನು! (೧೬-೧೮) ರಾಕ್ಷಸೇಶ್ವರನೂ ಕಪೀಶ್ವರನೂ ಬಲದರ್ಪದಿಂದ ಒಬ್ಬರನ್ನೊಬ್ಬರು ಹಿಡಿಯಬೇಕೆಂಬ ಹಂಚಿಕೆಯಲ್ಲಿದ್ದರು ರಾವಣನು ಕೈಗೆ ನಿಲುಕುವಷ್ಟು ಹತ್ತಿರಕ್ಕೆ ಬಂದನೆಂದು ಹೆಜ್ಜೆಯ ಸಪ್ಪಳದಿಂದ ವಾಲಿಗೆ ತಿಳಿಯಿತು ಒಡನೆಯೇ ಅವನು ಹಿಂದಿರುಗಿನೋಡದೆ ಗಪ್ಪನೆ ಕೈಯನ್ನು ನೀಡಿ, ಗರುಡನು ಸರ್ಪವನ್ನು ಹಿಡಿಯುವಂತೆ ರಾವಣನನ್ನು ಹಿಡಿದು ಬಗಲಲ್ಲಿ ಅವಚಿಕೊಂಡು ಥಟ್ಟನೆ ಆಕಾಶಕ್ಕೆ ನೆಗೆದನು! (೧೯-೨೧) ರಾವಣನು ವಾಲಿಯನ್ನು ಉಗುರುಗಳಿಂದ ಪರಚಿ ಪೀಡಿಸುತ್ತಿದ್ದರೂ ಲಕ್ಷಿಸದೆ ವಾಲಿಯು, ಗಾಳಿಯು ಮೇಘವನ್ನು ಹೊತ್ತುಕೊಂಡೊಯ್ಯುವಂತೆ ಅವನನ್ನು ಒಯ್ದನು (೨೨).

ಅಥ ತೇ ರಾಕ್ಷಸಾಮಾತ್ಯಾ ಹ್ರಿಯಮಾಣಂ ದಶಾನನಮ್ ।
ಮುಮೋಕ್ಷಯಿಷವೋ ವಾಲಿಂ ರವಮಾಣಾ ಅಭಿದ್ರುತಾಃ ॥ ೨೩

ಅನ್ವೀಯಮಾನಸ್ತೈರ್ವಾಲೀ ಭ್ರಾಜತೇಽಂಬರಮಧ್ಯಗಃ ।
ಅನ್ವೀಯಮಾನೋ ಮೇಘೌಘೈರಂಬರಸ್ಥ ಇವಾಂಶುಮಾನ್ ॥ ೨೪

ತೇಽಶಕ್ನುವಂತಃ ಸಂಪ್ರಾಪ್ತುಂ ವಾಲಿನಂ ರಾಕ್ಷಸೋತ್ತಮಾಃ ।
ತಸ್ಯ ಬಾಹೂರುವೇಗೇನ ಪರಿಶ್ರಾಂತಾ ವ್ಯವಸ್ಥಿತಾಃ ॥ ೨೫

ವಾಲಿಮಾರ್ಗಾದಪಾಕ್ರಾಮನ್ ಪರ್ವತೇಂದ್ರಾ ಹಿ ಗಚ್ಛತಃ ।
ಕಿಂ ಪುನರ್ಜೀವಿತಪ್ರೇಪ್ಸುರ್ಬಿಭ್ರದ್ವೈ ಮಾಂಸಶೋಣಿತಮ್ ॥ ೨೬

ಅಪಕ್ಷಿಗಣಸಂಪಾತಾನ್ ವಾನರೇಂದ್ರೋ ಮಹಾಜವಃ ।
ಕ್ರಮಶಃ ಸಾಗರಾನ್ ಸರ್ವಾನ್ ಸಂಧ್ಯಾಕಾಲಮವಂದತ ॥ ೨೭

ಸಭಾಜ್ಯಮಾನೋ ಭೂತೈಸ್ತು ಖೇಚರೈಃ ಖೇಚರೋತ್ತಮಃ ।
ಪಶ್ಚಿಮಂ ಸಾಗರಂ ವಾಲೀ ಹ್ಯಾಜಗಾಮ ಸರಾವಣಃ ॥ ೨೮

---

ರಾವಣನ ಅಮಾತ್ಯರು ಆತನ ಪರಿಸ್ಥಿತಿಯನ್ನು ಕಂಡು ಬಿಡಿಸಿಕೊಳ್ಳುವುದಕ್ಕಾಗಿ ಕೂಗಾಡುತ್ತ ವಾಲಿಯನ್ನಟ್ಟಿಸಿಕೊಂಡು ಧಾವಿಸಿದರು ಆ ರಾಕ್ಷಸರು ಬೆಂಬಿಡಿದು ಬರುತ್ತಿರಲಾಗಿ ವಾಲಿಯು, ಮೇಘಗಳಿಂದ ಪರಿವೃತನಾದ ಸೂರ್ಯನಂತೆ ಗಗನಮಧ್ಯದಲ್ಲಿ ಕಂಗೊಳಿಸುತ್ತಿದ್ದನು (೨೩-೨೪) ವಾಲಿಯ ಬಾಹು ಮತ್ತು ಊರುಗಳ ವೇಗವು ಅತಿಶಯವಾದ್ದರಿಂದ ಅವನನ್ನು ಹಿಡಿಯಲು ಸಾಧ್ಯವಾಗದೆ ರಾಕ್ಷಸರು ಬಳಲಿ ದೂರ ಸರಿದರು ಅಲ್ಲದೆ ವಾಲಿಗೆ ದಾರಿಯನ್ನಿತ್ತು ಪರ್ವತಗಳೇ ಸರಿದು ನಿಂತಾಗ, ಬದುಕಲಿಚ್ಛಿಸುವ ಮಾಂಸರಕ್ತಧಾರಿಗಳಾದ ರಾಕ್ಷಸರು ಇನ್ನೇನು ಮಾಡಬಲ್ಲರು! (೨೫-೨೬). ಅದ್ಭುತವೇಗಶಾಲಿಯಾದ ವಾನರೇಂದ್ರನು ಹಕ್ಕಿಗಳಿಗೂ ನಿಲುಕದ ಸಕಲ ಸಮುದ್ರಗಳಿಗೂ ಹೋಗಿ ಸಂಧ್ಯಾವಂದನೆಯನ್ನಾಚರಿಸಿದನು (೨೭). ವಾಲಿಯು ರಾವಣನನ್ನು ಹಿಡಿದುಕೊಂಡೇ ಗಗನಚಾರಿಯಾಗಿ, ಗಗನಚಾರಿಗಳಾದ ಗಂಧರ್ವಾದಿಗಳಿಂದ ಸ್ತುತಿಸಲ್ಪಡುತ್ತ (ದಕ್ಷಿಣದಿಂದ) ಪಶ್ಚಿಮಸಾಗರಕ್ಕೆ ಬಂದನು (೨೮)

*

ತಸ್ಮಿನ್ ಸಂಧ್ಯಾಮುಪಾಸಿತ್ವಾ ಸ್ನಾತ್ವಾ ಜಪ್ತ್ವಾ ಚ ವಾನರಃ ।
ಉತ್ತರಂ ಸಾಗರಂ ಪ್ರಾಯಾದ್ವಹಮಾನೋ ದಶಾನನಮ್ ॥ ೨೯

ಬಹುಯೋಜನಸಾಹಸ್ರಂ ವಹಮಾನೋ ಮಹಾಹರಿಃ ।
ವಾಯುವಚ್ಚ ಮನೋವಚ್ಚ ಜಗಾಮ ಸಹ ಶತ್ರುಣಾ ॥ ೩೦

ಉತ್ತರೇ ಸಾಗರೇ ಸಂಧ್ಯಾಮುಪಾಸಿತ್ವಾ ದಶಾನನಮ್ ।
ವಹಮಾನೋಽಗಮದ್ವಾಲೀ ಪೂರ್ವಂ ವೈ ಸ ಮಹೋದಧಿಮ್ ॥

ತತ್ರಾಪಿ ಸಂಧ್ಯಾಮನ್ವಾಸ್ಯ ವಾಸವಿಃ ಸ ಹರೀಶ್ವರಃ ।
ಕಿಷ್ಕಿಂಧಾಮಭಿತೋ ಗೃಹ್ಯ ರಾವಣಂ ಪುನರಾಗಮತ್ ॥ ೩೨

ಚತುರ್ಷ್ವಪಿ ಸಮುದ್ರೇಷು ಸಂಧ್ಯಾಮನ್ವಾಸ್ಯ ವಾನರಃ ।
ರಾವಣೋದ್ವಹನಶ್ರಾಂತಃ ಕಿಷ್ಕಿಂಧೋಪವನೇಽಪತತ್ ॥ ೩೩

ರಾವಣಂ ತು ಮುಮೋಚಾಥ ಸ್ವಕಕ್ಷಾತ್ ಕಪಿಸತ್ತಮಃ ।
ಕುತಸ್ತ್ವಮಿತಿ ಚೋವಾಚ ಪ್ರಹಸನ್ ರಾವಣಂ ಮುಹುಃ ॥ ೩೪

ಅಲ್ಲಿ ಸ್ನಾನಸಂಧ್ಯಾಜಪಗಳನ್ನು ಮುಗಿಸಿ, ದಶಕಂಠನನ್ನು ಹೊತ್ತುಕೊಂಡೇ ಉತ್ತರ ಸಾಗರಕ್ಕೆ ಹೋದನು. ಆ ಮಹಾವಾನರನು ಶತ್ರುವಾದ ರಾವಣನೊಡನೆಯೇ ವಾಯುವೇಗ ಮನೋವೇಗಗಳಿಂದ ಸಾವಿರಾರು ಯೋಜನಗಳನ್ನು ಅತಿಕ್ರಮಿಸಿದನು (೨೯-೩೦) ಉತ್ತರಸಾಗರದಲ್ಲಿ ಸಂಧ್ಯಾವಂದನೆಯನ್ನಾಚರಿಸಿ ಪೂರ್ವಸಾಗರಕ್ಕೆ ಹೋದನು ಇಂದ್ರತನಯನಾದ ಆ ಕಪೀಶ್ವರನು ಅಲ್ಲಿ ಸಂಧ್ಯಾದೇವಿಯ ಉಪಾಸನೆಯನ್ನು ಮುಗಿಸಿ ರಾವಣ ಸಮೇತನಾಗಿ ಕಿಷ್ಕಿಂಧೆಗೆ ಬಂದನು!* (೩೧-೩೨) ಹೀಗೆ ನಾಲ್ಕು ಸಮುದ್ರಗಳಲ್ಲಿಯೂ ಸಂಧ್ಯೆಯನ್ನು ಉಪಾಸಿಸಿ ರಾವಣನನ್ನು ಹೊತ್ತು ತಂದಿದ್ದ ವಾಲಿಯು ಬಳಲಿ ಕಿಷ್ಕಿಂಧೆಯ ಉಪವನದಲ್ಲಿ ಕೆಳಗಿಳಿದನು.

* ಒಂದು ಸಂಧ್ಯಾವಂದನೆಯನ್ನೇ ನಾಲ್ಕು ಸಲ ಮಾಡಲು ಅವಕಾಶವಿಲ್ಲ ಆದ್ದರಿಂದ ಶೌಚ, ಸ್ನಾನ, ಮಾರ್ಜನ, ಅರ್ಘ್ಯಪ್ರದಾನಾದಿಕಾರ್ಯ—ಈ ನಾಲ್ಕನ್ನು ಕ್ರಮವಾಗಿ ನಾಲ್ಕು ಸಮುದ್ರಗಳಲ್ಲಿ ಮಾಡಿದನೆಂದು ತಿಳಿಯಬೇಕು ಅಥವಾ ಗಾಯತ್ರಿಯ ಅರ್ಥವಾದ ಪರಬ್ರಹ್ಮದ ಧ್ಯಾನವೇ ಸಂಧ್ಯಾವಂದನೆಯ ಮುಖ್ಯಾರ್ಥ ಶೌಚಾದಿಗಳನ್ನು ಒಂದೇಕಡೆಯಲ್ಲಿ ಮುಗಿಸಿ ಗಾಯತ್ರೀಜಪವನ್ನು ನಾಲ್ಕು ಸಮುದ್ರ ತೀರಗಳಲ್ಲಿಯೂ ಮಾಡಿದನೆಂದು ತಿಳಿಯಬೇಕು

ವಿಸ್ಮಯಂ ತು ಮಹದ್ಗತ್ವಾ ಶ್ರಮಲೋಲನಿರೀಕ್ಷಣಃ ।
ರಾಕ್ಷಸೇಂದ್ರೋ ಹರೀಂದ್ರಂ ತಮಿದಂ ವಚನಮಬ್ರವೀತ್ ॥ ೩೫

ವಾನರೇಂದ್ರ ಮಹೇಂದ್ರಾಭ ರಾಕ್ಷಸೇಂದ್ರೋಽಸ್ಮಿ ರಾವಣಃ ।
ಯುದ್ಧೇಪ್ಸುರಿಹ ಸಂಪ್ರಾಪ್ತಃ ಸ ಚಾದ್ಯಾಸಾದಿತಸ್ತ್ವಯಾ ॥ ೩೬

ಅಹೋಬಲಮಹೋವೀರ್ಯಮಹೋಗಾಂಭೀರ್ಯಮೇವ ಚ ।
ಯೇನಾಹಂ ಪಶುವದ್ಗೃಹ್ಯ ಭ್ರಾಮಿತಶ್ಚತುರೋಽರ್ಣವಾನ್ ॥ ೩೭

ಏವಮಶ್ರಾಂತವದ್ವೀರ ಶೀಘ್ರಮೇವ ಮಹಾರ್ಣವಾನ್ ।
ಮಾಂ ಚೈವೋದ್ವಹಮಾನಸ್ತು ಕೋಽನ್ಯೋ ವೀರಃ ಕ್ರಮಿಷ್ಯತಿ ॥

ತ್ರಯಾಣಾಮೇವ ಭೂತಾನಾಂ ಗತಿರೇಷಾ ಪ್ಲವಂಗಮ ।
ಮನೋಽನಿಲಸುಪರ್ಣಾನಾಂ ತವ ಚಾತ್ರ ನ ಸಂಶಯಃ ॥ ೩೯

ಸೋಽಹಂ ದೃಷ್ಟಬಲಸ್ತುಭ್ಯಮಿಚ್ಛಾಮಿ ಹರಿಪುಂಗವ ।
ತ್ವಯಾ ಸಹ ಚಿರಂ ಸಖ್ಯಂ ಸುಸ್ನಿಗ್ಧಂ ಪಾವಕಾಗ್ರತಃ ॥ ೪೦

---

ಅನಂತರ ಬಗಲಿನಿಂದ ರಾವಣನನ್ನು ಹೊರಗೆಬಿಟ್ಟು "ಎಲಾ! ಯಾರು ನೀನು?" ಎಂದು ನಗುತ್ತ ರಾವಣನನ್ನು ಕೇಳಿದನು! (೩೩-೩೪) ರಾಕ್ಷಸೇಂದ್ರನ ಕಣ್ಣುಗಳು ಬಳಲಿ ತೊಳಲುತ್ತಿದ್ದವು ವಾಲಿಯು ಮತ್ತೆಮತ್ತೆ ಕೇಳಲಾಗಿ ವಿಸ್ಮಿತನಾದ ರಾವಣನು "ವಾನರೇಂದ್ರ-ಮಹೇಂದ್ರಸದೃಶ ವಿಕ್ರಮ, ನಾನು ರಾಕ್ಷಸೇಶ್ವರನಾದ ರಾವಣ! ನಿನ್ನೊಡನೆ ಯುದ್ಧಮಾಡುವುದಕ್ಕಾಗಿ ಬಂದು ನಿನ್ನ ಹಿಡಿತದಲ್ಲಿ ಸಿಕ್ಕಿಕೊಂಡೆನು! (೩೫-೩೬). ಅಬ್ಬಾ! ನಿನ್ನ ಪರಾಕ್ರಮವೆ! ನಿನ್ನ ಶೌರ್ಯವೇನು! ಗಾಂಭೀರ್ಯವೇನು! ಒಂದು ಮೃಗವೋ ಎಂಬಂತೆ ನನ್ನನ್ನು ಹಿಡಿದು ನಾಲ್ಕೂ ಸಮುದ್ರಗಳಿಗೂ ಎಳೆದೊಯ್ದು ಅಲೆಸಿಬಿಟ್ಟೆಯಲ್ಲ! (೩೭) ವೀರಾಗ್ರಣಿ, ಕೊಂಚವೂ ಬಳಲದೆ ಚತುಃಸಾಗರಗಳಿಗೂ ಹೋಗಿಬರೋಣವೆಂದರೇನು! ಅದರಲ್ಲಿಯೂ ನನ್ನನ್ನು ಹೊತ್ತುಕೊಂಡು! ಈ ಸಾಹಸ ಇನ್ನು ಯಾರಿಗೆ ಸಾಧ್ಯವಾದೀತು? (೩೮) ವಾನರೇಶ್ವರ, ಮನಸ್ಸು ವಾಯು ವೈನತೇಯ—ಈ ಮೂವರಿಗೂ ನಿನಗೂ ಮಾತ್ರವೇ ಸಾಧ್ಯವಾದ ಕಾರ್ಯವಿದು ಸಂದೇಹವಿಲ್ಲ ನಿನ್ನ ಬಲವನ್ನು ನಾನು ಪ್ರತ್ಯಕ್ಷವಾಗಿ ನೋಡಿದೆ ಕಪೀಂದ್ರ, ನಿನ್ನೊಡನೆ ಚಿರಕಾಲದವರೆಗೆ ಸ್ನೇಹವನ್ನು ಬೆಳೆಸಬೇಕೆಂದು ನನಗೆ ಇಚ್ಛೆಯಾಗಿದೆ.

ದಾರಾಃ ಪುತ್ರಾಃ ಪುರಂ ರಾಷ್ಟ್ರಂ ಭೋಗಾಚ್ಛಾದನಭೋಜನಮ್ ।
ಸರ್ವಮೇವಾವಿಭಕ್ತಂ ನೌ ಭವಿಷ್ಯತಿ ಹರೀಶ್ವರ ॥ ೪೧
ತತಃ ಪ್ರಜ್ವಾಲಯಿತ್ವಾಗ್ನಿಂ ತಾವುಭೌ ಹರಿರಾಕ್ಷಸೌ ।
ಭ್ರಾತೃತ್ವಮುಪಸಂಪನ್ನೌ ಪರಿಷ್ವಜ್ಯ ಪರಸ್ಪರಮ್ ॥ ೪೨
ಅನ್ಯೋನ್ಯಂ ಲಂಬಿತಕರೌ ತತಸ್ತೌ ಹರಿರಾಕ್ಷಸೌ ।
ಕಿಷ್ಕಿಂಧಾಂ ವಿಶತುರ್ಹೃಷ್ಟೌ ಸಿಂಹೌ ಗಿರಿಗುಹಾಮಿವ ॥ ೪೩
ಸ ತತ್ರ ಮಾಸಮುಷಿತಃ ಸುಗ್ರೀವ ಇವ ರಾವಣಃ ।
ಅಮಾತ್ಯೈರಾಗತೈರ್ನೀತಸ್ತ್ರೈಲೋಕ್ಯೋತ್ಸಾದನಾರ್ಥಿಭಿಃ ॥ ೪೪
ಏವಮೇತತ್ ಪುರಾ ವೃತ್ತಂ ವಾಲಿನಾ ರಾವಣಃ ಪ್ರಭೋ ।
ಧರ್ಷಿತಶ್ಚ ಕೃತಶ್ಚಾಪಿ ಭ್ರಾತಾ ಪಾವಕಸಂನಿಧೌ ॥ ೪೫
ಬಲಮಪ್ರತಿಮಂ ರಾಮ ವಾಲಿನೋಽಭವದುತ್ತಮಮ್ ।
ಸೋಽಪಿ ತ್ವಯಾ ವಿನಿರ್ದಗ್ಧೋ ವಹ್ನಿನಾ ಶಲಭೋ ಯಥಾ ॥ ೪೬

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುಸ್ತ್ರಿಂಶಃ ಸರ್ಗಃ

---

ಸ್ನೇಹವು ಗಾಢವಾಗಿದ್ದು ಅಗ್ನಿಸಾಕ್ಷಿಕವಾಗಲೆಂದು ನನ್ನ ಬಯಕೆ (೩೯-೪೦). ಮಡದಿ ಮಕ್ಕಳು, ರಾಜ್ಯ ರಾಜಧಾನಿ, ಭೋಗ ಉಡಿಗೆ ಊಟ—ಎಲ್ಲವೂ ನಮಗೆ ಸಮಾನವಾಗಿರಲಿ" ಎಂದು ಹೇಳಿದನು (೪೧) ಆಮೇಲೆ ಕಪೀಶ್ವರ ರಾಕ್ಷಸೇಶ್ವರರು ಅಗ್ನಿಯನ್ನು ಹೊತ್ತಿಸಿ ಅಗ್ನಿಸಾಕ್ಷಿಕವಾಗಿ ಸ್ನೇಹವನ್ನು ಬೆಳೆಸಿದರು ಒಬ್ಬರನ್ನೊಬ್ಬರು ಆಲಿಂಗಿಸಿ ಕೈಹಿಡಿದುಕೊಂಡು ಸಂತೋಷ ದಿಂದ, ಸಿಂಹಗಳು ಗಿರಿಗುಹೆಯನ್ನು ಪ್ರವೇಶಿಸುವಂತೆ ಕಿಷ್ಕಿಂಧೆಯೊಳಗೆ ಹೋದರು (೪೨-೪೩) ರಾವಣನು ಸುಗ್ರೀವನಿದ್ದಂತೆ ವಾಲಿಯೊಡನೆ ಒಂದು ತಿಂಗಳು ಕಿಷ್ಕಿಂಧೆಯಲ್ಲಿ ಸುಖವಾಗಿದ್ದನು ಆಮೇಲೆ ರಾವಣನ ಸಚಿವರು ಬಂದು ಮೂರು ಲೋಕಗಳಿಗೂ ಉಪದ್ರವವನ್ನು ಕೊಡುವುದಕ್ಕಾಗಿ ರಾವಣನನ್ನು ಕರೆದುಕೊಂಡು ಹೋದರು! (೪೪) ಶ್ರೀರಾಮ, ಈ ರೀತಿ ಯಲ್ಲಿ ಹಿಂದೆ ನಡೆಯಿತು. ರಾವಣನು ವಾಲಿಯೊಡನೆ ಸ್ಪರ್ಧಿಸಿ ಸೋತು, ಕಡೆಗೆ ಅಗ್ನಿಸಾಕ್ಷಿಕವಾಗಿ ಗೆಳೆಯನಾದನು ರಾಘವ, ವಾಲಿಗೆ ಅಸದೃಶವಾದ ಪರಾಕ್ರಮವಿತ್ತು ಅವನನ್ನೂ ಸಹ, ಬೆಂಕಿಯು ದೀಪದ ಹುಳುವನ್ನು ಸುಡುವಂತೆ ನೀನು ಸುಟ್ಟುಹಾಕಿದೆ" ಎಂದು ಹೇಳಿದರು (೪೫-೪೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತುನಾಲ್ಕನೆಯ ಸರ್ಗ

## ಪಂಚತ್ರಿಂಶಃ ಸರ್ಗಃ

### ಹನೂಮದುತ್ಪತ್ತಿಃ

ಅಪೃಚ್ಛತ ತದಾ ರಾಮೋ ದಕ್ಷಿಣಾಶಾಶ್ರಯಂ ಮುನಿಮ್ ।
ಪ್ರಾಂಜಲಿರ್ವಿನಯೋಪೇತ ಇದಂ ವಚನಮರ್ಥವತ್ ॥ ೧

ಅತುಲಂ ಬಲಮೇತದ್ವೈ ವಾಲಿನೋ ರಾವಣಸ್ಯ ಚ ।
ನ ತ್ವೇತಾಭ್ಯಾಂ ಹನುಮತಾ ಸಮಂ ತ್ವಿತಿ ಮತಿರ್ಮಮ ॥ ೨

ಶೌರ್ಯಂ ದಾಕ್ಷ್ಯಂ ಬಲಂ ಧೈರ್ಯಂ ಪ್ರಾಜ್ಞತಾ ನಯಸಾಧನಮ್
ವಿಕ್ರಮಶ್ಚ ಪ್ರಭಾವಶ್ಚ ಹನೂಮತಿ ಕೃತಾಲಯಾಃ ॥ ೩

ದೃಷ್ಟ್ವೈವ ಸಾಗರಂ ವೀಕ್ಷ್ಯ ಸೀದಂತೀಂ ಕಪಿವಾಹಿನೀಮ್ ।
ಸಮಾಶ್ವಾಸ್ಯ ಮಹಾಬಾಹುರ್ಯೋಜನಾನಾಂ ಶತಂ ಪ್ಲುತಃ ॥ ೪

ಧರ್ಷಯಿತ್ವಾ ಪುರೀಂ ಲಂಕಾಂ ರಾವಣಾಂತಃಪುರಂ ತದಾ ।
ದೃಷ್ಟ್ವಾ ಸಂಭಾಷಿತಾ ಚಾಪಿ ಸೀತಾ ಹ್ಯಾಶ್ವಾಸಿತಾ ತಥಾ ॥ ೫

## ಸರ್ಗ ೩೫

### ಹನುಮಂತನ ಜನ್ಮ

ಆಗ ಶ್ರೀರಾಮನು ದಕ್ಷಿಣದಿಕ್ಕಿನಲ್ಲಿ ನೆಲೆಸಿದ ಅಗಸ್ತ್ಯಮುನಿಗಳಿಗೆ ಕೈಮುಗಿದು ವಿನಯದಿಂದ “ಮಹರ್ಷಿಗಳೆ, ವಾಲಿರಾವಣರಿಗೆ ಎಣೆಯಿಲ್ಲದ ಪರಾಕ್ರಮವಿತ್ತೆಂಬುದೇನೋ ಹೌದು ಆದರೆ ಅವರದು ಹನುಮಂತನ ಪರಾಕ್ರಮಕ್ಕೆ ಸಮವಲ್ಲವೆಂದು ನನ್ನ ಅಭಿಪ್ರಾಯವಿದೆ' (೧-೨) ಶೌರ್ಯ, ದಕ್ಷತೆ, ಬಲ, ಧೈರ್ಯ, ಬುದ್ಧಿ, ಕಾರ್ಯನೀತಿ, ವಿಕ್ರಮ, ಪ್ರಭಾವಗಳು ಹನುಮಂತನಲ್ಲಿ ನೆಲೆಸಿಬಿಟ್ಟಿವೆ ಸಮುದ್ರವನ್ನು ನೋಡಿದೊಡನೆ ಕಪಿಸೇನೆಯು ಮುಂಗಾಣದೆ ತತ್ತರಿಸಿತು. ಆಗ ಕಪಿಗಳಿಗೆ ಸಮಾಧಾನವನ್ನು ಹೇಳಿ ಈ ವೀರನು ನೂರು ಯೋಜನಗಳನ್ನು ಲಂಘಿಸಿಬಿಟ್ಟನು (೩-೪) ಲಂಕಾನಗರವನ್ನು ಲೆಕ್ಕಿಸದೆ ನುಗ್ಗಿ ರಾವಣನ ಅಂತಃಪುರವನ್ನು ಹೊಕ್ಕನು ಸೀತೆಯನ್ನು ಕಂಡು ಸಂಭಾಷಣೆ ಮಾಡಿ ಸಂತೈಸಿದನು

ಸೇನಾಗ್ರಗಾ ಮಂತ್ರಿಸುತಾಃ ಕಿಂಕರಾ ರಾವಣಾತ್ಮಜಃ ।
ಏತೇ ಹನುಮತಾ ತತ್ರ ಹ್ಯೇಕೇನ ವಿನಿಪಾತಿತಾಃ ॥ ೬

ಭೂಯೋ ಬಂಧಾದ್ವಿಮುಕ್ತೇನ ಭೀಷಯಿತ್ವಾ ದಶಾನನಮ್ ।
ಲಂಕಾ ಭಸ್ಮೀಕೃತಾ ಯೇನ ಪಾವಕೇನೇವ ಮೇದಿನೀ ॥ ೭

ನ ಕಾಲಸ್ಯ ನ ಶಕ್ರಸ್ಯ ನ ವಿಷ್ಣೋರ್ವಿತ್ತಪಸ್ಯ ಚ ।
ಕರ್ಮಾಣಿ ತಾನಿ ಶ್ರೂಯಂತೇ ಯಾನಿ ಯುದ್ಧೇ ಹನೂಮತಃ ॥

ಏತಸ್ಯ ಬಾಹುವೀರ್ಯೇಣ ಲಂಕಾ ಸೀತಾ ಚ ಲಕ್ಷ್ಮಣಃ ।
ಪ್ರಾಪ್ತಾ ಮಯಾ ಜಯಶ್ಚೈವ ರಾಜ್ಯಂ ಮಿತ್ರಾಣಿ ಬಾಂಧವಾಃ ॥ ೯

ಹನೂಮಾನ್ ಯದಿ ನೋ ನ ಸ್ಯಾದ್ವಾನರಾಧಿಪತೇಃ ಸಖಾ ।
ಪ್ರವೃತ್ತಿಮಪಿ ಕೋ ವೇತ್ತುಂ ಜಾನಕ್ಯಾಃ ಶಕ್ತಿಮಾನ್ ಭವೇತ್ ॥

ಕಿಮರ್ಥಂ ವಾಲ್ಯನೇನೈವ ಸುಗ್ರೀವಪ್ರಿಯಕಾಮ್ಯಯಾ ।
ತದಾ ವೈರೇ ಸಮುತ್ಪನ್ನೇ ನ ದಗ್ಧೋ ವೀರುಧೋ ಯಥಾ ॥ ೧೧

---

ರಾವಣನ ಸೇನಾಪತಿಗಳನ್ನೂ ಮಂತ್ರಿಪುತ್ರರನ್ನೂ ಕಿಂಕರರನ್ನೂ ಏಕಾಕಿಯಾಗಿ ಎದುರಿಸಿ ಸದೆಬಡಿದು ಅಕ್ಷಕುಮಾರನನ್ನು ಸಂಹರಿಸಿದನು (೫-೬) ಅಲ್ಲದೆ ಬ್ರಹ್ಮಾಸ್ತ್ರಬಂಧನದಿಂದ ತಪ್ಪಿಸಿಕೊಂಡು ರಾವಣನನ್ನು ಹೆದರಿಸಿ, ಕಾಲಾಗ್ನಿಯು ಭೂಮಂಡಲವನ್ನು ಸುಡುವಂತೆ ಲಂಕೆಯನ್ನು ಸುಟ್ಟು ಬೂದಿ ಮಾಡಿದನು (೭) ರಣರಂಗದಲ್ಲಿ ಹನುಮಂತನೆಸಗಿದ ವೀರಕೃತ್ಯಗಳು ಎಂತಹವು! ಅಂಥ ಸಾಹಸವನ್ನು ಯಮನಾಗಲಿ ಇಂದ್ರನಾಗಲಿ ವಿಷ್ಣುವಾಗಲಿ ವಿತ್ತೇಶನಾಗಲಿ ಎಸಗಿದನೆಂಬುದನ್ನು ನಾವು ಕೇಳಿಲ್ಲ! (೮) ಈತನ ತೋಳ್ಬಲದಿಂದಲೇ ಲಂಕೆ ವಶವಾಯಿತು; ಸೀತೆ ದೊರಕಿದಳು, ಲಕ್ಷ್ಮಣನು ಬದುಕಿದನು, ನನಗೆ ಜಯ ಸಿಕ್ಕಿತು ರಾಜ್ಯವೂ ಮಿತ್ರರೂ ಬಂಧುಗಳೂ ನನಗೆ ಲಭಿಸಿದ್ದು ಹನುಮಂತನಿಂದ (೯) ವಾನರೇಂದ್ರನಾಗಿರುವ ಸುಗ್ರೀವನಿಗೆ ಮಿತ್ರನಾದ ಹನುಮಂತನು ನಮಗೆ ಇಲ್ಲವಾಗಿದ್ದರೆ, ಜಾನಕಿಯ ಸುದ್ದಿಯನ್ನು ತಿಳಿಸುವ ಧೀರನಾದರೂ ಯಾವನಿದ್ದನು? (೧೦) ವಾಲಿಸುಗ್ರೀವರಿಗೆ ವೈರವು ಬೆಳೆದಾಗ ಸುಗ್ರೀವನ ಹಿತಕ್ಕಾಗಿ ಈತನೇ ವಾಲಿ

ನ ಹಿ ವೇದಿತವಾನ್ ಮನ್ಯೇ ಹನೂಮಾನಾತ್ಮನೋ ಬಲಮ್ ।
ಯದ್ದೃಷ್ಟವಾನ್ ಜೀವಿತೇಷ್ಟಂ ಕ್ಲಿಶ್ಯಂತಂ ವಾನರಾಧಿಪಮ್ ॥ ೧೨
ಏತನ್ಮೇ ಭಗವನ್ ಸರ್ವಂ ಹನೂಮತಿ ಮಹಾಮತೌ ।
ವಿಸ್ತರೇಣ ಯಥಾತತ್ತ್ವಂ ಕಥಯಾಮರಪೂಜಿತ ॥ ೧೩
ರಾಘವಸ್ಯ ವಚಃ ಶ್ರುತ್ವಾ ಹೇತುಯುಕ್ತಮೃಷಿಸ್ತದಾ ।
ಹನೂಮತಃ ಸಮಕ್ಷಂ ತಮಿದಂ ವಚನಮಬ್ರವೀತ್ ॥ ೧೪
ಸತ್ಯಮೇತದ್ರಘುಶ್ರೇಷ್ಠ ಯದ್ಬ್ರವೀಷಿ ಹನೂಮತಃ ।
ನ ಬಲೇ ವಿದ್ಯತೇ ತುಲ್ಯೋ ನ ಗತೌ ನ ಮತೌ ಪರಃ ॥ ೧೫
ಅಮೋಘಶಾಪೈಃ ಶಾಪಸ್ತು ದತ್ತೋಽಸ್ಯ ಋಷಿಭಿಃ ಪುರಾ ।
ನ ವೇತ್ತಾ ಹಿ ಬಲಂ ಯೇನ ಬಲೀ ಸನ್ನರಿಮರ್ದನಃ ॥ ೧೬
ಬಾಲ್ಯೇಽಪ್ಯೇತೇನ ಯತ್ ಕರ್ಮ ಕೃತಂ ರಾಮ ಮಹಾಬಲ ।
ತನ್ನ ವರ್ಣಯಿತುಂ ಶಕ್ಯಮಿತಿ ಬಾಲತಯಾಸ್ಯ ತೇ ॥ ೧೭

ಯನ್ನು, ಮರವನ್ನು* ಸುಟ್ಟಂತೆ ಸುಟ್ಟು ಭಸ್ಮಮಾಡಬಹುದಿತ್ತು. ಹಾಗೆ ಮಾಡಲಿಲ್ಲವೇಕೆ? (೧೧) ಪ್ರಾಣಮಿತ್ರನಾದ ಸುಗ್ರೀವನು ಕಷ್ಟಪಡುತ್ತಿರುವುದನ್ನು ನೋಡುತ್ತ ಈತನು ಸುಮ್ಮನಿದ್ದನಲ್ಲವೆ? ಪ್ರಾಯಶಃ ಹನುಮಂತನಿಗೆ ತನ್ನ ಬಲವೇ ತಿಳಿದಿರಲಿಲ್ಲವೆಂದು ನನಗನ್ನಿಸುತ್ತದೆ (೧೨). ಮೇಧಾವಿಯಾದ ಹನುಮಂತನಲ್ಲಿ ಇದೆಲ್ಲವೂ ಹೇಗೆ ಘಟಿಸಿತು–ಎಂಬುದನ್ನು ವಿಸ್ತಾರವಾಗಿ ನನಗೆ ತಿಳಿಸೋಣವಾಗಲಿ" ಎಂದು ಪ್ರಾರ್ಥಿಸಿದನು (೧೩). ರಾಘವನ ಸಕಾರಣವಾದ ಈ ನುಡಿಯನ್ನು ಕೇಳಿ ಅಗಸ್ತ್ಯಮುನಿಗಳು ಹನುಮಂತನೆದುರಿಗೆ ಈ ಪ್ರಕಾರವಾಗಿ ಹೇಳಿದರು. (೧೪) "ರಘೂತ್ತಮ, ನೀನು ಹೇಳುವುದು ದಿಟ ಬಲದಲ್ಲಾಗಲಿ ಗತಿಯಲ್ಲಾಗಲಿ ಮತಿಯಲ್ಲಾಗಲಿ ಹನುಮಂತನಿಗೆ ಎಣೆಯಾದವನು ಇನ್ನೊಬ್ಬನಿಲ್ಲ ಯಾರ ಶಾಪವು ಸುಳ್ಳಾಗದೋ ಅಂಥ ಋಷಿಗಳಿಂದ ಈತನಿಗೆ ಒಂದು ಶಾಪವು ತಗುಲಿತ್ತು ಅದರಿಂದ ಅರಿಮರ್ದನನಾದ ಈ ಬಲಾಢ್ಯನಿಗೆ ತನ್ನ ಬಲವೇ ತಿಳಿಯದಾಗಿತ್ತು (೧೫–೧೬) ಶ್ರೀರಾಮ, ಈತನು ಬಾಲ್ಯದಲ್ಲಿ ಹುಡುಗಾಟಿಕೆ

* 'ವೀರುಧ ಇತ್ಯಕಾರಾಂತೋ ವೃಕ್ಷವಾಚೀ' ಎಂದು ವ್ಯಾಖ್ಯಾನಕಾರರು ಹೇಳಿದ್ದಾರೆ

ಯದಿ ವಾಸ್ತಿ ಹ್ಯಭಿಪ್ರಾಯಸ್ತಚ್ಛ್ರೋತುಂ ತವ ರಾಘವ ।
ಸಮಾಧಾಯ ಮತಿಂ ರಾಮ ನಿಶಾಮಯ ವದಾಮ್ಯಹಮ್ ॥ ೧೮

ಸೂರ್ಯದತ್ತವರಃ ಸ್ವರ್ಣಃ ಸುಮೇರುರ್ನಾಮ ಪರ್ವತಃ ।
ಯತ್ರ ರಾಜ್ಯಂ ಪ್ರಶಾಸ್ತ್ಯಸ್ಯ ಕೇಸರೀ ನಾಮ ವೈ ಪಿತಾ ॥ ೧೯

ತಸ್ಯ ಭಾರ್ಯಾ ಬಭೂವೇಷ್ಟಾ ಹ್ಯಂಜನೇತಿ ಪರಿಶ್ರುತಾ ।
ಜನಯಾಮಾಸ ತಸ್ಯಾಂ ವೈ ವಾಯುರಾತ್ಮಜಮುತ್ತಮಮ್ ॥ ೨೦

ಶಾಲಿಶೂಕನಿಭಾಭಾಸಂ ಪ್ರಾಸೂತಾಮುಂ ತದಾಂಜನಾ ।
ಫಲಾನ್ಯಾಹರ್ತುಕಾಮಾ ವೈ ನಿಷ್ಕ್ರಾಂತಾ ಗಹನೇಚರಾ ॥ ೨೧

ಏಷ ಮಾತುರ್ವಿಯೋಗಾಚ್ಚ ಕ್ಷುಧಯಾ ಚ ಭೃಶಾರ್ದಿತಃ ।
ರುರೋದ ಶಿಶುರತ್ಯರ್ಥಂ ಶಿಶುಃ ಶರವಣೇ ಯಥಾ ॥ ೨೨

ತದೋದ್ಯಂತಂ ವಿವಸ್ವಂತಂ ಜಪಾಪುಷ್ಪೋತ್ಕರೋಪಮಮ್ ।
ದದರ್ಶ ಫಲಲೋಭಾಚ್ಚ ಹ್ಯುತ್ಪಪಾತ ರವಿಂ ಪ್ರತಿ ॥ ೨೩

---

ಯಿಂದ ಯಾವ ಕೆಲಸವನ್ನು ಮಾಡಿದನೋ ಅದನ್ನೂ ಸಹ ನಿನಗೆ ವಿವರಿಸಿ ತಿಳಿಸಲು ಶಕ್ಯವಲ್ಲ (೧೭). ಒಂದುವೇಳೆ ಅದನ್ನು ಕೇಳಲು ನಿನಗೆ ಇಚ್ಛೆಯಿದ್ದಲ್ಲಿ ಹೇಳುವೆನು ಸಾವಧಾನವಾಗಿ ಕೇಳು. ಸೂರ್ಯನಿಂದ ವರವನ್ನು ಪಡೆದು ಸ್ವರ್ಣಮಯವಾಗಿರುವ ಮೇರುಪರ್ವತವಿದೆಯಷ್ಟೆ, ಅಲ್ಲಿ ಇವನ ತಂದೆಯಾದ ಕೇಸರಿಯು ರಾಜ್ಯಭಾರವನ್ನು ನಡೆಸುತ್ತಿದ್ದನು (೧೮–೧೯) ಅವನಿಗೆ ಅಂಜನೆಯೆಂಬ ಪ್ರಿಯಳಾದ ಮಡದಿ ಇದ್ದಳು ಅವಳಲ್ಲಿ ವಾಯುದೇವನು ಶ್ರೇಷ್ಠನಾದ ಈ ಪುತ್ರನನ್ನು ಪಡೆದನು ಬತ್ತದ ಅಗ್ರಭಾಗದಂತೆ ಪಿಂಗಲಕಾಯನಾದ ಈ ಮಗನನ್ನು ಅಂಜನೆಯು ಹಡೆದಳು ಒಂದು ದಿನ ಹಣ್ಣುಗಳನ್ನು ತರುವುದಕ್ಕಾಗಿ ಅಂಜನೆಯು ವನಕ್ಕೆ ಹೋಗಿದ್ದಳು (೨೦–೨೧) ಆಗ ಈ ಮಗು ತಾಯಿಯಿಲ್ಲದ್ದರಿಂದಲೂ ಬಹಳ ಹಸಿವಾದ್ದರಿಂದಲೂ, ಶರವಣದಲ್ಲಿದ್ದ ಕುಮಾರಸ್ವಾಮಿಯಂತೆ, ಗಟ್ಟಿಯಾಗಿ ಅಳತೊಡಗಿತು ಆ ಸಮಯದಲ್ಲಿ ದಾಸವಾಳದ ಹೂವಿನಂತೆ ರಕ್ತವರ್ಣನಾದ ಸೂರ್ಯನು ಉದಯಿಸಿ ಮೇಲೇರುತ್ತಿದ್ದನು. ಈ ಬಾಲಕನು ಹಣ್ಣೊಂದು

ಬಾಲಾರ್ಕಾಭಿಮುಖೋ ಬಾಲೋ ಬಾಲಾರ್ಕ ಇವ ಮೂರ್ತಿಮಾನ್
ಗ್ರಹೀತುಕಾಮೋ ಬಾಲಾರ್ಕಂ ಪ್ಲವತೇಽಂಬರಮಧ್ಯಗಃ ॥ ೨೪

ಏತಸ್ಮಿನ್ ಪ್ಲವಮಾನೇ ತು ಶಿಶುಭಾವೇ ಹನೂಮತಿ ।
ದೇವದಾನವಯಕ್ಷಾಣಾಂ ವಿಸ್ಮಯಃ ಸುಮಹಾನಭೂತ್ ॥ ೨೫

ನಾಪ್ಯೇವಂ ವೇಗವಾನ್ ವಾಯುರ್ಗರುಡೋ ವಾ ಮನಸ್ತಥಾ ।
ಯಥಾಯಂ ವಾಯುಪುತ್ರಸ್ತು ಕ್ರಮತೇಽಂಬರಮುತ್ತಮಮ್ ॥ ೨೬

ಯದಿ ತಾವಚ್ಛಿಶೋರಸ್ಯ ತ್ವೀದೃಶೋ ಗತಿವಿಕ್ರಮಃ ।
ಯೌವನಂ ಬಲಮಾಸಾದ್ಯ ಕಥಂ ವೇಗೋ ಭವಿಷ್ಯತಿ ॥ ೨೭

ತಮನುಪ್ಲವತೇ ವಾಯುಃ ಪ್ಲವಂತಂ ಪುತ್ರಮಾತ್ಮನಃ ।
ಸೂರ್ಯದಾಹಭಯಾದ್ರಕ್ಷಂಸ್ತುಷಾರಚಯಶೀತಲಃ ॥ ೨೮

ಬಹುಯೋಜನಸಾಹಸ್ರಂ ಕ್ರಾಮನ್ನೇಷ ಗತೋಽಂಬರಮ್ ।
ಪಿತುರ್ಬಲಾಚ್ಚ ಬಾಲ್ಯಾಚ್ಚ ಭಾಸ್ಕರಾಭ್ಯಾಶಮಾಗತಃ ॥ ೨೯

---

ಭ್ರಮಿಸಿ ಸೂರ್ಯನ ಕಡೆಗೆ ನೆಗೆದನು! (೨೨-೨೩) ಬಾಲಾರ್ಕನಿಗೆ ಅಭಿಮುಖನಾಗಿ ಬಾಲಾರ್ಕನಂತಿದ್ದ ಬಾಲಕನು ಬಾಲಾರ್ಕನನ್ನು ಹಿಡಿಯುವುದಕ್ಕಾಗಿ ಗಗನಮಧ್ಯದಲ್ಲಿ ಹಾರಿಹೋದನು! ಶಿಶುವಾದ ಹನುಮಂತನು ಈ ಪ್ರಕಾರದಲ್ಲಿ ಹೋಗುತ್ತಿರಲು ದೇವದಾನವಯಕ್ಷರಿಗೆ ಬಹಳ ಅಚ್ಚರಿಯಾಯಿತು (೨೪-೨೫). "ಎಲಾ! ವಾಯುವಿಗೂ ವೈನತೇಯನಿಗೂ ಕೂಡ ಇಷ್ಟು ವೇಗವಿಲ್ಲ ಮನಸ್ಸಿಗೂ ಇಲ್ಲ! ಈ ವಾಯುಪುತ್ರನು ಅಷ್ಟು ವೇಗದಿಂದ ಗಗನತಳದಲ್ಲಿ ಸಾಗುತ್ತಿರುವನಲ್ಲ! (೨೬) ಈ ಮಗುವಿಗೆ ಶಿಶುತನದಲ್ಲಿಯೇ ಇಷ್ಟು ಗತಿವಿಕ್ರಮವಿರುವುದಾದರೆ, ತಾರುಣ್ಯದ ಬಲವು ಬಂದಾಗ ಎಂತಹ ವೇಗಶಾಲಿಯಾದಾನು!" ಎಂದುಕೊಂಡರು (೨೭) ಸೂರ್ಯನ ಉಷ್ಣತೆಯಿಂದ ಮಗನು ಸುಟ್ಟು ಹೋದಾನೆಂದು ಅಂಜಿ ವಾಯುದೇವನು ಮಂಜಿನಂತೆ ತಣ್ಣಗಾಗಿ ಬೀಸುತ್ತ ಮಗನನ್ನು ರಕ್ಷಿಸುತ್ತ ಅವನ ಹಿಂದೆಯೇ ಹೋದನು (೨೮) ಎಷ್ಟೋ ಸಾವಿರಾರು ಯೋಜನಗಳನ್ನು ಅತಿಕ್ರಮಿಸಿ ಬಾಲಕನು ತಂದೆಯ ಬಲದಿಂದಲೂ ಬಾಲ್ಯ

ಶಿಶುರೇಷ ತ್ವದೋಷಜ್ಞ ಇತಿ ಮತ್ವಾ ದಿನೇಶ್ವರಃ ।
ಕಾರ್ಯಂ ಚಾತ್ರ ಸಮಾಯತ್ತಮಿತ್ಯೇವಂ ನ ದದಾಹ ಸಃ ॥ ೩೦

ಯಮೇವ ದಿವಸಂ ಹ್ಯೇಷ ಗ್ರಹೀತುಂ ಭಾಸ್ಕರಂ ಪ್ಲುತಃ ।
ತಮೇವ ದಿವಸಂ ರಾಹುರ್ಜಿಘೃಕ್ಷತಿ ದಿವಾಕರಮ್ ॥ ೩೧

ಅನೇನ ಸ ಪರಾಮೃಷ್ಟೋ ರಾಮ ಸೂರ್ಯರಥೋಪರಿ ।
ಅಪಕ್ರಾಂತಸ್ತತಸ್ತ್ರಸ್ತೋ ರಾಹುಶ್ಚಂದ್ರಾರ್ಕಮರ್ದನಃ ॥ ೩೨

ಸ ಇಂದ್ರಭವನಂ ಗತ್ವಾ ಸರೋಷಃ ಸಿಂಹಿಕಾಸುತಃ ।
ಅಬ್ರವೀದ್ಭ್ರುಕುಟಿಂ ಕೃತ್ವಾ ದೇವಂ ದೇವಗಣೈರ್ವೃತಮ್ ॥ ೩೩

ಬುಭುಕ್ಷಾಪನಯಂ ದತ್ತ್ವಾ ಚಂದ್ರಾರ್ಕೌ ಮಮ ವಾಸವ ।
ಕಿಮಿದಂ ತತ್ತ್ವಯಾ ದತ್ತಮನ್ಯಸ್ಯ ಬಲವೃತ್ರಹನ್ ॥ ೩೪

ಅದ್ಯಾಹಂ ಪರ್ವಕಾಲೇ ತು ಜಿಘೃಕ್ಷುಃ ಸೂರ್ಯಮಾಗತಃ ।
ಅಥಾನ್ಯೋ ರಾಹುರಾಸಾದ್ಯ ಜಗ್ರಾಹ ಸಹಸಾ ರವಿಮ್ ॥ ೩೫

---

ಚಾಪಲದಿಂದಲೂ ಸೂರ್ಯನ ಬಳಿಗೆ ಹೋದನು "ಇವನು ಮಗು, ತಿಳಿವಳಿಕೆ ಇಲ್ಲ, ಇವನಿಂದ ಮುಂದೆ ಆಗಬೇಕಾದ ಕಾರ್ಯವೂ ಇದೆ" ಎಂದು ಆಲೋಚಿಸಿ ಸೂರ್ಯದೇವನು ಈತನನ್ನು ಸುಡಲಿಲ್ಲ (೨೯-೩೦). ಯಾವ ದಿನ ಹನುಮಂತನು ಭಾಸ್ಕರನನ್ನು ಹಿಡಿಯುವುದಕ್ಕಾಗಿ ನೆಗೆದನೋ ಆ ದಿನವೇ ರಾಹುವು ಭಾಸ್ಕರನನ್ನು ಹಿಡಿಯಲು ಉದ್ದೇಶಿಸಿದ್ದನು. ಶ್ರೀರಾಮ, ಹನುಮಂತನು ತುಡುಕಲಾಗಿ ಸೂರ್ಯನ ರಥದಮೇಲೆ ಬಂದಿದ್ದ ರಾಹುವು ಹೆದರಿ ಓಡಿಹೋದನು! (೩೧-೩೨) ಸಿಂಹಿಕಾಸುತನಾದ ರಾಹುವು ರೋಷದಿಂದ ಇಂದ್ರಲೋಕಕ್ಕೆ ಹೋಗಿ ದೇವಗಣಪರಿವೃತನಾದ ಇಂದ್ರನನ್ನು ನೋಡಿ ಹುಬ್ಬುಗಂಟಿಕ್ಕಿ "ಎಲೈ ದೇವೇಂದ್ರ, ನನ್ನ ಹಸಿವನ್ನು ನೀಗಿಕೊಳ್ಳುವುದಕ್ಕಾಗಿ ಸೂರ್ಯಚಂದ್ರರನ್ನು ನನಗೆ ಒಪ್ಪಿಸಿದ್ದೀಯೆ. ಈಗ ಅವರನ್ನು ಬೇರೊಬ್ಬನಿಗೆ ಕೊಟ್ಟಿರುವುದೇಕೆ? (೩೩-೩೪) ಈ ದಿನ ಪರ್ವಕಾಲದಲ್ಲಿ ಸೂರ್ಯನನ್ನು ಹಿಡಿಯಬೇಕೆಂದು ನಾನು ಬಂದೆನು ಆಗ ಇನ್ನೊಬ್ಬ ರಾಹುವು ಬಂದು ಭಾಸ್ಕರನನ್ನು ಹಿಡಿದುಬಿಟ್ಟನು!" ಎಂದನು (೩೫).

ಸ ರಾಹೋರ್ವಚನಂ ಶ್ರುತ್ವಾ ವಾಸವಃ ಸಂಭ್ರಮಾನ್ವಿತಃ ।
ಉತ್ಪಪಾತಾಸನಂ ಹಿತ್ವಾ ಚೋದ್ವಹನ್ ಕಾಂಚನೀಂ ಸ್ರಜಮ್ ॥

ತತಃ ಕೈಲಾಸಕೂಟಾಭಂ ಚತುರ್ದಂತಂ ಮದಸ್ರವಮ್ ।
ಶೃಂಗಾರಧಾರಿಣಂ ಪ್ರಾಂಶುಂ ಸ್ವರ್ಣಘಂಟಾಟ್ಟಹಾಸಿನಮ್ ॥ ೩೭

ಇಂದ್ರಃ ಕರೀಂದ್ರಮಾರುಹ್ಯ ರಾಹುಂ ಕೃತ್ವಾ ಪುರಃಸರಮ್ ।
ಪ್ರಾಯಾದ್ಯತ್ರಾಭವತ್ ಸೂರ್ಯಃ ಸಹಾನೇನ ಹನೂಮತಾ ॥ ೩೮

ಅಥಾತಿರಭಸೇನಾಗಾದ್ರಾಹುರುತ್ಸೃಜ್ಯ ವಾಸವಮ್ ।
ಅನೇನ ಚ ಸ ವೈ ದೃಷ್ಟಃ ಪ್ರಧಾವನ್ ಶೈಲಕೂಟವತ್ ॥ ೩೯

ತತಃ ಸೂರ್ಯಂ ಸಮುತ್ಸೃಜ್ಯ ರಾಹುಂ ಫಲಮವೇಕ್ಷ್ಯ ಚ ।
ಉತ್ಪಪಾತ ಪುನರ್ವ್ಯೋಮ ಗ್ರಹೀತುಂ ಸಿಂಹಿಕಾಸುತಮ್ ॥ ೪೦

ಉತ್ಸೃಜ್ಯಾರ್ಕಮಿಮಂ ರಾಮ ಪ್ರಧಾವಂತಂ ಪ್ಲವಂಗಮಮ್ ।
ಅವೇಕ್ಷ್ಯೈವಂ ಪರಾವೃತ್ಯ ಮುಖಶೇಷಃ ಪರಾಙ್ಮುಖಃ ॥ ೪೧

ಇಂದ್ರಮಾಶಂಸಮಾನಸ್ತು ತ್ರಾತಾರಂ ಸಿಂಹಿಕಾಸುತಃ ।
ಇಂದ್ರ ಇಂದ್ರೇತಿ ಸಂತ್ರಾಸಾನ್ಮುಹುರ್ಮುಹುರಭಾಷತ ॥ ೪೨

---

ರಾಹುವಿನ ಮಾತನ್ನು ಕೇಳಿದೊಡನೆ ಸುವರ್ಣಹಾರವನ್ನು ಧರಿಸಿದ್ದ ಇಂದ್ರನು ಸಂಭ್ರಾಂತನಾಗಿ ಥಿಗ್ಗನೆ ಪೀಠದಿಂದೆದ್ದು ಐರಾವತವನ್ನೇರಿ ರಾಹುವನ್ನು ಮುಂದೆಮಾಡಿಕೊಂಡು, ಈ ಹನುಮಂತನ ಸಮೀಪದಲ್ಲಿದ್ದ ಸೂರ್ಯನ ಬಳಿಗೆ ಧಾವಿಸಿದನು (೩೬-೩೮) ರಾಹುವು ಇಂದ್ರನನ್ನು ಹಿಂದೆ ಬಿಟ್ಟು ತ್ವರೆಯಿಂದ ಬಂದನು ಓಡಿಬರುವ ಪರ್ವತಶಿಖರವೋ ಎಂಬಂತಿದ್ದ ರಾಹುವನ್ನು ನೋಡಿ ಅವನೇ ಹಣ್ಣೆಂದು ಭ್ರಮಿಸಿ ಹನುಮಂತನು ಸೂರ್ಯನನ್ನು ತ್ಯಜಿಸಿ ರಾಹುವಿನ ಕಡೆಗೆ ಹಾರಿದನು ! (೩೯-೪೦) ತನ್ನೆಡೆಗೆ ಧಾವಿಸಿ ಬರುತ್ತಿದ್ದ ಹನುಮಂತನನ್ನು ಕಂಡು, ಮುಖಮಾತ್ರವೇ ಶರೀರವಾಗಿದ್ದ ಸೈಂಹಿಕೇಯನು ಹಿಂದಕ್ಕೆ ನೋಡುತ್ತ ಇಂದ್ರನಿಗೆ ಶರಣಾಗಿ “ಇಂದ್ರ ! ಇಂದ್ರ !” ಎಂದು

ರಾಹೋರ್ವಿಕ್ರೋಶಮಾನಸ್ಯ ಪ್ರಾಗೇವಾಲಕ್ಷಿತಂ ಸ್ವರಮ್ ।
ಶ್ರುತ್ವೇಂದ್ರೋವಾಚ ಮಾ ಭೈಷೀರಹಮೇನಂ ನಿಷೂದಯೇ ॥ ೪೩

ಐರಾವತಂ ತತೋ ದೃಷ್ಟ್ವಾ ಮಹತ್ತದಿದಮಿತ್ಯಪಿ ।
ಫಲಂ ಮತ್ವಾ ಹಸ್ತಿರಾಜಮಭಿದುದ್ರಾವ ಮಾರುತಿಃ ॥ ೪೪

ತಥಾಸ್ಯ ಧಾವತೋ ರೂಪಮೈರಾವತಜಿಘೃಕ್ಷಯಾ ।
ಮುಹೂರ್ತಮಭವದ್ಘೋರಮಿಂದ್ರಾಗ್ನೇರಿವ ಭಾಸ್ವರಮ್ ॥ ೪೫

ಏವಮಾಧಾವಮಾನಂ ತು ನಾತಿಕ್ರುದ್ಧಃ ಶಚೀಪತಿಃ ।
ಹಸ್ತಾಂತಾದತಿಮುಕ್ತೇನ ಕುಲಿಶೇನಾಭ್ಯತಾಡಯತ್ ॥ ೪೬

ತತೋ ಗಿರೌ ಪಪಾತೈಷ ಇಂದ್ರವಜ್ರಾಭಿತಾಡಿತಃ ।
ಪತಮಾನಸ್ಯ ಚೈತಸ್ಯ ವಾಮೋ ಹನುರಭಜ್ಯತ ॥ ೪೭

ತಸ್ಮಿಂಸ್ತು ಪತಿತೇ ಬಾಲೇ ವಜ್ರತಾಡನವಿಹ್ವಲೇ ।
ಚುಕ್ರೋಧೇಂದ್ರಾಯ ಪವನಃ ಪ್ರಜಾನಾಮಹಿತಾಯ ಸಃ ॥ ೪೮

---

ಕೂಗಿಕೊಂಡನು! (೪೧-೪೨). ರಾಹುವನ್ನು ನೋಡುವುದಕ್ಕೆ ಮೊದಲೇ ಅವನ ಗೋಳಿನ ಧ್ವನಿ ಇಂದ್ರನಿಗೆ ಕೇಳಿಸಿತು! ಅವನು “ಹೆದರಬೇಡ! ಅವನನ್ನು ಧ್ವಂಸಮಾಡುವೆನು” ಎಂದನು. ಅಷ್ಟರಲ್ಲಿ ಈ ಮಾರುತಪುತ್ರನು ಇಂದ್ರನ ಐರಾವತವನ್ನು ಕಂಡು ಅದೊಂದು ದೊಡ್ಡ ಹಣ್ಣೆಂದು ಬಗೆದು ಅದರತ್ತ ನೆಗೆದನು! (೪೩-೪೪) ಹಾಗೆ ಐರಾವತವನ್ನು ಹಿಡಿಯಲು ಹಾರಿ ಬಂದ ಹನುಮಂತನ ರೂಪವು ಇಂದ್ರಾಗ್ನಿಗಳ ರೂಪದಂತೆ ಪ್ರಜ್ವಲಿಸುತ್ತ, ಒಂದು ಕ್ಷಣಕಾಲ ಘೋರವಾಗಿ ಕಂಗೊಳಿಸಿತು (೪೫) ದೇವೇಂದ್ರನು ಅಷ್ಟೇನೂ ಕ್ರುದ್ಧನಾಗದೆ ತನ್ನ ಕೈಯಲ್ಲಿದ್ದ ವಜ್ರಾಯುಧದಿಂದ ಹನುಮಂತನನ್ನು ಬಡಿದನು. ಕುಲಿಶಾಯುಧದಿಂದ ಅಭಿಹತನಾದ ಮಾರುತಿಯು ಒಂದು ಬೆಟ್ಟದಮೇಲೆ ಬಿದ್ದನು. ಅವನ ಎಡದವಡೆಯು ಭಗ್ನವಾಯಿತು (೪೬-೪೭). ವಜ್ರಾಯುಧದ ಹೊಡೆತದಿಂದ ಕಂಗೆಟ್ಟ ಬಾಲಕನು ಕೆಳಗೆ ಬೀಳಲಾಗಿ ವಾಯುದೇವನಿಗೆ ಇಂದ್ರನಮೇಲೆ ಕೋಪ ಉಂಟಾಯಿತು.

ಪ್ರಚಾರಂ ಸ ತು ಸಂಗೃಹ್ಯ ಪ್ರಜಾಸ್ವಂತರ್ಗತಃ ಪ್ರಭುಃ ।
ಗುಹಾಂ ಪ್ರವಿಷ್ಟಃ ಸ್ವಸುತಂ ಶಿಶುಮಾದಾಯ ಮಾರುತಃ ॥ ೪೯

ವಿಣ್ಮೂತ್ರಾಶಯಮಾವೃತ್ಯ ಪ್ರಜಾನಾಂ ಪರಮಾರ್ತಿಕೃತ್ ।
ರುರೋಧ ಸರ್ವಭೂತಾನಿ ಯಥಾ ವರ್ಷಾಣಿ ವಾಸವಃ ॥ ೫೦

ವಾಯುಪ್ರಕೋಪಾದ್ ಭೂತಾನಿ ನಿರುಚ್ಛ್ವಾಸಾನಿ ಸರ್ವತಃ ।
ಸಂಧಿಭಿರ್ಭಿದ್ಯಮಾನೈಶ್ಚ ಕಾಷ್ಠಭೂತಾನಿ ಜಜ್ಞಿರೇ ॥ ೫೧

ನಿಃಸ್ವಾಧ್ಯಾಯವಷಟ್ಕಾರಂ ನಿಷ್ಕ್ರಿಯಂ ಧರ್ಮವರ್ಜಿತಮ್ ।
ವಾಯುಪ್ರಕೋಪಾತ್ ತ್ರೈಲೋಕ್ಯಂ ನಿರಯಸ್ಥಮಿವಾಭವತ್ ॥

ತತಃ ಪ್ರಜಾಃ ಸಗಂಧರ್ವಾಃ ಸದೇವಾಸುರಮಾನುಷಾಃ ।
ಪ್ರಜಾಪತಿಂ ಸಮಾಧಾವನ್ ದುಃಖಿತಾಶ್ಚ ಸುಖೇಚ್ಛಯಾ ॥ ೫೩

ಊಚುಃ ಪ್ರಾಂಜಲಯೋ ದೇವಾ ಮಹೋದರನಿಭೋದರಾಃ ।
ತ್ವಯಾ ನು ಭಗವನ್ ಸೃಷ್ಟಾಃ ಪ್ರಜಾನಾಥ ಚತುರ್ವಿಧಾಃ ॥ ೫೪

---

ಆ ಸ್ವಾಮಿಯು ತನ್ನ ಸಂಚಾರವನ್ನು ನಿಲ್ಲಿಸಿ ತನ್ನ ಪುತ್ರನಾದ ಶಿಶುವನ್ನೆತ್ತಿಕೊಂಡು ಒಂದು ಗುಹೆಯನ್ನು ಪ್ರವೇಶಿಸಿಬಿಟ್ಟನು ! ಇದರಿಂದ ಜಗತ್ತಿನ ಪ್ರಜೆಗಳಿಗೆ ಬಹಳ ಹಿಂಸೆಯಾಯಿತು (೪೮-೪೯) ಸಕಲ ಪ್ರಾಣಿಗಳ ಮಲ ಮೂತ್ರಗಳು ಕಟ್ಟಿಕೊಂಡವು ಇಂದ್ರನು ಮಳೆಯನ್ನು ನಿಲ್ಲಿಸಿದರ ಜನರಿಗೆ ಹೇಗೆ ತೊಂದರೆಯಾಗುವುದೋ ಹಾಗೆ ವಾಯುದೇವನು ಸಂಚಾರವನ್ನು ನಿಲ್ಲಿಸಿದ್ದರಿಂದ ಜನರಿಗೆ ಬಹಳ ಪೀಡೆಯಾಯಿತು (೫೦) ವಾಯುವಿನ ಕೋಪದಿಂದ ಉಸಿರಾಟ ನಿಂತಿತು ಸಂದುಗಳು ಬಿಗಿದುಕೊಂಡವು ಜನರು ಕಟ್ಟಿಗೆಗಳಂತಾದರು ವೇದಾಧ್ಯಯನ ವಷಟ್ಕಾರಗಳು ಸ್ತಬ್ಧವಾದವು ಜಗತ್ತು ನಿಷ್ಕ್ರಿಯವಾಗಿ ಧರ್ಮಕಾರ್ಯವು ನಡೆಯಲಿಲ್ಲ ವಾಯುದೇವನ ಕೋಪದಿಂದ ಮೂರುಲೋಕವೂ ನರಕದಲ್ಲಿ ಮುಳುಗಿದಂತೆ ತೋರಿತು ! (೫೧-೫೨) ಆಗ ದೇವಾಸುರಗಂಧರ್ವಮಾನುಷರು ದುಃಖಾಕ್ರಾಂತರಾಗಿ ಪರಿಹಾರದ ಬಯಕೆಯಿಂದ ಬ್ರಹ್ಮದೇವನ ಬಳಿಗೆ ಧಾವಿಸಿದರು ಅವರ ಹೊಟ್ಟೆ ಊದಿಕೊಂಡದ್ದರಿಂದ ಮಹೋದರರೋಗಿಗಳಂತೆ ಕಾಣುತ್ತಿದ್ದರು ! ಅವರು ಬ್ರಹ್ಮನಿಗೆ ಕೈಮುಗಿದು " ಹೇ ಭಗವನ್–ಪ್ರಜಾನಾಥ, (ಅಂಡಜ,

ತ್ವಯಾ ದತ್ತೋಽಯಮಸ್ಮಾಕಮಾಯುಷಃ ಪವನಃ ಪತಿಃ ।
ಸೋಽಸ್ಮಾನ್ ಪ್ರಾಣೇಶ್ವರೋ ಭೂತ್ವಾ ಕಸ್ಮಾದೇಷೋಽದ್ಯ ಸತ್ತಮ

ರುರೋಧ ದುಃಖಂ ಜನಯನ್ನಂತಃಪುರ ಇವ ಸ್ತ್ರಿಯಃ ।
ತಸ್ಮಾತ್ತ್ವಾಂ ಶರಣಂ ಪ್ರಾಪ್ತಾ ವಾಯುನೋಪಹತಾ ವಯಮ್ ॥

ವಾಯುಸಂರೋಧಜಂ ದುಃಖಮಿದಂ ನೋ ನುದ ದುಃಖಹನ್ ।
ಏತತ್ ಪ್ರಜಾನಾಂ ಶ್ರುತ್ವಾ ತು ಪ್ರಜಾನಾಥಃ ಪ್ರಜಾಪತಿಃ ॥ ೫೭

ಕಾರಣಾದಿತಿ ಚೋಕ್ತ್ವಾಸೌ ಪ್ರಜಾಃ ಪುನರಭಾಷತ ।
ಯಸ್ಮಿಂಶ್ಚ ಕಾರಣೇ ವಾಯುಶ್ಚುಕ್ರೋಧ ಚ ರುರೋಧ ಚ ॥ ೫೮

ಪ್ರಜಾಃ ಶೃಣುಧ್ವಂ ತತ್ ಸರ್ವಂ ಶ್ರೋತವ್ಯಂ ಚಾತ್ಮನಃ ಕ್ಷಮಮ್ ।
ಪುತ್ರಸ್ತಸ್ಯಾಮರೇಶಾನ ಇಂದ್ರೇಣಾದ್ಯ ನಿಪಾತಿತಃ ॥ ೫೯

ರಾಹೋರ್ವಚನಮಾಸ್ಥಾಯ ತತಃ ಸ ಕುಪಿತೋಽನಿಲಃ ।
ಅಶರೀರಃ ಶರೀರೇಷು ವಾಯುಶ್ಚರತಿ ಪಾಲಯನ್ ॥ ೬೦

---

ಸ್ವೇದಜ, ಜರಾಯುಜ, ಉದ್ಭಿಜ್ಜಗಳೆಂಬ) ನಾಲ್ಕೂ ಬಗೆಯ ಜೀವಿಗಳನ್ನು ನೀನು ಸೃಜಿಸಿದ್ದೀಯೆ (೫೩-೫೪) ನಮ್ಮ ಆಯುಸ್ಸಿಗೆ ವಾಯುವೇ ಒಡೆಯನೆಂದು ಗೊತ್ತುಪಡಿಸಿದ್ದೀಯೆ ನಮಗೆ ಪ್ರಾಣೇಶ್ವರನಾದ ವಾಯುದೇವನು, ಅಂತಃಪುರದಲ್ಲಿ ಸ್ತ್ರೀಯರನ್ನು ನಿರೋಧಿಸುವಂತೆ, ನಮ್ಮೆಲ್ಲರನ್ನೂ ಬಂಧಿಸಿ ತಡೆಹಿಡಿದಿರುವನು ಇದೇಕೆ? ನಾವು ವಾಯುವಿನಿಂದ ಪೀಡಿತರಾಗಿ ನಿನಗೆ ಶರಣಾಗಿದ್ದೇವೆ (೫೫-೫೭). ಆವನ ಉಪದ್ರವಕ್ಕೆ ಸಿಕ್ಕಿದ ನಮ್ಮ ಕಷ್ಟವನ್ನು ಪರಿಹರಿಸು" ಎಂದು ಪ್ರಾರ್ಥಿಸಿದರು ಅವರ ನುಡಿಯನ್ನು ಕೇಳಿ ಪ್ರಜಾನಾಥನಾದ ಬ್ರಹ್ಮನು "ಕಾರಣವಿದೆ ಆ ಕಾರಣದಿಂದ ವಾಯುವು ಕುಪಿತನಾಗಿ ನಿಮ್ಮನ್ನು ನಿರೋಧಿಸಿದ್ದಾನೆ (೫೭-೫೮) ಎಲೈ ಪ್ರಜೆಗಳೆ, ಕೇಳಿರಿ ಕ್ಷಮಿಸಬೇಕಾದ ಆ ಕಾರಣವನ್ನು ನೀವು ಕೇಳಬೇಕು ದೇವೇಂದ್ರನು ರಾಹುವಿನ ಮಾತನ್ನು ಕೇಳಿ ವಾಯುವಿನ ಪುತ್ರನನ್ನು ಹೊಡೆದುರುಳಿಸಿದ್ದಾನೆ. ಆದ್ದರಿಂದ ವಾಯುವಿಗೆ ಕೋಪ ಬಂದಿದೆ ಸ್ವಯಂ ದೇಹರಹಿತನಾದ ವಾಯುವು ಜನರನ್ನು ಪಾಲಿಸುತ್ತ ಅವರ ಶರೀರಗಳಲ್ಲಿ ಸಂಚರಿಸುತ್ತಾನೆ

ಶರೀರಂ ಹಿ ವಿನಾ ವಾಯುಂ ಸಮತಾಂ ಯಾತಿ ದಾರುಭಿಃ ।
ವಾಯುಃ ಪ್ರಾಣಃ ಸುಖಂ ವಾಯುರ್ವಾಯುಃ ಸರ್ವಮಿದಂ ಜಗತ್ ॥

ವಾಯುನಾ ಸಂಪರಿತ್ಯಕ್ತಂ ನ ಸುಖಂ ವಿಂದತೇ ಜಗತ್ ।
ಅದ್ಯೈವ ಚ ಪರಿತ್ಯಕ್ತಂ ವಾಯುನಾ ಜಗದಾಯುಷಾ ॥ ೬೨

ಅದ್ಯೈವ ತೇ ನಿರುಚ್ಛ್ವಾಸಾಃ ಕಾಷ್ಠಕುಡ್ಯೋಪಮಾಃ ಸ್ಥಿತಾಃ ।
ತದ್ಯಾಮಸ್ತತ್ರ ಯತ್ರಾಸ್ತೇ ಮಾರುತೋ ರುಕ್‌ಪ್ರದೋ ಹಿ ನಃ ॥

ಮಾ ವಿನಾಶಂ ಗಮಿಷ್ಯಾಮ ಅಪ್ರಸಾದಾದಿತೇಃ ಸುತಾಃ ॥

ತತಃ ಪ್ರಜಾಭಿಃ ಸಹಿತಃ ಪ್ರಜಾಪತಿಃ
ಸದೇವಗಂಧರ್ವಭುಜಂಗಗುಹ್ಯಕೈಃ ।
ಜಗಾಮ ತತ್ರಾಸ್ಯತಿ ಯತ್ರ ಮಾರುತಃ
ಸುತಂ ಸುರೇಂದ್ರಾಭಿಹತಂ ಪ್ರಗೃಹ್ಯ ಸಃ ॥ ೬೪

ತತೋಽರ್ಕವೈಶ್ವಾನರಕಾಂಚನಪ್ರಭಂ
ಸುತಂ ತದೋತ್ಸಂಗಗತಂ ಸದಾಗತೇಃ ।

---

(೫೯-೬೦) ವಾಯುಸಂಚಾರವಿಲ್ಲದಿದ್ದರೆ ಶರೀರವು ಕಟ್ಟಿಗೆಗೆ ಸಮವಾಗುತ್ತದೆ! ವಾಯುವೇ ಪ್ರಾಣ, ವಾಯುವಿನಿಂದಲೇ ಸುಖ, ಈ ಜಗತ್ತೆಲ್ಲವೂ ವಾಯುವೇ (೬೧) ಆತನು ಪರಿತ್ಯಜಿಸಿದರೆ ಜಗತ್ತಿಗೆ ಸುಖವೆಂಬುದೇ ಇಲ್ಲ ಜಗತ್ತಿಗೆ ಆಯುಃಸ್ವರೂಪನಾದ ವಾಯುವು ಈ ದಿನವೇ ಪ್ರಾಣಿಗಳನ್ನು ಪರಿತ್ಯಜಿಸಿದನು ಈ ದಿನವೇ ಎಲ್ಲರೂ ಕಟ್ಟಿಗೆಗೂ ಗೋಡೆಗೂ ಸಮವಾದರು! ಆದ್ದರಿಂದ ನಮಗೆ ಉಪದ್ರವವನ್ನೊಡ್ಡಿದ ವಾಯುವಿದ್ದಲ್ಲಿಗೆ ಹೋಗೋಣ ಎಲೈ ಅದಿತಿಪುತ್ರರೆ, ಆತನನ್ನು ಸಂತೈಸೋಣ ಹಾಗೆ ಮಾಡದೆ ನಾಶವಾಗುವುದು ಬೇಡ" ಎಂದನು (೬೨-೬೩) ಅನಂತರ ಬ್ರಹ್ಮದೇವನು ದೇವ ಗಂಧರ್ವ ಭುಜಂಗ ಗುಹ್ಯಕಾದಿ ಪ್ರಜಗಳೊಡನೆ ಹೊರಟು, ಮಾರುತನು ದೇವೇಂದ್ರಾಭಿಹತನಾದ ಪುತ್ರನನ್ನೆತ್ತಿಕೊಂಡು ಕುಳಿತಿದ್ದ ಸ್ಥಳಕ್ಕೆ ಬಂದನು (೬೪) - ಅಲ್ಲಿ ವಾಯುವಿನ ತೊಡೆಯಮೇಲೆ

ಚತುರ್ಮುಖೋ ವೀಕ್ಷ್ಯ ಕೃಪಾಮಥಾಕರೋತ್
ಸದೇವಗಂಧರ್ವಸಯಕ್ಷರಾಕ್ಷಸೈಃ ॥ ೬೫

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚತ್ರಿಂಶಃ ಸರ್ಗಃ

---

## ಷಟ್‌ತ್ರಿಂಶಃ ಸರ್ಗಃ

### ಹನೂಮದ್ವರಪ್ರಾಪ್ತ್ಯಾದಿ

ತತಃ ಪಿತಾಮಹಂ ದೃಷ್ಟ್ವಾ ವಾಯುಃ ಪುತ್ರವಧಾರ್ದಿತಃ ।
ಶಿಶುಕಂ ತಂ ಸಮಾದಾಯ ಉತ್ತಸ್ಥೌ ಧಾತುರಗ್ರತಃ ॥ ೧

ಚಲತ್ಕುಂಡಲಮೌಲಿಸ್ರಕ್ತಪನೀಯವಿಭೂಷಣಃ ।
ಪಾದಯೋರ್ನ್ಯಪತದ್ವಾಯುಸ್ತ್ರಿರುಪಸ್ಥಾಯ ವೇಧಸೇ ॥ ೨

---

ಸೂರ್ಯಾಗ್ನಿಗಳಂತೆಯೂ ಅಪರಂಜಿಯಂತೆಯೂ ತೊಳಗುತ್ತಿದ್ದ ಮಗುವನ್ನು ಕಂಡು ಚತುರ್ಮುಖನಿಗೂ ದೇವಾದಿಗಳಿಗೂ ಮರುಕ ಉಂಟಾಯಿತು (೬೫)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತೈದನೆಯ ಸರ್ಗ

---

## ಸರ್ಗ ೩೬

### ಇಂದ್ರಾದಿಗಳು ಹನುಮಂತನಿಗೆ ವರವನ್ನು ಕೊಡುವುದು ಶ್ರೀರಾಮನನ್ನು ಬೀಳ್ಕೊಂಡು ಅಗಸ್ತ್ಯಾದಿಮುನಿಗಳ ಪ್ರಯಾಣ

ಅಗಸ್ತ್ಯಮುನಿಗಳು ಹೇಳಿದರು . ಶ್ರೀರಾಮ, ಪುತ್ರವಧೆಯಿಂದ ಖಿನ್ನನಾದ ಮಾರುತನು ಬ್ರಹ್ಮನನ್ನು ಕಂಡೊಡನೆ ಮಗುವನ್ನೆತ್ತಿಕೊಂಡು ಎದ್ದು ನಿಂತನು ಕರ್ಣಕುಂಡಲಗಳೂ ಶಿರೋಮಾಲೆಯೂ ಸುವರ್ಣಾಭರಣಗಳೂ ಚಲಿಸುತ್ತಿರಲು, ವಾಯುದೇವನು ಬ್ರಹ್ಮನನ್ನು ಸ್ತುತಿಸಿ ಅವನ ಪಾದಗಳಿಗೆ

ತಂ ತು ವೇದವಿದಾತೇನ ಲಂಬಾಭರಣಶೋಭಿನಾ ।
ವಾಯುಮುತ್ಥಾಪ್ಯ ಹಸ್ತೇನ ಶಿಶುಂ ತಂ ಪರಿಮೃಷ್ಟವಾನ್ ॥ ೩

ಸ್ಪೃಷ್ಟಮಾತ್ರಸ್ತತಃ ಸೋಽಥ ಸಲೀಲಂ ಪದ್ಮಯೋನಿನಾ ।
ಜಲಸಿಕ್ತಂ ಯಥಾ ಸಸ್ಯಂ ಪುನರ್ಜೀವಿತಮಾಪ್ತವಾನ್ ॥ ೪

ಪ್ರಾಣವಂತಮಿಮಂ ದೃಷ್ಟ್ವಾ ಪ್ರಾಣೋ ಗಂಧವಹೋ ಮುದಾ ।
ಚಚಾರ ಸರ್ವಭೂತೇಷು ಸನ್ನಿರುದ್ಧಂ ಯಥಾ ಪುರಾ ॥ ೫

ಮರುದ್ರೋಧಾದ್ವಿನಿರ್ಮುಕ್ತಾಸ್ತಾಃ ಪ್ರಜಾ ಮುದಿತಾಭವನ್ ।
ಶೀತವಾತವಿನಿರ್ಮುಕ್ತಾಃ ಪದ್ಮಿನ್ಯ ಇವ ಸಾಂಬುಜಾಃ ॥ ೬

ತತಸ್ತ್ರಿಯುಗ್ಮಸ್ತ್ರಿಕಕುತ್ ತ್ರಿಧಾಮಾ ತ್ರಿದಶಾರ್ಚಿತಃ ।
ಉವಾಚ ದೇವತಾ ಬ್ರಹ್ಮಾ ಮಾರುತಪ್ರಿಯಕಾಮ್ಯಯಾ ॥ ೭

---

ಮೂರ್ಛಿಸಲ ಸಾಷ್ಟಾಂಗಪ್ರಣಾಮ ಮಾಡಿದನು (೧-೨) ವೇದಜ್ಞನಾದ ಬ್ರಹ್ಮನು ಲಂಬಾಭರಣಶೋಭಿಯಾದ ಹಸ್ತವನ್ನು ನೀಡಿ ವಾಯುವನ್ನೆಬ್ಬಿಸಿ ಮಗುವನ್ನು ಕೈಯಿಂದ ಸವರಿದನು ಕಮಲಜನು ಲೀಲೆಯಿಂದ ಮುಟ್ಟಿದೊಡನೆ, ನೀರಿನಿಂದ ಸಿಕ್ತವಾದ ಸಸ್ಯದಂತೆ ಆ ಮಗು ಮತ್ತೆ ಜೀವವನ್ನು ಪಡೆಯಿತು (೩-೪) ಮಗನಿಗೆ ಪ್ರಾಣ ಬಂದುದನ್ನು ನೋಡಿ ಜಗತ್ಪ್ರಾಣನಾದ ವಾಯುವು ಮೊದಲಿನಂತೆ ಎಲ್ಲರ ದೇಹಗಳಲ್ಲಿಯೂ ಸಂಚರಿಸತೊಡಗಿದನು ವಾಯುರೋಧದಿಂದ ಬಿಡುಗಡೆ ಹೊಂದಿದ ಪ್ರಜೆಗಳು ಸಂತುಷ್ಟರಾದರು ಶೀತವಾತದ ಬಾಧೆಯಿಂದ ಬಿಡುಗಡೆ ಹೊಂದಿ ಅರಳಿದ ತಾವರೆ ಹೂಗಳುಳ್ಳ ತಾವರೆ ಬಳ್ಳಿಗಳಂತಾದರು (೫-೬) ಅನಂತರ ತ್ರಿಯುಗ್ಮನೂ * ತ್ರಿಮೂರ್ತಿಗಳಲ್ಲಿ ಮುಖ್ಯನೂ ತ್ರಿಲೋಕವಾಸಿಯೂ ತ್ರಿದಶಪೂಜಿತನೂ ಆದ ಬ್ರಹ್ಮನು ಮಾರುತನಿಗೆ ಸಂತೋಷವನ್ನುಂಟುಮಾಡಬೇಕೆಂದು ದೇವತೆಗಳನ್ನು

---

ತ್ರಿಯುಗ್ಮ = ಮೂರು ಜೊತೆಗಳನ್ನು—ಎಂದರೆ—ಆರು ಗುಣಗಳನ್ನು ಪಡೆದವನು ಷಡ್ಗುಣೈಶ್ವರ್ಯಸಂಪನ್ನ, ಭಗವಂತ ಎಂದರ್ಥ

ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।
ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ॥

*

ಭೋ ಮಹೇಂದ್ರೇಶವರುಣಪ್ರಜೇಶ್ವರಧನೇಶ್ವರಾಃ ।
ಜಾನತಾಮಪಿ ವಃ ಸರ್ವಂ ವಕ್ಷ್ಯಾಮಿ ಶ್ರೂಯತಾಂ ಹಿತಮ್ ॥ ೮

ಅನೇನ ಶಿಶುನಾ ಕಾರ್ಯಂ ಕರ್ತವ್ಯಂ ವೋ ಭವಿಷ್ಯತಿ ।
ತದ್ದದಧ್ವಂ ವರಾನ್ ಸರ್ವೇ ಮಾರುತಸ್ಯಾಸ್ಯ ತುಷ್ಟಯೇ ॥ ೯

ತತಃ ಸಹಸ್ರನಯನಃ ಪ್ರೀತಿಯುಕ್ತಃ ಶುಭಾನನಃ ।
ಕುಶೇಶಯಮಯೀಂ ಮಾಲಾಮುತ್ಕ್ಷಿಪ್ಯೇದಂ ವಚೋಽಬ್ರವೀತ್ ॥

ಮತ್ಕರೋತ್ಸೃಷ್ಟವಜ್ರೇಣ ಹನುರಸ್ಯ ಯಥಾ ಹತಃ ।
ನಾಮ್ನಾ ವೈ ಕಪಿಶಾರ್ದೂಲೋ ಭವಿತಾ ಹನುಮಾನಿತಿ ॥ ೧೧

ಅಹಮಸ್ಯ ಪ್ರದಾಸ್ಯಾಮಿ ಪರಮಂ ವರಮದ್ಭುತಮ್ ।
ಇತಃ ಪ್ರಭೃತಿ ವಜ್ರಸ್ಯ ಮಮಾವಧ್ಯೋ ಭವಿಷ್ಯತಿ ॥ ೧೨

ಮಾರ್ತಂಡಸ್ತ್ವಬ್ರವೀತ್ತತ್ರ ಭಗವಾಂಸ್ತಿಮಿರಾಪಹಃ ।
ತೇಜಸೋಽಸ್ಯ ಮದೀಯಸ್ಯ ದದಾಮಿ ಶತಿಕಾಂ ಕಲಾಮ್ ॥ ೧೩

---

ಕುರಿತು "ಎಲೈ ಮಹೇಂದ್ರ ಈಶಾನ ಯಮ ವರುಣರೆ, ನಿಮಗೆ ಸಕಲವೂ ತಿಳಿದಿದ್ದರೂ ಲೋಕಹಿತಕರವಾದ ಒಂದು ಮಾತನ್ನು ಹೇಳುವೆನು, ಕೇಳಿರಿ. ನಿಮ್ಮ ಮಹತ್ತರವಾದ ಒಂದು ಕಾರ್ಯವು ಈ ಮಗುವಿನಿಂದ ಆಗಬೇಕಾಗಿದೆ ಆದ್ದರಿಂದ ನೀವೆಲ್ಲರೂ ಈ ಮಗುವಿಗೆ ವರಗಳನ್ನು ಕೊಡಿರಿ ವಾಯುವಿಗೆ ಸಂತೋಷವಾಗಲಿ" ಎಂದು ನುಡಿದನು (೭-೯) ಆಗ ದೇವೇಂದ್ರನು (ಸುವರ್ಣಮಯವಾದ) ಪದ್ಮಮಾಲೆಯನ್ನೆತ್ತಿಕೊಟ್ಟು "ನಾನು ಕೈಯಿಂದ ಬೀಸಿದ ವಜ್ರಾಯುಧದಿಂದ ಶಿಶುವಿನ ಹನು (ದವಡೆ) ಭಗ್ನವಾಯಿತು. ಆದ್ದರಿಂದ ಈತನು ಹನುಮಂತನೆಂಬ ಹೆಸರಿನಿಂದ ವಿಖ್ಯಾತನಾದ ಕಪಿಶಾರ್ದೂಲನಾಗಲಿ! (೧೦-೧೧) ಇವನಿಗೆ ಅದ್ಭುತವಾದ ಒಂದು ವರವನ್ನು ಕೊಡುವೆನು ಏನೆಂದರೆ, ಇನ್ನು ಮುಂದೆ ನನ್ನ ವಜ್ರಾಯುಧದಿಂದ ಇವನು ಅವಧ್ಯನಾಗುವನು" ಎಂದನು (೧೨) ಧ್ವಾಂತವಿಧ್ವಂಸಕನಾದ ಭಗವಾನ್ ಸೂರ್ಯದೇವನು "ನನ್ನ ತೇಜಸ್ಸಿನಲ್ಲಿ ನೂರನೆಯ ಒಂದಂಶವನ್ನು ಈ ಶಿಶು

ಯದಾ ತು ಶಾಸ್ತ್ರಾಣ್ಯಧ್ಯೇತುಂ ಶಕ್ತಿರಸ್ಯ ಭವಿಷ್ಯತಿ ।
ತದಾಸ್ಯ ಶಾಸ್ತ್ರಂ ದಾಸ್ಯಾಮಿ ಯೇನ ವಾಗ್ಮೀ ಭವಿಷ್ಯತಿ ॥ ೧೪
ನ ಚಾಸ್ಯ ಭವಿತಾ ಕಶ್ಚಿತ್ ಸದೃಶಃ ಶಾಸ್ತ್ರದರ್ಶನೇ ।
ವರುಣಶ್ಚ ವರಂ ಪ್ರಾದಾನ್ನಾಸ್ಯ ಮೃತ್ಯುರ್ಭವಿಷ್ಯತಿ ॥ ೧೫
ವರ್ಷಾಯುತಶತೇನಾಪಿ ಮತ್ಪಾಶಾದುದಕಾದಪಿ ।
ಯಮೋ ದಂಡಾದವಧ್ಯತ್ವಮರೋಗಿತ್ವಂ ಚ ನಿತ್ಯಶಃ ॥ ೧೬
ವರಂ ದದಾಮಿ ಸಂತುಷ್ಟ ಅವಿಷಾದಂ ಚ ಸಂಯುಗೇ ।
ಗದೇಯಂ ಮಾಮಿಕಾ ಚೈನಂ ಸಂಯುಗೇ ನ ವಧಿಷ್ಯತಿ ॥ ೧೭
ಇತ್ಯೇವಂ ಧನದಃ ಪ್ರಾಹ ತದಾ ಹ್ಯೇಕಾಕ್ಷಿಪಿಂಗಲಃ ।
ಮತ್ತೋ ಮದಾಯುಧಾನಾಂ ಚ ನ ವಧ್ಯೋಽಯಂ ಭವಿಷ್ಯತಿ ॥
ಇತ್ಯೇವಂ ಶಂಕರೇಣಾಪಿ ದತ್ತೋಽಸ್ಯ ಪರಮೋ ವರಃ ।
ಸರ್ವೇಷಾಂ ಬ್ರಹ್ಮದಂಡಾನಾಮವಧ್ಯೋಽಯಂ ಭವಿಷ್ಯತಿ ॥ ೧೯

---

ವಿಗೆ ಧಾರೆಯೆರೆಯುವೆನು ಇವನಿಗೆ ಶಾಸ್ತ್ರಾಧ್ಯಯನ ಮಾಡುವ ಸಾಮರ್ಥ್ಯ ಬಂದಾಗ ವ್ಯಾಕರಣಶಾಸ್ತ್ರವನ್ನು ಉಪದೇಶಿಸುವೆನು ಅದರಿಂದ ಇವನು ವಾಗ್ಮಿಯಾಗುವನು (೧೩-೧೪) ಶಾಸ್ತ್ರಾರ್ಥಜ್ಞಾನದಲ್ಲಿ ಹನುಮಂತನಿಗೆ ಸಮಾನನಾದ ಇನ್ನೊಬ್ಬನಿರುವುದಿಲ್ಲ" ಎಂದು ಹೇಳಿದನು ವರುಣನು "ಎಷ್ಟು ಸಾವಿರ ವರ್ಷಗಳು ಕಳೆದರೂ ನನ್ನ ಪಾಶದಿಂದಾಗಲಿ ಜಲದಿಂದಾಗಲಿ ಈತನಿಗೆ ಮರಣವು ಸಂಭವಿಸದಿರಲಿ" ಎಂದು ವರವನ್ನಿತ್ತನು ಯಮನು ತನ್ನ ದಂಡಾಯುಧದಿಂದ ಹನುಮಂತನಿಗೆ ನಾವು ಸಂಭವಿಸದಿರಲೆಂದೂ ಅವನು ಸದಾ ಆರೋಗ್ಯಶಾಲಿಯಾಗಿರಲೆಂದೂ ವರವನ್ನು ಕೊಟ್ಟನು (೧೫-೧೬) ಕುಬೇರನು "ಈತನಿಗೆ ಯುದ್ಧದಲ್ಲಿ ಪರಾಜಯವಾಗದಿರಲಿ. ನನ್ನ ಗದೆ ಇವನನ್ನು ವಧಿಸದಿರಲಿ" ಎಂದನು "ನನ್ನಿಂದಾಗಲಿ ನನ್ನ ಆಯುಧಗಳಿಂದಾಗಲಿ ಹನುಮಂತನಿಗೆ ಮೃತ್ಯು ಸಂಭವಿಸದಿರಲಿ" ಎಂದು ಶಂಕರನು ಹೇಳಿದನು (೧೭-೧೮) "ಬ್ರಹ್ಮಾಸ್ತ್ರವೇ ಮೊದಲಾದ ಆಯುಧಗಳಿಗೆ ಹನುಮಂತನು ಅವಧ್ಯನಾಗುವನು ಅಲ್ಲದೆ ದೀರ್ಘಾಯುವೂ ಮಹಾತ್ಮನೂ (ಜ್ಞಾನಿಯೂ) ಆಗುವನು" ಎಂದು ಬ್ರಹ್ಮನು ಹೇಳಿದನು

ಧೀಘಾರ್ಯುಶ್ಚ ಮಹಾತ್ಮಾ ಚ ಇತಿ ಬ್ರಹ್ಮಾಬ್ರವೀದ್ವಚಃ ।
ವಿಶ್ವಕರ್ಮಾ ಚ ದೃಷ್ಟ್ವೈನಂ ಬಾಲಸೂರ್ಯೋಪಮಂ ಶಿಶುಮ್ ॥
ಶಿಲ್ಪಿನಾಂ ಪ್ರವರಃ ಪ್ರಾದಾದ್ವರಮಸ್ಯ ಮಹಾಮತಿಃ ।
ಮತ್ಕೃತಾನಿ ಚ ಶಸ್ತ್ರಾಣಿ ಯಾನಿ ದಿವ್ಯಾನಿ ಸಂಯುಗೇ ॥ ೨೧

ತೈರವಧ್ಯತ್ವಮಾಪನ್ನಶ್ಚಿರಜೀವೀ ಭವಿಷ್ಯತಿ ।
ತತಃ ಸುರಾಣಾಂ ತು ವರೈರ್ದೃಷ್ಟ್ವಾ ಹ್ಯೇನಮಲಂಕೃತಮ್ ॥ ೨೨

ಚತುರ್ಮುಖಸ್ತುಷ್ಟಮನಾ ವಾಯುಮಾಹ ಜಗದ್ಗುರುಃ ।
ಅಮಿತ್ರಾಣಾಂ ಭಯಕರೋ ಮಿತ್ರಾಣಾಮಭಯಂಕರಃ ॥ ೨೩

ಅಜೇಯೋ ಭವಿತಾ ಪುತ್ರಸ್ತವ ಮಾರುತ ಮಾರುತಿಃ ।
ಕಾಮರೂಪಃ ಕಾಮಚಾರೀ ಕಾಮಗಃ ಪ್ಲವತಾಂ ವರಃ ॥ ೨೪

ಭವತ್ಯವ್ಯಾಹತಗತಿಃ ಕೀರ್ತಿಮಾಂಶ್ಚ ಭವಿಷ್ಯತಿ ।
ರಾವಣೋತ್ಸಾದನಾರ್ಥಾನಿ ರಾಮಪ್ರಿಯಕರಾಣಿ ಚ ॥ ೨೫

ರೋಮಹರ್ಷಕರಾಣ್ಯೇಷ ಕರ್ತಾ ಕರ್ಮಾಣಿ ಸಂಯುಗೇ ।
ಏವಮುಕ್ತ್ವಾ ತಮಾಮಂತ್ರ್ಯ ಮಾರುತಂ ತ್ವಮರೈಃ ಸಹ ॥ ೨೬

---

(೧೯) ಬಾಲಸೂರ್ಯನಂತಿದ್ದ ಆ ಶಿಶುವನ್ನು ನೋಡಿ ಶಿಲ್ಪಿಶ್ರೇಷ್ಠನಾದ ವಿಶ್ವಕರ್ಮನು "ನಾನು ನಿರ್ಮಿಸಿದ ಯಾವ ಯಾವ ದಿವ್ಯಶಸ್ತ್ರಗಳಿರುವುವೋ ಆ ಎಲ್ಲ ಶಸ್ತ್ರಗಳಿಗೂ ಈ ಶಿಶು ಅವಧ್ಯನಾಗಿ ಚಿರಂಜೀವಿಯಾಗಿ ಬಾಳಲಿ" ಎಂದು ವರವನ್ನಿತ್ತನು (೨೦-೨೨) ಹೀಗೆ ದೇವತೆಗಳು ವರಗಳನ್ನೀಯಲು ಜಗದ್ಗುರುವಾದ ಬ್ರಹ್ಮನು ಸಂತುಷ್ಟನಾಗಿ ವಾಯುದೇವನನ್ನು ಕುರಿತು "ಎಲೈ ಮಾರುತನೆ, ನಿನ್ನ ಪುತ್ರನು ವೈರಿಗಳಿಗೆ ಭಯಂಕರನೂ ಮಿತ್ರರಿಗೆ ಅಭಯಪ್ರದಾತನೂ ಆಗುವನು (೨೩) ಇವನು ಕಾಮರೂಪನೂ ಕಾಮಚಾರಿಯೂ ಕಪಿಶ್ರೇಷ್ಠನೂ ಆಗುವನು ಈತನ ಸಂಚಾರಕ್ಕೆ ತಡೆಯೇ ಇರುವುದಿಲ್ಲ ನಿನ್ನ ಪುತ್ರನ ಕೀರ್ತಿ ಎಲ್ಲೆಲ್ಲಿಯೂ ಹರಡುವುದು ಮುಂದೆ ರಾವಣನ ಸಂಹಾರಕ್ಕೆ ಉಪಯುಕ್ತವೂ ಶ್ರೀರಾಮನಿಗೆ ಪ್ರಿಯವೂ ಆದ ವಿವಿಧಕಾರ್ಯಗಳನ್ನೆಸಗುವನು (೨೪-೨೫) ರಣರಂಗದಲ್ಲಿ ರೋಮಾಂಚಕರವಾದ ಸಾಹಸಕೃತ್ಯಗಳನ್ನು ಮಾಡುವನು" ಎಂದು ತಿಳಿಸಿ ದೇವತೆ

ಯಥಾಗತಂ ಯಯುಃ ಸರ್ವೇ ಪಿತಾಮಹಪುರೋಗಮಾಃ ।
ಸೋऽಪಿ ಗಂಧವಹಃ ಪುತ್ರಂ ಪ್ರಗೃಹ್ಯ ಗೃಹಮಾನಯತ್ ॥ ೨೭

ಅಂಜನಾಯಾಸ್ತಮಾಚಖ್ಯೌ ವರದತ್ತಂ ವಿನಿರ್ಗತಃ ।
ಪ್ರಾಪ್ಯ ರಾಮ ವರಾನೇಷ ವರದಾನಬಲಾನ್ವಿತಃ ॥ ೨೮

ಬಲೇನಾತ್ಮನಿ ಸಂಸ್ಥೇನ ಸೋऽಪೂರ್ಯತ ಯಥಾರ್ಣವಃ ।
ತರಸಾ ಪೂರ್ಯಮಾಣೋऽಪಿ ತದಾ ವಾನರಪುಂಗವಃ ॥ ೨೯

ಆಶ್ರಮೇಷು ಮಹರ್ಷೀಣಾಮಪರಾಧ್ಯತಿ ನಿರ್ಭಯಃ ।
ಸ್ರುಗ್ಭಾಂಡಾನ್ಯಗ್ನಿಹೋತ್ರಂ ಚ ವಲ್ಕಲಾಜಿನಸಂಚಯಾನ್ ॥ ೩೦

ಭಗ್ನವಿಚ್ಛಿನ್ನವಿಧ್ವಸ್ತಾನ್ ಸಶಾಂತಾನಾಂ ಕರೋತ್ಯಯಮ್ ।
ಏವಂವಿಧಾನಿ ಕರ್ಮಾಣಿ ಪ್ರಾವರ್ತತ ಮಹಾಬಲಃ ॥ ೩೧

ಸರ್ವೇಷಾಂ ಬ್ರಹ್ಮದಂಡಾನಾಮವಧ್ಯಃ ಶಂಭುನಾ ಕೃತಃ ।
ಜಾನಂತ ಋಷಯಸ್ತಂ ವೈ ಕ್ಷಮಂತೇ ತಸ್ಯ ಶಕ್ತಿತಃ ॥ ೩೨

---

ಗಳೊಡನೆ ಹೊರಟುಹೋದನು ಇತ್ತಲಾಗಿ ವಾಯುವು ತನ್ನ ಮಗನನ್ನೆತ್ತಿಕೊಂಡು ಬಂದು ಅಂಜನೆಗೆ ಒಪ್ಪಿಸಿ, ದೇವತೆಗಳು ಅನುಗ್ರಹಿಸಿದ ವರಗಳನ್ನು ಆಕೆಗೆ ತಿಳಿಸಿ ನಿರ್ಗಮಿಸಿದನು (೨೭-೨೮) ಶ್ರೀರಾಮ, ಹೀಗೆ ಹನುಮಂತನು ವರಗಳನ್ನು ಪಡೆದು ಸಮುದ್ರವು (ನದೀಜಲದಿಂದ) ಪೂರ್ಣವಾಗುವಂತೆ ಬಲದಿಂದ ಪೂರ್ಣನಾದನು ಬಲಾಢ್ಯನಾದ ಈ ವಾನರಪುಂಗವನು ಮಹರ್ಷಿಗಳ ಆಶ್ರಮಗಳಿಗೆ ಹೋಗಿ ನಿರ್ಭೀತಿಯಿಂದ ತುಂಟತನದಲ್ಲಿ ತೊಡಗಿದನು! ಶಾಂತಸ್ವಭಾವದವರಾದ ಮುನಿಗಳ ಯಜ್ಞೋಪಕರಣಗಳನ್ನು ಒಡೆದುಹಾಕುವನು! ಅಗ್ನಿಹೋತ್ರದ ಅಗ್ನಿಗಳನ್ನು ಕೆದಕುವನು! ನಾರುಬಟ್ಟೆ ಕೃಷ್ಣಾಜಿನಗಳನ್ನು ಹರಿದೆಸೆಯುವನು! (೨೯-೩೦) ಈ ಬಗೆಯ ಚೇಷ್ಟೆಗಳಲ್ಲಿ ತೊಡಗಿದನು ಶಿವಂಕರನಾದ ಬ್ರಹ್ಮನು ಸಕಲ ಬ್ರಹ್ಮದಂಡಗಳಿಗೂ ಅವಧ್ಯನಾಗುವಂತೆ ಇವನಿಗೆ ವರವನ್ನು ಕೊಟ್ಟಿದ್ದನಷ್ಟೆ! ಈ ವಿಷಯವನ್ನು ತಿಳಿದಿದ್ದ ಋಷಿಗಳು ಈತನ ಅಪಾರಶಕ್ತಿಗೋಸ್ಕರ

ಯಥಾ ಕೇಸರಿಣಾ ತ್ವೇಷ ವಾಯುನಾ ಸೋಽಂಜನಾಸುತಃ ।
ಪ್ರತಿಷಿದ್ಧೋಽಪಿ ಮರ್ಯಾದಾಂ ಲಂಘಯತ್ಯೇವ ವಾನರಃ ॥ ೩೩
ತತೋ ಮಹರ್ಷಯಃ ಕ್ರುದ್ಧಾ ಭೃಗ್ವಂಗಿರಸವಂಶಜಾಃ ।
ಶೇಪುರೇನಂ ರಘುಶ್ರೇಷ್ಠ ನಾತಿಕ್ರುದ್ಧಾತಿಮನ್ಯವಃ ॥ ೩೪
ಬಾಧಸೇ ಯತ್ ಸಮಾಶ್ರಿತ್ಯ ಬಲಮಸ್ಮಾನ್ ಪ್ಲವಂಗಮ ।
ತದ್ದೀರ್ಘಕಾಲಂ ವೇತ್ತಾಸಿ ನಾಸ್ಮಾಕಂ ಶಾಪಮೋಹಿತಃ ॥ ೩೫
ಯದಾ ತೇ ಸ್ಮಾರ್ಯತೇ ಕೀರ್ತಿಸ್ತದಾ ತೇ ವರ್ಧತೇ ಬಲಮ್ ।
ತತಃ ಸ ಹೃತತೇಜೌಜಾ ಮಹರ್ಷಿವಚನೌಜಸಾ ॥ ೩೬
ಏಷೋಽಶ್ರಮಾಣಿ ತಾನ್ಯೇವ ಮೃದುಭಾವಂ ಗತೋಽಚರತ್ ।
ಅಥರ್ಕ್ಷರಜಸೋ ನಾಮ ವಾಲಿಸುಗ್ರೀವಯೋಃ ಪಿತಾ ॥ ೩೭
ಸರ್ವವಾನರರಾಜಾಸೀತ್ತೇಜಸಾ ಭಾಸ್ಕರಪ್ರಭಃ ।
ಸ ಚ ರಾಜ್ಯಂ ಚಿರಂ ಕೃತ್ವಾ ವಾನರಾಣಾಂ ಹರೀಶ್ವರಃ ॥ ೩೮

---

ಎಲ್ಲವನ್ನೂ ಸಹಿಸಿಕೊಳ್ಳುತ್ತಿದ್ದರು (೩೧-೩೨) ಕೇಸರಿಯೂ ವಾಯುದೇವನೂ ಬೇಡವೆಂದರೂ ಕೇಳದೆ ಆಂಜನೇಯನು ಅವಿನೀತನಾಗಿ ಚೇಷ್ಟೆ ಮಾಡುತ್ತಲೇ ಇದ್ದನು ಭೃಗ್ವಂಗಿರಸವಂಶಜರಾದ ಮಹರ್ಷಿಗಳು 'ಏನೋ ಬಾಲಕನ ಚೇಷ್ಟೆ' ಎಂದು ಹೆಚ್ಚು ಸಿಟ್ಟಾಗದ ಸಹನೆಯಿಂದಲೇ ಇದ್ದರು (೩೩-೩೪). ಆದರೂ ಒಂದು ಸಲ ಕುಪಿತರಾಗಿ 'ಎಲೋ ವಾನರ! ವರಬಲವಿದೆಯೆಂದು ಕೊಬ್ಬಿ ನಮ್ಮನ್ನು ಅತಿಯಾಗಿ ಪೀಡಿಸುತ್ತೀಯೆ! ನಿನ್ನ ಬಲವೆಷ್ಟೆಂಬುದೇ ನಿನಗೆ ಮರೆತುಹೋಗಲಿ! ದೀರ್ಘಕಾಲದವರೆಗೆ ನಿನ್ನ ಸಾಮರ್ಥ್ಯದ ಅರಿವೇ ನಿನಗಾಗದು' ಎಂದು ಶಪಿಸಿದರು (೩೫). ಅನಂತರ 'ಯಾರಾದರೂ ನಿನ್ನ ಬಲಕೀರ್ತಿಯನ್ನು ನೆನಪುಮಾಡಿಕೊಟ್ಟಾಗ ನಿನ್ನ ಬಲವು ವರ್ಧಿಸುವುದು' ಎಂದು ಹೇಳಿದರು ಶ್ರೀರಾಮ, ಮಹರ್ಷಿಗಳ ವಾಗ್ವೀರ್ಯದಿಂದ ಹನುಮಂತನ ತೇಜಸ್ಸು ಓಜಸ್ಸುಗಳು ಅಡಗಿದವು ಇವನ ಸ್ವಭಾವ ಮೃದುವಾಯಿತು ಶಾಂತನಾಗಿ ಆಶ್ರಮಗಳಲ್ಲಿ ತಿರುಗಾಡಿಕೊಂಡಿದ್ದನು ಋಕ್ಷರಜಸ್ಸೆಂಬವನು ವಾಲಿಸುಗ್ರೀವರ ತಂದೆ (೩೬-೩೭). ಅವನು ಸಕಲ ವಾನರರಿಗೂ ಅಧಿಪತಿ. ಸೂರ್ಯನಂತೆ ತೇಜಸ್ವಿ ಅವನು.

ಸ ಚ ಋಕ್ಷರಜಾ ನಾಮ ಕಾಲಧರ್ಮೇಣ ಸಂಗತಃ ।
ತಸ್ಮಿನ್ನಸ್ತಮಿತೇ ಚಾಥ ಮಂತ್ರಿಭಿರ್ಮಂತ್ರಕೋವಿದೈಃ ॥ ೩೯

ಪಿತ್ರ್ಯೇ ಪದೇ ಕೃತೋ ವಾಲೀ ಸುಗ್ರೀವೋ ವಾಲಿನಃ ಪದೇ ।
ಸುಗ್ರೀವೇಣ ಸಮಂ ತ್ವಸ್ಯ ಅದ್ವೈಧಂ ಛಿದ್ರವರ್ಜಿತಮ್ ॥ ೪೦

ಆಬಾಲ್ಯಂ ಸಖ್ಯಮಭವದನಿಲಸ್ಯಾಗ್ನಿನಾ ಯಥಾ ।
ಏಷ ಶಾಪವಶಾದೇವ ನ ವೇದ ಬಲಮಾತ್ಮನಃ ॥ ೪೧

ವಾಲಿಸುಗ್ರೀವಯೋರ್ವೈರಂ ಯದಾ ರಾಮ ಸಮುತ್ಥಿತಮ್ ।
ನ ಹ್ಯೇಷ ರಾಮ ಸುಗ್ರೀವೋ ಭ್ರಾಮ್ಯಮಾಣೋಽಪಿ ವಾಲಿನಾ ॥

ದೇವ ಜಾನಾತಿ ನಹ್ಯೇಷ ಬಲಮಾತ್ಮನಿ ಮಾರುತಿಃ ।
ಋಷಿಶಾಪಾಹೃತಬಲಸ್ತದೈಷ ಕಪಿಸತ್ತಮಃ ॥ ೪೩

ಸಿಂಹಃ ಪಂಜರರುದ್ಧೋ ವಾ ಅಸ್ಥಿತಃ ಸಹಿತೋ ರಣೇ ॥

ಪರಾಕ್ರಮೋತ್ಸಾಹಮತಿಪ್ರತಾಪ-
ಸೌಶೀಲ್ಯಮಾಧುರ್ಯನಯಾನಯೈಶ್ಚ ।

---

ದೀರ್ಘಕಾಲ ರಾಜ್ಯಭಾರವನ್ನು ಮಾಡಿ ಕಾಲಧರ್ಮದಿಂದ ನಿಧನಹೊಂದಿದನು. ಅನಂತರ ಮಂತ್ರಿಗಳು ವಾಲಿಯನ್ನು ತಂದೆಯ ರಾಜಪದವಿಯಲ್ಲಿ ಸ್ಥಾಪಿಸಿ ವಾಲಿಯ ಯುವರಾಜಪದವಿಯನ್ನು ಸುಗ್ರೀವನಿಗೆ ಕೊಡಿಸಿದರು ಸುಗ್ರೀವನಿಗೂ ಹನುಮಂತನಿಗೂ ಏಕಾಕಾರವೂ ನಿಷ್ಕಳಂಕವೂ ಆದ ಸ್ನೇಹವಿತ್ತು (೩೮-೪೦) ಬಾಲ್ಯದಿಂದಲೂ ಅಗ್ನಿವಾಯುಗಳಿಗಿರುವಂತೆ ಅವರ ಗೆಳೆತನ ಬೆಳೆದಿತ್ತು ಹೀಗೆ ಶಾಪವಶದಿಂದಲೇ ಹನುಮಂತನಿಗೆ ತನ್ನ ಶಕ್ತಿ ಎಷ್ಟೆಂಬುದು ತಿಳಿದಿರಲಿಲ್ಲ ರಾಘವ, ವಾಲಿಸುಗ್ರೀವರಿಗೆ ವೈರವು ಬೆಳೆದಾಗ ಈ ಪರಿಸ್ಥಿತಿ ಇದ್ದಿತು ವಾಲಿಯ ಪೀಡೆಯಿಂದ ಅಲೆದಾಡುವಾಗಲೂ ಸುಗ್ರೀವನಿಗೆ ಈ ವಾಯುಪುತ್ರನ ಬಲವೆಷ್ಟೆಂಬುದು ತಿಳಿದಿರಲಿಲ್ಲ ಈತನಿಗೂ ತನ್ನ ಬಲವು ಗೊತ್ತಿರಲಿಲ್ಲ! ವಾಲಿಸುಗ್ರೀವರಿಗೆ ಯುದ್ಧವು ನಡೆದಾಗ ಈ ವಾನರೋತ್ತಮನು ಋಷಿಶಾಪವಶದಿಂದ ಪಂಜರದಲ್ಲಿದ್ದ ಸಿಂಹವಾಗಿದ್ದನು! (೪೧-೪೩). ಪರಾಕ್ರಮ, ಉತ್ಸಾಹ, ಬುದ್ಧಿ,

ಗಾಂಭೀರ್ಯಚಾತುರ್ಯಸುವೀರ್ಯಧೈರ್ಯೈ-
ರ್ಹನೂಮತಃ ಕೋಽಭ್ಯಧಿಕೋಽಸ್ತಿ ಲೋಕೇ ॥ ೪೪
ಅಸೌ ಪುನರ್ವ್ಯಾಕರಣಂ ಗ್ರಹೀಷ್ಯನ್
ಸೂರ್ಯೋನ್ಮುಖಃ ಪೃಷ್ಟಗಮಃ ಕಪೀಂದ್ರಃ ।
ಉದ್ಯದ್ಗಿರೇರಸ್ತಗಿರಿಂ ಜಗಾಮ
ಗ್ರಂಥಂ ಮಹದ್ಧಾರಯನಪ್ರಮೇಯಃ ॥ ೪೫
ಸಸೂತ್ರವೃತ್ತ್ಯರ್ಥಪದಂ ಮಹಾರ್ಥಂ
ಸಸಂಗ್ರಹಂ ಸಾಧ್ಯತಿ ವೈ ಕಪೀಂದ್ರಃ ।
ನ ಹ್ಯಸ್ಯ ಕಶ್ಚಿತ್ ಸದೃಶೋಽಸ್ತಿ ಶಾಸ್ತ್ರೇ
ವೈಶಾರದೇ ಛಂದಗತೌ ತಥೈವ ॥ ೪೬
ಸರ್ವಾಸು ವಿದ್ಯಾಸು ತಪೋವಿಧಾನೇ
ಪ್ರಸ್ಪರ್ಧತೇ ಯೋ ಹಿ ಗುರುಂ ಸುರಾಣಾಮ್ ।

---

ಪ್ರತಾಪ, ಸೌಶೀಲ್ಯ, ಮಾತಿನ ಸೊಗಸು, ನೀತಿ, ತುಂಟತನ(!), ಗಾಂಭೀರ್ಯ, ಚಾತುರ್ಯ, ವೀರ್ಯ, ಧೈರ್ಯಗಳಲ್ಲಿ ಹನುಮಂತನನ್ನು ಮೀರಿಸತಕ್ಕವರು ಈ ಜಗತ್ತಿನಲ್ಲಿಲ್ಲ (೪೪) ಈ ಕಪೀಂದ್ರನು ಸೂರ್ಯನಿಂದ ವ್ಯಾಕರಣಶಾಸ್ತ್ರವನ್ನು ಕಲಿತಿದ್ದಾನೆ ಆ ಮಹಾಗ್ರಂಥವನ್ನು ಕಲಿಯುವುದಕ್ಕಾಗಿ ಊಹಾತೀತಮಹಿಮನಾದ ಈತನು (ಬೆಳಗಿನಿಂದ ಸಂಜೆಯವರೆಗೆ) ಉದಯಾಚಲದಿಂದ ಅಸ್ತಾಚಲದವರೆಗೂ ಸೂರ್ಯದೇವನೊಡನೆ ಸಂಚರಿಸುತ್ತಿದ್ದನು ! (೪೫) ಈ ಹನುಮಂತನು ಪಾಣಿನಿಯ ಅಷ್ಟಾಧ್ಯಾಯೀ ಸೂತ್ರ, ಅವುಗಳ ವೃತ್ತಿ, ವಾರ್ತಿಕ, ಮಹಾರ್ಥವುಳ್ಳ ಮಹಾಭಾಷ್ಯ, ವ್ಯಾಡಿಯ ಸಂಗ್ರಹಗ್ರಂಥ – ಇವೆಲ್ಲವನ್ನೂ ಅಭ್ಯಾಸಮಾಡಿದ್ದಾನೆ ! ಶಾಸ್ತ್ರನೈಪುಣ್ಯದಲ್ಲಿಯೂ ವೇದಾರ್ಥಜ್ಞಾನದಲ್ಲಿಯೂ* ಇವನಿಗೆ ಸಮಾನನಾದವನು ಇನ್ನೊಬ್ಬನಿಲ್ಲ (೪೬) ಸಕಲ ವಿದ್ಯೆಗಳಲ್ಲಿಯೂ ತಪಶ್ಚರ್ಯೆಯಲ್ಲಿಯೂ ಇವನು ದೇವಗುರುವಾದ ಬೃಹಸ್ಪತಿಯನ್ನು ಸೆಣಸಬಲ್ಲನು ಹನುಮಂತನು

---

* ಮೂಲದಲ್ಲಿ ಛಂದಗತಿ ಎಂಬ ಶಬ್ದವಿದೆ ಇದಕ್ಕೆ ವೇದಾರ್ಥಜ್ಞಾನ, ಛಂದಶ್ಶಾಸ್ತ್ರಜ್ಞಾನ, ಸ್ವೇಚ್ಛಾಗಮನ ಎಂದು ಮೂರು ಅರ್ಥಗಳನ್ನು ಹೇಳಬಹುದು.

ಸೋಽಯಂ ನವವ್ಯಾಕರಣಾರ್ಥವೇತ್ತಾ
ಬ್ರಹ್ಮಾ ಭವಿಷ್ಯತ್ಯಪಿ ತೇ ಪ್ರಸಾದಾತ್ ॥ ೪೭

ಪ್ರವೀವಿವಿಕ್ಷೋರಿವ ಸಾಗರಸ್ಯ
ಲೋಕಾನ್ ದಿಧಕ್ಷೋರಿವ ಪಾವಕಸ್ಯ ।
ಯುಗಕ್ಷಯೇ ಹ್ಯೇವ ಯಥಾಂತಕಸ್ಯ
ಹನೂಮತಃ ಸ್ಥಾಸ್ಯತಿ ಕಃ ಪುರಸ್ತಾತ್ ॥ ೪೮

ಏಷೇವ ಚಾನ್ಯೇ ಚ ಮಹಾಕಪೀಂದ್ರಾಃ
ಸುಗ್ರೀವಮೈಂದದ್ವಿವಿದಾಃ ಸನೀಲಾಃ ।
ಸತಾರತಾರೇಯನಲಾಃ ಸರಂಭಾ-
ಸ್ತ್ವತ್ಕಾರಣಾದ್ರಾಮ ಸುರೈರ್ಹಿ ಸೃಷ್ಟಾಃ ॥ ೪೯

ತದೇತತ್ ಕಥಿತಂ ಸರ್ವಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ಹನೂಮತೋ ಬಾಲಭಾವೇ ಕರ್ಮೈತತ್ ಕಥಿತಂ ಮಯಾ ॥ ೫೦

ಶ್ರುತ್ವಾಗಸ್ತ್ಯಸ್ಯ ಕಥಿತಂ ರಾಮಃ ಸೌಮಿತ್ರಿರೇವ ಚ ।
ವಿಸ್ಮಯಂ ಪರಮಂ ಜಗ್ಮುರ್ವಾನರಾ ರಾಕ್ಷಸೈಃ ಸಹ ॥ ೫೧

---

ನವವ್ಯಾಕರಣಗಳಲ್ಲಿ ಪಂಡಿತ ರಾಘವ, ನಿನ್ನ ಅನುಗ್ರಹದಿಂದ ಈತನು ಮುಂದೆ ಬ್ರಹ್ಮನಾಗುವನು (೪೭) ಪ್ರಳಯಕಾಲದಲ್ಲಿ ನುಗ್ಗಿಬರುವ ಸಮುದ್ರದಂತೆಯೂ ಸಕಲಲೋಕಗಳನ್ನೂ ಸುಡುವ ಅಗ್ನಿಯಂತೆಯೂ ಕಾಲಯಮನಂತೆಯೂ ಹನುಮಂತನೆದುರಿಗೆ ಯಾವನು ನಿಂತಾನು ? (೪೮). ಇವನನ್ನು ನಿನ್ನ ಕಾರ್ಯಕ್ಕೋಸ್ಕರ ದೇವತೆಗಳು ಸೃಜಿಸಿದ್ದಾರೆ ಶ್ರೀರಾಮ, ಇವನಂತೆಯೇ ಸುಗ್ರೀವ ಮೈಂದ ದ್ವಿವಿದರನ್ನೂ ನೀಲ ತಾರ ಅಂಗದ ನಳ ರಂಭ – ಮುಂತಾದ ಕಪೀಂದ್ರರನ್ನೂ ಅವರು ಸೃಜಿಸಿದ್ದಾರೆ (೪೯). ನೀನು ಕೇಳಿದ್ದರಿಂದ, ರಾಘವ, ಹನುಮಂತನ ಬಾಲ್ಯದಲ್ಲಿ ನಡೆದ ಈ ವಿವರಗಳೆಲ್ಲವನ್ನೂ ಹೇಳಿದೆನು" ಎಂದರು ಅಗಸ್ತ್ಯಮುನಿಗಳ ನುಡಿಯನ್ನು ಕೇಳಿ ಶ್ರೀರಾಮಲಕ್ಷ್ಮಣರೂ ವಾನರ ರಾಕ್ಷಸರೂ ವಿಸ್ಮಿತರಾದರು (೫೦-೫೧)

ಅಗಸ್ತ್ಯಸ್ತ್ವಬ್ರವೀದ್ರಾಮಂ ಸರ್ವಮೇತಚ್ಛ್ರುತಂ ತ್ವಯಾ
ದೃಷ್ಟಃ ಸಂಭಾಷಿತಶ್ಚಾಸಿ ರಾಮ ಗಚ್ಛಾಮಹೇ ವಯಮ್ ॥ ೫೨

ಶ್ರುತ್ವೈತದ್ರಾಘವೋ ವಾಕ್ಯಮಗಸ್ತ್ಯಸ್ಯೋಗ್ರತೇಜಸಃ ।
ಪ್ರಾಂಜಲಿಃ ಪ್ರಣತಶ್ಚಾಪಿ ಮಹರ್ಷಿಮಿದಮಬ್ರವೀತ್ ॥ ೫೩

ಅದ್ಯ ಮೇ ದೇವತಾ ಹೃಷ್ಟಾಃ ಪಿತರಃ ಪ್ರಪಿತಾಮಹಾಃ ।
ಯುಷ್ಮಾಕಂ ದರ್ಶನಾದೇವ ನಿತ್ಯಂ ತುಷ್ಟಾಃ ಸಬಾಂಧವಾಃ ॥ ೫೪

ವಿಜ್ಞಾಪ್ಯಂ ತು ಮಮೈತದ್ಧಿ ತದ್ವದಾಮ್ಯಾಗತಸ್ಪೃಹಃ ।
ತದ್ಭವದ್ಭಿರ್ಮಮ ಕೃತೇ ಕರ್ತವ್ಯಮನುಕಂಪಯಾ ॥ ೫೫

ಪೌರಜಾನಪದಾನ್ ಸ್ಥಾಪ್ಯ ಸ್ವಕಾರ್ಯೇಷ್ವಹಮಾಗತಃ ।
ಕ್ರತೂನೇವ ಕರಿಷ್ಯಾಮಿ ಪ್ರಭಾವಾದ್ಭವತಾಂ ಸತಾಮ್ ॥ ೫೬

ಸದಸ್ಯಾ ಮಮ ಯಜ್ಞೇಷು ಭವಂತೋ ನಿತ್ಯಮೇವ ತತ್ ।
ಭವಿಷ್ಯಥ ಮಹಾವೀರ್ಯಾ ಮಮಾನುಗ್ರಹಕಾಂಕ್ಷಿಣಃ ॥ ೫೭

---

ಆಮೇಲೆ ಅಗಸ್ತ್ಯರು "ಶ್ರೀರಾಮ, ಇವೆಲ್ಲವನ್ನೂ ನೀನು ಕೇಳಿದೆ. ನಿನ್ನನ್ನು ಕಂಡು ಸಂಭಾಷಿಸಿದ್ದಾಯಿತು ಇನ್ನು ನಾವು ನಿರ್ಗಮಿಸುತ್ತೇವೆ" ಎಂದರು (೫೨) ಶ್ರೀರಾಮನು ಮಹಾತೇಜಸ್ವಿಗಳಾದ ಅಗಸ್ತ್ಯಮಹರ್ಷಿಗಳ ಮಾತನ್ನು ಕೇಳಿ ಅವರಿಗೆ ವಂದಿಸಿ ಕೈಮುಗಿದುಕೊಂಡು "ಮಹಾತ್ಮರೆ, ನಿಮ್ಮೆಲ್ಲರ ದರ್ಶನದಿಂದ ನನ್ನ ಆರಾಧ್ಯದೇವತೆಗಳೂ ಪಿತೃಗಳೂ ಬಾಂಧವರೂ ಸಂತುಷ್ಟರಾದರು (೫೩-೫೪) ತಮ್ಮಲ್ಲಿ ನನ್ನ ಒಂದು ಅರಿಕೆ ಯುಂಟು ಅದನ್ನು ವಿಜ್ಞಾಪಿಸಿಕೊಳ್ಳಲು ಇಚ್ಛೆಯಾಗಿದೆ ನನಗೋಸ್ಕರ ಕೃಪೆಯಿಟ್ಟು ಅದನ್ನು ನಡೆಸಿಕೊಡಬೇಕು (೫೫) (ವನವಾಸವನ್ನು ಮುಗಿಸಿ) ಬಂದಿರುವ ನಾನು ಪೌರರನ್ನೂ ರಾಷ್ಟ್ರದ ಇತರ ಪ್ರಜೆಗಳನ್ನೂ ಅವರವರ ಕರ್ತವ್ಯದಲ್ಲಿರುವಂತೆ ವ್ಯವಸ್ಥೆ ಮಾಡಿ, ತಮ್ಮೆಲ್ಲರ ಅನುಗ್ರಹದಿಂದ ಯಜ್ಞಗಳನ್ನು ನಡೆಸಲು ಉದ್ದೇಶಿಸಿದ್ದೇನೆ (೫೬) ಆ ಸಮಯದಲ್ಲಿ ನೀವೆಲ್ಲರೂ ಯಜ್ಞಸದಸ್ಯರಾಗಿರಬೇಕು ತಪೋವೀರ್ಯಶಾಲಿಗಳಾದ ನೀವು

ಅಹಂ ಯುಷ್ಮಾನ್ ಸಮಾಶ್ರಿತ್ಯ ತಪೋನಿರ್ಧೂತಕಲ್ಮಷಾನ್ ।
ಅನುಗೃಹೀತಃ ಪಿತೃಭಿರ್ಭವಿಷ್ಯಾಮಿ ಸುನಿರ್ವೃತಃ ॥ ೫೮

ತದಾಗಂತವ್ಯಮನಿಶಂ ಭವದ್ಭಿರಿಹ ಸಂಗತೈಃ ।
ಅಗಸ್ತ್ಯಾದ್ಯಾಸ್ತು ತಚ್ಛ್ರುತ್ವಾ ಋಷಯಃ ಸಂಶಿತವ್ರತಾಃ ॥ ೫೯

ಏವಮಸ್ತ್ವಿತಿ ತಂ ಚೋಕ್ತ್ವಾ ಪ್ರಯಾತುಮುಪಚಕ್ರಮುಃ ।
ಏವಮುಕ್ತ್ವಾ ಗತಾಃ ಸರ್ವೇ ಋಷಯಸ್ತೇ ಯಥಾಗತಮ್ ॥ ೬೦

ರಾಘವಶ್ಚ ತಮೇವಾರ್ಥಂ ಚಿಂತಯಾಮಾಸ ವಿಸ್ಮಿತಃ ।
ತತೋಽಸ್ತಂ ಭಾಸ್ಕರೇ ಯಾತೇ ವಿಸೃಜ್ಯ ನೃಪವಾನರಾನ್ ॥ ೬೧

ಸಂಧ್ಯಾಮುಪಾಸ್ಯ ವಿಧಿವತ್ತದಾ ನರವರೋತ್ತಮಃ ।
ಪ್ರವೃತ್ತಾಯಾಂ ರಜನ್ಯಾಂ ತು ಸೋಽಂತಃಪುರಚರೋಽಭವತ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಟ್‌ತ್ರಿಂಶಃ ಸರ್ಗಃ



ಸದಾ ನನ್ನನ್ನು ಅನುಗ್ರಹಿಸುತ್ತಿರಬೇಕು ತಪಶ್ಚರಣೆಯಿಂದ ಶುದ್ಧಾತ್ಮರಾದ ನಿಮ್ಮನ್ನು ಆಶ್ರಯಿಸಿ, ಪಿತೃಗಳಿಂದ ಅನುಗೃಹೀತನಾಗುವೆನು. ಸುಖಿಯಾಗುವೆನು. ಆದ್ದರಿಂದ ನೀವೆಲ್ಲರೂ ಆ ಸಮಯದಲ್ಲಿ ದಯಮಾಡಿಸಬೇಕು" ಎಂದನು ಶ್ರೀರಾಮನ ಅರಿಕೆಯನ್ನು ಕೇಳಿ ಅಗಸ್ತ್ಯಾದಿ ಮುನಿಗಳು 'ತಥಾಸ್ತು' ಎಂದು ನುಡಿದು ಅಲ್ಲಿಂದ ತೆರಳಿದರು (೫೭-೬೦). ಶ್ರೀರಾಮನು ಹನುಮಂತನ ಬಾಲ್ಯವೃತ್ತಾಂತವನ್ನೇ ವಿಸ್ಮಯದಿಂದ ಚಿಂತಿಸಿದನು ಸೂರ್ಯನು ಅಸ್ತಂಗತನಾಗಲು, ಆ ಪುರುಷೋತ್ತಮನು ಸಾಮಂತರಾಜರನ್ನೂ ವಾನರರನ್ನೂ ಕಳಿಸಿ, ವಿಧಿವತ್ತಾಗಿ ಸಂಧ್ಯಾವಂದನೆಯನ್ನಾಚರಿಸಿ ಅಂತಃಪುರವನ್ನು ಪ್ರವೇಶಿಸಿದನು (೬೧-೬೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತಾರನೆಯ ಸರ್ಗ



# ಸಪ್ತತ್ರಿಂಶಃ ಸರ್ಗಃ

## ಪೌರೋಪಸ್ಥಾನಮ್

ಅಭಿಷಿಕ್ತೇ ತು ಕಾಕುತ್ಸ್ಥೇ ಧರ್ಮೇಣ ವಿದಿತಾತ್ಮನಿ ।
ವ್ಯತೀತಾ ಯಾ ನಿಶಾ ಪೂರ್ವಾ ಪೌರಾಣಾಂ ಹರ್ಷವರ್ಧನೀ ॥ ೧

ತಸ್ಯಾಂ ರಜನ್ಯಾಂ ವ್ಯುಷ್ಟಾಯಾಂ ಪ್ರಾತರ್ನೃಪತಿಬೋಧಕಾಃ ।
ವಂದಿನಃ ಸಮುಪಾತಿಷ್ಠನ್ ಸೌಮ್ಯಾ ನೃಪತಿವೇಶ್ಮನಿ ॥ ೨

ತೇ ರಕ್ತಕಂಠಿನಃ ಸರ್ವೇ ಕಿನ್ನರಾ ಇವ ಶಿಕ್ಷಿತಾಃ ।
ತುಷ್ಟುವುರ್ನೃಪತಿಂ ವೀರಂ ಯಥಾವತ್ ಸಂಪ್ರಹರ್ಷಿಣಃ ॥ ೩

ವೀರ ಸೌಮ್ಯ ಪ್ರಬುಧ್ಯಸ್ವ ಕೌಸಲ್ಯಾಪ್ರೀತಿವರ್ಧನ ।
ಜಗದ್ಧಿ ಸರ್ವಂ ಸ್ವಪಿತಿ ತ್ವಯಿ ಸುಪ್ತೇ ನರಾಧಿಪ ॥ ೪

## ಸರ್ಗ ೩೭

### ರಾಜಸಭೆ, ಪೌರರ ಉಪಸ್ಥಿತಿ

ಮಹಾಪ್ರಾಜ್ಞನಾದ ಕಾಕುತ್ಸ್ಥನು ಪಟ್ಟಾಭಿಷಿಕ್ತನಾಗಿರಲಾಗಿ, ಪ್ರಜೆಗಳಿಗೆ ಆನಂದದಾಯಕವಾಗಿ ಪರಿಣಮಿಸಿದ ಮೊದಲನೆಯ ರಾತ್ರಿ ಕಳೆಯಿತು. ರಾತ್ರಿ ಕಳೆದು ಬೆಳಗಾಗುತ್ತಿರಲು ರಾಜರನ್ನೆಚ್ಚರಿಸುವ ಸೌಮ್ಯರಾದ ವಂದಿಗಳು ಅರಮನೆಗೆ ಬಂದರು (೧-೨) ಸುಶಿಕ್ಷಿತರಾದ ಆ ವಂದಿಗಳು ಕಿನ್ನರರಂತೆ ಮಧುರಕಂಠದಿಂದ ವೀರನಾದ ಮಹಾರಾಜನನ್ನು ಹರ್ಷಗೊಳಿಸುತ್ತ ಅನ್ವರ್ಥವಾಗಿ ಸ್ತುತಿಸಿದರು (೩). "ಸೌಮ್ಯ–ಕೌಸಲ್ಯಾ ನಂದವರ್ಧನ, ನಿದ್ರೆಯಿಂದೆಚ್ಚರಗೊಳ್ಳು ಹೇ ನರಾಧಿಪ, (ಈ ಬ್ರಾಹ್ಮ ಮುಹೂರ್ತದಲ್ಲಿ) ನೀನು ಮಲಗಿದ್ದರೆ ಜಗತ್ತೆಲ್ಲವೂ ಮಲಗಿರುತ್ತದೆ! * (೪)

* ಈ ಸಮಯದಲ್ಲಿ ನೀನು ಧರ್ಮಾನುಷ್ಠಾನವನ್ನು ಮಾಡದಿದ್ದರೆ, 'ಯಥಾ ರಾಜಾ ತಥಾ ಪ್ರಜಾ' ಎಂಬ ನ್ಯಾಯದಂತೆ ಜನರು ಧರ್ಮಬಾಹಿರರಾಗುತ್ತಾರೆ– ಎಂದು ಅಭಿಪ್ರಾಯ

ವಿಕ್ರಮಸ್ತೇ ಯಥಾ ವಿಷ್ಣೋ ರೂಪಂ ಚೈವಾಶ್ವಿನೋರಿವ ।
ಬುದ್ಧ್ಯಾ ಬೃಹಸ್ಪತೇಸ್ತುಲ್ಯಃ ಪ್ರಜಾಪತಿಸಮೋ ಹ್ಯಸಿ ॥　೫

ಕ್ಷಮಾ ತೇ ಪೃಥಿವೀತುಲ್ಯಾ ತೇಜಸಾ ಭಾಸ್ಕರೋಪಮಃ ।
ವೇಗಸ್ತೇ ವಾಯುನಾ ತುಲ್ಯೋ ಗಾಂಭೀರ್ಯಮುದಧೇರಿವ ॥　೬

ಅಪ್ರಕಂಪ್ಯೋ ಯಥಾ ಸ್ಥಾಣುಶ್ಚಂದ್ರೇ ಸೌಮ್ಯತ್ವಮೀದೃಶಮ್ ।
ನೇದೃಶಾಃ ಪಾರ್ಥಿವಾಃ ಪೂರ್ವಂ ಭವಿತಾರೋ ನರಾಧಿಪ ॥　೭

ಯಥಾ ತ್ವಮಸಿದುರ್ಧರ್ಷೋ ಧರ್ಮನಿತ್ಯಃ ಪ್ರಜಾಹಿತಃ ।
ನ ತ್ವಾಂ ಜಹಾತಿ ಕೀರ್ತಿಶ್ಚ ಲಕ್ಷ್ಮೀಶ್ಚ ಪುರುಷರ್ಷಭ ॥　೮

ಶ್ರೀಶ್ಚ ಧರ್ಮಶ್ಚ ಕಾಕುತ್ಸ್ಥ ತ್ವಯಿ ನಿತ್ಯಂ ಪ್ರತಿಷ್ಠಿತೌ ।
ಏತಾಶ್ಚಾನ್ಯಾಶ್ಚ ಮಧುರಾ ವಂದಿಭಿಃ ಪರಿಕೀರ್ತಿತಾಃ ॥　೯

ಸೂತಾಶ್ಚ ಸಂಸ್ತವೈರ್ದಿವ್ಯೈರ್ಬೋಧಯಂತಿ ಸ್ಮ ರಾಘವಮ್ ।
ಸ್ತುತಿಭಿಃ ಸ್ತೂಯಮಾನಾಭಿಃ ಪ್ರತ್ಯಬುಧ್ಯತ ರಾಘವಃ ॥　೧೦

---

ವಿಷ್ಣುವಿಗಿರುವಂತೆ ನಿನ್ನ ವಿಕ್ರಮ, ಅಶ್ವಿನೀದೇವತೆಗಳಿಗಿರುವಂತೆ ನಿನ್ನ ರೂಪ ಬುದ್ಧಿಯಲ್ಲಿ ಬೃಹಸ್ಪತಿಗೂ (ಪ್ರಜಾಪಾಲನದಲ್ಲಿ) ಬ್ರಹ್ಮನಿಗೂ ಸಮಾನನಾಗಿದ್ದೀಯೆ (೫) ಮಹಾರಾಜ, ಭೂದೇವಿಯಂತೆ ಕ್ಷಮಾಶೀಲನೂ ಭಾಸ್ಕರನಂತೆ ತೇಜಸ್ವಿಯೂ ಆಗಿದ್ದೀಯೆ ವೇಗದಲ್ಲಿ ವಾಯುಸದೃಶನೂ ಗಾಂಭೀರ್ಯದಲ್ಲಿ ಸಮುದ್ರಸದೃಶನೂ ಆದವನು ನೀನು (೬) ಪರಮೇಶ್ವರನಂತೆ ಅಚಲಪರಾಕ್ರಮನು ನೀನು ನಿನಗಿರುವ ಸೌಮ್ಯತೆ ಚಂದ್ರನಲ್ಲಿದೆ! ಮಹಾರಾಜ, ನಿನ್ನಂತಹ ಪೃಥಿವೀಪಾಲರು ಹಿಂದಿರಲಿಲ್ಲ, ಮುಂದಿರುವುದಿಲ್ಲ! (೭) ನೀನು ದುರ್ಧರ್ಷನೂ ಧರ್ಮನಿಷ್ಠನೂ ಪ್ರಜಾಹಿತತತ್ಪರನೂ ಆಗಿರುವುದರಿಂದ, ಹೇ ಪುರುಷೋತ್ತಮ, ಕೀರ್ತಿಯೂ ಲಕ್ಷ್ಮಿಯೂ ನಿನ್ನನ್ನೆಂದಿಗೂ ತ್ಯಜಿಸುವುದಿಲ್ಲ (೮) ಕಾಕುತ್ಸ್ಥ, ಐಶ್ವರ್ಯವೂ ಧರ್ಮವೂ ನಿನ್ನಲ್ಲಿ ಸ್ಥಿರವಾಗಿ ನೆಲೆಸಿವೆ" ಈ ಪ್ರಕಾರವಾಗಿ ವಂದಿಗಳು ವಿವಿಧ ಸ್ತುತಿಗಳನ್ನು ಮಧುರವಾಗಿ ಹೇಳಿದರು (೯) ಹಾಗೆಯೇ ಹೊಗಳುಭಟರೂ ದಿವ್ಯಸ್ತುತಿಗಳಿಂದ ರಾಘವನನ್ನು ಹೊಗಳಿದರು ಈ ಸ್ತುತಿಗಳ ಘೋಷ

ಸ ತದ್ವಿಹಾಯ ಶಯನಂ ಪಾಂಡರಾಚ್ಛಾದನಾಸ್ತೃತಮ್ ।
ಉತ್ತಸ್ಥೌ ನಾಗಶಯನಾದ್ಧರಿರ್ನಾರಾಯಣೋ ಯಥಾ ॥ ೧೧

ಸಮುತ್ಥಿತಂ ಮಹಾತ್ಮಾನಂ ಪ್ರಹ್ವಾಃ ಪ್ರಾಂಜಲಯೋ ನರಾಃ ।
ಸಲಿಲಂ ಭಾಜನೈಃ ಶುಭ್ರೈರುಪತಸ್ಥುಃ ಸಹಸ್ರಶಃ ॥ ೧೨

ಕೃತೋದಕಃ ಶುಚಿರ್ಭೂತ್ವಾ ಕಾಲೇ ಹುತಹುತಾಶನಃ ।
ದೇವಾಗಾರಂ ಜಗಾಮಾಶು ಪುಣ್ಯಮಿಕ್ಷ್ವಾಕುಸೇವಿತಮ್ ॥ ೧೩

ತತ್ರ ದೇವಾನ್ ಪಿತೄನ್ ವಿಪ್ರಾನರ್ಚಯಿತ್ವಾ ಯಥಾವಿಧಿ ।
ಬಾಹ್ಯಕಕ್ಷ್ಯಾಂತರಂ ರಾಮೋ ನಿರ್ಜಗಾಮ ಜನೈರ್ವೃತಃ ॥ ೧೪

ಉಪತಸ್ಥುರ್ಮಹಾತ್ಮಾನೋ ಮಂತ್ರಿಣಃ ಸಪುರೋಹಿತಾಃ ।
ವಸಿಷ್ಠಪ್ರಮುಖಾಃ ಸರ್ವೇ ದೀಪ್ಯಮಾನಾ ಇವಾಗ್ನಯಃ ॥ ೧೫

ಕ್ಷತ್ರಿಯಾಶ್ಚ ಮಹಾತ್ಮಾನೋ ನಾನಾಜನಪದೇಶ್ವರಾಃ ।
ರಾಮಸ್ಯೋಪಾವಿಶನ್ ಪಾರ್ಶ್ವೇ ಶಕ್ರಸ್ಯೇವ ಯಥಾಮರಾಃ ॥ ೧೬

---

ದಿಂದ ಶ್ರೀರಾಮನಿಗೆ ಎಚ್ಚರವಾಯಿತು (೧೦) ಆತನು ಬಿಳಿಯ ಹಾಸು ಹಾಸಿದ ಹಾಸಿಗೆಯಿಂದ, ಶ್ರೀಮನ್ನಾರಾಯಣನು ಸರ್ಪಶಯನದಿಂದೇಳುವಂತೆ ಎದ್ದನು ಎದ್ದು ಬಂದ ಆ ಮಹಾತ್ಮನ ಬಳಿಗೆ ವಿನೀತರಾಗಿ ಕೈಮುಗಿದು ನಿಂತಿದ್ದ ಸೇವಕರು ಶುಭ್ರಪಾತ್ರೆಗಳಲ್ಲಿ ನೀರನ್ನು ತೆಗೆದುಕೊಂಡು ಬಂದರು (೧೧-೧೨) ಶ್ರೀರಾಮನು ನೀರಿಂದ ಮುಖಮಾರ್ಜನ ಸ್ನಾನಾದಿಗಳನ್ನು ಮಾಡಿ ಶುಚಿಯಾಗಿ ಅಗ್ನಿಕಾರ್ಯವನ್ನು ನೆರವೇರಿಸಿ, ಇಕ್ಷ್ವಾಕುವಂಶಜರಿಂದ ಸೇವಿತವೂ ಪವಿತ್ರವೂ ಆದ ದೇವಾಲಯಕ್ಕೆ ನಡೆದನು (೧೩). ಅಲ್ಲಿ ವಿಧಿವತ್ತಾಗಿ ದೇವತೆಗಳನ್ನೂ ಪಿತೃಗಳನ್ನೂ ಅರ್ಚಿಸಿ ಬ್ರಾಹ್ಮಣರನ್ನು ಸಂಮಾನಿಸಿ ಹೊರಗಡೆಯ ಸಭಾಂಗಣಕ್ಕೆ ಪರಿವಾರಸಮೇತನಾಗಿ ಆಗಮಿಸಿದನು (೧೪). ಮಹಾತ್ಮರಾದ ಮಂತ್ರಿಗಳೂ ಅಗ್ನಿಯಂತೆ ಬೆಳಗುತ್ತಿದ್ದ ವಸಿಷ್ಠಾದಿ ಪುರೋಹಿತರೂ ನಾನಾಜನಪದಾಧ್ಯಕ್ಷರಾದ ಕ್ಷತ್ರಿಯರೂ ಬಂದು ಶ್ರೀರಾಮನ ಪಾರ್ಶ್ವದಲ್ಲಿ, ದೇವೇಂದ್ರನ ಬಳಿ ದೇವತೆಗಳು ಕುಳಿತಂತೆ

ಭರತೋ ಲಕ್ಷ್ಮಣಶ್ಚಾತ್ರ ಶತ್ರುಘ್ನಶ್ಚ ಮಹಾಯಶಾಃ ।
ಉಪಾಸಾಂಚಕ್ರಿರೇ ಹೃಷ್ಟಾ ವೇದಾಸ್ತ್ರಯ ಇವಾಧ್ವರಮ್ ॥ ೧೭

ಯಾತಾಃ ಪ್ರಾಂಜಲಯೋ ಭೂತ್ವಾ ಕಿಂಕರಾ ಮುದಿತಾನನಾಃ ।
ಮುದಿತಾ ನಾಮ ಪಾರ್ಶ್ವಸ್ಥಾ ಬಹವಃ ಸಮುಪಾವಿಶನ್ ॥ ೧೮

ವಾನರಾಶ್ಚ ಮಹಾವೀರ್ಯಾ ವಿಂಶತಿಃ ಕಾಮರೂಪಿಣಃ ।
ಸುಗ್ರೀವಪ್ರಮುಖಾ ರಾಮಮುಪಾಸಂತೇ ಮಹೌಜಸಃ ॥ ೧೯

ವಿಭೀಷಣಶ್ಚ ರಕ್ಷೋಭಿಶ್ಚತುರ್ಭಿಃ ಪರಿವಾರಿತಃ ।
ಉಪಾಸತೇ ಮಹಾತ್ಮಾನಂ ಧನೇಶಮಿವ ಗುಹ್ಯಕಾಃ ॥ ೨೦

ತಥಾ ನಿಗಮವೃದ್ಧಾಶ್ಚ ಕುಲೀನಾ ಯೇ ಚ ಮಾನವಾಃ ।
ಶಿರಸಾ ವಂದ್ಯ ರಾಜಾನಮುಪಾಸಂತೇ ವಿಚಕ್ಷಣಾಃ ॥ ೨೧

---

ಕುಳಿತರು (೧೫-೧೬) ಮೂರು ವೇದಗಳು ಯಜ್ಞವನ್ನು ಸೇವಿಸುವಂತೆ, ಕೀರ್ತಿಶಾಲಿಗಳಾದ ಭರತ ಲಕ್ಷ್ಮಣ ಶತ್ರುಘ್ನರು ಹರ್ಷದಿಂದ ಶ್ರೀರಾಮನ ಸೇವೆಯಲ್ಲಿ ನಿರತರಾದರು (೧೭) ಮುಖದಲ್ಲಿ ಹರ್ಷವು ಹೊಮ್ಮುತ್ತಿರಲು, ಮುದಿತರೆಂಬ ಕಿಂಕರರು ಕೈಮುಗಿದುಕೊಂಡು ಬಂದು ಶ್ರೀರಾಮನ ಪಾರ್ಶ್ವದಲ್ಲಿ ಕುಳಿತರು ಕಾಮರೂಪಿಗಳೂ ಮಹಾವೀರರೂ ತೇಜಸ್ವಿಗಳೂ ಆದ ಸುಗ್ರೀವನೇ ಮೊದಲಾದ ಇಪ್ಪತ್ತು ಮಂದಿ* ವಾನರ ಪ್ರಮುಖರು ಶ್ರೀರಾಮನ ಸೇವೆಗಾಗಿ ಬಂದು ಉಪವಿಷ್ಟರಾದರು (೧೮-೧೯). ವಿಭೀಷಣನೂ ಅವನ ನಾಲ್ವರು ಸಚಿವರಾದ ರಾಕ್ಷಸರೂ, ಕುಬೇರನನ್ನು ಯಕ್ಷರು ಸೇವಿಸುವಂತೆ ಆ ಮಹಾತ್ಮನ ಸೇವೆಗೆ ಬಂದರು. ಹಾಗೆಯೇ ವೇದವಿದರೂ ಉತ್ತಮ ಕುಲಸಂಭೂತರೂ ವಿದ್ವಾಂಸರೂ ಆದ ಜನರು ಮಹಾರಾಜನಿಗೆ ತಲೆಬಾಗಿ ವಂದಿಸಿ ಸುತ್ತಲೂ ಕುಳಿತರು (೨೦-೨೧).

---

* ಸುಗ್ರೀವ, ಅಂಗದ, ಹನುಮಂತ, ಜಾಂಬವಂತ, ನಲ, ಸುಷೇಣ, ತಾರ, ನೀಲ, ಮೈಂದ, ದ್ವಿವಿದ, ಗಜ, ಕುಮುದ, ಶರಭ, ಶತಬಲಿ, ಗಂಧಮಾದನ, ಗವಯ, ಗವಾಕ್ಷ, ಧೂಮ್ರ, ರಂಭ, ಜ್ಯೋತಿರ್ಮುಖ- ಇವರು ವಾನರಪ್ರಮುಖರು,

ತಥಾ ಪರಿವೃತೋ ರಾಜಾ ಶ್ರೀಮದ್ಭಿರೃಷಿಭಿರ್ವೃತಃ ।
ರಾಜಭಿಶ್ಚ ಮಹಾವೀರ್ಯೈರ್ವಾನರೈಶ್ಚ ಸರಾಕ್ಷಸೈಃ ॥ ೨೨

ಯಥಾ ದೇವೇಶ್ವರೋ ನಿತ್ಯಮೃಷಿಭಿಃ ಸಮುಪಾಸ್ಯತೇ ।
ಅಧಿಕಸ್ತೇನ ರೂಪೇಣ ಸಹಸ್ರಾಕ್ಷಾದ್ವಿರೋಚತೇ ॥ ೨೩

ತೇಷಾಂ ಸಮುಪವಿಷ್ಟಾನಾಂ ತಾಸ್ತಾಃ ಸುಮಧುರಾಃ ಕಥಾಃ ।
ಕಥ್ಯಂತೇ ಧರ್ಮಸಂಯುಕ್ತಾಃ ಪುರಾಣಜ್ಞೈರ್ಮಹಾತ್ಮಭಿಃ ॥ ೨೪

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತತ್ರಿಂಶಃ ಸರ್ಗಃ



ಈ ಪ್ರಕಾರವಾಗಿ ರಾಜಾಧಿರಾಜನಾದ ಶ್ರೀರಾಮಚಂದ್ರನು ಋಷಿಗಳಿಂದಲೂ ಸಾಮಂತರಾಜರಿಂದಲೂ ವಾನರ ರಾಕ್ಷಸರಿಂದಲೂ ಪರಿವೃತನಾಗಿ, ದೇವೇಂದ್ರನಂತೆ ಎಲ್ಲರ ಸೇವೆಯನ್ನೂ ಕೈಗೊಳ್ಳುತ್ತ ಸಿಂಹಾಸನದಲ್ಲಿ ಆಸೀನನಾಗಿದ್ದನು ಸಹಸ್ರಾಕ್ಷನಾದ ಇಂದ್ರನಿಗಿಂತಲೂ ಆತನ ದೀಪ್ತಿ ಅಧಿಕವಾಗಿತ್ತು (೨೨-೨೩) ಹೀಗೆ ಎಲ್ಲರೂ ಕುಳಿತಿರಲಾಗಿ, ಪುರಾಣಕಥೆಗಳನ್ನು ಬಲ್ಲ ಮಹಾತ್ಮರು ಮಧುರವಾದ ಧರ್ಮಕಥೆಗಳನ್ನು ಹೇಳುತ್ತ ವಿರಾಜಮಾನರಾಗಿದ್ದರು (೨೪)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತೇಳನೆಯ ಸರ್ಗ



## ಅಷ್ಟಾತ್ರಿಂಶಃ ಸರ್ಗಃ

### ಜನಕಾದಿಪ್ರತಿಪ್ರಯಾಣಮ್

ಏವಮಾಸ್ತೇ ಮಹಾಬಾಹುರಹನ್ಯಹನಿ ರಾಘವಃ ।
ಪ್ರಶಾಸತ್ ಸರ್ವಕಾರ್ಯಾಣಿ ಪೌರಜಾನಪದೇಷು ಚ ॥ ೧

ತತಃ ಕತಿಪಯಾಹಃಸು ವೈದೇಹಂ ಮಿಥಿಲಾಧಿಪಮ್ ।
ರಾಘವಃ ಪ್ರಾಂಜಲಿರ್ಭೂತ್ವಾ ವಾಕ್ಯಮೇತದುವಾಚ ಹ ॥ ೨

ಭವಾನ್ ಹಿ ಗತಿರವ್ಯಗ್ರಾ ಭವತಾ ಪಾಲಿತಾ ವಯಮ್ ।
ಭವತಸ್ತೇಜಸೋಗ್ರೇಣ ರಾವಣೋ ನಿಹತೋ ಮಯಾ ॥ ೩

ಇಕ್ಷ್ವಾಕೂಣಾಂ ಚ ಸರ್ವೇಷಾಂ ಮೈಥಿಲಾನಾಂ ಚ ಸರ್ವಶಃ ।
ಅತುಲಾಃ ಪ್ರೀತಯೋ ರಾಜನ್ ಸಂಬಂಧಕಪುರೋಗಮಾಃ ॥ ೪

ತದ್ಭವಾನ್ ಸ್ವಪುರೀಂ ಯಾತು ರತ್ನಾನ್ಯಾದಾಯ ಪಾರ್ಥಿವ ।
ಭರತಶ್ಚ ಸಹಾಯಾರ್ಥಂ ಪೃಷ್ಠತಸ್ತೇಽನುಯಾಸ್ಯತಿ ॥ ೫

## ಸರ್ಗ ೩೮

### ಜನಕಾದಿಗಳ ಪ್ರಯಾಣ

ಈ ಪ್ರಕಾರವಾಗಿ ಮಹಾಬಾಹುವಾದ ರಘುಕುಲತಿಲಕನು ಪ್ರತಿ ದಿನವೂ ತನ್ನ ದಿನಚರ್ಯೆಯನ್ನು ನಡೆಸುತ್ತಿದ್ದನು ನಗರದ ಮತ್ತು ರಾಷ್ಟ್ರದ ಸಕಲ ಕಾರ್ಯಗಳನ್ನೂ ವಿಚಾರಿಸಿ ನಿರ್ವಹಿಸುತ್ತಿದ್ದನು (೧) ಕೆಲವು ದಿನಗಳು ಕಳೆಯಲಾಗಿ ಶ್ರೀರಾಮನು ಮಿಥಿಲೇಶ್ವರನಾದ ಜನಕರಾಜನಿಗೆ ವಂದಿಸಿ "ಮಹಾರಾಜ, ನಮ್ಮೆಲ್ಲರಿಗೂ ನೀನು ಅಚಲವಾದ ಆಶ್ರಯನಾಗಿರುವೆ ನಿನ್ನ ಉಗ್ರವಾದ ತೇಜೋಬಲದಿಂದಲೇ ರಾವಣನನ್ನು ಕೊಲ್ಲಲು ನನಗೆ ಸಾಧ್ಯವಾಯಿತು (೨-೩) ಇಕ್ಷ್ವಾಕು ವಂಶಜರಿಗೂ ಮೈಥಿಲರಿಗೂ ನಿನ್ನ ಬಾಂಧವ್ಯದಿಂದ ಅತುಲವಾದ ಹರ್ಷವು ವರ್ಧಿಸುತ್ತಿದೆ. ಕಾಣಿಕೆಯಾಗಿ ಅರ್ಪಿಸುವ ಈ ಧನಕನಕಗಳನ್ನು ಸ್ವೀಕರಿಸಿ, ನಿನ್ನ ನಗರಕ್ಕೆ ಹೋಗಬಹುದು ಸಹಾಯಕ್ಕಾಗಿ ಭರತನು ನಿನ್ನೊಡನೆ ಬರುವನು"

*

ಸ ತಥೇತಿ ನೃಪಃ ಕೃತ್ವಾ ರಾಘವಂ ವಾಕ್ಯಮಬ್ರವೀತ್ ।
ಪ್ರೀತೋಽಸ್ಮಿ ಭವತೋ ರಾಜನ್ ದರ್ಶನೇನ ನಯೇನ ಚ ॥ ೬

ಯಾನ್ಯೇತಾನಿ ತು ರತ್ನಾನಿ ಮದರ್ಥಂ ಸಂಚಿತಾನಿ ವೈ ।
ದುಹಿತ್ರೇ ತಾನಿ ವೈ ರಾಜನ್ ಸರ್ವಾಣ್ಯೇವ ದದಾಮಿ ಚ ॥ ೭

ಏವಮುಕ್ತ್ವಾ ತು ಕಾಕುತ್ಸ್ಥಂ ಜನಕೋ ಹೃಷ್ಟಮಾನಸಃ ।
ಪ್ರಯಯೌ ಮಿಥಿಲಾಂ ಶ್ರೀಮಾಂಸ್ತಮನುಜ್ಞಾಯ ರಾಘವಮ್ ॥

ತತಃ ಪ್ರಯಾತೇ ಜನಕೇ ಕೇಕಯಂ ಮಾತುಲಂ ಪ್ರಭುಃ ।
ರಾಘವಃ ಪ್ರಾಂಜಲಿರ್ಭೂತ್ವಾ ವಾಕ್ಯಮೇತದುವಾಚ ಹ ॥ ೯

ಇದಂ ರಾಜ್ಯಮಹಂ ಚೈವ ಭರತಶ್ಚ ಸಲಕ್ಷ್ಮಣಃ ।
ಆಯತ್ತಾಸ್ತ್ವಂ ಹಿ ನೋ ರಾಜನ್ ಗತಿಶ್ಚ ಪುರುಷರ್ಷಭ ॥ ೧೦

ರಾಜಾಪಿ ವೃದ್ಧಃ ಸಂತಾಪಂ ತ್ವದರ್ಥಮುಪಯಾಸ್ಯತಿ ।
ತಸ್ಮಾದ್ಗಮನಮದ್ಯೈವ ರೋಚತೇ ತವ ಪಾರ್ಥಿವ ॥ ೧೧

ಲಕ್ಷ್ಮಣೇನಾನುಯಾತ್ರೇಣ ಪೃಷ್ಠತೋಽನುಗಮಿಷ್ಯತೇ ।
ಧನಮಾದಾಯ ವಿಪುಲಂ ರತ್ನಾನಿ ವಿವಿಧಾನಿ ಚ ॥ ೧೨

---

ಎಂದು ಹೇಳಿದನು (೪-೫) ಆಗಲೆಂದು ನುಡಿದು ಜನಕರಾಜನು "ರಾಜ– ರಾಮಚಂದ್ರ, ನಿನ್ನ ದರ್ಶನದಿಂದಲೂ ನಿನ್ನ ವಿನಯಗುಣದಿಂದಲೂ ಸಂಪ್ರೀತನಾಗಿದ್ದೇನೆ ನೀನು ಕೊಟ್ಟಿರುವ ಈ ಧನಕನಕಗಳೆಲ್ಲವನ್ನೂ ನನ್ನ ಮಗಳಿಗೆ ಕೊಡುತ್ತೇನೆ" ಎಂದನು (೬-೭) ಅನಂತರ ಸಂತುಷ್ಟನಾದ ಜನಕರಾಜನು ಶ್ರೀರಾಮನನ್ನು ಬೀಳ್ಕೊಂಡು ಮಿಥಿಲೆಗೆ ಪ್ರಯಾಣಮಾಡಿದನು ಆಮೇಲೆ ರಾಘವನು ಸೋದರಮಾವನಾದ ಯುಧಾಜಿತುವಿಗೆ ನಮಸ್ಕರಿಸಿ "ಯುವರಾಜ, ನಾನೂ ಭರತಲಕ್ಷ್ಮಣರೂ ನಿನ್ನವರು ಈ ಕೋಸಲರಾಜ್ಯವು ನಿನ್ನ ಅಧೀನವಾಗಿದೆ ನಮಗೆ ಆಪದ್ಬಂಧುವಾಗಿದ್ದೀಯೆ (೮-೧೦) ವೃದ್ಧನಾದ ಕೇಕಯರಾಜನು ನಿನ್ನ ವಿರಹದಿಂದ ಖಿನ್ನನಾಗುವನು. ಆದ್ದರಿಂದ ಇಂದು ನೀನು ಪ್ರಯಾಣಮಾಡುವುದು ಸರಿಯೆನಿಸುತ್ತದೆ ಲಕ್ಷ್ಮಣನು ವಿಪುಲವಾದ ಧನರತ್ನರಾಶಿಯನ್ನು ತೆಗೆದುಕೊಂಡು

ಯುಧಾಜಿತ್ತು ತಥೇತ್ಯಾಹ ಗಮನಂ ಪ್ರತಿ ರಾಘವಮ್ ।
ರತ್ನಾನಿ ಚ ಧನಂ ಚೈವ ತ್ವಯ್ಯೇವಾಕ್ಷಯ್ಯಮಸ್ತ್ವಿತಿ ॥ ೧೩
ಪ್ರದಕ್ಷಿಣಂ ಸ ರಾಜಾನಂ ಕೃತ್ವಾ ಕೇಕಯವರ್ಧನಃ ।
ರಾಮೇಣ ಹಿ ಕೃತಃ ಪೂರ್ವಮಭಿವಾದ್ಯ ಪ್ರದಕ್ಷಿಣಮ್ ॥ ೧೪
ಲಕ್ಷ್ಮಣೇನ ಸಹಾಯೇನ ಪ್ರಯಾತಃ ಕೇಕಯೇಶ್ವರಃ ।
ಹತೇಽಸುರೇ ಯಥಾ ವೃತ್ರೇ ವಿಷ್ಣುನಾ ಸಹ ವಾಸವಃ ॥ ೧೫
ತಂ ವಿಸೃಜ್ಯ ತತೋ ರಾಮೋ ವಯಸ್ಯಮಕುತೋಭಯಮ್ ।
ಪ್ರತರ್ದನಂ ಕಾಶಿಪತಿಂ ಪರಿಷ್ವಜ್ಯೇದಮಬ್ರವೀತ್ ॥ ೧೬
ದರ್ಶಿತಾ ಭವತಾ ಪ್ರೀತಿರ್ದರ್ಶಿತಂ ಸೌಹೃದಂ ಪರಮ್ ।
ಉದ್ಯೋಗಶ್ಚ ಕೃತೋ ರಾಜನ್ ಭರತೇನ ತ್ವಯಾ ಸಹ ॥ ೧೭
ತದ್ಭವಾನದ್ಯ ಕಾಶೇಯ ಪುರೀಂ ವಾರಾಣಸೀಂ ವ್ರಜ ।
ರಮಣೀಯಾಂ ತ್ವಯಾ ಗುಪ್ತಾಂ ಸುಪ್ರಕಾಶಾಂ ಸುತೋರಣಾಮ್॥

ನಿನ್ನೊಡನೆ ಬರುವನು" ಎಂದನು (೧೧-೧೨) ಯುಧಾಜಿತನು ಹಾಗೆಯೇ ಆಗಲೆಂದು ತಿಳಿಸಿ "ರಾಘವ, ಈ ಧನರತ್ನರಾಶಿಗಳು ನಿನ್ನಲ್ಲಿಯೇ ಅಕ್ಷಯ ವಾಗಿರಲಿ" ಎಂದನು ಅನಂತರ ಶ್ರೀರಾಮನು ಸೋದರಮಾವನಿಗೆ ಬಲವಂದು ಅಭಿವಾದನೆಮಾಡಲು ಆ ಕೇಕಯ ರಾಜಪುತ್ರನು ರಾಜಾಧಿರಾಜ ನಾದ ಶ್ರೀರಾಮನಿಗೆ ಪ್ರದಕ್ಷಿಣೆಮಾಡಿ ವಂದಿಸಿದನು (೧೩-೧೪) ಅನಂತರ, ವೃತ್ರಾಸುರನನ್ನು ಕೊಂದಮೇಲೆ ದೇವೇಂದ್ರನು ವಿಷ್ಣುವಿನೊಡನೆ ನಿರ್ಗಮಿಸಿದಂತೆ, ಲಕ್ಷ್ಮಣನೊಡನೆ ಕೇಕಯರಾಜ್ಯಕ್ಕೆ ಪ್ರಯಾಣಮಾಡಿದನು (೧೫). ಯುಧಾಜಿತನನ್ನು ಕಳಿಸಿಕೊಟ್ಟಮೇಲೆ ಶ್ರೀರಾಮನು ತನ್ನ ಮಿತ್ರನೂ ನಿರ್ಭೀತನೂ ಕಾಶೀಪತಿಯೂ ಆದ ಪ್ರತರ್ದನನನ್ನು ಆಲಿಂಗಿಸಿಕೊಂಡು "ವಯಸ್ಯ, ನನ್ನಲ್ಲಿ ಪ್ರೀತಿಯನ್ನು ತೋರಿಸಿರುವೆ ಪ್ರಶಂಸನೀಯವಾದ ಗೆಳೆತನವನ್ನು ವ್ಯಕ್ತಪಡಿಸಿರುವೆ ಭರತನೊಡನೆ ಸೇರಿ ನನ್ನ ನೆರವಿಗಾಗಿ ಯುದ್ಧಸನ್ನಾಹವನ್ನು ಮಾಡಿದ್ದೀಯೆ* (೧೬-೧೭) ಹೇ ಕಾಶೀಶ್ವರ, ರಮಣೀಯವೂ ಉಜ್ಜ್ವಲವೂ ಸುಂದರವಾದ ದಿಡ್ಡಿಯ ಬಾಗಿಲುಗಳಿಂದ

* ರಾವಣವಧೆಗಾಗಿ ಭರತನೂ ಪ್ರತರ್ದನನೂ ಸೇನೆಯೊಡನೆ ಹೋಗಲು ಸಂನಾಹ ಮಾಡಿದ್ದರೆಂದು ಈ ಮಾತಿನಿಂದ ಸೂಚಿತವಾಗುತ್ತದೆ

ಏತಾವದುಕ್ತ್ವಾ ಚೋತ್ಥಾಯ ಕಾಕುತ್ಸ್ಥಃ ಪರಮಾಸನಾತ್ ।
ಪರ್ಯಷ್ವಜತ ಧರ್ಮಾತ್ಮಾ ನಿರಂತರಮುರೋಗತಮ್ ॥ ೧೯

ವಿಸರ್ಜಯಾಮಾಸ ತಥಾ ಕೌಸಲ್ಯಾನಂದವರ್ಧನಃ ।
ರಾಘವೇಣಾಭ್ಯನುಜ್ಞಾತಃ ಕಾಶೀಶೋಽಪ್ಯಕುತೋಭಯಃ ॥ ೨೦

ವಾರಾಣಸೀಂ ಯಯೌ ತೂರ್ಣಂ ರಾಘವೇಣ ವಿಸರ್ಜಿತಃ ।
ವಿಸೃಜ್ಯ ತಂ ಕಾಶಿಪತಿಂ ತ್ರಿಶತಂ ಪೃಥಿವೀಪತೀನ್ ॥ ೨೧

ಪ್ರಹಸನ್ ರಾಘವೋ ವಾಕ್ಯಮುವಾಚ ಮಧುರಾಕ್ಷರಮ್ ।
ಭವತಾಂ ಪ್ರೀತಿರವ್ಯಗ್ರಾ ತೇಜಸಾ ಪರಿರಕ್ಷಿತಾ ॥ ೨೨

ಧರ್ಮಶ್ಚ ನಿಯತೋ ನಿತ್ಯಂ ಸತ್ಯಂ ಚ ಭವತಾಂ ಸದಾ ।
ಯುಷ್ಮಾಕಂ ಚಾನುಭಾವೇನ ತೇಜಸಾ ಚ ಮಹಾತ್ಮನಾಮ್ ॥ ೨೩

ಹತೋ ದುರಾತ್ಮಾ ದುರ್ಬುದ್ಧೀ ರಾವಣೋ ರಾಕ್ಷಸಾಧಮಃ ।
ಹೇತುಮಾತ್ರಮಹಂ ತತ್ರ ಭವತಾಂ ತೇಜಸಾ ಹತಃ ॥ ೨೪

---

ಯುಕ್ತವೂ ಆಗಿ ನಿನ್ನ ರಕ್ಷಣೆಯಲ್ಲಿರುವ ಕಾಶೀನಗರಕ್ಕೆ ಪ್ರಯಾಣ ಮಾಡು" ಎಂದು ಹೇಳಿದನು (೧೮) ಹೀಗೆ ಹೇಳಿ ಧರ್ಮಾತ್ಮನಾದ ಕಾಕುತ್ಸ್ಥನು ಸಿಂಹಾಸನದಿಂದ ಎದ್ದು ಬಂದು ಪ್ರತರ್ದನನನ್ನು ಎದೆಯಲ್ಲಿ ಅಪ್ಪಿಕೊಂಡನು ಧೀರನಾದ ಕಾಶೀಶ್ವರನು ರಾಘವನ ಅನುಮತಿಯನ್ನು ಪಡೆದು ಕಾಶೀನಗರಕ್ಕೆ ಪ್ರಯಾಣಮಾಡಿದನು (೧೯-೨೦) ಅನಂತರ ಕೌಸಲ್ಯಾನಂದವರ್ಧನನು ಉಳಿದ ಮೂವತ್ತುಮಂದಿ ಭೂಪಾಲರನ್ನು ನೋಡಿ ಮುಗುಳ್ನಗೆ ಬೀರುತ್ತ ಮೃದುವಾಗಿ "ಭೂಪಾಲರೆ, ನಿಮ್ಮ ಪ್ರತಾಪದಿಂದ ನನ್ನಲ್ಲಿ ಪ್ರೀತಿಯನ್ನು ರಕ್ಷಿಸಿಕೊಂಡು ಬಂದಿದ್ದೀರಿ (೨೧-೨೨) ನಿಮ್ಮಲ್ಲಿ ಧರ್ಮವು ನೆಲೆಸಿದೆ ಸತ್ಯವು ಸ್ಥಿರವಾಗಿದೆ ಮಹಾತ್ಮರಾದ ನಿಮ್ಮ ಪ್ರಭಾವದಿಂದಲೂ ತೇಜಸ್ಸಿನಿಂದಲೂ ದುರಾತ್ಮನೂ ರಾಕ್ಷಸಾಧಮನೂ ಆದ ರಾವಣನನ್ನು ಕೊಲ್ಲಲು ನನಗೆ ಸಾಧ್ಯವಾಯಿತು ಅವನ ಸಂಹಾರಕ್ಕೆ ನಾನು ನಿಮಿತ್ತಮಾತ್ರ ನಿಮ್ಮ ತೇಜೋಬಲದಿಂದಲೇ ಅವನು ಹತನಾದನು

ರಾವಣಃ ಸಗಣೋ ಯುದ್ಧೇ ಸಪುತ್ರಾಮಾತ್ಯಬಾಂಧವಃ ।
ಭವಂತಶ್ಚ ಸಮಾನೀತಾ ಭರತೇನ ಮಹಾತ್ಮನಾ ॥ ೨೫
ಶ್ರುತ್ವಾ ಜನಕರಾಜಸ್ಯ ಕಾನನಾತ್ತನಯಾಂ ಹೃತಾಮ್ ।
ಉದ್ಯುಕ್ತಾನಾಂ ಚ ಸರ್ವೇಷಾಂ ಪಾರ್ಥಿವಾನಾಂ ಮಹಾತ್ಮನಾಮ್
ಕಾಲೋ ವ್ಯತೀತಃ ಸುಮಹಾನ್ ಗಮನಂ ರೋಚಯಾಮ್ಯತಃ ।
ಪ್ರತ್ಯೂಚುಸ್ತಂ ಚ ರಾಜಾನೋ ಹರ್ಷೇಣ ಮಹತಾ ವೃತಾಃ ॥ ೨೭
ದಿಷ್ಟ್ಯಾ ತ್ವಂ ವಿಜಯೀ ರಾಮ ಸ್ವರಾಜ್ಯೇಽಪಿ ಪ್ರತಿಷ್ಠಿತಃ ।
ದಿಷ್ಟ್ಯಾ ಪ್ರತ್ಯಾಹೃತಾ ಸೀತಾ ದಿಷ್ಟ್ಯಾ ಶತ್ರುಃ ಪರಾಜಿತಃ ॥ ೨೮
ಏಷ ನಃ ಪರಮಃ ಕಾಮ ಏಷಾ ನಃ ಪ್ರೀತಿರುತ್ತಮಾ ।
ಯತ್ತ್ವಾಂ ವಿಜಯಿನಂ ರಾಮ ಪಶ್ಯಾಮೋ ಹತಶಾತ್ರವಮ್ ॥ ೨೯
ಏತತ್ತ್ವಯ್ಯುಪಪನ್ನಂ ಚ ಯದಸ್ಮಾಂಸ್ತ್ವಂ ಪ್ರಶಂಸಸೇ ।
ಪ್ರಶಂಸಾರ್ಹ ನ ಜಾನೀಮಃ ಪ್ರಶಂಸಾಂ ವಕ್ತುಮೀದೃಶೀಮ್ ॥

---

(೨೩-೨೫) ಯುದ್ಧದಲ್ಲಿ ಮಕ್ಕಳು ಮಂತ್ರಿಗಳು ಬಂಧು ಪರಿವಾರಗಳೊಡನೆ ರಾವಣನು ಹತನಾದನು ಜನಕಮಹಾರಾಜನ ಮಗಳು ವನದಿಂದ ಅಪಹರಿಸಲ್ಪಟ್ಟಳೆಂದು ಕೇಳಿ, ಮಹಾತ್ಮನಾದ ಭರತನು ನಿಮ್ಮೆಲ್ಲರನ್ನೂ ಕರೆಸಿದನು. ವೀರರಾದ ನೀವೆಲ್ಲರೂ ಸಮರೋದ್ಯೋಗದಲ್ಲಿ ತೊಡಗಿದ್ದಿರಿ (೨೫-೨೬) ನೀವು ಬಂದು ಬಹಳ ದಿನಗಳಾದವು ಆದ್ದರಿಂದ ನೀವು ಹಿಂದಿರುಗುವುದು ಲೇಸೆಂದು ತಿಳಿಯುತ್ತೇನೆ" ಎಂದು ನುಡಿದನು ಸಂಪ್ರೀತ ರಾದ ಆ ಭೂಪಾಲರು "ಶ್ರೀರಾಮ, ನಮ್ಮ ಭಾಗ್ಯದಿಂದ ನೀನು ವಿಜಯ ವನ್ನು ಗಳಿಸಿದೆ ಸ್ವರಾಜ್ಯದಲ್ಲಿ ಪಟ್ಟಾಭಿಷಿಕ್ತನಾದೆ ಸೀತಾದೇವಿಯನ್ನು ಬಿಡಿಸಿಕೊಂಡು ಬಂದುದೂ ಶತ್ರುವನ್ನು ಸಂಹರಿಸಿದ್ದೂ ಪರಮಾನಂದದ ವಿಷಯ (೨೭-೨೮) ಶತ್ರುವನ್ನು ನಿರ್ನಾಮಗೊಳಿಸಿ ವಿಜಯಶಾಲಿಯಾಗಿ ಬಂದಿರುವ ನಿನ್ನನ್ನು ನಾವು ನೋಡುತ್ತಿರುವೆವಲ್ಲ, ಇದೇ ನಮ್ಮ ಹಾರೈಕೆ ಯಾಗಿತ್ತು ನಮಗೆ ಅತ್ಯಾನಂದವಾಗಿದೆ (೨೯) ನಮ್ಮನ್ನು ಹೊಗಳುವುದು ನಿನ್ನ ಉದಾರಸ್ವಭಾವಕ್ಕೆ ಸದೃಶವಾದದ್ದು ಪ್ರಶಂಸೆಗೆ ಅರ್ಹನಾದವನು ನೀನು ಹೇ ಪ್ರಭು, ನಮಗಂತೂ ಹೇಗೆ ಪ್ರಶಂಸೆ ಮಾಡಬೇಕೋ

ಆಪೃಚ್ಛಾಮೋ ಗಮಿಷ್ಯಾಮೋ ಹೃದಿಸ್ಥೋ ನಃ ಸದಾ ಭವಾನ್ ।
ವರ್ತಾಮಹೇ ಮಹಾಬಾಹೋ ಪ್ರೀತ್ಯಾತ್ರ ಮಹತಾ ವೃತಾಃ ॥ ೩೧

ಭವೇಚ್ಚ ತೇ ಮಹಾರಾಜ ಪ್ರೀತಿರಸ್ಮಾಸು ನಿತ್ಯದಾ ।
ಬಾಢಮಿತ್ಯೇವ ರಾಜಾನೋ ಹರ್ಷೇಣ ಪರಮನ್ವಿತಾಃ ॥ ೩೨

ಊಚುಃ ಪ್ರಾಂಜಲಯಃ ಸರ್ವೇ ರಾಘವಂ ಗಮನೋತ್ಸುಕಾಃ ।
ಪೂಜಿತಾಶ್ಚೈವ ರಾಮೇಣ ಜಗ್ಮುರ್ದೇಶಾನ್ ಸ್ವಕಾನ್ ಸ್ವಕಾನ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟಾತ್ರಿಂಶಃ ಸರ್ಗಃ



ತಿಳಿಯದು! (೩೦) ನಿನ್ನನ್ನು ಬೀಳ್ಕೊಡುತ್ತೇವೆ, ನಾವು ಹೊರಡುತ್ತೇವೆ. ಸದಾ ನಮ್ಮ ಹೃದಯದಲ್ಲಿ ನೀನು ನೆಲೆಸಿರುವೆ. ನಿನ್ನಲ್ಲಿ ನಿರತಿಶಯವಾದ ಪ್ರೀತಿಯಿಂದ ವರ್ತಿಸುತ್ತೇವೆ. ಹೇ ಮಹಾರಾಜ, ನಮ್ಮಲ್ಲಿ ನಿನಗೆ ಸ್ಥಿರವಾದ ಪ್ರೀತಿ ಹೀಗೆಯೇ ಇರಲಿ" ಎಂದರು ಶ್ರೀರಾಮನು 'ತಥಾಸ್ತು' ಎಂದನು (೩೧-೩೨) ಅನಂತರ ಶ್ರೀರಾಮನಿಂದ ಸತ್ಕೃತರಾದ ಆ ರಾಜರೆಲ್ಲರೂ ಪರಮ ಹರ್ಷದಿಂದ ಬದ್ಧಾಂಜಲಿಗಳಾಗಿ ಅವನನ್ನು ಬೀಳ್ಕೊಂಡು ತಮ್ಮ ತಮ್ಮ ದೇಶಗಳಿಗೆ ಹೋದರು (೩೩).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತೆಂಟನೆಯ ಸರ್ಗ



## ಏಕೋನಚತ್ವಾರಿಂಶಃ ಸರ್ಗಃ

### ವಾನರಪ್ರೀಣನಮ್

ತೇ ಪ್ರಯಾತಾ ಮಹಾತ್ಮಾನಃ ಪಾರ್ಥಿವಾಸ್ತೇ ಪ್ರಹೃಷ್ಟವತ್ ।
ಗಜವಾಜಿಸಹಸ್ರೈಶ್ಚ್ಯೈಃ ಕಂಪಯಂತೋ ವಸುಂಧರಾಮ್ ॥ ೧
ಅಕ್ಷೌಹಿಣ್ಯೋ ಹಿ ತತ್ರಾಸನ್ ರಾಘವಾರ್ಥೇ ಸಮುದ್ಯತಾಃ ।
ಭರತಸ್ಯಾಜ್ಞಯಾನೇಕಾಃ ಪ್ರಹೃಷ್ಟಾ ಬಲವಾಹನಾಃ ॥ ೨
ಊಚುಸ್ತೇ ಚ ಮಹೀಪಾಲಾ ಬಲದರ್ಪಸಮನ್ವಿತಾಃ ।
ನ ರಾಮರಾವಣಂ ಯುದ್ಧೇ ಪಶ್ಯಾಮಃ ಪುರತಃ ಸ್ಥಿತಮ್ ॥ ೩
ಭರತೇನ ವಯಂ ಪಶ್ಚಾತ್ ಸಮಾನೀತಾ ನಿರರ್ಥಕಮ್ ।
ಹತಾ ಹಿ ರಾಕ್ಷಸಾಃ ಕ್ಷಿಪ್ರಂ ಪಾರ್ಥಿವೈಃ ಸ್ಯುರ್ನ ಸಂಶಯಃ ॥ ೪
ರಾಮಸ್ಯ ಬಾಹುವೀರ್ಯೇಣ ರಕ್ಷಿತಾ ಲಕ್ಷ್ಮಣಸ್ಯ ಚ ।
ಸುಖಂ ಪಾರೇ ಸಮುದ್ರಸ್ಯ ಯುಧ್ಯೇಮ ವಿಗತಜ್ವರಾಃ ॥ ೫

### ಸರ್ಗ ೩೯

ರಾಜರು ಸ್ವದೇಶಕ್ಕೆ ಮರಳಿ ಶ್ರೀರಾಮನಿಗೆ ಕಾಣಿಕೆಗಳನ್ನು ಕಳಿಸುವುದು
ವಾನರರಿಗೆ ಪಾರಿತೋಷಿಕ ಪ್ರದಾನ

ಮಹಾತ್ಮರಾದ ಆ ರಾಜರು ಸಂತುಷ್ಟರಾಗಿ ಆನೆ ಕುದುರೆ ಮುಂತಾದ ಅಸಂಖ್ಯಾಕ ಸೇನೆಯೊಡನೆ ತಮ್ಮ ದೇಶಗಳಿಗೆ ಪ್ರಯಾಣ ಮಾಡಿದರು ಅವರ ಗಜವಾಜಿಗಳ ಭಾರದಿಂದ ಭೂಮಿಯು ಅದಿರುವಂತೆ ಕಾಣಿಸಿತು ! ಭರತನ ಆಜ್ಞೆಯಂತೆ ರಾಘವನ ನೆರವಿಗಾಗಿ ಬಂದ ಅವರ ಸೇನೆಗಳು ಅನೇಕ ಅಕ್ಷೌಹಿಣಿಗಳಷ್ಟಿದ್ದವು (೧-೨) ಬಲದರ್ಪ ಸಮನ್ವಿತರಾದ ಆ ಮಹೀಪಾಲರು "ಆಹಾ ! ಶ್ರೀರಾಮನ ವೈರಿಯಾದ ರಾವಣನು ಯುದ್ಧದಲ್ಲಿ ಎದುರಾಗುವುದನ್ನು ನಾವು ಕಾಣದೆ ಹೋದೆವು ! ಎಲ್ಲವೂ ಮುಗಿದಮೇಲೆ ಭರತನು ನಮ್ಮನ್ನು ವ್ಯರ್ಥವಾಗಿ ಕರೆಸಿದನು ರಾಕ್ಷಸರೆಲ್ಲರನ್ನೂ ನಾವು ನಿಸ್ಸಂದೇಹವಾಗಿ ಶೀಘ್ರದಲ್ಲಿಯೇ ಕೊಂದುಹಾಕುತ್ತಿದ್ದೆವು (೩-೪) ರಾಮಲಕ್ಷ್ಮಣರ ಭುಜಬಲದಿಂದ ಸುರಕ್ಷಿತರಾಗಿ ಸಮುದ್ರದ ಆಚೆಯ ದಂಡೆಯಲ್ಲಿ ನಿಶ್ಶಂಕೆ

ಏತಾಶ್ಚಾನ್ಯಾಶ್ಚ ರಾಜಾನಃ ಕಥಾಸ್ತತ್ರ ಸಹಸ್ರಶಃ ।
ಕಥಯಂತಃ ಸ್ವರಾಜ್ಯಾನಿ ಜಗ್ಮುರ್ಹರ್ಷಸಮನ್ವಿತಾಃ ॥ ೬

ಸ್ವಾನಿ ರಾಜ್ಯಾನಿ ಮುಖ್ಯಾನಿ ಋದ್ಧಾನಿ ಮುದಿತಾನಿ ಚ ।
ಸಮೃದ್ಧಧನಧಾನ್ಯಾನಿ ಪೂರ್ಣಾನಿ ವಸುಮಂತಿ ಚ ॥ ೭

ಯಥಾಪುರಾಣಿ ತೇ ಗತ್ವಾ ರತ್ನಾನಿ ವಿವಿಧಾನ್ಯಥ ।
ರಾಮಸ್ಯ ಪ್ರಿಯಕಾಮಾರ್ಥಮುಪಹಾರಾನ್ನೃಪಾ ದದುಃ ॥ ೮

ಅಶ್ವಾನ್ ಯಾನಾನಿ ರತ್ನಾನಿ ಹಸ್ತಿನಶ್ಚ ಮದೋತ್ಕಟಾನ್ ।
ಚಂದನಾನಿ ಚ ಮುಖ್ಯಾನಿ ದಿವ್ಯಾನ್ಯಾಭರಣಾನಿ ಚ ॥ ೯

ಮಣಿಮುಕ್ತಾಪ್ರವಾಲಾಂಸ್ತು ದಾಸ್ಯೋ ರೂಪಸಮನ್ವಿತಾಃ ।
ಅಜಾವಿಕಂ ಚ ವಿವಿಧಂ ರಥಾಂಶ್ಚ ವಿವಿಧಾನ್ ದದುಃ ॥ ೧೦

ಭರತೋ ಲಕ್ಷ್ಮಣಶ್ಚೈವ ಶತ್ರುಘ್ನಶ್ಚ ಮಹಾಬಲಾಃ ।
ಆದಾಯ ತಾನಿ ರತ್ನಾನಿ ಸ್ವಾಂ ಪುರೀಂ ಪುನರಾಗತಾಃ ॥ ೧೧

ಆಗಮ್ಯ ಚ ಪುರೀಂ ರಮ್ಯಾಮಯೋಧ್ಯಾಂ ಪುರುಷರ್ಷಭಾಃ ।
ತಾನಿ ರತ್ನಾನಿ ಚಿತ್ರಾಣಿ ರಾಮಾಯ ಸಮುಪಾಹರನ್ ॥ ೧೨

---

ಯಿಂದ ಹೋರಾಡುತ್ತಿದ್ದೆವು" ಎಂದು ಮಾತಾಡಿಕೊಂಡರು (೫) ಈ ಬಗೆಯ ನಾನಾ ಕಥಾಸಲ್ಲಾಪಗಳನ್ನಾಡುತ್ತ ಆ ಭೂಪಾಲರು ಹರ್ಷದಿಂದ ತಮ್ಮ ರಾಜ್ಯಗಳಿಗೆ ಮರಳಿದರು ಅವರ ರಾಜ್ಯಗಳು ಧನಧಾನ್ಯಗಳಿಂದ ಸಮೃದ್ಧವಾಗಿ ಮೊದಲಿನಂತೆ ನೆಮ್ಮದಿಯಲ್ಲಿದ್ದವು (೬-೭). ಅವರು ತಮ್ಮ ದೇಶಗಳನ್ನು ಸೇರಿದಮೇಲೆ ಶ್ರೀರಾಮನಿಗೆ ಸಂಪ್ರೀತಿಯಾಗಲೆಂದು ಮುತ್ತು ಹವಳ ಮುಂತಾದ ವಿವಿಧ ರತ್ನಗಳನ್ನೂ ಆನೆ ಕುದುರೆಗಳನ್ನೂ ದಿವ್ಯ ಚಂದನಗಳನ್ನೂ ಆಭರಣಗಳನ್ನೂ ರೂಪವತಿಯರಾದ ದಾಸಿಯರನ್ನೂ ಮೇಕೆ ಕುರಿಗಳ ಹಿಂಡನ್ನೂ ವಿವಿಧಾಕೃತಿಯ ರಥಗಳನ್ನೂ ಕಾಣಿಕೆಯಾಗ್ಗಿ ಸಮರ್ಪಿಸಿದರು (೮-೧೦) ಬಲಾಢ್ಯರಾದ ಭರತ ಲಕ್ಷ್ಮಣ ಶತ್ರುಘ್ನರು ಆ ಕಾಣಿಕೆಗಳನ್ನು ತೆಗೆದುಕೊಂಡು ತಮ್ಮ ಅಯೋಧ್ಯಾನಗರಿಗೆ ಹಿಂದಿರುಗಿ

ಪ್ರತಿಗೃಹ್ಯ ಚ ತತ್ ಸರ್ವಂ ರಾಮಃ ಪ್ರೀತಿಸಮನ್ವಿತಃ ।
ಸುಗ್ರೀವಾಯ ದದೌ ರಾಜ್ಞೇ ಮಹಾತ್ಮಾ ಕೃತಕರ್ಮಣೇ ॥ ೧೩
ವಿಭೀಷಣಾಯ ಚ ದದೌ ತಥಾನ್ಯೇಭ್ಯೋಽಪಿ ರಾಘವಃ ।
ರಾಕ್ಷಸೇಭ್ಯಃ ಕಪಿಭ್ಯಶ್ಚ ಯೈರ್ವೃತೋ ಜಯಮಾಪ್ತವಾನ್ ॥ ೧೪
ತೇ ಸರ್ವೇ ರಾಮದತ್ತಾನಿ ರತ್ನಾನಿ ಕಪಿರಾಕ್ಷಸಾಃ ।
ಶಿರೋಭಿರ್ಧಾರಯಾಮಾಸುರ್ಬಾಹುಭಿಶ್ಚ ಮಹಾಬಲಾಃ ॥ ೧೫
ಹನೂಮಂತಂ ಚ ನೃಪತಿರಿಕ್ಷ್ವಾಕೂಣಾಂ ಮಹಾರಥಃ ।
ಅಂಗದಂ ಚ ಮಹಾಬಾಹುಮಂಕಮಾರೋಪ್ಯ ವೀರ್ಯವಾನ್ ॥
ರಾಮಃ ಕಮಲಪತ್ರಾಕ್ಷಃ ಸುಗ್ರೀವಮಿದಮಬ್ರವೀತ್ ।
ಅಂಗದಸ್ತೇ ಸುಪುತ್ರೋಽಯಂ ಮಂತ್ರೀ ಚಾಪ್ಯನಿಲಾತ್ಮಜಃ ॥ ೧೭
ಸುಗ್ರೀವ ಮಂತ್ರಿತೇ ಯುಕ್ತೌ ಮಮಾಪಿ ಚ ಹಿತೇ ರತೌ ।
ಅರ್ಹತೋ ವಿವಿಧಾಂ ಪೂಜಾಂ ತ್ವತ್ಕೃತೇ ವೈ ಹರೀಶ್ವರ ॥ ೧೮
ಇತ್ಯುಕ್ತ್ವಾ ವ್ಯವಮುಚ್ಯಾಂಗಾದ್ಭೂಷಣಾನಿ ಮಹಾಯಶಾಃ ।
ಸ ಬಬಂಧ ಮಹಾರ್ಹಾಣಿ ತದಾಂಗದಹನೂಮತೋಃ ॥ ೧೯

---

ಶ್ರೀರಾಮನಿಗೆ ಒಪ್ಪಿಸಿದರು (೧೧-೧೨) ಶ್ರೀರಾಮನು ಪ್ರೀತಿಯಿಂದ ಅವುಗಳನ್ನು ಸ್ವೀಕರಿಸಿ, ಕೃತಕಾರ್ಯನಾದ ಸುಗ್ರೀವನಿಗೂ ವಿಭೀಷಣನಿಗೂ ತನ್ನ ವಿಜಯಕ್ಕೆ ನಿಮಿತ್ತರಾದ ರಾಕ್ಷಸರಿಗೂ ವಾನರರಿಗೂ ಅನೇಕ ಪಾರಿತೋಷಿಕಗಳನ್ನಿತ್ತನು (೧೩-೧೪) ಆ ವಾನರರೂ ರಾಕ್ಷಸರೂ ಶ್ರೀರಾಮನಿತ್ತ ರತ್ನಾಭರಣಗಳನ್ನು ತಮ್ಮ ಶಿರಸ್ಸುಗಳಲ್ಲಿಯೂ ಬಾಹುಗಳಲ್ಲಿಯೂ ಧರಿಸಿದರು ಇಕ್ಷ್ವಾಕುವಂಶಶ್ರೇಷ್ಠನೂ ಕಮಲದಳನೇತ್ರನೂ ಆದ ರಾಘವನು ಹನುಮಂತನನ್ನೂ ಅಂಗದನನ್ನೂ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡನು (೧೫-೧೬) ಅನಂತರ ಸುಗ್ರೀವನನ್ನು ನೋಡಿ "ಸುಗ್ರೀವ, ನಿನ್ನ ಸುಪುತ್ರನಾದ ಅಂಗದನೂ ಸಚಿವೋತ್ತಮನಾದ ಹನುಮಂತನೂ ನಿನ್ನ ಮಂತ್ರಾಲೋಚನೆಗೆ ನೆರವಾಗಿ ನನ್ನ ಹಿತದಲ್ಲಿ ಆಸಕ್ತರಾಗಿದ್ದಾರೆ ವಿವಿಧ ಸಮ್ಮಾನಕ್ಕೆ ಅರ್ಹರಾಗಿದ್ದಾರೆ" ಎಂದನು (೧೭-೧೮). ಹೀಗೆ ನುಡಿದು ಆ ಕೀರ್ತಿಶಾಲಿಯು ತನ್ನ ಮೈಮೇಲಿದ್ದ ಅಮೂಲ್ಯವಾದ

ಆಭಾಷ್ಯ ಚ ಮಹಾವೀರ್ಯಾನ್ ರಾಘವೋ ಯೂಥಪರ್ಷಭಾನ್ ।
ನೀಲಂ ನಲಂ ಕೇಸರಿಣಂ ಕುಮುದಂ ಗಂಧಮಾದನಮ್ ॥ ೨೦
ಸುಷೇಣಂ ಪನಸಂ ವೀರಂ ಮೈಂದಂ ದ್ವಿವಿದಮೇವ ಚ ।
ಜಾಂಬವಂತಂ ಗವಾಕ್ಷಂ ಚ ವಿನತಂ ಧೂಮ್ರಮೇವ ಚ ॥ ೨೧
ವಲೀಮುಖಂ ಪ್ರಜಂಘಂ ಚ ಸಂನಾದಂ ಚ ಮಹಾಬಲಮ್ ।
ದರೀಮುಖಂ ದಧಿಮುಖಮಿಂದ್ರಜಾನುಂ ಚ ಯೂಥಪಮ್ ॥ ೨೨
ಮಧುರಂ ಶ್ಲಕ್ಷ್ಣಯಾ ವಾಚಾ ನೇತ್ರಾಭ್ಯಾಮಾಪಿಬನ್ನಿವ ।
ಸುಹೃದೋ ಮೇ ಭವಂತಶ್ಚ ಶರೀರಂ ಭ್ರಾತರಸ್ತಥಾ ॥ ೨೩
ಯುಷ್ಮಾಭಿರುದ್ಧೃತಶ್ಚಾಹಂ ವ್ಯಸನಾತ್ ಕಾನನೌಕಸಃ ।
ಧನ್ಯೋ ರಾಜಾ ಚ ಸುಗ್ರೀವೋ ಭವದ್ಭಿಃ ಸುಹೃದಾಂ ವರೈಃ ॥ ೨೪
ಏವಮುಕ್ತ್ವಾ ದದೌ ತೇಭ್ಯೋ ಭೂಷಣಾನಿ ಯಥಾರ್ಹತಃ ।
ವಜ್ರಾಣಿ ಚ ಮಹಾರ್ಹಾಣಿ ಸಸ್ವಜೇ ಚ ನರರ್ಷಭಃ ॥ ೨೫
ತೇ ಪಿಬಂತಃ ಸುಗಂಧೀನಿ ಮಧೂನಿ ಮಧುಪಿಂಗಲಾಃ ।
ಮಾಂಸಾನಿ ಚ ಸುಮೃಷ್ಟಾನಿ ಮೂಲಾನಿ ಚ ಫಲಾನಿ ಚ ॥ ೨೬

---

ಆಭರಣಗಳನ್ನು ತೆಗೆದು ಅಂಗದನಿಗೂ ಹನುಮಂತನಿಗೂ ತೊಡಿಸಿದನು. ಆಮೇಲೆ ಮಹಾಶೂರರಾದ ನಲ, ನೀಲ, ಕೇಸರಿ, ಕುಮುದ, ಗಂಧಮಾದನ, ಸುಷೇಣ, ಪನಸ, ಮೈಂದ, ದ್ವಿವಿದ, ಜಾಂಬವಂತ, ಗವಾಕ್ಷ, ವಿನತ, ಧೂಮ್ರ, ಪ್ರಜಂಘ, ಸಂನಾದ, ದರೀಮುಖ, ದಧಿಮುಖ, ಇಂದ್ರಜಾನು— ಮುಂತಾದ ಕಪಿಶ್ರೇಷ್ಠರನ್ನು ನೇತ್ರಗಳಿಂದ ಕುಡಿಯುವನೋ ಎಂಬಂತೆ ಪ್ರೀತಿಯಿಂದ ವೀಕ್ಷಿಸುತ್ತ ಮೃದುನುಡಿಗಳಿಂದ "ವೀರರೆ, ನೀವು ನನ್ನ ಮಿತ್ರರು ನನ್ನ ಅಣ್ಣತಮ್ಮಂದಿರೆಂದೇ ತಿಳಿದಿದ್ದೇನೆ ಅಷ್ಟೇಕೆ? ನನ್ನ ದೇಹವೇ ಆಗಿದ್ದೀರಿ (೧೯-೨೩) ಒಂದು ಮಹಾಸಂಕಟದಿಂದ ನನ್ನನ್ನು ಪಾರುಮಾಡಿದ್ದೀರಿ ನಿಮ್ಮಂತಹ ಆಪ್ತರಿಂದ ಪರಿವೃತನಾದ ಸುಗ್ರೀವರಾಜನೇ ಧನ್ಯ" ಎಂದು ಹೇಳಿ ಯಥೋಚಿತವಾದ ಆಭರಣಗಳನ್ನೂ ಬೆಲೆಬಾಳುವ ವಜ್ರಗಳನ್ನೂ ನೀಡಿ, ಅವರನ್ನು ಆಲಿಂಗಿಸಿಕೊಂಡನು (೨೪-೨೫) ವಾನರರು ಅಯೋಧ್ಯೆಯಲ್ಲಿ ಸುಗಂಧಿಯಾದ ಜೇನನ್ನು ಕುಡಿಯುತ್ತ

ಏವಂ ತೇಷಾಂ ನಿವಸತಾಂ ಮಾಸಃ ಸಾಗ್ರೋ ಯಯೌ ತದಾ ।
ಮುಹೂರ್ತಮಿವ ತೇ ಸರ್ವೇ ರಾಜಭಕ್ತ್ಯಾ ಚ ಮೇನಿರೇ ॥ ೨೭

ರಾಮೋಽಪಿ ರೇಮೇ ತೈಃ ಸಾರ್ಧಂ ವಾನರೈಃ ಕಾಮರೂಪಿಭಿಃ ।
ರಾಕ್ಷಸೈಶ್ಚ ಮಹಾವೀರ್ಯೈರೃಕ್ಷೈಶ್ಚೈವ ಮಹಾಬಲೈಃ ॥ ೨೮

ಏವಂ ತೇಷಾಂ ಯಯೌ ಮಾಸೋ ದ್ವಿತೀಯಃ ಶೈಶಿರಃ ಸುಖಮ್ ।
ವಾನರಾಣಾಂ ಪ್ರಹೃಷ್ಟಾನಾಂ ರಾಕ್ಷಸಾನಾಂ ಚ ಸರ್ವಶಃ ॥ ೨೯

ಇಕ್ಷ್ವಾಕುನಗರೇ ರಮ್ಯೇ ಪರಾಂ ಪ್ರೀತಿಮುವಾಸತಾಮ್ ।
ರಾಮಸ್ಯ ಪ್ರೀತಿಕರಣೈಃ ಕಾಲಸ್ತೇಷಾಂ ಸುಖಂ ಯಯೌ ॥ ೩೦

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋನಚತ್ವಾರಿಂಶ ಸರ್ಗಃ



ಉತ್ತಮವಾದ ಫಲಮೂಲಗಳನ್ನು ತಿನ್ನುತ್ತ ಸುಖವಾಗಿದ್ದರು ರಾಕ್ಷಸರು ರುಚಿಕರವಾದ ಮಾಂಸವನ್ನು ಭಕ್ಷಿಸುತ್ತಿದ್ದರು (೨೬) ಈ ರೀತಿಯಲ್ಲಿ ಒಂದು ತಿಂಗಳಿಗಿಂತಲೂ ಹೆಚ್ಚು ಕಾಲ ಕಳೆಯಿತು ರಾಜಭಕ್ತಿಯಿಂದಿದ್ದ ಅವರಿಗೆ ಆ ಕಾಲವು ಒಂದು ಮುಹೂರ್ತದಂತೆ ತೋರಿತು (೨೭). ಶ್ರೀರಾಮನು ಕಾಮರೂಪಿಗಳಾದ ವಾನರರೊಡನೆಯೂ ಭಲ್ಲೂಕಗಳೊಡನೆಯೂ ರಾಕ್ಷಸರೊಡನೆಯೂ ಸೇರಿ ಸಂತೋಷದಿಂದ ವಿಹರಿಸುತ್ತಿದ್ದನು ಹೀಗೆ ಅಯೋಧ್ಯಾನಗರದಲ್ಲಿ ವಾನರರೂ ರಾಕ್ಷಸರೂ ಸಂತೋಷದಿಂದ ನಲಿಯುತ್ತಿರಲು, ಶಿಶಿರ ಋತುವಿನ ಎರಡನೆಯ ತಿಂಗಳಾದ ಫಾಲ್ಗುಣವು * ಕಳೆಯಿತು ಶ್ರೀರಾಮನನ್ನು ಸಂತೋಷಪಡಿಸುತ್ತ ಅವರು ಅಷ್ಟು ಕಾಲವನ್ನು ಸುಖವಾಗಿ ಕಳೆದರು (೨೮-೩೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಮೂವತ್ತೊಂಬತ್ತನೆಯ ಸರ್ಗ



---

* ಅನುಬಂಧವನ್ನು ನೋಡಿ,

## ಚತ್ವಾರಿಂಶಃ ಸರ್ಗಃ

### ಹನೂಮತ್ಪ್ರಾರ್ಥನಾ

ತಥಾ ಸ್ಮ ತೇಷಾಂ ವಸತಾಮೃಕ್ಷವಾನರರಕ್ಷಸಾಮ್ ।
ರಾಘವಸ್ತು ಮಹಾತೇಜಾಃ ಸುಗ್ರೀವಮಿದಮಬ್ರವೀತ್ ॥ ೧

ಗಮ್ಯತಾಂ ಸೌಮ್ಯ ಕಿಷ್ಕಿಂಧಾಂ ದುರಾಧರ್ಷಾಂ ಸುರಾಸುರೈಃ ।
ಪಾಲಯಸ್ವ ಸಹಾಮಾತ್ಯೋ ರಾಜ್ಯಂ ನಿಹತಕಂಟಕಮ್ ॥ ೨

ಅಂಗದಂ ಚ ಮಹಾಬಾಹೋ ಪ್ರೀತ್ಯಾ ಪರಮಯಾ ಯುತಃ ।
ಪಶ್ಯ ತ್ವಂ ಹನುಮಂತಂ ಚ ನಲಂ ಚ ಸುಮಹಾಬಲಮ್ ॥ ೩

ಸುಷೇಣಂ ಶ್ವಶುರಂ ವೀರಂ ತಾರಂ ಚ ಬಲಿನಾಂ ವರಮ್ ।
ಕುಮುದಂ ಚೈವ ದುರ್ಧರ್ಷಂ ನೀಲಂ ಚೈವ ಮಹಾಬಲಮ್ ॥ ೪

ವೀರಂ ಶತವಲಿಂ ಚೈವ ಮೈಂದಂ ದ್ವಿವಿದಮೇವ ಚ ।
ಗಜಂ ಗವಾಕ್ಷಂ ಗವಯಂ ಶರಭಂ ಚ ಮಹಾಬಲಮ್ ॥ ೫

### ಸರ್ಗ ೪೦

ಶ್ರೀರಾಮನು ಸುಗ್ರೀವಾದಿಗಳನ್ನು ಬೀಳ್ಕೊಡುವುದು
ಹನುಮಂತನ ಪ್ರಾರ್ಥನೆ

ಈ ಪ್ರಕಾರವಾಗಿ ಭಲ್ಲೂಕವಾನರರಾಕ್ಷಸರು ಅಯೋಧ್ಯೆಯಲ್ಲಿರುವಾಗ ಒಂದು ದಿನ ಶ್ರೀರಾಮಚಂದ್ರನು ಸುಗ್ರೀವನನ್ನು ಕುರಿತು "ಸೌಮ್ಯ, ಕಿಷ್ಕಿಂಧೆಗೆ ನೀನು ಹೋಗಬಹುದು ದೇವಾಸುರರಿಗೆ ಅದು ದುರ್ಧರ್ಷ ವಾಗಿದೆ ಶತ್ರುರಹಿತವಾದ ಆ ನಗರವನ್ನು ಅಮಾತ್ಯರೊಡನೆ ಪಾಲಿಸುತ್ತಿರು (೧–೨). ಹೇ ಮಹಾಬಾಹು, ಅಂಗದನನ್ನು ಪರಮ ಪ್ರೀತಿಯಿಂದ ನೋಡಿಕೊ ಹನುಮಂತ, ನಲ, ಮಾವನಾದ ಸುಷೇಣ, ತಾರ, ಕುಮುದ, ನೀಲ, ಶತಬಲಿ, ಮೈಂದ, ದ್ವಿವಿದ, ಗಜ, ಗವಾಕ್ಷ, ಗವಯ, ಶರಭರನ್ನು

ಪಶ್ಯ ಪ್ರೀತಿಸಮಾಯುಕ್ತೋ ಗಂಧಮಾದನಮೇವ ಚ ।
ಋಷಭಂ ಚ ಸುವಿಕ್ರಾಂತಂ ಜಾಂಬವಂತಂ ಮಹಾಬಲಮ್ ॥ ೬

ಯೇ ಚೇಮೇ ಸುಮಹಾತ್ಮಾನೋ ಮದರ್ಥೇ ತ್ಯಕ್ತಜೀವಿತಾಃ ।
ಪಶ್ಯ ತ್ವಂ ಪ್ರೀತಿಸಂಯುಕ್ತೋ ಮಾ ಚೈಷಾಂ ವಿಪ್ರಿಯಂ ಕೃಥಾಃ ॥

ಏವಮುಕ್ತ್ವಾ ತು ಸುಗ್ರೀವಮಾಶ್ಲಿಷ್ಯ ಚ ಪುನಃ ಪುನಃ ।
ವಿಭೀಷಣಮುವಾಚಾಥ ರಾಮೋ ಮಧುರಯಾ ಗಿರಾ ॥ ೮

ಲಂಕಾಂ ಪ್ರಶಾಧಿ ಧರ್ಮೇಣ ಧರ್ಮಜ್ಞಸ್ತ್ವಂ ಮತೋ ಮಮ ।
ಪುರಸ್ಯ ರಾಕ್ಷಸಾನಾಂ ಚ ಭ್ರಾತುರ್ವೈಶ್ರವಣಸ್ಯ ಚ ॥ ೯

ಮಾ ಚ ಬುದ್ಧಿಮಧರ್ಮೇ ತ್ವಂ ಕುರ್ಯಾ ರಾಜನ್ ಕಥಂಚನ ।
ಬುದ್ಧಿಮಂತೋ ಹಿ ರಾಜಾನೋ ಧ್ರುವಮಶ್ನಂತಿ ಮೇದಿನೀಮ್ ॥

ಅಹಂ ಚ ನಿತ್ಯಶೋ ರಾಜನ್ ಸುಗ್ರೀವಸಹಿತಸ್ತ್ವಯಾ ।
ಸ್ಮರ್ತವ್ಯಃ ಪರಯಾ ಪ್ರೀತ್ಯಾ ಗಚ್ಛ ತ್ವಂ ವಿಗತಜ್ವರಃ ॥ ೧೧

---

ಸ್ನೇಹದಿಂದ ಕಾಣುತ್ತಿರು (೩-೫) ಹಾಗೆಯೇ ಗಂಧಮಾದನ, ಋಷಭ, ಜಾಂಬವಂತ—ಮುಂತಾದವರು ನನಗೋಸ್ಕರ ಜೀವಿತವನ್ನೇ ಧಾರೆಯೆರೆದಿದ್ದ ಮಹಾತ್ಮರು ಅವರೆಲ್ಲರನ್ನೂ ಪ್ರೀತಿಯಿಂದ ನಡೆಸಿಕೊ ಅಪ್ರಿಯವಾದ್ದನ್ನು ಮಾಡಬೇಡ" ಎಂದನು (೬-೭) ಹೀಗೆ ನುಡಿದು ಸುಗ್ರೀವನನ್ನು ಮತ್ತೆ ಮತ್ತೆ ಆಲಿಂಗಿಸಿಕೊಂಡನು ಅನಂತರ ಶ್ರೀರಾಮನು ಮಧುರವಾದ ನುಡಿಯಿಂದ ವಿಭೀಷಣನನ್ನು ಕುರಿತು "ವಿಭೀಷಣ, ಲಂಕೆಯನ್ನು ಧರ್ಮದಿಂದ ಆಳುತ್ತಿರು ನೀನು ಧರ್ಮಜ್ಞನೆಂಬುದು ನನಗೆ ವಿದಿತವಾಗಿದೆ ಲಂಕಾಪುರದ ರಾಕ್ಷಸರಿಗೂ ಸೋದರನಾದ ಕುಬೇರನಿಗೂ ನೀನು ಪ್ರಿಯನಾಗಿದ್ದೀಯೆ (೮-೯) ಹೇ ರಾಜನ್, ಎಂದಿಗೂ ಅಧರ್ಮದಲ್ಲಿ ಮನಸ್ಸಿಡಬೇಡ ಪ್ರಜ್ಞಾಶಾಲಿಗಳಾದ ರಾಜರು ಭೂಮಿಯನ್ನು ಚಿರಕಾಲದವರೆಗೆ ಪಾಲಿಸುತ್ತಾರೆ ವಿಭೀಷಣ, ನನ್ನನ್ನೂ ಸುಗ್ರೀವನನ್ನೂ ಸ್ಮರಿಸಿಕೊಳ್ಳುತ್ತಿರು. ನಿಶ್ಚಿಂತನಾಗಿ ಸಂತೋಷದಿಂದ ಪ್ರಯಾಣಮಾಡು" ಎಂದನು (೧೦-೧೧)

ರಾಮಸ್ಯ ಭಾಷಿತಂ ಶ್ರುತ್ವಾ ಋಕ್ಷವಾನರರಾಕ್ಷಸಾಃ ।
ಸಾಧು ಸಾಧ್ವಿತಿ ಕಾಕುತ್ಸ್ಥಂ ಪ್ರಶಶಂಸುಃ ಪುನಃ ಪುನಃ ॥ ೧೨

ತವ ಬುದ್ಧಿರ್ಮಹಾಬಾಹೋ ವೀರ್ಯಮದ್ಭುತಮೇವ ಚ ।
ಮಾಧುರ್ಯಂ ಪರಮಂ ರಾಮ ಸ್ವಯಂಭೋರಿವ ನಿತ್ಯದಾ ॥ ೧೩

ತೇಷಾಮೇವಂಬ್ರುವಾಣಾನಾಂ ವಾನರಾಣಾಂ ಚ ರಕ್ಷಸಾಮ್ ।
ಹನೂಮಾನ್ ಪ್ರಣತೋ ಭೂತ್ವಾ ರಾಘವಂ ವಾಕ್ಯಮಬ್ರವೀತ್ ॥

ಸ್ನೇಹೋ ಮೇ ಪರಮೋ ರಾಜಂಸ್ತ್ವಯಿ ತಿಷ್ಠತು ನಿತ್ಯದಾ ।
ಭಕ್ತಿಶ್ಚ ನಿಯತಾ ವೀರ ಭಾವೋ ನಾನ್ಯತ್ರ ಗಚ್ಛತು ॥ ೧೫

ಯಾವದ್ರಾಮಕಥಾ ವೀರ ಚರಿಷ್ಯತಿ ಮಹೀತಲೇ ।
ತಾವಚ್ಛರೀರೇ ವತ್ಸ್ಯಂತಿ ಪ್ರಾಣಾ ಮಮ ನ ಸಂಶಯಃ ॥ ೧೬

ಯಚ್ಚೈತಚ್ಚರಿತಂ ದಿವ್ಯಂ ಕಥಾಂ ತೇ ರಘುನಂದನ ।
ತನ್ಮಮಾಪ್ಸರಸೋ ರಾಮ ಶ್ರಾವಯೇಯುರ್ನರರ್ಷಭ ॥ ೧೭

---

ಕಾಕುತ್ಸ್ಥನ ನುಡಿಯನ್ನು ಕೇಳಿ ಭಲ್ಲೂಕವಾನರರಾಕ್ಷಸರು ಆತನನ್ನು ಮತ್ತೆ ಮತ್ತೆ ಕೊಂಡಾಡಿದರು ಅವರು "ಹೇ ಮಹಾಬಾಹು–ಶ್ರೀರಾಮ, ನಿನ್ನ ಬುದ್ಧಿ-ಪರಾಕ್ರಮಗಳು ಬೆರಗುಗೊಳಿಸತಕ್ಕವು (ನಡೆನುಡಿಗಳಲ್ಲಿರುವ) ಪರಮ ಮಾಧುರ್ಯವೂ ಸಹ ಸ್ವಯಂಭುವಾದ ಬ್ರಹ್ಮದೇವನಿಗೆ ಇರುವಂತಹದು" ಎಂದರು (೧೨-೧೩) ವಾನರಾದಿಗಳು ಹೀಗೆ ಹೇಳುತ್ತಿರಲು ಹನುಮಂತನು ರಾಘವನಿಗೆ ನಮಸ್ಕರಿಸಿ ಇಂತೆಂದನು "ಮಹಾರಾಜ, ನಿನ್ನಲ್ಲಿ ನನಗಿರುವ ಪರಮಪ್ರೀತಿಯು ಹೀಗೆಯೇ ಉಳಿದಿರಲಿ ಅಚಲವಾದ ಭಕ್ತಿಯು ನೆಲೆಸಿರಲಿ ನನ್ನ ಮನಸ್ಸು ನೀನಲ್ಲದೆ ಇನ್ನೊಂದೆಡೆಗೆ ಹೋಗದಿರಲಿ! (೧೪-೧೫) ಹೇ ವೀರಾಗ್ರಣಿ, ಎಲ್ಲಿಯವರೆಗೆ ಶ್ರೀರಾಮಕಥೆಯು ಈ ಭೂಮಂಡಲದಲ್ಲಿ ಪ್ರಚುರವಾಗಿರುವುದೋ ಅಲ್ಲಿಯವರೆಗೆ ನನ್ನ ಪ್ರಾಣವು ಈ ದೇಹದಲ್ಲಿ ಉಳಿದಿರಲಿ! ರಘುನಂದನ, ನಿನ್ನ ಈ ದಿವ್ಯಚರಿತೆಯನ್ನು– ಈ ದಿವ್ಯಕಥೆಯನ್ನು ಅಪ್ಸರೆಯರು ನನ್ನ ಕಿವಿಗೆ ಬೀಳುವಂತೆ ಹಾಡಿ ಹಾಡಿ

ತಚ್ಛ್ರುತ್ವಾಹಂ ತತೋ ವೀರ ತವ ಚರ್ಯಾಮೃತಂ ಪ್ರಭೋ ।
ಉತ್ಕಂಠಾಂ ತಾಂ ಹರಿಷ್ಯಾಮಿ ಮೇಘಲೇಖಾಮಿವಾನಲಃ ॥ ೧೮

ಏವಂ ಬ್ರುವಾಣಂ ರಾಮಸ್ತು ಹನೂಮಂತಂ ವರಾಸನಾತ್ ।
ಉತ್ಥಾಯ ಸಸ್ವಜೇ ಸ್ನೇಹಾದ್ವಾಕ್ಯಮೇತದುವಾಚ ಹ ॥ ೧೯

ಏವಮೇತತ್ ಕಪಿಶ್ರೇಷ್ಠ ಭವಿತಾ ನಾತ್ರ ಸಂಶಯಃ ।
ಚರಿಷ್ಯತಿ ಕಥಾ ಯಾವದೇಷಾ ಲೋಕೇ ಚ ಮಾಮಿಕಾ ॥ ೨೦

ತಾವತ್ತೇ ಭವಿತಾ ಕೀರ್ತಿಃ ಶರೀರೇಽಪ್ಯಸವಸ್ತಥಾ ।
ಲೋಕಾ ಹಿ ಯಾವತ್ ಸ್ಥಾಸ್ಯಂತಿ ತಾವತ್ ಸ್ಥಾಸ್ಯತಿ ಮೇ ಕಥಾ ॥

ಏಕೈಕಸ್ಯೋಪಕಾರಸ್ಯ ಪ್ರಾಣಾನ್ ದಾಸ್ಯಾಮಿ ತೇ ಕಪೇ ।
ಶೇಷಸ್ಯೇಹೋಪಕಾರಾಣಾಂ ಭವಾಮ ಋಣಿನೋ ವಯಮ್ ॥ ೨೨

ಮದಂಗೇ ಜೀರ್ಣತಾಂ ಯಾತು ಯತ್ತ್ವಯೋಪಕೃತಂ ಕಪೇ ।
ನರಃ ಪ್ರತ್ಯುಪಕಾರಾಣಾಮಾಪತ್ಸ್ವಾಯಾತಿ ಪಾತ್ರತಾಮ್ ॥ ೨೩

ಹೊಗಳುತ್ತಿರಲಿ! (೧೬-೧೭) ಸ್ವಾಮಿ—ಪುರುಷೋತ್ತಮ, ಅಪ್ಸರಯರು ಹಾಡುವ ನಿನ್ನ ಚರಿತಾಮೃತವನ್ನು ಕುಡಿದು ನನ್ನ ಉತ್ಕಂಠೆಯನ್ನು—ಬಾಯಾರಿಕೆಯನ್ನು ನೀಗಿಕೊಳ್ಳುವೆನು! ಮೋಡವನ್ನು ಗಾಳಿ ಹಾರಿಸಿದಂತೆ, ಬುದ್ಧಿಗೆ ಕವಿಯುವ ಮಬ್ಬನ್ನು ಹೋಗಲಾಡಿಸಿಕೊಳ್ಳುವೆನು!" ಎಂದು ನಿವೇದಿಸಿದನು (೧೮) ಹೀಗೆ ನುಡಿಯುತ್ತಿದ್ದ ಹನುಮಂತನನ್ನು, ಶ್ರೀರಾಮನು ಸಿಂಹಾಸನದಿಂದ ಎದ್ದು ಬಂದು ಅಪ್ಪಿಕೊಂಡನು "ವಾನರೋತ್ತಮ, ಹಾಗೆಯೇ ಆಗಲಿ! ನನ್ನ ಕಥೆಯು ಈ ಲೋಕದಲ್ಲಿರುವವರೆಗೆ ನಿನ್ನ ಕೀರ್ತಿ ಸ್ಥಿರವಾಗಿರುವುದು ನಿನ್ನ ಪ್ರಾಣವು ದೇಹದಲ್ಲಿ ನೆಲೆಸಿರುವುದು, ಸಂದೇಹವಿಲ್ಲ. ಈ ಜಗತ್ತು ಇರುವವರೆಗೂ ನನ್ನ ಕಥೆ ಪ್ರಚಾರದಲ್ಲಿರುವುದು (೧೯-೨೧). ಹನುಮಂತ, ನೀನು ಮಾಡಿರುವ ಒಂದೊಂದು ಉಪಕಾರವನ್ನೂ, ನಾನು ಪ್ರಾಣವನ್ನು ತೆತ್ತು ತೀರಿಸಬೇಕಾಗುತ್ತದೆ! (ಹೀಗಿರುವಾಗ ಎಲ್ಲವನ್ನೂ ತೀರಿಸುವುದೆಂತು?) ಉಳಿದ ಉಪಕಾರಗಳಿಗೆ ಎಂದೆಂದಿಗೂ ನಾನು ಸಾಲಗಾರನಾಗಿಯೇ ಉಳಿಯುವೆನು (೨೨) ಹನುಮಂತ, ನೀನು ಮಾಡಿದ ಉಪಕಾರವು ನನ್ನಲ್ಲಿಯೇ ಜೀರ್ಣವಾಗಿ ಹಳೆಯದಾಗಿ ಉಳಿಯಲಿ!

ತತೋಽಸ್ಯ ಹಾರಂ ಚಂದ್ರಾಭಂ ಮುಚ್ಯ ಕಂಠಾತ್ ಸ ರಾಘವಃ ।
ವೈಡೂರ್ಯತರಲಂ ಕಂಠೇ ಬಬಂಧ ಚ ಹನೂಮತಃ ॥ ೨೪

ತೇನೋರಸಿ ನಿಬದ್ಧೇನ ಹಾರೇಣ ಮಹತಾ ಕಪಿಃ ।
ರರಾಜ ಹೇಮಶೈಲೇಂದ್ರಶ್ಚಂದ್ರೇಣಾಕ್ರಾಂತಮಸ್ತಕಃ ॥ ೨೫

ಶ್ರುತ್ವಾ ತು ರಾಘವಸ್ಯೈತದುತ್ಥಾಯೋತ್ಥಾಯ ವಾನರಾಃ ।
ಪ್ರಣಮ್ಯ ಶಿರಸಾ ಪಾದೌ ನಿರ್ಜಗ್ಮುಸ್ತೇ ಮಹಾಬಲಾಃ ॥ ೨೬

ಸುಗ್ರೀವಃ ಸ ಚ ರಾಮೇಣ ನಿರಂತರಮುರೋಗತಃ ।
ವಿಭೀಷಣಶ್ಚ ಧರ್ಮಾತ್ಮಾ ಸರ್ವೇ ತೇ ಬಾಷ್ಪವಿಕ್ಲವಾಃ ॥ ೨೭

ಸರ್ವೇ ಚ ತೇ ಬಾಷ್ಪಕಲಾಃ ಸಾಶ್ರುನೇತ್ರಾ ವಿಚೇತಸಃ ।
ಸಂಮೂಢಾ ಇವ ದುಃಖೇನ ತ್ಯಜಂತೋ ರಾಘವಂ ತದಾ ॥ ೨೮

---

ಏಕೆಂದರೆ, ಪ್ರತ್ಯುಪಕಾರವನ್ನು ಮಾಡಲಿಚ್ಛಿಸುವ ಮನುಷ್ಯನು ಉಪಕಾರಿಗೆ ವಿಪತ್ತು ಬಂದಾಗಲೇ ಸಹಾಯಮಾಡಬೇಕಾಗುವುದು!"* (೨೩) ಎಂದು ಹೇಳಿ ಶ್ರೀರಾಮನು ತನ್ನ ಕೊರಳಲ್ಲಿ ಚಂದ್ರನಂತೆ ಬೆಳಗುತ್ತಿದ್ದ ವೈಡೂರ್ಯಮಣಿ ವಿರಾಜಿತವಾದ ಮುಕ್ತಾಹಾರವನ್ನು ತೆಗೆದು ಹನುಮಂತನ ಕೊರಳಿಗೆ ಹಾಕಿದನು (೨೪) ಎದೆಯಮೇಲೆ ಮುಕ್ತಾಹಾರವು ತೊಳಗುತ್ತಿರಲು ಹನುಮಂತನು, ಶಿಖರವನ್ನೇರಿಬಂದ ಪೂರ್ಣಚಂದ್ರನಿಂದ ಯುಕ್ತನಾದ ಹಿಮಾಚಲನಾಗಿ ಕಂಗೊಳಿಸಿದನು (೨೫) ರಾಘವನ ನುಡಿಯನ್ನು ಕೇಳಿ ಬಲಾಢ್ಯರಾದ ವಾನರರು ಎದ್ದೆದ್ದು ಬಂದು ಆತನ ಪಾದಗಳಿಗೆ ತಲೆಬಾಗಿ ವಂದಿಸಿ ಹೊರಡಲಾರಂಭಿಸಿದರು. ಧರ್ಮಾತ್ಮನಾದ ರಾಘವನು ಸುಗ್ರೀವನನ್ನೂ ವಿಭೀಷಣನನ್ನೂ ದೃಢವಾಗಿ ಆಲಿಂಗಿಸಿಕೊಂಡನು ಎಲ್ಲರ ಕಣ್ಣುಗಳೂ ಒದ್ದೆಯಾದವು (೨೬-೨೭) ಕಣ್ಣೀರು ಒಸರಿತು ಶ್ರೀರಾಮನನ್ನು ಅಗಲಿಹೋಗುವೆವೆಂದು ಸಕಲರೂ ದುಃಖದಿಂದ ಕಂಬನಿದುಂಬಿ

---

* 'ವಿಪತ್ತು ಬಂದಾಗಲೇ ಪ್ರತ್ಯುಪಕಾರದ ಸಂದರ್ಭ ಒದಗುತ್ತದೆ ನಿನಗೆ ವಿಪತ್ತೇ ಬರದಿರಲಿ' ಎಂದು ಅಭಿಪ್ರಾಯ.

ಕೃತಪ್ರಸಾದಾಸ್ತೇನೈವಂ ರಾಘವೇಣ ಮಹಾತ್ಮನಾ ।
ಜಗ್ಮುಃ ಸ್ವಂ ಸ್ವಂ ಗೃಹಂ ಸರ್ವೇ ದೇಹೀ ದೇಹಮಿವ ತ್ಯಜನ್ ॥ ೨೯

ತತಸ್ತು ತೇ ರಾಕ್ಷಸಋಕ್ಷವಾನರಾಃ
ಪ್ರಣಮ್ಯ ರಾಮಂ ರಘುವಂಶವರ್ಧನಮ್ ।
ವಿಯೋಗಜಾಶ್ರುಪ್ರತಿಪೂರ್ಣಲೋಚನಾಃ
ಪ್ರತಿಪ್ರಯಾತಾಸ್ತು ಯಥಾ ನಿವಾಸಿನಃ ॥ ३೦

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತ್ವಾರಿಂಶಃ ಸರ್ಗಃ



ದುಮ್ಮಾನಗೊಂಡು ದಿಙ್ಮೂಢರಾದರು ಶ್ರೀರಾಮನಿಂದ ಅನುಗೃಹೀತರಾದ ಅವರೆಲ್ಲರೂ ಆತ್ಮವು ದೇಹವನ್ನು ತ್ಯಜಿಸುವಂತೆ ಆ ಮಹಾತ್ಮನಿಂದ ಬೀಳ್ಕೊಂಡು ತಮ್ಮ ತಮ್ಮ ಸ್ಥಳಗಳಿಗೆ ತೆರಳಲನುವಾದರು (೨೮-೨೯). ರಾಕ್ಷಸಭಲ್ಲೂಕವಾನರರು ರಘುವಂಶತಿಲಕನಾದ ಶ್ರೀರಾಮಚಂದ್ರನಿಗೆ ನಮಸ್ಕರಿಸಿ, ಸದಾ ಅಯೋಧ್ಯಾ ನಿವಾಸಿಗಳೋ ಎಂಬಂತೆ ಅಭಿಮಾನ ಗೊಂಡವರಾಗಿ, ಶ್ರೀರಾಮನ ವಿರಹದಿಂದ ಕಣ್ಣೀರು ಒಸರುತ್ತಿರಲು, ತಮ್ಮ ದೇಶಗಳಿಗೆ ಪ್ರಯಾಣಮಾಡಿದರು * (३೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತನೆಯ ಸರ್ಗ



* ಯುದ್ಧಕಾಂಡದ ಕಡೆಯಲ್ಲಿ ವಾನರಾದಿಗಳನ್ನು ಕಳಿಸಿದ ವರ್ಣನೆ ಕಾಂಡ ಸಮಾಪ್ತಿಯನ್ನು ತಿಳಿಸುವುದಕ್ಕಾಗಿ ವಸ್ತುತಃ ಅವರನ್ನು ಕಳಿಸಿದ್ದು ಈಗಲೇ ಎಂದು ತಿಳಿಯಬೇಕು.

*

## ಏಕಚತ್ವಾರಿಂಶಃ ಸರ್ಗಃ

### ಪುಷ್ಪಕಪುನರಭ್ಯನುಜ್ಞಾ

ವಿಸೃಜ್ಯ ಚ ಮಹಾಬಾಹುರೃಕ್ಷವಾನರರಾಕ್ಷಸಾನ್ ।
ಭ್ರಾತೃಭಿಃ ಸಹಿತೋ ರಾಮಃ ಪ್ರಮುಮೋದ ಸುಖಂ ಸುಖೀ ॥ ೧

ಅಥಾಪರಾಹ್ಣಸಮಯೇ ಭ್ರಾತೃಭಿಃ ಸಹ ರಾಘವಃ ।
ಶುಶ್ರಾವ ಮಧುರಾಂ ವಾಣೀಮಂತರಿಕ್ಷಾತ್ ಪ್ರಭಾಷಿತಾಮ್ ॥ ೨

ಸೌಮ್ಯ ರಾಮ ನಿರೀಕ್ಷಸ್ವ ಸೌಮ್ಯೇನ ವದನೇನ ಮಾಮ್ ।
ಕುಬೇರಭವನಾತ್ ಪ್ರಾಪ್ತಂ ವಿದ್ಧಿ ಮಾಂ ಪುಷ್ಪಕಂ ಪ್ರಭೋ ॥ ೩

ತವ ಶಾಸನಮಾಜ್ಞಾಯ ಗತೋಽಸ್ಮಿ ಧನದಂ ಪ್ರತಿ ।
ಉಪಸ್ಥಾತುಂ ನರಶ್ರೇಷ್ಠ ಸ ಚ ಮಾಂ ಪ್ರತ್ಯಭಾಷತ ॥ ೪

ನಿರ್ಜಿತಸ್ತ್ವಂ ನರೇಂದ್ರೇಣ ರಾಘವೇಣ ಮಹಾತ್ಮನಾ ।
ನಿಹತ್ಯ ಯುಧಿ ದುರ್ಧರ್ಷಂ ರಾವಣಂ ರಾಕ್ಷಸೇಶ್ವರಮ್ ॥ ೫

## ಸರ್ಗ ೪೧

### ಕುಬೇರನ ಆಜ್ಞೆಯಿಂದ ಪುಷ್ಪಕ ವಿಮಾನದ ಆಗಮನ
### ಶ್ರೀರಾಮನು ಅದನ್ನು ಹಿಂದಕ್ಕೆ ಕಳಿಸುವುದು

ಮಹಾಬಾಹುವಾದ ಶ್ರೀರಾಮನು ಭಲ್ಲೂಕವಾನರರಾಕ್ಷಸರನ್ನು ಕಳಿಸಿಕೊಟ್ಟು ತನ್ನ ತಮ್ಮಂದಿರೊಡನೆ ಸುಖವಾಗಿದ್ದನು ಹೀಗಿರಲು ಅಪರಾಹ್ಣ ಸಮಯದಲ್ಲಿ ಸೋದರರೊಡನೆ ಕುಳಿತಿರುವಾಗ ಅಂತರಿಕ್ಷದಿಂದ ಒಂದು ಮಧುರವಾದ ನುಡಿ ಅವನಿಗೆ ಕೇಳಿಸಿತು (೧-೨). "ಸೌಮ್ಯ-ಶ್ರೀರಾಮ, ಸೌಮ್ಯವದನದಿಂದ ಇತ್ತ ನೋಡು ನಾನು ಕುಬೇರಭವನದಿಂದ ಬಂದ ಪುಷ್ಪಕವಿಮಾನವೆಂದು ತಿಳಿ ಹೇ ಪ್ರಭು, ನಿನ್ನ ಆಜ್ಞೆಯಂತೆ ನಾನು ಕುಬೇರನ ಸೇವೆಗಾಗಿ ಅವನ ಬಳಿಗೆ ಹೋದೆನು (೩-೪) ಆತನು ನನ್ನನ್ನು ನೋಡಿ 'ಎಲೈ ಪುಷ್ಪಕವೆ, ಮಹಾತ್ಮನಾದ ರಾಘವನು ರಾಕ್ಷಸೇಶ್ವರನಾದ

ಮಮಾಪಿ ಪರಮಾ ಪ್ರೀತಿರ್ಹತೇ ತಸ್ಮಿನ್ ದುರಾತ್ಮನಿ ।
ರಾವಣೇ ಸಗಣೇ ಚೈವ ಸಪುತ್ರೇ ಸಹಬಾಂಧವೇ ॥ ೬

ಸ ತ್ವಂ ರಾಮೇಣ ಲಂಕಾಯಾಂ ನಿರ್ಜಿತಃ ಪರಮಾತ್ಮನಾ ।
ವಹ ಸೌಮ್ಯ ತಮೇವ ತ್ವಮಹಮಾಜ್ಞಾಪಯಾಮಿ ತೇ ॥ ೭

ಪರಮೋ ಹ್ಯೇಷ ಮೇ ಕಾಮೋ ಯತ್ತ್ವಂ ರಾಘವನಂದನಮ್ ।
ವಹೇರ್ಲೋಕಸ್ಯ ಸಂಯಾನಂ ಗಚ್ಛಸ್ವ ವಿಗತಜ್ವರಃ ॥ ೮

ಸೋಽಹಂ ಶಾಸನಮಾಜ್ಞಾಯ ಧನದಸ್ಯ ಮಹಾತ್ಮನಃ ।
ತ್ವತ್ಸಕಾಶಮನುಪ್ರಾಪ್ತೋ ನಿರ್ವಿಶಂಕಃ ಪ್ರತೀಚ್ಛ ಮಾಮ್ ॥ ೯

ಅಧೃಷ್ಯಃ ಸರ್ವಭೂತಾನಾಂ ಸರ್ವೇಷಾಂ ಧನದಾಜ್ಞಯಾ ।
ಚರಾಮ್ಯಹಂ ಪ್ರಭಾವೇಣ ತವಾಜ್ಞಾಂ ಪರಿಪಾಲಯನ್ ॥ ೧೦

ಏವಮುಕ್ತಸ್ತದಾ ರಾಮಃ ಪುಷ್ಪಕೇಣ ಮಹಾಬಲಃ ।
ಉವಾಚ ಪುಷ್ಪಕಂ ದೃಷ್ಟ್ವಾ ವಿಮಾನಂ ಪುನರಾಗತಮ್ ॥ ೧೧

---

ರಾವಣನನ್ನು ಯುದ್ಧದಲ್ಲಿ ಸಂಹರಿಸಿ ನಿನ್ನನ್ನು ಪಡೆದಿದ್ದಾನೆ ದುರಾತ್ಮನಾದ ರಾವಣನು ಪುತ್ರಾದಿಪರಿವಾರದೊಂದಿಗೆ ಹತನಾದ್ದರಿಂದ ನನಗೂ ಬಹಳ ಆನಂದವಾಗಿದೆ (೫-೬). ಪರಮಾತ್ಮನಾದ ಶ್ರೀರಾಮನಿಂದ ನೀನು ಲಂಕೆಯಲ್ಲಿ ನಿರ್ಜಿತನಾಗಿರುವೆ ಆದ್ದರಿಂದ, ಸೌಮ್ಯ, ನೀನು ಶ್ರೀರಾಮನ ವಾಹನವಾಗಿ ಸೇವೆಯನ್ನು ಸಲ್ಲಿಸುತ್ತಿರು ಇದು ನನ್ನ ಆಜ್ಞೆ. ಸಕಲ ಲೋಕಗಳಿಗೂ ತಾರಕನಾದ ರಘುನಂದನನನ್ನು ನೀನು ಹೊತ್ತು ಸಂಚರಿಸಬೇಕೆಂಬುದು ನನ್ನ ತೀವ್ರಾಭಿಲಾಷೆ ಆದ್ದರಿಂದ ನಿಶ್ಚಿಂತೆಯಿಂದ ಹೋಗು' ಎಂದನು (೭-೮) ಮಹಾತ್ಮನಾದ ಕುಬೇರನ ಅಪ್ಪಣೆಯಿಂದ ಮತ್ತೆ ನಾನು ನಿಶ್ಶಂಕೆಯಿಂದ ನಿನ್ನ ಬಳಿಗೆ ಬಂದಿದ್ದೇನೆ ನನ್ನನ್ನು ಸ್ವೀಕರಿಸು. ತೇಜಸ್ಸಿನಿಂದ ಸಕಲ ಪ್ರಾಣಿಗಳಿಗೂ ದುರ್ಧರ್ಷನಾದ ನಾನು ಕುಬೇರನ ಅಪ್ಪಣೆಯಂತೆ ನಿನ್ನ ಆಜ್ಞಾನುಸಾರವಾಗಿ ಸಂಚರಿಸುವೆನು" (೯-೧೦) ಈ ನುಡಿಯನ್ನು ಕೇಳಿ ಶ್ರೀರಾಮನು ಹಿಂದಿರುಗಿ ಬಂದ ಆ ಪುಷ್ಪಕವಿಮಾನ

ಯದ್ಯೇವಂ ಸ್ವಾಗತಂ ತೇಽಸ್ತು ವಿಮಾನವರ ಪುಷ್ಪಕ ।
ಆನುಕೂಲ್ಯಾದ್ಧನೇಶಸ್ಯ ವೃತ್ತದೋಷೋ ನ ನೋ ಭವೇತ್ ॥ ೧೨

ಲಾಜೈಶ್ಚೈವ ತಥಾ ಪುಷ್ಪೈರ್ಧೂಪೈಶ್ಚೈವ ಸುಗಂಧಿಭಿಃ ।
ಪೂಜಯಿತ್ವಾ ಮಹಾಬಾಹೂ ರಾಘವಃ ಪುಷ್ಪಕಂ ತದಾ ॥ ೧೩

ಗಮ್ಯತಾಮಿತಿ ಚೋವಾಚ ಆಗಚ್ಛ ತ್ವಂ ಸ್ಮರೇ ಯದಾ ।
ಸಿದ್ಧಾನಾಂ ಚ ಗತೌ ಸೌಮ್ಯ ಮಾ ವಿಷಾದೇನ ಯೋಜಯ ॥ ೧೪

ಪ್ರತಿಘಾತಶ್ಚ ತೇ ಮಾ ಭೂದ್ಯಥೇಷ್ಟಂ ಗಚ್ಛತೋ ದಿಶಃ ।
ಏವಮಸ್ತ್ವಿತಿ ರಾಮೇಣ ಪೂಜಯಿತ್ವಾ ವಿಸರ್ಜಿತಮ್ ॥ ೧೫

ಅಭಿಪ್ರೇತಾಂ ದಿಶಂ ತಸ್ಮಾತ್ ಪ್ರಾಯಾತ್ತತ್ ಪುಷ್ಪಕಂ ತದಾ ।
ಏವಮಂತರ್ಹಿತೇ ತಸ್ಮಿನ್ ಪುಷ್ಪಕೇ ಸುಕೃತಾತ್ಮನಿ ॥ ೧೬

ಭರತಃ ಪ್ರಾಂಜಲಿರ್ವಾಕ್ಯಮುವಾಚ ರಘುನಂದನಮ್ ।
ವಿಬುಧಾತ್ಮನಿ ದೃಶ್ಯಂತೇ ತ್ವಯಿ ವೀರ ಪ್ರಶಾಸತಿ ॥ ೧೭

---

ವನ್ನು ನೋಡಿ "ಎಲೈ ಪುಷ್ಪಕವೆ, ಹಾಗಾದರೆ ನಿನಗೆ ಸ್ವಾಗತ ಆದರೆ ಕುಬೇರನ ಸಂತೋಷಕ್ಕಾಗಿ ನಾನು ಸದಾಚಾರವನ್ನು ಉಲ್ಲಂಘಿಸಲಾರೆ ಆ ದೋಷವು ನನಗೆ ಬರಬಾರದು" ಎಂದನು (೧೧-೧೨) ಅನಂತರ ರಾಘವನು ಲಾಜಪುಷ್ಪಧೂಪಾದಿಗಳಿಂದ ಪುಷ್ಪಕವನ್ನು ಪೂಜಿಸಿ "ಸೌಮ್ಯ–ಪುಷ್ಪಕ, ನೀನು ಹೋಗಬಹುದು ನಿನ್ನನ್ನು ಸ್ಮರಿಸಿಕೊಂಡಾಗ ಆಗಮಿಸು ಸಿದ್ಧಪುರುಷರು ಗಗನದಲ್ಲಿ ಸಂಚರಿಸುತ್ತಿರುವಾಗ, ಅವರಿಗೆ ಅಡ್ಡಿಯಾಗಬೇಡ (೧೩-೧೪). ಸ್ವೇಚ್ಛೆಯಿಂದ ಸಂಚರಿಸುವಾಗ ನಿನಗೆ ಯಾವ ಆತಂಕವೂ ಬರದಿರಲಿ" ಎಂದನು ವಿಮಾನವು ಶ್ರೀರಾಮನ ಸತ್ಕಾರವನ್ನು ಸ್ವೀಕರಿಸಿ 'ಹಾಗೆಯೇ ಆಗಲಿ' ಎಂದು ಹೇಳಿ ತನಗೆ ಇಷ್ಟವಾದ ದಿಕ್ಕಿಗೆ ಹೊರಟು ಹೋಯಿತು (೧೫) ಪುಣ್ಯಶಾಲಿಯಾದ ವಿಮಾನವು ನಿರ್ಗಮಿಸಿದಮೇಲೆ ಭರತನು ಪ್ರಾಂಜಲಿಯಾಗಿ ಶ್ರೀರಾಮನನ್ನು ಕುರಿತು "ರಘುನಂದನ, ದೇವಸ್ವರೂಪನಾದ ನೀನು ರಾಜ್ಯಭಾರವನ್ನು ಕೈಗೊಳ್ಳಲಾಗಿ, ಅಮಾನುಷ

ಅಮಾನುಷಾಣಾಂ ಸತ್ತ್ವಾನಾಂ ವ್ಯಾಹೃತಾನಿ ಮುಹುರ್ಮುಹುಃ ।
ಅನಾಮಯಶ್ಚ ಸತ್ತ್ವಾನಾಂ ಸಾಗ್ರೋ ಮಾಸೋ ಗತೋ ಹ್ಯಯಮ್

ಜೀರ್ಣಾನಾಮಪಿ ಸತ್ತ್ವಾನಾಂ ಮೃತ್ಯುರ್ನಾಯಾತಿ ರಾಘವ ।
ಅರೋಗಪ್ರಸವಾ ನಾರ್ಯೋ ವಪುಷ್ಮಂತೋ ಹಿ ಮಾನವಾಃ ॥ ೧೯

ಹರ್ಷಶ್ಚಾಭ್ಯಧಿಕೋ ರಾಜನ್ ಜನಸ್ಯ ಪುರವಾಸಿನಃ ।
ಕಾಲೇ ವರ್ಷತಿ ಪರ್ಜನ್ಯಃ ಪಾತಯನ್ನಮೃತಂ ಪಯಃ ॥ ೨೦

ವಾತಾಶ್ಚಾಪಿ ಪ್ರವಾಂತ್ಯೇತೇ ಸ್ಪರ್ಶಯುಕ್ತಾಃ ಸುಖಾಃ ಶಿವಾಃ ।
ಈದೃಶೋ ನಶ್ಚಿರಂ ರಾಜಾ ಭವೇದಿತಿ ನರೇಶ್ವರ ॥ ೨೧

ಕಥಯಂತಿ ಪುರೇ ರಾಜನ್ ಪೌರಜಾನಪದಾಸ್ತಥಾ ।
ಏತಾ ವಾಚಃ ಸುಮಧುರಾ ಭರತೇನ ಸಮೀರಿತಾಃ ॥ ೨೨

ಶ್ರುತ್ವಾ ರಾಮೋ ಮುದಾ ಯುಕ್ತೋ ಬಭೂವ ನೃಪಸತ್ತಮಃ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕಚತ್ವಾರಿಂಶಃ ಸರ್ಗಃ

---

ಗಳಾದ ಪುಷ್ಪಕಾದಿಗಳೂ ಮಾತಾಡುವುದು ಕೇಳಿಬರುತ್ತಿದೆ! ಪ್ರಾಣಿಗಳಿಗೆ ಯಾವ ರೋಗಬಾಧೆಯೂ ಕಂಡುಬರುವುದಿಲ್ಲ ನೀನು ಪಟ್ಟಾಭಿಷಿಕ್ತನಾಗಿ ಒಂದು ತಿಂಗಳಿಗಿಂತ ಹೆಚ್ಚಾಗಿ ಕೆಲವು ದಿನಗಳು ಮಾತ್ರ ಕಳೆದವು (೧೬-೧೮) ಮುಪ್ಪಿನಿಂದ ಜೀರ್ಣವಾದ ಪ್ರಾಣಿಗಳಿಗೂ ಸಾವು ಬರುತ್ತಿಲ್ಲ. ಸ್ತ್ರೀಯರಿಗೆ ಸುಖ ಪ್ರಸವವಾಗುತ್ತಿದೆ ಜನರು ಆರೋಗ್ಯದಿಂದ ದೃಢಕಾಯರಾಗಿದ್ದಾರೆ (೧೯). ಮಹಾರಾಜ, ಪೌರರಿಗೆ ಅತ್ಯಂತ ಹರ್ಷವಾಗಿದೆ ಮೋಡವು ಯುಕ್ತಕಾಲದಲ್ಲಿ ಅಮೃತಮಯವಾದ ಮಳೆಯನ್ನು ಸುರಿಸುತ್ತಿದೆ (೨೦) ಸುಖಕರವಾದ ಗಾಳಿ ಮೃದುವಾಗಿ ಬೀಸುತ್ತಿದೆ 'ಇಂತಹ ರಾಜನು ಚಿರಕಾಲದವರೆಗೆ ಬಾಳಲಿ' ಎಂದು ಪ್ರಜೆಗಳು ಹೇಳಿಕೊಳ್ಳುತ್ತಿದ್ದಾರೆ" ಎಂದು ನುಡಿದನು ಭರತನಾಡಿದ ಈ ಮೃದುಮಧುರವಾಣಿಯನ್ನಾಲಿಸಿ ನೃಪಸತ್ತಮನಾದ ಶ್ರೀರಾಮಚಂದ್ರನು ಸಂಪ್ರೀತನಾದನು (೨೧-೨೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತೊಂದನೆಯ ಸರ್ಗ

## ದ್ವಿಚತ್ವಾರಿಂಶಃ ಸರ್ಗಃ

### ರಾಮಸೀತಾವಿಹಾರಃ

ಸ ವಿಸೃಜ್ಯ ತತೋ ರಾಮಃ ಪುಷ್ಪಕಂ ಹೇಮಭೂಷಿತಮ್ ।
ಪ್ರವಿವೇಶ ಮಹಾಬಾಹುರಶೋಕವನಿಕಾಂ ತದಾ ॥ ೧

ಚಂದನಾಗರುಚೂತೈಶ್ಚ ತುಂಗಕಾಲೇಯಕೈರಪಿ ।
ದೇವದಾರುವನೈಶ್ಚಾಪಿ ಸಮಂತಾದುಪಶೋಭಿತಮ್ ॥ ೨

ಚಂಪಕಾಶೋಕಪುನ್ನಾಗಮಧೂಕಪನಸಾಸನೈಃ ।
ಶೋಭಿತಾಂ ಪಾರಿಜಾತೈಶ್ಚ ವಿಧೂಮಜ್ವಲನಪ್ರಭೈಃ ॥ ೩

ಲೋಧ್ರನೀಪಾರ್ಜುನೈರ್ನಾಗೈಃ ಸಪ್ತಪರ್ಣಾತಿಮುಕ್ತಕೈಃ ।
ಮಂದಾರಕದಲೀಗುಲ್ಮಲತಾಜಾಲಸಮಾವೃತಾಮ್ ॥ ೪

ಪ್ರಿಯಂಗುಭಿಃ ಕದಂಬೈಶ್ಚ ತಥಾ ಚ ಬಕುಲೈರಪಿ ।
ಜಂಬೂಭಿರ್ದಾಡಿಮೈಶ್ಚೈವ ಕೋವಿದಾರೈಶ್ಚ ಶೋಭಿತಾಮ್ ॥ ೫

## ಸರ್ಗ ೪೨

### ಶ್ರೀರಾಮನು ಸೀತಾದೇವಿಯೊಡನೆ ವಿಹರಿಸುವುದು ಸೀತೆಯ ಬಯಕೆ

ಶ್ರೀರಾಮನು ಹೇಮಭೂಷಿತವಾದ ಪುಷ್ಪಕವಿಮಾನವನ್ನು ಕಳಿಸಿ, ಅಶೋಕವನಕ್ಕೆ ಹೋದನು ಆ ಉದ್ಯಾನವನವಾದರೋ ಶ್ರೀಗಂಧ, ಅಗರು, ಮಾವು, ಎತ್ತರವಾಗಿ ಬೆಳೆದ ಕೃಷ್ಣಚಂದನ, ದೇವದಾರು ವೃಕ್ಷಗಳಿಂದ ಸುತ್ತಲೂ ಶೋಭಿತವಾಗಿತ್ತು (೧-೨) ಸಂಪಗೆ, ಅಶೋಕ, ಪುನ್ನಾಗ, ಹಿಪ್ಪೆ, ಹಲಸು, ಹೊನ್ನೆ, ಪಾರಿಜಾತ ಮರಗಳು ಬೆಳೆದಿದ್ದವು. ಹೊಗೆಯಿಲ್ಲದ ಬೆಂಕಿಯಂತೆ ಬೆಳಗುವ ಲೋಧ್ರ, ಈಚಲು, ಮತ್ತಿ, ನಾಗಕೇಸರಗಳೂ, ಏಳೆಲೆ ಬಾಳೆ, ತಾಳೆ, ಮಂದಾರ, ಬಾಳೆ ಮತ್ತು ವಿವಿಧ ಜಾತಿಯ ಪೊದೆ, ಬಳ್ಳಿಗಳೂ ಶೋಭಿಸುತ್ತಿದ್ದವು (೩-೪) ಪ್ರಿಯಂಗು, ಧೂಲೀಕದಂಬ, ಬಕುಳ, ನೇರಿಳೆ, ದಾಳಿಂಬೆ, ಕಾಂಚಾಳಗಿಡಗಳು ರಮ್ಯ

ಸರ್ವದಾ ಕುಸುಮೈ ರಮ್ಯೈಃ ಫಲವದ್ಭಿರ್ಮನೋರಮೈಃ ।
ದಿವ್ಯಗಂಧರಸೋಪೇತೈಸ್ತರುಣಾಂಕುರಪಲ್ಲವೈಃ ॥ ೬

ತಥೈವ ತರುಭಿರ್ದಿವ್ಯೈಃ ಶಿಲ್ಪಿಭಿಃ ಪರಿಕಲ್ಪಿತೈಃ ।
ಚಾರುಪಲ್ಲವಪುಷ್ಪಾಢ್ಯೈರ್ಮತ್ತಭ್ರಮರಸಂಕುಲೈಃ ॥ ೭

ಕೋಕಿಲೈರ್ಭೃಂಗರಾಜೈಶ್ಚ ನಾನಾವರ್ಣೈಶ್ಚ ಪಕ್ಷಿಭಿಃ ।
ಶೋಭಿತಾಂ ಶತಶಶ್ಚಿತ್ರಾಂ ಚೂತವೃಕ್ಷಾವತಂಸಕೈಃ ॥ ೮

ಶಾತಕುಂಭನಿಭಾಃ ಕೇಚಿತ್ ಕೇಚಿದಗ್ನಿಶಿಖೋಪಮಾಃ ।
ನೀಲಾಂಜನನಿಭಾಶ್ಚಾನ್ಯೇ ಭಾಂತಿ ತತ್ರ ತ್ಯಪಾದಪಾಃ ॥ ೯

ಸುರಭೀಣಿ ಚ ಪುಷ್ಪಾಣಿ ಮಾಲ್ಯಾನಿ ವಿವಿಧಾನಿ ಚ ।
ದೀರ್ಘಿಕಾ ವಿವಿಧಾಕಾರಾಃ ಪೂರ್ಣಾಃ ಪರಮವಾರಿಣಾ ॥ ೧೦

ಮಾಣಿಕ್ಯಕೃತಸೋಪಾನಾಃ ಸ್ಫಟಿಕಾಂತರಕುಟ್ಟಿಮಾಃ ।
ಫುಲ್ಲಪದ್ಮೋತ್ಪಲವನಾಶ್ಚಕ್ರವಾಕೋಪಶೋಭಿತಾಃ ॥ ೧೧

---

ವಾಗಿ ಬೆಳೆದಿದ್ದವು ಮರಗಳು ದಿವ್ಯಗಂಧ ರಸಗಳನ್ನು ಸೂಸುವ ಹೂ ಹಣ್ಣು ಗಳಿಂದ ಮನೋಹರವಾಗಿದ್ದವು ಕೊನರು, ಚಿಗುರುಗಳಿಂದ ವಿರಾಜಿಸುತ್ತಿದ್ದವು (೫-೬) ಹಾಗೆಯೇ ಕೆಲವು ಮರಗಳನ್ನು ತೋಟಗಾರರು ಪರಿಷ್ಕೃತವಾಗಿ ಕತ್ತರಿಸಿ ಬೆಳೆಸಿದ್ದರು. ಮದಿಸಿದ ದುಂಬಿಗಳು ಮುಸುಕುತ್ತಿದ್ದ ಚಿಗುರು, ಹೂಗಳು ರಮಣೀಯವಾಗಿ ಒಪ್ಪುತ್ತಿದ್ದವು ಕೋಗಿಲೆಗಳೂ ದೊಡ್ಡ ದುಂಬಿಗಳೂ ಬಣ್ಣಬಣ್ಣದ ಹಕ್ಕಿಗಳೂ ಹಾರಾಡುತ್ತಿದ್ದವು ಮಾವಿನ ಮರದ ಮೇಲೆ ಕುಳಿತ ಹಕ್ಕಿಗಳು ಚಿತ್ರವರ್ಣದ ಶಿರೋಭೂಷಣಗಳಂತಿದ್ದವು (೭-೮). ಆ ಉಪವನದಲ್ಲಿದ್ದ ಮರಗಳಲ್ಲಿ ಕೆಲವು ಸುವರ್ಣಮಯಗಳಂತೆಯೂ ಅಗ್ನಿಜ್ವಾಲೆಯಂತೆಯೂ ಕೆಲವು ಕಪ್ಪುಕಾಡಿಗೆ ಬಳಿದವುಗಳಂತೆಯೂ ಕಂಗೊಳಿಸುತ್ತಿದ್ದವು ಬಗೆಬಗೆಯ ಹೂಗಳೂ ಹೂಗೊಂಚಲುಗಳೂ ಪರಿಮಳವನ್ನು ಬೀರುತ್ತಿದ್ದವು ವಿವಿಧಾಕೃತಿಯ ಕೊಳಗಳು ತಿಳಿನೀರಿನಿಂದ ತುಂಬಿದ್ದವು (೯-೧೦) ಆ ಕೊಳಗಳಿಗೆ ಮಾಣಿಕ್ಯಮಣಿಗಳಿಂದ ಮೆಟ್ಟಲನ್ನು ಕಟ್ಟಲಾಗಿತ್ತು ಸುತ್ತಲೂ ಸ್ಫಟಿಕಮಯವಾದ ನೆಲವಿತ್ತು. ಕೊಳದಲ್ಲಿ ತಾವರೆಗಳೂ ನೈದಿಲೆಗಳೂ ಅರಳಿದ್ದವು ಚಕ್ರವಾಕ ಪಕ್ಷಿಗಳು ಹಾರಾಡುತ್ತಿದ್ದವು.

ದಾತ್ಯೂಹಶುಕಸಂಘುಷ್ಟಾ ಹಂಸಸಾರಸನಾದಿತಾಃ ।
ತರುಭಿಃ ಪುಷ್ಪವದ್ಭಿಶ್ಚ ತೀರಜೈರುಪಶೋಭಿತಾಃ ॥ ೧೨

ಪ್ರಾಕಾರೈರ್ವಿವಿಧಾಕಾರೈಃ ಶೋಭಿತಾಶ್ಚ ಶಿಲಾತಲೈಃ ।
ತತ್ರೈವ ಚ ವನೋದ್ದೇಶೇ ವೈಡೂರ್ಯಮಣಿಸಂನಿಭೈಃ ॥ ೧೩

ಶಾದ್ವಲೈಃ ಪರಮೋಪೇತಾಂ ಪುಷ್ಪಿತದ್ರುಮಕಾನನಾಮ್ ।
ತತ್ರ ಸಂಘರ್ಷಜಾತಾನಾಂ ವೃಕ್ಷಾಣಾಂ ಪುಷ್ಪಶಾಲಿನಾಮ್ ॥ ೧೪

ಪ್ರಸ್ತರಾಃ ಪುಷ್ಪಶಬಲಾ ನಭಸ್ತಾರಾಗಣೈರಿವ ।
ನಂದನಂ ಹಿ ಯಥೇಂದ್ರಸ್ಯ ಬ್ರಾಹ್ಮಂ ಚೈತ್ರರಥಂ ಯಥಾ ॥ ೧೫

ತಥಾಭೂತಂ ಹಿ ರಾಮಸ್ಯ ಕಾನನಂ ಸಂನಿವೇಶನಮ್ ।
ಬಹ್ವಾಸನಗೃಹೋಪೇತಾಂ ಲತಾಗೃಹಸಮಾವೃತಾಮ್ ॥ ೧೬

ಅಶೋಕವನಿಕಾಂ ಸ್ಫೀತಾಂ ಪ್ರವಿಶ್ಯ ರಘುನಂದನಃ ।
ಆಸನೇ ಚ ಶುಭಾಕಾರೇ ಪುಷ್ಪಪ್ರಕರಭೂಷಿತೇ ॥ ೧೭

---

ದಾತ್ಯೂಹ ಮತ್ತು ಗಿಳಿಗಳ ಕೂಗು ಕೇಳಿಸುತ್ತಿತ್ತು. ಹಂಸ, ಸಾರಸಗಳ ಕೂಗು ಪ್ರತಿಧ್ವನಿಸುತ್ತಿತ್ತು ಅವುಗಳ ದಡದಲ್ಲಿ ಹೂವರಳಿದ ಬಳ್ಳಿಗಳು ಶೋಭಿಸುತ್ತಿದ್ದವು (೧೧-೧೨) ವಿವಿಧಾಕೃತಿಯ ಪ್ರಾಕಾರಗಳಿಂದಲೂ ಶಿಲಾತಲಗಳಿಂದಲೂ ಕೊಳಗಳು ರಮ್ಯವಾಗಿದ್ದವು ಸುತ್ತಲೂ ವೈಡೂರ್ಯ ಮಣಿಗಳಂತಿರುವ ಹಸಿರು ಹುಲ್ಲು ಬೆಳೆದಿತ್ತು ಹೂವರಳಿದ ಮರಗಳು ಕಂಗೊಳಿಸುತ್ತಿದ್ದವು ಸ್ಪರ್ಧೆಯಿಂದಲೋ ಎಂಬಂತೆ ಪುಷ್ಪಿತ ವೃಕ್ಷಗಳು ಒತ್ತಾಗಿ ಬೆಳೆದಿದ್ದವು (೧೩-೧೪). ಆ ವೃಕ್ಷಗಳಿಂದುದುರಿದ ಹೂಗಳಿಂದ ಶೋಭಿತವಾದ ಕಲ್ಲಿನ ನೆಲವು, ತಾರೆಗಳಿಂದ ಯುಕ್ತವಾದ ಗಗನದಂತೆ ರಮ್ಯವಾಗಿತ್ತು ಆ ಉಪವನವು ಇಂದ್ರನ ನಂದನವೋ ಬ್ರಹ್ಮನ ಉದ್ಯಾನವೋ ಕುಬೇರನ ಚೈತ್ರರಥವೋ ಎಂಬಂತೆ ವಿರಾಜಿಸುತ್ತಿತ್ತು (೧೫). ಶ್ರೀರಾಮನ ಅಶೋಕವನವು ಅಷ್ಟು ಮನೋಹರವಾಗಿತ್ತು ಅಲ್ಲಿ ವಿವಿಧ ಪೀಠಗಳನ್ನೂ ಲತಾಗೃಹಗಳನ್ನೂ ನಿರ್ಮಿಸಲಾಗಿತ್ತು ವಿಶಾಲವಾದ ಅಶೋಕವನವನ್ನು ರಘುನಂದನನು ಸೀತೆಯೊಡನೆ ಪ್ರವೇಶಿಸಿ, ರತ್ನಗಂಬಳಿಯಿಂದಲೂ ಹೂಗಳಿಂದಲೂ ಅಲಂಕೃತವಾದ ಶುಭಾಸನದಲ್ಲಿ ಕುಳಿತನು

ಕುಥಾಸ್ತರಣಸಂವೀತೇ ರಾಮಃ ಸಂನಿಷಸಾದ ಹ ।
ಸೀತಾಮಾದಾಯ ಹಸ್ತೇನ ಮಧು ಮೈರೇಯಕಂ ಶುಚಿ ॥ ೧೮

ಪಾಯಯಾಮಾಸ ಕಾಕುತ್ಸ್ಥಃ ಶಚೀಮಿವ ಪುರಂದರಃ ।
ಮಾಂಸಾನಿ ಚ ಸುಮೃಷ್ಟಾನಿ ಫಲಾನಿ ವಿವಿಧಾನಿ ಚ ॥ ೧೯

ರಾಮಸ್ಯಾಭ್ಯವಹಾರಾರ್ಥಂ ಕಿಂಕರಾಸ್ತೂರ್ಣಮಾಹರನ್ ।
ಉಪಾನೃತ್ಯಂಶ್ಚ ರಾಜಾನಂ ನೃತ್ತಗೀತವಿಶಾರದಾಃ ॥ ೨೦

ಬಾಲಾಶ್ಚ ರೂಪವತ್ಯಶ್ಚ ಸ್ತ್ರಿಯಃ ಪಾನವಶಾನುಗಾಃ ।
ಉಪಾನೃತ್ಯಂತ ಕಾಕುತ್ಸ್ಥಂ ನೃತ್ಯಗೀತವಿಶಾರದಾಃ ॥ ೨೧

ಮನೋಽಭಿರಾಮಾ ರಾಮಾಸ್ತಾ ರಾಮೋ ರಮಯತಾಂ ವರಃ ।
ರಮಯಾಮಾಸ ಧರ್ಮಾತ್ಮಾ ನಿತ್ಯಂ ಪರಮಭೂಷಿತಃ ॥ ೨೨

ಸ ತಯಾ ಸೀತಯಾ ಸಾರ್ಧಮಾಸೀನೋ ವಿರರಾಜ ಹ ।
ಅರುಂಧತ್ಯಾ ಸಹಾಸೀನೋ ವಸಿಷ್ಠ ಇವ ತೇಜಸಾ ॥ ೨೩

---

ಶುಚಿಯಾದ *ಮೈರೇಯಕವೆಂಬ ಮಧುವನ್ನು ದೇವೇಂದ್ರನು ಶಚಿಗೆ ಕುಡಿಸಿದಂತೆ ತನ್ನ ಕೈಯಿಂದ ಜಾನಕಿಗೆ ಕುಡಿಸಿದನು (೧೭-೧೮) ಆಗ ಶ್ರೀರಾಮನ ಭೋಜನಕ್ಕಾಗಿ ಸೇವಕರು ಉತ್ತಮವಾದ ಮಾಂಸವನ್ನೂ ಅನೇಕ ಬಗೆಯ ಹಣ್ಣುಗಳನ್ನೂ ತಂದರು ನೃತ್ಯಗೀತಗಳಲ್ಲಿ ವಿಶಾರದರಾದ ಬಾಲಕಿಯರೂ ರೂಪವತಿಯರಾದ ಸ್ತ್ರೀಯರೂ ಪಾನದಿಂದ ಮದಾವಿಷ್ಟರಾಗಿ ಮಹಾರಾಜನಾದ ಕಾಕುತ್ಸ್ಥನೆದುರಿಗೆ ನರ್ತಿಸಿದರು (೧೯-೨೧) ಧರ್ಮಾತ್ಮನೂ ಸಮ್ಯಗಲಂಕೃತನೂ ವಿನೋದಪ್ರಿಯನೂ ಆದ ರಾಘವನು ಮನೋಹರೆಯರಾದ ಆ ಸ್ತ್ರೀಯರಿಗೆ (ಪಾರಿತೋಷಿಕಾದಿಗಳನ್ನಿತ್ತು) ಸಂತೋಷಪಡಿಸಿದನು (೨೨) ವೈದೇಹಿಯೊಡನೆ ಕುಳಿತಿದ್ದ ಶ್ರೀರಾಮನು, ಅರುಂಧತಿಯೊಡನೆ ಉಪವಿಷ್ಟರಾದ ವಸಿಷ್ಠಮಹರ್ಷಿಗಳಂತೆ ತೇಜೋವಿಶೇಷದಿಂದ ವಿರಾಜಿಸು

---

* ಮೈರೇಯಕ = ನೆಲ್ಲಿ, ಮರಾಟಮಗ್ಗು, ಬೆಲ್ಲ — ಇವುಗಳಿಂದ ಮಾಡಿದ ಒಂದು ಪೇಯ

ಏವಂ ರಾಮೋ ಮುದಾ ಯುಕ್ತಃ ಸೀತಾಂ ಸುರಸುತೋಪಮಾಮ್ ।
ರಮಯಾಮಾಸ ವೈದೇಹೀಮಹನ್ಯಹನಿ ದೇವವತ್ ॥ ೨೪

ತಥಾ ತಯೋರ್ವಿಹರತೋಃ ಸೀತಾರಾಘವಯೋಶ್ಚಿರಮ್ ।
ಅತ್ಯಕ್ರಾಮಚ್ಛುಭಃ ಕಾಲಃ ಶಿಶಿರೋ ಭೋಗದಃ ಸದಾ ॥ ೨೫

ಪ್ರಾಪ್ತಯೋರ್ವಿವಿಧಾನ್ ಭೋಗಾನತೀತಃ ಶಿಶಿರಾಗಮಃ ।
ಪೂರ್ವಾಹ್ಣೇ ಧರ್ಮಕಾರ್ಯಾಣಿ ಕೃತ್ವಾ ಧರ್ಮೇಣ ಧರ್ಮವಿತ್ ॥

ಶೇಷಂ ದಿವಸಭಾಗಾರ್ಧಮಂತಃಪುರಗತೋಽಭವತ್ ।
ಸೀತಾಪಿ ದೇವಕಾರ್ಯಾಣಿ ಕೃತ್ವಾ ಪೌರ್ವಾಹ್ಣಿಕಾನಿ ವೈ ॥ ೨೭

ಶ್ವಶ್ರೂಣಾಮಕರೋತ್ ಪೂಜಾಂ ಸರ್ವಾಸಾಮವಿಶೇಷತಃ ।
ಅಭ್ಯಗಚ್ಛತ್ತತೋ ರಾಮಂ ವಿಚಿತ್ರಾಭರಣಾಂಬರಾ ॥ ೨೮

---

ತ್ತಿದ್ದನು ಈ ಪ್ರಕಾರದಲ್ಲಿ ದೇವತೆಯಂತಿದ್ದ ರಘುನಂದನನು ಸಂಪ್ರೀತನಾಗಿ ದೇವಾಂಗನೆಯಂತಿದ್ದ ವೈದೇಹಿಯನ್ನು ಪ್ರತಿದಿನವೂ ಸಂತೋಷಪಡಿಸುತ್ತ ವಿಹರಿಸುತ್ತಿದ್ದನು (೨೩-೨೪) ಹೀಗೆ ಜಾನಕಿಯೂ ರಾಘವನೂ ವಿಹರಿಸುತ್ತ ಆನಂದದಿಂದಿರಲು, ರಮ್ಯವೂ ಭೋಗಪ್ರದವೂ ಆದ ಶಿಶಿರ ಋತು ಬಂದಿತು ಅವರೀರ್ವರೂ ವಿವಿಧ ಭೋಗಗಳನ್ನು ಅನುಭವಿಸುತ್ತಿರುವಾಗ ಶಿಶಿರಋತುವೂ* ಕಳೆಯಿತು ಹೀಗಿರಲು ಒಂದು ದಿನ ಧರ್ಮಜ್ಞನಾದ ಶ್ರೀರಾಮನು ಪೂರ್ವಾಹ್ಣದಲ್ಲಿ ಧರ್ಮಕಾರ್ಯಗಳನ್ನು ಎಂದಿನಂತೆ ವಿಧಿವತ್ತಾಗಿ ನೆರವೇರಿಸಿದನು (೨೫-೨೬) ಅನಂತರ ಉಳಿದ ದಿನಾರ್ಧವನ್ನು ಕಳೆಯಲು ಅಂತಃಪುರಕ್ಕೆ ಹೋದನು ಇತ್ತ ಜಾನಕಿಯೂ ಪೂರ್ವಾಹ್ಣದಲ್ಲಿ ದೇವಕಾರ್ಯಗಳನ್ನು ಮಾಡಿ, ಎಂದಿನಂತೆ ಯಾವ ಭೇದವನ್ನೂ ಎಣಿಸದೆ ಎಲ್ಲ ಅತ್ತೆಯರ ಶುಶ್ರೂಷೆಯಲ್ಲಿ ನಿರತಳಾಗಿದ್ದಳು ಆಮೇಲೆ ಉತ್ತಮವಾದ ಸೀರೆಯನ್ನುಟ್ಟು ವಿವಿಧಾಭರಣಗಳನ್ನು ತೊಟ್ಟು ಶ್ರೀರಾಮನ ಬಳಿಗೆ ಬಂದಳು

---

* ವಾನರರು ಅಯೋಧ್ಯೆಯಲ್ಲಿದ್ದಾಗ ಒಂದು ಶಿಶಿರಋತು ಕಳೆದಿತ್ತು (ಸ ೩೯-೨೯) ಈಗ ಇನ್ನೊಂದು ಶಿಶಿರಋತು ಕಳೆಯಿತು ಅಲ್ಲಿಗೆ ಪಟ್ಟಾಭಿಷೇಕವಾದಮೇಲೆ ಎರಡು ವರ್ಷಗಳು ಕಳೆದವು

ತ್ರಿವಿಷ್ಟಪೇ ಸಹಸ್ರಾಕ್ಷಮುಪವಿಷ್ಟಂ ಯಥಾ ಶಚೀ ।
ದೃಷ್ಟ್ವಾ ತು ರಾಘವಃ ಪತ್ನೀಂ ಕಲ್ಯಾಣೇನ ಸಮನ್ವಿತಾಮ್ ॥ ೨೯

ಪ್ರಹರ್ಷಮತುಲಂ ಲೇಭೇ ಸಾಧು ಸಾಧ್ವಿತಿ ಚಾಬ್ರವೀತ್ ।
ಅಬ್ರವೀಚ್ಚ ವರಾರೋಹಾಂ ಸೀತಾಂ ಸುರಸುತೋಪಮಾಮ್ ॥ ೩೦

ಅಪತ್ಯಲಾಭೋ ವೈದೇಹಿ ತ್ವಯಿ ಮೇ ಸಮುಪಸ್ಥಿತಃ ।
ಕಿಮಿಚ್ಛಸಿ ವರಾರೋಹೇ ಕಾಮಃ ಕಿಂ ಕ್ರಿಯತಾಂ ತವ ॥ ೩೧

ಸ್ಮಿತಂ ಕೃತ್ವಾ ತು ವೈದೇಹೀ ರಾಮಂ ವಾಕ್ಯಮಥಾಬ್ರವೀತ್ ।
ತಪೋವನಾನಿ ಪುಣ್ಯಾನಿ ದ್ರಷ್ಟುಮಿಚ್ಛಾಮಿ ರಾಘವ ॥ ೩೨

ಗಂಗಾತೀರೋಪವಿಷ್ಟಾನಾಮೃಷೀಣಾಮುಗ್ರತೇಜಸಾಮ್ ।
ಫಲಮೂಲಾಶಿನಾಂ ದೇವ ಪಾದಮೂಲೇಷು ವರ್ತಿತುಮ್ ॥ ೩೩

ಏಷ ಮೇ ಪರಮಃ ಕಾಮೋ ಯನ್ಮೂಲಫಲಭೋಜಿನಾಮ್ ।
ಅಪ್ಯೇಕರಾತ್ರಂ ಕಾಕುತ್ಸ್ಥ ನಿವಸೇಯಂ ತಪೋವನೇ ॥ ೩೪

---

(೨೭-೨೮) ಸ್ವರ್ಗಲೋಕದಲ್ಲಿ ವೈಭವದಿಂದ ಕುಳಿತ ದೇವೇಂದ್ರನ ಬಳಿಗೆ ಶಚೀದೇವಿ ಆಗಮಿಸುವಂತೆ ಆಗಮಿಸಿದಳು ಮಂಗಳಾಂಗಿಯಾದ ಧರ್ಮ ಪತ್ನಿಯನ್ನು ನೋಡಿ ರಾಘವನಿಗೆ ಅತ್ಯಂತ ಹರ್ಷವಾಯಿತು (೨೯) ಆತನು ದಿವ್ಯಸುಂದರಿಯಾದ ಜಾನಕಿಯನ್ನು ವೀಕ್ಷಿಸಿ "ಆಹಾ! ಭಲೆ!" ಎಂದು ಉದ್ಗರಿಸಿದನು ಅನಂತರ "ವೈದೇಹಿ, ನನಗೆ ನಿನ್ನಲ್ಲಿ ಸಂತಾನ ಲಾಭವು ಸಮೀಪಿಸಿದೆ! ದೇವಿ, ನಿನಗೆ ಯಾವ ಬಯಕೆಯುಂಟು? ಏನಾಗ ಬೇಕು?" ಎಂದು ಕೇಳಿದನು (೩೦-೩೧) ವೈದೇಹಿಯು ಮುಗುಳ್ನಗೆ ಬೀರಿದಳು. "ರಾಘವ, ಪವಿತ್ರವಾದ ತಪೋವನಗಳನ್ನು ನೋಡಬೇಕೆಂದು ಇಚ್ಛೆಯಾಗಿದೆ ಗಂಗಾತೀರದಲ್ಲಿ ನೆಲೆಸಿ ಫಲಮೂಲಗಳನ್ನು ತಿನ್ನುತ್ತ ತೇಜೋವಂತರಾದ ಋಷಿಗಳ ಪಾದಸಾಂನಿಧ್ಯದಲ್ಲಿ ಇರಬೇಕೆಂದು ಅಪೇಕ್ಷೆ ಯಾಗುತ್ತಿದೆ (೩೨-೩೩) ಇದೇ ನನ್ನ ಹೆಬ್ಬಯಕೆ! ಪ್ರಭು–ಶ್ರೀರಾಮ, ಒಂದು ರಾತ್ರಿಯಾದರೂ ನಾನು ತಪೋವನದಲ್ಲಿರಲು ಶಕ್ಯವಾದೀತೆ?"

ತಥೇತಿ ಚ ಪ್ರತಿಜ್ಞಾತಂ ರಾಮೇಣಾಕ್ಲಿಷ್ಟಕರ್ಮಣಾ ।
ವಿಸ್ರಬ್ಧಾ ಭವ ವೈದೇಹಿ ಶ್ವೋ ಗಮಿಷ್ಯಸ್ಯಸಂಶಯಮ್ ॥ ೩೫

ಏವಮುಕ್ತ್ವಾ ತು ಕಾಕುತ್ಸ್ಥೋ ಮೈಥಿಲೀಂ ಜನಕಾತ್ಮಜಾಮ್ ।
ಮಧ್ಯಕಕ್ಷ್ಯಾಂತರಂ ರಾಮೋ ನಿರ್ಜಗಾಮ ಸುಹೃದ್ವೃತಃ ॥ ೩೬

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವಿಚತ್ವಾರಿಂಶಃ ಸರ್ಗಃ



ಎಂದಳು ಧರ್ಮಶೀಲನಾದ ಕಾಕುತ್ಸ್ಥನು "ಓಹೊ! ಆಗಬಹುದು ವೈದೇಹಿ, ನಿಶ್ಚಿಂತಳಾಗಿರು ನಾಳೆಯೇ ತಪೋವನಕ್ಕೆ ಹೋಗಬಹುದು. ಸಂದೇಹ ಬೇಡ" ಎಂದನು (೩೪-೩೫) ಮೈಥಿಲಿಗೆ ಈ ರೀತಿಯಾಗಿ ಹೇಳಿ ಶ್ರೀರಾಮನು ಅರಮನೆಯ ಮಧ್ಯದಲ್ಲಿದ್ದ ಒಂದು ಸಭಾಮಂದಿರಕ್ಕೆ ಮಿತ್ರಪರಿವೃತನಾಗಿ ಹೋದನು (೩೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತೆರಡನೆಯ ಸರ್ಗ



## ತ್ರಿಚತ್ವಾರಿಂಶಃ ಸರ್ಗ

### ಭದ್ರವಾಕ್ಯಶ್ರವಣಮ್

ತತೋಽಪವಿಷ್ಟಂ ರಾಜಾನಮುಪಾಸಂತೇ ವಿಚಕ್ಷಣಾಃ ।
ಕಥಾನಾಂ ಬಹುರೂಪಾಣಾಂ ಹಾಸ್ಯಕಾರಾಃ ಸಮಂತತಃ ॥ ೧

ವಿಜಯೋ ಮಧುಮತ್ತಶ್ಚ ಕಾಶ್ಯಪಃ ಪಿಂಗಲಃ ಕುಟಃ ।
ಸುರಾಜಃ ಕಾಲಿಯೋ ಭದ್ರೋ ದಂತವಕ್ತ್ರಃ ಸುಮಾಗಧಃ ॥ ೨

ಏತೇ ಕಥಾ ಬಹುವಿಧಾಃ ಪರಿಹಾಸಸಮನ್ವಿತಾಃ ।
ಕಥಯಂತಿ ಸ್ಮ ಸಂಹೃಷ್ಟಾ ರಾಘವಸ್ಯ ಮಹಾತ್ಮನಃ ॥ ೩

ತತಃ ಕಥಾಯಾಂ ಕಸ್ಯಾಂಚಿದ್ರಾಘವಃ ಸಮಭಾಷತ ।
ಕಾಃ ಕಥಾ ನಗರೇ ಭದ್ರ ವರ್ತಂತೇ ವಿಷಯೇಷು ಚ ॥ ೪

ಮಾಮಾಶ್ರಿತಾನಿ ಕಾನ್ಯಾಹುಃ ಪೌರಜಾನಪದಾ ಜನಾಃ ।
ಕಿಂ ಚ ಸೀತಾಂ ಸಮಾಶ್ರಿತ್ಯ ಭರತಂ ಕಿಂ ಚ ಲಕ್ಷ್ಮಣಮ್ ॥ ೫

## ಸರ್ಗ ೪೩

### ಭದ್ರನ ಮುಖದಿಂದ ಜನಾಪವಾದದ ಶ್ರವಣ

ಸಭೆಯಲ್ಲಿ ಉಪವಿಷ್ಟನಾದ ಶ್ರೀರಾಮನನ್ನು ವಾಚಾಲರಾದ ಹಾಸ್ಯಗಾರರು ಬಗೆಬಗೆಯ ವಿನೋದಕರವಾದ ವಾರ್ತಾಲಾಪಗಳಿಂದ ರಂಜಿಸುತ್ತಿದ್ದರು ವಿಜಯ, ಮಧುಮತ್ತ, ಕಾಶ್ಯಪ, ಪಿಂಗಲ, ಕುಟ, ಸುರಾಜ, ಕಾಲಿಯ, ಭದ್ರ, ದಂತವಕ್ತ್ರ, ಸುಮಾಗಧ—ಮುಂತಾದವರು ಮಹಾತ್ಮನಾದ ರಾಘವನಿಗೆ ಹಾಸ್ಯವಿಶಿಷ್ಟವಾದ ವಿವಿಧ ಕಥೆಗಳನ್ನು ಹರ್ಷದಿಂದ ಹೇಳುತ್ತಿದ್ದರು (೧-೩) ಹೀಗಿರುವಾಗ ಕಥಾಮಧ್ಯದಲ್ಲೊಮ್ಮೆ ಶ್ರೀರಾಮನು ಭದ್ರನೆಂಬವನನ್ನು ನೋಡಿ "ಭದ್ರ, ಅಯೋಧ್ಯೆಯಲ್ಲಿಯೂ ನನ್ನ ರಾಷ್ಟ್ರದಲ್ಲಿಯೂ ಪ್ರಜೆಗಳು ನನ್ನ ವಿಷಯವಾಗಿ ಏನು ಹೇಳುತ್ತಾರೆ? ಸೀತೆಯನ್ನೂ

ಕಿಂ ನು ಶತ್ರುಘ್ನಮುದ್ದಿಶ್ಯ ಕೈಕೇಯೀಂ ಕಿಂ ನು ಮಾತರಮ್ ।
ವಕ್ತವ್ಯತಾಂ ಚ ರಾಜಾನೋ ವನೇ ರಾಜ್ಯೇ ವ್ರಜಂತಿ ಹಿ ॥ ೬
ಏವಮುಕ್ತೇ ತು ರಾಮೇಣ ಭದ್ರಃ ಪ್ರಾಂಜಲಿರಬ್ರವೀತ್ ।
ಸ್ಥಿತಃ ಕಥಾಃ ಶುಭಾ ರಾಜನ್ ವರ್ತಂತೇ ಪುರವಾಸಿನಾಮ್ ॥ ೭
ಅಮುಂ ತು ವಿಜಯಂ ಸೌಮ್ಯ ದಶಗ್ರೀವವಧಾರ್ಜಿತಮ್ ।
ಭೂಯಿಷ್ಠಂ ಸ್ವಪುರೇ ಪೌರೈಃ ಕಥ್ಯಂತೇ ಪುರುಷರ್ಷಭ ॥ ೮
ಏವಮುಕ್ತಸ್ತು ಭದ್ರೇಣ ರಾಘವೋ ವಾಕ್ಯಮಬ್ರವೀತ್ ।
ಕಥಯಸ್ವ ಯಥಾತತ್ತ್ವಂ ಸರ್ವಂ ನಿರವಶೇಷತಃ ॥ ೯
ಶುಭಾಶುಭಾನಿ ವಾಕ್ಯಾನಿ ಯಾನ್ಯಾಹುಃ ಪುರವಾಸಿನಃ ।
ಶ್ರುತ್ವೇದಾನೀಂ ಶುಭಂ ಕುರ್ಯಾಂ ನ ಕುರ್ಯಾಮಶುಭಾನಿ ಚ ॥
ಕಥಯಸ್ವ ಚ ವಿಸ್ರಬ್ಧೋ ನಿರ್ಭಯಂ ವಿಗತಜ್ವರಃ ।
ಕಥಯಂತಿ ಯಥಾ ಪೌರಾಃ ಪಾಪಾ ಜನಪದೇಷು ಚ ॥ ೧೧

---

ಭರತಲಕ್ಷ್ಮಣರನ್ನೂ ಕುರಿತು ಅವರ ಹೇಳಿಕೆ ಏನು? (೪-೫) ಶತ್ರುಘ್ನನ ವಿಷಯದಲ್ಲಾಗಲಿ ತಾಯಿಯಾದ ಕೈಕೇಯೀದೇವಿಯ ವಿಷಯದಲ್ಲಾಗಲಿ ಜನರ ಅಭಿಪ್ರಾಯವೇನು? ಏಕೆಂದರೆ, ಹೊಸ ರಾಜ್ಯಭಾರವು ಆರಂಭವಾದಾಗ ರಾಜರ ವಿಷಯದಲ್ಲಿ ಕಿಂವದಂತಿಗಳು ಹುಟ್ಟುತ್ತವೆ" ಎಂದು ಕೇಳಿದನು (೬-೭) ಆಗ ಭದ್ರನು ಕೈಮುಗಿದುಕೊಂಡು "ಮಹಾರಾಜ, ಪುರವಾಸಿಗಳು ಶುಭಕರವಾದ ಒಳ್ಳೆಯ ಮಾತುಗಳನ್ನಾಡುತ್ತಿದ್ದಾರೆ ಅದರಲ್ಲಿಯೂ, ಹೇ ಪುರುಷೋತ್ತಮ, ರಾವಣನನ್ನು ವಧಿಸಿ ಸಂಪಾದಿಸಿದ ವಿಜಯವನ್ನು ಕುರಿತು ವಿಶೇಷವಾಗಿ ಹೊಗಳಿ ವರ್ಣಿಸುತ್ತಿದ್ದಾರೆ" ಎಂದನು (೮) ಭದ್ರನ ಈ ನುಡಿಯನ್ನು ಕೇಳಿ ರಾಘವನು "ಭದ್ರ, ಎಲ್ಲವನ್ನೂ ಯಥಾವತ್ತಾಗಿ ಹೇಳು ಒಳ್ಳೆಯದೋ ಕೆಟ್ಟದೋ ಪುರವಾಸಿಗಳು ಏನು ಹೇಳುತ್ತಾರೆಂಬುದನ್ನು ಸ್ಪಷ್ಟವಾಗಿ ತಿಳಿಸು ಅದನ್ನು ಕೇಳಿದಾಗ, ಯಾವುದು ಒಳ್ಳೆಯದು ಯಾವುದು ಕೆಟ್ಟದೆಂಬುದನ್ನು ತಿಳಿದು ಮಾರ್ಪಡಿಸಿಕೊಳ್ಳಲು ನನಗೆ ಅನುಕೂಲವಾಗುತ್ತದೆ (೯-೧೦) ನನ್ನಲ್ಲಿ ವಿಶ್ವಾಸವನ್ನಿಟ್ಟು ನಿಶ್ಶಂಕೆಯಿಂದ ನಿರ್ಭಯವಾಗಿ ಸತ್ಯವನ್ನು ಹೇಳಿಬಿಡು.

ರಾಘವೇಣೈವಮುಕ್ತಸ್ತು ಭದ್ರಃ ಸುರುಚಿರಂ ವಚಃ ।
ಪ್ರತ್ಯುವಾಚ ಮಹಾಬಾಹುಂ ಪ್ರಾಂಜಲಿಃ ಸುಸಮಾಹಿತಃ ॥ ೧೨

ಶೃಣು ರಾಜನ್ ಯಥಾ ಪೌರಾಃ ಕಥಯಂತಿ ಶುಭಾಶುಭಮ್ ।
ಚತ್ವರಾಪಣರಥ್ಯಾಸು ವನೇಷೂಪವನೇಷು ಚ ॥ ೧೩

ದುಷ್ಕರಂ ಕೃತವಾನ್ ರಾಮಃ ಸಮುದ್ರೇ ಸೇತುಬಂಧನಮ್ ।
ಅಶ್ರುತಂ ಪೂರ್ವಕೈಃ ಕೈಶ್ಚಿದ್ದೇವೈರಪಿ ಸದಾನವೈಃ ॥ ೧೪

ರಾವಣಶ್ಚ ದುರಾಧರ್ಷೋ ಹತಃ ಸಬಲವಾಹನಃ ।
ವಾನರಾಶ್ಚ ವಶಂ ನೀತಾ ಋಕ್ಷಾಶ್ಚ ಸಹ ರಾಕ್ಷಸೈಃ ॥ ೧೫

ಹತ್ವಾ ಚ ರಾವಣಂ ಸಂಖ್ಯೇ ಸೀತಾಮಾಹೃತ್ಯ ರಾಘವಃ ।
ಅಮರ್ಷಂ ಪೃಷ್ಠತಃ ಕೃತ್ವಾ ಸ್ವವೇಶ್ಮ ಪುನರಾನಯತ್ ॥ ೧೬

ಕೀದೃಶಂ ಹೃದಯೇ ತಸ್ಯ ಸೀತಾಸಂಭೋಗಜಂ ಸುಖಮ್ ।
ಅಂಕಮಾರೋಪ್ಯ ತು ಪುರಾ ರಾವಣೇನ ಬಲಾದ್ಧೃತಾಮ್ ॥ ೧೭

---

ಪೌರರಾಗಲಿ ರಾಷ್ಟ್ರದ ಪ್ರಜೆಗಳಾಗಲಿ ಅಶುಭವಾಕ್ಯಗಳನ್ನಾಡುತ್ತಿದ್ದರೆ ತಿಳಿಸಿಬಿಡು" ಎಂದನು (೧೧) ರಾಘವನು ಮೃದುವಾಗಿ ನುಡಿದ ಈ ಮಾತನ್ನು ಕೇಳಿ ಭದ್ರನು ಕೈಮುಗಿದುಕೊಂಡು ತುಂಬ ಎಚ್ಚರಿಕೆಯಿಂದ ಹೀಗೆಂದನು. "ಮಹಾರಾಜ, ಜನರು ಒಳ್ಳೆಯದನ್ನು ಹೇಳುತ್ತಾರೆ. ಅಶುಭ ವಾಕ್ಯವನ್ನೂ ನುಡಿಯುವುದುಂಟು ಚೌಕ, ಅಂಗಡಿ, ರಸ್ತೆ, ವನೋಪವನಗಳಲ್ಲಿ ಮಾತಾಡಿಕೊಳ್ಳುತ್ತಾರೆ (೧೨-೧೩) ಏನೆಂದರೆ, 'ಶ್ರೀರಾಮನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ್ದು ಅಗಾಧವಾದ ಕಾರ್ಯ ಯಾವ ಪೂರ್ವಜರೂ ದೇವದಾನವರೂ ಕೇಳದಿರುವ ಅದ್ಭುತವೇ ಸರಿ ದುರ್ಧರ್ಷನಾದ ರಾವಣನನ್ನು ಪರಿವಾರ ಸಹಿತವಾಗಿ ಸಂಹರಿಸಿದ್ದಾನೆ. ವಾನರಭಲ್ಲೂಕಗಳನ್ನೂ ರಾಕ್ಷಸರನ್ನೂ ವಶಪಡಿಸಿಕೊಂಡಿದ್ದಾನೆ (೧೪-೧೫) ರಾವಣನನ್ನು ಯುದ್ಧದಲ್ಲಿ ಸಂಹರಿಸಿ, ರಾಘವನು ಸೀತೆಯನ್ನು ಬಿಡಿಸಿಕೊಂಡು ಬಂದಿದ್ದಾನೆ ಆದರೆ ಸ್ವಾಭಿಮಾನವನ್ನು ಬದಿಗೊತ್ತಿ ಅವಳನ್ನು ತನ್ನ ಮನೆಗೆ ಕರೆತಂದನಲ್ಲ! ಸೀತೆಯಿಂದಾಗುವ ಸುಖ ಎಷ್ಟು ಅಧಿಕವೆಂದು

ಲಂಕಾಮಪಿ ಪುರಾ ನೀತಾಮಶೋಕವನಿಕಾಂ ಗತಾಮ್ ।
ರಕ್ಷಸಾಂ ವಶಮಾಪನ್ನಾಂ ಕಥಂ ರಾಮೋ ನ ಕುತ್ಸತೇ ॥ ೧೮
ಅಸ್ಮಾಕಮಪಿ ದಾರೇಷು ಸಹನೀಯಂ ಭವಿಷ್ಯತಿ ।
ಯಥಾ ಹಿ ಕುರುತೇ ರಾಜಾ ಪ್ರಜಾ ತಮನುವರ್ತತೇ ॥ ೧೯
ಏವಂ ಬಹುವಿಧಾ ವಾಚೋ ವದಂತಿ ಪುರವಾಸಿನಃ ।
ನಗರೇಷು ಚ ಸರ್ವೇಷು ರಾಜನ್ ಜನಪದೇಷು ಚ ॥ ೨೦
ತಸ್ಯೈವಂ ಭಾಷಿತಂ ಶ್ರುತ್ವಾ ರಾಘವಃ ಪರಮಾರ್ತವತ್ ।
ಉವಾಚ ಸುಹೃದಃ ಸರ್ವಾನ್ ಕಥಮೇತದ್ವದೀಥ ಮಾಮ್ ॥
ಸರ್ವೇ ತು ಶಿರಸಾ ಭೂಮಾವಭಿವಾದ್ಯ ಪ್ರಣಮ್ಯ ಚ ।
ಪ್ರತ್ಯೂಚೂ ರಾಘವಂ ದೀನಮೇವಮೇತನ್ನ ಸಂಶಯಃ ॥ ೨೨
ಶ್ರುತ್ವಾ ತು ವಾಕ್ಯಂ ಕಾಕುತ್ಸ್ಥಃ ಸರ್ವೇಷಾಂ ಸಮುದೀರಿತಮ್ ।
ವಿಸರ್ಜಯಾಮಾಸ ತದಾ ವಯಸ್ಯಾನ್ ಶತ್ರುಸೂದನಃ ॥ ೨೩

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರಿಚತ್ವಾರಿಂಶಃ ಸರ್ಗಃ

---

ಅವನ ಹೃದಯದಲ್ಲಿ ನೆಲೆಸಿಬಿಟ್ಟಿದೆಯೋ! (೧೬-೧೭) ಹಿಂದೆ ರಾವಣನು ಆಕೆಯನ್ನು ತೊಡೆಯಮೇಲೇರಿಸಿ ಬಲಾತ್ಕಾರದಿಂದ ಲಂಕೆಗೆ ಒಯ್ದು ಅಶೋಕವನದಲ್ಲಿ ಇರಿಸಿದ್ದನು ರಾಕ್ಷಸರ ವಶದಲ್ಲಿದ್ದ ಸೀತೆಯ ವಿಷಯವಾಗಿ ರಾಮನಿಗೆ ತಿರಸ್ಕಾರಬುದ್ಧಿ ಹುಟ್ಟಲಿಲ್ಲ! (೧೮) ಹೀಗಾದರೆ ನಾವೂ ಸಹ ಹೆಂಡತಿಯರ ದೋಷವನ್ನು ಸಹಿಸಿಕೊಳ್ಳಬೇಕಾಗುವುದು! ರಾಜನ ನಡತೆಯನ್ನು ಪ್ರಜೆಗಳು ಅನುಕರಿಸುತ್ತಾರೆ' (೧೯) ಮಹಾರಾಜ, ಈ ರೀತಿಯಲ್ಲಿ ಪೌರರೂ ಪ್ರಜಗಳೂ ಎಲ್ಲೆಡೆಯೂ ನಾನಾ ವಿಧವಾಗಿ ಹೇಳಿಕೊಳ್ಳುತ್ತಿದ್ದಾರೆ" ಎಂದು ನಿವೇದಿಸಿದನು ಭದ್ರನ ನುಡಿಯನ್ನು ಕೇಳಿ ಶ್ರೀರಾಮನು ದುಃಖದಿಂದ ಕುಸಿದುಹೋದನು ಅವನ ಅಲ್ಲಿದ್ದ ಮಿತ್ರರೆಲ್ಲರನ್ನೂ ನೋಡಿ "ಇದು ಹೇಗೆ? ನೀವೇನು ಹೇಳುತ್ತೀರಿ?" ಎಂದು ಕೇಳಿದನು (೨೦-೨೧) ಅವರೆಲ್ಲರೂ ನೆಲದಮೇಲೆ ತಲೆಯೂರಿ ನಮಸ್ಕರಿಸಿ, ವಿಷಣ್ಣನಾದ ರಾಘವನನ್ನು ನೋಡಿ "ಇದೇನೋ ಹೌದು, ಜನರು ಆಡಿಕೊಳ್ಳುವುದು ದಿಟ" ಎಂದರು ಅನಂತರ ಕಾಕುತ್ಸ್ಥನು ಮಿತ್ರರಿಗೆ "ನೀವು ಹೋಗಬಹುದು" ಎಂದು ತಿಳಿಸಿ ಎಲ್ಲರನ್ನೂ ಕಳಿಸಿದನು (೨೨-೨೩)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತುಮೂರನೆಯ ಸರ್ಗ

## ಚತುಶ್ಚತ್ವಾರಿಂಶಃ ಸರ್ಗಃ

### ಲಕ್ಷ್ಮಣಾದ್ಯಾನಯನಮ್

ನಿಸೃಜ್ಯ ತು ಸುಹೃದ್ವರ್ಗಂ ಬುದ್ಧ್ಯಾ ನಿಶ್ಚಿತ್ಯ ರಾಘವಃ ।
ಸಮೀಪೇ ದ್ವಾಃಸ್ಥಮಾಸೀನಮಿದಂ ವಚನಮಬ್ರವೀತ್ ॥ ೧

ಶೀಘ್ರಮಾನಯ ಸೌಮಿತ್ರಿಂ ಲಕ್ಷ್ಮಣಂ ಶುಭಲಕ್ಷಣಮ್ ।
ಭರತಂ ಚ ಮಹಾಭಾಗಂ ಶತ್ರುಘ್ನಮಪರಾಜಿತಮ್ ॥ ೨

ರಾಮಸ್ಯ ವಚನಂ ಶ್ರುತ್ವಾ ದ್ವಾಃಸ್ಥೋ ಮೂರ್ಧ್ನಿ ಕೃತಾಂಜಲಿಃ ।
ದ್ರಷ್ಟುಮಿಚ್ಛತಿ ರಾಜಾ ತ್ವಾಂ ಗಮ್ಯತಾಂ ತತ್ರ ಮಾ ಚಿರಮ್ ॥ ೩

ಬಾಢಮಿತ್ಯೇವ ಸೌಮಿತ್ರಿಃ ಶ್ರುತ್ವಾ ರಾಘವಶಾಸನಮ್ ।
ಪ್ರಾದ್ರವದ್ರಥಮಾರುಹ್ಯ ರಾಘವಸ್ಯ ನಿವೇಶನಮ್ ॥ ೪

ಪ್ರಯಾಂತಂ ಲಕ್ಷ್ಮಣಂ ದೃಷ್ಟ್ವಾ ದ್ವಾಃಸ್ಥೋ ಭರತಮಂತಿಕಾತ್ ।
ಉವಾಚ ಭರತಂ ತತ್ರ ವರ್ಧಯಿತ್ವಾ ಕೃತಾಂಜಲಿಃ ॥ ೫

## ಸರ್ಗ ೪೪

### ಲಕ್ಷ್ಮಣ, ಭರತ, ಶತ್ರುಘ್ನರನ್ನು ಕರೆಸುವುದು

ಶ್ರೀರಾಮನು ಮಿತ್ರವರ್ಗವನ್ನು ಕಳಿಸಿ, ಮುಂದೆ ಹೀಗೆ ಮಾಡಬೇಕೆಂದು ವಿಚಾರಮಾಡಿ ಮನಸ್ಸಿನಲ್ಲಿ ನಿರ್ಧರಿಸಿಕೊಂಡನು ಅನಂತರ ಸಮೀಪದಲ್ಲಿದ್ದ ದ್ವಾರಪಾಲನನ್ನು ಕರೆದು "ಎಲೈ, ಲಕ್ಷ್ಮಣನನ್ನೂ ಭರತನನ್ನೂ ಶತ್ರುಘ್ನನನ್ನೂ ಕೂಡಲೆ ಕರೆದುಕೊಂಡು ಬಾ" ಎಂದು ಆಜ್ಞಾಪಿಸಿದನು (೧-೨) ಶ್ರೀರಾಮನ ಆಜ್ಞೆಯನ್ನು ಕೇಳಿ ದ್ವಾರಪಾಲನು ಶಿರಸ್ಸಿನಲ್ಲಿ ಎರಡು ಕೈಗಳನ್ನಿಟ್ಟುಕೊಂಡು ಕೈಮುಗಿದು ಹೋಗಿ ಲಕ್ಷ್ಮಣನ ಗೃಹವನ್ನು ತಡೆಯಿಲ್ಲದೆ ಪ್ರವೇಶಿಸಿದನು ಅಲ್ಲಿ ಮಹಾತ್ಮನಾದ ಸೌಮಿತ್ರಿಯನ್ನು ಕಂಡು ವಂದಿಸಿ "ರಾಜಪುತ್ರ, ಮಹಾರಾಜನು ನಿನ್ನನ್ನು ಕಾಣಲು ಬಯಸಿದ್ದಾನೆ ಬೇಗನೆ ಬರಬೇಕು" ಎಂದು ತಿಳಿಸಿದನು (೩-೪) ಸೌಮಿತ್ರಿಯು ಆಗಲೆಂದು ಹೇಳಿ ಒಡನೆಯೇ ರಥವನ್ನೇರಿ ಶ್ರೀರಾಮನ ಅರಮನೆಗೆ ಧಾವಿಸಿದನು

*

ವಿನಯಾವನತೋ ಭೂತ್ವಾ ರಾಜಾ ತ್ವಾಂ ದ್ರಷ್ಟುಮಿಚ್ಛತಿ ।
ಭರತಸ್ತು ವಚಃ ಶ್ರುತ್ವಾ ದ್ವಾಃಸ್ಥಾದ್ರಾಮಸಮೀರಿತಮ್ ॥ ೭
ಉತ್ಪಪಾತಾಸನಾತ್ತೂರ್ಣಂ ಪದ್ಭ್ಯಾಮೇವ ಯಯೌ ಬಲೀ ।
ದೃಷ್ಟ್ವಾ ಪ್ರಯಾಂತಂ ಭರತಂ ತ್ವರಮಾಣಃ ಕೃತಾಂಜಲಿಃ ॥ ೭
ಶತ್ರುಘ್ನಭವನಂ ಗತ್ವಾ ತತೋ ವಾಕ್ಯಮುವಾಚ ಹ ।
ಏಹ್ಯಾಗಚ್ಛ ರಘುಶ್ರೇಷ್ಠ ರಾಜಾ ತ್ವಾಂ ದ್ರಷ್ಟುಮಿಚ್ಛತಿ ॥ ೮
ಗತೋ ಹಿ ಲಕ್ಷ್ಮಣಃ ಪೂರ್ವಂ ಭರತಶ್ಚ ಮಹಾಯಶಾಃ ।
ಶ್ರುತ್ವಾ ತು ವಚನಂ ತಸ್ಯ ಶತ್ರುಘ್ನಃ ಪರಮಾಸನಾತ್ ॥ ೯
ಶಿರಸಾ ವಂದ್ಯ ಧರಣೀಂ ಪ್ರಯಯೌ ಯತ್ರ ರಾಘವಃ ।
ದ್ವಾಃಸ್ಥಸ್ತ್ವಾಗಮ್ಯ ರಾಮಾಯ ಸರ್ವಾನೇವ ಕೃತಾಂಜಲಿಃ ॥ ೧೦
ನಿವೇದಯಾಮಾಸ ತದಾ ಭ್ರಾತೄನ್ ಸ್ವಾನ್ ಸಮುಪಸ್ಥಿತಾನ್ ।
ಕುಮಾರಾನಾಗತಾನ್ ಶ್ರುತ್ವಾ ಚಿಂತಾವ್ಯಾಕುಲಿತೇಂದ್ರಿಯಃ ॥ ೧೧
ಅವಾಙ್ಮುಖೋ ದೀನಮನಾ ದ್ವಾಃಸ್ಥಂ ವಚನಮಬ್ರವೀತ್ ।
ಪ್ರವೇಶಯ ಕುಮಾರಾಂಸ್ತ್ವಂ ಮತ್ಸಮೀಪಂ ತ್ವರಾನ್ವಿತಃ ॥ ೧೨

---

ಆಮೇಲೆ ದ್ವಾರಪಾಲನು ಭರತನ ಬಳಿಗೆ ಹೋಗಿ ವಿನಯದಿಂದ ವಂದಿಸಿ, ಜಯವಚನಗಳಿಂದ ಅಭಿನಂದಿಸಿ, "ಯುವರಾಜ, ಮಹಾರಾಜನು ನಿನ್ನನ್ನು ನೋಡಲು ಬಯಸಿದ್ದಾನೆ" ಎಂದು ನಿವೇದಿಸಿದನು (೫-೭) ಒಡನೆಯೇ ಭರತನು ತನ್ನ ಪೀಠದಿಂದೆದ್ದು ಕಾಲ್ನಡಿಗೆಯಿಂದಲೇ ಹೊರಟನು ಅವನು ಹೋಗುವುದನ್ನು ಕಂಡು ದ್ವಾರಪಾಲನು ತ್ವರೆಯಿಂದ ಶತ್ರುಘ್ನನ ನಿಲಯಕ್ಕೆ ಹೋಗಿ ಶತ್ರುಘ್ನನನ್ನು ಕಂಡು ನಮಿಸಿ "ರಘುಶ್ರೇಷ್ಠ, ಬೇಗನೆ ಬರಬೇಕು. ಮಹಾರಾಜನು ನಿನ್ನನ್ನು ಕಾಣಬೇಕೆಂದಿದ್ದಾನೆ (೮-೯) ಲಕ್ಷ್ಮಣನೂ ಭರತನೂ ಈಗಾಗಲೇ ಹೋಗಿದ್ದಾರೆ" ಎಂದು ಅರಿಕೆಮಾಡಿದನು ಕೂಡಲೆ ಶತ್ರುಘ್ನನು ತನ್ನ ಪೀಠದಿಂದೆದ್ದು (ಅಣ್ಣನ ಆಜ್ಞೆಯನ್ನು ಮನ್ನಿಸುವ ಸಲುವಾಗಿ) ನೆಲದವರೆಗೆ ಬಾಗಿ ವಂದಿಸಿ, ಶ್ರೀರಾಮನಿದ್ದಲ್ಲಿಗೆ ತೆರಳಿದನು (೧೦) ದ್ವಾರಪಾಲನು ಶ್ರೀರಾಮನಿದ್ದ ಸ್ಥಳಕ್ಕೆ ಬಂದು ಕೈಮುಗಿದು ಸೋದರರೆಲ್ಲರೂ ಆಗಮಿಸಿದ್ದಾರೆಂದು ರಾಘವನಿಗೆ ನಿವೇದಿಸಿದನು ಶ್ರೀರಾಮನು ಚಿಂತೆಯಿಂದ

ಏತೇಷು ಜೀವಿತಂ ಮಹ್ಯಮೇತೇ ಪ್ರಾಣಾಃ ಪ್ರಿಯಾ ಮಮ ।
ಆಜ್ಞಪ್ತಾಸ್ತು ನರೇಂದ್ರೇಣ ಕುಮಾರಾಃ ಶಕ್ರತೇಜಸಃ ॥ ೧೩
ಪ್ರಹ್ವಾಃ ಪ್ರಾಂಜಲಯೋ ಭೂತ್ವಾ ವಿವಿಶುಸ್ತೇ ಸಮಾಹಿತಾಃ ।
ತೇ ತು ದೃಷ್ಟ್ವಾ ಮುಖಂ ತಸ್ಯ ಸಗ್ರಹಂ ಶಶಿನಂ ಯಥಾ ॥ ೧೪
ಸಂಧ್ಯಾಗತಮಿವಾದಿತ್ಯಂ ಪ್ರಭಯಾ ಪರಿವರ್ಜಿತಮ್ ।
ಬಾಷ್ಪಪೂರ್ಣೇ ಚ ನಯನೇ ದೃಷ್ಟ್ವಾ ರಾಮಸ್ಯ ಧೀಮತಃ ॥ ೧೫
ಹತಶೋಭಂ ಯಥಾ ಪದ್ಮಂ ಮುಖಂ ವೀಕ್ಷ್ಯ ಚ ತಸ್ಯ ತೇ ।
ತತೋಽಭಿವಾದ್ಯ ತ್ವರಿತಾಃ ಪಾದೌ ರಾಮಸ್ಯ ಮೂರ್ಧಭಿಃ ॥ ೧೬
ತಸ್ಥುಃ ಸಮಾಹಿತಾಃ ಸರ್ವೇ ರಾಮಸ್ತ್ವಶ್ರೂಣ್ಯವರ್ತಯತ್ ।
ತಾನ್ ಪರಿಷ್ವಜ್ಯ ಬಾಹುಭ್ಯಾಮುತ್ಥಾಪ್ಯ ಚ ಮಹಾಬಲಃ ॥ ೧೭
ಆಸನೇಷ್ವಾಸತೇತ್ಯುಕ್ತ್ವಾ ತತೋ ವಾಕ್ಯಂ ಜಗಾದ ಹ ।
ಭವಂತೋ ಮಮ ಸರ್ವಸ್ವಂ ಭವಂತೋ ಜೀವಿತಂ ಮಮ ॥ ೧೮
ಭವದ್ಭಿಶ್ಚ ಕೃತಂ ರಾಜ್ಯಂ ಪಾಲಯಾಮಿ ನರೇಶ್ವರಾಃ ।
ಭವಂತಃ ಕೃತಶಾಸ್ತ್ರಾರ್ಥಾ ಬುದ್ಧ್ಯಾ ಚ ಪರಿನಿಷ್ಠಿತಾಃ ॥ ೧೯

---

ತಳಮಳಿಸುತ್ತಿದ್ದನು ಸಕಲೇಂದ್ರಿಯಗಳೂ ವ್ಯಾಕುಲಗೊಂಡಿದ್ದವು (೧೧-೧೨) ರಾಜಕುಮಾರರಲ್ಲರೂ ಬಂದಿರುವರೆಂಬುದನ್ನು ಕೇಳಿ ಆತನು ತಲೆತಗ್ಗಿಸಿ ದೈನ್ಯದಿಂದ "ಒಳಗ ಬರಹೇಳು ನನ್ನ ಜೀವಿತವೇ ಅವರಲ್ಲಿ ನೆಲೆಸಿದೆ ನನ್ನ ಪ್ರಾಣವೇ ಅವರು" ಎಂದನು (೧೩-೧೪). ಮಹಾರಾಜನ ಆಜ್ಞೆಯನ್ನು ಪಡೆದು, ದೇವೇಂದ್ರನಂತೆ ತೇಜಸ್ವಿಗಳಾದ ಆ ಕುಮಾರರು, ವಿನಯದಿಂದ ಬದ್ಧಾಂಜಲಿಗಳಾಗಿ ಎಚ್ಚರಿಕೆಯಿಂದ ಒಳಗೆ ಬಂದರು ರಾಹುಗ್ರಸ್ತವಾದ ಚಂದ್ರನಂತಿದ್ದ ಶ್ರೀರಾಮನ ಮುಖವನ್ನು ನೋಡಿದರು (೧೫) ಸಂಜೆಯ ಸೂರ್ಯನಂತೆ ಅವನು ನಿಷ್ಪ್ರಭನಾಗಿದ್ದನು ಕಣ್ಣುಗಳಲ್ಲಿ ಕಂಬನಿ ತುಳುಕುತ್ತಿತ್ತು ಕಾಂತಿಹೀನವಾದ ಕಮಲದಂತಿದ್ದ ರಾಘವನ ಮುಖವನ್ನು ನೋಡಿ, ಆ ಸೋದರರು ದಿಗ್ಭ್ರಾಂತರಾಗಿ ಆತನ ಪಾದಗಳಿಗೆ ವಂದಿಸಿದರು (೧೬-೧೭) ಶ್ರೀರಾಮನ ಕಣ್ಣುಗಳಿಂದ ಕಣ್ಣೀರು ಮತ್ತಷ್ಟು ಉಕ್ಕಿತು ಅವನು ತಮ್ಮಂದಿರನ್ನು ಕೈಹಿಡಿದೆಬ್ಬಿಸಿ ಆಲಿಂಗಿಸಿಕೊಂಡು "ಕುಳಿತುಕೊಳ್ಳಿರಿ" ಎಂದನು.

ಸಂಭೂಯ ಚ ಮದರ್ಥೋಽಯಮನ್ವೇಷ್ಟವ್ಯೋ ನರೇಶ್ವರಾಃ ।
ತಥಾ ವದತಿ ಕಾಕುತ್ಸ್ಥೇ ಹ್ಯವಧಾನಪರಾಯಣಾಃ ॥ ೨೦

ಉದ್ವಿಗ್ನಮನಸಃ ಸರ್ವೇ ಕಿಂ ನು ರಾಜಾಭಿಧಾಸ್ಯತಿ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುಶ್ಚತ್ವಾರಿಂಶಃ ಸರ್ಗಃ



ಅನಂತರ "ಸೋದರರೆ, ನೀವೇ ನನ್ನ ಸರ್ವಸ್ವ, ನೀವೇ ನನ್ನ ಜೀವಿತ (೧೮-೧೯) ನೀವು ರಕ್ಷಿಸುತ್ತಿರುವ ರಾಜ್ಯವನ್ನು ನಾನು (ಹೆಸರಿಗೆ ಮಾತ್ರ) ಪಾಲಿಸುತ್ತಿದ್ದೇನೆ ನೀವೆಲ್ಲರೂ ಶಾಸ್ತ್ರಾರ್ಥಗಳನ್ನು ಬಲ್ಲವರು ಪರಿಷ್ಕೃತ ವಾದ ಬುದ್ಧಿಯುಳ್ಳವರು (೨೦) ರಾಜಪುತ್ರರೆ, ನನಗೊಂದು ದಾರಿಯನ್ನು ತೋರಿಸಿಕೊಡಿ" ಎಂದನು ಈ ರೀತಿಯಲ್ಲಿ ಕಾಕುತ್ಸ್ಥನು ನುಡಿಯಲಾಗಿ ಲಕ್ಷ್ಮಣ ಭರತ ಶತ್ರುಘ್ನರು ಏಕಾಗ್ರತೆಯಿಂದ ಅವನ ಹೇಳಿಕೆಯನ್ನು ಗಮನಿಸುತ್ತಿದ್ದರು "ಮಹಾರಾಜನು ಏನು ಹೇಳುತ್ತಿರಬಹುದು ?" ಎಂದು ಅವರು ಉದ್ವಿಗ್ನರಾದರು (೨೧).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತುನಾಲ್ಕನೆಯ ಸರ್ಗ



## ಪಂಚಚತ್ವಾರಿಂಶಃ ಸರ್ಗಃ

### ಸೀತಾಸಮುತ್ಸರ್ಗಾದೇಶಃ

ತೇಷಾಂ ಸಮುಪವಿಷ್ಟಾನಾಂ ಸರ್ವೇಷಾಂ ದೀನಚೇತಸಾಮ್ ।
ಉವಾಚ ವಾಕ್ಯಂ ಕಾಕುತ್ಸ್ಥೋ ಮುಖೇನ ಪರಿಶುಷ್ಯತಾ ॥ ೧
ಸರ್ವೇ ಶೃಣುತ ಭದ್ರಂ ವೋ ಮಾ ಕುರುಧ್ವಂ ಮನೋಽನ್ಯಥಾ ।
ಪೌರಾಣಾಂ ಮಮ ಸೀತಾಯಾಂ ಯಾದೃಶೀ ವರ್ತತೇ ಕಥಾ ॥ ೨
ಪೌರಾಪವಾದಃ ಸುಮಹಾಂಸ್ತಥಾ ಜನಪದಸ್ಯ ಚ ।
ವರ್ತತೇ ಮಯಿ ಬೀಭತ್ಸಾ ಸಾ ಮೇ ಮರ್ಮಾಣಿ ಕೃಂತತಿ ॥ ೩
ಅಹಂ ಕಿಲ ಕುಲೇ ಜಾತ ಇಕ್ಷ್ವಾಕೂಣಾಂ ಮಹಾತ್ಮನಾಮ್ ।
ಸೀತಾಪಿ ಸತ್ಕುಲೇ ಜಾತಾ ಜನಕಾನಾಂ ಮಹಾತ್ಮನಾಮ್ ॥ ೪
ಜಾನಾಸಿ ತ್ವಂ ಯಥಾ ಸೌಮ್ಯ ದಂಡಕೇ ವಿಜನೇ ವನೇ ।
ರಾವಣೇನ ಹೃತಾ ಸೀತಾ ಸ ಚ ವಿಧ್ವಂಸಿತೋ ಮಯಾ ॥ ೫

## ಸರ್ಗ ೪೫

### ಸೀತೆಯನ್ನು ಪರಿತ್ಯಜಿಸಿ ಬರುವಂತೆ ಲಕ್ಷ್ಮಣನಿಗೆ ಆದೇಶ

ಲಕ್ಷ್ಮಣ ಭರತ ಶತ್ರುಘ್ನರು ವಿಷಣ್ಣರಾಗಿ ಕುಳಿತುಕೊಳ್ಳಲು ಕಾಕುತ್ಸ್ಥನು ಮಾತಾಡಿದನು ಅವನ ಬಾಯಿ ಒಣಗಿತ್ತು "ಎಲ್ಲರೂ ಕೇಳಿರಿ. ನಿಮಗೆ ಶುಭವಾಗಲಿ ನನ್ನ ಅಭಿಪ್ರಾಯಕ್ಕೆ ವಿರುದ್ಧವಾಗಿ ನಿಮ್ಮ ಮನಸ್ಸು ಹೋಗದಿರಲಿ ಪೌರರು ಸೀತೆಯ ವಿಷಯದಲ್ಲಿ ಏನು ಹೇಳಿಕೊಳ್ಳುತ್ತಿದ್ದಾರೆಂಬುದನ್ನು ಆಲಿಸಿರಿ (೧-೨) ನಗರವಾಸಿಗಳೂ ರಾಷ್ಟ್ರದ ಪ್ರಜೆಗಳೂ ದೊಡ್ಡ ಅಪವಾದದ ಮಾತನ್ನಾಡುತ್ತಿದ್ದಾರೆ ನನ್ನ ವಿಷಯದಲ್ಲಿ ನಿಂದೆಯುಂಟಾಗಿದೆ ಅದು ನನಗೆ ಮರ್ಮಭೇದಕವಾಗಿ ಪರಿಣಮಿಸಿದೆ ನಾನಾದರೋ ಮಹಾತ್ಮರಾದ ಇಕ್ಷ್ವಾಕು ರಾಜರ ಕುಲದಲ್ಲಿ ಜನಿಸಿದವನು ಸೀತೆಯೂ ಸಹ ಮಹಾತ್ಮರಾದ ಜನಕರ ಸದ್ವಂಶದಲ್ಲಿ ಉದ್ಭವಿಸಿದ್ದಾಳೆ (೩-೪) ಸೌಮ್ಯ—ಲಕ್ಷ್ಮಣ, ದಂಡಕಾರಣ್ಯದ ನಿರ್ಜನ

ತತ್ರ ಮೇ ಬುದ್ಧಿರುತ್ಪನ್ನಾ ಜನಕಸ್ಯ ಸುತಾಂ ಪ್ರತಿ ।
ಅತ್ರೋಷಿತಾಮಿಮಾಂ ಸೀತಾಮಾನಯೇಯಂ ಕಥಂ ಪುರೀಮ್ ॥ ೬

ಪ್ರತ್ಯಯಾರ್ಥಂ ತತಃ ಸೀತಾ ವಿವೇಶ ಜ್ವಲನಂ ತದಾ ।
ಪ್ರತ್ಯಕ್ಷಂ ತತ್ರ ಸೌಮಿತ್ರೇ ದೇವಾನಾಂ ಹವ್ಯವಾಹನಃ ॥ ೭

ಅಪಾಪಾಂ ಮೈಥಿಲೀಮಾಹ ವಾಯುಶ್ಚಾಕಾಶಗೋಚರಃ ।
ಚಂದ್ರಾದಿತ್ಯೌ ಚ ಶಂಸೇತೇ ಸುರಾಣಾಂ ಸಂನಿಧೌ ಪುರಾ ॥ ೮

ಋಷೀಣಾಂ ಚೈವ ಸರ್ವೇಷಾಮಪಾಪಾಂ ಜನಕಾತ್ಮಜಾಮ್ ।
ಏವಂ ಶುದ್ಧಸಮಾಚಾರಾ ದೇವಗಂಧರ್ವಸಂನಿಧೌ ॥ ೯

ಲಂಕಾದ್ವೀಪೇ ಮಹೇಂದ್ರೇಣ ಮಮ ಹಸ್ತೇ ನಿವೇಶಿತಾ ।
ಅಂತರಾತ್ಮಾ ಚ ಮೇ ವೇತ್ತಿ ಸೀತಾಂ ಶುದ್ಧಾಂ ಯಶಸ್ವಿನೀಮ್ ॥

ತತೋ ಗೃಹೀತ್ವಾ ವೈದೇಹೀಮಯೋಧ್ಯಾಮಹಮಾಗತಃ ।
ಅಯಂ ತು ಮೇ ಮಹಾನ್ ವಾದಃ ಶೋಕಶ್ಚ ಹೃದಿ ವರ್ತತೇ ॥ ೧೧

---

ಪ್ರದೇಶದಲ್ಲಿದ್ದಾಗ ರಾವಣನು ಸೀತೆಯನ್ನು ಅಪಹರಿಸಿದ್ದೂ ನಾನು ಆತ ನನ್ನು ವಿಧ್ವಂಸಗೊಳಿಸಿದ್ದೂ ನಿನಗೆ ಗೊತ್ತಿದೆ (೫) ಆಗ ಲಂಕೆಯಲ್ಲಿ ಕೆಲವು ದಿನಗಳಿದ್ದ ಜನಕಸುತೆಯನ್ನು ರಾಜಧಾನಿಗೆ ಹೇಗೆ ಕರೆದೊಯ್ಯಲೆಂದು ನನಗೆ ಅನ್ನಿಸಿತು ಅನಂತರ, ಲಕ್ಷ್ಮಣ, ನನಗೆ ವಿಶ್ವಾಸವನ್ನುಂಟುಮಾಡು ವುದಕ್ಕಾಗಿ ಸೀತೆಯು ನಿನ್ನೆದುರಿಗೆ ಅಗ್ನಿಯಲ್ಲಿ ಧುಮುಕಿದಳು (೬). ನಿನ್ನೆದುರಿಗೇ ಅಗ್ನಿದೇವನು ಮೈಥಿಲಿಯಲ್ಲಿ ಪಾಪಲೇಶವೂ ಇಲ್ಲವೆಂದು ತಿಳಿಸಿ ದನು ಗಗನಚಾರಿಯಾದ ವಾಯುವೂ ಚಂದ್ರಸೂರ್ಯರೂ ದೇವತೆಗಳ– ಋಷಿಗಳ–ಸಕಲರ ಎದುರಿನಲ್ಲಿ ಜಾನಕಿಯು ನಿರ್ದೋಷಳೆಂದು ಸಾರಿದರು (೭–೮) ಹೀಗೆ ಶುದ್ಧಚಾರಿತ್ರಳಾದ ಸೀತೆಯನ್ನು ಸ್ವತಃ ದೇವೇಂದ್ರನು ದೇವಗಂಧರ್ವರೆದುರಿಗೆ ನನ್ನ ಕೈಯಲ್ಲರ್ಪಿಸಿದನು ಸೀತೆಯು ಪರಿಶುದ್ಧ ವಾದ ನಡತೆಯವಳೆಂದೂ ಕೀರ್ತಿಶಾಲಿನಿಯೆಂದೂ ನನ್ನ ಅಂತರಾತ್ಮವು ತಿಳಿದಿತ್ತು–ತಿಳಿದಿದೆ (೯–೧೦). ಆಮೇಲೆ ನಾನು ವೈದೇಹಿಯನ್ನು ಕರದು ಕೊಂಡು ಅಯೋಧ್ಯೆಗೆ ಬಂದೆನು. ಆದರೆ, ಈಗ ಮಹತ್ತರವಾದ ಜನಾಪವಾದ

ಪೌರಾಪವಾದಃ ಸುಮಹಾಂಸ್ತಥಾ ಜನಪದಸ್ಯ ಚ ।
ಅಕೀರ್ತಿರ್ಯಸ್ಯ ಗೀಯೇತ ಲೋಕೇ ಭೂತಸ್ಯ ಕಸ್ಯಚಿತ್ ॥ ೧೨

ಪತತ್ಯೇವಾಧಮಾನ್ ಲೋಕಾನ್ ಯಾವಚ್ಛಬ್ದಃ ಪ್ರಕೀರ್ತ್ಯತೇ ।
ಅಕೀರ್ತಿರ್ನಿಂದ್ಯತೇ ದೇವೈಃ ಕೀರ್ತಿರ್ಲೋಕೇಷು ಪೂಜ್ಯತೇ ॥ ೧೩

ಕೀರ್ತ್ಯರ್ಥಂ ತು ಸಮಾರಂಭಃ ಸರ್ವೇಷಾಂ ಸುಮಹಾತ್ಮನಾಮ್ ।
ಅಪ್ಯಹಂ ಜೀವಿತಂ ಜಹ್ಯಾಂ ಯುಷ್ಮಾನ್ ವಾ ಪುರುಷರ್ಷಭಾಃ ॥

ಅಪವಾದಭಯಾದ್ಭೀತಃ ಕಿಂ ಪುನರ್ಜನಕಾತ್ಮಜಾಮ್ ।
ತಸ್ಮಾದ್ಭವಂತಃ ಪಶ್ಯಂತು ಪತಿತಂ ಶೋಕಸಾಗರೇ ॥ ೧೫

ನ ಹಿ ಪಶ್ಯಾಮ್ಯಹಂ ಭೂತಂ ಕಿಂಚಿದ್ದುಃಖಮತೋಽಧಿಕಮ್ ।
ಶ್ವಸ್ತ್ವಂ ಪ್ರಭಾತೇ ಸೌಮಿತ್ರೇ ಸುಮಂತ್ರಾಧಿಷ್ಠಿತಂ ರಥಮ್ ॥ ೧೬

ಆರುಹ್ಯ ಸೀತಾಮಾರೋಪ್ಯ ವಿಷಯಾಂತೇ ಸಮುತ್ಸೃಜ ।
ಗಂಗಾಯಾಸ್ತು ಪರೇ ಪಾರೇ ವಾಲ್ಮೀಕೇಸ್ತು ಮಹಾತ್ಮನಃ ॥ ೧೭

---

ವೆದ್ದಿದೆ ನನ್ನ ಹೃದಯಕ್ಕೆ ಅತೀವ ಶೋಕವಾಗಿದೆ (೧೧) ಲೋಕಾಪವಾದವೆಂಬುದು ಬಹು ದೊಡ್ಡದು ಯಾವನ ವಿಷಯದಲ್ಲಿ ಅಪಕೀರ್ತಿಯುಂಟಾಗುವುದೋ ಆತನು, ಅದು ಇರುವವರೆಗೂ ದುರ್ಗತಿಯಲ್ಲಿ ಬೀಳುವನು ಅಪಕೀರ್ತಿಯನ್ನು ದೇವತೆಗಳೂ ಸಹ ನಿಂದಿಸುತ್ತಾರೆ ಲೋಕದಲ್ಲಿ ಕೀರ್ತಿಗೇ ಮನ್ನಣೆ ಸಲ್ಲುವುದು (೧೨-೧೩). ಮಹಾಪುರುಷರೆಲ್ಲರೂ ಕೀರ್ತಿಗಾಗಿ ಯತ್ನಿಸುತ್ತಾರೆ ತಮ್ಮಂದಿರೆ—ಪುರುಷಶ್ರೇಷ್ಠರೆ, ನಾನು ಅಪವಾದ ಭಯಕ್ಕಾಗಿ ಪ್ರಾಣವನ್ನಾದರೂ ತೊರೆದೇನು, ನಿಮ್ಮನ್ನಾದರೂ ತ್ಯಜಿಸಿಯೇನು ಜಾನಕಿಯನ್ನು ತ್ಯಜಿಸದಿರಬಲ್ಲೆನೆ? ಆದ್ದರಿಂದ, ಶೋಕದ ಕಡಲಿನಲ್ಲಿ ಮುಳುಗಿಹೋಗಿದ್ದೇನೆ (೧೪-೧೫). ಇದಕ್ಕಿಂತಲೂ ಹೆಚ್ಚಿನ ದುಃಖ ನನಗೆ ಒದಗಿಲ್ಲ ಸೌಮಿತ್ರಿ, ನಾಳೆ ಮುಂಜಾನೆ ಸುಮಂತ್ರನಿಂದೊಡಗೂಡಿದ ರಥದಲ್ಲಿ ಸೀತೆಯನ್ನು ಕರೆದೊಯ್ದು ರಾಜ್ಯದ ಗಡಿಯಲ್ಲಿ ತ್ಯಜಿಸಿಬಿಡು! ಗಂಗೆಯ ಆಚೆಯ ದಡದಲ್ಲಿ ವಾಲ್ಮೀಕಿ ಮಹರ್ಷಿಗಳ ಆಶ್ರಮವಿದೆ (೧೬-೧೭ )

ಆಶ್ರಮೋ ದಿವ್ಯಸಂಕಾಶಸ್ತಮಸಾತೀರಮಾಶ್ರಿತಃ ।
ತತ್ರೈನಾಂ ವಿಜನೇ ದೇಶೇ ವಿಸೃಜ್ಯ ರಘುನಂದನ ॥ ೧೮

ಶೀಘ್ರಮಾಗಚ್ಛ ಭದ್ರಂ ತೇ ಕುರುಷ್ವ ವಚನಂ ಮಮ ।
ನ ಚಾಸ್ಮಿನ್ ಪ್ರತಿವಕ್ತವ್ಯಃ ಸೀತಾಂ ಪ್ರತಿ ಕಥಂಚನ ॥ ೧೯

ತಸ್ಮಾತ್ತ್ವಂ ಗಚ್ಛ ಸೌಮಿತ್ರೇ ನಾತ್ರ ಕಾರ್ಯಾ ವಿಚಾರಣಾ ।
ಅಪ್ರೀತಿರ್ಹಿ ಪರಾ ಮಹ್ಯಂ ತ್ವಯ್ಯೇತತ್ ಪ್ರತಿವಾರಿತೇ ॥ ೨೦

ಶಾಪಿತಾ ಹಿ ಮಯಾ ಯೂಯಂ ಭುಜಾಭ್ಯಾಂ ಜೀವಿತೇನ ಚ ।
ಯೇ ಮಾಂ ವಾಕ್ಯಾಂತರೇ ಬ್ರೂಯುರನುನೇತುಂ ಕಥಂಚನ ॥ ೨೧

ಅಹಿತಾ ನಾಮ ತೇ ನಿತ್ಯಂ ಮದಭೀಷ್ಟವಿಘಾತನಾತ್ ।
ಮಾನಯಂತು ಭವಂತೋ ಮಾಂ ಯದಿ ಮಚ್ಛಾಸನೇ ಸ್ಥಿತಾಃ ॥

ಇತೋಽದ್ಯ ನೀಯತಾಂ ಸೀತಾ ಕುರುಷ್ವ ವಚನಂ ಮಮ ।
ಪೂರ್ವಮುಕ್ತೋಽಹಮನಯಾ ಗಂಗಾತೀರೇಽಹಮಾಶ್ರಮಾನ್ ॥

---

ತಮಸಾ ತೀರದಲ್ಲಿರುವ ಅದು ದಿವ್ಯವಾದ ಆಶ್ರಮ ಅಲ್ಲಿಗೆ ಹೋಗಿ, ಲಕ್ಷ್ಮಣ, ವಿಜನವಾದ ಸ್ಥಳದಲ್ಲಿ ಅವಳನ್ನು ವಿಸರ್ಜಿಸಿ, ಕೂಡಲೆ ಹೊರಟು ಬಂದುಬಿಡು ! ಒಳ್ಳೆಯದು, ಲಕ್ಷ್ಮಣ, ನನ್ನ ಮಾತನ್ನು ನಡೆಸು ಈ ವಿಷಯದಲ್ಲಿ ಸೀತೆಯ ಪರವಾಗಿ ಒಂದು ಮಾತನ್ನೂ ನನಗೆ ಪ್ರತಿಯಾಗಿ ಹೇಳಬಾರದು ! (೧೮-೧೯) ಸೌಮಿತ್ರಿ, ನೀನು ಹೋಗಬೇಕು ಈ ವಿಷಯದಲ್ಲಿ ಮತ್ತೆ ವಿಚಾರ ಬೇಡ ಇದಕ್ಕೆ ಅಡ್ಡ ಬಂದರೆ, ನನಗೆ ಮಹತ್ತರವಾದ ಅಸಮಾಧಾನ ಉಂಟಾಗುವುದು ನನ್ನ ತೋಳಿನ ಆಣೆಯಾಗಿ, ಪ್ರಾಣದ ಆಣೆಯಾಗಿ, ನಿಮಗೆ ಹೇಳುತ್ತೇನೆ—ಮಾತಿನ ನಡುವೆ ನನ್ನನ್ನು ಒಪ್ಪಿಸುವುದಕ್ಕಾಗಿ ಪ್ರತಿಯಾಗಿ ನುಡಿದರೆ, ನನ್ನ ಇಷ್ಟವನ್ನು ಘಾತಿಸಿದ್ದರಿಂದ ಹಗೆಗಳೆಂದೇ ತಿಳಿಯುತ್ತೇನೆ ! ನೀವು ನನ್ನ ಆಜ್ಞೆಗೆ ಒಳಪಟ್ಟವರಾದರೆ ನನ್ನ ಮಾತಿಗೆ ಮನ್ನಣೆಯನ್ನು ಕೊಡಬೇಕು ! (೨೦-೨೨). ಲಕ್ಷ್ಮಣ, ಸೀತೆಯನ್ನು ಇಲ್ಲಿಂದ ಕರೆದೊಯ್ದು ನನ್ನ ಆಜ್ಞೆಯನ್ನು ಪಾಲಿಸು ಗಂಗಾತೀರದಲ್ಲಿರುವ ಆಶ್ರಮಗಳನ್ನು ನೋಡಬೇಕೆಂದು ತನ್ನ ಇಚ್ಛೆಯನ್ನವಳು ನನಗೆ ತಿಳಿಸಿದ್ದಾಳೆ ಅವಳ ಇಚ್ಛೆಯನ್ನು ಈ ಪ್ರಕಾರದಲ್ಲಿ ತೀರಿಸು " ಎಂದನು (೨೩)

ಪಶ್ಯೇಯಮಿತಿ ತಸ್ಯಾಶ್ಚ ಕಾಮಃ ಸಂವರ್ತ್ಯತಾಮಯಮ್ ।
ಏವಮುಕ್ತ್ವಾ ತು ಕಾಕುತ್ಸ್ಥೋ ಬಾಷ್ಪೇಣ ಪಿಹಿತಾನನಃ ॥ ೨೪
ಪ್ರವಿವೇಶ ಸ ಧರ್ಮಾತ್ಮಾ ಭ್ರಾತೃಭಿಃ ಪರಿವಾರಿತಃ ।
ಶೋಕಸಂಲಗ್ನಹೃದಯೋ ನಿಶಶ್ವಾಸ ಯಥಾ ದ್ವಿಪಃ ॥ ೨೫

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚಚತ್ವಾರಿಂಶಃ ಸರ್ಗಃ



ಹೀಗೆ ನುಡಿಯುವಾಗ ಶ್ರೀರಾಮನ ಮುಖದಲ್ಲಿ ಕಣ್ಣೀರು ಹರಿಯುತ್ತಿತ್ತು ಸೋದರರೊಂದಿಗೆ ಇಷ್ಟು ಮಾತನ್ನು ಹೇಳಿ ಆ ಧರ್ಮಾತ್ಮನು ಎದ್ದು ಒಳಗೆ ಹೋದನು　ಶೋಕಾವಿಷ್ಟಚಿತ್ತನಾಗಿ (ಬಂಧನದಲ್ಲಿ ಸಿಕ್ಕಿಬಿದ್ದ) ಆನೆಯಂತೆ ನಿಟ್ಟುಸಿರುಬಿಡುತ್ತಿದ್ದನು (೨೪-೨೫)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತೈದನೆಯ ಸರ್ಗ



## ಷಟ್‌ಚತ್ವಾರಿಂಶಃ ಸರ್ಗಃ

### ಸೀತಾಗಂಗಾತೀರನಯನಮ್

ತತೋ ರಜನ್ಯಾಂ ವ್ಯುಷ್ಟಾಯಾಂ ಲಕ್ಷ್ಮಣೋ ದೀನಚೇತನಃ ।
ಸುಮಂತ್ರಮಬ್ರವೀದ್ವಾಕ್ಯಂ ಮುಖೇನ ಪರಿಶುಷ್ಯತಾ ॥ ೧

ಸಾರಥೇ ತುರಗಾನ್ ಶೀಘ್ರಂ ಯೋಜಯಸ್ವ ರಥೋತ್ತಮೇ ।
ಸ್ವಾಸ್ತೀರ್ಣಂ ರಾಜಭವನಾತ್ ಸೀತಾಯಾಶ್ಚಾಸನಂ ಕುರು ॥ ೨

ಸೀತಾ ಹಿ ರಾಜವಚನಾದಾಶ್ರಮಂ ಪುಣ್ಯಕರ್ಮಣಾಮ್ ।
ಮಯಾ ನೇಯಾ ಮಹರ್ಷೀಣಾಂ ಶೀಘ್ರಮಾನೀಯತಾಂ ರಥಃ ॥

ಸುಮಂತ್ರಸ್ತು ತಥೇತ್ಯುಕ್ತ್ವಾ ಯುಕ್ತಂ ಪರಮವಾಜಿಭಿಃ ।
ರಥಂ ಸುರುಚಿರಪ್ರಖ್ಯಂ ಸ್ವಾಸ್ತೀರ್ಣಂ ಸುಖಶಯ್ಯಯಾ ॥ ೪

ಆನೀಯೋವಾಚ ಸೌಮಿತ್ರಿಂ ಮಿತ್ರಾಣಾಂ ಮಾನವರ್ಧನಮ್ ।
ರಥೋಽಯಂ ಸಮನುಪ್ರಾಪ್ತೋ ಯತ್ ಕಾರ್ಯಂ ಕ್ರಿಯತಾಂ ಪ್ರಭೋ

## ಸರ್ಗ ೪೬

### ಲಕ್ಷ್ಮಣನು ಸೀತಾದೇವಿಯನ್ನು ಗಂಗಾತೀರಕ್ಕೆ ಕರೆದೊಯ್ಯುವುದು

ರಾತ್ರಿ ಕಳೆಯಿತು ದೀನಮನಸ್ಕನಾಗಿದ್ದ ಲಕ್ಷ್ಮಣನು ಸುಮಂತ್ರನನ್ನು ಕರೆದನು ಅವನ ಬಾಯಿ ಒಣಗಿತ್ತು "ಸಾರಥಿ, ಬೇಗನೆ ಕುದುರೆಗಳನ್ನು ರಥಕ್ಕೆ ಹೂಡು ರಾಜಭವನದಿಂದ ಉತ್ತಮವಾದ ಆಸನವನ್ನು ತಂದು ಸೀತಾದೇವಿಗೋಸ್ಕರ ಚೆನ್ನಾಗಿ ಹಾಸಿ ಸಜ್ಜುಗೊಳಿಸು (೧-೨) ಶ್ರೀರಾಮನ ಆಜ್ಞೆಯಂತೆ ನಾನು ಸೀತಾದೇವಿಯನ್ನು ಪುಣ್ಯಶೀಲರಾದ ಮಹರ್ಷಿಗಳ ಆಶ್ರಮಕ್ಕೆ ಕರೆದೊಯ್ಯಬೇಕಾಗಿದೆ ಬೇಗನೆ ರಥವನ್ನು ತೆಗೆದುಕೊಂಡು ಬಾ" ಎಂದು ಹೇಳಿದನು (೩) ಸುಮಂತ್ರನು ಆಗಲೆಂದು ಹೇಳಿ ರಥದಲ್ಲಿ ಸುಖಶಯ್ಯೆಯಿಂದ ಕೂಡಿದ ಸುಂದರವಾದ ಆಸನವನ್ನು ಹಾಕಿ ಉತ್ತಮಾಶ್ವಗಳನ್ನು ಹೂಡಿದ ರಥವನ್ನು ತಂದನು ಸೌಮಿತ್ರಿಯನ್ನು ಕುರಿತು "ರಾಜಪುತ್ರ, ರಥವು ಬಂದಿದೆ ಮುಂದಿನ ಕಾರ್ಯವು ನಡೆಯಲಿ" ಎಂದು

ಏವಮುಕ್ತಃ ಸುಮಂತ್ರೇಣ ರಾಜವೇಶ್ಮನಿ ಲಕ್ಷ್ಮಣಃ ।
ಪ್ರವಿಶ್ಯ ಸೀತಾಮಾಸಾದ್ಯ ವ್ಯಾಜಹಾರ ನರರ್ಷಭಃ ॥ ೬
ತ್ವಯಾ ಕಿಲೈಷ ನೃಪತಿರ್ವರಂ ವೈ ಯಾಚಿತಃ ಪ್ರಭುಃ ।
ನೃಪೇಣ ಚ ಪ್ರತಿಜ್ಞಾತಮಾಜ್ಞಪ್ತಶ್ಚಾಶ್ರಮಂ ಪ್ರತಿ ॥ ೭
ಗಂಗಾತೀರೇ ಮಯಾ ದೇವಿ ಋಷೀಣಾಮಾಶ್ರಮಾನ್ ಶುಭಾನ್ ।
ಶೀಘ್ರಂ ಗತ್ವಾ ತು ವೈದೇಹಿ ಶಾಸನಾತ್ ಪಾರ್ಥಿವಸ್ಯ ನಃ ॥ ೮
ಅರಣ್ಯೇ ಮುನಿಭಿರ್ಜುಷ್ಟೇ ಅವನೇಯಾ ಭವಿಷ್ಯಸಿ ।
ಏವಮುಕ್ತಾ ತು ವೈದೇಹೀ ಲಕ್ಷ್ಮಣೇನ ಮಹಾತ್ಮನಾ ॥ ೯
ಪ್ರಹರ್ಷಮತುಲಂ ಲೇಭೇ ಗಮನಂ ಚಾಪ್ಯರೋಚಯತ್ ।
ವಾಸಾಂಸಿ ಚ ಮಹಾರ್ಹಾಣಿ ರತ್ನಾನಿ ವಿವಿಧಾನಿ ಚ ॥ ೧೦
ಗೃಹೀತ್ವಾ ತಾನಿ ವೈದೇಹೀ ಗಮನಾಯೋಪಚಕ್ರಮೇ ।
ಇಮಾನಿ ಮುನಿಪತ್ನೀನಾಂ ದಾಸ್ಯಾಮ್ಯಾಭರಣಾನ್ಯಹಮ್ ॥ ೧೧
ವಸ್ತ್ರಾಣಿ ಚ ಮಹಾರ್ಹಾಣಿ ಧನಾನಿ ವಿವಿಧಾನಿ ಚ ।
ಸೌಮಿತ್ರಿಸ್ತು ತಥೇತ್ಯುಕ್ತ್ವಾ ರಥಮಾರೋಪ್ಯ ಮೈಥಿಲೀಮ್ ॥ ೧೨

---

ತಿಳಿಸಿದನು (೪-೫) ಅನಂತರ ಲಕ್ಷ್ಮಣನು ರಾಜಭವನಕ್ಕೆ ಹೋಗಿ ಜಾನಕಿಯನ್ನು ಸಂದರ್ಶಿಸಿ "ದೇವಿ, ಮಹಾರಾಜನಲ್ಲಿ ನೀನು ಒಂದು ಪ್ರಾರ್ಥನೆಯನ್ನು ಸಲ್ಲಿಸಿರುವೆಯಂತೆ ಅದನ್ನು ಒಪ್ಪಿದ ನೃಪಾಲನು ಋಷ್ಯಾಶ್ರಮಕ್ಕೆ ನಿನ್ನನ್ನು ಕರೆದೊಯ್ಯಬೇಕೆಂದು ನನಗೆ ಆಜ್ಞಾಪಿಸಿದ್ದಾನೆ (೬-೭) ತಾಯಿ-ವೈದೇಹಿ, ಗಂಗಾತೀರದಲ್ಲಿರುವ ಋಷಿಗಳ ಪುಣ್ಯಾಶ್ರಮಕ್ಕೆ ನಿನ್ನನ್ನು ರಾಜಾಜ್ಞೆಯಂತೆ ಶೀಘ್ರವಾಗಿ ಕರೆದುಕೊಂಡು ಹೋಗಬೇಕಾಗಿದೆ ಋಷಿಸೇವಿತವಾದ ಅರಣ್ಯದಲ್ಲಿ ಬಿಡಲು ನಿನ್ನನ್ನು ಕರೆದೊಯ್ಯುವೆನು !" ಎಂದು ತಿಳಿಸಿದನು (೮-೯) ಲಕ್ಷ್ಮಣನ ಮಾತನ್ನು ಕೇಳಿ ವೈದೇಹಿಗೆ ಪರಮಾನಂದವಾಯಿತು ಹೊರಡಲು ನಿಶ್ಚಯಿಸಿದಳು ಉತ್ತಮವಾದ ವಿವಿಧ ವಸ್ತ್ರಗಳನ್ನೂ ಧನವನ್ನೂ ರತ್ನಾಭರಣಗಳನ್ನೂ ತೆಗೆದುಕೊಂಡು "ಇವನ್ನು ಮುನಿಪತ್ನಿಯರಿಗೆ ಕೊಡುವೆನು !" ಎಂದಳು. ಸೌಮಿತ್ರಿಯು 'ಆಗಲಿ' ಎಂದು ಹೇಳಿ ಮೈಥಿಲಿಯನ್ನು ರಥದಲ್ಲಿ ಕುಳ್ಳಿರಿಸಿದನು (೧೦-೧೨)

ಪ್ರಯಯೌ ಶೀಘ್ರತುರಗೈ ರಾಮಸ್ಯಾಜ್ಞಾಮನುಸ್ಮರನ್ ।
ಅಬ್ರವೀಚ್ಚ ತದಾ ಸೀತಾ ಲಕ್ಷ್ಮಣಂ ಲಕ್ಷ್ಮಿವರ್ಧನಮ್ ॥ ೧೩

ಅಶುಭಾನಿ ಬಹೂನ್ಯೇವ ಪಶ್ಯಾಮಿ ರಘುನಂದನ ।
ನಯನಂ ಮೇ ಸ್ಫುರತ್ಯದ್ಯ ಗಾತ್ರೋತ್ಕಂಪಶ್ಚ ಜಾಯತೇ ॥ ೧೪

ಹೃದಯಾ ಚ್ಚೈವ ಸೌಮಿತ್ರೇ ಅಸ್ವಸ್ಥಮಿವ ಲಕ್ಷಯೇ ।
ಔತ್ಸುಕ್ಯಂ ಪರಮಂ ಚಾಪಿ ಅಧೃತಿಶ್ಚ ಪರಾ ಮಮ ॥ ೧೫

ಶೂನ್ಯಾಮೇವ ಚ ಪಶ್ಯಾಮಿ ಪೃಥಿವೀಂ ಪೃಥುಲೋಚನ ।
ಅಪಿ ಸ್ವಸ್ತಿ ಭವೇತ್ತಸ್ಯ ಭ್ರಾತುಸ್ತೇ ಭ್ರಾತೃವತ್ಸಲ ॥ ೧೬

ಶ್ವಶ್ರೂಣಾಂ ಚೈವ ಮೇ ವೀರ ಸರ್ವಾಸಾಮವಿಶೇಷತಃ ।
ಪುರೇ ಜನಪದೇ ಚೈವ ಕುಶಲಂ ಪ್ರಾಣಿನಾಮಪಿ ॥ ೧೭

ಇತ್ಯಂಜಲಿಕೃತಾ ಸೀತಾ ದೇವತಾ ಅಭ್ಯಯಾಚತ ।
ಲಕ್ಷ್ಮಣೋಽರ್ಥಂ ತು ತಂ ಶ್ರುತ್ವಾ ಶಿರಸಾ ವಂದ್ಯ ಮೈಥಿಲೀಮ್ ॥
ಶಿವಮಿತ್ಯಬ್ರವೀದ್ಧೃಷ್ಟೋ ಹೃದಯೇನ ವಿಶುಷ್ಯತಾ ।
ತತೋ ವಾಸಮುಪಾಗಮ್ಯ ಗೋಮತೀತೀರ ಆಶ್ರಮೇ ॥ ೧೯

---

ಅನಂತರ ತಾನೂ ರಥವನ್ನೇರಿ ಶ್ರೀರಾಮನ ಆಜ್ಞೆಯನ್ನು ಸ್ಮರಿಸಿಕೊಳ್ಳುತ್ತ ಅಶ್ವಗಳನ್ನೋಡಿಸಿ ಪ್ರಯಾಣಮಾಡಿದನು ಪ್ರಯಾಣಮಾಡುವಾಗ ಸೀತೆಯು ಲಕ್ಷ್ಮಣನೊಡನೆ "ರಘುನಂದನ, ಬಹಳ ದುಶ್ಶಕುನಗಳಾಗುತ್ತಿವೆ. ನನ್ನ ಬಲಗಣ್ಣು ಹಾರುತ್ತಿದೆ ಮೈ ನಡುಗುತ್ತಿದೆ (೧೩-೧೪) ಹೃದಯದಲ್ಲಿ ಸಂಕಟವಾಗುತ್ತಿದೆ ಏನೋ ಕಳವಳ, ಏನೋ ಹೆದರಿಕೆ ಪೃಥ್ವಿಯೇ ಶೂನ್ಯವಾದಂತೆ ಕಾಣುತ್ತದೆ ಲಕ್ಷ್ಮಣ, ನಿನ್ನ ಅಣ್ಣನಿಗೆ ಮಂಗಳವಾಗಲಿ! (೧೫-೧೬) ನನ್ನ ಅತ್ತೆಯರೆಲ್ಲರಿಗೂ ಒಳ್ಳೆಯದಾಗಲಿ! ರಾಜಧಾನಿಯಲ್ಲಿಯೂ ರಾಷ್ಟ್ರದಲ್ಲಿಯೂ ಇರುವ ಸಕಲ ಪ್ರಜೆಗಳಿಗೂ ಶುಭವಾಗಲಿ!" ಎಂದು ನುಡಿದು, ದೇವತೆಗಳಿಗೆ ಕೈಮುಗಿದು ಸಕಲರೂ ಕ್ಷೇಮದಲ್ಲಿರಲೆಂದು ಪ್ರಾರ್ಥಿಸಿಕೊಂಡಳು (೧೭-೧೮) ಲಕ್ಷ್ಮಣನು ಅದನ್ನು ಕೇಳಿ (ಏನೂ ತಿಳಿಯದವನಂತೆ) ಹರ್ಷವನ್ನು ನಟಿಸುತ್ತ ಮೈಥಿಲಿಗೆ ತಲೆಬಾಗಿ ವಂದಿಸಿ 'ಶುಭವಾಗಲಿ' ಎಂದನು ಅವನ ಹೃದಯವು ನೊರಗಿ ನೀರಸವಾಗಿತ್ತು.

ಪ್ರಭಾತೇ ಪುನರುತ್ಥಾಯ ಸೌಮಿತ್ರಿಃ ಸೂತಮಬ್ರವೀತ್ ।
ಯೋಜಯಸ್ವ ರಥಂ ಶೀಘ್ರಮದ್ಯ ಭಾಗೀರಥೀಜಲಮ್ ॥ ೨೦

ಶಿರಸಾ ಧಾರಯಿಷ್ಯಾಮಿ ತ್ರ್ಯಂಬಕಃ ಪರ್ವತೇ ಯಥಾ ।
ಸೋಽಶ್ವಾನ್ ರಜ್ಜ್ವಾಥ ಚತುರೋ ರಥೇ ಯುಂಕ್ತ್ವಾ ಮನೋಜವಾನ್

ಆರೋಹಸ್ವೇತಿ ವೈದೇಹೀಂ ಸೂತಃ ಪ್ರಾಂಜಲಿರಬ್ರವೀತ್ ।
ಸಾ ತು ಸೂತಸ್ಯ ವಚನಾದಾರುರೋಹ ರಥೋತ್ತಮಮ್ ॥ ೨೨

ಸೀತಾ ಸೌಮಿತ್ರಿಣಾ ಸಾರ್ಧಂ ಸುಮಂತ್ರೇಣ ಚ ಧೀಮತಾ ।
ಆಸಸಾದ ವಿಶಾಲಾಕ್ಷೀ ಗಂಗಾಂ ಪಾಪವಿನಾಶಿನೀಮ್ ॥ ೨೩

ಅಥಾರ್ಧದಿವಸಂ ಗತ್ವಾ ಭಾಗೀರಥ್ಯಾ ಜಲಾಶಯಮ್ ।
ನಿರೀಕ್ಷ್ಯ ಲಕ್ಷ್ಮಣೋ ದೀನಃ ಪ್ರರುರೋದ ಮಹಾಸ್ವನಃ ॥ ೨೪

ಸೀತಾ ತು ಪರಮಾಯತ್ತಾ ದೃಷ್ಟ್ವಾ ಲಕ್ಷ್ಮಣಮಾತುರಮ್ ।
ಉವಾಚ ವಾಕ್ಯಂ ಧರ್ಮಜ್ಞಾ ಕಿಮಿದಂ ರುದ್ಯತೇ ತ್ವಯಾ ॥ ೨೫

---

ಅನಂತರ ಗೋಮತೀನದಿಯ ತೀರದ ಒಂದು ಆಶ್ರಮದಲ್ಲಿ ಆ ರಾತ್ರಿ ಉಳಿದುಕೊಂಡರು (೧೯) ಪ್ರಭಾತವಾಗಲು ಸೌಮಿತ್ರಿಯು ಎದ್ದು ಸುಮಂತ್ರನನ್ನು ಕರೆದು "ಸಾರಥಿ, ರಥವನ್ನು ಹೂಡು ಹಿಮಾಲಯಗಿರಿಯಲ್ಲಿ ಶಿವನು ಗಂಗೆಯನ್ನು ಧರಿಸಿದಂತೆ, ನಾನು ಈ ದಿನ ಗಂಗಾಜಲವನ್ನು ಶಿರಸ್ಸಿನಲ್ಲಿ ಧರಿಸಿ ಮೀಯುವೆನು" ಎಂದನು (೨೦) ಸುಮಂತ್ರನು ಮನೋವೇಗದಿಂದೋಡುವ ನಾಲ್ಕು ಕುದುರೆಗಳನ್ನು ರಥಕ್ಕೆ ಕಟ್ಟಿ ಬದ್ಧಾಂಜಲಿಯಾಗಿ 'ವೈದೇಹಿ, ರಥವನ್ನೇರು" ಎಂದು ನುಡಿದನು ವೈದೇಹಿಯು ರಥವನ್ನು ಹತ್ತಿದಳು (೨೧-೨೨) ಆಮೇಲೆ ಆ ವಿಶಾಲಾಕ್ಷಿಯು ಲಕ್ಷ್ಮಣ ಸುಮಂತ್ರರೊಡನೆ ಪಾಪವಿನಾಶಿನಿಯಾದ ಭಾಗೀರಥೀನದಿಯ ಬಳಿಯನ್ನು ಸೇರಿದಳು ಅಲ್ಲಿಗೆ ಹೋಗಲು ಅರ್ಧದಿನ ಹಿಡಿಯಿತು ಗಂಗಾನದಿಯನ್ನು ಕಂಡೊಡನೆ ಶೋಕಾರ್ತನಾದ ಲಕ್ಷ್ಮಣನು ಬಿಕ್ಕಿಬಿಕ್ಕಿ ಗಟ್ಟಿಯಾಗಿ ಅಳತೊಡಗಿದನು (೨೩-೨೪) ಲಕ್ಷ್ಮಣನು ಅಳುವುದನ್ನು ಕಂಡು ಸೀತೆಯು ದುಃಖಾತಿಶಯದಿಂದ ಉದ್ವಿಗ್ನಳಾಗಿ ಹೀಗೆಂದಳು. "ಇದೇನು ಲಕ್ಷ್ಮಣ, ಅಳುತ್ತಿರುವೆ?

ಜಾಹ್ನವೀತೀರಮಾಸಾದ್ಯ ಚಿರಾಭಿಲಾಷಿತಂ ಮಮ ।
ಹರ್ಷಕಾಲೇ ಕಿಮರ್ಥಂ ಮಾಂ ವಿಷಾದಯಸಿ ಲಕ್ಷ್ಮಣ ॥ ೧೬

ನಿತ್ಯಂ ತ್ವಂ ರಾಮಪಾರ್ಶ್ವೇಷು ವರ್ತಸೇ ಪುರುಷರ್ಷಭ ।
ಕಚ್ಚಿದ್ವಿನಾಕೃತಸ್ತೇನ ದ್ವಿರಾತ್ರಂ ಶೋಕಮಾಗತಃ ॥ ೧೭

ಮಮಾಪಿ ದಯಿತೋ ರಾಮೋ ಜೀವಿತಾದಪಿ ಲಕ್ಷ್ಮಣ ।
ನ ಚಾಹಮೇವಂ ಶೋಚಾಮಿ ಮೈವಂ ತ್ವಂ ಬಾಲಿಶೋ ಭವ ॥ ೧೮

ತಾರಯಸ್ವ ಚ ಮಾಂ ಗಂಗಾಂ ದರ್ಶಯಸ್ವ ಚ ತಾಪಸಾನ್ ।
ತತೋ ಮುನಿಭ್ಯೋ ದಾಸ್ಯಾಮಿ ವಾಸಾಂಸ್ಯಾಭರಣಾನಿ ಚ ॥ ೧೯

ತತಃ ಕೃತ್ವಾ ಮಹರ್ಷೀಣಾಂ ಯಥಾವದಭಿವಾದನಮ್ ।
ತತ್ರ ಚೈಕಾಂ ನಿಶಾಮುಷ್ಯ ಯಾಸ್ಯಾಮಸ್ತಾಂ ಪುರೀಂ ಪುನಃ ॥ ೨೦

ಮಮಾಪಿ ಪದ್ಮಪತ್ರಾಕ್ಷಂ ಸಿಂಹೋರಸ್ಕಂ ಕೃಶೋದರಮ್ ।
ತ್ವರತೇ ಹಿ ಮನೋ ದ್ರಷ್ಟುಂ ರಾಮಂ ರಮಯತಾಂ ವರಮ್ ॥

---

ಜಾಹ್ನವೀತೀರಕ್ಕೆ ಬರಬೇಕೆಂಬುದು ನನ್ನ ದೀರ್ಘಕಾಲದ ಬಯಕೆಯಾಗಿತ್ತು ಅದು ನೆರವೇರಿತೆಂಬ ಸಂತೋಷದ ಸಮಯದಲ್ಲಿ ನನಗೆ ವಿಷಾದವನ್ನುಂಟುಮಾಡುತ್ತಿರುವುದೇಕೆ? (೧೫-೧೬) ನೀನು ಯಾವಾಗಲೂ ಶ್ರೀರಾಮನ ಸಮೀಪದಲ್ಲಿಯೇ ಇರತಕ್ಕವನು ಎರಡು ರಾತ್ರಿ ಅವನನ್ನಗಲಬೇಕಾಯಿತೆಂದು ಹೀಗೆ ಶೋಕಿಸುವೆಯಾ? ನನಗೂ ಸಹ ಶ್ರೀರಾಮಚಂದ್ರನು ಪ್ರಾಣಕ್ಕಿಂತ ಪ್ರಿಯನಾದವನು. ನಾನು ಹೀಗೆ ಶೋಕಿಸುತ್ತಿಲ್ಲ, ನೋಡು! ಲಕ್ಷ್ಮಣ, ಚಿಕ್ಕ ಹುಡುಗನಂತೆ ಆಡಬೇಡ! (೧೭-೧೮) ಗಂಗೆಯನ್ನು ದಾಟಿಸಿ ನನಗೆ ತಪಸ್ವಿಗಳ ದರ್ಶನವನ್ನು ಮಾಡಿಸು ಮುನಿಗಳಿಗೆ ವಸ್ತ್ರಾಭರಣಗಳನ್ನು ಕೊಡುವೆನು ತಪಸ್ವಿಗಳನ್ನು ಕಂಡು ಅಭಿವಾದನೆಮಾಡಿ ಒಂದು ರಾತ್ರಿ ಇದ್ದು ತಿರುಗಿ ಅಯೋಧ್ಯೆಗೆ ಹೊರಟುಹೋಗೋಣ! (೧೯-೨೦) ನನಗೂ ಸಹ ಪದ್ಮದಳಾಯತಾಕ್ಷನೂ ಸಿಂಹೋರಸ್ಕನೂ ಕೃಶೋದರನೂ ಆನಂದದಾಯಕನೂ ಆದ ಶ್ರೀರಾಮನನ್ನು ನೋಡಲು ಮನಸ್ಸು ಹಾತೊರೆಯುತ್ತಿದೆ!" ಎಂದಳು (೨೧)

ತಸ್ಯಾಸ್ತದ್ವಚನಂ ಶ್ರುತ್ವಾ ಪ್ರಮೃಜ್ಯ ನಯನೇ ಶುಭೇ ।
ನಾವಿಕಾನಾಹ್ವಯಾಮಾಸ ಲಕ್ಷ್ಮಣಃ ಪರವೀರಹಾ ॥ ೩೨

ಇಯಂ ಚ ಸಜ್ಜಾ ನೌಶ್ಚೇತಿ ದಾಶಾಃ ಪ್ರಾಂಜಲಯೋಽಬ್ರುವನ್ ।
ತಿತೀರ್ಷುರ್ಲಕ್ಷ್ಮಣೋ ಗಂಗಾಂ ಶುಭಾಂ ನಾವಮುಪಾರುಹತ್ ॥

ಗಂಗಾಂ ಸಂತಾರಯಾಮಾಸ ಲಕ್ಷ್ಮಣಸ್ತಾಂ ಸಮಾಹಿತಃ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಟ್‌ಚತ್ವಾರಿಂಶಃ ಸರ್ಗಃ



ಆಕೆಯ ಮಾತನ್ನು ಕೇಳಿ ಲಕ್ಷ್ಮಣನು ಕಣ್ಣೊರಸಿಕೊಂಡು ನಾವಿಕರನ್ನು ಬರಮಾಡಿದನು ನಾವಿಕರು ಕೈಮುಗಿದು ನಾವೆಯು ಸಿದ್ಧವಾಗಿದೆಯೆಂದರು ಲಕ್ಷ್ಮಣನು ಗಂಗಾನದಿಯನ್ನು ದಾಟುವುದಕ್ಕಾಗಿ ನಾವೆಯನ್ನೇರಿ, ಎಚ್ಚರಿಕೆಯಿಂದ ಜಾನಕಿಯನ್ನು ದಾಟಿಸಿದನು (೩೨-೩೩)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತಾರನೆಯ ಸರ್ಗ



## ಸಪ್ತಚತ್ವಾರಿಂಶಃ ಸರ್ಗಃ

### ರಾಮಶಾಸನಕಥನಮ್

ಅಥ ನಾವಂ ಸುವಿಸ್ತೀರ್ಣಾಂ ನೈಷಾದೀಂ ರಾಘವಾನುಜಃ ।
ಆರುರೋಹ ಸಮಾಯುಕ್ತಾಂ ಪೂರ್ವಮಾರೋಪ್ಯ ಮೈಥಿಲೀಮ್ ॥

ಸುಮಂತ್ರಂ ಚೈವ ಸರಥಂ ಸ್ಥೀಯತಾಮಿತಿ ಲಕ್ಷ್ಮಣಃ ।
ಉವಾಚ ಶೋಕಸಂತಪ್ತಃ ಪ್ರಯಾಹೀತಿ ಚ ನಾವಿಕಮ್ ॥ ೨

ತತಸ್ತೀರಮುಪಾಗಮ್ಯ ಭಾಗೀರಥ್ಯಾಃ ಸ ಲಕ್ಷ್ಮಣಃ ।
ಉವಾಚ ಮೈಥಿಲೀಂ ವಾಕ್ಯಂ ಪ್ರಾಂಜಲಿರ್ಬಾಷ್ಪಸಂಪ್ಲುತಃ ॥ ೩

ಹೃದ್ಗತಂ ಮೇ ಮಹಚ್ಛಲ್ಯಂ ಯಸ್ಮಾದಾರ್ಯೇಣ ಧೀಮತಾ ।
ಅಸ್ಮಿನ್ನಿಮಿತ್ತೇ ವೈದೇಹಿ ಲೋಕಸ್ಯ ವಚನೀಕೃತಃ ॥ ೪

ಶ್ರೇಯೋ ಹಿ ಮರಣಂ ಮೇಽದ್ಯ ಮೃತ್ಯುರ್ವಾ ಯತ್ಪರಂ ಭವೇತ್ ।
ನ ಚಾಸ್ಮಿನ್ನೀದೃಶೇ ಕಾರ್ಯೇ ನಿಯೋಜ್ಯೋ ಲೋಕನಿಂದಿತೇ ॥

## ಸರ್ಗ ೪೭

### ಶ್ರೀರಾಮನ ಆಜ್ಞೆಯನ್ನು ಮೈಥಿಲಿಗೆ ತಿಳಿಸುವುದು

ನಿಷಾದನಾದ ಗುಹನಿಗೆ ಸೇರಿದ ವಿಶಾಲವಾದ ನಾವೆಯಲ್ಲಿ ಮೈಥಿಲಿಯನ್ನು ಕುಳ್ಳಿರಿಸಿ, ಲಕ್ಷ್ಮಣನು ನಾವೆಯನ್ನೇರಿದನು ಆತನು ಸುಮಂತ್ರನಿಗೆ ರಥಸಹಿತವಾಗಿ ಕಾದಿರಬೇಕೆಂದು ತಿಳಿಸಿ, ಶೋಕಸಂತಪ್ತನಾಗಿ ನಾವಿಕನನ್ನು ನೋಡಿ 'ನಡೆ' ಎಂದನು (೧-೨) ಗಂಗಾನದಿಯ ಆಚೆಯ ತೀರವನ್ನು ಸೇರಿದಮೇಲೆ ಅವನು ಕೈಮುಗಿದುಕೊಂಡು ಸೀತಾದೇವಿಯನ್ನು ಕುರಿತು ಇಂತೆಂದನು ಕಣ್ಣೀರು ತುಳುಕುತ್ತಿತ್ತು "ವೈದೇಹಿ, ಪ್ರಾಜ್ಞನಾದ ಅಣ್ಣನು ಈ ನಿಮಿತ್ತದಿಂದ ನನ್ನನ್ನು ಲೋಕನಿಂದೆಗೆ ಗುರಿಮಾಡಿದನು ನನ್ನ ಎದೆಯಲ್ಲಿ ಇದೊಂದು ಮಹತ್ತರವಾದ ಶೂಲವಾಗಿ ಪರಿಣಮಿಸಿತು (೩-೪). ಈ ಅವಸ್ಥೆಯಲ್ಲಿ ನನಗೆ ಮರಣವೇ ಲೇಸು ಮರಣಕ್ಕಿಂತಲೂ ಹೆಚ್ಚಿನದಿದ್ದರೆ, ಅದು ಇನ್ನೂ ಉತ್ತಮ! ಈ ಬಗೆಯ ಸರ್ವನಿಂದ್ಯವಾದ

ಪ್ರಸೀದ ಚ ನ ಮೇ ಪಾಪಂ ಕರ್ತುಮರ್ಹಸಿ ಶೋಭನೇ ।
ಇತ್ಯಂಜಲಿಕೃತೋ ಭೂಮೌ ನಿಪಪಾತ ಸ ಲಕ್ಷ್ಮಣಃ ॥ ೬

ರುದಂತಂ ಪ್ರಾಂಜಲಿಂ ದೃಷ್ಟ್ವಾ ಕಾಂಕ್ಷಂತಂ ಮೃತ್ಯುಮಾತ್ಮನಃ ।
ಮೈಥಿಲೀ ಭೃಶಸಂವಿಗ್ನಾ ಲಕ್ಷ್ಮಣಂ ವಾಕ್ಯಮಬ್ರವೀತ್ ॥ ೭

ಕಿಮಿದಂ ನಾವಗಚ್ಛಾಮಿ ಬ್ರೂಹಿ ತತ್ತ್ವೇನ ಲಕ್ಷ್ಮಣ ।
ಪಶ್ಯಾಮಿ ತ್ವಾಂ ನ ಚ ಸ್ವಸ್ಥಮಪಿ ಕ್ಷೇಮಂ ಮಹೀಪತೇಃ ॥ ೮

ಶಾಪಿತೋಽಸಿ ನರೇಂದ್ರೇಣ ಯತ್ತ್ವಂ ಸಂತಾಪಮಾಗತಃ ।
ತದ್ಬ್ರೂಯಾಃ ಸಂನಿಧೌ ಮಹ್ಯಮಹಮಾಜ್ಞಾಪಯಾಮಿ ತೇ ॥ ೯

ವೈದೇಹ್ಯಾ ಚೋದ್ಯಮಾನಸ್ತು ಲಕ್ಷ್ಮಣೋ ದೀನಚೇತನಃ ।
ಅವಾಙ್ಮುಖೋ ಬಾಷ್ಪಕಲಂ ವಾಕ್ಯಮೇತದುವಾಚ ಹ ॥ ೧೦

ಶ್ರುತ್ವಾ ಪರಿಷದೋ ಮಧ್ಯೇ ಹ್ಯಪವಾದಂ ಸುದಾರುಣಮ್ ।
ಪುರೇ ಜನಪದೇ ಚೈವ ತ್ವತ್ಕೃತೇ ಜನಕಾತ್ಮಜೇ ॥ ೧೧

---

ಕೆಲಸದಲ್ಲಿ ನನ್ನನ್ನು ನೇಮಿಸಬಾರದಾಗಿತ್ತು (೫) ಓ ನಾರೀಶಿರೋಮಣಿ– ಅಮ್ಮ, ಪ್ರಸನ್ನಳಾಗು ನನ್ನಲ್ಲಿ ಪಾಪವನ್ನೆಣಿಸಬೇಡ" ಎಂದು ಕೈಮುಗಿದು ಹೇಳುತ್ತ ಲಕ್ಷ್ಮಣನು ನೆಲದಲ್ಲಿ ಕುಸಿದುಬಿದ್ದನು ಗಟ್ಟಿಯಾಗಿ ಅಳುತ್ತ "ನನಗೆ ಸಾವು ಬರಬಾರದೆ!" ಎಂದು ಹಲುಬುತ್ತಿದ್ದ ಲಕ್ಷ್ಮಣನನ್ನು ಕಂಡು ವೈಥಿಲಿಯು ಶೋಕದಿಂದ ದಿಗ್ಭ್ರಾಂತಳಾದಳು (೬-೭) ಅವಳು "ಇದೇನೆಂದು ನನಗೆ ತಿಳಿಯದಾಗಿದೆ ಲಕ್ಷ್ಮಣ, ಸತ್ಯವೇನೆಂಬುದನ್ನು ಹೇಳಿಬಿಡು ನಿನ್ನ ಮನಸ್ಸಿಗೆ ನೆಮ್ಮದಿಯಿಲ್ಲವೆಂಬುದು ಸ್ಪಷ್ಟವಾಗಿದೆ ಮಹಾರಾಜನು ಕ್ಷೇಮದಿಂದಿರುವನಷ್ಟೆ? (೮) ಮಹಾರಾಜನ ಆಣೆಯಿಟ್ಟು ಕೇಳುತ್ತೇನೆ, ನಿನಗಾದ ದುಃಖವೇನೆಂಬುದನ್ನು ನನ್ನೆದುರಿಗೆ ತಿಳಿಸಿಬಿಡು ಇದು ನನ್ನ ಆಜ್ಞೆ!" ಎಂದಳು ವೈದೇಹಿಯು ಹೀಗೆ ಒತ್ತಾಯಪಡಿಸಲು, ಲಕ್ಷ್ಮಣನು ದೈನ್ಯದಿಂದ ತಲೆತಗ್ಗಿಸಿ ಕಣ್ಣೀರು ಸುರಿಸುತ್ತ ಗದ್ಗದಸ್ವರದಿಂದ ಹೇಳಿದನು (೯-೧೦). "ಜನಕಾತ್ಮಜ, ನಿನ್ನ ವಿಷಯವಾಗಿ ನಗರದಲ್ಲಿಯೂ ರಾಷ್ಟ್ರದಲ್ಲಿಯೂ ಹುಟ್ಟಿರುವ ದಾರುಣವಾದ ಒಂದು ಅಪವಾದವನ್ನು ಅಣ್ಣನು

*

ರಾಮಃ ಸಂತಪ್ತಹೃದಯೋ ಮಾಂ ನಿವೇದ್ಯ ಗೃಹಂ ಗತಃ ।
ನ ತಾನಿ ವಚನೀಯಾನಿ ಮಯಾ ದೇವಿ ತವಾಗ್ರತಃ ॥ ೧೨

ಯಾನಿ ರಾಜ್ಞಾ ಹೃದಿ ನ್ಯಸ್ತಾನ್ಯಮರ್ಷಾತ್ ಪೃಷ್ಠತಃ ಕೃತಃ ।
ಸಾ ತ್ವಂ ತ್ಯಕ್ತಾ ನೃಪತಿನಾ ನಿರ್ದೋಷಾ ಮಮ ಸಂನಿಧೌ ॥ ೧೩

ಪೌರಾಪವಾದಭೀತೇನ ಗ್ರಾಹ್ಯಂ ದೇವಿ ನ ತೇಽನ್ಯಥಾ ।
ಆಶ್ರಮಾಂತೇಷು ಚ ಮಯಾ ತ್ಯಕ್ತವ್ಯಾ ತ್ವಂ ಭವಿಷ್ಯಸಿ ॥ ೧೪

ರಾಜ್ಞಃ ಶಾಸನಮಾಜ್ಞಾಯ ತವೇದಂ ಕಿಲ ದೌರ್ಹೃದಮ್ ।
ತದೇತಜ್ಜಾಹ್ನವೀತೀರೇ ಬ್ರಹ್ಮರ್ಷೀಣಾಂ ತಪೋವನಮ್ ॥ ೧೫

ಪುಣ್ಯಂ ಚ ರಮಣೀಯಂ ಚ ಮಾ ವಿಷಾದಂ ಕೃಥಾಃ ಶುಭೇ ।
ರಾಜ್ಞೋ ದಶರಥಸ್ಯೇಷ್ಟಃ ಪಿತುರ್ಮೇ ಮುನಿಪುಂಗವಃ ॥ ೧೬

ಸಖಾ ಪರಮಕೋ ವಿಪ್ರೋ ವಾಲ್ಮೀಕಿಃ ಸುಮಹಾಯಶಾಃ ।
ಪಾದಚ್ಛಾಯಾಮುಪಾಗಮ್ಯ ಸುಖಮಸ್ಯ ಮಹಾತ್ಮನಃ ॥ ೧೭

---

ಸಭಾಮಧ್ಯದಲ್ಲಿ ಕೇಳಿದನಂತೆ ಅದರಿಂದ ಬಹಳ ನೊಂದ ರಾಘವನು, ಅದನ್ನು ನನಗೆ ತಿಳಿಸಿ ಗೃಹದೊಳಗೆ ಹೊರಟುಹೋದನು ದೇವಿ, ಆ ಕೆಟ್ಟ ಮಾತುಗಳನ್ನು ನಿನ್ನೆದುರಿಗೆ ನಾನು ಹೇಳಬಾರದು (೧೧-೧೨) ಅವು ಮಹಾರಾಜನ ಹೃದಯದಲ್ಲಿ ನೆಟ್ಟವು ತಾಳ್ಮೆಯಿಲ್ಲದೆ ಹಿಂದುಗಡೆಯಲ್ಲಿ ಹೇಳಿಕೊಳ್ಳುತ್ತಿದ್ದ ಜನಾಪವಾದವಿದು ನನ್ನೆದುರಿಗೇ ನಿರ್ದೋಷಳೆಂದು ನಿಶ್ಚಿತಳಾದ ನಿನ್ನನ್ನು ನರೇಂದ್ರನು ತ್ಯಜಿಸಿದ್ದಾನೆ ಜನಾಪವಾದಕ್ಕೆ ಹೆದರಿ ಹೀಗೆ ಮಾಡಿದ್ದಾನೆಯೇ ಹೊರತು ಬೇರೆಯಲ್ಲ ದೇವಿ, ಅನ್ಯಥಾ ತಿಳಿಯಬಾರದು ಋಷ್ಯಾಶ್ರಮಗಳ ಬಳಿಯಲ್ಲಿ ನಿನ್ನನ್ನು ಬಿಟ್ಟು ಹೋಗಬೇಕಾಗಿದೆ (೧೩-೧೪) ಇದು ಮಹಾರಾಜನ ಆಜ್ಞೆ ಆಶ್ರಮಕ್ಕೆ ಬರಬೇಕೆಂಬುದು ನಿನ್ನ ಬಯಕೆಯಾಗಿತ್ತಂತೆ ಇದು ಗಂಗಾತೀರದಲ್ಲಿರುವ ಬ್ರಹ್ಮರ್ಷಿಗಳ ತಪೋವನ ಪವಿತ್ರವೂ ರಮಣೀಯವೂ ಆಗಿದೆ ಹೇ ಮಂಗಳದೇವತೆ, ವಿಷಾದಿಸಬೇಡ ನನ್ನ ತಂದೆಯಾದ ದಶರಥ ಮಹಾರಾಜನಿಗೆ ಅತ್ಯಂತ ಪ್ರಿಯರಾದ ವಾಲ್ಮೀಕಿ ಮಹರ್ಷಿಗಳು ಇಲ್ಲಿ ನೆಲೆಸಿದ್ದಾರೆ (೧೫-೧೬) ಆ ವಿಪ್ರರು ಲೋಕವಿಖ್ಯಾತರು. ಆ ಮಹಾತ್ಮರ

ಉಪವಾಸಪರೈಕಾಗ್ರಾ ವಸ ತ್ವಂ ಜನಕಾತ್ಮಜೇ ।
ಪತಿವ್ರತಾತ್ವಮಾಸ್ಥಾಯ ರಾಮಂ ಕೃತ್ವಾ ಸದಾ ಹೃದಿ ॥ ೧೮
ಶ್ರೇಯಸ್ತೇ ಪರಮಂ ದೇವಿ ತಥಾ ಕೃತ್ವಾ ಭವಿಷ್ಯತಿ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತಚತ್ವಾರಿಂಶಃ ಸರ್ಗಃ



ಪಾದದ ನೆರಳಲ್ಲಿ ನಿನಗೆ ಸುಖವೆನಿಸುವುದು ವ್ರತಶೀಲಳಾಗಿ ಏಕಾಗ್ರಚಿತ್ತ ದಿಂದಿರು ಪತಿವ್ರತಾಧರ್ಮವನ್ನು ಪಾಲಿಸುತ್ತ, ಶ್ರೀರಾಮನನ್ನು ಹೃದಯ ದಲ್ಲಿ ಸದಾ ನೆನೆಯುತ್ತಿರು ಅದರಿಂದ, ದೇವಿ, ನಿನಗೆ ಪರಮ ಶ್ರೇಯಸ್ಸು ದೊರೆಯುವುದು " ಎಂದನು (೧೭-೧೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತೇಳನೆಯ ಸರ್ಗ



## ಅಷ್ಟಚತ್ವಾರಿಂಶಃ ಸರ್ಗಃ

### ಸೀತಾಪರಿತ್ಯಾಗಃ

ಲಕ್ಷ್ಮಣಸ್ಯ ವಚಃ ಶ್ರುತ್ವಾ ದಾರುಣಂ ಜನಕಾತ್ಮಜಾ ।
ಪರಂ ವಿಷಾದಮಾಗಮ್ಯ ವೈದೇಹೀ ನಿಪಪಾತ ಹ ॥ ೧

ಸಾ ಮುಹೂರ್ತಮಿವಾಸಂಜ್ಞಾ ಬಾಷ್ಪಪರ್ಯಾಕುಲೇಕ್ಷಣಾ ।
ಲಕ್ಷ್ಮಣಂ ದೀನಯಾ ವಾಚಾ ಉವಾಚ ಜನಕಾತ್ಮಜಾ ॥ ೨

ಮಾಮಿಕೇಯಂ ತನುರ್ನೂನಂ ಸೃಷ್ಟಾ ದುಃಖಾಯ ಲಕ್ಷ್ಮಣ ।
ಧಾತ್ರಾ ಯಸ್ಯಾಸ್ತಥಾ ಮೇಽದ್ಯ ದುಃಖಮೂರ್ತಿಃ ಪ್ರದೃಶ್ಯತೇ ॥ ೩

ಕಿಂ ನು ಪಾಪಂ ಕೃತಂ ಪೂರ್ವಂ ಕೋ ವಾ ದಾರೈರ್ವಿಯೋಜಿತಃ ।
ಯಾಹಂ ಶುದ್ಧಸಮಾಚಾರಾ ತ್ಯಕ್ತಾ ನೃಪತಿನಾ ಸತೀ ॥ ೪

ಪುರಾಹಮಾಶ್ರಮೇ ವಾಸಂ ರಾಮಪಾದಾನುವರ್ತಿನೀ ।
ಅನುರುಧ್ಯಾಪಿ ಸೌಮಿತ್ರೇ ದುಃಖೇ ಚ ಪರಿವರ್ತಿನೀ ॥ ೫

## ಸರ್ಗ ೪೮

### ಸೀತಾದೇವಿಯ ವಿಲಾಪ ಲಕ್ಷ್ಮಣನು ಅವಳನ್ನು ಪರಿತ್ಯಜಿಸಿ ಹಿಂದಿರುಗುವುದು

ಲಕ್ಷ್ಮಣನ ದಾರುಣವಾದ ವಚನವನ್ನು ಕೇಳಿ ವೈದೇಹಿಯು ಶೋಕಾತಿರೇಕದಿಂದ ಕುಸಿದಳು ಸ್ವಲ್ಪಹೊತ್ತು ಅವಳಿಗೆ ಎಚ್ಚರದಪ್ಪಿದಂತಾಯಿತು ಆಮೇಲೆ ಕಂಬನಿಮಿಡಿಯುತ್ತ ಜಾನಕಿಯು ಲಕ್ಷ್ಮಣನನ್ನು ನೋಡಿ ದೈನ್ಯಸ್ವರದಿಂದ ಹೀಗೆಂದಳು (೧-೨) "ಲಕ್ಷ್ಮಣ, ದುಃಖವನ್ನನುಭವಿಸಲೆಂದೇ ಬ್ರಹ್ಮನು ನನ್ನ ದೇಹವನ್ನು ನಿರ್ಮಿಸಿದ್ದಾನೆ ಆದ್ದರಿಂದ ಇದು ದುಃಖದ ಮೂರ್ತಿಯಾಗಿಬಿಟ್ಟಿದೆ! (೩) ನಾನು ಪೂರ್ವಜನ್ಮದಲ್ಲಿ ಯಾವ ಪಾಪಕೃತ್ಯವನ್ನು ಮಾಡಿರಬಹುದು! ಯಾರನ್ನು ಹೆಂಡತಿಯಿಂದ ಅಗಲಿಸಿರಬಹುದು! ಇಷ್ಟೊಂದು ಪರಿಶುದ್ಧವಾದ ಮನಸ್ಸಿನಿಂದ ನಡೆಯುತ್ತ ಪತಿವ್ರತೆಯಾಗಿ ಬಾಳುತ್ತಿದ್ದರೂ ಮಹಾರಾಜನು ನನ್ನನ್ನು ತ್ಯಜಿಸಿಬಿಟ್ಟನಲ್ಲ! (೪) ಹಿಂದೆ ನಾನು ವನವಾಸದುಃಖಕ್ಕೆ ಒಳಗಾದರೂ ಶ್ರೀರಾಮನ

ಸಾ ಕಥಂ ಹ್ಯಾಶ್ರಮೇ ಸೌಮ್ಯ ವತ್ಸ್ಯಾಮಿ ವಿಜನೀಕೃತಾ ।
ಆಖ್ಯಾಸ್ಯಾಮಿ ಚ ಕಸ್ಯಾಹಂ ದುಃಖಂ ದುಃಖಪರಾಯಣಾ ॥ ೬

ಕಿಂ ನು ವಕ್ಷ್ಯಾಮಿ ಮುನಿಷು ಕರ್ಮ ವಾಸತ್ ಕೃತಂ ಚ ಕಿಮ್ ।
ಕಸ್ಮಿಂಶ್ಚಿತ್ ಕಾರಣೇ ತ್ಯಕ್ತಾ ರಾಘವೇಣ ಮಹಾತ್ಮನಾ ॥ ೭

ನ ಖಲ್ವದ್ಯೈವ ಸೌಮಿತ್ರೇ ಜೀವಿತಂ ಜಾಹ್ನವೀಜಲೇ ।
ತ್ಯಜೇಯಂ ರಾಜವಂಶಸ್ತು ಭರ್ತುರ್ಮೇ ಪರಿಹಾಸ್ಯತೇ ॥ ೮

ಯಥಾಜ್ಞಂ ಕುರು ಸೌಮಿತ್ರೇ ತ್ಯಜ ಮಾಂ ದುಃಖಭಾಗಿನೀಮ್ ।
ನಿದೇಶೇ ಸ್ಥೀಯತಾಂ ರಾಜ್ಞಃ ಶೃಣು ಚೇದಂ ವಚೋ ಮಮ ॥ ೯

ಶ್ವಶ್ರೂಣಾಮವಿಶೇಷೇಣ ಪ್ರಾಂಜಲಿಪ್ರಗ್ರಹೇಣ ಚ ।
ಶಿರಸಾ ವಂದ್ಯ ಚರಣೌ ಕುಶಲಂ ಬ್ರೂಹಿ ಪಾರ್ಥಿವಮ್ ॥ ೧೦

---

ಪಾದಸೇವೆಯನ್ನು ಮಾಡುತ್ತ ಕಷ್ಟವನ್ನು ಮರೆತು ತಪೋವನದಲ್ಲಿದ್ದೆನು ಸೌಮ್ಯ—ಸೌಮಿತ್ರಿ, ಈಗ ನಾನು (ರಾಮಸಾಂನಿಧ್ಯವಿಲ್ಲದೆ) ಏಕಾಕಿನಿಯಾಗಿ ಆಶ್ರಮದಲ್ಲಿ ಇರುವುದು ಹೇಗೆ? ದುಃಖಪರಾಯಣಳಾದ ನಾನು ನನ್ನ ಕಷ್ಟವನ್ನು ಯಾರಲ್ಲಿ ತೋಡಿಕೊಳ್ಳಲಿ? (೫-೬) ಮುನಿಗಳಿಗೆ ಏನು ಹೇಳಲಿ? 'ನೀನು ಯಾವ ಪಾಪಕೃತ್ಯವನ್ನು ಮಾಡಿದೆ? ಮಹಾತ್ಮನಾದ ರಾಘವನು ನಿನ್ನನ್ನು ತ್ಯಜಿಸಲು ಕಾರಣವೇನು?' ಎಂದು ಅವರು ಕೇಳಿದರ ಯಾವ ಉತ್ತರವನ್ನು ಕೊಡಲಿ? (೭) ಸೌಮಿತ್ರಿ, ಈಗಲೇ ಜಾಹ್ನವೀಜಲದಲ್ಲಿ ಬಿದ್ದು ಜೀವವನ್ನು ತೊರೆಯಲಾರನೆ? ತೊರೆದರ ನನ್ನ ಪತಿಯ ವಂಶವು ವಿಚ್ಛಿನ್ನವಾಗುವುದು * (೮) ಲಕ್ಷ್ಮಣ, ನಿನಗೆ ಆಜ್ಞೆಯಾದಂತೆ ಮಾಡು ಸದಾ ದುಃಖಭಾಗಿನಿಯಾದ ನನ್ನನ್ನು ತ್ಯಜಿಸಿ ಹೋಗು ರಾಜನ ಆಜ್ಞೆಯನ್ನು ಪಾಲಿಸು ನಾನು ಹೇಳುವ ಈ ಮಾತನ್ನಾಲಿಸು (೯) ನನ್ನ ಪರವಾಗಿ ಅತ್ತೆಯರೆಲ್ಲರಿಗೂ ಮಹಾರಾಜನಿಗೂ ಕಾಲುಮುಟ್ಟಿ

---

* ತಾನು ಗರ್ಭಿಣಿಯಾದ್ದರಿಂದ ರಾಮನ ವಂಶವು ಮುಂದುವರಿಯುವುದಿಲ್ಲವೆಂದು ಅಭಿಪ್ರಾಯ

ಶಿರಸಾಭಿನತೋ ಬ್ರೂಯಾಃ ಸರ್ವಾಸಾಮೇವ ಲಕ್ಷ್ಮಣ ।
ವಕ್ತವ್ಯಶ್ಚಾಪಿ ನೃಪತಿರ್ಧರ್ಮೇಷು ಸುಸಮಾಹಿತಃ ॥ ೧೧

ಜಾನಾಸಿ ಚ ಯಥಾ ಶುದ್ಧಾ ಸೀತಾ ತತ್ತ್ವೇನ ರಾಘವ ।
ಭಕ್ತ್ಯಾ ಚ ಪರಯಾ ಯುಕ್ತಾ ಹಿತಾ ಚ ತವ ನಿತ್ಯಶಃ ॥ ೧೨

ಅಹಂ ತ್ಯಕ್ತಾ ತ್ವಯಾ ವೀರ ಅಯಶೋಭೀರುಣಾ ಜನೇ ।
ಯಚ್ಚ ತೇ ವಚನೀಯಂ ಸ್ಯಾದಪವಾದಸಮುತ್ಥಿತಮ್ ॥ ೧೩

ಮಯಾ ಹಿ ಪರಿಹರ್ತವ್ಯಂ ತ್ವಂ ಹಿ ಮೇ ಪರಮಾ ಗತಿಃ ।
ವಕ್ತವ್ಯಶ್ಚೇತಿ ನೃಪತಿರ್ಧರ್ಮೇಣ ಸುಸಮಾಹಿತಃ ॥ ೧೪

ಯಥಾ ಭ್ರಾತೃಷು ವರ್ತೇಥಾಸ್ತಥಾ ಪೌರೇಷು ನಿತ್ಯದಾ ।
ಪರಮೋ ಹ್ಯೇಷ ಧರ್ಮಸ್ತೇ ತಸ್ಮಾತ್ ಕೀರ್ತಿರನುತ್ತಮಾ ॥ ೧೫

ಯತ್ತು ಪೌರಜನೋ ರಾಜನ್ ಧರ್ಮೇಣ ಸಮವಾಪ್ನುಯಾತ್ ।
ಅಹಂ ತು ನಾನುಶೋಚಾಮಿ ಸ್ವಶರೀರಂ ನರರ್ಷಭ ॥ ೧೬

---

ತಲೆಬಾಗಿ ನಮಸ್ಕರಿಸಿ ಅವರೆಲ್ಲರ ಕುಶಲವನ್ನೂ ಕೇಳಿದ್ದೇನೆಂದು ಹೇಳು. ಧರ್ಮದ ವಿಷಯದಲ್ಲಿ ಬಹಳ ಎಚ್ಚರದಿಂದ ವರ್ತಿಸುವ ನರೇಂದ್ರನಿಗೆ ಈ ಮಾತನ್ನು ತಿಳಿಸು (೧೦-೧೧) "ರಾಘವ, ವಸ್ತುತಃ ಸೀತೆಯು ಪರಿಶುದ್ಧಳೆಂದೂ ನಿನ್ನ ವಿಷಯದಲ್ಲಿ ಅತ್ಯಂತ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದಳೆಂದೂ ಸದಾ ನಿನ್ನ ಹಿತವನ್ನು ಕೋರುತ್ತಿದ್ದಳೆಂದೂ ನಿನಗೆ ಗೊತ್ತಿದೆ (೧೨) ಎಲೈ ವೀರಾಗ್ರಣಿ, ಅಪಕೀರ್ತಿಗೆ ಹೆದರಿ ನನ್ನನ್ನು ತೊರೆದಿದ್ದೀಯೆ ಜನಾಪವಾದದಿಂದ ನಿನಗೆ ಬಂದಿರುವ ನಿಂದೆಯನ್ನು ಪರಿಹರಿಸಬೇಕಾದವಳು ನಾನಲ್ಲವೆ? ನೀನೇ ನನಗೆ ಪರಮಗತಿಯಲ್ಲವೆ? ಧರ್ಮನಿಷ್ಠನಾದ ರಾಜನ ವಿಷಯದಲ್ಲಿ ಪ್ರಜೆಗಳು ಹಾಗೆ ಹೇಳಿಕೊಳ್ಳುತ್ತಿರುವುದು ಸಹಜವೇ ಸರಿ (೧೩-೧೪) ಸೋದರರಲ್ಲಿ ಹೇಗೆ ನಡೆದುಕೊಳ್ಳುವೆಯೋ ಹಾಗೆ ಪ್ರಜೆಗಳಲ್ಲಿಯೂ ನಡೆದುಕೊಳ್ಳುವುದು ಯುಕ್ತವಾದದ್ದೇ ಇದೇ ಪರಮಧರ್ಮ ಇದರಿಂದಲೇ ಉತ್ತಮವಾದ ಕೀರ್ತಿ ಲಭಿಸುತ್ತದೆ ಮಹಾರಾಜ, ಪ್ರಜೆಗಳು ಧರ್ಮದಿಂದ ಇಷ್ಟಾರ್ಥವನ್ನು ಪಡೆದುಕೊಳ್ಳುವಂತೆ ಮಾಡುವುದು ರಾಜಧರ್ಮ ಹೇ ಪುರುಷೋತ್ತಮ, ಈ ದೇಹಕ್ಕಾಗಿ ನಾನು ಶೋಕಿಸುವುದಿಲ್ಲ

ಯಥಾಪವಾದಂ ಪೌರಾಣಾಂ ತಥೈವ ರಘುನಂದನ ।
ಪತಿರ್ಹಿ ದೇವತಾ ನಾರ್ಯಾಃ ಪತಿರ್ಬಂಧುಃ ಪತಿರ್ಗುರುಃ ॥ ೧೭

ಪ್ರಾಣೈರಪಿ ಪ್ರಿಯಂ ತಸ್ಮಾದ್ಭರ್ತುಃ ಕಾರ್ಯಂ ವಿಶೇಷತಃ ।
ಇತಿ ಮದ್ವಚನಾದ್ರಾಮೋ ವಕ್ತವ್ಯೋ ಮಮ ಸಂಗ್ರಹಃ ॥ ೧೮

ನಿರೀಕ್ಷ್ಯ ಮಾದ್ಯ ಗಚ್ಛ ತ್ವಮೃತುಕಾಲಾತಿವರ್ತಿನೀಮ್ ।
ಏವಂ ಬ್ರುವತ್ಯಾಂ ಸೀತಾಯಾಂ ಲಕ್ಷ್ಮಣೋ ದೀನಚೇತನಃ ॥ ೧೯

ಶಿರಸಾ ವಂದ್ಯ ಧರಣೀಂ ವ್ಯಾಹರ್ತುಂ ನ ಶಶಾಕ ಹ ।
ಪ್ರದಕ್ಷಿಣಂ ಚ ತಾಂ ಕೃತ್ವಾ ರುದನ್ನೇವ ಮಹಾಸ್ವನಃ ॥ ೨೦

ಧ್ಯಾತ್ವಾ ಮುಹೂರ್ತಂ ತಾಮಾಹ ಕಿಂ ಮಾಂ ವಕ್ಷ್ಯಸಿ ಶೋಭನೇ ।
ದೃಷ್ಟಪೂರ್ವಂ ನ ತೇ ರೂಪಂ ಪಾದೌ ದೃಷ್ಟೌ ತವಾನಘೇ ॥ ೨೧

---

(೧೫-೧೭) ಜನರ ಅಪವಾದವು ಹೇಗಿದೆಯೋ ಹಾಗೆ, ರಘುನಂದನ, ಅದನ್ನು ನಿನಗಾಗಿ ಹೊರುವೆನು ಹೆಂಗಸಿಗೆ ಪತಿಯೇ ದೇವತೆ, ಪತಿಯೇ ಬಂಧು, ಪತಿಯೇ ಗುರು (೧೭) ಆದ್ದರಿಂದ ಪ್ರಾಣವನ್ನಾದರೂ ಕೊಟ್ಟು ಪತಿಗೆ ಪ್ರಿಯವಾದ್ದನ್ನು ಪತ್ನಿಯು ಮಾಡಬೇಕು" ಈ ಮಾತನ್ನು, ಲಕ್ಷ್ಮಣ, ನಾನು ಹೇಳಿದನೆಂದು ಶ್ರೀರಾಮನಿಗೆ ತಿಳಿಸು ಇಷ್ಟನ್ನು ಸಂಕ್ಷೇಪವಾಗಿ ಹೇಳಿದ್ದೇನೆ (೧೮) ಲಕ್ಷ್ಮಣ, ಈಗ ನನಗೆ ಋತುಕಾಲವು ಅತಿಕ್ರಮಿಸಿದೆ ಯೆಂಬುದನ್ನು* ನೋಡಿ ಹೋಗು!" ಎಂದು ನುಡಿದಳು ಜಾನಕಿಯ ನುಡಿಯನ್ನು ಕೇಳಿ ಲಕ್ಷ್ಮಣನು ದೈನ್ಯದಿಂದ ಕಳವಳಿಸಿದನು ತಲೆಬಾಗಿ ನೆಲ ಮುಟ್ಟಿದನು ಅವನಿಗೆ ಮಾತಾಡಲು ಶಕ್ತಿಯೇ ಉಳಿಯಲಿಲ್ಲ ಗಟ್ಟಿಯಾಗಿ ಗಳಗಳನೆ ಅಳುತ್ತ ವೈದೇಹಿಗೆ ಪ್ರದಕ್ಷಿಣೆ ಮಾಡಿದನು (೧೯-೨೦). ಅನಂತರ ಏನನ್ನೋ ಧ್ಯಾನಿಸುತ್ತ ಸ್ವಲ್ಪಕಾಲವಿದ್ದು "ದೇವಿ, ಇದೇನು ಹೀಗೆ ನುಡಿಯುತ್ತೀಯೆ? ನಿನ್ನ ಆಕೃತಿಯನ್ನು ನಾನು ಕಣ್ಣೆತ್ತಿ ನೋಡಿ ದವನಲ್ಲ ಹೇ ಪಾವನೆ, ನಿನ್ನ ಪಾದಗಳನ್ನು ಮಾತ್ರ ನಾನು ನೋಡಿ ದವನು ಈಗ ಶ್ರೀರಾಮನಿಲ್ಲದಾಗ ವನಮಧ್ಯದಲ್ಲಿ ನಿನ್ನನ್ನು ಕಣ್ಣೆತ್ತಿ

---

* ಗರ್ಭಿಣಿಯಾಗಿದ್ದೇನೆಂಬುದನ್ನು

ಕಥಮತ್ರ ಹಿ ಪಶ್ಯಾಮಿ ರಾಮೇಣ ರಹಿತಾಂ ವನೇ ।
ಇತ್ಯುಕ್ತ್ವಾ ತಾಂ ನಮಸ್ಕೃತ್ಯ ಪುನರ್ನಾವಮುಪಾರುಹತ್ ॥ ೨೨
ಆರುಹ್ಯ ಚ ಪುನರ್ನಾವಂ ನಾವಿಕಂ ಚಾಭ್ಯಚೋದಯತ್ ।
ಸ ಗತ್ವಾ ಚೋತ್ತರಂ ತೀರಂ ಶೋಕಭಾರಸಮನ್ವಿತಃ ॥ ೨೩
ಸಂಮೂಢ ಇವ ದುಃಖೇನ ರಥಮಧ್ಯಾರುಹದ್ದ್ರುತಮ್ ।
ಮುಹುರ್ಮುಹುಃ ಪರಾವೃತ್ಯ ದೃಷ್ಟ್ವಾ ಸೀತಾಮನಾಥವತ್ ॥ ೨೪
ಚೇಷ್ಟಂತೀಂ ಪರತೀರಸ್ಥಾಂ ಲಕ್ಷ್ಮಣಃ ಪ್ರಯಯಾವಥ ।
ದೂರಸ್ಥಂ ರಥಮಾಲೋಕ್ಯ ಲಕ್ಷ್ಮಣಂ ಚ ಮುಹುರ್ಮುಹುಃ ॥ ೨೫
ನಿರೀಕ್ಷಮಾಣಾಂ ತೂದ್ವಿಗ್ನಾಂ ಸೀತಾಂ ಶೋಕಃ ಸಮಾವಿಶತ್ ॥

ಸಾ ದುಃಖಭಾರಾವನತಾ ಯಶಸ್ವಿನೀ ।
ಯಶೋಧನಾ ನಾಥಮಪಶ್ಯತೀ ಸತೀ ।
ರುರೋದ ಸಾ ಬರ್ಹಿಣನಾದಿತೇ ವನೇ
ಮಹಾಸ್ವನಂ ದುಃಖಪರಾಯಣಾ ಸತೀ ॥ ೨೬

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟಚತ್ವಾರಿಂಶಃ ಸರ್ಗಃ

---

ನೋಡಬಲ್ಲೆನೆ?" ಎಂದು ಹೇಳಿ ನಮಸ್ಕರಿಸಿ ನಾವೆಯನ್ನೇರಿ, ಹೊರಡಬೇಕೆಂದು ನಾವಿಕನಿಗೆ ಆಜ್ಞಾಪಿಸಿದನು (೨೧-೨೨) ಲಕ್ಷ್ಮಣನು ಶೋಕದ ಹೊರೆಯನ್ನು ಹೊತ್ತು ಗಂಗಾನದಿಯ ಉತ್ತರತೀರವನ್ನು ನೇರಿದನು ಅವನು ದುಃಖದಿಂದ ಕಂಗೆಟ್ಟು ಬೇಗಬೇಗನೆ ಹೋಗಿ ರಥವನ್ನು ಹತ್ತಿದನು ನದಿಯ ಇನ್ನೊಂದು ದಡದಲ್ಲಿ ಅನಾಥಳಾಗಿ ಶೋಕದಿಂದ ಗೋಳಾಡುತ್ತಿದ್ದ ಜಾನಕಿಯನ್ನು ತಿರುತಿರುಗಿ ನೋಡುತ್ತ ತೆರಳಿದನು (೨೩-೨೪) ದೂರದಲ್ಲಿ ಹೋಗುತ್ತಿದ್ದ ರಥವನ್ನೂ ಲಕ್ಷ್ಮಣನನ್ನೂ ನೋಡಿ ನೋಡಿ ಸೀತೆಯು ಕಂಗೆಟ್ಟಳು ದುಃಖವು ಒತ್ತರಿಸಿತು ಪತಿವ್ರತೆಯೆಂದು ವಿಖ್ಯಾತಳೂ ಕೀರ್ತಿಶಾಲಿನಿಯೂ ಆದ ಆ ಸಾಧ್ವಿಯು ತನ್ನ ನಾಥನನ್ನು ಕಾಣಲಾರೆನೆಂದು ದುಃಖದಲ್ಲಿ ಮುಳುಗಿ ದುಃಖಭಾರದಿಂದ ಬಳುಕಿ 'ಹೋ'ಯೆಂದು ಬಾಯ್ದೆರೆದು ಅಳತೊಡಗಿದಳು ಅಡವಿಯಲ್ಲಿದ್ದ ನವಿಲುಗಳು 'ಕೇ ಕಾ' ಎಂದು ಪ್ರತಿಧ್ವನಿ ಕೊಟ್ಟವು (೨೫-೨೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತೆಂಟನೆಯ ಸರ್ಗ

## ಏಕೋನಪಂಚಾಶಃ ಸರ್ಗಃ

### ವಾಲ್ಮೀಕ್ಯಾಶ್ರಮಪ್ರವೇಶಃ

ಸೀತಾಂ ರುದಂತೀಂ ದೃಷ್ಟ್ವಾ ತಾಂ ತತ್ರ ವೈ ಮುನಿದಾರಕಾಃ ।
ಪ್ರಾದ್ರವನ್ ಯತ್ರ ಭಗವಾನಾಸ್ತೇ ವಾಲ್ಮೀಕಿರುಗ್ರಧೀಃ ॥ ೧

ಅಭಿವಾದ್ಯ ಮುನೇಃ ಪಾದೌ ಮುನಿಪುತ್ರಾ ಮಹರ್ಷಯೇ ।
ಸರ್ವಂ ನಿವೇದಯಾಮಾಸುಸ್ತಸ್ಯಾಸ್ತು ರುದಿತಸ್ವನಮ್ ॥ ೨

ಅದೃಷ್ಟಪೂರ್ವಾ ಭಗವನ್ ಕಸ್ಯಾಪ್ಯೇಷಾ ಮಹಾತ್ಮನಃ ।
ಪತ್ನೀ ಶ್ರೀರಿವ ಸಂಮೋಹಾದ್ವಿರೌತಿ ವಿಕೃತಾನನಾ ॥ ೩

ಭಗವನ್ ಸಾಧು ಪಶ್ಯ ತ್ವಂ ದೇವತಾಮಿವ ಖಾಚ್ಚ್ಯುತಾಮ್ ।
ನದ್ಯಾಸ್ತು ತೀರೇ ಭಗವನ್ ವರಸ್ತ್ರೀ ಕಾಪಿ ದುಃಖಿತಾ ॥ ೪

ದೃಷ್ಟ್ವಾಸ್ಮಾಭಿಃ ಪ್ರರುದಿತಾ ದೃಢಂ ಶೋಕಪರಾಯಣಾ ।
ಅನರ್ಹಾ ದುಃಖಶೋಕಾಭ್ಯಾಮೇಕಾ ದೀನಾ ಹ್ಯನಾಥವತ್ ॥ ೫

## ಸರ್ಗ ೪೯

### ವಾಲ್ಮೀಕಿಮುನಿಗಳು ಸೀತಾದೇವಿಯನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋಗುವುದು

ಅಲ್ಲಿ ಸೀತೆಯು ಅಳುತ್ತಿರುವುದನ್ನು ಕೆಲವು ಮುನಿಪುತ್ರರು ನೋಡಿದರು ಅವರು ಓಡುತ್ತ ಆಶ್ರಮಕ್ಕೆ ಹೋಗಿ ವಾಲ್ಮೀಕಿಮಹರ್ಷಿಗಳಿಗೆ ವಂದಿಸಿ, ಆಕೆ ರೋದಿಸುತ್ತಿರುವ ವೃತ್ತಾಂತವನ್ನು ಅರುಹಿದರು (೧-೨). "ಭಗವನ್, ನಾವು ಆ ಸ್ತ್ರೀಯನ್ನು ಇದುವರೆಗೆ ನೋಡಿರಲಿಲ್ಲ ಯಾವನೋ ಒಬ್ಬ ಮಹಾಪುರುಷನ ಪತ್ನಿಯಾಗಿರಬೇಕು ಸಾಕ್ಷಾಲ್ಲಕ್ಷ್ಮೀದೇವಿಯೋ ಎಂಬಂತೆ ಕಾಣಿಸುತ್ತಾಳೆ ದುಃಖದಿಂದ ಗಟ್ಟಿಯಾಗಿ ಬಾಯ್ಬಿಟ್ಟು ಅಳುತ್ತಿದ್ದಾಳೆ (೩) ಪೂಜ್ಯರೆ, ನೀವು ಅವಳನ್ನು ನೋಡುವುದೊಳ್ಳೆಯದು ಗಗನದಿಂದ ಬಿದ್ದ ದೇವತೆಯಂತೆ ಇದ್ದಾಳೆ ನದೀತೀರದಲ್ಲಿ ರೋದಿಸುತ್ತಿದ್ದಾಳೆ. ದುಃಖದಲ್ಲಿ ಮುಳುಗಿದ್ದ ಅವಳನ್ನು ನಾವು ನೋಡಿದೆವು

ನ ಹ್ಯೇನಾಂ ಮಾನುಷೀಂ ವಿದ್ಮಃ ಸತ್ಕ್ರಿಯಾಸ್ಯಾಃ ಪ್ರಯುಜ್ಯತಾಮ್ ।
ಆಶ್ರಮಸ್ಯಾವಿದೂರೇ ಚ ತ್ವಾಮಿಯಂ ಶರಣಂ ಗತಾ ॥ ೬

ತ್ರಾತಾರಮಿಚ್ಛತೇ ಸಾಧ್ವೀ ಭಗವಂಸ್ತ್ರಾತುಮರ್ಹಸಿ ।
ತೇಷಾಂ ತು ವಚನಂ ಶ್ರುತ್ವಾ ಬುದ್ಧ್ಯಾ ನಿಶ್ಚಿತ್ಯ ಧರ್ಮವಿತ್ ॥ ೭

ತಪಸಾ ಲಬ್ಧಚಕ್ಷುಷ್ಮಾನ್ ಪ್ರಾದ್ರವದ್ಯತ್ರ ಮೈಥಿಲೀ ।
ತಂ ಪ್ರಯಾಂತಮಭಿಪ್ರೇತ್ಯ ಶಿಷ್ಯಾ ಹ್ಯೇನಂ ಮಹಾಮತಿಮ್ ॥ ೮

ತಂ ತು ದೇಶಮಭಿಪ್ರೇತ್ಯ ಕಿಂಚಿತ್ ಪದ್ಭ್ಯಾಂ ಮಹಾಮತಿಃ ।
ಅರ್ಘ್ಯಮಾದಾಯ ರುಚಿರಂ ಜಾಹ್ನವೀತೀರಮಾಗಮತ್ ॥ ೯

ದದರ್ಶ ರಾಘವಸ್ಯೇಷ್ಟಾಂ ಸೀತಾಂ ಪತ್ನೀಮನಾಥವತ್ ।
ತಾಂ ಸೀತಾಂ ಶೋಕಭಾರಾರ್ತಾಂ ವಾಲ್ಮೀಕಿರ್ಮುನಿಪುಂಗವಃ ॥ ೧೦

ಉವಾಚ ಮಧುರಾಂ ವಾಣೀಂ ಹ್ಲಾದಯನ್ನಿವ ತೇಜಸಾ ।
ಸ್ನುಷಾ ದಶರಥಸ್ಯ ತ್ವಂ ರಾಮಸ್ಯ ಮಹಿಷೀ ಪ್ರಿಯಾ ॥ ೧೧

---

ಆ ಬಗೆಯ ಕಷ್ಟ ಶೋಕಗಳಿಗೆ ಆ ಸ್ತ್ರೀಯು ಅರ್ಹಳಲ್ಲ ಒಬ್ಬಳೇ ಅನಾಥಳಂತೆ ದೈನ್ಯದಿಂದ ಶೋಕಿಸುತ್ತಿದ್ದಾಳೆ (೪-೫) ಆಕೆ ಮನುಷ್ಯಸ್ತ್ರೀಯೆಂದು ನಮಗೆ ತೋರುವುದಿಲ್ಲ ಅವಳನ್ನು ಸತ್ಕರಿಸಬೇಕೆಂದು ಬೇಡಿಕೊಳುತ್ತೇವೆ. ಆಶ್ರಮಕ್ಕೆ ಸಮೀಪದಲ್ಲಿದ್ದು ನಿಮಗೆ ಶರಣಾಗಿದ್ದಾಳೆ ಆ ಸಾಧ್ವಿಗೆ ರಕ್ಷಕನೊಬ್ಬನು ಬೇಕಾಗಿದೆ ಸ್ವಾಮಿ, ನೀವು ಅವಳನ್ನು ರಕ್ಷಿಸಬೇಕು" ಎಂದು ನಿವೇದಿಸಿದರು (೬) ಮುನಿಬಾಲಕರ ಈ ಮಾತನ್ನು ಕೇಳಿ ಧರ್ಮಜ್ಞರೂ ತಪೋಬಲದಿಂದ ದಿವ್ಯಜ್ಞಾನಸಂಪನ್ನರೂ ಆದ ವಾಲ್ಮೀಕಿಮುನಿಗಳು 'ಓಹೊ! ಇದು ಹೀಗೆ!' ಎಂದು ನಿಶ್ಚಯಿಸಿ, ಮೈಥಿಲಿಯಿದ್ದಲ್ಲಿಗೆ ತ್ವರೆಯಿಂದ ಹೊರಟರು ಅವರ ಹಿಂದೆ ಶಿಷ್ಯರೂ ಧಾವಿಸಿದರು (೭-೮) ಪ್ರಾಜ್ಞರಾದ ವಾಲ್ಮೀಕಿಮುನಿಗಳು ಸತ್ಕಾರವಸ್ತುಗಳನ್ನು ತೆಗೆಸಿಕೊಂಡು ಕಾಲ್ನಡಿಗೆಯಿಂದಲೇ ಗಂಗಾತೀರಕ್ಕೆ ಆಗಮಿಸಿದರು ಅಲ್ಲಿ ಶೋಕಭಾರದಿಂದ ಕಂಗೆಟ್ಟು ಅನಾಥೆಯಾಗಿ ರೋದಿಸುತ್ತಿದ್ದ, ಶ್ರೀರಾಮನ ಪ್ರಿಯಪತ್ನಿಯಾದ ಸೀತೆಯನ್ನು ಕಂಡರು (೯-೧೦) ಆ ಮುನಿಪುಂಗವರು ತಮ್ಮ ತೇಜೋಮಹಿಮೆಯಿಂದ

ಜನಕಸ್ಯ ಸುತಾ ರಾಜ್ಞಃ ಸ್ವಾಗತಂ ತೇ ಪತಿವ್ರತೇ ।
ಆಯಾಂತೀ ಚಾಸಿ ವಿಜ್ಞಾತಾ ಮಯಾ ಧರ್ಮಸಮಾಧಿನಾ ॥ ೧೨

ಕಾರಣಂ ಚೈವ ಸರ್ವಂ ಮೇ ಹೃದಯೇನೋಪಲಕ್ಷಿತಮ್ ।
ತವ ಚೈವ ಮಹಾಭಾಗೇ ವಿದಿತಂ ಮಮ ತತ್ತ್ವತಃ ॥ ೧೩

ಸರ್ವಂ ಚ ವಿದಿತಂ ಮಹ್ಯಂ ತ್ರೈಲೋಕ್ಯೇ ಯದ್ಧಿ ವರ್ತತೇ ।
ಅಪಾಪಾಂ ವೇದ್ಮಿ ಸೀತೇ ತ್ವಾಂ ತಪೋಲಬ್ಧೇನ ಚಕ್ಷುಷಾ ॥ ೧೪

ವಿಸ್ರಬ್ಧಾ ಭವ ವೈದೇಹಿ ಸಾಂಪ್ರತಂ ಮಯಿ ವರ್ತಸೇ ।
ಆಶ್ರಮಸ್ಯಾವಿದೂರೇ ಮೇ ತಾಪಸ್ಯಸ್ತಪಸಿ ಸ್ಥಿತಾಃ ॥ ೧೫

ತಾಸ್ತ್ವಾಂ ವತ್ಸೇ ಯಥಾ ವತ್ಸಂ ಪಾಲಯಿಷ್ಯಂತಿ ನಿತ್ಯಶಃ ।
ಇದಮರ್ಘ್ಯಂ ಪ್ರತೀಚ್ಛ ತ್ವಂ ವಿಸ್ರಬ್ಧಾ ವಿಗತಜ್ವರಾ ॥ ೧೬

ಯಥಾ ಸ್ವಗೃಹಮಭ್ಯೇತ್ಯ ವಿಷಾದಂ ಚೈವ ಮಾ ಕೃಥಾಃ ।
ಶ್ರುತ್ವಾ ತು ಭಾಷಿತಂ ಸೀತಾ ಮುನೇಃ ಪರಮಮದ್ಭುತಮ್ ॥ ೧೭

---

ಅವಳನ್ನು ಸಂತೈಸುತ್ತ ಮೃದುಮಧುರವಾಣಿಯಿಂದ ಹೀಗೆಂದರು. “ಹೇ ಪತಿವ್ರತೆ, ನೀನು ದಶರಥಮಹಾರಾಜನ ಸೊಸೆ ಶ್ರೀರಾಮನ ಪ್ರೀತಿಯ ರಾಣಿ ಜನಕರಾಜನ ಮಗಳು ನೀನು ಈ ಪ್ರಕಾರದಲ್ಲಿ ಬರುವೆಯೆಂದು ತಪೋಬಲದಿಂದ ತಿಳಿದಿದ್ದೆನು! (೧೧-೧೨) ಇದರ ಕಾರಣವೆಲ್ಲವೂ ನನ್ನ ಅಂತರಂಗಕ್ಕೆ ವಿದಿತವಾಗಿದೆ ಮಹಾತ್ಮಳೆ, ನಿನ್ನ ಪರಿಶುದ್ಧಚಾರಿತ್ರವನ್ನು ಪೂರ್ಣವಾಗಿ ನಾನು ಬಲ್ಲೆ ಮೂರುಲೋಕಗಳಲ್ಲಿ ನಡೆಯುವುದೆಲ್ಲವೂ ನನಗೆ ಗೋಚರ ತಪೋಲಬ್ಧವಾದ ದಿವ್ಯನೇತ್ರದಿಂದ, ಸೀತೆ, ನೀನು ನಿರ್ದೋಷ ಳೆಂಬುದನ್ನು ತಿಳಿದಿದ್ದೇನೆ (೧೩-೧೪) ವೈದೇಹಿ, ಧೈರ್ಯವನ್ನು ತಂದುಕೊ ಈಗ ನನ್ನ ಸಮೀಪದಲ್ಲಿದ್ದೀಯೆ ಹತ್ತಿರದಲ್ಲಿ ನನ್ನ ಆಶ್ರಮವಿದೆ ಅಲ್ಲಿ ಅನೇಕ ತಾಪಸಿಯರು ತಪೋನಿಷ್ಠರಾಗಿದ್ದಾರೆ (೧೫) ಮಗಳೆ, ಆ ತಾಪಸಿ ಯರು ನಿನ್ನನ್ನು ಮಗಳಂತೆ ನೋಡಿಕೊಳ್ಳುತ್ತಾರೆ ಈ ಅರ್ಘ್ಯವನ್ನು (ಉಪಾಹಾರವನ್ನು) ಸ್ವೀಕರಿಸು ಧೈರ್ಯವನ್ನು ತಂದುಕೊ ಚಿಂತೆಯನ್ನು ಬಿಡು ವತ್ಸೆ, ನಿನ್ನ ಮನೆಗೆ ಬಂದಿದ್ದೀಯೆ ಎಂದು ತಿಳಿ ವಿಷಾದಿಸಬೇಡ”

ಶಿರಸಾ ವಂದ್ಯ ಚರಣೌ ತಥೇತ್ಯಾಹ ಕೃತಾಂಜಲಿಃ ।
ತಂ ಪ್ರಯಾಂತಂ ಮುನಿಂ ಸೀತಾ ಪ್ರಾಂಜಲಿಃ ಪೃಷ್ಠತೋಽನ್ವಗಾತ್

ತಂ ದೃಷ್ಟ್ವಾ ಮುನಿಮಾಯಾಂತಂ ವೈದೇಹ್ಯಾ ಮುನಿಪತ್ನಯಃ ।
ಉಪಾಜಗ್ಮುರ್ಮುದಾ ಯುಕ್ತಾ ವಚನಂ ಚೇದಮಬ್ರುವನ್ ॥ ೧೯

ಸ್ವಾಗತಂ ತೇ ಮುನಿಶ್ರೇಷ್ಠ ಚಿರಸ್ಯಾಗಮನಂ ಚ ತೇ ।
ಅಭಿವಾದಯಾಮಸ್ತ್ವಾಂ ಸರ್ವಾ ಉಚ್ಯತಾಂ ಕಿಂ ಚ ಕುರ್ಮಹೇ ॥

ತಾಸಾಂ ತದ್ವಚನಂ ಶ್ರುತ್ವಾ ವಾಲ್ಮೀಕಿರಿದಮಬ್ರವೀತ್ ।
ಸೀತೇಯಂ ಸಮನುಪ್ರಾಪ್ತಾ ಪತ್ನೀ ರಾಮಸ್ಯ ಧೀಮತಃ ॥ ೨೧

ಸ್ನುಷಾ ದಶರಥಸ್ಯೈಷಾ ಜನಕಸ್ಯ ಸುತಾ ಸತೀ ।
ಅಪಾಪಾ ಪತಿನಾ ತ್ಯಕ್ತಾ ಪರಿಪಾಲ್ಯಾ ಮಯಾ ಸದಾ ॥ ೨೨

ಇಮಾಂ ಭವತ್ಯಃ ಪಶ್ಯಂತು ಸ್ನೇಹೇನ ಪರಮೇಣ ಹಿ ।
ಗೌರವಾನ್ಮಮ ವಾಕ್ಯಾಚ್ಚ ಪೂಜ್ಯಾ ವೋಽಸ್ತು ವಿಶೇಷತಃ ॥ ೨೩

---

ಎಂದರು (೧೬-೧೭) ವಾಲ್ಮೀಕಿಮುನಿಗಳಾಡಿದ ವಿಸ್ಮಯಕರವಾದ ಈ ಸಾಂತ್ವನವಚನವನ್ನು ಕೇಳಿ, ಸೀತೆಯು ಅವರ ಪಾದಗಳಿಗೆ ತಲೆಬಾಗಿ ವಂದಿಸಿ ಕೈಮುಗಿದುಕೊಂಡು 'ಆಗಲಿ' ಎಂದಳು ಅನಂತರ ಆಶ್ರಮಕ್ಕೆ ಹೊರಟ ಆ ಮುನಿಗಳ ಹಿಂದೆ ಕೈಮುಗಿದುಕೊಂಡು ಹೋದಳು (೧೮) ವಾಲ್ಮೀಕಿಮಹರ್ಷಿಗಳು ವೈದೇಹಿಯೊಡನೆ ತಪೋವನದ ಆಶ್ರಮಕ್ಕೆ ಆಗಮಿಸುವುದನ್ನು ಮುನಿಪತ್ನಿಯರು ಕಂಡು ಹರ್ಷದಿಂದ ಮುಂದೆ ಬಂದು "ಮುನಿಶ್ರೇಷ್ಠರೆ, ತಮಗೆ ಸ್ವಾಗತ ಬಹಳ ಕಾಲದ ಮೇಲೆ ನಾವಿದ್ದೆಡೆಗೆ ಬಂದಿರಿ ನಾವೆಲ್ಲರೂ ಅಭಿವಾದಿಸುತ್ತಿದ್ದೇವೆ ನಮ್ಮಿಂದೇನಾಗಬೇಕು? ಅಪ್ಪಣೆಯಾಗಲಿ" ಎಂದು ಹೇಳಿದರು (೧೯-೨೦) ಆಗ ವಾಲ್ಮೀಕಿಮುನಿಗಳು "ತಾಪಸಿಯರೆ, ಇವಳು ಧೀಮಂತನಾದ ಶ್ರೀರಾಮನ ಪತ್ನಿಯಾದ ಸೀತೆ ದಶರಥರಾಜನ ಸೊಸೆ ಜನಕಮಹಾರಾಜನ ಮಗಳು ನಿರ್ದೋಷಳೂ ಸಾಧ್ವಿಯೂ ಆದ ಈ ಪತಿವ್ರತೆಯನ್ನು ಪತಿಯು ಒಂದಾನೊಂದು ನಿಮಿತ್ತದಿಂದ ತ್ಯಜಿಸಿದ್ದಾನೆ ನಾನು ಇವಳನ್ನು ಸಂರಕ್ಷಿಸಬೇಕು (೨೧-೨೨) ನೀವು ಸೀತೆಯನ್ನು ಪರಮಸ್ನೇಹದಿಂದ ಕಾಣಿರಿ. ನಾನು ಹೇಳಿದ್ದೇನೆಂದು

ಮುಹುರ್ಮುಹುಶ್ಚ ವೈದೇಹೀಂ ಪ್ರಣಿಧಾಯ ಮಹಾಯಶಾಃ ।
ಸ್ವಮಾಶ್ರಮಂ ಶಿಷ್ಯವೃತಃ ಪುನರಾಯಾನ್ಮಹಾತಪಾಃ ॥ ೨೪

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋನಪಂಚಾಶಃ ಸರ್ಗಃ



ನನ್ನಲ್ಲಿರುವ ಗೌರವದಿಂದ ಇವಳನ್ನು ಸತ್ಕರಿಸುತ್ತಿರಿ ಅಷ್ಟೇ ಅಲ್ಲ ಇವಳು ನಿಮಗೆ ಪೂಜ್ಯಳೆಂದು ತಿಳಿಯಿರಿ" ಎಂದು ಹೇಳಿದರು (೨೩) ಅನಂತರ ಕೀರ್ತಿಶಾಲಿಗಳಾದ ಆ ವಾಲ್ಮೀಕಿಮುನಿಗಳು ವೈದೇಹಿಗೆ ಮತ್ತೆ ಮತ್ತೆ ಧೈರ್ಯವನ್ನು ಹೇಳಿ ಸಂತೈಸಿದರು ಆಮೇಲೆ ಆ ತಪಸ್ವಿಗಳು ಶಿಷ್ಯಪರಿವೃತರಾಗಿ ತಮ್ಮ ಆಶ್ರಮಕ್ಕೆ ಹಿಂದಿರುಗಿದರು (೨೪)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನಲವತ್ತೊಂಬತ್ತನೆಯ ಸರ್ಗ



## ಪಂಚಾಶಃ ಸರ್ಗಃ

### ಸುಮಂತ್ರರಹಸ್ಯಕಥನಮ್

ದೃಷ್ಟ್ವಾ ತು ಮೈಥಿಲೀಂ ಸೀತಾಮಾಶ್ರಮೇ ಸಂಪ್ರವೇಶಿತಾಮ್ ।
ಸಂತಾಪಮಗಮದ್ಘೋರಂ ಲಕ್ಷ್ಮಣೋ ದೀನಚೇತನಃ ॥ ೧

ಅಬ್ರವೀಚ್ಚ ಮಹಾತೇಜಾಃ ಸುಮಂತ್ರಂ ಮಂತ್ರಸಾರಥಿಮ್ ।
ಸೀತಾಸಂತಾಪಜಂ ದುಃಖಂ ಪಶ್ಯ ರಾಮಸ್ಯ ಸಾರಥೇ ॥ ೨

ತತೋ ದುಃಖತರಂ ಕಿಂ ನು ರಾಘವಸ್ಯ ಭವಿಷ್ಯತಿ ।
ಪತ್ನೀಂ ಶುದ್ಧಸಮಾಚಾರಾಂ ವಿಸೃಜ್ಯ ಜನಕಾತ್ಮಜಾಮ್ ॥ ೩

ವ್ಯಕ್ತಂ ದೈವಾದಹಂ ಮನ್ಯೇ ರಾಘವಸ್ಯ ವಿನಾಭವಮ್ ।
ವೈದೇಹ್ಯಾ ಸಾರಥೇ ನಿತ್ಯಂ ದೈವಂ ಹಿ ದುರತಿಕ್ರಮಮ್ ॥ ೪

### ಸರ್ಗ ೫೦

ಸುಮಂತ್ರನು ಸೀತಾಪರಿತ್ಯಾಗದ ವಿಷಯದಲ್ಲಿ ಒಂದು ರಹಸ್ಯವನ್ನು ಲಕ್ಷ್ಮಣನಿಗೆ ಹೇಳುವುದು

ಮೈಥಿಲಿಯು ಆಶ್ರಮಕ್ಕೆ ಮುನಿಗಳೊಡನೆ ಹೋದುದನ್ನು ಲಕ್ಷ್ಮಣನು ದೂರದಲ್ಲಿ ನಿಂತು ನೋಡಿದನು ದೈನ್ಯದಿಂದ ಕುಗ್ಗಿಹೋದ ಲಕ್ಷ್ಮಣನಿಗೆ ಅವಳ ದುರವಸ್ಥೆಯನ್ನು ಕಂಡು ಇನ್ನಿಲ್ಲದಷ್ಟು ಘೋರವಾದ ಸಂಕಟವಾಯಿತು (೧) ಆ ತೇಜಸ್ವಿಯು ಸುಮಂತ್ರನನ್ನು ಕುರಿತು "ಸುಮಂತ್ರ, ಸೀತೆಗೆ ಒದಗಿದ ಕಷ್ಟದಿಂದ ಶ್ರೀರಾಮನ ಮನಸ್ಸಿಗೆ ಎಷ್ಟು ದುಃಖವಾಗುತ್ತದೆಯೆಂಬುದನ್ನು ನೋಡು! ರಾಘವನಿಗೆ ಇದಕ್ಕಿಂತ ಶೋಕದಾಯಕವಾದದ್ದು ಯಾವುದುಂಟು? ಶುದ್ಧಚಾರಿತ್ರಳೂ ಧರ್ಮಪತ್ನಿಯೂ ಆದ ಜನಕಾತ್ಮಜೆಯನ್ನು ಪರಿತ್ಯಜಿಸಿದೆನೆಂದು ಎಷ್ಟು ಸಂಕಟಪಡುವನೊ! (೨-೩) ಶ್ರೀರಾಮನಿಗೆ ವೈದೇಹೀವಿಯೋಗವು ಪ್ರಾಚೀನಕರ್ಮವಶದಿಂದಲೇ ಆಯಿತೆಂದು ತಿಳಿಯುತ್ತೇನೆ. ಸಾರಥಿ, ದೈವವನ್ನು ಮೀರಲು ಯಾರಿಗೂ

ಯೋ ಹಿ ದೇವಾನ್ ಸಗಂಧರ್ವಾನಸುರಾನ್ ಸಹ ರಾಕ್ಷಸೈಃ |
ನಿಹನ್ಯಾದ್ರಾಘವಃ ಕ್ರುದ್ಧಃ ಸ ದೈವಮನುವರ್ತತೇ || ೫

ಪುರಾ ರಾಮಃ ಪಿತುರ್ವಾಕ್ಯಾದ್ದಂಡಕೇ ವಿಜನೇ ವನೇ |
ಉಷಿತ್ವಾ ನವ ವರ್ಷಾಣಿ ಪಂಚ ಚೈವ ಮಹಾವನೇ || ೬

ತತೋ ದುಃಖತರಂ ಭೂಯಃ ಸೀತಯಾ ವಿಪ್ರವಾಸನಮ್ |
ಪೌರಾಣಾಂ ವಚನಂ ಶ್ರುತ್ವಾ ನೃಶಂಸಂ ಪ್ರತಿಭಾತಿ ಮೇ || ೭

ಕೋ ನು ಧರ್ಮಾಶ್ರಯಃ ಸೂತ ಕರ್ಮಣ್ಯಸ್ಮಿನ್ ಯಶೋಹರೇ |
ಮೈಥಿಲೀಂ ಪ್ರತಿ ಸಂಪ್ರಾಪ್ತಃ ಪೌರೈರ್ಹೀನಾರ್ಥವಾದಿಭಿಃ || ೮

ಏತಾ ವಾಚೋ ಬಹುವಿಧಾಃ ಶ್ರುತ್ವಾ ಲಕ್ಷ್ಮಣಭಾಷಿತಾಃ |
ಸುಮಂತ್ರಃ ಶ್ರದ್ಧಯಾ ಪ್ರಾಜ್ಞೋ ವಾಕ್ಯಮೇತದುವಾಚ ಹ || ೯

---

ಶಕ್ಯವಿಲ್ಲ ಯಾವ ರಾಘವನು ಕ್ರುದ್ಧನಾದರೆ ದೇವಗಂಧರ್ವರನ್ನೂ ಅಸುರ ರಾಕ್ಷಸರನ್ನೂ ಲೆಕ್ಕಿಸದೆ ಸದೆಬಡಿಯಬಲ್ಲನೋ ಅಂತಹ ವೀರಾಗ್ರೇಸರನು ದೈವಕ್ಕೆ ಆಧೀನನಾಗಿದ್ದಾನೆ! (೪-೫) ಹಿಂದೆ ತಂದೆಯ ಆಜ್ಞೆಯಾದ್ದರಿಂದ ನಿರ್ಜನವಾದ ದಂಡಕಾರಣ್ಯದಲ್ಲಿ ಹದಿನಾಲ್ಕು ವರ್ಷಗಳವರೆಗೆ ವಾಸವಾಗಿದ್ದನು ಈಗಲಾದರೋ ಪೌರರು ಮಾತಾಡಿಕೊಳ್ಳುವುದನ್ನು ಕೇಳಿದಮಾತ್ರದಿಂದ ಸೀತಾದೇವಿಯನ್ನು ತೊರೆದುಬಿಟ್ಟನು! ವನವಾಸಕ್ಕಿಂತ ಇದು ದುಃಖತರವಾದದ್ದು ಅತ್ಯಂತ ದಾರುಣವಾದದ್ದೆಂದು ನನಗನಿಸುತ್ತದೆ (೬-೭) ಸುಮಂತ್ರ, ಅರ್ಥಹೀನವಾದ ಸಣ್ಣ ಮಾತನ್ನು ಪೌರರು ಆಡಿರಬಹುದು ಅಷ್ಟುಮಾತ್ರದಿಂದ ಮೈಥಿಲಿಯನ್ನು ಪರಿತ್ಯಜಿಸುವುದು ಅಪಕೀರ್ತಿಕರವಾದ ಕರ್ಮವಲ್ಲವೆ? ಇದರಿಂದ ರಾಘವನು ಯಾವ ಧರ್ಮವನ್ನು ಪಾಲಿಸಿದಂತಾಯಿತು?" ಎಂದನು (೮) ಹೀಗೆ ಲಕ್ಷ್ಮಣನು ಬಹುವಿಧವಾಗಿ ಹೇಳಲು, ಅದೆಲ್ಲವನ್ನೂ ಪ್ರಾಜ್ಞನಾದ ಸುಮಂತ್ರನು ಶ್ರದ್ಧೆಯಿಂದ ಕೇಳಿದಮೇಲೆ ಇಂತೆಂದನು. "ಸೌಮಿತ್ರಿ, ಮೈಥಿಲಿಗೋಸ್ಕರ ನೀನು ಅತಿಯಾಗಿ ಶೋಕಿಸಬೇಡ. ಈ ವಿಷಯವನ್ನು ಜ್ಞಾನಿಗಳಾದ ವಿಪ್ರರು ಹಿಂದೆಯೇ

ನ ಸಂತಾಪಸ್ತ್ವಯಾ ಕಾರ್ಯಃ ಸೌಮಿತ್ರೇ ಮೈಥಿಲೀಂ ಪ್ರತಿ ।
ದೃಷ್ಟಮೇತತ್ ಪುರಾ ವಿಪ್ರೈಃ ಪಿತುಸ್ತೇ ಲಕ್ಷ್ಮಣಾಗ್ರತಃ ॥ ೧೦
ಭವಿಷ್ಯತಿ ದೃಢಂ ರಾಮೋ ದುಃಖಪ್ರಾಯೋ ವಿಸೌಖ್ಯಭಾಕ್ ।
ಪ್ರಾಪ್ಸ್ಯತೇ ಚ ಮಹಾಬಾಹುರ್ವಿಪ್ರಯೋಗಂ ಪ್ರಿಯೈರ್ಧ್ರುವಮ್॥
ತ್ವಾಂ ಚೈವ ಮೈಥಿಲೀಂ ಚೈವ ಶತ್ರುಘ್ನಭರತಾವುಭೌ ।
ಸಂತ್ಯಜಿಷ್ಯತಿ ಧರ್ಮಾತ್ಮಾ ಕಾಲೇನ ಮಹತಾ ಮಹಾನ್ ॥ ೧೨
ಇದಂ ತ್ವಯಿ ನ ವಕ್ತವ್ಯಂ ಸೌಮಿತ್ರೇ ಭರತೇಽಪಿ ವಾ ।
ರಾಜ್ಞಾ ವೋ ವ್ಯಾಹೃತಂ ವಾಕ್ಯಂ ದುರ್ವಾಸಾ ಯದುವಾಚ ಹ ॥
ಮಹಾಜನಸಮೀಪೇ ಚ ಮಮ ಚೈವ ನರರ್ಷಭ ।
ಋಷಿಣಾ ವ್ಯಾಹೃತಂ ವಾಕ್ಯಂ ವಸಿಷ್ಠಸ್ಯ ಚ ಸಂನಿಧೌ ॥ ೧೪
ಋಷೇಸ್ತು ವಚನಂ ಶ್ರುತ್ವಾ ಮಾಮಾಹ ಪುರುಷರ್ಷಭಃ ।
ಸೂತ ನ ಕ್ವಚಿದೇವಂ ತೇ ವಕ್ತವ್ಯಂ ಜನಸಂನಿಧೌ ॥ ೧೫
ತಸ್ಯಾಹಂ ಲೋಕಪಾಲಸ್ಯ ವಾಕ್ಯಂ ತತ್ ಸುಸಮಾಹಿತಃ ।
ನೈವ ಜಾತ್ವನೃತಂ ಕಾರ್ಯಮಿತಿ ಮೇ ಸೌಮ್ಯ ದರ್ಶನಮ್ ॥ ೧೬

---

ತಿಳಿದು ನಿನ್ನ ತಂದೆಯ ಎದುರಿಗೆ ಹೇಳಿದ್ದರು (೯-೧೦) ಸೌಖ್ಯವಿಲ್ಲದೆ ರಾಮನು ನಾನಾ ದುಃಖಗಳನ್ನು ಅನುಭವಿಸುವನೆಂದೂ ಪ್ರಿಯಜನರಿಂದ ವಿಯುಕ್ತನಾಗುವನೆಂದೂ ನಿಶ್ಚಯವಾಗಿ ತಿಳಿಸಿದ್ದರು ಆ ಧರ್ಮಾತ್ಮನು, ಲಕ್ಷ್ಮಣ, ಮೈಥಿಲಿಯನ್ನು ಮಾತ್ರವಲ್ಲ, ಕೆಲವು ಕಾಲದಮೇಲೆ ನಿನ್ನನ್ನೂ ತೊರೆಯುವನು! ಭರತಶತ್ರುಘ್ನರಿಂದಲೂ ವಿಯುಕ್ತನಾಗುವನು! (೧೧-೧೨) ದಶರಥರಾಜನು ನಿಮ್ಮ ಭವಿಷ್ಯವನ್ನು ಕೇಳಿದಾಗ ಅದಕ್ಕೆ ಉತ್ತರವಾಗಿ ದುರ್ವಾಸಮುನಿಗಳು ಹೇಳಿದ ಮಾತಿದು ಸೌಮಿತ್ರಿ, ಇದನ್ನು ನೀನು ಭರತಶತ್ರುಘ್ನರಿಗೆ ತಿಳಿಸಬಾರದು! (೧೩) ಮಹಾತ್ಮರಾದ ಋಷಿಗಳೂ ನಾನೂ ವಸಿಷ್ಠರೂ ಇರುವಾಗ ನಮ್ಮೆದುರಿಗೆ ದುರ್ವಾಸರು ಈ ಮಾತನ್ನು ಹೇಳಿದ್ದಾರೆ ಆ ಋಷಿಗಳ ನುಡಿಯನ್ನು ಕೇಳಿ ದಶರಥಮಹಾರಾಜನು ನನ್ನನ್ನು ಕುರಿತು 'ಸೂತ, ಈ ವಿಷಯವನ್ನು ಯಾರೆದುರಿಗೂ ಎಲ್ಲಿಯೂ ಹೇಳಬೇಡ' ಎಂದನು (೧೪-೧೫) ಆ ನರೇಂದ್ರನ ಆಜ್ಞೆಯನ್ನೆಂದಿಗೂ

ಸರ್ವಥೈವ ನ ವಕ್ತವ್ಯಂ ಮಯಾ ಸೌಮ್ಯ ತವಾಗ್ರತಃ ।
ಯದಿ ತೇ ಶ್ರವಣೇ ಶ್ರದ್ಧಾ ಶ್ರೂಯತಾಂ ರಘುನಂದನ ॥ ೧೭

ಯದ್ಯಪ್ಯಹಂ ನರೇಂದ್ರೇಣ ರಹಸ್ಯಂ ಶ್ರಾವಿತಃ ಪುರಾ ।
ತಥಾಪ್ಯುದಾಹರಿಷ್ಯಾಮಿ ದೈವಂ ಹಿ ದುರತಿಕ್ರಮಮ್ ॥ ೧೮

ಯೇನೇದಮೀದೃಶಂ ಪ್ರಾಪ್ತಂ ದುಃಖಂ ಶೋಕಸಮನ್ವಿತಮ್ ।
ನ ತ್ವಯಾ ಭರತೇ ವಾಚ್ಯಂ ಶತ್ರುಘ್ನಸ್ಯಾಪಿ ಸಂನಿಧೌ ॥ ೧೯

ತಚ್ಛ್ರುತ್ವಾ ಭಾಷಿತಂ ತಸ್ಯ ಗಂಭೀರಾರ್ಥಪದಂ ಮಹತ್ ।
ತಥ್ಯಂ ಬ್ರೂಹೀತಿ ಸೌಮಿತ್ರಿಃ ಸೂತಂ ವಾಕ್ಯಮಥಾಬ್ರವೀತ್ ॥ ೨೦

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚಾಶಃ ಸರ್ಗಃ

---

ಸುಳ್ಳು ಮಾಡಬಾರದು, ಬಹು ಎಚ್ಚರಿಕೆಯಿಂದಿರಬೇಕು—ಎಂಬುದು, ಸೌಮ್ಯ, ನನ್ನ ಅಭಿಪ್ರಾಯ ಆದ್ದರಿಂದ, ಲಕ್ಷ್ಮಣ, ನಿನ್ನೆದುರಿಗೂ ಸಹ ಆ ರಹಸ್ಯವನ್ನು ನಾನು ಹೇಳಲೇಬಾರದು ನಿನಗೆ ಅಷ್ಟೊಂದು ಆಸಕ್ತಿ ಇದ್ದರೆ ಹೇಳುತ್ತೇನೆ, ಕೇಳು ! * (೧೬–೧೭) ಇದು ರಹಸ್ಯವೆಂದು ಮಹಾರಾಜನು ನನಗೆ ಹೇಳಿದ್ದಾನೆ ಆದರೂ ನಿನಗೆ ಹೇಳಿಬಿಡುತ್ತೇನೆ! ದೈವವು ಅಲಂಘನೀಯ ಅದರಿಂದ ಈ ಬಗೆಯ ದುಃಖವೂ ರೋದನವೂ ಪ್ರಾಪ್ತವಾದವು ನೀನು ಮಾತ್ರ ಭರತನಿಗಾಗಲಿ ಶತ್ರುಘ್ನನಿಗಾಗಲಿ ತಿಳಿಸಬೇಡ !" ಎಂದನು (೧೮–೧೯) ಮಹತ್ತರವೂ ಗಂಭೀರವೂ ಆದ ಸುಮಂತ್ರನ ನುಡಿಯನ್ನು ಕೇಳಿ ಲಕ್ಷ್ಮಣನು "ಸತ್ಯವಾಗಿಯೂ ತಿಳಿಸುವುದಿಲ್ಲ ಹೇಳು" ಎಂದನು (೨೦).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತನೆಯ ಸರ್ಗ

---

* ೧೮ನೆಯ ಶ್ಲೋಕದಲ್ಲಿರುವ ಮಹಾಜನ ಶಬ್ದಕ್ಕೆ ಮಹಾರಾಜನೆಂದು ವ್ಯಾಖ್ಯಾನಕಾರರು ಅರ್ಥಮಾಡಿದ್ದಾರೆ ದಶರಥ, ಸುಮಂತ್ರ, ವಸಿಷ್ಠರು—ಈ ಮೂವರಿಗೆ ಮಾತ್ರ ಆ ರಹಸ್ಯವು ತಿಳಿದಿತ್ತು ರಾಜಾಜ್ಞೆಯಂತೆ ಲಕ್ಷ್ಮಣನಿಗೂ ಸುಮಂತ್ರನು ಅದನ್ನು ಹೇಳಬಾರದು ಆದರೂ ಲಕ್ಷ್ಮಣನು ಅತ್ಯಂತ ಆಪ್ತನಾದ್ದರಿಂದಲೂ ದೈವವು ಅಲಂಘ್ಯವಾದ್ದರಿಂದಲೂ ಲಕ್ಷ್ಮಣನ ಶೋಕಭಾರವನ್ನು ಹಗುರಮಾಡುವ ಉದ್ದೇಶದಿಂದ ಸುಮಂತ್ರನು ಅದನ್ನು ಹೇಳಿದನೆಂದು ತಿಳಿಯಬೇಕು

*

## ಏಕಪಂಚಾಶಃ ಸರ್ಗಃ

### ದುರ್ವಾಸೋವಾಕ್ಯಕಥನಮ್

ತಥಾ ಸಂಚೋದಿತಃ ಸೂತೋ ಲಕ್ಷ್ಮಣೇನ ಮಹಾತ್ಮನಾ ।
ತದ್ವಾಕ್ಯಮೃಷಿಣಾ ಪ್ರೋಕ್ತಂ ವ್ಯಾಹರ್ತುಮುಪಚಕ್ರಮೇ ॥ ೧

ಪುರಾ ನಾಮ್ನಾ ಹಿ ದುರ್ವಾಸಾ ಅತ್ರೇಃ ಪುತ್ರೋ ಮಹಾಮುನಿಃ ।
ವಸಿಷ್ಠಸ್ಯಾಶ್ರಮೇ ಪುಣ್ಯೇ ವಾರ್ಷಿಕ್ಯಂ ಸಮುವಾಸ ಹ ॥ ೨

ತಮಾಶ್ರಮಂ ಮಹಾತೇಜಾಃ ಪಿತಾ ತೇ ಸುಮಹಾಯಶಾಃ ।
ಪುರೋಹಿತಂ ಮಹಾತ್ಮಾನಂ ದಿದೃಕ್ಷುರಗಮತ್ ಸ್ವಯಮ್ ॥ ೩

ಸ ದೃಷ್ಟ್ವಾ ಸೂರ್ಯಸಂಕಾಶಂ ಜ್ವಲಂತಮಿವ ತೇಜಸಾ ।
ಉಪವಿಷ್ಟಂ ವಸಿಷ್ಠಸ್ಯ ಸವ್ಯಪಾರ್ಶ್ವೇ ಮಹಾಮುನಿಮ್ ॥ ೪

ತೌ ಮುನೀ ತಾಪಸಶ್ರೇಷ್ಠೌ ವಿನೀತೋ ಹ್ಯಭ್ಯವಾದಯತ್ ।
ಸ ತಾಭ್ಯಾಂ ಪೂಜಿತೋ ರಾಜಾ ಸ್ವಾಗತೇನಾಸನೇನ ಚ ॥ ೫

## ಸರ್ಗ ೫೧

### ದುರ್ವಾಸರು ಹೇಳಿದ ಭೃಗುಶಾಪವೃತ್ತಾಂತವನ್ನು ಸುಮಂತ್ರನು ಲಕ್ಷ್ಮಣನಿಗೆ ತಿಳಿಸುವುದು

ಹೀಗೆ ಲಕ್ಷ್ಮಣನು ಪ್ರೇರಿಸಲಾಗಿ, ದುರ್ವಾಸಮುನಿಗಳು ಹೇಳಿದ ವೃತ್ತಾಂತವನ್ನು ಸುಮಂತ್ರನು ಹೇಳಲಾರಂಭಿಸಿದನು. "ಲಕ್ಷ್ಮಣ, ಅತ್ರಿಪುತ್ರರಾದ ದುರ್ವಾಸಮುನಿಗಳು ಹಿಂದೊಮ್ಮೆ ವಸಿಷ್ಠರ ಪುಣ್ಯಾಶ್ರಮದಲ್ಲಿ ತಂಗಿದ್ದರು ಮಳೆಗಾಲದಲ್ಲಿ ಸಂಭವಿಸುವ ಚಾತುರ್ಮಾಸ್ಯನಿಯಮವನ್ನು ಪರಿಪಾಲಿಸುತ್ತಿದ್ದರು (೧-೨) ಆ ಸಮಯದಲ್ಲಿ ಕೀರ್ತಿಶಾಲಿಯಾದ ನಿನ್ನ ತಂದೆ ದಶರಥಮಹಾರಾಜನು ಪುರೋಹಿತರಾದ ವಸಿಷ್ಠರನ್ನು ಸಂದರ್ಶಿಸುವುದಕ್ಕಾಗಿ ಅವರ ಆಶ್ರಮಕ್ಕೆ ಹೋದನು ಆಗ ವಸಿಷ್ಠರ ಎಡಪಾರ್ಶ್ವದಲ್ಲಿ ಸೂರ್ಯನಂತೆ ತೇಜಸ್ಸಿನಿಂದ ಪ್ರಜ್ವಲಿಸುತ್ತ ಕುಳಿತಿದ್ದ ಆ ಮಹರ್ಷಿಗಳನ್ನು ದಶರಥನು ಕಂಡನು (೩-೪). ಆ ಇಬ್ಬರು ತಪಸ್ವಿಗಳಿಗೂ ಮಹಾರಾಜನು

ಪಾದ್ಯೇನ ಫಲಮೂಲೈಶ್ಚ ಉವಾಸ ಮುನಿಭಿಃ ಸಹ ।
ತೇಷಾಂ ತತ್ರೋಪವಿಷ್ಟಾನಾಂ ತಾಸ್ತಾಃ ಸುಮಧುರಾಃ ಕಥಾಃ ॥ ೬

ಬಭೂವುಃ ಪರಮರ್ಷೀಣಾಂ ಮಧ್ಯಾದಿತ್ಯಗತೇಽಹನಿ ।
ತತಃ ಕಥಾಯಾಂ ಕಸ್ಯಾಂಚಿತ್ ಪ್ರಾಂಜಲಿಃ ಪ್ರಗ್ರಹೋ ನೃಪಃ ॥ ೭

ಉವಾಚ ತಂ ಮಹಾತ್ಮಾನಮತ್ರೇಃ ಪುತ್ರಂ ತಪೋಧನಮ್ ।
ಭಗವನ್ ಕಿಂಪ್ರಮಾಣೇನ ಮಮ ವಂಶೋ ಭವಿಷ್ಯತಿ ॥ ೮

ಕಿಮಾಯುಶ್ಚ ಹಿ ಮೇ ರಾಮಃ ಪುತ್ರಾಶ್ಚಾನ್ಯೇ ಕಿಮಾಯುಷಃ ।
ರಾಮಸ್ಯ ಚ ಸುತಾ ಯೇ ಸ್ಯುಸ್ತೇಷಾಮಾಯುಃ ಕಿಯದ್ಭವೇತ್ ॥

ಕಾಮ್ಯಯಾ ಭಗವನ್ ಬ್ರೂಹಿ ವಂಶಸ್ಯಾಸ್ಯ ಗತಿಂ ಮಮ ।
ತಚ್ಛ್ರುತ್ವಾ ವ್ಯಾಹೃತಂ ವಾಕ್ಯಂ ರಾಜ್ಞೋ ದಶರಥಸ್ಯ ಚ ॥ ೧೦

ದುರ್ವಾಸಾಃ ಸುಮಹಾತೇಜಾ ವ್ಯಾಹರ್ತುಮುಪಚಕ್ರಮೇ ।
ಶೃಣು ರಾಜನ್ ಪುರಾವೃತ್ತಂ ತಥಾ ದೈವಾಸುರೇ ಯುಧಿ ॥ ೧೧

---

ವಿನಯದಿಂದ ಅಭಿವಾದನೆ ಮಾಡಲು, ಅವರು ರಾಜನನ್ನು ಸ್ವಾಗತಿಸಿ ಪೀಠಾದಿಗಳನ್ನಿತ್ತು ಸತ್ಕರಿಸಿದರು ಪಾದ್ಯ, ಫಲ, ಮೂಲಗಳಿಂದ ಉಪಚರಿಸಿದರು ಅವರೆಲ್ಲರೂ ಮುನಿಗಳೊಡನೆ ಕುಳಿತು ಮಧುರಕಥಾಲಾಪಗಳನ್ನು ನಡೆಸಿದರು (೫-೬) ಮಧ್ಯಾಹ್ನದ ವೇಳೆಯಾಗಿತ್ತು ಮಾತಿನ ನಡುವೆ ಒಂದು ಸಲ ದಶರಥಮಹಾರಾಜನು ಕೈಮುಗಿದು ವಿನಯದಿಂದ ದುರ್ವಾಸ ಮುನಿಗಳನ್ನು ಕುರಿತು "ಭಗವನ್, ನನ್ನ ವಂಶವು ಎಲ್ಲಿಯವರೆಗೆ ಮುಂದುವರಿಯುವುದು? ನನ್ನ ರಾಮನ ಆಯುಸ್ಸು ಎಷ್ಟು? ಉಳಿದ ಪುತ್ರರು ಎಷ್ಟು ಕಾಲ ಬಾಳುವರು? ರಾಮನ ಮಕ್ಕಳೂ ಅವರ ಆಯುಸ್ಸೂ ಎಷ್ಟು? (೭-೯) ಇದನ್ನು ತಿಳಿಯಲು ನನಗೆ ಇಚ್ಛೆಯಾಗಿದೆ ಮಹಾತ್ಮರೆ, ನನ್ನ ವಂಶದ ಪರಿಸ್ಥಿತಿಯನ್ನು ದಯೆಯಿಟ್ಟು ಹೇಳಬೇಕು" ಎಂದು ಪ್ರಾರ್ಥಿಸಿದನು ದಶರಥರಾಜನ ನುಡಿಯನ್ನು ಕೇಳಿ ತೇಜೋನಿಧಿಗಳಾದ ದುರ್ವಾಸರು ಹೀಗೆಂದರು. "ರಾಜ, ದೇವಾಸುರರಿಗೆ ಯುದ್ಧವು ನಡೆದಾಗ ಸಂಭವಿಸಿದ

ದೈತ್ಯಾಃ ಸುರೈರ್ಭರ್ತ್ಸ್ಯಮಾನಾ ಭೃಗುಪತ್ನೀಂ ಸಮಾಶ್ರಿತಾಃ ।
ತಯಾ ದತ್ತಾಭಯಾಸ್ತತ್ರ ನ್ಯವಸನ್ನಭಯಾಸ್ತದಾ ॥ ೧೨

ತಯಾ ಪರಿಗೃಹೀತಾಂಸ್ತಾನ್ ದೃಷ್ಟ್ವಾ ಕ್ರುದ್ಧಃ ಸುರೇಶ್ವರಃ ।
ಚಕ್ರೇಣ ಶಿತಧಾರೇಣ ಭೃಗುಪತ್ನ್ಯಾಃ ಶಿರೋಽಹರತ್ ॥ ೧೩

ತತಸ್ತಾಂ ನಿಹತಾಂ ದೃಷ್ಟ್ವಾ ಪತ್ನೀಂ ಭೃಗುಕುಲೋದ್ವಹಃ ।
ಶಶಾಪ ಸಹಸಾ ಕ್ರುದ್ಧೋ ವಿಷ್ಣುಂ ರಿಪುಕುಲಾರ್ದನಮ್ ॥ ೧೪

ಯಸ್ಮಾದವಧ್ಯಾಂ ಮೇ ಪತ್ನೀಮವಧೀಃ ಕ್ರೋಧಮೂರ್ಛಿತಃ ।
ತಸ್ಮಾತ್ತ್ವಂ ಮಾನುಷೇ ಲೋಕೇ ಜನಿಷ್ಯಸಿ ಜನಾರ್ದನ ॥ ೧೫

ತತ್ರ ಪತ್ನೀವಿಯೋಗಂ ತ್ವಂ ಪ್ರಾಪ್ಸ್ಯಸೇ ಬಹುವಾರ್ಷಿಕಮ್ ।
ಶಾಪಾಭಿಹತಚೇತಾಃ ಸ ಸ್ವಾತ್ಮನಾ ಭಾವಿತೋಽಭವತ್ ॥ ೧೬

---

ಒಂದು ಪೂರ್ವವೃತ್ತವನ್ನು ಕೇಳು (೧೦-೧೧) ದೇವತೆಗಳಿಂದ ವಿಪತ್ತಿಗೊಳಗಾದ ದೈತ್ಯರು ಭೃಗುಮುನಿಯ ಪತ್ನಿಗೆ ಶರಣಾದರು * ಅವಳು ದೈತ್ಯರಿಗೆ ಅಭಯವನ್ನಿತ್ತು ರಕ್ಷಿಸುತ್ತಿದ್ದಳು ದೈತ್ಯರು ನಿರ್ಭಯರಾಗಿ ನೆಲೆಸಿದರು (೧೨) ಅಸುರರಿಗೆ ಭೃಗುಪತ್ನಿಯು ಆಶ್ರಯವನ್ನಿತ್ತು ರಕ್ಷಿಸುವಳೆಂಬುದನ್ನು ತಿಳಿದು ದೇವೇಶ್ವರನಾದ ವಿಷ್ಣುವು ಕ್ರುದ್ಧನಾದನು ಅವನು ಹರಿತವಾದ ಚಕ್ರಾಯುಧದಿಂದ ಭೃಗುಪತ್ನಿಯ ತಲೆಯನ್ನು ಕತ್ತರಿಸಿದನು (೧೩) ಪತ್ನಿಯು ಹತಳಾದ್ದನ್ನು ತಿಳಿದು ಭೃಗುಮುನಿಯು ಕ್ರುದ್ಧನಾಗಿ ರಿಪುಕುಲಾಂತಕನಾದ ವಿಷ್ಣುವಿಗೆ “ಎಲೈ ಜನಾರ್ದನ, (ಸ್ತ್ರೀಯಾದ್ದರಿಂದ) ವಧೆಗೆ ಅನರ್ಹಳಾದ ನನ್ನ ಪತ್ನಿಯನ್ನು ಕೋಪಾತಿರೇಕದಿಂದ ಕೊಂದಿದ್ದೀಯೆ ಆದ್ದರಿಂದ ನೀನು ಮನುಷ್ಯಲೋಕದಲ್ಲಿ ಜನಿಸುವೆ! (೧೪-೧೫) ಅಲ್ಲಿ ಬಹುವರ್ಷಗಳವರೆಗೆ ಪತ್ನೀವಿಯೋಗವನ್ನನುಭವಿಸುವೆ!” ಎಂದು ಶಪಿಸಿದನು ಹೀಗೆ ಶಾಪವನ್ನಿತ್ತಮೇಲೆ ಭೃಗುವಿಗೆ ಬಹಳ ಪಶ್ಚಾತ್ತಾಪವಾಯಿತು ತನ್ನ ಮನಸ್ಸಿನಲ್ಲಿಯೇ ಅದನ್ನೆಣಿಸುತ್ತ ಚಿಂತಾನ್ವಿತನಾದನು (೧೬)

* ಅನುಬಂಧವನ್ನು ನೋಡಿ

ಅರ್ಚಯಾಮಾಸ ತಂ ದೇವಂ ಭೃಗುಃ ಶಾಪೇನ ಪೀಡಿತಃ ।
ತಪಸಾರಾಧಿತೋ ದೇವೋ ಹ್ಯಬ್ರವೀದ್ಭಕ್ತವತ್ಸಲಃ ॥ ೧೭
ಲೋಕಾನಾಂ ಸಂಪ್ರಿಯಾರ್ಥಂ ತು ತಂ ಶಾಪಂ ಗ್ರಾಹ್ಯಮುಕ್ತವಾನ್
ಇತಿ ಶಪ್ತೋ ಮಹಾತೇಜಾ ಭೃಗುಣಾ ಪೂರ್ವಜನ್ಮನಿ ॥ ೧೮
ಇಹಾಗತೋ ಹಿ ಪುತ್ರತ್ವಂ ತವ ಪಾರ್ಥಿವಸತ್ತಮ ।
ರಾಮ ಇತ್ಯಭಿವಿಖ್ಯಾತಸ್ತ್ರಿಷು ಲೋಕೇಷು ಮಾನದ ॥ ೧೯
ತತ್ಫಲಂ ಪ್ರಾಪ್ಸ್ಯತೇ ಚಾಪಿ ಭೃಗುಶಾಪಕೃತಂ ಮಹತ್ ।
ಅಯೋಧ್ಯಾಯಾಃ ಪತೀ ರಾಮೋ ದೀರ್ಘಕಾಲಂ ಭವಿಷ್ಯತಿ ॥ ೨೦
ತತ್ರ ಪತ್ನೀವಿಯೋಗಂ ಚ ದೀರ್ಘಕಾಲಂ ಗಮಿಷ್ಯತಿ ।
ಸುಖಿನಶ್ಚ ಸಮೃದ್ಧಾಶ್ಚ ಭವಿಷ್ಯಂತ್ಯಸ್ಯ ಯೇಽನುಗಾಃ ॥ ೨೧
ದಶ ವರ್ಷಸಹಸ್ರಾಣಿ ದಶವರ್ಷಶತಾನಿ ಚ ।
ರಾಮೋ ರಾಜ್ಯಮುಪಾಸಿತ್ವಾ ಬ್ರಹ್ಮಲೋಕಂ ಗಮಿಷ್ಯತಿ ॥ ೨೨

---

(ಕೊಟ್ಟ ಶಾಪವು ಸುಳ್ಳಾದರೆ ತಾನು ಅನೃತವಾದಿಯಾಗುವೆನೆಂದು) ಶಾಪಚಿಂತೆಯು ಅವನನ್ನು ಕಾಡಿಸಿತು! ಅನಂತರ ಭೃಗುಮುನಿಯು ತಪಸ್ಸು ಮಾಡಿ ವಿಷ್ಣುವನ್ನಾರಾಧಿಸಿದನು ಭಕ್ತವತ್ಸಲನಾದ ಸ್ವಾಮಿಯು ಪ್ರಸನ್ನನಾಗಿ "ಎಲೈ ಭೃಗುಮುನಿಯೆ, ನಾನು ಮನುಷ್ಯಲೋಕದಲ್ಲಿ ಜನಿಸಬೇಕೆಂಬ ನಿನ್ನ ಶಾಪವು ನನಗೆ ಗ್ರಾಹ್ಯವಾಗಿದೆ ಲೋಕದ ಕ್ಷೇಮಕ್ಕಾಗಿ ಅದರಂತೆ ನಡೆಯುವೆನು" ಎಂದು ತಿಳಿಸಿದನು (೧೭-೧೮) ಈ ಪ್ರಕಾರದಲ್ಲಿ ಪೂರ್ವಜನ್ಮದಲ್ಲಿ—ಉಪೇಂದ್ರಾವತಾರಕಾಲದಲ್ಲಿ ಭೃಗುವಿನಿಂದ ಶಪ್ತನಾದ ಶ್ರೀಮನ್ನಾರಾಯಣನು, ದಶರಥಮಹಾರಾಜ, ನಿನಗೆ ಪುತ್ರನಾಗಿ ಅವತರಿಸಿದ್ದಾನೆ! ರಾಮನೆಂಬ ಹೆಸರಿನಿಂದ ಮೂರು ಲೋಕಗಳಲ್ಲಿ ವಿಖ್ಯಾತನಾಗಿದ್ದಾನೆ (೧೯). ಭೃಗುಶಾಪದ ಫಲವಾಗಿ ದೀರ್ಘಕಾಲದ ಪತ್ನೀವಿಯೋಗವನ್ನು ಪಡೆಯುವನು ದಶರಥ, ರಾಮನು ಬಹುಕಾಲದವರೆಗೆ ಅಯೋಧ್ಯಾಧಿಪತಿಯಾಗಿರುವನು ಆಗ ದೀರ್ಘಕಾಲದ ಪತ್ನೀವಿಯೋಗವು ಸಂಭವಿಸುವುದು ರಾಮನನ್ನಾಶ್ರಯಿಸಿದವರೆಲ್ಲರೂ ಸುಖಿಗಳೂ ಧನಧಾನ್ಯಸಮೃದ್ಧಿಯುಳ್ಳವರೂ ಆಗುವರು (೨೦-೨೧) ಹನ್ನೊಂದುಸಾವಿರ ವರ್ಷಗಳವರೆಗೆ ಶ್ರೀರಾಮನು

ಸಮೃದ್ಧೈಶ್ಚಾಶ್ವಮೇಧೈಶ್ಚ ಇಷ್ಟ್ವಾ ಪರಮದುರ್ಜಯಃ ।
ರಾಜವಂಶಾಂಶ್ಚ ಬಹುಶೋ ಬಹೂನ್ ಸಂಸ್ಥಾಪಯಿಷ್ಯತಿ ॥ ೨೩

ದ್ವೌ ಪುತ್ರೌ ತು ಭವಿಷ್ಯೇತೇ ಸೀತಾಯಾಂ ರಾಘವಸ್ಯ ತು ।
ಅನ್ಯತ್ರ ನ ತ್ವಯೋಧ್ಯಾಯಾಂ ಸತ್ಯಮೇತನ್ನ ಸಂಶಯಃ ॥ ೨೪

ಸೀತಾಯಾಶ್ಚ ತತಃ ಪುತ್ರಾವಭಿಷೇಕ್ಷ್ಯತಿ ರಾಘವಃ ।
ಸ ಸರ್ವಮಖಿಲಂ ರಾಜ್ಞೋ ವಂಶಸ್ಯಾಹ ಗತಾಗತಮ್ ॥ ೨೫

ಆಖ್ಯಾಯ ಸುಮಹಾತೇಜಾಸ್ತೂಷ್ಣೀಮಾಸೀನ್ಮಹಾಮುನಿಃ ।
ತೂಷ್ಣೀಂಭೂತೇ ತದಾ ತಸ್ಮಿನ್ ರಾಜಾ ದಶರಥೋ ಮುನೌ ॥ ೨೬

ಅಭಿವಾದ್ಯ ಮಹಾತ್ಮಾನೌ ಪುನರಾಯಾತ್ ಪುರೋತ್ತಮಮ್ ।
ಏತದ್ವಚೋ ಮಯಾ ತತ್ರ ಮುನಿನಾ ವ್ಯಾಹೃತಂ ಪುರಾ ॥ ೨೭

ಶ್ರುತಂ ಹೃದಿ ಚ ನಿಕ್ಷಿಪ್ತಂ ನಾನ್ಯಥಾ ತದ್ಭವಿಷ್ಯತಿ ।
ಏವಂ ಗತೇ ನ ಸಂತಾಪಂ ಕರ್ತುಮರ್ಹಸಿ ರಾಘವ ॥ ೨೮

---

ರಾಜ್ಯಭಾರಮಾಡಿ ಬ್ರಹ್ಮಲೋಕವನ್ನಡರುವನು ಅಸಮಪರಾಕ್ರಮಿಯಾಗಿ ಬಾಳಿ ಸಮೃದ್ಧವಾಗಿ ಅಶ್ವಮೇಧಯಾಗಗಳನ್ನಾಚರಿಸುವನು ರಾಜವಂಶವನ್ನು ನಾನಾ ಮುಖವಾಗಿ ಸ್ಥಾಪಿಸಿ ಬೆಳೆಸುವನು (೨೨-೨೩) ರಾಘವನಿಗೆ ಸೀತೆಯಲ್ಲಿ ಇಬ್ಬರು ಪುತ್ರರು ಜನಿಸುವರು ಅವರು ಬೇರೊಂದು ಸ್ಥಳದಲ್ಲಿ ಜನಿಸುವರು, ಅಯೋಧ್ಯೆಯಲ್ಲಲ್ಲ! ಇದು ಸತ್ಯ, ಸಂದೇಹ ಬೇಡ (೨೪) ಸೀತೆಯ ಪುತ್ರರಿಗೆ ಶ್ರೀರಾಮನು ಪಟ್ಟಾಭಿಷೇಕಮಾಡುವನು" ಈ ಪ್ರಕಾರವಾಗಿ, ಲಕ್ಷ್ಮಣ, ದುರ್ವಾಸಮುನಿಗಳು ದಶರಥರಾಜನ ವಂಶದ ಗತಾಗತವನ್ನು ತಿಳಿಸಿದರು ಅದೆಲ್ಲವನ್ನೂ ಹೇಳಿ ತೇಜಸ್ವಿಗಳಾದ ಆ ಮಹರ್ಷಿಗಳು ಸುಮ್ಮನಾದರು ಅನಂತರ ದಶರಥರಾಜನು ವಸಿಷ್ಠರಿಗೂ ದುರ್ವಾಸರಿಗೂ ನಮಸ್ಕಾರಮಾಡಿ ರಾಜಧಾನಿಗೆ ಮರಳಿದನು (೨೫-೨೬) ಮಹರ್ಷಿಗಳು ಹೇಳಿದ್ದೆಲ್ಲವನ್ನೂ ನಾನು ಕೇಳಿ ಮನಸ್ಸಿನಲ್ಲಿಯೇ ಇರಿಸಿಕೊಂಡೆನು ಅವರು ಹೇಳಿದ ಭವಿಷ್ಯವೃತ್ತವು ಎಂದಿಗೂ ಬೇರೆಯಾಗದು ಹೀಗಿರುವಾಗ, ರಘುನಂದನ, ಸೀತೆಗೋಸ್ಕರವಾಗಲಿ ಶ್ರೀರಾಮನಿಗೋಸ್ಕರವಾಗಲಿ ವ್ಯಥೆ ಪಡಬೇಡ. ಮನಸ್ಸನ್ನು ಗಟ್ಟಿಮಾಡಿಕೊ" ಎಂದನು (೨೭-೨೮)

ಸೀತಾರ್ಥೇ ರಾಘವಾರ್ಥೇ ವಾ ದೃಢೋ ಭವ ನರೋತ್ತಮ ।
ಶ್ರುತ್ವಾ ತು ವ್ಯಾಹೃತಂ ವಾಕ್ಯಂ ಸೂತಸ್ಯ ಪರಮಾದ್ಭುತಮ್ ॥ ೨೯

ಪ್ರಹರ್ಷಮತುಲಂ ಲೇಭೇ ಸಾಧು ಸಾಧ್ವಿತಿ ಚಾಬ್ರವೀತ್ ।
ತತಃ ಸಂವದತೋರೇವಂ ಸೂತಲಕ್ಷ್ಮಣಯೋಃ ಪಥಿ ॥ ೩೦

ಅಸ್ತಮರ್ಕೇ ಗತೇ ವಾಸಂ ಕೇಶಿನ್ಯಾಂ ತಾವಥೋಷತುಃ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕಪಂಚಾಶಃ ಸರ್ಗಃ



ಸುಮಂತ್ರನು ಹೇಳಿದ ಪರಮ ವಿಸ್ಮಯಕರವಾದ ಈ ವೃತ್ತಾಂತವನ್ನು ಕೇಳಿ ಲಕ್ಷ್ಮಣನಿಗೆ ರೋಮಾಂಚವಾಯಿತು ಅವನು ವಿಸ್ಮಿತನಾಗಿ '.ಹೌದು, ಸರಿ!' ಎಂದು ಉದ್ಗರಿಸಿದನು ಹೀಗೆ ಲಕ್ಷ್ಮಣನೂ ಸುಮಂತ್ರನೂ ದಾರಿಯಲ್ಲಿ ಮಾತಾಡಿಕೊಳ್ಳುತ್ತ ಪ್ರಯಾಣಮಾಡಿದರು ಸೂರ್ಯನು ಅಸ್ತಂಗತನಾಗಲು ಗೋಮತೀನದಿಯ ತೀರದಲ್ಲಿ ತಂಗಿದರು (೨೯-೩೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತೊಂದನೆಯ ಸರ್ಗ



# ದ್ವಿಪಂಚಾಶಃ ಸರ್ಗಃ

## ರಾಮುಃಪಾಧ್ಯಾನವ್

ತತ್ರ ತಾಂ ರಜನೀಮುಷ್ಯ ಕೇಶಿನ್ಯಾಂ ರಘುನಂದನಃ ।
ಪ್ರಭಾತೇ ಪುನರುತ್ಥಾಯ ಲಕ್ಷ್ಮಣಃ ಪ್ರಯಯೌ ತದಾ ॥ ೧

ತತೋಽರ್ಧದಿವಸೇ ಪ್ರಾಪ್ತೇ ಪ್ರವಿವೇಶ ಮಹಾರಥಃ ।
ಅಯೋಧ್ಯಾಂ ರತ್ನಸಂಪೂರ್ಣಾಂ ಹೃಷ್ಟಪುಷ್ಟಜನಾವೃತಾಮ್ ॥ ೨

ಸೌಮಿತ್ರಿಸ್ತು ಪರಂ ದೈನ್ಯಂ ಜಗಾಮ ಸುಮಹಾಮತಿಃ ।
ರಾಮಪಾದೌ ಸಮಾಸಾದ್ಯ ವಕ್ಷ್ಯಾಮಿ ಕಿಮಹಂ ಗತಃ ॥ ೩

ತಸ್ಯೈವಂ ಚಿಂತಯಾನಸ್ಯ ಭವನಂ ಶಶಿಸಂನಿಭಮ್ ।
ರಾಮಸ್ಯ ಪರಮೋದಾರಂ ಪುರಸ್ತಾತ್ ಸಮದೃಶ್ಯತ ॥ ೪

ರಾಜ್ಞಸ್ತು ಭವನದ್ವಾರಿ ಸೋಽವತೀರ್ಯ ನರೋತ್ತಮಃ ।
ಅವಾಙ್ಮುಖೋ ದೀನಮನಾಃ ಪ್ರವಿವೇಶಾನಿವಾರಿತಃ ॥ ೫

## ಸರ್ಗ ೫೨

### ಲಕ್ಷ್ಮಣನು ಅಯೋಧ್ಯೆಗೆ ಮರಳಿ ಶ್ರೀರಾಮನನ್ನು ಸಂಧಿಸುವುದು

ಲಕ್ಷ್ಮಣನು ಗೋಮತೀತೀರದಲ್ಲಿ ರಾತ್ರಿಯನ್ನು ಕಳೆದನು ಮಾರನೆಯ ದಿನ ಬೆಳಗಾಗಲು ಅಲ್ಲಿಂದ ಹೊರಟು ರಥದಲ್ಲಿ ಪ್ರಯಾಣಮಾಡಿದನು. ಅರ್ಧ ದಿವಸ ಕಳೆದು ಮಧ್ಯಾಹ್ನವಾಗಿರುವಾಗ, ಸಂತುಷ್ಟಜನಸಮಾಕೀರ್ಣವಾದ ಅಯೋಧ್ಯೆಗೆ ಬಂದನು (೧-೨) ಧೀಮಂತನಾದ ಸೌಮಿತ್ರಿಯು ಶೋಕಾವಿಷ್ಟನಾಗಿ "ಅಯ್ಯೊ! ನಾನು ಹೋಗಿ ಶ್ರೀರಾಮನ ಪಾದಸಮೀಪದಲ್ಲಿ ಏನನ್ನು ಹೇಳಲಿ?" ಎಂದು ಚಿಂತಿಸುತ್ತ ಬರುತ್ತಿರಲು, ಶ್ರೀರಾಮನ ಇಂದುಧವಳವಾದ ದಿವ್ಯಪ್ರಾಸಾದವು ಗೋಚರಿಸಿತು (೩-೪) ಅರಮನೆಯ ದ್ವಾರದಲ್ಲಿ ಲಕ್ಷ್ಮಣನು ರಥದಿಂದಿಳಿದನು ದೀನಚಿತ್ತನಾಗಿ ತಲೆತಗ್ಗಿಸಿ

ಸ ದೃಷ್ಟ್ವಾ ರಾಘವಂ ದೀನಮಾಸೀನಂ ಪರಮಾಸನೇ ।
ನೇತ್ರಾಭ್ಯಾಮಶ್ರುಪೂರ್ಣಾಭ್ಯಾಂ ದದರ್ಶಾಗ್ರಜಮಗ್ರತಃ ॥ ೬

ಜಗ್ರಾಹ ಚರಣೌ ತಸ್ಯ ಲಕ್ಷ್ಮಣೋ ದೀನಚೇತನಃ ।
ಉವಾಚ ದೀನಯಾ ವಾಚಾ ಪ್ರಾಂಜಲಿಃ ಸುಸಮಾಹಿತಃ ॥ ೭

ಆರ್ಯಸ್ಯಾಜ್ಞಾಂ ಪುರಸ್ಕೃತ್ಯ ವಿಸೃಜ್ಯ ಜನಕಾತ್ಮಜಾಮ್ ।
ಗಂಗಾತೀರೇ ಯಥೋದ್ದಿಷ್ಟೇ ವಾಲ್ಮೀಕೇರಾಶ್ರಮೇ ಶುಭೇ ॥ ೮

ತತ್ರ ತಾಂ ಚ ಶುಭಾಚಾರಾಮಾಶ್ರಮಾಂತೇ ಯಶಸ್ವಿನೀಮ್ ।
ಪುನರಪ್ಯಾಗತೋ ವೀರ ಪಾದಮೂಲಮುಪಾಸಿತುಮ್ ॥ ೯

ಮಾ ಶುಚಃ ಪುರುಷವ್ಯಾಘ್ರ ಕಾಲಸ್ಯ ಗತಿರೀದೃಶೀ ।
ತ್ವದ್ವಿಧಾ ನ ಹಿ ಶೋಚಂತಿ ಬುದ್ಧಿಮಂತೋ ಮನಸ್ವಿನಃ ॥ ೧೦

ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ ।
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಚ ಜೀವಿತಮ್ ॥

---

ಅರಮನೆಯೊಳಗೆ ಹೋದನು ಅವನನ್ನು ಯಾರೂ ತಡೆಯಲಿಲ್ಲ ರಾಘವನು ಸಿಂಹಾಸನದಲ್ಲಿ ದೈನ್ಯದಿಂದ ಚಿಂತಾವಿಷ್ಟನಾಗಿ ಕುಳಿತಿದ್ದನು ಲಕ್ಷ್ಮಣನು ಕಂಬನಿದುಂಬಿದ ಕಣ್ಣುಗಳಿಂದ ಅಣ್ಣನನ್ನು ನೋಡಿದನು (೫-೬) ಮುಂದೆ ಹೋಗಿ ಅಣ್ಣನ ಪಾದಗಳಿಗೆ ವಂದಿಸಿದನು ಅವನ ಚೈತನ್ಯ ಕುಗ್ಗಿ ಹೋಗಿತ್ತು ಅನಂತರ ತನ್ನನ್ನು ಸಂತೈಸಿಕೊಂಡು ಕೈಮುಗಿದು ದೀನವಾಣಿಯಿಂದ ಹೀಗೆಂದನು (೭). "ಆರ್ಯನ ಆಜ್ಞೆಯಂತೆ ಜನಕಾತ್ಮಜೆಯನ್ನು ಕರೆದೊಯ್ದು ವಾಲ್ಮೀಕಿಮುನಿಗಳ ಪುಣ್ಯಾಶ್ರಮದಲ್ಲಿ ವಿಸರ್ಜಿಸಿದ್ದಾಯಿತು ಕೀರ್ತಿಶಾಲಿನಿಯೂ ಪರಿಶುದ್ಧಚಾರಿತ್ರಳೂ ಆದ ದೇವಿಯನ್ನು ಆಶ್ರಮದ ಬಳಿ ವಿಸರ್ಜಿಸಿ, ಸೇವೆಗಾಗಿ ನಿನ್ನ ಪಾದದ ಬಳಿಗೆ ಮತ್ತೆ ಬಂದಿದ್ದೇನೆ (೮-೯) ಹೇ ಪುರುಷೋತ್ತಮ, ದುಃಖಿಸಬೇಡ ಕಾಲದ ಮಹಿಮೆ ಇಂತಹದು ನಿನ್ನಂತಹ ಬುದ್ಧಿಶಾಲಿಗಳೂ ಧೀರಚಿತ್ತರೂ ಶೋಕಿಸುವುದಿಲ್ಲ ಈ ಜಗತ್ತಿನಲ್ಲಿ ಸಕಲೈಶ್ವರ್ಯವೂ ನಾಶದಲ್ಲಿ ಮುಗಿಯುತ್ತದ ಮೇಲೇರುವುದು ಪತನದಲ್ಲಿ ಮುಕ್ತಾಯಗೊಳ್ಳುತ್ತದೆ ಸಂಯೋಗಕ್ಕೆ ವಿಯೋಗದಲ್ಲಿ ಪರ್ಯವಸಾನ

ತಸ್ಮಾತ್ ಪುತ್ರೇಷು ದಾರೇಷು ಮಿತ್ರೇಷು ಚ ಧನೇಷು ಚ ।
ನಾತಿಪ್ರಸಂಗಃ ಕರ್ತವ್ಯೋ ವಿಪ್ರಯೋಗೋ ಹಿ ತೈರ್ಧ್ರುವಮ್ ॥

ಶಕ್ತಸ್ತ್ವಮಾತ್ಮನಾತ್ಮಾನಂ ವಿನೇತುಂ ಮನಸೈವ ಹಿ ।
ಲೋಕಾನ್ ಸರ್ವಾಂಶ್ಚ ಕಾಕುತ್ಸ್ಥ ಕಿಂ ಪುನಃ ಶೋಕಮಾತ್ಮನಃ ॥

ನೇದೃಶೇಷು ವಿಮುಹ್ಯಂತಿ ತ್ವದ್ವಿಧಾಃ ಪುರುಷರ್ಷಭಾಃ ।
ಅಪವಾದಃ ಸ ಕಿಲ ತೇ ಪುನರೇಷ್ಯತಿ ರಾಘವ ॥ ೧೪

ಯದರ್ಥಂ ಮೈಥಿಲೀ ತ್ಯಕ್ತಾ ಅಪವಾದಭಯಾನ್ನೃಪ ।
ಸೋಽಪವಾದಃ ಪುರೇ ರಾಜನ್ ಭವಿಷ್ಯತಿ ನ ಸಂಶಯಃ ॥ ೧೫

ಸ ತ್ವಂ ಪುರುಷಶಾರ್ದೂಲ ಧೈರ್ಯೇಣ ಸುಸಮಾಹಿತಃ ।
ತ್ಯಜೈನಾಂ ದುರ್ಬಲಾಂ ಬುದ್ಧಿಂ ಸಂತಾಪಂ ಮಾ ಕುರುಷ್ವ ಹ ॥ ೧೬

---

ಜೀವಿತದ ಕೊನೆಯಲ್ಲಿ ಮರಣ ತಪ್ಪಿದ್ದಲ್ಲ! (೧೦-೧೧) ಆದ್ದರಿಂದ ಮಕ್ಕಳಲ್ಲಿ-ಮಡದಿಯರಲ್ಲಿ-ಮಿತ್ರರಲ್ಲಿ-ಧನದಲ್ಲಿ ಅತ್ಯಾಸಕ್ತಿಯನ್ನಿಡಬಾರದು ಏಕೆಂದರೆ, ಅವರೆಲ್ಲರ ವಿಯೋಗವು ಕಟ್ಟಿಟ್ಟ ಬುತ್ತಿ (೧೨) ಕಾಕುತ್ಸ್ಥ, ನಿನ್ನನ್ನು ನೀನೇ ಮನೋಬಲದಿಂದ ವಶದಲ್ಲಿಟ್ಟುಕೊಂಡು ಶೋಕವನ್ನು ಜಯಿಸಬೇಕು ಸಕಲ ಲೋಕಗಳನ್ನೂ ನಿಗ್ರಹಿಸಬಲ್ಲ ನಿನಗೆ, ನಿನ್ನ ಶೋಕವನ್ನು ನಿಗ್ರಹಿಸಲು ಸಾಧ್ಯವಿಲ್ಲವೆ? (೧೩) ನಿನ್ನಂತಹ ಧೀರರಾದ ಪುರುಷಶ್ರೇಷ್ಠರು ಇಂತಹ ಪ್ರಸಂಗಗಳಲ್ಲಿ ವಿಮೋಹಗೊಳ್ಳುವುದಿಲ್ಲ. ರಾಘವ, ನೀನು ಹೀಗೆ ಶೋಕಾವಿಷ್ಟನಾದರೆ ಹಿಂದಿನ ಜನಾಪವಾದವು ಮತ್ತೆ ತಪ್ಪಿದ್ದಲ್ಲ (೧೪) ಯಾವ ಅಪವಾದದ ಭಯದಿಂದ ಮೈಥಿಲಿಯನ್ನು ತ್ಯಜಿಸಿದೆಯೋ, ಮಹಾರಾಜ, ಅದೇ ಅಪವಾದವು ಪ್ರಕಾರಾಂತರದಿಂದ ನಿಶ್ಚಯವಾಗಿ ಗಂಟುಬೀಳುವುದು * ಆದ್ದರಿಂದ, ಪುರುಷೋತ್ತಮ, ಮನೋ

---

* "ರಾಮನಿಗೆ ಸೀತೆಯ ವ್ಯಾಮೋಹ ತಪ್ಪಲೇ ಇಲ್ಲ ಅವನು ಕಾಮುಕ" ಎಂದು ಜನರು ಆಡಿಕೊಳ್ಳುವರು ಅಥವಾ "ಪತಿವ್ರತೆಯಾದ ಮಡದಿಯನ್ನು ತ್ಯಜಿಸಿಬಿಟ್ಟನು ರಾಮನು ಎಂತಹ ಕ್ರೂರಾತ್ಮ!" ಎಂದು ಇನ್ನೊಂದು ಬಗೆಯಲ್ಲಿ ಅಪವಾದ ಹರಡಬಹುದು ಜನರನ್ನು ಮೆಚ್ಚಿಸುವುದು ಅಶಕ್ಯ—ಎಂದು ಲಕ್ಷ್ಮಣನ ಆಶಯವಿರಬಹುದು

ಏವಮುಕ್ತಃ ಸ ಕಾಕುತ್ಸ್ಥೋ ಲಕ್ಷ್ಮಣೇನ ಮಹಾತ್ಮನಾ ।
ಉವಾಚ ಪರಯಾ ಪ್ರೀತ್ಯಾ ಸೌಮಿತ್ರಿಂ ಮಿತ್ರವತ್ಸಲಃ ॥ ೧೭

ಏವಮೇತನ್ನರಶ್ರೇಷ್ಠ ಯಥಾ ವದಸಿ ಲಕ್ಷ್ಮಣ ।
ಪರಿತೋಷಶ್ಚ ಮೇ ವೀರ ಮಮ ಕಾರ್ಯಾನುಶಾಸನೇ ॥ ೧೮

ನಿರ್ವೃತಿಶ್ಚಾಗತಾ ಸೌಮ್ಯ ಸಂತಾಪಶ್ಚ ನಿರಾಕೃತಃ ।
ಭವದ್ವಾಕ್ಯೈಃ ಸುರುಚಿರೈರನುನೀತೋಽಸ್ಮಿ ಲಕ್ಷ್ಮಣ ॥ ೧೯

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವಿಪಂಚಾಶಃ ಸರ್ಗಃ



ಧೈರ್ಯದಿಂದ ಸಮಾಧಾನವನ್ನು ತಂದುಕೊ ಈ ಬುದ್ಧಿದೌರ್ಬಲ್ಯವನ್ನು ದೂರಮಾಡು ಶೋಕಿಸಬೇಡ" ಎಂದನು (೧೫-೧೬) ಮಹಾತ್ಮನಾದ ಲಕ್ಷ್ಮಣನ ನುಡಿಯನ್ನು ಕೇಳಿ ಕಾಕುತ್ಸ್ಥನು ಪ್ರೀತಿಯಿಂದ "ಲಕ್ಷ್ಮಣ, ನೀನು ಹೇಳುವುದು ಸರಿ ನನ್ನ ಆಜ್ಞೆಯನ್ನು ನಡೆಸಿದ್ದರಿಂದ ತೃಪ್ತಿಯಾಗಿದೆ ಸೌಮ್ಯ, ಮನಸ್ಸಿಗೆ ನೆಮ್ಮದಿಯಾಗಿದ ನೀನಾಡಿದ ಒಳ್ಳೆಯ ಮಾತುಗಳಿಂದ ಶೋಕವು ನೀಗಿದೆ ಸಮಾಧಾನವಾಗಿದೆ" ಎಂದು ಹೇಳಿದನು (೧೭-೧೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತೆರಡನೆಯ ಸರ್ಗ



# ತ್ರಿಪಂಚಾಶಃ ಸರ್ಗಃ

## ನೃಗಶಾಪಕಥನಮ್

ಲಕ್ಷ್ಮಣಸ್ಯ ತು ತದ್ವಾಕ್ಯಂ ನಿಶಮ್ಯ ಪರಮಾದ್ಭುತಮ್ ।
ಸುಪ್ರೀತಶ್ಚಾಭವದ್ರಾಮೋ ವಾಕ್ಯಮೇತದುವಾಚ ಹ ॥ ೧
ದುರ್ಲಭಸ್ತ್ವೀದೃಶೋ ಬಂಧುರಸ್ಮಿನ್ ಕಾಲೇ ವಿಶೇಷತಃ ।
ಯಾದೃಶಸ್ತ್ವಂ ಮಹಾಬುದ್ಧೇ ಮಮ ಸೌಮ್ಯ ಮನೋಽನುಗಃ ॥ ೨
ಯಚ್ಚ ಮೇ ಹೃದಯೇ ಕಿಂಚಿದ್ವರ್ತತೇ ಶುಭಲಕ್ಷಣ ।
ತನ್ನಿಶಾಮಯ ಚ ಶ್ರುತ್ವಾ ಕುರುಷ್ವ ವಚನಂ ಮಮ ॥ ೩
ಚತ್ವಾರೋ ದಿವಸಾಃ ಸೌಮ್ಯ ಕಾರ್ಯಂ ಪೌರಜನಸ್ಯ ವೈ ।
ಅಕುರ್ವಾಣಸ್ಯ ಸೌಮಿತ್ರೇ ತನ್ಮೇ ಮರ್ಮಾಣಿ ಕೃಂತತಿ ॥ ೪
ಆಹೂಯಂತಾಂ ಪ್ರಕೃತಯಃ ಪುರೋಧಾ ಮಂತ್ರಿಣಸ್ತಥಾ ।
ಕಾರ್ಯಾರ್ಥಿನಶ್ಚ ಪುರುಷಾಃ ಸ್ತ್ರಿಯೋ ವಾ ಪುರುಷರ್ಷಭ ॥ ೫

### ಸರ್ಗ ೫೩

ನೃಗರಾಜನಿಗೆ ಶಾಪ ಬಂದ ವೃತ್ತಾಂತವನ್ನು ರಾಘವನು
ಲಕ್ಷ್ಮಣನಿಗೆ ಹೇಳುವುದು

ಲಕ್ಷ್ಮಣನಾಡಿದ 'ಸರ್ವೇ ಕ್ಷಯಾಂತಾ ನಿಚಯಾಃ' (ಶ್ಲೋ ೧೧) ಇತ್ಯಾದಿ ವಿಸ್ಮಯಕರವಾದ ಹಿತನುಡಿಯನ್ನು ಕೇಳಿ ರಾಘವನು ಸಂಪ್ರೀತನಾಗಿ ಮತ್ತೆ ಹೀಗೆಂದನು. "ಸೌಮ್ಯ, ಈ ಬಗೆಯಲ್ಲಿ – ಅದರಲ್ಲಿಯೂ ಈ ಸಮಯದಲ್ಲಿ – ಹೀಗೆ ಮಾತಾಡುವ ನಿನ್ನಂತಹ ಆಪ್ತನು ದುರ್ಲಭ ನೀನು ಧೀಮಂತನಾಗಿದ್ದೀಯೆ ನನ್ನ ಮನಸ್ಸನ್ನು ತಿಳಿದು ವರ್ತಿಸುತ್ತೀಯೆ (೧-೨) ಶುಭಲಕ್ಷಣ–ಲಕ್ಷ್ಮಣ, ನನ್ನ ಹೃದಯದಲ್ಲಿರುವ ವಿಚಾರವನ್ನು ಕೇಳು ನನ್ನ ಮಾತನ್ನು ನಡೆಸು ನಾನು ಪ್ರಜಾಕಾರ್ಯದ ಕಡೆಗೆ ಗಮನವನ್ನೀಯದೆ ನಾಲ್ಕು ದಿನಗಳಾದವು ಈ ಕರ್ತವ್ಯಶೂನ್ಯತೆ ನನ್ನ ಮರ್ಮವನ್ನು ಕೊರೆಯುತ್ತಿದೆ (೩-೪) ಆದ್ದರಿಂದ ರಾಜ್ಯದ ಮುಖ್ಯಾಧಿಕಾರಿಗಳನ್ನೂ ಪುರೋಹಿತರನ್ನೂ ಮಂತ್ರಿಗಳನ್ನೂ ಬರಮಾಡು. ಕಾರ್ಯಾರ್ಥಿ

ಪೌರಕಾರ್ಯಾಣಿ ಯೋ ರಾಜಾ ನ ಕರೋತಿ ದಿನೇ ದಿನೇ ।
ಸಂವೃತೇ ನರಕೇ ಘೋರೇ ಪತಿತೋ ನಾತ್ರ ಸಂಶಯಃ ॥ ೬
ಶ್ರೂಯತೇ ಹಿ ಪುರಾ ರಾಜಾ ನೃಗೋ ನಾಮ ಮಹಾಯಶಾಃ ।
ಬಭೂವ ಪೃಥಿವೀಪಾಲೋ ಬ್ರಹ್ಮಣ್ಯಃ ಸತ್ಯವಾಕ್ ಶುಚಿಃ ॥ ೭
ಸ ಕದಾಚಿದ್ಗವಾಂ ಕೋಟೀಃ ಸವತ್ಸಾಃ ಸ್ವರ್ಣಭೂಷಿತಾಃ ।
ನೃದೇವೋ ಭೂಮಿದೇವೇಭ್ಯಃ ಪುಷ್ಕರೇಷು ದದೌ ನೃಪಃ ॥ ೮
ತತಃ ಸಂಗಾದ್ಗತಾ ಧೇನುಃ ಸವತ್ಸಾ ಸ್ಪರ್ಶಿತಾನಘ ।
ಬ್ರಾಹ್ಮಣಸ್ಯಾಹಿತಾಗ್ನೇಶ್ಚ ದರಿದ್ರಸ್ಯೋಂಛವರ್ತಿನಃ ॥ ೯
ಸ ನಷ್ಟಾಂ ಗಾಂ ಕ್ಷುಧಾರ್ತೋ ವೈ ಅನ್ವಿಷ್ಯಂಸ್ತತ್ರ ತತ್ರ ಚ ।
ನಾಪಶ್ಯತ್ ಸರ್ವರಾಜ್ಯೇಷು ಸಂವತ್ಸರಗಣಾನ್ ಬಹೂನ್ ॥ ೧೦
ತತಃ ಕನಖಲಂ ಗತ್ವಾ ಜೀರ್ಣವತ್ಸಾಂ ನಿರಾಮಯಾಮ್ ।
ದದರ್ಶ ಗಾಂ ಸ್ವಕಾಂ ಧೇನುಂ ಬ್ರಾಹ್ಮಣಸ್ಯ ನಿವೇಶನೇ ॥ ೧೧

---

ಗಳಾದ ಪುರುಷರೂ ಸ್ತ್ರೀಯರೂ ಆಗಮಿಸಲಿ ಲಕ್ಷ್ಮಣ, ಯಾವ ರಾಜನು ಪ್ರತಿದಿನವೂ ಪೌರಕಾರ್ಯಗಳನ್ನು ನಡೆಸುವುದಿಲ್ಲವೋ ಅವನು ಘೋರನರಕದಲ್ಲಿ ಬೀಳುವನು, ಸಂಶಯವಿಲ್ಲ (೫-೬) ಈ ವಿಷಯದಲ್ಲಿ ಒಂದು ವೃತ್ತಾಂತವು ಪ್ರಸಿದ್ಧವಾಗಿದೆ ನೃಗನೆಂದು ವಿಖ್ಯಾತನಾದ ಒಬ್ಬ ಭೂಪಾಲನಿದ್ದನು ಅವನು ಬ್ರಾಹ್ಮಣಭಕ್ತನೂ ಸತ್ಯವಾದಿಯೂ ಶುದ್ಧಚಾರಿತ್ರನೂ ಆಗಿದ್ದನು (೭) ಒಂದು ಸಲ ಆತನು ಪುಷ್ಕರಕ್ಷೇತ್ರದಲ್ಲಿ ಅಸಂಖ್ಯಾತವಾದ ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು ಗೋವುಗಳು ಕರುಗಳಿಂದ ಸಹಿತವಾಗಿಯೂ ಸ್ವರ್ಣಭೂಷಿತವಾಗಿಯೂ ಇದ್ದವು (೮) ಹೀಗಿರುವಾಗ ಅಹಿತಾಗ್ನಿಯಾದ ಒಬ್ಬ ಬ್ರಾಹ್ಮಣನಿಗೆ ರಾಜನು ದಾನಮಾಡಿದ ಒಂದು ಹಸು ಇತರ ಹಸುಗಳೊಡನೆ ಸೇರಿ ಕರುಸಹಿತವಾಗಿ ತಪ್ಪಿಸಿಕೊಂಡಿತು ಆ ಬ್ರಾಹ್ಮಣನು ಬಡವನೂ ಉಂಛವೃತ್ತಿಯವನೂ ಆಗಿದ್ದನು (೯) ಆತನು ಹಸಿವಿನಿಂದ ಬಳಲುತ್ತ ಆ ಗೋವಿಗಾಗಿ ಎಲ್ಲೆಲ್ಲಿಯೂ ಬಹುದಿನಗಳವರೆಗೆ ಹುಡುಕಿದನು. ಗೋವು ಸಿಗಲಿಲ್ಲ ವರ್ಷಗಳು ಕಳೆದವು ಕಡೆಗೆ ಕನಖಲವೆಂಬ ಗ್ರಾಮದ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಆ ಹಸುವಿದ್ದುದು ಗೊತ್ತಾ

ಅಥ ತಾಂ ನಾಮಧೇಯೇನ ಸ್ವಕೇನೋವಾಚ ಸ ದ್ವಿಜಃ ।
ಆಗಚ್ಛ ಶಬಲೇತ್ಯೇವಂ ಸಾ ತು ಶುಶ್ರಾವ ಗೌಃ ಸ್ವರಮ್ ॥ ೧೨

ತಸ್ಯ ತು ಸ್ವರಮಾಜ್ಞಾಯ ಕ್ಷುಧಾರ್ತಸ್ಯ ದ್ವಿಜಸ್ಯ ವೈ ।
ಅನ್ವಗಾತ್ ಪೃಷ್ಠತಃ ಸಾ ಗೌರ್ಗಚ್ಛಂತಂ ಪಾವಕೋಪಮಮ್ ॥

ಯೋಽಪಿ ಪಾಲಯತೇ ವಿಪ್ರಃ ಸೋಽಪಿ ಗಾಮನ್ವಗಾದ್ದ್ರುತಮ್ ।
ಗತ್ವಾ ತಮೃಷಿಮಾಚಷ್ಟ ಮಮ ಗೌರಿತಿ ಸತ್ವರಮ್ ॥ ೧೪

ಸ್ಪರ್ಶಿತಾ ರಾಜಸಿಂಹೇನ ಮಮ ದತ್ತಾ ನೃಗೇಣ ಹ ।
ತಯೋರ್ಬ್ರಾಹ್ಮಣಯೋರ್ವಾದೋ ಮಹಾನಾಸೀದ್ದ್ವಿಪಶ್ಚಿತೋಃ ॥

ವಿವದಂತೌ ತತೋಽನ್ಯೋನ್ಯಂ ದಾತಾರಮಭಿಜಗ್ಮತುಃ ।
ತೌ ರಾಜಭವನದ್ವಾರಿ ಅಪ್ರಾಪ್ಯ ನೃಗದರ್ಶನಮ್ ॥ ೧೬

ಅಹೋರಾತ್ರಾಣ್ಯನೇಕಾನಿ ವಸಂತೌ ಕ್ರೋಧಮೀಯತುಃ ।
ಊಚತುಶ್ಚ ಮಹಾತ್ಮಾನೌ ತಾವುಭೌ ದ್ವಿಜಸತ್ತಮೌ ॥ ೧೭

ಕ್ರುದ್ಧೌ ಪರಮಸಂತಪ್ತೌ ವಾಕ್ಯಂ ಘೋರಾಭಿಸಂಹಿತಮ್ ।
ಅರ್ಥಿನಾಂ ಕಾರ್ಯಸಿದ್ಧ್ಯರ್ಥಂ ಯಸ್ಮಾತ್ತ್ವಂ ನೈಷಿ ದರ್ಶನಮ್ ॥

---

ಯಿತು ಹಸು ಆರೋಗ್ಯವಾಗಿತ್ತು ಕರು ದೊಡ್ಡದಾಗಿತ್ತು (೧೦-೧೧) ಈ ಬ್ರಾಹ್ಮಣನು ಅದನ್ನು ನೋಡಿ ತಾನಿಟ್ಟ ಹೆಸರನ್ನು ಹಿಡಿದು 'ಶಬಲೆ, ಬಾ!' ಎಂದು ಕರೆದನು ಗೋವು ಒಡೆಯನ ಧ್ವನಿಯನ್ನು ಗುರುತಿಸಿ ಅವನ ಹಿಂದೆ ಹೊರಟಿತು! ಅದನ್ನು ಸಾಕುತ್ತಿದ್ದ ವಿಪ್ರನು ಬೇಗಬೇಗನೆ ಓಡಿಬಂದು 'ಇದು ನನ್ನ ಹಸು!' ಎಂದು ಹೇಳಿದನು (೧೨-೧೪). 'ನೃಗರಾಜನು ಇದನ್ನು ನನಗೆ ಕೊಟ್ಟಿದ್ದಾನೆ—ನನಗೆ ಕೊಟ್ಟಿದ್ದಾನೆ' ಎಂದು ಆ ಬ್ರಾಹ್ಮಣರಲ್ಲಿ ದೊಡ್ಡ ವಿವಾದವೆದ್ದಿತು ಇಬ್ಬರೂ ಜಗಳವಾಡುತ್ತ ದಾತಾರನಾದ ರಾಜನ ಬಳಿಗೆ ಹೋದರು. ಅರಮನೆಯ ಬಾಗಿಲಲ್ಲಿ ಕಾದರು ರಾಜದರ್ಶನವಾಗಲಿಲ್ಲ (೧೫-೧೬) ಎಷ್ಟೋ ಹಗಲು ರಾತ್ರಿ ಕಾದಿದ್ದರೂ ರಾಜನ ದರ್ಶನವಾಗಲಿಲ್ಲ ಅದರಿಂದ ಬೇಸತ್ತು ಆ ದ್ವಿಜೋತ್ತಮರು ಪರಮಕ್ರುದ್ಧರಾಗಿ "ಎಲೈ ನೃಗರಾಜ, ಕಾರ್ಯಾರ್ಥಿಗಳಾಗಿ ನಾವು

ಅದೃಶ್ಯಃ ಸರ್ವಭೂತಾನಾಂ ಕೃಕಲಾಸೋ ಭವಿಷ್ಯಸಿ ।
ಬಹುವರ್ಷಸಹಸ್ರಾಣಿ ಬಹುವರ್ಷಶತಾನಿ ಚ ॥ ೧೯

ಶ್ವಭ್ರೇಽಸ್ಮಿನ್ ಕೃಕಲಾಸೋ ವೈ ದೀರ್ಘಕಾಲಂ ವಸಿಷ್ಯಸಿ ।
ಉತ್ಪತ್ಸ್ಯತೇ ಹಿ ಲೋಕೇಽಸ್ಮಿನ್ ಯದೂನಾಂ ಕೀರ್ತಿವರ್ಧನಃ ॥

ವಾಸುದೇವ ಇತಿ ಖ್ಯಾತೋ ಲೋಕೇ ಪುರುಷವಿಗ್ರಹಃ ।
ಸ ತೇ ಮೋಕ್ಷಯಿತಾ ರಾಜಂಸ್ತಸ್ಮಾಚ್ಛಾಪಾದ್ಭವಿಷ್ಯತಿ ॥ ೨೧

ಕೃತಾ ಚ ತೇನ ಕಾಲೇನ ನಿಷ್ಕೃತಿಸ್ತೇ ಭವಿಷ್ಯತಿ ।
ಭಾರಾವತರಣಾರ್ಥಂ ಹಿ ನರನಾರಾಯಣಾವುಭೌ ॥ ೨೨

ಉತ್ಪತ್ಸ್ಯೇತೇ ಮಹಾವೀರ್ಯೌ ಕಲೌ ಯುಗ ಉಪಸ್ಥಿತೇ ।
ಏವಂ ತೌ ಶಾಪಮುತ್ಸೃಜ್ಯ ಬ್ರಾಹ್ಮಣೌ ವಿಗತಜ್ವರೌ ॥ ೨೩

ತಾಂ ಗಾಂ ಹಿ ದುರ್ಬಲಾಂ ವೃದ್ಧಾಂ ದದತುರ್ಬ್ರಾಹ್ಮಣಾಯ ವೈ ।
ಏವಂ ಸ ರಾಜಾ ತಂ ಶಾಪಮುಪಭುಂಕ್ತೇ ಸುದಾರುಣಮ್ ॥ ೨೪

---

ಬಂದಿದ್ದರೂ ನಮಗೆ ದರ್ಶನವನ್ನೇ ಕೊಡದೆ ಇದ್ದೀಯೆ ನೀನು ಓತಿಕೇತವಾಗು! ಸಾವಿರಾರು ವರ್ಷಗಳವರೆಗೆ ಸರ್ವರಿಗೂ ಅದೃಶ್ಯನಾಗಿಯೇ ಇರು!" ಎಂದು ಘೋರವಾದ ಶಾಪವನ್ನಿತ್ತರು (೧೭-೧೯) ಅನಂತರ ಕೋಪವಿಳಿಯಲು "ಒಂದು ಹಳ್ಳದಲ್ಲಿ ಓತಿಕೇತವಾಗಿ ಬಹುವರ್ಷಗಳವರೆಗೆ ಇರುತ್ತೀಯೆ ಮುಂದೆ ಯದುವಂಶದಲ್ಲಿ ಕೀರ್ತಿವರ್ಧನನಾದ ಒಬ್ಬ ಪುರುಷನು ಅವತರಿಸುವನು ಅವನು ವಾಸುದೇವನೆಂದು ವಿಖ್ಯಾತನಾಗಿರುವನು. ಎಲೈ ರಾಜನೆ, ವಾಸುದೇವನು ನಿನ್ನನ್ನು ಈ ಶಾಪದಿಂದ ವಿಮೋಚನಗೊಳಿಸುವನು (೨೦-೨೧) ಆ ಕಾಲದಲ್ಲಿ ನಿನಗೆ ಶಾಪದಿಂದ ಬಿಡುಗಡೆಯಾಗುವುದು ಕಲಿಯುಗವು ಸಮೀಪಿಸಿದಾಗ ಭೂಭಾರವನ್ನಿಳುಹುವುದಕ್ಕಾಗಿ ಮಹಾವೀರರಾದ ನರನಾರಾಯಣರು ಅವತರಿಸುವರು" ಎಂದರು (೨೨) ಹೀಗೆ ಶಾಪವನ್ನಿತ್ತು ಆ ಬ್ರಾಹ್ಮಣರು ಮುದಿಯಾಗಿ ದುರ್ಬಲವಾಗಿದ್ದ ಆ ಹಸುವನ್ನು ಇನ್ನೊಬ್ಬ ಬ್ರಾಹ್ಮಣನಿಗೆ ದಾನಮಾಡಿ-ನಿಶ್ಚಿಂತರಾದರು! ಲಕ್ಷ್ಮಣ, ನೃಗರಾಜನು ಈಗಲೂ ಘೋರಶಾಪವನ್ನನುಭವಿಸುತ್ತಿದ್ದಾನೆ!

ಕಾರ್ಯಾರ್ಥಿನಾಂ ವಿಮರ್ದೋ ಹಿ ರಾಜ್ಞಾಂ ದೋಷಾಯ ಕಲ್ಪತೇ
ತಚ್ಛೀಘ್ರಂ ದರ್ಶನಂ ಮಹ್ಯಮಭಿವರ್ತಂತು ಕಾರ್ಯಿಣಃ ॥ ೨೫

ಸುಕೃತಸ್ಯ ಹಿ ಕಾರ್ಯಸ್ಯ ಫಲಂ ನಾನ್ವೈತಿ ಪಾರ್ಥಿವಃ ।
ತಸ್ಮಾದ್ಗಚ್ಛ ಪ್ರತೀಕ್ಷಸ್ವ ಸೌಮಿತ್ರೇ ಕಾರ್ಯವಾನ್ ಜನಃ ॥ ೨೬

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರಿಪಂಚಾಶಃ ಸರ್ಗಃ



ಕಾರ್ಯಾರ್ಥಿಗಳಾಗಿ ಬಂದ ಪ್ರಜೆಗಳನ್ನುಪೇಕ್ಷಿಸಿ ತೊಂದರೆಪಡಿಸುವುದು ರಾಜರಿಗೆ ದೋಷಾವಹ. ಆದ್ದರಿಂದ ಕಾರ್ಯಾರ್ಥಿಗಳು ಬೇಗನೆ ಬಂದು ನನ್ನನ್ನು ಕಾಣಲಿ (೨೩–೨೫) ಪ್ರಜಾಪಾಲನವೆಂಬ ಕರ್ತವ್ಯವನ್ನು ಸರಿಯಾಗಿ ನಡೆಸಿದರೆ ಅದರ ಫಲವು ರಾಜನಿಗೆ ದೊರೆಯದಿದ್ದೀತೆ? ಆದ್ದರಿಂದ, ಸೌಮಿತ್ರಿ, ಜನರು ಕಾರ್ಯಾರ್ಥಿಗಳಾಗಿ ಬಂದಿರುತ್ತಾರೆ. ಅವರನ್ನು ಸ್ವಾಗತಿಸು" ಎಂದನು (೨೬).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತು ಮೂರನೆಯ ಸರ್ಗ



## ಚತುಷ್ಪಂಚಾಶಃ ಸರ್ಗಃ

### ನೃಗಶ್ವಭ್ರಪ್ರವೇಶಃ

ರಾಮಸ್ಯ ಭಾಷಿತಂ ಶ್ರುತ್ವಾ ಲಕ್ಷ್ಮಣಃ ಪರಮಾರ್ಥವಿತ್ ।
ಉವಾಚ ಪ್ರಾಂಜಲಿರ್ವಾಕ್ಯಂ ರಾಘವಂ ದೀಪ್ತತೇಜಸಮ್ ॥ ೧

ಅಲ್ಪಾಪರಾಧೇ ಕಾಕುತ್ಸ್ಥ ದ್ವಿಜಾಭ್ಯಾಂ ಶಾಪ ಈದೃಶಃ ।
ಮಹಾನ್ನೃಗಸ್ಯ ರಾಜರ್ಷೇರ್ಯಮದಂಡ ಇವಾಪರಃ ॥ ೨

ಶ್ರುತ್ವಾ ತು ಪಾಪಸಂಯುಕ್ತಮಾತ್ಮಾನಂ ಪುರುಷರ್ಷಭ ।
ಕಿಮುವಾಚ ನೃಗೋ ರಾಜಾ ದ್ವಿಜೌ ಕ್ರೋಧಸಮನ್ವಿತೌ ॥ ೩

ಲಕ್ಷ್ಮಣೇನೈವಮುಕ್ತಸ್ತು ರಾಘವಃ ಪುನರಬ್ರವೀತ್ ।
ಶೃಣು ಸೌಮ್ಯ ಯಥಾಪೂರ್ವಂ ಸ ರಾಜಾ ಶಾಪವಿಕ್ಷತಃ ॥ ೪

ಅಥಾಧ್ವನಿ ಗತೌ ವಿಪ್ರೌ ವಿಜ್ಞಾಯ ಸ ನೃಗಸ್ತದಾ ।
ಆಹೂಯ ಮಂತ್ರಿಣಃ ಸರ್ವಾನ್ನೈಗಮಾನ್ ಸಪುರೋಧಸಃ ॥ ೫

ತಾನುವಾಚ ನೃಗೋ ರಾಜಾ ಸರ್ವಾಶ್ಚ ಪ್ರಕೃತೀಸ್ತಥಾ ।
ದುಃಖೇನ ಸುಸಮಾವಿಷ್ಟಃ ಶ್ರೂಯತಾಂ ಮೇ ಸಮಾಹಿತೈಃ ॥ ೬

## ಸರ್ಗ ೫೪

ನೃಗರಾಜನು ಒಂದು ಹಳ್ಳವನ್ನು ರಚಿಸಿ ಬ್ರಾಹ್ಮಣಶಾಪವನ್ನನುಭವಿಸುವುದು

ರಾಘವನು ಹೇಳಿದ ವೃತ್ತಾಂತವನ್ನು ಕೇಳಿ ಲಕ್ಷ್ಮಣನು ಕೈಮುಗಿದು "ಕಾಕುತ್ಸ್ಥ, ಒಂದು ಚಿಕ್ಕ ಅಪರಾಧಕ್ಕಾಗಿ ರಾಜರ್ಷಿಯಾದ ನೃಗನಿಗೆ ಆ ಬ್ರಾಹ್ಮಣರು ಯಮದಂಡದಂತೆ ಕ್ರೂರವಾದ ಶಾಪವನ್ನು ಕೊಟ್ಟುಬಿಟ್ಟರಲ್ಲ! ತನಗೆ ಶಾಪ ಬಂದುದನ್ನು ಕೇಳಿದಮೇಲೆ ನೃಗರಾಜನು ಆ ದ್ವಿಜರಿಗೆ ಏನು ಹೇಳಿದನು?" ಎಂದು ಕೇಳಿದನು (೧-೩) ಆಗ ರಾಘವನು ಹೀಗೆಂದನು. "ಸೌಮ್ಯ—ಲಕ್ಷ್ಮಣ, ದ್ವಿಜರು ಶಾಪವನ್ನಿತ್ತು ದಾರಿಹಿಡಿದು ಹೊರಟುಹೋದರು ಅದನ್ನು ತಿಳಿದು ನೃಗರಾಜನು ಮಂತ್ರಿ ಪುರೋಹಿತರನ್ನೂ ಪೌರರನ್ನೂ ಕರೆಸಿ ದುಃಖಾವಿಷ್ಟನಾಗಿ ಹೇಳಿದನು (೪-೬):

*

ನಾರದಃ ಪರ್ವತಶ್ಚೈವ ಮಮ ದತ್ತ್ವಾ ಮಹದ್ಭಯಮ್ ।
ಗತೌ ತ್ರಿಭುವನಂ ಭದ್ರೌ ವಾಯುಭೂತಾವನಿಂದಿತೌ ॥ ೭

ಕುಮಾರೋಽಯಂ ವಸುರ್ನಾಮ ಸ ದೇವೋಽದ್ಯಾಭಿಷಿಚ್ಯತಾಮ್ ।
ಶ್ವಭ್ರಂ ಚ ಯತ್ ಸುಖಸ್ಪರ್ಶಂ ಕ್ರಿಯತಾಂ ಶಿಲ್ಪಿಭಿರ್ಮಮ ॥ ೮

ಯತ್ರಾಹಂ ಸಂಕ್ಷಯಿಷ್ಯಾಮಿ ಶಾಪಂ ಬ್ರಾಹ್ಮಣನಿಃಸೃತಮ್ ।
ವರ್ಷಘ್ನಮೇಕಂ ಶ್ವಭ್ರಂ ತು ಹಿಮಘ್ನಮಪರಂ ತಥಾ ॥ ೯

ಗ್ರೀಷ್ಮಘ್ನಂ ತು ಸುಖಸ್ಪರ್ಶಮೇಕಂ ಕುರ್ವಂತು ಶಿಲ್ಪಿನಃ ।
ಫಲವಂತಶ್ಚ ಯೇ ವೃಕ್ಷಾಃ ಪುಷ್ಪವತ್ಯಶ್ಚ ಯಾ ಲತಾಃ ॥ ೧೦

ವಿರೋಪ್ಯಂತಾಂ ಬಹುವಿಧಾಶ್ಛಾಯಾವಂತಶ್ಚ ಗುಲ್ಮಿನಃ ।
ಕ್ರಿಯತಾಂ ರಮಣೀಯಂ ಚ ಶ್ವಭ್ರಾಣಾಂ ಸರ್ವತೋದಿಶಮ್ ॥ ೧೧

---

"ಎಲ್ಲರೂ ಚಿತ್ತವಿಟ್ಟು ಕೇಳಿರಿ. ನಾರದ, ಪರ್ವತ–ಎಂಬಿಬ್ಬರು ನನಗೆ ಒಂದು ಭೀಕರವಾದ ಶಾಪವೃತ್ತಾಂತವನ್ನರುಹಿ ವಾಯುವಿನಂತೆ ಅದೃಶ್ಯರಾಗಿ ಎಲ್ಲಿಗೋ ಹೊರಟುಹೋದರು* (೭) ನನ್ನ ಮಗನಾದ ವಸುವಿಗೆ ರಾಜಪಟ್ಟಾಭಿಷೇಕವನ್ನು ನಡೆಸಿರಿ (ನಾನು ಓತಿಕೇತವಾಗಿ ದೀರ್ಘಕಾಲದ ವರೆಗೆ ಇರಲು ಸೌಕರ್ಯವಾಗುವಂತೆ) ಸುಖಸ್ಪರ್ಶವಾದ ಒಂದು ದೊಡ್ಡ ಹಳ್ಳವನ್ನು ಶಿಲ್ಪಿಗಳು ನಿರ್ಮಿಸಲಿ (೮) ಬ್ರಾಹ್ಮಣರಿತ್ತ ಶಾಪವನ್ನು ಅದರಲ್ಲಿ ನಾನು ಅನುಭವಿಸುವೆನು ಮಳೆಗಾಲ ಚಳಿಗಾಲ ಬೇಸಗೆಗಳನ್ನು ಕಳೆಯಲು ಹಿತಕರವಾದ ಮೂರು ಹಳ್ಳಗಳಿರಲಿ ಹಣ್ಣಿನ ಮರಗಳನ್ನೂ ಹೂವಿನ ಬಳ್ಳಿಗಳನ್ನೂ ಅಲ್ಲಿ ನೆಡಿಸಿರಿ (೯-೧೦) ನೆರಳನ್ನು ಕೊಡುವ ನಾನಾ ಬಗೆಯ ಪೊದೆಗಳು ಬೆಳೆದಿರಲಿ ಎಲ್ಲೆಡೆಯೂ ಹಳ್ಳವು ರಮಣೀಯವಾಗಿರಲಿ!

---

* ನಾರದ, ಪರ್ವತ–ಎಂಬ ಪ್ರಸಿದ್ಧರಾದ ದೇವರ್ಷಿಗಳು ಪರೀಕ್ಷಾರ್ಥವಾಗಿ ಬ್ರಾಹ್ಮಣವೇಷದಿಂದ ಬಂದು ರಾಜನನ್ನು ಶಪಿಸಿರಬಹುದು ಅಥವಾ ಬ್ರಾಹ್ಮಣರು ಶಪಿಸಿದ ವೃತ್ತಾಂತವನ್ನು ಅವರು ರಾಜನಿಗೆ ಹೇಳಿರಬಹುದು ಈ ಲೋಕದ ಇಬ್ಬರು ದ್ವಿಜರಿಗೆ ನಾರದ, ಪರ್ವತ–ಎಂಬ ಹೆಸರಿದ್ದಿರಬಹುದು ಯಾವುದೂ ಸ್ಪಷ್ಟವಾಗಿಲ್ಲ

ಸುಖಮತ್ರ ವಸಿಷ್ಯಾಮಿ ಯಾವತ್ಕಾಲಸ್ಯ ಪರ್ಯಯಃ ।
ಪುಷ್ಪಾಣಿ ಚ ಸುಗಂಧೀನಿ ಕ್ರಿಯಂತಾಂ ತೇಷು ನಿತ್ಯಶಃ ॥ ೧೨

ಪರಿವಾರ್ಯ ಯಥಾ ಮೇ ಸ್ಯುರರ್ಧ್ಯರ್ಧಂ ಯೋಜನಂ ತಥಾ ।
ಏವಂ ಕೃತ್ವಾ ವಿಧಾನಂ ಸ ಸಂದಿದೇಶ ವಸುಂ ತದಾ ॥ ೧೩

ಧರ್ಮನಿತ್ಯಃ ಪ್ರಜಾಃ ಪುತ್ರ ಕ್ಷತ್ರಧರ್ಮೇಣ ಪಾಲಯ ।
ಪ್ರತ್ಯಕ್ಷಂ ತೇ ಯಥಾ ಶಾಪೋ ದ್ವಿಜಾಭ್ಯಾಂ ಮಯಿ ಪಾತಿತಃ ॥ ೧೪

ನರಶ್ರೇಷ್ಠ ಸರೋಷಾಭ್ಯಾಮಪರಾಧೇಽಪಿ ತಾದೃಶೇ ।
ಮಾ ಕೃಥಾಸ್ತ್ವನುಸಂತಾಪಂ ಮತ್ಕೃತೇಽಪಿ ನರರ್ಷಭ ॥ ೧೫

ಕೃತಾಂತಃ ಕುಶಲಃ ಪುತ್ರ ಯೇನಾಸ್ಮಿ ವ್ಯಸನೀಕೃತಃ ।
ಪ್ರಾಪ್ತವ್ಯಾನ್ಯೇವ ಪ್ರಾಪ್ನೋತಿ ಗಂತವ್ಯಾನ್ಯೇವ ಗಚ್ಛತಿ ॥ ೧೬

ಲಬ್ಧವ್ಯಾನ್ಯೇವ ಲಭತೇ ದುಃಖಾನಿ ಚ ಸುಖಾನಿ ಚ ।
ಪೂರ್ವೇ ಜಾತ್ಯಂತರೇ ವತ್ಸ ಮಯಾ ಪಾಪಂ ಮಹತ್ ಕೃತಮ್ ॥

---

ಶಾಪಕಾಲವು ಕಳೆಯುವವರೆಗೂ ಅದರಲ್ಲಿ ಸುಖದಿಂದ ವಾಸವಾಗಿರುವೆನು ! ಸುಗಂಧವನ್ನು ಬೀರುವ ಹೂಗಳು ಎಲ್ಲೆಲ್ಲಿಯೂ ಬೆಳೆದಿರಲಿ ! (೧೧-೧೨). ಹಳ್ಳದ ಸುತ್ತಲೂ ಒಂದೂವರೆ ಯೋಜನದವರೆಗೆ ಹೂದೋಟವಿರಲಿ !" ಎಂದನು ಆಮೇಲೆ ನೃಗರಾಜನು ವಸುವನ್ನು ಕರೆಸಿ "ಮಗು, ಧರ್ಮನಿಷ್ಠನಾಗಿ ಬಾಳು ಪ್ರಜೆಗಳನ್ನು ಕ್ಷಾತ್ರಧರ್ಮದಿಂದ ಪಾಲಿಸು ಬ್ರಾಹ್ಮಣರು ನನಗೆ ಶಾಪವನ್ನಿತ್ತುದು ನಿನಗೆ ಪ್ರತ್ಯಕ್ಷವಾಗಿದೆ (೧೩-೧೪) ಒಂದು ಅಲ್ಪಾಪರಾಧಕ್ಕಾಗಿ ಅವರು ರೋಷಾವಿಷ್ಟರಾಗಿ ಶಾಪವನ್ನಿತ್ತರು ಪುತ್ರ, ನನಗಾಗಿ ಶೋಕಾಕುಲನಾಗಬೇಡ ಪ್ರಾಚೀನ ಕರ್ಮವು ಸುಖದುಃಖಗಳನ್ನು ತಂದೊಡ್ಡುವುದರಲ್ಲಿ ಸಮರ್ಥವಾದದ್ದು ಅದರಿಂದಲೇ ನನಗೆ ಈ ವ್ಯಸನವು ಪ್ರಾಪ್ತವಾಯಿತು ಮನುಷ್ಯನಿಗೆ ಬರಬೇಕಾದ್ದು ಬಂದೇ ಬರುವುದು ಇವನು ಸೇರಲೇಬೇಕಾದಲ್ಲಿಗೆ ಹೋಗಿ ಸೇರಲೇಬೇಕು (೧೫-೧೬) ಪಡೆಯಬೇಕಾದ ಸುಖದುಃಖಗಳನ್ನು ಪಡೆದೇ ತೀರುವನು ವತ್ಸ, ನಾನು ಜನ್ಮಾಂತರದಲ್ಲಿ ಯಾವುದೋ ಮಹತ್ತರವಾದ ಪಾಪಕೃತ್ಯವನ್ನು ಮಾಡಿ

ತಸ್ಮಾತ್ ಪ್ರಾಪ್ತಂ ಮಯಾ ಪುತ್ರ ಮಾ ವಿಷಾದಂ ಕುರುಷ್ವ ಹ ।
ಏವಮುಕ್ತ್ವಾ ನಗಸ್ತತ್ರ ಸುತಂ ರಾಜಾ ಮಹಾಯಶಾಃ ॥ ೧೮

ಶ್ವಭ್ರಂ ಜಗಾಮ ಸುಕೃತಂ ವಾಸಾಯ ಪುರುಷರ್ಷಭ ॥

ಏವಂ ಪ್ರವಿಶ್ಯೈವ ನೃಪಸ್ತದಾನೀಂ
ಶ್ವಭ್ರಂ ಮಹಾರತ್ನವಿಭೂಷಿತಂ ತತ್ ।
ಸಂಪಾದಯಾಮಾಸ ತದಾ ಮಹಾತ್ಮಾ
ಶಾಪಂ ದ್ವಿಜಾಭ್ಯಾಂ ಹಿ ರುಷಾ ವಿಮುಕ್ತಮ್ ॥ ೧೯

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುಷ್ಪಂಚಾಶಃ ಸರ್ಗಃ



ದ್ದೇನೆ ಆದ್ದರಿಂದ ಈ ಕಷ್ಟವು ನನಗೆ ಪ್ರಾಪ್ತವಾಯಿತು ನೀನು ವಿಷಾದಿಸ ಬೇಡ" ಎಂದು ಹೇಳಿದನು ಕೀರ್ತಿಶಾಲಿಯಾದ ನೃಗರಾಜನು ಈ ರೀತಿ ಯಲ್ಲಿ ಪುತ್ರನಿಗೆ ಬೋಧಿಸಿ, ತನ್ನ ವಾಸಕ್ಕೋಸ್ಕರ ಸುಂದರವಾಗಿ ನಿರ್ಮಿಸಿದ್ದ ಹಳ್ಳವನ್ನು ಪ್ರವೇಶಿಸಿದನು (೧೭-೧೮) ರತ್ನಭೂಷಿತವಾದ ಹಳ್ಳವನ್ನು ಪ್ರವೇಶಿಸಿದೊಡನೆ ಆ ನೃಪಾಲನು, ರೋಷಾವಿಷ್ಟರಾದ ಬ್ರಾಹ್ಮಣರು ಕೊಟ್ಟ ಶಾಪವನ್ನನುಭವಿಸುವುದಕ್ಕಾಗಿ ಓತಿಕೇತದ ರೂಪನ್ನು ಪಡೆದನು "(೧೯).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತುನಾಲ್ಕನೆಯ ಸರ್ಗ



## ಪಂಚಪಂಚಾಶಃ ಸರ್ಗಃ

### ನಿಮಿವಸಿಷ್ಠಶಾಪಃ

ಏಷ ತೇ ನೃಗಶಾಪಸ್ಯ ವಿಸ್ತರೋಽಭಿಹಿತೋ ಮಯಾ ।
ಯದ್ಯಸ್ತಿ ಶ್ರವಣೇ ಶ್ರದ್ಧಾ ಶೃಣುಷ್ವೇಹಾಪರಾಂ ಕಥಾಮ್ ॥ ೧

ಏವಮುಕ್ತಸ್ತು ರಾಮೇಣ ಸೌಮಿತ್ರಿಃ ಪುನರಬ್ರವೀತ್ ।
ತೃಪ್ತಿರಾಶ್ಚರ್ಯಭೂತಾನಾಂ ಕಥಾನಾಂ ನಾಸ್ತಿ ಮೇ ನೃಪ ॥ ೨

ಲಕ್ಷ್ಮಣೇನೈವಮುಕ್ತಸ್ತು ರಾಮ ಇಕ್ಷ್ವಾಕುನಂದನಃ ।
ಕಥಾಂ ಪರಮಧರ್ಮಿಷ್ಠಾಂ ವ್ಯಾಹರ್ತುಮುಪಚಕ್ರಮೇ ॥ ೩

ಆಸೀದ್ರಾಜಾ ನಿಮಿರ್ನಾಮ ಇಕ್ಷ್ವಾಕೂಣಾಂ ಮಹಾತ್ಮನಾಮ್ ।
ಪುತ್ರೋ ದ್ವಾದಶಮೋ ವೀರ್ಯೇ ಧರ್ಮೇ ಚ ಪರಿನಿಷ್ಠಿತಃ ॥ ೪

ಸ ರಾಜಾ ವೀರ್ಯಸಂಪನ್ನಃ ಪುರಂ ದೇವಪುರೋಪಮಮ್ ।
ನಿವೇಶಯಾಮಾಸ ತದಾ ಅಭ್ಯಾಶೇ ಗೌತಮಸ್ಯ ತು ॥ ೫

## ಸರ್ಗ ೫೫

### ನಿಮಿ ಮತ್ತು ವಸಿಷ್ಠರು ಪರಸ್ಪರ ಶಪಿಸಿದ ಕಥೆ

ರಾಘವನು “ಲಕ್ಷ್ಮಣ, ನೃಗರಾಜನಿಗೆ ಶಾಪ ಬಂದ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದೆನು ಕೇಳಲು ಆಸಕ್ತಿ ಇದ್ದರೆ, ಇನ್ನೊಂದು ಕಥೆಯನ್ನು ಕೇಳು!” ಎಂದನು ಲಕ್ಷ್ಮಣನು “ಮಹಾರಾಜ, ಆಶ್ಚರ್ಯಕರವಾದ ಕಥೆಗಳನ್ನು ಎಷ್ಟು ಕೇಳಿದರೂ ನನಗೆ ತೃಪ್ತಿ ಇಲ್ಲ!” ಎಂದನು (೧-೨) ಆಗ ಇಕ್ಷ್ವಾಕುನಂದನನು ಧರ್ಮಬೋಧಕವಾದ ಕಥೆಯೊಂದನ್ನು ಹೇಳಿದನು: “ಇಕ್ಷ್ವಾಕುವಂಶದಲ್ಲಿ ನಿಮಿಯೆಂಬ ಒಬ್ಬ ರಾಜನಿದ್ದನು ಅವನು ಇಕ್ಷ್ವಾಕು ಪುತ್ರರಲ್ಲಿ ಹನ್ನೆರಡನೆಯವನು ವೀರನೂ ಧರ್ಮನಿಷ್ಠನೂ ಆಗಿದ್ದನು (೩-೪) ಆತನು ಗೌತಮಾಶ್ರಮದ ಸಮೀಪದಲ್ಲಿ ಅಮರಾವತಿಯಂತಹ ನಗರವನ್ನು

ಪುರಸ್ಯ ಸುಕೃತಂ ನಾಮ ವೈಜಯಂತಮಿತಿ ಶ್ರುತಮ್ ।
ನಿವೇಶಂ ಯತ್ರ ರಾಜರ್ಷಿರ್ನಿಮಿಶ್ಚಕ್ರೇ ಮಹಾಯಶಾಃ ॥ ೬

ತಸ್ಯ ಬುದ್ಧಿಃ ಸಮುತ್ಪನ್ನಾ ನಿವೇಶ್ಯ ಸುಮಹಾಪುರಮ್ ।
ಯಜೇಯಂ ದೀರ್ಘಸತ್ರೇಣ ಪಿತುಃ ಪ್ರಹ್ಲಾದಯನ್ ಮನಃ ॥ ೭

ತತಃ ಪಿತರಮಾಮಂತ್ರ್ಯ ಇಕ್ಷ್ವಾಕುಂ ಹಿ ಮನೋಃ ಸುತಮ್ ।
ವಸಿಷ್ಠಂ ವರಯಾಮಾಸ ಪೂರ್ವಂ ಬ್ರಹ್ಮರ್ಷಿಸತ್ತಮಮ್ ॥ ೮

ಅನಂತರಂ ಸ ರಾಜರ್ಷಿರ್ನಿಮಿರಿಕ್ಷ್ವಾಕುನಂದನಃ ।
ಅತ್ರಿಮಂಗಿರಸಂ ಚೈವ ಭೃಗುಂ ಚೈವ ತಪೋಧನಮ್ ॥ ೯

ತಮುವಾಚ ವಸಿಷ್ಠಸ್ತು ನಿಮಿಂ ರಾರ್ಷಿಸತ್ತಮಮ್ ।
ವೃತೋಽಹಂ ಪೂರ್ವಮಿಂದ್ರೇಣ ಅಂತರಂ ಪ್ರತಿಪಾಲಯ ॥ ೧೦

ಅನಂತರಂ ಮಹಾವಿಪ್ರೋ ಗೌತಮಃ ಪ್ರತ್ಯಪೂರಯತ್ ।
ವಸಿಷ್ಠೋಽಪಿ ಮಹಾತೇಜಾ ಇಂದ್ರಯಜ್ಞಮಥಾಕರೋತ್ ॥ ೧೧

---

ನಿರ್ಮಿಸಿ, ವೈಜಯಂತದಂತೆ ಭವ್ಯವಾದ ಅರಮನೆಯಲ್ಲಿ ವಾಸವಾಗಿದ್ದನು (೫-೬) ಆ ರಾಜರ್ಷಿಗೆ ದೀರ್ಘಸತ್ರವೆಂಬ ಯಾಗವನ್ನು ಮಾಡಿ ತನ್ನ ತಂದೆಯ ಮನಸ್ಸನ್ನು ಸಂತೋಷಪಡಿಸಬೇಕೆಂದು ಇಚ್ಛೆಯಾಯಿತು ಅನಂತರ ತಂದೆಯೂ ಮನುಪುತ್ರನೂ ಆದ ಇಕ್ಷ್ವಾಕುವಿನ ಒಪ್ಪಿಗೆಯನ್ನು ಪಡೆದು, ಬ್ರಹ್ಮರ್ಷಿಸತ್ತಮರಾದ ವಸಿಷ್ಠರಿಗೆ ಮೊದಲು ವರಣವನ್ನಿತ್ತನು (೭-೮) ಆಮೇಲೆ ಅತ್ರಿ, ಅಂಗಿರಸ್ ಮತ್ತು ಭೃಗುಮುನಿಗಳಿಗೆ ವರಣವನ್ನಿತ್ತನು ವಸಿಷ್ಠರಾದರೋ ನಿಮಿರಾಜನನ್ನು ಕುರಿತು "ಮಹಾರಾಜ, ಇಂದ್ರನು ಒಂದು ಯಾಗಕ್ಕಾಗಿ ಮೊದಲೇ ನನಗೆ ವರಣವನ್ನಿತ್ತಿದ್ದಾನೆ. ಅದನ್ನು ಮುಗಿಸಿ ಬರುವವರೆಗೆ ಸಮಯವನ್ನು ನಿರೀಕ್ಷಿಸುತ್ತಿರು" ಎಂದು ತಿಳಿಸಿದರು (೯-೧೦). ಹೀಗೆ ಹೇಳಿ ವಸಿಷ್ಠರು ಹೊರಟುಹೋಗಲು, ನಿಮಿಯ ಯಾಗದಲ್ಲಿ ಅವರು ಮಾಡಬೇಕಾಗಿದ್ದ ಹೋತೃಕಾರ್ಯವನ್ನು ಗೌತಮಮಹರ್ಷಿಗಳು ನಿರ್ವಹಿಸಿದರು. ವಸಿಷ್ಠರು ದೇವೇಂದ್ರನ ಯಾಗ

ನಿಮಿಸ್ತು ರಾಜಾ ವಿಪ್ರಾಂಸ್ತಾನ್ ಸಮಾನೀಯ ನರಾಧಿಪಃ ।
ಅಯಜದ್ಧಿಮವತ್ಪಾರ್ಶ್ವೇ ಸ್ವಪುರಸ್ಯ ಸಮೀಪತಃ ॥ ೧೨

ಪಂಚ ವರ್ಷಸಹಸ್ರಾಣಿ ರಾಜಾ ದೀಕ್ಷಾಮುಪಾಗತಮ್ ।
ಇಂದ್ರಯಜ್ಞಾವಸಾನೇ ತು ವಸಿಷ್ಠೋ ಭಗವಾನೃಷಿಃ ॥ ೧೩

ಸಕಾಶಮಾಗತೋ ರಾಜ್ಞೋ ಹೌತ್ರಂ ಕರ್ತುಮನಿಂದಿತಃ ।
ತದಂತರಮಥಾಪಶ್ಯದ್ಗೌತಮೇನಾಭಿಪೂರಿತಮ್ ॥ ೧೪

ಕೋಪೇನ ಮಹತಾವಿಷ್ಟೋ ವಸಿಷ್ಠೋ ಬ್ರಹ್ಮಣಃ ಸುತಃ ।
ಸ ರಾಜ್ಞೋ ದರ್ಶನಾಕಾಂಕ್ಷೀ ಮುಹೂರ್ತಂ ಸಮುಪಾವಿಶತ್ ॥ ೧೫

ತಸ್ಮಿನ್ನಹನಿ ರಾಜರ್ಷಿರ್ನಿದ್ರಯಾಪಹೃತೋ ಭೃಶಮ್ ।
ತತೋ ಮನ್ಯುರ್ವಸಿಷ್ಠಸ್ಯ ಪ್ರಾದುರಾಸೀನ್ಮಹಾತ್ಮನಃ ॥ ೧೬

ಅದರ್ಶನೇನ ರಾಜರ್ಷೇರ್ವ್ಯಾಹರ್ತುಮುಪಚಕ್ರಮೇ ।
ಯಸ್ಮಾತ್ತ್ವಮನ್ಯಂ ವೃತವಾನ್ ಮಾಮವಜ್ಞಾಯ ಪಾರ್ಥಿವ ॥ ೧೭

---

ವನ್ನು ನಿರ್ವಹಿಸುತ್ತಿದ್ದರು (೧೧) ನಿಮಿಯು ಗೌತಮರೇ ಮೊದಲಾದ ವಿಪ್ರರನ್ನು ಬರಮಾಡಿಕೊಂಡು ತನ್ನ ನಗರಕ್ಕೆ ಸಮೀಪದಲ್ಲಿದ್ದ ಹಿಮಾಲಯ ಪ್ರದೇಶದಲ್ಲಿ ಯಾಗವನ್ನಾರಂಭಿಸಿದನು ಐದುಸಾವಿರ ವರ್ಷಗಳವರೆಗೆ ದೀಕ್ಷಾನಿಯಮದಲ್ಲಿದ್ದನು (೧೨) ಇಂದ್ರಯಜ್ಞವು ಪೂರ್ಣವಾದ ಮೇಲೆ ವಸಿಷ್ಠಮಹರ್ಷಿಗಳು ನಿಮಿರಾಜನ ಬಳಿಗೆ ಹೋತೃಕರ್ಮವನ್ನು ನಡೆಸುವುದಕ್ಕಾಗಿ ಆಗಮಿಸಿದರು. ಅಷ್ಟರಲ್ಲಿ ಗೌತಮಮುನಿಗಳು ಆ ಕಾರ್ಯವನ್ನು ನಿರ್ವಹಿಸಿಬಿಟ್ಟಿದ್ದಾರೆಂಬುದು ತಿಳಿಯಿತು ಅದರಿಂದ ಬ್ರಹ್ಮಪುತ್ರರಾದ ವಸಿಷ್ಠರಿಗೆ ತೀವ್ರಕೋಪ ಉಂಟಾಗಲು, ರಾಜನನ್ನು ಸಂದರ್ಶಿಸುವುದಕ್ಕಾಗಿ ಅವರು ಒಂದು ಮುಹೂರ್ತಕಾಲ ಕಾದು ಕುಳಿತರು (೧೩-೧೫) ಆ ಸಮಯದಲ್ಲಿ ನಿಮಿರಾಜನು ನಿದ್ರಿಸುತ್ತಿದ್ದನು ರಾಜದರ್ಶನವಾಗಲಿಲ್ಲವೆಂದು ವಸಿಷ್ಠಮುನಿಗಳ ಕೋಪವು ಉಗ್ರವಾಯಿತು ಅವರು "ಎಲೈ ರಾಜ, ನನಗೆ ಅವಮಾನಮಾಡಿ ಇನ್ನೊಬ್ಬನನ್ನು ಯಾಗಕ್ಕಾಗಿ ವರಿಸಿದೆಯಲ್ಲವೆ?

ಚೇತನೇನ ವಿನಾಭೂತೋ ದೇಹಸ್ತವ ಭವಿಷ್ಯತಿ ।
ತತಃ ಪ್ರಬುದ್ಧೋ ರಾಜರ್ಷಿಃ ಶ್ರುತ್ವಾ ಶಾಪಮುದಾಹೃತಮ್ ॥
ಬ್ರಹ್ಮಯೋನಿಮಥೋವಾಚ ಸಂರಂಭಾತ್ ಕ್ರೋಧಮೂರ್ಛಿತಃ ।
ಅಜಾನತಃ ಶಯಾನಸ್ಯ ಕ್ರೋಧೇನ ಕಲುಷೀಕೃತಃ ॥ ೧೯
ಮುಕ್ತವಾನ್ ಮಯಿ ಶಾಪಾಗ್ನಿಂ ಯಮದಂಡಮಿವಾಪರಮ್ ।
ತಸ್ಮಾತ್ತವಾಪಿ ಬ್ರಹ್ಮರ್ಷೇ ಚೇತನೇನ ವಿನಾಕೃತಃ ॥ ೨೦
ದೇಹಃ ಸುರುಚಿರಪ್ರಖ್ಯೋ ಭವಿಷ್ಯತಿ ನ ಸಂಶಯಃ ॥

ಇತಿ ರೋಷವಶಾದುಭೌ ತದಾನೀ-
ಮನ್ಯೋನ್ಯಂ ಶಪಿತೌ ನೃಪದ್ವಿಜೇಂದ್ರೌ ।
ಸಹಸೈವ ಬಭೂವತುರ್ವಿದೇಹೌ
ತತ್ತುಲ್ಯಾಧಿಗತಪ್ರಭಾವವಂತೌ ॥ ೨೧

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚಪಂಚಾಶಃ ಸರ್ಗಃ



(೧೬-೧೭) ನಿನ್ನ ದೇಹವು ಚೈತನ್ಯರಹಿತವಾಗಲಿ! (ಸತ್ತುಹೋಗು)" ಎಂದು ಶಪಿಸಿದರು ಅಷ್ಟರಲ್ಲಿ ರಾಜರ್ಷಿಯು ಎಚ್ಚತ್ತು ವಸಿಷ್ಠರ ಶಾಪವನ್ನು ಕೇಳಿದನು ಆತನೂ ಕ್ರೋಧಾವಿಷ್ಟನಾಗಿ ಉದ್ವೇಗದಿಂದ "ಎಲೈ ಬ್ರಹ್ಮರ್ಷಿಯೆ, ತಿಳಿಯದೆ ನಾನು ಮಲಗಿದ್ದರೆ ನೀನು ರೋಷೋದ್ರಿಕ್ತನಾಗಿ ಯಮದಂಡದಂತಿರುವ ಶಾಪಾಗ್ನಿಯನ್ನು ನನ್ನ ಮೇಲೆ ಸುರಿದೆಯಲ್ಲವೆ? ತೇಜೋಮಯವಾದ ನಿನ್ನ ದೇಹವೂ ಚೈತನ್ಯರಹಿತವಾಗಲಿ! (ಮೃತನಾಗು)" ಎಂದು ಶಪಿಸಿದನು (೧೮-೨೦) ಲಕ್ಷ್ಮಣ, ನಿಮಿರಾಜನೂ ಬ್ರಾಹ್ಮಣೋತ್ತಮರಾದ ವಸಿಷ್ಠರೂ ಸಮಾನವಾದ ಮಹಿಮಾತಿಶಯವುಳ್ಳವರಾಗಿದ್ದರು ಅವರು ರೋಷಾವೇಶದಿಂದ ಈ ಪ್ರಕಾರವಾಗಿ ಪರಸ್ಪರ ಶಪಿಸಿ, ಒಡನೆಯೇ ಮೃತರಾಗಿ ವಿದೇಹರಾದರು." (೨೧)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತೈದನೆಯ ಸರ್ಗ



## ಷಟ್ ಪಂಚಾಶಃ ಸರ್ಗಃ

ಮೈತ್ರಾವರುಣಿತ್ವಪ್ರಾಪ್ತಿಃ

ರಾಮಸ್ಯ ಭಾಷಿತಂ ಶ್ರುತ್ವಾ ಲಕ್ಷ್ಮಣಃ ಪರವೀರಹಾ ।
ಉವಾಚ ಪ್ರಾಂಜಲಿರ್ವಾಕ್ಯಂ ರಾಘವಂ ದೀಪ್ತತೇಜಸಮ್ ॥ ೧

ನಿಕ್ಷಿಪ್ತದೇಹೌ ಕಾಕುತ್ಸ್ಥ ಕಥಂ ತೌ ದ್ವಿಜಪಾರ್ಥಿವೌ ।
ಪುನರ್ದೇಹೇನ ಸಂಯೋಗಂ ಜಗ್ಮತುರ್ದೇವಸಂಮತೌ ॥ ೨

ಲಕ್ಷ್ಮಣೇನೈವಮುಕ್ತಸ್ತು ರಾಮಶ್ಚೇಕ್ಷ್ವಾಕುನಂದನಃ ।
ಪ್ರತ್ಯುವಾಚ ಮಹಾತೇಜಾ ಲಕ್ಷ್ಮಣಂ ಪುರುಷರ್ಷಭಃ ॥ ೩

ತೌ ಪರಸ್ಪರಶಾಪೇನ ದೇಹಾವುತ್ಸೃಜ್ಯ ಧಾರ್ಮಿಕೌ ।
ಅಭೂತಾಂ ನೃಪವಿಪ್ರರ್ಷೀ ವಾಯುಭೂತೌ ತಪೋಧನೌ ॥ ೪

ಅಶರೀರಃ ಶರೀರಸ್ಯ ಕೃತೇಽನ್ಯಸ್ಯ ಮಹಾಮುನಿಃ ।
ವಸಿಷ್ಠಃ ಸುಮಹಾತೇಜಾ ಜಗಾಮ ಪಿತುರಂತಿಕಮ್ ॥ ೫

## ಸರ್ಗ ೫೬

ವಸಿಷ್ಠರು ಮೈತ್ರಾವರುಣಿಯಾಗಿ ದೇಹವನ್ನು ಧರಿಸುವಂತೆ ಬ್ರಹ್ಮನ
ಹಿತವಚನ ಮಿತ್ರನಿಂದ ಉರ್ವಶಿಗೆ ಶಾಪ

ರಾಘವನ ಮಡಿಯನ್ನು ಕೇಳಿ ಲಕ್ಷ್ಮಣನು ಪ್ರಾಂಜಲಿಯಾಗಿ "ಕಾಕುತ್ಸ್ಥ, ವಸಿಷ್ಠರೂ ನಿಮಿರಾಜನೂ ತಮ್ಮ ದೇಹವನ್ನು ತ್ಯಜಿಸಿದಮೇಲೆ, ಪುನಃ ಅವರಿಗೆ ದೇಹವು ಹೇಗೆ ಪ್ರಾಪ್ತವಾಯಿತು ?" ಎಂದು ಕೇಳಿದನು. ಆಗ ಕಾಕುತ್ಸ್ಥನು ಹೀಗೆಂದನು (೧-೩): "ಧಾರ್ಮಿಕರೂ ತಪೋಧನರೂ ಆದ ಅವರಿಬ್ಬರೂ ಪರಸ್ಪರ ಶಾಪವಶರಾಗಿ ದೇಹವನ್ನು ತ್ಯಜಿಸಿ ವಾಯುಸದೃಶ ರಾದರು ಆಮೇಲೆ ವಸಿಷ್ಠಮಹರ್ಷಿಗಳು ಇನ್ನೊಂದು ಶರೀರವನ್ನು ಪಡೆಯುವ ಉದ್ದೇಶದಿಂದ ತಮ್ಮ ತಂದೆಯಾದ ಬ್ರಹ್ಮನ ಬಳಿಗೆ ಹೋದರು

ಸೋಽಭಿವಾದ್ಯ ತತಃ ಪಾದೌ ದೇವದೇವಸ್ಯ ಧರ್ಮವಿತ್ ।
ಪಿತಾಮಹಮಥೋವಾಚ ವಾಯುಭೂತ ಇದಂ ವಚಃ ॥ ೬
ಭಗವನ್ನಿಮಿಶಾಪೇನ ವಿದೇಹತ್ವಮುಪಾಗಮಮ್ ।
ಲೋಕನಾಥ ಮಹಾದೇವ ಅಂಡಜೋಽಪಿ ತ್ವಮಬ್ಜಜಃ ॥ ೭
ಸರ್ವೇಷಾಂ ದೇಹಹೀನಾನಾಂ ಮಹದ್ದುಃಖಂ ಭವಿಷ್ಯತಿ ।
ಲುಪ್ಯಂತೇ ಸರ್ವಕಾರ್ಯಾಣಿ ಹೀನದೇಹಸ್ಯ ವೈ ಪ್ರಭೋ ॥ ೮
ದೇಹಸ್ಯಾನ್ಯಸ್ಯ ಸದ್ಭಾವೇ ಪ್ರಸಾದಂ ಕರ್ತುಮರ್ಹಸಿ ।
ತಮುವಾಚ ತತೋ ಬ್ರಹ್ಮಾ ಸ್ವಯಂಭೂರಮಿತಪ್ರಭಃ ॥ ೯
ಮಿತ್ರಾವರುಣಜಂ ತೇಜಃ ಪ್ರವಿಶ ತ್ವಂ ಮಹಾಯಶಃ ।
ಅಯೋನಿಜಸ್ತ್ವಂ ಭವಿತಾ ತತ್ರಾಪಿ ದ್ವಿಜಸತ್ತಮ ॥ ೧೦
ಧರ್ಮೇಣ ಮಹತಾ ಯುಕ್ತಃ ಪುನರೇಷ್ಯಸಿ ಮೇ ವಶಮ್ ।
ಏವಮುಕ್ತಸ್ತು ದೇವೇನ ಚಾಭಿವಾದ್ಯ ಪ್ರದಕ್ಷಿಣಮ್ ॥ ೧೧
ಕೃತ್ವಾ ಪಿತಾಮಹಂ ತೂರ್ಣಂ ಪ್ರಯಯೌ ವರುಣಾಲಯಮ್ ।
ತಮೇವ ಕಾಲಂ ಮಿತ್ರೋಽಪಿ ವರುಣತ್ವಮಕಾರಯತ್ ॥ ೧೨

---

(೪-೫) ವಾಯುವಿನಂತೆ ಅದೃಶ್ಯರಾಗಿದ್ದ ಅವರು ದೇವದೇವನಾದ ಪಿತಾಮಹನ ಪಾದಗಳಿಗೆ ವಂದಿಸಿ "ಹೇ ಭಗವನ್—ಲೋಕೇಶ್ವರ, ನೀನು ಹಿರಣ್ಯಗರ್ಭನೆಂದೂ ಕಮಲಜನೆಂದೂ ವಿಖ್ಯಾತನಾಗಿರುವೆ ನನಗೆ ನಿಮಿ ಶಾಪದಿಂದ ಸ್ಥೂಲದೇಹವು ಕಳಚಿಹೋಯಿತು (೬-೭) ದೇಹವಿಲ್ಲದವರಿಗೆ ಮಹತ್ತರವಾದ ದುಃಖ ಉಂಟು ಸಕಲ ಕಾರ್ಯಗಳೂ ಲುಪ್ತವಾಗುತ್ತವೆ. ಇನ್ನೊಂದು ಸ್ಥೂಲದೇಹವು ನನಗೆ ದೊರೆಯುವಂತೆ ನನ್ನಲ್ಲಿ ದಯೆದೋರು" ಎಂದು ಪ್ರಾರ್ಥಿಸಿದರು. ಆಗ ಬ್ರಹ್ಮದೇವನು "ಎಲೈ ದ್ವಿಜಸತ್ತಮ; ಮಿತ್ರಾವರುಣರಿಂದ ಉತ್ಕೃಷ್ಟವಾದ ರೇತಸ್ಸನ್ನು ಪ್ರವೇಶಿಸು ಆಗಲೂ ಅಯೋನಿಜನಾಗಿಯೇ ಉಳಿಯುವೆ (೮-೧೦) ಧರ್ಮಯುಕ್ತನಾದ ನೀನು ನನ್ನ ಪುತ್ರನೆಂದೇ ಖ್ಯಾತನಾಗಿ ಪ್ರಜಾಪತಿ ಪದವಿಯನ್ನು ಉಳಿಸಿಕೊಂಡಿರುವೆ" ಎಂದು ಹೇಳಿದನು ಅನಂತರ ವಸಿಷ್ಠರು ಬ್ರಹ್ಮದೇವನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ವರುಣಲೋಕಕ್ಕೆ ಹೋದರು.

ಕ್ಷೀರೋದೇನ ಸಹೋಪೇತಃ ಪೂಜ್ಯಮಾನಃ ಸುರೋತ್ತಮೈಃ ।
ಏತಸ್ಮಿನ್ನೇವ ಕಾಲೇ ತು ಉರ್ವಶೀ ಪರಮಾಪ್ಸರಾಃ ॥ ೧೩

ಯದೃಚ್ಛಯಾ ಸಮುದ್ದೇಶಮಾಯಯೌ ಸಖಿಭಿರ್ವೃತಾ ।
ತಾಂ ದೃಷ್ಟ್ವಾ ರೂಪಸಂಪನ್ನಾಂ ಕ್ರೀಡಂತೀಂ ವರುಣಾಲಯೇ ॥ ೧೪

ಆವಿಶತ್ ಪರಮೋ ಹರ್ಷೋ ವರುಣಂ ಚೋರ್ವಶೀಕೃತೇ ।
ಸ ತಾಂ ಪದ್ಮಪಲಾಶಾಕ್ಷೀಂ ಪೂರ್ಣಚಂದ್ರನಿಭಾನನಾಮ್ ॥ ೧೫

ವರುಣೋ ವರಯಾಮಾಸ ಮೈಥುನಾಯಾಪ್ಸರೋವರಾಮ್ ।
ಪ್ರತ್ಯುವಾಚ ತತಃ ಸಾ ತು ವರುಣಂ ಪ್ರಾಂಜಲಿಃ ಸ್ಥಿತಾ ॥ ೧೬

ಮಿತ್ರೇಣಾಹಂ ವೃತಾ ಸಾಕ್ಷಾತ್ ಪೂರ್ವಮೇವ ಸುರೇಶ್ವರ ।
ವರುಣಸ್ತ್ವಬ್ರವೀದ್ವಾಕ್ಯಂ ಕಂದರ್ಪಶರಪೀಡಿತಃ ॥ ೧೭

ಇದಂ ತೇಜಃ ಸಮುತ್ಸ್ರಕ್ಷ್ಯೇ ಕುಂಭೇಽಸ್ಮಿನ್ ದೇವನಿರ್ಮಿತೇ ।
ಏವಮುತ್ಸೃಜ್ಯ ಸುಶ್ರೋಣಿ ತ್ವಯ್ಯಹಂ ವರವರ್ಣಿನಿ ॥ ೧೮

---

ಆ ಸಮಯದಲ್ಲಿ ಯಾವುದೋ ಒಂದು ನಿಮಿತ್ತದಿಂದ ಮಿತ್ರನು* ವರುಣಾಧಿಕಾರವನ್ನು ನಡೆಸುತ್ತಿದ್ದನು (೧೧-೧೨) ಕ್ಷೀರಸಮುದ್ರದಲ್ಲಿ ದೇವತೆಗಳಿಂದ ಪೂಜಿತನಾಗಿ ವಿರಾಜಿಸುತ್ತಿದ್ದನು ಆ ಸಮಯದಲ್ಲಿ ಉರ್ವಶಿ ಯೆಂಬ ಅಪ್ಸರೆಯು ಸಖೀಸಮೇತಳಾಗಿ ಸಮುದ್ರಪ್ರದೇಶಕ್ಕೆ ಬಂದಳು ವರುಣಲೋಕದಲ್ಲಿ ವಿಹರಿಸುತ್ತಿದ್ದ ಆ ರೂಪಸಂಪನ್ನೆಯನ್ನು ಕಂಡು ವರುಣ ನಿಗೆ ಹರ್ಷವಾಯಿತು (೧೩-೧೪) ಪದ್ಮದಳನೇತ್ರೆಯೂ ಪೂರ್ಣಚಂದ್ರಾ ನನೆಯೂ ಆದ ಉರ್ವಶಿಯನ್ನು ವರುಣನು ಮೈಥುನಕ್ಕಾಗಿ ಕರೆದನು. ಆಗ ಉರ್ವಶಿಯು ಆತನಿಗೆ ಕೈಮುಗಿದು "ಸುರೋತ್ತಮ, ಮಿತ್ರನು ಮೊದಲೇ ನನ್ನನ್ನು ವರಿಸಿದ್ದಾನೆ" ಎಂದು ಹೇಳಿದಳು (೧೫-೧೬) ಕಾಮಮೋಹಿತನಾದ ವರುಣನು "ಎಲೌ ಸುಂದರಿ, ನನ್ನ ಸಂಗವನ್ನು ನೀನು ಬಯಸುವುದಿಲ್ಲವಾದರೆ, ದೇವನಿರ್ಮಿತವಾದ ಈ ಕುಂಭದಲ್ಲಿ ನನ್ನ

---

* ಮಿತ್ರನೆಂದರೆ ಸೂರ್ಯನ ಒಂದು ಮೂರ್ತಿಭೇದ,

ಕೃತಕಾಮೋ ಭವಿಷ್ಯಾಮಿ ಯದಿ ನೇಚ್ಛಸಿ ಸಂಗಮಮ್ ।
ತಸ್ಯ ತಲ್ಲೋಕಪಾಲಸ್ಯ ವರುಣಸ್ಯ ಸುಭಾಷಿತಮ್ ॥ ೧೯

ಉರ್ವಶೀ ಪರಮಪ್ರೀತಾ ಶ್ರುತ್ವಾ ವಾಕ್ಯಮುವಾಚ ಹ ।
ಕಾಮಮೇತದ್ಭವತ್ವೇವಂ ಹೃದಯಂ ಮೇ ತ್ವಯಿ ಸ್ಥಿತಮ್ ॥ ೨೦

ಭಾವಶ್ಚಾಪ್ಯಧಿಕಸ್ತುಭ್ಯಂ ದೇಹೋ ಮಿತ್ರಸ್ಯ ತು ಪ್ರಭೋ ।
ಉರ್ವಶ್ಯಾ ಏವಮುಕ್ತಸ್ತು ರೇತಸ್ತನ್ಮಹದದ್ಭುತಮ್ ॥ ೨೧

ಜ್ವಲದಗ್ನಿಶಿಖಾಪ್ರಖ್ಯಂ ತಸ್ಮಿನ್ ಕುಂಭೇ ಹ್ಯವಾಸೃಜತ್ ।
ಉರ್ವಶೀ ತ್ವಗಮತ್ತತ್ರ ಮಿತ್ರೋ ವೈ ಯತ್ರ ದೇವತಾ ॥ ೨೨

ತಾಂ ತು ಮಿತ್ರಃ ಸುಸಂಕ್ರುದ್ಧ ಉರ್ವಶೀಮಿದಮಬ್ರವೀತ್ ।
ಮಯಾ ನಿಮಂತ್ರಿತಾ ಪೂರ್ವಂ ಕಸ್ಮಾತ್ತ್ವಮವಸರ್ಜಿತಾ ॥ ೨೩

ಪತಿಮನ್ಯಂ ವೃತವತೀ ತಸ್ಮಾತ್ತ್ವಂ ದುಷ್ಟಚಾರಿಣೀ ।
ಅನೇನ ದುಷ್ಕೃತೇನ ತ್ವಂ ಮತ್ಕ್ರೋಧಕಲುಷೀಕೃತಾ ॥ ೨೪

ಮನುಷ್ಯಲೋಕಮಾಸ್ಥಾಯ ಕಂಚಿತ್ ಕಾಲಂ ನಿವತ್ಸ್ಯತಿ ।
ಬುಧಸ್ಯ ಪುತ್ರೋ ರಾಜರ್ಷಿಃ ಕಾಶೀರಾಜಃ ಪುರೂರವಾಃ ॥ ೨೫

---

ರೇತಸ್ಸನ್ನು ವಿಸರ್ಜಿಸಿ ತೃಪ್ತನಾಗುವೆನು" ಎಂದನು ಆ ಮಾತಿನಿಂದ ಉರ್ವಶಿಯು ಸಂಪ್ರೀತಳಾಗಿ "ಸ್ವಾಮಿ, ಆಗಬಹುದು ನನ್ನ ಹೃದಯವು ನಿನ್ನಲ್ಲಿಯೇ ನೆಟ್ಟಿದ (೧೭-೨೦) ನನ್ನ ಪ್ರೇಮವು ನಿನ್ನಲ್ಲಿಯೇ ದೇಹವು ಮಾತ್ರ ಮಿತ್ರನಿಗ ಅಧೀನವಾಗಿದೆ!" ಎಂದಳು ಆಗ ವರುಣನು ಅಗ್ನಿಜ್ವಾಲೆಯಂತಿದ್ದ ತನ್ನ ತೇಜಸ್ಸನ್ನು ದೇವನಿರ್ಮಿತವಾದ ಕುಂಭದಲ್ಲಿ ವಿಸರ್ಜಿಸಿದನು ಉರ್ವಶಿಯು ಮಿತ್ರನ ಬಳಿಗೆ ತೆರಳಿದಳು (೨೧-೨೨) ಮಿತ್ರನು ಈ ವಿಷಯವನ್ನರಿತು ಕ್ರುದ್ಧನಾಗಿ ಅವಳನ್ನು ನೋಡಿ "ಎಲೌ ಉರ್ವಶಿ, ಮೊದಲು ನಾನು ನಿನ್ನನ್ನು ಆಹ್ವಾನಿಸಿರುವಾಗ ನನ್ನನ್ನು ತ್ಯಜಿಸಿದ್ದೇಕೆ? ಇನ್ನೊಬ್ಬ ಪತಿಯನ್ನು ವರಿಸಿದ್ದೇಕೆ? ನೀನು ದುಷ್ಟಚಾರಿಣಿ! ಈ ದುಷ್ಕೃತ್ಯದಿಂದ ನನ್ನ ರೋಷಕ್ಕೆ ಗುರಿಯಾಗಿರುವೆ (೨೩-೨೪) ಕೆಲವು ಕಾಲ ಮನುಷ್ಯಲೋಕದಲ್ಲಿ ವಾಸವಾಗಿರು! ಅಲ್ಲಿ ಬುಧನ ಪುತ್ರನೂ ಕಾಶೀರಾಜನೂ ಆದ

ತಮುದ್ಯ ಗಚ್ಛ ದುರ್ಬುದ್ಧೇ ಸ ತೇ ಭರ್ತಾ ಭವಿಷ್ಯತಿ ।
ತತಃ ಸಾ ಶಾಪದೋಷೇಣ ಪುರೂರವಸಮಭ್ಯಗಾತ್ ॥ ೨೬

ಪ್ರತಿಯಾತಾ ಪುರೂರವಂ ಬುಧಸ್ಯಾತ್ಮಜಮೌರಸಮ್ ।
ತಸ್ಯ ಜಜ್ಞೇ ತತಃ ಶ್ರೀಮಾನಾಯುಃ ಪುತ್ರೋ ಮಹಾಬಲಃ ॥ ೨೭

ನಹುಷೋ ಯತ್ರ ಪುತ್ರಸ್ತು ಬಭೂವೇಂದ್ರಸಮದ್ಯುತಿಃ ।
ವಜ್ರಮುತ್ಸೃಜ್ಯ ವೃತ್ರಾಯ ಶ್ರಾಂತೇಽಥ ತ್ರಿದಶೇಶ್ವರೇ ॥ ೨೮
ಶತಂ ವರ್ಷಸಹಸ್ರಾಣಿ ಯೇನೇಂದ್ರತ್ವಂ ಪ್ರಶಾಸಿತಮ್ ॥

ಸಾ ತೇನ ಶಾಪೇನ ಜಗಾಮ ಭೂಮಿಂ
ತದೋರ್ವಶೀ ಚಾರುದತೀ ಸುನೇತ್ರಾ ।
ಬಹೂನಿ ವರ್ಷಾಣ್ಯವಸಚ್ಚ ಸುಭ್ರೂಃ
ಶಾಪಕ್ಷಯಾದಿಂದ್ರಸದೋ ಯಯೌ ಚ ॥ ೨೯

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಟ್‌ಪಂಚಾಶಃ ಸರ್ಗಃ

---

ಪುರೂರವನೆಂಬ ರಾಜರ್ಷಿ ಇದ್ದಾನೆ ಎಲೌ ದುರ್ಬುದ್ಧಿಯುವಳೆ! ಅವನ ಬಳಿಗೆ ಹೋಗು! ಅವನು ನಿನ್ನ ಪತಿಯಾಗಲಿ!" ಎಂದು ಶಪಿಸಿದನು ಈ ಶಾಪದೋಷದಿಂದ ಉರ್ವಶಿಯು ಪುರೂರವನ ಬಳಿಗೆ ಹೋದಳು (೨೫-೨೬). ಆತನು ಬುಧನ ಔರಸಪುತ್ರ ಆತನಿಂದ ಉರ್ವಶಿಯಲ್ಲಿ ಆಯುವೆಂಬ ಬಲಾಢ್ಯನಾದ ಮಗನು ಜನಿಸಿದನು ಆಯುವಿಗೆ ನಹುಷನೆಂಬ ಇಂದ್ರಸಮಾನನಾದ ಸುತನು ಹುಟ್ಟಿದನು ದೇವೇಂದ್ರನು ವೃತ್ರಾಸುರನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿ ಬಳಲಿ ಅಡಗಿದಾಗ, ನಹುಷನು ನೂರುಸಾವಿರ ವರ್ಷಗಳವರೆಗೆ ಇಂದ್ರಾಧಿಕಾರವನ್ನು ನಡೆಸಿದನು (೨೭-೨೮) ಹೀಗೆ ಉರ್ವಶಿಯು ಮಿತ್ರನ ಶಾಪಕ್ಕೆ ಒಳಗಾಗಿ ಭೂಲೋಕಕ್ಕೆ ಬಂದು ಪುರೂರವನೊಡನೆ ಬಹಳ ವರ್ಷಗಳನ್ನು ಕಳೆದಳು ಶಾಪವು ಮುಗಿದಮೇಲೆ ಮತ್ತೆ ಇಂದ್ರಸಭೆಗೆ ಹೋದಳು " (೨೯).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತಾರನೆಯ ಸರ್ಗ

# ಸಪ್ತಪಂಚಾಶಃ ಸರ್ಗಃ

## ನಿಮಿನಿಮಿಷೀಕರಣಮ್

ತಾಂ ಶ್ರುತ್ವಾ ದಿವ್ಯಸಂಕಾಶಾಂ ಕಥಾಮದ್ಭುತದರ್ಶನಾಮ್ ।
ಲಕ್ಷ್ಮಣಃ ಪರಮಪ್ರೀತೋ ರಾಘವಂ ವಾಕ್ಯಮಬ್ರವೀತ್ ॥ ೧

ನಿಕ್ಷಿಪ್ತದೇಹೌ ಕಾಕುತ್ಸ್ಥ ಕಥಂ ತೌ ದ್ವಿಜಪಾರ್ಥಿವೌ ।
ಪುನರ್ದೇಹೇನ ಸಂಯೋಗಂ ಜಗ್ಮತುರ್ದೇವಸಂಮತೌ ॥ ೨

ತಸ್ಯ ತದ್ಭಾಷಿತಂ ಶ್ರುತ್ವಾ ರಾಮಃ ಸತ್ಯಪರಾಕ್ರಮಃ ।
ತಾಂ ಕಥಾಂ ಕಥಯಾಮಾಸ ವಸಿಷ್ಠಸ್ಯ ಮಹಾತ್ಮನಃ ॥ ೩

ಯಸ್ತು ಕುಂಭೋ ರಘುಶ್ರೇಷ್ಠ ತೇಜಃಪೂರ್ಣೋ ಮಹಾತ್ಮನೋಃ।
ತಸ್ಮಿಂಸ್ತೇಜೋಮಯೌ ವಿಪ್ರೌ ಸಂಭೂತಾವೃಷಿಸತ್ತಮೌ ॥ ೪

## ಸರ್ಗ ೫೭

ವಸಿಷ್ಠರು ಮೈತ್ರಾವರುಣಿಗಳಾಗುವುದು, ನಿಮಿಯು ರೆಪ್ಪೆಗಳಲ್ಲಿ ನೆಲಸುವುದು, ಜನಕರಾಜನ ಉತ್ಪತ್ತಿ

ಲಕ್ಷ್ಮಣನು ಅದ್ಭುತವಾದ ಆ ಕಥೆಯನ್ನು ಕೇಳಿ ರಾಘವನನ್ನು ಕುರಿತು "ಕಾಕುತ್ಸ್ಥ, ವಸಿಷ್ಠರೂ ನಿಮಿರಾಜನೂ ದೇಹವನ್ನು ತ್ಯಜಿಸಿದರಷ್ಟೆ ಅವರಿಗೆ ಪುನಃ ದೇಹಸಂಬಂಧವು ಹೇಗಾಯಿತು?" ಎಂದು ಕೇಳಿದನು (೧-೨) ರಾಘವನು ವಸಿಷ್ಠರ ಕಥೆಯನ್ನು ಹೀಗೆ ಮುಂದುವರಿಸಿ ಹೇಳಿದನು. "ಲಕ್ಷ್ಮಣ, ಮಹಾತ್ಮರಾದ ಮಿತ್ರ ಮತ್ತು ವರುಣರ* ರೇತಸ್ಸಿನಿಂದ ಕೂಡಿದ ಯಾವ ಕುಂಭವಿತ್ತೋ ಅದರಲ್ಲಿ ಋಷಿಸತ್ತಮರಾದ ಅಗಸ್ತ್ಯರೂ ವಸಿಷ್ಠರೂ

* ವರುಣಲೋಕದಲ್ಲಿದ್ದ ಮಿತ್ರನು ಉರ್ವಶಿಯನ್ನು ಮೊದಲು ಆಹ್ವಾನಿಸಿದ್ದನು. ಆವಳು ಬರುವೆನೆಂದು ಹೇಳಿ ಹೊರಟುಹೋಗಿದ್ದಳು ಆ ಸಮಯದಲ್ಲಿ ಮಿತ್ರನು ಸ್ಖಲಿತವಾದ ರೇತಸ್ಸನ್ನು ಒಂದು ಕುಂಭದಲ್ಲಿಟ್ಟನು ಅನಂತರ ವರುಣನು ತನ್ನ ರೇತಸ್ಸನ್ನು ಅದೇ ಕುಂಭದಲ್ಲಿ ವಿಸರ್ಜಿಸಿದನು ಆಮೇಲೆ ಬಂದ ಉರ್ವಶಿಯನ್ನು ಮಿತ್ರನು ಶಪಿಸಿದನು

ಪೂರ್ವಂ ಸಮಭವತ್ತತ್ರ ಹ್ಯಗಸ್ತ್ಯೋ ಭಗವಾನೃಷಿಃ ।
ನಾಹಂ ಸುತಸ್ತವೇತ್ಯುಕ್ತ್ವಾ ಮಿತ್ರಂ ತಸ್ಮಾದಪಾಕ್ರಮತ್ ॥ ೫

ತದ್ಧಿ ತೇಜಸ್ತು ಮಿತ್ರಸ್ಯ ಉರ್ವಶ್ಯಾಃ ಪೂರ್ವಮಾಹಿತಮ್ ।
ತಸ್ಮಿನ್ ಸಮಭವತ್ ಕುಂಭೇ ತತ್ತೇಜೋ ಯತ್ರ ವಾರುಣಮ್ ॥ ೬

ಕಸ್ಯಚಿತ್ತ್ವಥ ಕಾಲಸ್ಯ ಮಿತ್ರಾವರುಣಸಂಭವಃ ।
ವಸಿಷ್ಠಸ್ತೇಜಸಾ ಯುಕ್ತೋ ಜಜ್ಞೇ ಚೇಕ್ಷ್ವಾಕುದೈವತಮ್ ॥ ೭

ತಮಿಕ್ಷ್ವಾಕುರ್ಮಹಾತೇಜಾ ಜಾತಮಾತ್ರಮನಿಂದಿತಮ್ ।
ವವ್ರೇ ಪುರೋಹಿತಂ ಸೌಮ್ಯ ವಂಶಸ್ಯಾಸ್ಯ ಭವಾಯ ನಃ ॥ ೮

ಏವಂ ತ್ವಪೂರ್ವದೇಹಸ್ಯ ವಸಿಷ್ಠಸ್ಯ ಮಹಾತ್ಮನಃ ।
ಕಥಿತೋ ನಿರ್ಗಮಃ ಸೌಮ್ಯ ನಿಮೇಃ ಶೃಣು ಯಥಾ ಭವೇತ್ ॥ ೯

ದೃಷ್ಟ್ವಾ ವಿದೇಹಂ ರಾಜಾನಮೃಷಯಃ ಸರ್ವ ಏವ ತೇ ।
ತಂ ತತೋ ಯಾಜಯಾಮಾಸುರ್ಯಾಗದೀಕ್ಷಂ ಮನೀಷಿಣಃ ॥ ೧೦

---

ಜನಿಸಿದರು (೩-೪) ಆ ಕುಂಭದಲ್ಲಿ ಮೊದಲು ಭಗವಾನ್ ಅಗಸ್ತ್ಯಮುನಿಗಳು ಹುಟ್ಟಿದರು ಅವರು ಮಿತ್ರನನ್ನು ಕುರಿತು "ನಾನು ನಿನ್ನ ಮಗನಲ್ಲ" * ಎಂದು ಹೇಳಿ ಹೊರಟುಹೋದರು ಏಕೆಂದರೆ, ಉರ್ವಶೀನಿಮಿತ್ತವಾಗಿ ಸ್ಖಲಿಸಿದ ರೇತಸ್ಸನ್ನು ಮಿತ್ರನು ಮೊದಲು ಆ ಕುಂಭದಲ್ಲಿಟ್ಟಿದ್ದನು ಅದರಲ್ಲಿಯೇ ವರುಣನ ರೇತಸ್ಸೂ ವಿಸೃಷ್ಟವಾಗಿತ್ತು (೫-೬) ಕಲವು ಕಾಲದ ಮೇಲೆ ಮಿತ್ರಾವರುಣರ ರೇತಸ್ಸಿನಿಂದ ವಸಿಷ್ಠರೂ ತೇಜೋಯುಕ್ತರಾಗಿ ಆವಿರ್ಭವಿಸಿದರು ಅವರೇ ಇಕ್ಷ್ವಾಕುವಂಶಕ್ಕೆ ದೇವತೆಯಾಗಿದ್ದಾರೆ ಸೌಮ್ಯ—ಲಕ್ಷ್ಮಣ, ವಸಿಷ್ಠರು ಜನಿಸಿದೊಡನೆ ಇಕ್ಷ್ವಾಕುಮಹಾರಾಜನು ನಮ್ಮ ವಂಶದ ಉದ್ಧಾರಕ್ಕಾಗಿ ಅವರನ್ನು ಪುರೋಹಿತರನ್ನಾಗಿ ವರಿಸಿದನು (೭-೮). ವಸಿಷ್ಠರು ಹೊಸ ದೇಹವನ್ನು ಧರಿಸಿ ಹೊರಬಂದ ವೃತ್ತಾಂತವನ್ನು ಹೇಳಿದೆನು ಈಗ ನಿಮಿರಾಜನ ವೃತ್ತಾಂತವನ್ನು ಕೇಳು ರಾಜನು ದೇಹರಹಿತನಾದ್ದನ್ನು ಕಂಡು ಋಷಿಗಳೆಲ್ಲರೂ ಯಜ್ಞದೀಕ್ಷೆಯನ್ನು ವಹಿಸಿಕೊಂಡು ಯಾಗವನ್ನು

* 'ನಿನ್ನೊಬ್ಬನಿಂದಲೇ ಜನಿಸಿದವನಲ್ಲ, ಈರ್ವರ ರೇತಸ್ಸಿನಿಂದ ಜನಿಸಿದವನು' ಎಂದು ಅಭಿಪ್ರಾಯ

ತಂ ಚ ದೇಹಂ ನರೇಂದ್ರಸ್ಯ ರಕ್ಷಂತಿ ಸ್ಮ ದ್ವಿಜೋತ್ತಮಾಃ ।
ಗಂಧೈರ್ಮಾಲ್ಯೈಶ್ಚ ವಸ್ತ್ರೈಶ್ಚ ಪೌರಭೃತ್ಯಸಮನ್ವಿತಾಃ ॥ ೧೧

ತತೋ ಯಜ್ಞೇ ಸಮಾಪ್ತೇ ತು ಭೃಗುಸ್ತತ್ರೇದಮಬ್ರವೀತ್ ।
ಆನಯಿಷ್ಯಾಮಿ ತೇ ಚೇತಸ್ತುಷ್ಟೋಽಸ್ಮಿ ತವ ಪಾರ್ಥಿವ ॥ ೧೨

ಸುಪ್ರೀತಾಶ್ಚ ಸುರಾಃ ಸರ್ವೇ ನಿಮೇಶ್ಚೇತಸ್ತಥಾಬ್ರುವನ್ ।
ವರಂ ವರಯ ರಾಜರ್ಷೇ ಕ್ವ ತೇ ಚೇತೋ ನಿರೂಪ್ಯತಾಮ್ ॥ ೧೩

ಏವಮುಕ್ತಃ ಸುರೈಃ ಸರ್ವೈರ್ನಿಮೇಶ್ಚೇತಸ್ತದಾಬ್ರವೀತ್ ।
ನೇತ್ರೇಷು ಸರ್ವಭೂತಾನಾಂ ವಸೇಯಂ ಸುರಸತ್ತಮಾಃ ॥ ೧೪

ಬಾಢಮಿತ್ಯೇವ ವಿಬುಧಾ ನಿಮೇಶ್ಚೇತಸ್ತದಾಬ್ರುವನ್ ।
ನೇತ್ರೇಷು ಸರ್ವಭೂತಾನಾಂ ವಾಯುಭೂತಶ್ಚರಿಷ್ಯಸಿ ॥ ೧೫

ತ್ವತ್ಕೃತೇ ಚ ನಿಮಿಷ್ಯಂತಿ ಚಕ್ಷೂಂಷಿ ಪೃಥಿವೀಪತೇ ।
ವಾಯುಭೂತೇನ ಚರತಾ ವಿಶ್ರಮಾರ್ಥಂ ಮುಹುರ್ಮುಹುಃ ॥ ೧೬

---

ಮುಂದುವರಿಸಿದರು ಪೌರರ ಮತ್ತು ಸೇವಕರ ನೆರವಿನಿಂದ ನಿಮಿರಾಜನ ದೇಹವನ್ನು ಗಂಧಮಾಲ್ಯವಸ್ತ್ರಗಳಿಂದ ಅಲಂಕರಿಸಿ ರಕ್ಷಿಸಿದರು (೯-೧೧). ಯಜ್ಞವು ನಮಾಪ್ತವಾದಮೇಲೆ ಭೃಗುಮುನಿಗಳು ನಿಮಿರಾಜನ ಪ್ರತ್ಯಗಾತ್ಮವನ್ನು ಸಂಬೋಧಿಸಿ "ಎಲೈ ಪಾರ್ಥಿವ, ಸಂತುಷ್ಟನಾಗಿದ್ದೇನೆ ನಿನ್ನ ಜೀವವನ್ನು ದೇಹದಲ್ಲಿ ತಂದಿರಿಸುವೆನು!" ಎಂದರು ಸುಪ್ರೀತರಾದ ದೇವತೆಗಳೂ ನಹ "ರಾಜರ್ಷಿ, ವರವನ್ನು ಕೇಳಿಕೊ ನಿನ್ನ ಜೀವವನ್ನು ಎಲ್ಲಿ ಸೇರಿಸೋಣ? ಹೇಳು!" ಎಂದರು (೧೨-೧೩) ನಿಮಿರಾಜನು "ದೇವತೆಗಳೆ, ಸಕಲ ಪ್ರಾಣಿಗಳ ನೇತ್ರಗಳಲ್ಲಿ ನೆಲಸಬೇಕೆಂದು ನನ್ನ ಬಯಕೆ" ಎಂದನು "ತಥಾಸ್ತು!" ಎಂದು ನುಡಿದು "ನಿಮಿರಾಜ, ನೀನು ವಾಯುಭೂತನಾಗಿ ಸಂಚರಿಸುವಾಗ ವಿಶ್ರಾಂತಿಗೋಸ್ಕರ* ನಿನ್ನ ನಿಮಿತ್ತದಿಂದ ಪ್ರಾಣಿಗಳು ಪದೇ ಪದೇ ರೆಪ್ಪೆಗಳನ್ನು ಮುಚ್ಚುವರು!" ಎಂದು ತಿಳಿಸಿದರು

---

* ವಾಯುರೂಪನಾದ ನಿಮಿರಾಜನಿಗೆ ವಿಶ್ರಾಂತಿ ಅಥವಾ ಸದಾ ರೆಪ್ಪೆಯನ್ನು ತೆರೆದಿರುವ ಪ್ರಾಣಿಗಳಿಗೆ ವಿಶ್ರಾಂತಿ

ಏವಮುಕ್ತ್ವಾ ತು ವಿಬುಧಾಃ ಸರ್ವೇ ಜಗ್ಮುರ್ಯಥಾಗತಮ್ ।
ಋಷಯೋಽಪಿ ಮಹಾತ್ಮಾನೋ ನಿಮೇರ್ದೇಹಂ ಸಮಾಹರನ್ ॥

ಅರಣಿಂ ತತ್ರ ನಿಕ್ಷಿಪ್ಯ ಮಥನಂ ಚಕ್ರುರೋಜಸಾ ।
ಮಂತ್ರಹೋಮೈರ್ಮಹಾತ್ಮಾನಃ ಪುತ್ರಹೇತೋರ್ನಿಮೇಸ್ತದಾ ॥ ೧೮

ಅರಣ್ಯಾಂ ಮಥ್ಯಮಾನಾಯಾಂ ಪ್ರಾದುರ್ಭೂತೋ ಮಹಾತಪಾಃ ।
ಮಥನಾನ್ಮಿಥಿರಿತ್ಯಾಹುರ್ಜನನಾಜ್ಜನಕೋಽಭವತ್ ॥ ೧೯

ಯಸ್ಮಾದ್ವಿದೇಹಾತ್ ಸಂಭೂತೋ ವೈದೇಹಸ್ತು ತತಃ ಸ್ಮೃತಃ ।
ಏವ ವಿದೇಹರಾಜಶ್ಚ ಜನಕಃ ಪೂರ್ವಕೋಽಭವತ್ ॥ ೨೦

ಮಿಥಿರ್ನಾಮ ಮಹಾತೇಜಾಸ್ತೇನಾಯಂ ಮೈಥಿಲೋಽಭವತ್ ॥

ಇತಿ ಸರ್ವಮಶೇಷತೋ ಮಯಾ
ಕಥಿತಂ ಸಂಭವಕಾರಣಂ ತು ಸೌಮ್ಯ ।

---

(೧೪-೧೬) ಹೀಗೆ ತಿಳಿಸಿ ದೇವತೆಗಳು ಹೊರಟುಹೋದರು ಆಮೇಲೆ ಮಹಾತ್ಮರಾದ ಋಷಿಗಳು ನಿಮಿಯ ದೇಹವನ್ನು ಯಜ್ಞಭೂಮಿಗೆ ತಂದು ಅದರಲ್ಲಿ ಅರಣಿಯನ್ನಿಟ್ಟು ಪುತ್ರೋತ್ಪತ್ತಿಯಾಗಲೆಂದು ಪುತ್ರೀಯಮಂತ್ರ ಹೋಮಪೂರ್ವಕವಾಗಿ ಮಂಥನಮಾಡಿದರು (೧೭-೧೮) ಹೀಗೆ ಮಥಿಸುತ್ತಿರುವಾಗ ನಿಮಿಯ ದೇಹದಿಂದ ಮಹಾತಪಸ್ವಿಯಾದ ಒಬ್ಬ ಪುತ್ರನು ಉದಯಿಸಿದನು ಮಥನದಿಂದ ಜನಿಸಿದ ನಿಮಿತ್ತವಾಗಿ ಮಿಥಿಯೆಂದೂ ಅದ್ಭುತವಾದ ಜನನವನ್ನು ಪಡೆದಿದ್ದರಿಂದ ಜನಕನೆಂದೂ ಆತನಿಗೆ ಹೆಸರಾಯಿತು ಜೀವರಹಿತವಾದ ವಿದೇಹದಿಂದ ಹುಟ್ಟಿದನಾದ್ದರಿಂದ ವೈದೇಹನೆಂದೂ ಆತನು ಪ್ರಸಿದ್ಧನಾದನು ಈ ಪ್ರಕಾರದಲ್ಲಿ ಆ ವಂಶದ ಮೂಲಪುರುಷನು ವಿದೇಹರಾಜನೆಂದೂ ಜನಕರಾಜನೆಂದೂ ಮಿಥಿಯೆಂದೂ ವಿಖ್ಯಾತನಾದನು ಆದ್ದರಿಂದ ಆ ವಂಶವು ಮೈಥಿಲವೆಂಬ ಹೆಸರನ್ನು ಪಡೆಯಿತು (೧೯-೨೦) ಸೌಮ್ಯ—ಲಕ್ಷ್ಮಣ, ರಾಜಪುಂಗವನಾದ ನಿಮಿಯ ಶಾಪದಿಂದ ವಸಿಷ್ಠರಿಗೂ ವಸಿಷ್ಠರ ಶಾಪದಿಂದ ನಿಮಿರಾಜನಿಗೂ ಅದ್ಭುತ

*

ನೃಪಪುಂಗವಶಾಪಜಂ ದ್ವಿಜಸ್ಯ
ದ್ವಿಜಶಾಪಾಚ್ಚ ಯದದ್ಭುತಂ ನೃಪಸ್ಯ ॥ ೨೧

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತಪಂಚಾಶಃ ಸರ್ಗಃ

---

## ಅಷ್ಟಪಂಚಾಶಃ ಸರ್ಗಃ

### ಯಯಾತಿಶಾಪಃ

ಏವಂ ಬ್ರುವತಿ ರಾಮೇ ತು ಲಕ್ಷ್ಮಣಃ ಪರವೀರಹಾ ।
ಪ್ರತ್ಯುವಾಚ ಮಹಾತ್ಮಾನಂ ಜ್ವಲಂತಮಿವ ತೇಜಸಾ ॥ ೧

ಮಹದದ್ಭುತಮಾಶ್ಚರ್ಯಂ ವಿದೇಹಸ್ಯ ಪುರಾತನಮ್ ।
ನಿರ್ವೃತ್ತಂ ರಾಜಶಾರ್ದೂಲ ವಸಿಷ್ಠಸ್ಯ ನಿಮೇಃ ಸಹ ॥ ೨

ನಿಮಿಸ್ತು ಕ್ಷತ್ರಿಯಃ ಶೂರೋ ವಿಶೇಷೇಣ ಚ ದೀಕ್ಷಿತಃ ।
ನ ಕ್ಷಮಾಂ ಕೃತವಾನ್ ರಾಜಾ ವಸಿಷ್ಠಸ್ಯ ಮಹಾತ್ಮನಃ ॥ ೩

---

ವಾದ ಪುನರ್ಜನ್ಮವು ಹೇಗೆ ಸಂಭವಿಸಿತೆಂಬುದನ್ನೂ ಪೂರ್ಣವಾಗಿ ವಿವರಿಸಿದ್ದೇನೆ” (೨೧)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತೇಳನೆಯ ಸರ್ಗ

---

## ಸರ್ಗ ೫೮

### ಶುಕ್ರಾಚಾರ್ಯನಿಂದ ಯಯಾತಿರಾಜನಿಗೆ ಬಂದ ಶಾಪದ ವೃತ್ತಾಂತ

ಈ ಪ್ರಕಾರವಾಗಿ ಶ್ರೀರಾಮನು ಹೇಳಲು, ಲಕ್ಷ್ಮಣನು “ಮಹಾರಾಜ, ವಿದೇಹನಾದ ನಿಮಿರಾಜನಿಗೂ ವಸಿಷ್ಠಮುನಿಗಳಿಗೂ ಉಂಟಾದ ಈ ಪುರಾತನ ಪ್ರಸಂಗವು ಅಚ್ಚರಿಗಳಲ್ಲಿ ಅಚ್ಚರಿಯದು! ನಿಮಿಯಾದರೋ ಶೂರನಾದ ಕ್ಷತ್ರಿಯ. ಅದರಲ್ಲಿಯೂ ಯಜ್ಞಸಮಯದಲ್ಲಿ ದೀಕ್ಷಿತನಾಗಿದ್ದವನು

ಏವಮುಕ್ತಸ್ತು ತೇನಾಯಂ ಶ್ರೀಮಾನ್ ಕ್ಷತ್ರಿಯಪುಂಗವಃ ।
ಉವಾಚ ಲಕ್ಷ್ಮಣಂ ವಾಕ್ಯಂ ಸರ್ವಶಾಸ್ತ್ರವಿಶಾರದಮ್ ॥ ೪
ರಾಮೋ ರಮಯತಾಂ ಶ್ರೇಷ್ಠೋ ಭ್ರಾತರಂ ದೀಪ್ತತೇಜಸಮ್ ।
ನ ಸರ್ವತ್ರ ಕ್ಷಮಾ ವೀರ ಪುರುಷೇಷು ಪ್ರದೃಶ್ಯತೇ ॥ ೫
ಸೌಮಿತ್ರೇ ದುಃಸಹೋ ರೋಷೋ ಯಥಾ ಕ್ಷಾಂತೋ ಯಯಾತಿನಾ
ಸತ್ತ್ವಾನುಗಂ ಪುರಸ್ಕೃತ್ಯ ತಂ ನಿಬೋಧ ಸಮಾಹಿತಃ ॥ ೬
ನಹುಷಸ್ಯ ಸುತೋ ರಾಜಾ ಯಯಾತಿಃ ಪೌರವರ್ಧನಃ ।
ತಸ್ಯ ಭಾರ್ಯಾದ್ವಯಂ ಸೌಮ್ಯ ರೂಪೇಣಾಪ್ರತಿಮಂ ಭುವಿ ॥ ೭
ಏಕಾ ತು ತಸ್ಯ ರಾಜರ್ಷೇರ್ನಾಹುಷಸ್ಯ ಪುರಸ್ಕೃತಾ ।
ಶರ್ಮಿಷ್ಠಾ ನಾಮ ದೈತೇಯೀ ದುಹಿತಾ ವೃಷಪರ್ವಣಃ ॥ ೮
ಅನ್ಯಾ ತೂಶನಸಃ ಪತ್ನೀ ಯಯಾತೇಃ ಪುರುಷರ್ಷಭ ।
ನ ತು ಸಾ ದಯಿತಾ ರಾಜ್ಞೋ ದೇವಯಾನೀ ಸುಮಧ್ಯಮಾ ॥ ೯
ತಯೋಃ ಪುತ್ರೌ ತು ಸಂಭೂತೌ ರೂಪವಂತೌ ಸಮಾಹಿತೌ ।
ಶರ್ಮಿಷ್ಠಾಜನಯತ್ ಪೂರುಂ ದೇವಯಾನೀ ಯದುಂ ತದಾ ॥ ೧೦

---

ಅಂಥವನು ಮಹಾತ್ಮರಾದ ವಸಿಷ್ಠರ ವಿಷಯದಲ್ಲಿ ತಾಳ್ಮೆಯನ್ನು ತೋರಿಸದೆ ಹೋದನಲ್ಲ!" ಎಂದು ನುಡಿದನು (೧-೪). ಆಗ ರಾಘವನು ತಮ್ಮನನ್ನು ಕುರಿತು ಹೀಗೆಂದನು. "ಲಕ್ಷ್ಮಣ, ಎಲ್ಲರಿಗೂ ತಾಳ್ಮೆ ಇರುವುದಿಲ್ಲ. ಕೋಪವನ್ನು ತಡೆಯುವುದು ಕಷ್ಟ. ಆದರೆ ಯಯಾತಿರಾಜನೊಬ್ಬನು ಸಾತ್ತ್ವಿಕಮಾರ್ಗವನ್ನವಲಂಬಿಸಿ ತಾಳ್ಮೆಯನ್ನು ತಳೆದನು. ಆ ಕಥೆಯನ್ನು ಹೇಳುವೆನು. ನಾವಧಾನವಾಗಿ ಕೇಳು (೫-೬). ನಹುಷನ ಮಗ ಯಯಾತಿ. ಆ ರಾಜರ್ಷಿಗೆ ಸುಂದರಿಯರಾದ ಇಬ್ಬರು ಪತ್ನಿಯರಿದ್ದರು. ಅವರಲ್ಲಿ ಶರ್ಮಿಷ್ಠೆಯೆಂಬವಳು ಯಯಾತಿಗೆ ಪ್ರಿಯಳಾಗಿದ್ದಳು. ಆಕೆ ವೃಷಪರ್ವನೆಂಬ ದೈತ್ಯರಾಜನ ಮಗಳು (೭-೮). ಇನ್ನೊಬ್ಬಳು ಶುಕ್ರಾಚಾರ್ಯನ ಮಗಳು. ಅವಳ ಹೆಸರು ದೇವಯಾನಿ. ಆಕೆ ಯಯಾತಿರಾಜನಿಗೆ ಅಷ್ಟು ಪ್ರಿಯಳಾಗಿರಲಿಲ್ಲ. ಹೀಗಿರುವಾಗ ಆ ಈರ್ವರು ಪತ್ನಿಯರಲ್ಲಿ ರೂಪಶಾಲಿಗಳಾದ ಇಬ್ಬರು ಪುತ್ರರು ಜನಿಸಿದರು. ಶರ್ಮಿಷ್ಠೆಯ ಮಗ ಪೂರು. ದೇವಯಾನಿಯ ಮಗ

ಪೂರುಸ್ತು ದಯಿತೋ ರಾಜ್ಞೋ ಗುಣೈರ್ಮಾತೃಕೃತೇನ ಚ ।
ತತೋ ದುಃಖಸಮಾವಿಷ್ಟೋ ಯದುರ್ಮಾತರಮಬ್ರವೀತ್ ॥ ೧೧

ಭಾರ್ಗವಸ್ಯ ಕುಲೇ ಜಾತಾ ದೇವಸ್ಯಾಕ್ಲಿಷ್ಟಕರ್ಮಣಃ ।
ಸಹಸೇ ಹೃದ್ಗತಂ ದುಃಖಮವಮಾನಂ ಚ ದುಃಸಹಮ್ ॥ ೧೨

ಆವಾಂ ಚ ಸಹಿತೌ ದೇವಿ ಪ್ರವಿಶಾವ ಹುತಾಶನಮ್ ।
ರಾಜಾ ತು ರಮತಾಂ ಸಾರ್ಧಂ ದೈತ್ಯಪುತ್ರ್ಯಾ ಬಹುಕ್ಷಪಾಃ ॥ ೧೩

ಯದಿ ವಾ ಸಹನೀಯಂ ತೇ ಮಾಮನುಜ್ಞಾತುಮರ್ಹಸಿ ।
ಕ್ಷಮ ತ್ವಂ ನ ಕ್ಷಮಿಷ್ಯೇಽಹಂ ಮರಿಷ್ಯಾಮಿ ನ ಸಂಶಯಃ ॥ ೧೪

ಪುತ್ರಸ್ಯ ಭಾಷಿತಂ ಶ್ರುತ್ವಾ ಪರಮಾರ್ತಸ್ಯ ರೋದತಃ ।
ದೇವಯಾನೀ ತು ಸಂಕ್ರುದ್ಧಾ ಸಸ್ಮಾರ ಪಿತರಂ ತದಾ ॥ ೧೫

ಇಂಗಿತಂ ತದಭಿಜ್ಞಾಯ ದುಹಿತುರ್ಭಾರ್ಗವಸ್ತದಾ ।
ಆಗತಸ್ತ್ವರಿತಂ ತತ್ರ ದೇವಯಾನೀ ತು ಯತ್ರ ಸಾ ॥ ೧೬

---

ಯದು (೯-೧೦) ಪೂರುವು ತನ್ನ ಸದ್ಗುಣಗಳಿಂದಲೂ ತಾಯಿಯ ನಿಮಿತ್ತದಿಂದಲೂ ಯಯಾತಿಗೆ ಬಹಳ ಪ್ರಿಯನಾಗಿದ್ದನು ಅದರಿಂದ ಯದುವಿಗೆ ಬಹಳ ವ್ಯಥೆಯಾಯಿತು ಅವನು ತನ್ನ ತಾಯಿಯಾದ ದೇವಯಾನಿಯನ್ನು ಕುರಿತು “ಅಮ್ಮ, ಪುಣ್ಯಶಾಲಿಯಾದ ಆ ಭಾರ್ಗವನ ಕುಲದಲ್ಲಿ ಅವನಿಗೆ ಮಗಳಾಗಿ ಜನಿಸಿದವಳು ನೀನು ಮನಸ್ಸಿನಲ್ಲಿಯೇ ಈ ದುಃಖವನ್ನೂ ದುಸ್ಸಹವಾದ ಅವಮಾನವನ್ನೂ ಸಹಿಸಿಕೊಳ್ಳುತ್ತಿದ್ದೀಯೆ (೧೧-೧೨) ದೇವಿ, ನಾವಿಬ್ಬರೂ ಒಟ್ಟಿಗೆ ಬೆಂಕಿಯಲ್ಲಿ ಬಿದ್ದುಬಿಡೋಣ! ರಾಜನು ಆ ದೈತ್ಯಪುತ್ರಿಯೊಡನೆ ಸುಖವಾಗಿ ರಾತ್ರಿಗಳನ್ನು ಕಳೆಯುತ್ತಿರಲಿ! ನೀನು ಈ ಕಷ್ಟವನ್ನು ಸಹಿಸಿಕೊಂಡಿರುವೆಯಾದರೆ, ಬೆಂಕಿಯಲ್ಲಿ ಬೀಳಲು ನನಗಾದರೂ ಅನುಮತಿಯನ್ನು ಕೊಡು! ಬೇಕಾದರ ನೀನು ಸೈರಿಸಿಕೊ, ನಾನಂತೂ ಸೈರಿಸಲಾರೆ ನಾನು ಸಾಯುವುದು ನಿಶ್ಚಯ!” ಎಂದನು (೧೩-೧೪) ಹೀಗೆ ಅತ್ಯಂತ ದುಃಖದಿಂದ ಅಳುತ್ತ ಹೇಳಿದ ಯದುವಿನ ನುಡಿಯನ್ನು ಕೇಳಿ ದೇವಯಾನಿಗೆ ತಾಳ್ಮೆದಪ್ಪಿತು ಅವಳು ಕುಪಿತಳಾಗಿ ತನ್ನ ತಂದೆಯನ್ನು ಸ್ಮರಿಸಿಕೊಂಡಳು (೧೫) ಆಗ ಭೃಗುವಂಶಜಾತನಾದ

ದೃಷ್ಟ್ವಾ ಚಾಪ್ರಕೃತಿಸ್ಥಾಂ ತಾಮಪ್ರಹೃಷ್ಟಾಮಚೇತನಾಮ್ ।
ಪಿತಾ ದುಹಿತರಂ ವಾಕ್ಯಂ ಕಿಮೇತದಿತಿ ಚಾಬ್ರವೀತ್ ॥ ೧೭

ಪೃಚ್ಛಂತಮಸಕೃತ್ತಂ ವೈ ಭಾರ್ಗವಂ ದೀಪ್ತತೇಜಸಮ್ ।
ದೇವಯಾನೀ ತು ಸಂಕ್ರುದ್ಧಾ ಪಿತರಂ ವಾಕ್ಯಮಬ್ರವೀತ್ ॥ ೧೮

ಅಹಮಗ್ನಿಂ ವಿಷಂ ತೀಕ್ಷ್ಣಮಪೋ ವಾ ಮುನಿಸತ್ತಮ ।
ಭಕ್ಷಯಿಷ್ಯೇ ಪ್ರವೇಕ್ಷ್ಯಾಮಿ ನ ತು ಶಕ್ಷ್ಯಾಮಿ ಜೀವಿತುಮ್ ॥ ೧೯

ನ ಮಾಂ ತ್ವಮವಜಾನೀಷೇ ದುಃಖಿತಾಮವಮಾನಿತಾಮ್ ।
ವೃಕ್ಷಸ್ಯಾವಜ್ಞಯಾ ಬ್ರಹ್ಮನ್ ಛಿದ್ಯಂತೇ ವೃಕ್ಷಜೀವಿನಃ ॥ ೨೦

ಅವಜ್ಞಯಾ ಚ ರಾಜರ್ಷಿಃ ಪರಿಭೂಯ ಚ ಭಾರ್ಗವ ।
ಮಯ್ಯವಜ್ಞಾಂ ಪ್ರಯುಂಕ್ತೇ ಹಿ ನ ಚ ಮಾಂ ಬಹು ಮನ್ಯತೇ ॥

ತಸ್ಯಾಸ್ತದ್ವಚನಂ ಶ್ರುತ್ವಾ ಕೋಪೇನಾಭಿಪರಿಪ್ಲುತಃ ।
ವ್ಯಾಹರ್ತುಮುಪಚಕ್ರಾಮ ಭಾರ್ಗವೋ ನಹುಷಾತ್ಮಜಮ್ ॥ ೨೨

---

ಶುಕ್ರಾಚಾರ್ಯನು ಮಗಳ ಇಂಗಿತವನ್ನರಿತು ದೇವಯಾನಿಯಿದ್ದಲ್ಲಿಗೆ ತ್ವರೆಯಿಂದ ಬಂದನು ದೇವಯಾನಿಯು ಎಂದಿನಂತಿಲ್ಲದೆ ಹರ್ಷಹೀನಳಾಗಿಯೂ ಉದ್ವಿಗ್ನಚಿತ್ತಳಾಗಿಯೂ ಇರುವುದನ್ನು ಕಂಡು ಭಾರ್ಗವನು "ಮಗಳೆ, ಇದೇನು ?" ಎಂದು ಕೇಳಿದನು (೧೬-೧೭) ತೇಜೋನಿಧಿಯಾದ ಶುಕ್ರಾಚಾರ್ಯನು ಹೀಗೆ ಮತ್ತೆ ಮತ್ತೆ ಕೇಳಲಾಗಿ, ಕ್ರೋಧಗೊಂಡಿದ್ದ ದೇವಯಾನಿಯು "ತಂದೆಯೆ, ನಾನು ಅಗ್ನಿಯಲ್ಲಾದರೂ ಬೀಳುವೆನು, ಘೋರವಿಷವನ್ನಾದರೂ ಕುಡಿಯುವೆನು, ಇಲ್ಲವೆ, ನೀರಿಗಾದರೂ ಬಿದ್ದು ಸಾಯುವೆನು ! ಬದುಕಿರಲು ನನಗೆ ಸಾಧ್ಯವಿಲ್ಲ ! (೧೮-೧೯) ನನಗೆ ಎಷ್ಟು ದುಃಖವಾಗಿದೆ, ಎಷ್ಟು ಅವಮಾನವಾಗುತ್ತಿದೆ–ಎಂಬುದು ನಿನಗೆ ಗೊತ್ತಿಲ್ಲ ಮರವನ್ನು ಉಪೇಕ್ಷಿಸಿ ಹಿಂಸೆಪಡಿಸಿದರೆ ಮರವನ್ನಾಶ್ರಯಿಸಿಕೊಂಡಿರುವ ಹೂಹಣ್ಣುಗಳಿಗೂ ಹಕ್ಕಿಗಳಿಗೂ ಹಿಂಸೆಯಾಗುತ್ತದೆಯಲ್ಲವೆ ? ಮುನಿಶ್ರೇಷ್ಠ, ಮಹಾರಾಜನು ನಿನ್ನನ್ನು ಗಣನೆಗೆ ತೆಗೆದುಕೊಳ್ಳದೆ ಉಪೇಕ್ಷಿಸಿರುವುದರಿಂದ ನನ್ನನ್ನು ಕಡೆಗಣಿಸಿದ್ದಾನೆ ನನ್ನ ವಿಷಯದಲ್ಲಿ ಅವನಿಗೆ ಆದರವೇ ಇಲ್ಲ" ಎಂದು ಹೇಳಿದಳು (೨೦-೨೧) ಮಗಳ ಮಾತನ್ನು ಕೇಳಿ

ಯಸ್ಮಾನ್ಮಾಮವಜಾನೀಷೇ ನಾಹುಷ ತ್ವಂ ದುರಾತ್ಮವಾನ್ ।
ಜರಯಾ ಪರಯಾ ಜೀರ್ಣಃ ಶೈಥಿಲ್ಯಮುಪಯಾಸ್ಯಸಿ ॥ ೨೩

ಏವಮುಕ್ತ್ವಾ ದುಹಿತರಂ ಸಮಾಶ್ವಾಸ್ಯ ಚ ಭಾರ್ಗವಃ ।
ಪುನರ್ಜಗಾಮ ಬ್ರಹ್ಮರ್ಷಿರ್ಭವನಂ ಸ್ವಂ ಮಹಾಯಶಾಃ ॥ ೨೪

ಸ ಏವಮುಕ್ತ್ವಾ ದ್ವಿಜಪುಂಗವಾಗ್ರ್ಯಃ
ಸುತಾಂ ಸಮಾಶ್ವಾಸ್ಯ ಚ ದೇವಯಾನೀಮ್ ।
ಪುನರ್ಯಯೌ ಸೂರ್ಯಸಮಾನತೇಜಾ
ದತ್ತ್ವಾ ಚ ಶಾಪಂ ನಹುಷಾತ್ಮಜಾಯ ॥ ೨೫

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟಪಂಚಾಶಃ ಸರ್ಗಃ



ಭಾರ್ಗವನು ಕೋಪೋದ್ರಿಕ್ತನಾದನು ಆತನು ಯಯಾತಿಯನ್ನು ಸಂಬೋಧಿಸಿ "ಎಲೈ ನಹುಷಪುತ್ರ! ನನಗೆ ಅವಮಾನಮಾಡುವೆಯಾ? ದುರಾತ್ಮ! ದಾರುಣವಾದ ಮುಪ್ಪು ಬಂದು ನಿನ್ನನ್ನು ಕವಿಯಲಿ! ಮುದಿತನದಿಂದ ನಿನ್ನ ದೇಹವು ಶಿಥಿಲವಾಗಲಿ!" ಎಂದು ಶಪಿಸಿದನು ಅನಂತರ ಆ ಬ್ರಹ್ಮರ್ಷಿಯು ದೇವಯಾನಿಯನ್ನು ಸಂತೈಸಿ ತನ್ನ ಗೃಹಕ್ಕೆ ತೆರಳಿದನು (೨೨-೨೪) ಈ ರೀತಿಯಲ್ಲಿ ಸೂರ್ಯಸಮಾನತೇಜನಾದ ಆ ದ್ವಿಜಾಗ್ರಗಣ್ಯನು ಯಯಾತಿರಾಜನಿಗೆ ಶಾಪವನ್ನಿತ್ತು, ಮಗಳಾದ ದೇವಯಾನಿಗೆ ಸಮಾಧಾನದ ಮಾತನ್ನು ಹೇಳಿ ಹಿಂದಿರುಗಿದನು (೨೫)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತೆಂಟನೆಯ ಸರ್ಗ



## ಏಕೋನಷಷ್ಟಿತಮಃ ಸರ್ಗಃ

### ಪೂರುರಾಜ್ಯಾಭಿಷೇಕಃ

ಶ್ರುತ್ವಾ ತೂಶನಸಂ ಕ್ರುದ್ಧಂ ತದಾರ್ತೋ ನಹುಷಾತ್ಮಜಃ ।
ಜರಾಂ ಪರಮಿಕಾಂ ಪ್ರಾಪ್ಯ ಯದುಂ ವಚನಮಬ್ರವೀತ್ ॥ ೧
ಯದೋ ತ್ವಮಸಿ ಧರ್ಮಜ್ಞೋ ಮದರ್ಥಂ ಪ್ರತಿಗೃಹ್ಯತಾಮ್ ।
ಜರಾಂ ಪರಮಿಕಾಂ ಪುತ್ರ ಭೋಗೈ ರಂಸ್ಯೇ ಮಹಾಯಶಃ ॥ ೨
ನ ತಾವತ್ ಕೃತಕೃತ್ಯೋಽಸ್ಮಿ ವಿಷಯೇಷು ನರರ್ಷಭ ।
ಅನುಭೂಯ ತಥಾ ಕಾಮಂ ತತಃ ಪ್ರಾಪ್ಸ್ಯಾಮ್ಯಹಂ ಜರಾಮ್ ॥
ಯದುಸ್ತದ್ವಚನಂ ಶ್ರುತ್ವಾ ಪ್ರತ್ಯುವಾಚ ನರರ್ಷಭಮ್ ।
ಪುತ್ರಸ್ತೇ ದಯಿತಃ ಪೂರುಃ ಪ್ರತಿಗೃಹ್ಣಾತು ವೈ ಜರಾಮ್ ॥ ೪
ಬಹಿಷ್ಕೃತೋಽಹಮರ್ಥೇಷು ಸಂನಿಕರ್ಷಾಚ್ಚ ಪಾರ್ಥಿವ ।
ಪ್ರತಿಗೃಹ್ಣಾತು ವೈ ರಾಜನ್ ಕಃ ಸಹಾಶ್ನಾತಿ ಭೋಜನಮ್ ॥ ೫

## ಸರ್ಗ ೫೯

### ಪುರುವಿನಿಂದ ಯಯಾತಿಗೆ ತಾರುಣ್ಯಪ್ರದಾನ ಪುರುವಿನ ಪಟ್ಟಾಭಿಷೇಕ ಯದುವಿಗೆ ಶಾಪ

ಶುಕ್ರಾಚಾರ್ಯನು ಕ್ರುದ್ಧನಾಗಿ ಶಪಿಸಿದ್ದನ್ನು ಕೇಳಿ, ಯಯಾತಿಯು ಶೋಕಾರ್ತನಾದನು ಅವನಿಗೆ ಘೋರವಾದ ಮುಪ್ಪು ಬಂದಿತು ಆಗ ಯದುವನ್ನು ಕುರಿತು "ವತ್ಸ–ಯದು, ನೀನು ಧರ್ಮಜ್ಞನಾಗಿರುವೆ ನನಗೋಸ್ಕರ ಈ ಮುಪ್ಪನ್ನು ಸ್ವೀಕರಿಸು! ನಾನು ವಿಷಯಭೋಗಗಳನ್ನನುಭವಿಸುತ್ತ ಸಂತೋಷಿಸಬೇಕೆಂದಿದ್ದೇನೆ (೧-೨) ನನಗೆ ವಿಷಯಸುಖದಲ್ಲಿ ಆಸೆಯು ಇನ್ನೂ ನೀಗಿಲ್ಲ ಯಥೇಚ್ಛೆಯಾಗಿ ಸುಖವನ್ನನುಭವಿಸಿದ ಮೇಲೆ ಈ ಮುಪ್ಪನ್ನು ಮತ್ತೆ ಸ್ವೀಕರಿಸುವೆನು!" ಎಂದನು ಅದಕ್ಕೆ ಯದು ತಂದೆಯನ್ನು ನೋಡಿ "ನಿನಗೆ ಪ್ರಿಯನಾದ ಪುತ್ರನು ಪೂರು ಅಲ್ಲವೆ? ಅವನೇ ಮುಪ್ಪನ್ನು ಸ್ವೀಕರಿಸಲಿ! (೩-೪) ಮಹಾರಾಜ, ಧನಭೋಗ

ತಸ್ಯ ತದ್ವಚನಂ ಶ್ರುತ್ವಾ ರಾಜಾ ಪೂರುಮಥಾಬ್ರವೀತ್ |
ಇಯಂ ಜರಾ ಮಹಾಬಾಹೋ ಮದರ್ಥಂ ಪ್ರತಿಗೃಹ್ಯತಾಮ್ || ೬

ನಾಹುಷೇಣೈವಮುಕ್ತಸ್ತು ಪೂರುಃ ಪ್ರಾಂಜಲಿರಬ್ರವೀತ್ |
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಶಾಸನೇಽಸ್ಮಿ ತವ ಸ್ಥಿತಃ || ೭

ಪೂರೋರ್ವಚನಮಾಜ್ಞಾಯ ನಾಹುಷಃ ಪರಯಾ ಮುದಾ |
ಪ್ರಹರ್ಷಮತುಲಂ ಲೇಭೇ ಜರಾಂ ಸಂಕ್ರಾಮಯಚ್ಚ ತಾಮ್ || ೮

ತತಃ ಸ ರಾಜಾ ತರುಣಃ ಪ್ರಾಪ್ಯ ಯಜ್ಞಾನ್ ಸಹಸ್ರಶಃ |
ಬಹುವರ್ಷಸಹಸ್ರಾಣಿ ಪಾಲಯಾಮಾಸ ಮೇದಿನೀಮ್ || ೯

ಅಥ ದೀರ್ಘಸ್ಯ ಕಾಲಸ್ಯ ರಾಜಾ ಪೂರುಮಥಾಬ್ರವೀತ್ |
ಆನಯಸ್ವ ಜರಾಂ ಪುತ್ರ ನ್ಯಾಸಂ ನಿರ್ಯಾತಯಸ್ವ ಮೇ || ೧೦

ನ್ಯಾಸಭೂತಾ ಮಯಾ ಪುತ್ರ ತ್ವಯಿ ಸಂಕ್ರಾಮಿತಾ ಜರಾ |
ತಸ್ಮಾತ್ ಪ್ರತಿಗ್ರಹೀಷ್ಯಾಮಿ ತಾಂ ಜರಾಂ ಮಾ ವ್ಯಥಾಂ ಕೃಥಾಃ ||

---

ದಿಂದ ನನ್ನನ್ನು ದೂರಮಾಡಿದ್ದೀಯೆ ನಿನ್ನ ಹತ್ತಿರವೂ ನನ್ನನ್ನು ಸೇರಿಸುತ್ತಿಲ್ಲ ಯಾರೊಡನೆ ಕುಳಿತು ತಿಂದು ಸಂತೋಷಪಡುವೆಯೋ ಅವರು ಮುಪ್ಪನ್ನು ಸ್ವೀಕರಿಸಲಿ!" ಎಂದು ಉತ್ತರಕೊಟ್ಟನು (೫) ಯದುವಿನ ಆ ಮಾತನ್ನು ಕೇಳಿ ಯಯಾತಿಯು ಪೂರುವನ್ನು ಕರೆದು "ಓ ಮಹಾಬಾಹು-ಪೂರು, ನನಗೋಸ್ಕರ ಈ ಮುಪ್ಪನ್ನು ವಹಿಸಿಕೊ" ಎಂದನು ಆಗ ಪೂರು ತಂದೆಗೆ ಕೈಮುಗಿದು "ಮಹಾರಾಜ, ನಾನು ಧನ್ಯನಾದೆ, ಅನುಗೃಹೀತನಾದೆ ನಿನ್ನ ಆಜ್ಞೆಯನ್ನು ಪಾಲಿಸುತ್ತೇನೆ" ಎಂದು ನುಡಿದನು (೬-೭). ಪೂರುವಿನ ನುಡಿಯನ್ನು ಕೇಳಿ ಯಯಾತಿಗೆ ಪರಮಾನಂದವಾಯಿತು ಆತನು ಯೋಗಬಲದಿಂದ ತನ್ನ ಮುಪ್ಪನ್ನು ಮಗನಿಗೆ ದಾಟಿಸಿದನು. ಅನಂತರ ತಾನು ಯುವಕರಾಜನಾಗಿ ಸಾವಿರಾರು ಯಜ್ಞಗಳನ್ನು ನಡೆಸಿ ಬಹುವರ್ಷಗಳವರೆಗೆ ಭೂಮಿಯನ್ನು ಪಾಲಿಸಿದನು (೮-೯) ದೀರ್ಘಕಾಲವು ಕಳೆದಮೇಲೆ ಯಯಾತಿರಾಜನು ಪೂರುವನ್ನು ಕುರಿತು "ವತ್ಸ, ನಿನ್ನಲ್ಲಿ ನ್ಯಾಸವಾಗಿಟ್ಟಿದ್ದ ಮುಪ್ಪು ನನಗೆ ಬರಲಿ ಅದನ್ನು ಹಿಂದಿರುಗಿಸು ಮುಪ್ಪನ್ನು ನಿನಗೆ ಬದಲಾಯಿಸಿ ಕೊಟ್ಟಿದ್ದೆನು. ಈಗ ಅದನ್ನು ಸ್ವೀಕರಿಸುತ್ತೇನೆ

ಪ್ರೀತಶ್ಚಾಸ್ಮಿ ಮಹಾಬಾಹೋ ಶಾಸನಸ್ಯ ಪ್ರತಿಗ್ರಹಾತ್ ।
ತ್ವಾಂ ಚಾಹಮಭಿಷೇಕ್ಷ್ಯಾಮಿ ಪ್ರೀತಿಯುಕ್ತೋ ನರಾಧಿಪಮ್ ॥

ಏವಮುಕ್ತ್ವಾ ಸುತಂ ಪೂರುಂ ಯಯಾತಿರ್ನಹುಷಾತ್ಮಜಃ ।
ದೇವಯಾನೀಸುತಂ ಕ್ರುದ್ಧೋ ರಾಜಾ ವಾಕ್ಯಮುವಾಚ ಹ ॥ ೧೩

ರಾಕ್ಷಸಸ್ತ್ವಂ ಮಯಾ ಜಾತಃ ಪುತ್ರರೂಪೋ ದುರಾಸದಃ ।
ಪ್ರತಿಹಂಸಿ ಮಮಾಜ್ಞಾಂ ಯತ್ ಪ್ರಜಾರ್ಥೇ ವಿಫಲೋ ಭವ ॥ ೧೪

ಪಿತರಂ ಗುರುಭೂತಂ ಮಾಂ ಯಸ್ಮಾತ್ತ್ವಮವಮನ್ಯಸೇ ।
ರಾಕ್ಷಸಾನ್ ಯಾತುಧಾನಾಂಸ್ತ್ವಂ ಜನಯಿಷ್ಯಸಿ ದಾರುಣಾನ್ ॥ ೧೫

ನ ತು ಸೋಮಕುಲೋತ್ಪನ್ನೇ ವಂಶೇ ಸ್ಥಾಸ್ಯತಿ ದುರ್ಮತೇಃ ।
ವಂಶೋಽಪಿ ಭವತಸ್ತುಲ್ಯೋ ದುರ್ವಿನೀತೋ ಭವಿಷ್ಯತಿ ॥ ೧೬

ತಮೇವಮುಕ್ತ್ವಾ ರಾಜರ್ಷಿಃ ಪೂರುಂ ರಾಜ್ಯವಿವರ್ಧನಮ್ ।
ಅಭಿಷೇಕೇಣ ಸಂಪೂಜ್ಯ ಆಶ್ರಮಂ ಪ್ರವಿವೇಶ ಹ ॥ ೧೭

---

ಇದುವರೆಗೆ ಮುಪ್ಪನ್ನು ಅನುಭವಿಸಿದೆನೆಂದು ವ್ಯಥೆಪಡಬೇಡ (೧೦-೧೧). ನನ್ನ ಆಜ್ಞೆಯನ್ನು ನಡೆಸಿದ್ದರಿಂದ ಸಂಪ್ರೀತನಾಗಿದ್ದೇನೆ ಸಂತೋಷದಿಂದ ನಿನಗೆ ಈ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡುವೆನು" ಎಂದನು (೧೨) ಹೀಗೆ ನಹುಷಾತ್ಮಜನಾದ ಯಯಾತಿಯು ಪೂರುವಿಗೆ ಹೇಳಿ, ದೇವಯಾನೀ ಸುತನಾದ ಯದುವನ್ನು ಕುರಿತು ರೋಷದಿಂದ "ಎಲೈ ಯದು, ನೀನೊಬ್ಬ ರಾಕ್ಷಸ! ದುರುಳನಾದ ನೀನು ಪುತ್ರರೂಪದಿಂದ ನನಗೆ ಜನಿಸಿರುವೆ ನನ್ನ ಆಜ್ಞೆಯನ್ನು ಉಲ್ಲಂಘಿಸುವೆಯಾದ್ದರಿಂದ ಪ್ರಜಾಪಾಲನ ಕಾರ್ಯವು ನಿನಗೆ ದೊರೆಯದಿರಲಿ! (೧೩-೧೪). ತಂದೆಯೂ ಗುರುವೂ ಆದ ನನಗೆ ಅವಮಾನ ಮಾಡಿದ್ದೀಯೆ ಆದ್ದರಿಂದ ನಿನಗೆ ಕ್ರೂರಾತ್ಮರಾದ ರಾಕ್ಷಸರೂ ಯಾತುಧಾನರೂ ಮಕ್ಕಳಾಗಿ ಜನಿಸಲಿ! ದುರ್ಬುದ್ಧಿಯಾದ ನಿನ್ನ ಸಂತಾನವು ಸೋಮಕುಲೋತ್ಪನ್ನವಾದ ಈ ವಂಶದಲ್ಲಿ ಪ್ರತಿಷ್ಠೆಯನ್ನು ಗಳಿಸುವುದಿಲ್ಲ ನಿನ್ನಂತೆಯೇ ನಿನ್ನ ವಂಶೀಯರೂ ಉದ್ಧತರಾಗುವರು!" ಎಂದು ಶಪಿಸಿದನು (೧೫-೧೬) ಅನಂತರ ಆ ರಾಜರ್ಷಿಯು ಪೂರುವಿಗೆ ಪಟ್ಟಾಭಿಷೇಕವನ್ನು

ತತಃ ಕಾಲೇನ ಮಹತಾ ದಿಷ್ಟಾಂತಮುಪಜಗ್ಮಿವಾನ್ ।
ತ್ರಿದಿವಂ ಸಂಗತೋ ರಾಜಾ ಯಯಾತಿರ್ನಹುಷಾತ್ಮಜಃ ॥ ೧೮

ಪೂರುಶ್ಚಕಾರ ತದ್ರಾಜ್ಯಂ ಧರ್ಮೇಣ ಮಹತಾ ವೃತಃ ।
ಪ್ರತಿಷ್ಠಾನೇ ಪುರವರೇ ಕಾಶೀರಾಜ್ಯೇ ಮಹಾಯಶಾಃ ॥ ೧೯

ಯದುಸ್ತು ಜನಯಾಮಾಸ ಯಾತುಧಾನಾನ್ ಸಹಸ್ರಶಃ ।
ಪುರೇ ಕ್ರೌಂಚವನೇ ದುರ್ಗೇ ರಾಜವಂಶಬಹಿಷ್ಕೃತಃ ॥ ೨೦

ಏಷ ತೂಶನಸಾ ಮುಕ್ತಃ ಶಾಪೋತ್ಸರ್ಗೋ ಯಯಾತಿನಾ ।
ಧಾರಿತಃ ಕ್ಷತ್ರಧರ್ಮೇಣ ಯನ್ನಿಮಿಶ್ಚ ನ ಚಕ್ಷಮೇ ॥ ೨೧

ಏತತ್ತೇ ಸರ್ವಮಾಖ್ಯಾತಂ ದರ್ಶನಂ ಸರ್ವಕಾರಿಣಾಮ್ ।
ಅನುವರ್ತಾಮಹೇ ಸೌಮ್ಯ ದೋಷೋ ನ ಸ್ಯಾದ್ಯಥಾ ನೃಗೇ ॥ ೨೨

ಇತಿ ಕಥಯತಿ ರಾಮೇ ಚಂದ್ರತುಲ್ಯಾನನೇ ಚ
ಪ್ರವಿರಲತರತಾರಂ ವ್ಯೋಮ ಜಜ್ಞೇ ತದಾನೀಮ್ ।

---

ಮಾಡಿ ತಪಸ್ಸಿಗಾಗಿ ಆಶ್ರಮಕ್ಕೆ ತೆರಳಿದನು ಅಲ್ಲಿ ಬಹಳ ಕಾಲವಾದಮೇಲೆ ದೈವಾಧೀನನಾಗಿ ಸ್ವರ್ಗವನ್ನಡರಿದನು (೧೭-೧೮) ಪೂರುವು ಕೀರ್ತಿಶಾಲಿಯಾಗಿ ಕಾಶೀರಾಜ್ಯದ ಪ್ರತಿಷ್ಠಾನವೆಂಬ ನಗರದಲ್ಲಿ ಧರ್ಮದಿಂದ ರಾಜ್ಯವನ್ನಾಳಿದನು ಯದುವು ರಾಜವಂಶದಿಂದ ಬಹಿಷ್ಕೃತನಾಗಿ ನಗರದಲ್ಲಿಯೂ ದುರ್ಗಮವಾದ ಕ್ರೌಂಚವನದಲ್ಲಿಯೂ ಇದ್ದನು ಅವನಿಗೆ ಜನಿಸಿದ ಮಕ್ಕಳು ರಾಕ್ಷಸ ಸ್ವಭಾವದವರಾದರು (೧೯-೨೦). ಹೀಗೆ ಶುಕ್ರಾಚಾರ್ಯನ ಶಾಪವನ್ನು ಯಯಾತಿಯು ಕ್ಷಾತ್ರಧರ್ಮವನ್ನನುಸರಿಸಿ ಸಹಿಸಿಕೊಂಡನು. ನಿಮಿಯು ಮಾತ್ರ ವಸಿಷ್ಠರ ಶಾಪವನ್ನು ಸಹಿಸಿಕೊಳ್ಳಲಿಲ್ಲ ಲಕ್ಷ್ಮಣ, ಹೀಗೆ ಶಾಪ, ತಾಳ್ಮೆ ಮುಂತಾದ ಪ್ರಸಂಗವನ್ನು ನಿನಗೆ ಹೇಳಿದೆನು ಒಟ್ಟಿನಲ್ಲಿ ಈಗ ಕಾರ್ಯಾಪೇಕ್ಷಿಗಳಾದ ಜನರೆಲ್ಲರನ್ನೂ ಸಂದರ್ಶಿಸಿ ಅವರ ಕಾರ್ಯಗಳನ್ನು ನಡೆಸೋಣ ಸೌಮ್ಯ, ನೃಗರಾಜನಲ್ಲಿ ನಡೆದ ತಪ್ಪು ನಮ್ಮಲ್ಲಿ ಆಗದಿರಲಿ" ಎಂದನು (೨೧-೨೨) ಶ್ರೀರಾಮಚಂದ್ರನು ಹೀಗೆ ಹೇಳುತ್ತಿರಲಾಗಿ, ಗಗನದಲ್ಲಿ ಮಿನುಗುವ ತಾರೆಗಳು ವಿರಳವಾದವು ಅರುಣೋದಯ

ಅರುಣಕಿರಣರಕ್ತಾ ದಿಗ್ಬಭೌ ಚೈವ ಪೂರ್ವಾ
ಕುಸುಮರಸವಿಮುಕ್ತಂ ವಸ್ತ್ರಮಾಕುಂಠಿತೇವ ॥ ೨೩

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋನಷಷ್ಟಿತಮಃ ಸರ್ಗಃ

---

## ಷಷ್ಟಿತಮಃ ಸರ್ಗಃ

### ಭಾರ್ಗವಚ್ಯವನಾದ್ಯಾಗಮನಮ್

ತಯೋಃ ಸಂವದತೋರೇವಂ ರಾಮಲಕ್ಷ್ಮಣಯೋಸ್ತದಾ ।
ವಾಸಂತಿಕೀ ನಿಶಾ ಪ್ರಾಪ್ತಾ ನ ಶೀತಾ ನ ಚ ಘರ್ಮದಾ ॥ ೧

ತತಃ ಪ್ರಭಾತೇ ವಿಮಲೇ ಕೃತಪೌರ್ವಾಹ್ಣಿಕಕ್ರಿಯಃ ।
ಅಭಿಚಕ್ರಾಮ ಕಾಕುತ್ಸ್ಥೋ ದರ್ಶನಂ ಪೌರಕಾರ್ಯವಿತ್ ॥ ೨

---

ವಾಯಿತು ಅರುಣಕಿರಣಗಳಿಂದ ರಕ್ತವರ್ಣಳಾದ ಪೂರ್ವದಿಗಂಗನೆಯು ಕುಸುಮರಸದಲ್ಲದ್ದಿದ ಸೀರೆಯನ್ನುಟ್ಟಳೋ ಎಂಬಂತೆ ರಂಜಿಸಿದಳು (೨೩)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಐವತ್ತೊಂಬತ್ತನೆಯ ಸರ್ಗ

---

## ಸರ್ಗ ೬೦

### ಭಾರ್ಗವ, ಚ್ಯವನ–ಮುಂತಾದ ಮುನಿಗಳು ಶ್ರೀರಾಮನ ಬಳಿಗೆ ಆಗಮಿಸುವುದು

ಹೀಗೆ ಶ್ರೀರಾಮಲಕ್ಷ್ಮಣರು ಸಂಭಾಷಿಸುತ್ತಿರುವಾಗ ರಾತ್ರಿಯಾಯಿತು ಅದು ವಸಂತಋತುವಿನ ರಾತ್ರಿಯಾದ್ದರಿಂದ ಚಳಿ-ಸೆಕೆಗಳಿಲ್ಲದೆ ಸಮಶೀತೋಷ್ಣವಾಗಿತ್ತು ರಾತ್ರಿ ಕಳೆದು ಸುಪ್ರಭಾತವಾಗಲು ಕಾಕುತ್ಸ್ಥನು ಪೂರ್ವಾಹ್ಣದ ಧಾರ್ಮಿಕ ವಿಧಿಗಳನ್ನು ನೆರವೇರಿಸಿ, ಪೌರಕಾರ್ಯದ ಸಮಯವು ಪ್ರಾಪ್ತವಾಯಿತೆಂದರಿತು ದರ್ಶನವನ್ನೀಯುವುದಕ್ಕಾಗಿ ಸಭಾಂಗಣಕ್ಕೆ ಆಗಮಿಸಿ

ತತಃ ಸುಮಂತ್ರಸ್ತ್ವಾಗಮ್ಯ ರಾಘವಂ ವಾಕ್ಯಮಬ್ರವೀತ್ ।
ಏತೇ ಪ್ರತಿಹತಾ ರಾಜನ್ ದ್ವಾರಿ ತಿಷ್ಠಂತಿ ತಾಪಸಾಃ ॥ ೩
ಭಾರ್ಗವಂ ಚ್ಯವನಂ ಚೈವ ಪುರಸ್ಕೃತ್ಯ ಮಹರ್ಷಯಃ ।
ದರ್ಶನಂ ತೇ ಮಹಾರಾಜ ಚೋದಯಂತಿ ಕೃತತ್ವರಾಃ ॥ ೪
ಪ್ರೀಯಮಾಣಾ ನರವ್ಯಾಘ್ರ ಯಮುನಾತೀರವಾಸಿನಃ ।
ತಸ್ಯ ತದ್ವಚನಂ ಶ್ರುತ್ವಾ ರಾಮಃ ಪ್ರೋವಾಚ ಧರ್ಮವಿತ್ ॥ ೫
ಪ್ರವೇಶ್ಯಂತಾಂ ಮಹಾಭಾಗಾ ಭಾರ್ಗವಪ್ರಮುಖಾ ದ್ವಿಜಾಃ ।
ರಾಜ್ಞಸ್ತ್ವಾಜ್ಞಾಂ ಪುರಸ್ಕೃತ್ಯ ದ್ವಾಃಸ್ಥೋ ಮೂರ್ಧ್ನಿ ಕೃತಾಂಜಲಿಃ ॥
ಪ್ರವೇಶಯಾಮಾಸ ತದಾ ತಾಪಸಾನ್ ಸುದುರಾಸದಾನ್ ।
ಶತಂ ಸಮಧಿಕಂ ತತ್ರ ದೀಪ್ಯಮಾನಂ ಸ್ವತೇಜಸಾ ॥ ೭
ಪ್ರವಿಷ್ಟಂ ರಾಜಭವನಂ ತಾಪಸಾನಾಂ ಮಹಾತ್ಮನಾಮ್ ।
ತೇ ದ್ವಿಜಾಃ ಪೂರ್ಣಕಲಶೈಃ ಸರ್ವತೀರ್ಥಾಂಬುಸತ್ಕೃತೈಃ ॥ ೮
ಗೃಹೀತ್ವಾ ಫಲಮೂಲಂ ಚ ರಾಮಸ್ಯಾಭ್ಯಾಹರನ್ ಬಹು ।
ಪ್ರತಿಗೃಹ್ಯ ತು ತತ್ ಸರ್ವಂ ರಾಮಃ ಪ್ರೀತಿಪುರಸ್ಕೃತಃ ॥ ೯

---

ದನು (೧-೨) ಆಗ ಸುಮಂತ್ರನು ಬಂದು "ಮಹಾರಾಜ, ಯಾವುದೋ ತೊಂದರೆಗೊಳಗಾದ ತಾಪಸರು ಬಂದು ಅರಮನೆಯ ಬಾಗಿಲಲ್ಲಿ ನಿಂತಿದ್ದಾರೆ. ಭಾರ್ಗವರನ್ನೂ ಚ್ಯವನರನ್ನೂ ಮುಂದಿಮಾಡಿಕೊಂಡು ಬಂದಿರುವ ಆ ಋಷಿಗಳು ರಾಜದರ್ಶನಕ್ಕಾಗಿ ತ್ವರಪಡಿಸುತ್ತಿದ್ದಾರೆ (೩-೪) ಅವರಿಗೆ ನಿನ್ನಲ್ಲಿ ಪ್ರೀತಿಯುಂಟು ಅವರು ಯಮುನಾತೀರವಾಸಿಗಳಾದ ಮುನಿಗಳು" ಎಂದು ನಿವೇದಿಸಿದನು ಧರ್ಮನಿಷ್ಠನಾದ ಶ್ರೀರಾಮನು "ಭಾರ್ಗವಾದಿ ಮಹಾಭಾಗರನ್ನು ಒಳಗೆ ಕರೆದುಕೊಂಡು ಬಾ" ಎಂದು ದ್ವಾರಪಾಲನಿಗೆ ಆಜ್ಞಾಪಿಸಿದನು (೫-೬) ಒಡನೆಯೇ ದ್ವಾರಪಾಲನು ಹೋಗಿ ಶಿರಸ್ಸಿನಮೇಲೆ ಕೈಯಿಟ್ಟುಕೊಂಡು ವಂದಿಸಿ ತೇಜಸ್ವಿಗಳಾದ ಆ ತಾಪಸರನ್ನು ಕರೆತಂದನು ಮಹಾತ್ಮರಾದ ಆ ತಪಸ್ವಿಗಳ ಸಂಖ್ಯೆ ನೂರಕ್ಕಿಂತ ಹೆಚ್ಚಾಗಿತ್ತು ಆ ದ್ವಿಜರು ತೀರ್ಥಜಲದಿಂದ ತುಂಬಿದ ಪೂರ್ಣಕಲಶಗಳೊಡನೆ ಫಲಮೂಲಗಳನ್ನು ತಂದು ರಾಜನಿಗೆ ಅರ್ಪಿಸಿದರು ಶ್ರೀರಾಮನು ಅದೆಲ್ಲವನ್ನೂ ಪ್ರೀತಿ

ತೀರ್ಥೋದಕಾನಿ ಸರ್ವಾಣಿ ಫಲಾನಿ ವಿವಿಧಾನಿ ಚ ।
ಉವಾಚ ಚ ಮಹಾಬಾಹುಃ ಸರ್ವಾನೇವ ಮಹಾಮುನೀನ್ ॥ ೧೦

ಇಮಾನ್ಯಾಸನಮುಖ್ಯಾನಿ ಯಥಾರ್ಹಮುಪವಿಶ್ಯತಾಮ್ ।
ರಾಮಸ್ಯ ಭಾಷಿತಂ ಶ್ರುತ್ವಾ ಸರ್ವ ಏವ ಮಹರ್ಷಯಃ ॥ ೧೧

ಬೃಸೀಷು ರುಚಿರಾಖ್ಯಾಸು ನಿಷೇದುಃ ಕಾಂಚನೀಷು ತೇ ।
ಉಪವಿಷ್ಟಾನೃಷೀಂಸ್ತತ್ರ ದೃಷ್ಟ್ವಾ ಪರಪುರಂಜಯಃ ॥ ೧೨

ಪ್ರಯತಃ ಪ್ರಾಂಜಲಿರ್ಭೂತ್ವಾ ರಾಘವೋ ವಾಕ್ಯಮಬ್ರವೀತ್ ।
ಕಿಮಾಗಮನಕಾರ್ಯಂ ವಃ ಕಿಂ ಕರೋಮಿ ಸಮಾಹಿತಃ ॥ ೧೩

ಆಜ್ಞಾಪ್ಯೋಽಹಂ ಮಹರ್ಷೀಣಾಂ ಸರ್ವಕಾಮಕರಃ ಸುಖಮ್ ।
ಇದಂ ರಾಜ್ಯಂ ಚ ಸಕಲಂ ಜೀವಿತಂ ಚ ಹೃದಿ ಸ್ಥಿತಮ್ ॥ ೧೪

ಸರ್ವಮೇತದ್ದ್ವಿಜಾರ್ಥಂ ಮೇ ಸತ್ಯಮೇತದ್ಬ್ರವೀಮಿ ವಃ ।
ತಸ್ಯ ತದ್ವಚನಂ ಶ್ರುತ್ವಾ ಸಾಧುಕಾರೋ ಮಹಾನಭೂತ್ ॥ ೧೫

ಋಷೀಣಾಮುಗ್ರತಪಸಾಂ ಯಮುನಾತೀರವಾಸಿನಾಮ್ ।
ಊಚುಶ್ಚ ತೇ ಮಹಾತ್ಮಾನೋ ಹರ್ಷೇಣ ಮಹತಾ ವೃತಾಃ ॥ ೧೬

---

ಯಿಂದ ಸ್ವೀಕರಿಸಿದನು (೭-೯) ಅನಂತರ ಆ ವೀರನು ಮಹಾಮುನಿಗಳನ್ನು ನೋಡಿ "ಮಹರ್ಷಿಗಳೆ, ಈ ಪೀಠಗಳಲ್ಲಿ ಯಥೋಚಿತವಾಗಿ ಕುಳಿತು ಕೊಳ್ಳಿರಿ" ಎಂದನು ಋಷಿಗಳು ಚಾಪೆ ಮತ್ತು ಅಜಿನಗಳನ್ನು ಹಾಸಿದ ಸುವರ್ಣಮಯ ಪೀಠಗಳಲ್ಲಿ ಕುಳಿತರು (೧೦-೧೨) ಆಗ ರಾಘವನು ಪ್ರಾಂಜಲಿಯಾಗಿ "ಮಹಾತ್ಮರ, ತಾವು ಆಗಮಿಸಿದ ಕಾರ್ಯವಾವುದು? ನನ್ನಿಂದೇನಾಗಬೇಕು? ತಮ್ಮ ಇಷ್ಟವನ್ನು ನೆರವೇರಿಸುವೆನು ಆಜ್ಞ ಯಾಗಲಿ ಈ ನನ್ನ ಸಕಲ ರಾಜ್ಯವೂ ನನ್ನ ಜೀವಿತವೂ ದ್ವಿಜರಿಗೋಸ್ಕರವೇ ಇದು ಸತ್ಯ" ಎಂದು ನಿವೇದಿಸಿದನು (೧೩-೧೪) ಅವನ ನುಡಿಯನ್ನು ಕೇಳಿ ಆ ಋಷಿಗಳು 'ಸಾಧು, ಸಾಧು!' ಎಂದು ಸಂತೋಷದಿಂದ ಉದ್ಗರಿಸಿದರು ಯಮುನಾತೀರವಾಸಿಗಳಾದ ಆ ಮಹಾತ್ಮರು "ನರಶ್ರೇಷ್ಠ, ಇಂತಹ ನುಡಿ ನಿನ್ನೊಬ್ಬನಿಗೆ ಯುಕ್ತವಾಗಿದೆ. ನಿನಗೆ ಮೀಸಲಾಗಿದೆ. ಇನ್ನೊಬ್ಬನು

ಉಪಪನ್ನಂ ನರಶ್ರೇಷ್ಠ ತವೈವ ಭುವಿ ನಾನ್ಯತಃ ।
ಬಹವಃ ಪಾರ್ಥಿವಾ ರಾಜನ್ನತಿಕ್ರಾಂತಾ ಮಹಾಬಲಾಃ ॥ ೧೭

ಕಾರ್ಯಸ್ಯ ಗೌರವಂ ಮತ್ವಾ ಪ್ರತಿಜ್ಞಾಂ ನಾಭ್ಯರೋಚಯನ್ ॥

ತ್ವಯಾ ಪುನರ್ಬ್ರಾಹ್ಮಣಗೌರವಾದಿಯಂ
ಕೃತಾ ಪ್ರತಿಜ್ಞಾ ಹ್ಯನವೇಕ್ಷ್ಯ ಕಾರಣಮ್ ।
ತತಶ್ಚ ಕರ್ತಾ ಹ್ಯಸಿ ನಾತ್ರ ಸಂಶಯೋ ।
ಮಹಾಭಯಾತ್ತ್ರಾತುಮೃಷೀಂಸ್ತ್ವಮರ್ಹಸಿ ॥ ೧೮

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಷ್ಟಿತಮಃ ಸರ್ಗಃ



ಹೀಗೆ ನುಡಿಯಲಾರ ಬಲಾಢ್ಯರಾದ ಎಷ್ಟೋ ಮಂದಿ ರಾಜರು ಗತಿಸಿ ಹೋದರು ಕಾರ್ಯದ ಗುರುತ್ತ್ವವನ್ನರಿತು ಯಾರೂ ಅದನ್ನು ಸಾಧಿಸಿ ಕೊಡುತ್ತೇವೆಂದು ಮಾತು ಕೊಡಲಿಲ್ಲ (೧೫-೧೭) ನೀನಾದರೋ ಬ್ರಾಹ್ಮಣರಲ್ಲಿರುವ ಗೌರವಬುದ್ಧಿಯಿಂದ ನಮ್ಮ ಭಯಕಾರಣವೇನೆಂಬುದನ್ನು ಸಹ ಕೇಳದ, ನೆರವೇರಿಸುವೆನೆಂದು ಮಾತುಕೊಟ್ಟಿದ್ದೀಯೆ ಆದ್ದರಿಂದ ನೀನು ಈ ಕಾರ್ಯವನ್ನು ಸಾಧಿಸುವುದು ನಿಶ್ಚಯ ಸಂಶಯವೇ ಇಲ್ಲ ಋಷಿಗಳಿಗೆ ಬಂದಿರುವ ಒಂದು ಮಹಾಭಯವನ್ನು ನೀನು ನಿವಾರಿಸಬೇಕು" ಎಂದರು (೧೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರುವತ್ತನೆಯ ಸರ್ಗ



## ಏಕಷಷ್ಟಿತಮಃ ಸರ್ಗಃ

### ಲವಣತ್ರಾಣಪ್ರಾರ್ಥನಾ

ಬ್ರುವದ್ಭಿರೇವಮೃಷಿಭಿಃ ಕಾಕುತ್ಸ್ಥೋ ವಾಕ್ಯಮಬ್ರವೀತ್ ।
ಕಿಂ ಕಾರ್ಯಂ ಬ್ರೂತ ಮುನಯೋ ಭಯಂ ತಾವದಪೈತು ವಃ ॥ ೧

ತಥಾ ಬ್ರುವತಿ ಕಾಕುತ್ಸ್ಥೇ ಭಾರ್ಗವೋ ವಾಕ್ಯಮಬ್ರವೀತ್ ।
ಭಯಾನಾಂ ಶೃಣು ಯನ್ಮೂಲಂ ದೇಶಸ್ಯ ಚ ನರೇಶ್ವರ ॥ ೨

ಪೂರ್ವಂ ಕೃತಯುಗೇ ರಾಜನ್ ದೈತೇಯಃ ಸುಮಹಾಬಲಃ ।
ಲೋಲಾಪುತ್ರೋಽಭವಜ್ಜ್ಯೇಷ್ಠೋ ಮಧುರ್ನಾಮ ಮಹಾಸುರಃ ॥ ೩

ಬ್ರಹ್ಮಣ್ಯಶ್ಚ ಶರಣ್ಯಶ್ಚ ಬುದ್ಧ್ಯಾ ಚ ಪರಿನಿಷ್ಠಿತಃ ।
ಸುರೈಶ್ಚ ಪರಮೋದಾರೈಃ ಪ್ರೀತಿಸ್ತಸ್ಯಾತುಲಾಭವತ್ ॥ ೪

ಸ ಮಧುರ್ವೀರ್ಯಸಂಪನ್ನೋ ಧರ್ಮೇ ಚ ಸುಸಮಾಹಿತಃ ।
ಬಹುವರ್ಷಸಹಸ್ರಾಣಿ ರುದ್ರಪ್ರೀತ್ಯಾಕರೋತ್ತಪಃ ॥ ೫

## ಸರ್ಗ ೬೧

### ಲವಣಾಸುರನ ಪೀಡೆಯಿಂದ ತಮ್ಮನ್ನು ರಕ್ಷಿಸಬೇಕೆಂದು ಚ್ಯವನರು ರಾಘವನಿಗೆ ತಿಳಿಸುವುದು

ಋಷಿಗಳು ಹೀಗೆ ನುಡಿಯುತ್ತಿರಲು ಕಾಕುತ್ಸ್ಥನು "ಮುನಿಗಳೆ, ನಾನು ಮಾಡಬೇಕಾದ್ದೇನು, ತಿಳಿಸಿರಿ ಭಯವನ್ನು ತ್ಯಜಿಸಿರಿ" ಎಂದು ಕೇಳಿದನು ಆಗ ಭೃಗುವಂಶಜರಾದ ಚ್ಯವನರು ಹೀಗೆಂದರು. "ನರೇಶ್ವರ, ನಮಗೂ ನಮ್ಮ ದೇಶಕ್ಕೂ ಒದಗಿರುವ ಭಯದ ಮೂಲವೇನೆಂಬುದನ್ನು ಕೇಳು (೧-೨). ಹಿಂದೆ ಕೃತಯುಗದಲ್ಲಿ ಮಧುವೆಂಬ ಬಲಾಢ್ಯನಾದ ಮಹಾಸುರನಿದ್ದನು ಅವನು ಲೋಲಾ ಎಂಬವಳ ಹಿರಿಯ ಮಗ ಆತನು ಬ್ರಾಹ್ಮಣರಿಗೆ ಹಿತಕಾರಿಯೂ ಶರಣಾಗತರಕ್ಷಕನೂ ಬುದ್ಧಿಶಾಲಿಯೂ ಆಗಿದ್ದನು ಉದಾರಚರಿತರಾದ ದೇವತೆಗಳೊಡನೆ ಮಧುವಿಗೆ ಗಾಢವಾದ ಪ್ರೀತಿ ಬೆಳೆದಿತ್ತು (೩-೪) ಹೀಗಿರಲು ಧರ್ಮನಿಷ್ಠನಾದ ಮಧುವು ರುದ್ರನಿಗೆ

ರುದ್ರಃ ಪ್ರೀತೋಽಭವತ್ತಸ್ಮೈ ಪರಂ ದಾತುಂ ಯಯೌ ಚ ಸಃ ।
ಬಹುಮಾನಾಚ್ಚ ರುದ್ರೇಣ ದತ್ತಸ್ತಸ್ಯಾದ್ಭುತೋ ವರಃ ॥ ೬

ಶೂಲಂ ಶೂಲಾದ್ವಿನಿಷ್ಕೃಷ್ಯ ಮಹಾವೀರ್ಯಂ ಮಹಾಪ್ರಭಮ್ ।
ದದೌ ಮಹಾತ್ಮಾ ಸುಪ್ರೀತೋ ವಾಕ್ಯಂ ಚೈತದುವಾಚ ಹ ॥ ೭

ತ್ವಯಾಯಮತುಲೋ ಧರ್ಮೋ ಮತ್ಪ್ರಸಾದಕರಃ ಕೃತಃ ।
ಪ್ರೀತ್ಯಾ ಪರಮಯಾ ಯುಕ್ತೋ ದದಾಮ್ಯಾಯುಧಮುತ್ತಮಮ್॥

ಯಾವತ್ ಸುರೈಶ್ಚ ವಿಪ್ರೈಶ್ಚ ನ ವಿರುಧ್ಯೇರ್ಮಹಾಸುರ ।
ತಾವಚ್ಛೂಲಂ ತವೇದಂ ಸ್ಯಾದನ್ಯಥಾ ನಾಶಮೇಷ್ಯತಿ ॥ ೯

ಯಶ್ಚ ತ್ವಾಮಭಿಯುಂಜೀತ ಯುದ್ಧಾಯ ವಿಗತಜ್ವರಃ ।
ತಂ ಶೂಲೋ ಭಸ್ಮಸಾತ್ಕೃತ್ವಾ ಪುನರೇಷ್ಯತಿ ತೇ ಕರಮ್ ॥ ೧೦

ಏವಂ ರುದ್ರಾದ್ವರಂ ಲಬ್ಧ್ವಾ ಭೂಯ ಏವ ಮಹಾಸುರಃ ।
ಪ್ರಣಿಪತ್ಯ ಮಹಾದೇವಂ ವಾಕ್ಯಮೇತದುವಾಚ ಹ ॥ ೧೧

---

ಪ್ರೀತಿಯಾಗಲೆಂದು ಸಾವಿರಾರು ವರ್ಷಗಳವರೆಗೆ ತಪಸ್ಸು ಮಾಡಿದನು ರುದ್ರನು ಸಂಪ್ರೀತನಾಗಿ ಆತನಿಗೆ ಅದ್ಭುವಾದ ಒಂದು ವರವನ್ನಿತ್ತನು (೫ ೬) ಏನೆಂದರೆ, ತನ್ನ ತ್ರಿಶೂಲದಿಂದ ಶಕ್ತಿಯನ್ನಾಕರ್ಷಿಸಿ ಇನ್ನೊಂದು ಶೂಲದಲ್ಲಿಳವಡಿಸಿ, ಮಹಾವೀರ್ಯಸಂಪನ್ನವಾದ ಆ ಶೂಲವನ್ನು ಮಧುವಿಗೆ ಕೊಟ್ಟನು ಅನಂತರ "ಎಲೈ ಅಸುರನೆ, ನನ್ನ ಅನುಗ್ರಹವನ್ನು ಪಡೆಯು ವುದಕ್ಕಾಗಿ ಎಣೆಯಿಲ್ಲದ ತಪಸ್ಸನ್ನಾಚರಿಸಿದ್ದೀಯೆ. ಆದ್ದರಿಂದ ಸಂತುಷ್ಟನಾಗಿ ಈ ಉತ್ತಮಾಯುಧವನ್ನು ನಿನಗೆ ಕೊಡುತ್ತಿದ್ದೇನೆ (೭-೮) ನೀನು ದೇವ ಬ್ರಾಹ್ಮಣರೊಡನೆ ವಿರೋಧವನ್ನು ಬೆಳೆಸದಿದ್ದರೆ ಈ ಶೂಲವು ನಿನ್ನ ವಶದಲ್ಲಿರು ವುದು ವಿರೋಧವನ್ನು ಬೆಳೆಸಿದರೆ ಒಡನೆಯೇ ಅದೃಶ್ಯವಾಗುವುದು! ಯಾರಾದರೂ ಯುದ್ಧದಲ್ಲಿ ನಿನ್ನನ್ನೆದುರಿಸಿದರೆ, ಈ ಶೂಲವು ಅವರನ್ನು ಧ್ವಂಸಮಾಡಿ ಮತ್ತೆ ನಿನ್ನ ಕೈಗೆ ಬಂದು ಸೇರುವುದು" ಎಂದು ತಿಳಿಸಿದನು (೯-೧೦) ಹೀಗೆ ವರವನ್ನು ಪಡೆದ ಮಧುವು ಮಹಾದೇವನಿಗೆ ವಂದಿಸಿ

ಭಗವನ್ ಮಮ ವಂಶಸ್ಯ ಶೂಲಮೇತದನುತ್ತಮಮ್ ।
ಭವೇತ್ತು ಸತತಂ ದೇವ ಸುರಾಣಾಮೀಶ್ವರೋ ಹ್ಯಸಿ ॥ ೧೨

ತಂ ಬ್ರುವಾಣಂ ಮಧುಂ ದೇವಃ ಸರ್ವಭೂತಪತಿಃ ಶಿವಃ ।
ಪ್ರತ್ಯುವಾಚ ಮಹಾತೇಜಾ ನೈತದೇವಂ ಭವಿಷ್ಯತಿ ॥ ೧೩

ಮಾ ಭೂತ್ತೇ ವಿಫಲಾ ವಾಣೀ ಮತ್ಪ್ರಸಾದಕೃತಾ ಶುಭಾ ।
ಭವತಃ ಪುತ್ರಮೇಕಂ ತು ಶೂಲಮೇತದ್ಗಮಿಷ್ಯತೇ ॥ ೧೪

ಯಾವತ್ ಕರಸ್ಥಃ ಶೂಲೋಽಯಂ ಭವಿಷ್ಯತಿ ಸುತಸ್ಯ ತೇ ।
ಅವಧ್ಯಃ ಸರ್ವಭೂತಾನಾಂ ಶೂಲಹಸ್ತೋ ಭವಿಷ್ಯತಿ ॥ ೧೫

ಏವಂ ಮಧುರ್ವರಂ ಲಬ್ಧ್ವಾ ದೇವಾತ್ ಸುಮಹದದ್ಭುತಮ್ ।
ಭವನಂ ಸೋಽಸುರಶ್ರೇಷ್ಠಃ ಕಾರಯಾಮಾಸ ಸುಪ್ರಭಮ್ ॥ ೧೬

ತಸ್ಯ ಪತ್ನೀ ಮಹಾಭಾಗಾ ಪ್ರಿಯಾ ಕುಂಭೀನಸೀತಿ ಯಾ ।
ವಿಶ್ವಾವಸೋರಪತ್ಯಂ ಸಾ ಹ್ಯನಲಾಯಾಂ ಮಹಾಪ್ರಭಾ ॥ ೧೭

---

"ಹೇ ಭಗವನ್, ಈ ದಿವ್ಯಶೂಲವು ನನ್ನ ವಂಶದಲ್ಲಿ ಪರಂಪರೆಯಾಗಿ ಉಳಿಯಲಿ ದೇವ, ನೀನು ನಿಖಿಲ ಸುರರಿಗೂ ಮಹೇಶ್ವರನಾಗಿರುವೆ" ಎಂದನು (೧೧-೧೨) ಆಗ ಸರ್ವಭೂತೇಶ್ವರನಾದ ಶಿವನು ಮಧುವನ್ನು ಕುರಿತು "ಅದು ಸಾಧ್ಯವಿಲ್ಲ! ಆದರೆ ನಿನ್ನ ಪ್ರಾರ್ಥನೆಯು ನಿಷ್ಫಲವಾಗ ಬಾರದು ಈ ಪ್ರಾರ್ಥನೆ ನನ್ನ ಪ್ರಸಾದದಿಂದಾದ ಸಂತೋಷದಿಂದ ಬಂದಿತಲ್ಲವೆ? ನಿನ್ನ ಒಬ್ಬ ಮಗನಿಗೆ ಮಾತ್ರ ಈ ಶೂಲವು ಸೇರುವುದು (೧೩-೧೪) ನಿನ್ನ ಮಗನು ಈ ಶೂಲವನ್ನು ಕೈಯಲ್ಲಿ ಹಿಡಿದಿರುವಾಗ ಮಾತ್ರ ಸಕಲರಿಗೂ ಅವಧ್ಯನಾಗುವನು" ಎಂದು ವರವನ್ನಿತ್ತನು (೧೫) ಹೀಗೆ ಮಧುದೈತ್ಯನು ಮಹಾದೇವನಿಂದ ಅದ್ಭುತವಾದ ವರವನ್ನು ಪಡೆದುಬಂದು, ಮನೋಜ್ಞವಾದ ಭವನವನ್ನು ನಿರ್ಮಿಸಿ ವಾಸವಾಗಿದ್ದನು ಆತನಿಗೆ ಕುಂಭೀನಸಿಯೆಂಬ ಭಾಗ್ಯಶಾಲಿನಿಯಾದ ಪತ್ನಿ ಇದ್ದಳು ಅವಳು ಅನಲೆಯಲ್ಲಿ * ವಿಶ್ವಾವಸುವಿ

* ಕುಂಭೀನಸಿಯು ಮಾಲ್ಯವಂತನ ಮಗಳಾದ ಅನಲೆಯ ಮಗಳು ರಾವಣನ ತಂಗಿ ಇವಳು ಸುಮಾಲಿಯ ಮಗಳಾದ ಕುಂಭೀನಸಿಯಲ್ಲ ಈಕೆಯನ್ನು ಮಧುವು ಅಪಹರಿಸಿ ಮದುವೆಯಾದನು ೨೫ನೆಯ ಸರ್ಗವನ್ನು ನೋಡಿ

ತಸ್ಯಾಃ ಪುತ್ರೋ ಮಹಾವೀರ್ಯೋ ಲವಣೋ ನಾಮ ದಾರುಣಃ ।
ಬಾಲ್ಯಾತ್ ಪ್ರಭೃತಿ ದುಷ್ಟಾತ್ಮಾ ಪಾಪಾನ್ಯೇವ ಸಮಾಚರತ್ ॥ ೧೮

ತಂ ಪುತ್ರಂ ದುರ್ವಿನೀತಂ ತು ದೃಷ್ಟ್ವಾ ಕ್ರೋಧಸಮನ್ವಿತಃ ।
ಮಧುಃ ಸ ಶೋಕಮಾಪೇದೇ ನ ಚೈನಂ ಕಿಂಚಿದಬ್ರವೀತ್ ॥ ೧೯

ಸ ವಿಹಾಯ ತ್ವಿಮಂ ಲೋಕಂ ಪ್ರವಿಷ್ಟೋ ವರುಣಾಲಯಮ್ ।
ಶೂಲಂ ನಿವೇಶ್ಯ ಲವಣೇ ವರಂ ತಸ್ಮೈ ನ್ಯವೇದಯತ್ ॥ ೨೦

ಸ ಪ್ರಭಾವೇಣ ಶೂಲಸ್ಯ ದೌರಾತ್ಮ್ಯೇನಾತ್ಮನಸ್ತಥಾ ।
ಸಂತಾಪಯತಿ ಲೋಕಾಂಸ್ತ್ರೀನ್ ವಿಶೇಷೇಣ ಚ ತಾಪಸಾನ್ ॥ ೨೧

ಏವಂಪ್ರಭಾವೋ ಲವಣಃ ಶೂಲಂ ಚೈವ ತಥಾವಿಧಮ್ ।
ಶ್ರುತ್ವಾ ಪ್ರಮಾಣಂ ಕಾಕುತ್ಸ್ಥ ತ್ವಂ ಹಿ ನಃ ಪರಮಾ ಗತಿಃ ॥ ೨೨

ಬಹವಃ ಪಾರ್ಥಿವಾ ರಾಮ ಭಯಾರ್ತೈರೃಷಿಭಿಃ ಪುರಾ ।
ಅಭಯಂ ಯಾಚಿತಾ ವೀರ ತ್ರಾತಾರಂ ನ ಚ ವಿದ್ಮಹೇ ॥ ೨೩

---

ನಿಂದ ಜನಿಸಿದವಳು (೧೬-೧೭) ಕುಂಭೀನಸಿಗೆ ಮಹಾವೀರನೂ ಕ್ರೂರನೂ ಆದ ಲವಣನೆಂಬ ಪುತ್ರನು ಹುಟ್ಟಿದನು ಲವಣಾಸುರನು ದುಷ್ಟ ಬಾಲ್ಯದಿಂದಲೂ ಪಾಪಕರ್ಮಗಳನ್ನೇ ಆಚರಿಸುತ್ತ ಬಂದನು ಪುತ್ರನು ಅವಿನೀತನಾಗಿರುವುದನ್ನು ಕಂಡು ಮಧುವಿಗೆ ಕೋಪ ಉಂಟಾಯಿತು ಅವನು ಒಳಗೊಳಗೇ ಶೋಕದಿಂದ ಸಂತಪ್ತನಾದನು ಆದರೆ ಲವಣನಿಗೆ ಏನನ್ನೂ ಹೇಳಲಾರದೇಹೋದನು (೧೮-೧೯) ಕಡೆಗೆ ಮಧುವು ಈ ಲೋಕವನ್ನೇ ಬಿಟ್ಟು ವರುಣಲೋಕಕ್ಕೆ ಹೊರಟುಹೋದನು ಹೋಗುವಾಗ ವರದತ್ತವಾದ ಶೂಲವನ್ನು ಲವಣಾಸುರನಿಗೆ ಕೊಟ್ಟು ಅದರ ಪ್ರಭಾವವನ್ನು ತಿಳಿಸಿದನು (೨೦) ರಾಘವ, ಈಗ ಲವಣಾಸುರನು ಆ ಶೂಲದ ಮಹಿಮೆಯನ್ನವಲಂಬಿಸಿ ತನ್ನ ದೌರಾತ್ಮ್ಯದಿಂದ ಲೋಕವನ್ನು ಪೀಡಿಸುತ್ತಿದ್ದಾನೆ ವಿಶೇಷವಾಗಿ ತಪಸ್ವಿಗಳನ್ನು ಹಿಂಸಿಸುತ್ತಾನೆ ಲವಣಾಸುರನ ಪ್ರಭಾವ ಈ ಪರಿಯಾಗಿದೆ. ಶೂಲವಾದರೋ ಅಂತಹ ಶಕ್ತಿಯುಳ್ಳದ್ದು ಕಾಕುತ್ಸ್ಥ, ಇದನ್ನು ಕೇಳಿದ ಮೇಲೆ ಮುಂದಿನ ಕಾರ್ಯವು ನಿನಗೆ ಸೇರಿದ್ದು ನೀನೇ ನಮಗೆ ಪರಮಗತಿ (೨೨) ಶ್ರೀರಾಮ, ಭಯಾರ್ತರಾದ ಋಷಿಗಳು ಹಿಂದೆ ಬಹುಮಂದಿ

ತೇ ವಯಂ ರಾವಣಂ ಶ್ರುತ್ವಾ ಹತಂ ಸಬಲವಾಹನಮ್ ।
ತ್ರಾತಾರಂ ವಿದ್ಮಹೇ ತಾತ ನಾನ್ಯಂ ಭುವಿ ನರಾಧಿಪಮ್ ॥ ೨೪
ತತ್ ಪರಿತ್ರಾತುಮಿಚ್ಛಾಮೋ ಲವಣಾದ್ಭಯಪೀಡಿತಾನ್ ॥

ಇತಿ ರಾಮ ನಿವೇದಿತಂ ತು ತೇ
ಭಯಜಂ ಕಾರಣಮುತ್ಥಿತಂ ಚ ಯತ್ ।
ವಿನಿವಾರಯಿತುಂ ಭವಾನ್ ಕ್ಷಮಃ
ಕುರು ತಂ ಕಾಮಮಹೀನವಿಕ್ರಮ ॥ ೨೫

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕಷಷ್ಟಿತಮಃ ಸರ್ಗಃ



ರಾಜರ ಬಳಿಗೆ ಹೋಗಿ ಅಭಯವನ್ನು ಬೇಡಿದ್ದಾರೆ ಆದರೇನು ? ನಮಗೆ ಭಯತ್ರಾತನೊಬ್ಬನೂ ಕಾಣಲಿಲ್ಲ. ನೀನು ರಾವಣನನ್ನು ಪರಿವಾರಸಹಿತ ವಾಗಿ ವಿಧ್ವಂಸಗೊಳಿಸಿದೆಯೆಂಬುದನ್ನು ಕೇಳಿ, ನೀನೇ ಭಯತ್ರಾತನೆಂದು ತಿಳಿದು ಬಂದಿದ್ದೇವೆ ಈ ಲೋಕದಲ್ಲಿ ಇನ್ನಾರನ್ನೂ ನಾವು ಕಾಣೆವು ಲವಣಾಸುರನಿಂದ ಭೀತರಾದ ನಮ್ಮನ್ನು ರಕ್ಷಿಸಬೇಕೆಂಬುದೇ ನಮ್ಮ ಬಯಕೆ (೨೩-೨೪) ಶ್ರೀರಾಮ, ನಮಗೊದಗಿದ ಭಯಕ್ಕೆ ಕಾರಣವೇನೆಂಬುದನ್ನು ನಿವೇದಿಸಿದ್ದಾಯಿತು ಇದನ್ನು ಪರಿಹರಿಸಲು ನೀನು ಸಮರ್ಥನಾಗಿದ್ದೀಯೆ ಎಲೈ ಪರಾಕ್ರಮಿ, ನಮ್ಮ ಅಪೇಕ್ಷೆಯನ್ನು ಪೂರೈಸಿಕೊಡು" ಎಂದರು (೨೫).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರುವತ್ತೊಂದನೆಯ ಸರ್ಗ



## ದ್ವಿಷಷ್ಟಿತಮಃ ಸರ್ಗಃ

### ಶತ್ರುಘ್ನಪ್ರಾರ್ಥನಾ

ತಥೋಕ್ತೇ ತಾನೃಷೀನ್ ರಾಮಃ ಪ್ರತ್ಯುವಾಚ ಕೃತಾಂಜಲಿಃ ।
ಕಿಮಾಹಾರಃ ಕಿಮಾಚಾರೋ ಲವಣಃ ಕ್ವ ಚ ವರ್ತತೇ ॥ ೧

ರಾಘವಸ್ಯ ವಚಃ ಶ್ರುತ್ವಾ ಋಷಯಃ ಸರ್ವ ಏವ ತೇ ।
ತತೋ ನಿವೇದಯಾಮಾಸುರ್ಲವಣೋ ವವೃಧೇ ಯಥಾ ॥ ೨

ಆಹಾರಃ ಸರ್ವಸತ್ತ್ವಾನಿ ವಿಶೇಷೇಣ ಚ ತಾಪಸಾಃ ।
ಆಚಾರೋ ರೌದ್ರತಾ ನಿತ್ಯಂ ವಾಸೋ ಮಧುವನೇ ತಥಾ ॥ ೩

ಹತ್ವಾ ಬಹುಸಹಸ್ರಾಣಿ ಸಿಂಹವ್ಯಾಘ್ರಮೃಗದ್ವಿಪಾನ್ ।
ಮಾನುಷಾಂಶ್ಚೈವ ಕುರುತೇ ನಿತ್ಯಮಾಹಾರಮಾಹ್ನಿಕಮ್ ॥ ೪

ತತೋಽಂತರಾಣಿ ಸತ್ತ್ವಾನಿ ಖಾದತೇ ಸ ಮಹಾಬಲಃ ।
ಸಂಹಾರೇ ಸಮನುಪ್ರಾಪ್ತೇ ವ್ಯಾದಿತಾಸ್ಯ ಇವಾಂತಕಃ ॥ ೫

### ಸರ್ಗ ೬೨

ಲವಣಾಸುರನನ್ನು ತಾನು ಸಂಹರಿಸುವುದಾಗಿ ಶತ್ರುಘ್ನನ ಹೇಳಿಕೆ
ಅದಕ್ಕೆ ಶ್ರೀರಾಮನ ಒಪ್ಪಿಗೆ

ಆಗ ಶ್ರೀರಾಮನು ಮುನಿಗಳಿಗೆ ಕೈಮುಗಿದು "ಮಹರ್ಷಿಗಳೆ, ಲವಣಾಸುರನ ಆಹಾರವೇನು? ಆಚಾರ ಎಂತಹುದು? ಅವನಿರುವುದೆಲ್ಲಿ?" ಎಂದು ಕೇಳಿದನು (೧) ಅದಕ್ಕೆ ಋಷಿಗಳು "ಮಹಾರಾಜ, ಸಕಲ ಪ್ರಾಣಿಗಳೂ ಆತನ ಆಹಾರ! ವಿಶೇಷವಾಗಿ ತಾಪಸರು! ಕ್ರೂರಕರ್ಮವೇ ಆಚಾರ! ಅವನಿರುವುದು ಮಧುವನದಲ್ಲಿ ಸಿಂಹ ಹುಲಿ ಜಿಂಕೆ ಆನೆಗಳನ್ನೂ ಮನುಷ್ಯರನ್ನೂ ಪ್ರತಿದಿನವೂ ಕೊಂದು ಒಂದು ಹಗಲಿನ ಆಹಾರವನ್ನು ಮಾಡಿಕೊಳ್ಳುತ್ತಾನೆ (೨-೪) ಇವುಗಳನ್ನಲ್ಲದೆ ಇತರ ಪ್ರಾಣಿಗಳನ್ನೂ ತಿನ್ನುತ್ತಾನೆ.

ತಚ್ಛ್ರುತ್ವಾ ರಾಘವೋ ವಾಕ್ಯಮುವಾಚ ಸ ಮಹಾಮುನೀನ್ ।
ಘಾತಯಿಷ್ಯಾಮಿ ತದ್ರಕ್ಷೋ ಹ್ಯಪಗಚ್ಛತು ವೋ ಭಯಮ್ ॥ ೬

ಪ್ರತಿಜ್ಞಾಯ ತಥಾ ತೇಷಾಂ ಮುನೀನಾಮುಗ್ರತೇಜಸಾಮ್ ।
ಸ ಭ್ರಾತೄನ್ ಸಹಿತಾನ್ ಸರ್ವಾನುವಾಚ ರಘುನಂದನಃ ॥ ೭

ಕೋ ಹಂತಾ ಲವಣಂ ವೀರಃ ಕಸ್ಯಾಂಶಃ ಸ ವಿಧೀಯತಾಮ್ ।
ಭರತಸ್ಯ ಮಹಾಬಾಹೋಃ ಶತ್ರುಘ್ನಸ್ಯ ಚ ಧೀಮತಃ ॥ ೮

ರಾಘವೇಣೈವಮುಕ್ತಸ್ತು ಭರತೋ ವಾಕ್ಯಮಬ್ರವೀತ್ ।
ಅಹಮೇತಂ ವಧಿಷ್ಯಾಮಿ ಮಮಾಂಶಃ ಸ ವಿಧೀಯತಾಮ್ ॥ ೯

ಭರತಸ್ಯ ವಚಃ ಶ್ರುತ್ವಾ ಧೈರ್ಯಶೌರ್ಯಸಮನ್ವಿತಮ್ ।
ಲಕ್ಷ್ಮಣಾವರಜಸ್ತಸ್ಥೌ ಹಿತ್ವಾ ಸೌವರ್ಣಮಾಸನಮ್ ॥ ೧೦

ಶತ್ರುಘ್ನಸ್ತ್ವಬ್ರವೀದ್ವಾಕ್ಯಂ ಪ್ರಣಿಪತ್ಯ ನರಾಧಿಪಮ್ ।
ಕೃತಕರ್ಮಾ ಮಹಾಬಾಹುರ್ಮಧ್ಯಮೋ ರಘುನಂದನಃ ॥ ೧೧

---

ಪ್ರಳಯಕಾಲದಲ್ಲಿ ಬಾಯ್ದೆರೆದು ಬರುವ ಯಮನಂತೆ ಕಾಣಿಸುತ್ತಾನೆ!" ಎಂದರು ಆಗ ಶ್ರೀರಾಮನು "ಮುನಿಗಳೆ, ಆ ರಾಕ್ಷಸನನ್ನು ಕೊಲ್ಲಿಸುವೆನು ಹೆದರಬೇಡಿರಿ" ಎಂದು ಸಮಾಧಾನಪಡಿಸಿದನು (೫-೬) ಅನಂತರ ರಘುನಂದನನು ತನ್ನ ತಮ್ಮಂದಿರ ಕಡೆಗೆ ತಿರುಗಿ "ನಿಮ್ಮಲ್ಲಿ ಲವಣಾಸುರನನ್ನು ಸಂಹರಿಸಲಿಚ್ಛಿಸುವ ವೀರನು ಯಾರು? ಆತನ ಸಂಹಾರಕಾರ್ಯದ ಪಾಲನ್ನು ಯಾರಿಗೆ ವಹಿಸೋಣ? ಭರತನಿಗೊ? ಶತ್ರುಘ್ನನಿಗೊ?" ಎಂದು ಕೇಳಿದನು (೭-೮) ಭರತನು "ಆ ರಾಕ್ಷಸನನ್ನು ನಾನು ವಧಿಸುವೆನು. ಆ ಕಾರ್ಯಭಾರವು ನನಗಿರಲಿ" ಎಂದನು ಭರತನ ಧೈರ್ಯಶೌರ್ಯಾನ್ವಿತವಾದ ವಚನವನ್ನು ಕೇಳಿ ಲಕ್ಷ್ಮಣನ ತಮ್ಮನಾದ ಶತ್ರುಘ್ನನು ತನ್ನ ಸುವರ್ಣಪೀಠದಿಂದೆದ್ದು ರಾಘವನಿಗೆ ನಮಸ್ಕರಿಸಿ ಹೀಗೆಂದನು. "ಮಹಾಬಾಹುವೂ ನಮಗೆ ಮಧ್ಯಮ ಸೋದರನೂ ಆದ ಭರತನು ತನ್ನ ಕರ್ತವ್ಯವನ್ನು ನಿರ್ವಹಿಸಿ ಕೃತಕೃತ್ಯನಾಗಿದ್ದಾನೆ (೯-೧೦) ಹಿಂದೆ ಅಣ್ಣನಿಲ್ಲದಾಗ ಅಯೋಧ್ಯೆಯನ್ನು

ಆರ್ಯೇಣ ಹಿ ಪುರಾ ಶೂನ್ಯಾ ತ್ವಯೋಧ್ಯಾ ಪರಿಪಾಲಿತಾ ।
ಸಂತಾಪಂ ಹೃದಯೇ ಕೃತ್ವಾ ಆರ್ಯಸ್ಯಾಗಮನಂ ಪ್ರತಿ ॥ ೧೨

ದುಃಖಾನಿ ಚ ಬಹೂನೀಹ ಹ್ಯನುಭೂತಾನಿ ಪಾರ್ಥಿವ ।
ಶಯಾನೋ ದುಃಖಶಯ್ಯಾಸು ನಂದಿಗ್ರಾಮೇಽವಸತ್ ಪುರಾ ॥ ೧೩

ಫಲಮೂಲಾಶನೋ ಭೂತ್ವಾ ಜಟೀ ಚೀರಧರಸ್ತಥಾ ।
ಅನುಭೂಯೇದೃಶಂ ದುಃಖಮೇಷ ರಾಘವನಂದನಃ ॥ ೧೪

ಪ್ರೇಷ್ಯೇ ಮಯಿ ಸ್ಥಿತೇ ರಾಜನ್ನ ಭೂಯಃ ಕ್ಲೇಶಮಾಪ್ನುಯಾತ್ ।
ತಥಾ ಬ್ರುವತಿ ಶತ್ರುಘ್ನೇ ರಾಘವಃ ಪುನರಬ್ರವೀತ್ ॥ ೧೫

ಏವಂ ಭವತು ಕಾಕುತ್ಸ್ಥ ಕ್ರಿಯತಾಂ ಮಮ ಶಾಸನಮ್ ।
ರಾಜ್ಯೇ ತ್ವಾಮಭಿಷೇಕ್ಷ್ಯಾಮಿ ಮಧೋಸ್ತು ನಗರೇ ಶುಭೇ ॥ ೧೬

ನಿವೇಶಯ ಮಹಾಬಾಹೋ ಭರತಂ ಯದ್ಯವೇಕ್ಷಸೇ ।
ಶೂರಸ್ತ್ವಂ ಕೃತವಿದ್ಯಶ್ಚ ಸಮರ್ಥಶ್ಚ ನಿವೇಶನೇ ॥ ೧೭

---

ಪಾಲಿಸಿದ್ದಾನೆ ಅಣ್ಣನು ಯಾವಾಗ ಬರುವನೋ ಎಂದು ಹಾರೈಸುತ್ತ ಕಷ್ಟವನ್ನನುಭವಿಸಿದ್ದಾನೆ ಮಹಾರಾಜ, ಭರತನು ಅನುಭವಿಸಿದ ದುಃಖಗಳು ಅಪಾರವಾದವು. ನಂದಿಗ್ರಾಮದಲ್ಲಿರುವಾಗ ಅವನು ಮಲಗಿದ್ದು ಮುಳ್ಳಿನ ಹಾಸಿಗೆಯಲ್ಲಿ (೧೧-೧೩). ಫಲಮೂಲಗಳನ್ನೇ ತಿನ್ನುತ್ತ ಜಟೆಯನ್ನು ಬೆಳೆಸಿ ನಾರುಬಟ್ಟೆಯನ್ನುಟ್ಟು ಈ ರಘುಕುಲನಂದನನು ಘೋರದುಃಖವನ್ನನುಭವಿಸಿದ್ದಾನೆ. ಹೀಗಿರಲು, ಮಹಾರಾಜ, ಭರತನಿಗೆ ಇನ್ನೊಂದು ಕ್ಲೇಶವನ್ನೊಡ್ಡುವುದು ಬೇಡ ಭೃತ್ಯನಾದ ನಾನಿರುವಾಗ ಅವನಿಗೆ ಈ ಶ್ರಮವೇಕೆ ?" ಎಂದು ನಿವೇದಿಸಿದನು (೧೪-೧೫) ಶತ್ರುಘ್ನನ ಮಾತನ್ನು ಕೇಳಿ ರಾಘವನು "ಶತ್ರುಘ್ನ, ಹಾಗೆಯೇ ಆಗಲಿ ನನ್ನ ಆಜ್ಞೆಯನ್ನು ನಡೆಸು ನೀನು ಮಧುವಿನ ರಾಜ್ಯಕ್ಕೆ ಅಧಿಪತಿಯೆಂದು ಪಟ್ಟಗಟ್ಟುವೆನು ಭರತನಿಗೆ ಆ ಕ್ಲೇಶವು ಬೇಡವೆಂದು ನಿನ್ನ ಅಭಿಪ್ರಾಯವಾದರೆ, ಅವನು ಈ ಅಯೋಧ್ಯಾನಗರದಲ್ಲಿಯೇ ಇರಲಿ. ನೀನು ಶೂರನೂ ವಿದ್ವಾಂಸನೂ ನೂತನ ನಗರನಿರ್ಮಾಣ

ಯೋ ಹಿ ಶತ್ರುಂ ಸಮುತ್ಪಾಟ್ಯ ಪಾರ್ಥಿವಸ್ಯ ಪುನಃ ಕ್ಷಯೇ ।
ನ ವಿಧತ್ತೇ ನೃಪಂ ತತ್ರ ನರಕಂ ಸ ಹಿ ಗಚ್ಛತಿ ॥ ೧೮

ಸ ತ್ವಂ ಹತ್ವಾ ಮಧುಸುತಂ ಲವಣಂ ಪಾಪನಿಶ್ಚಯಮ್ ।
ರಾಜ್ಯಂ ಪ್ರಶಾಧಿ ಧರ್ಮೇಣ ವಾಕ್ಯಂ ಮೇ ಯದ್ಯವೇಕ್ಷಸೇ ॥ ೧೯

ಉತ್ತರಂ ಚ ನ ವಕ್ತವ್ಯಂ ಶೂರ ವಾಕ್ಯಾಂತರೇ ಮಮ ।
ಬಾಲೇನ ಪೂರ್ವಜಸ್ಯಾಜ್ಞಾ ಕರ್ತವ್ಯಾ ನಾತ್ರ ಸಂಶಯಃ ॥ ೨೦

ಅಭಿಷೇಕಂ ಚ ಕಾಕುತ್ಸ್ಥ ಪ್ರತೀಚ್ಛಸ್ವ ಮಯೋದ್ಯತಮ್ ।
ವಸಿಷ್ಠಪ್ರಮುಖೈರ್ವಿಪ್ರೈರ್ವಿಧಿಮಂತ್ರಪುರಸ್ಕೃತಮ್ ॥ ೨೧

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವಿಷಷ್ಟಿತಮಃ ಸರ್ಗಃ



ದಲ್ಲಿ ಸಮರ್ಥನೂ ಆಗಿದ್ದೀಯೆ (೧೬-೧೭) ಶತ್ರುವನ್ನು ಸಂಹರಿಸಿದ ಮೇಲೆ, ಅಲ್ಲಿ ರಾಜವಂಶವು ಕ್ಷಯಿಸಲಾಗಿ, ಆ ದೇಶಕ್ಕೆ ರಾಜನೊಬ್ಬನನ್ನು ನಿಯಮಿಸ ಬೇಕು ಇಲ್ಲದಿದ್ದರ ಮನುಷ್ಯನು ನರಕಭಾಗಿಯಾಗುವನು ಆದ್ದರಿಂದ, ಶತ್ರುಘ್ನ, ಮಧುಪುತ್ರನೂ ಪಾಪಿಯೂ ಆದ ಲವಣಾಸುರನನ್ನು ಸಂಹರಿಸಿ ಆ ರಾಜ್ಯವನ್ನು ನೀನು ಧರ್ಮದಿಂದ ಪರಿಪಾಲಿಸುತ್ತಿರು ನನ್ನ ಮಾತಿಗೆ ಮನ್ನಣ ಕೊಡುವುದಾದರೆ, ನೀನು ಆ ರಾಜ್ಯವನ್ನು ಪಾಲಿಸಬೇಕು (೧೮-೧೯) ಎಲೈ ವೀರನೆ, ನಾನು ಹೇಳಿದಮೇಲೆ ನಡುವೆ ನೀನು ಪ್ರತಿ ಯಾಗಿ ಹೇಳಕೂಡದು ! ಕಿರಿಯನು ಹಿರಿಯನ ಅಪ್ಪಣೆಯನ್ನು ನಡೆಸಲೇ ಬೇಕು ನಾನು ಏರ್ಪಡಿಸುವ ಪಟ್ಟಾಭಿಷೇಕವನ್ನು ಅಂಗೀಕರಿಸು. ವಸಿಷ್ಠರೇ ಮೊದಲಾದ ವಿಪ್ರರು ವಿಧ್ಯುಕ್ತ ಕ್ರಮದಲ್ಲಿ ಮಂತ್ರಪೂರ್ವಕವಾಗಿ ಅಭಿಷೇಕ ಕಾರ್ಯವನ್ನು ನಡೆಸುವರು" ಎಂದು ತಿಳಿಸಿದನು (೨೦-೨೧).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರುವತ್ತೆರಡನೆಯ ಸರ್ಗ



# ತ್ರಿಷಷ್ಟಿತಮಃ ಸರ್ಗಃ

## ಲವಣವಧೋಪಾಯಕಥನಮ್

ಏವಮುಕ್ತಸ್ತು ರಾಮೇಣ ಪರಾಂ ವ್ರೀಡಾಮುಪಾಗತಮ್ ।
ಶತ್ರುಘ್ನೋ ವೀರ್ಯಸಂಪನ್ನೋ ಮಂದಂ ಮಂದಮುವಾಚ ಹ ॥

ಅಧರ್ಮಂ ವಿದ್ಮ ಕಾಕುತ್ಸ್ಥ ಹ್ಯಸ್ಮಿನ್ನರ್ಥೇ ನರೇಶ್ವರ ।
ಕಥಂ ತಿಷ್ಠತ್ಸು ಜ್ಯೇಷ್ಠೇಷು ಕನೀಯಾನಭಿಷಿಚ್ಯತೇ ॥ ೨

ಅವಶ್ಯಂ ಕರಣೀಯಂ ಚ ಶಾಸನಂ ಪುರುಷರ್ಷಭ ।
ತವ ಚೈವ ಮಹಾಭಾಗ ಶಾಸನಂ ದುರತಿಕ್ರಮಮ್ ॥ ೩

ತ್ವತ್ತೋ ಮಯಾ ಶ್ರುತಂ ವೀರ ಶ್ರುತಿಭ್ಯಶ್ಚ ಮಯಾ ಶ್ರುತಮ್ ।
ನೋತ್ತರಂ ಹಿ ಮಯಾ ವಾಚ್ಯಂ ಮಧ್ಯಮೋ ಪ್ರತಿಜಾನತಿ ॥ ೪

## ಸರ್ಗ ೬೩

### ಶ್ರೀರಾಮನು ಶತ್ರುಘ್ನನಿಗೆ ಅಮೋಘ ಶರವನ್ನಿತ್ತು ಲವಣಾಸುರನ ವಧೋಪಾಯವನ್ನು ತಿಳಿಸುವುದು

ಶ್ರೀರಾಮನು ಹೀಗೆ ಪಟ್ಟಾಭಿಷೇಕದ ಮಾತನ್ನಾಡಲು ಶತ್ರುಘ್ನನಿಗೆ ಬಹಳ ಲಜ್ಜೆಯಾಯಿತು ಆ ವೀರನು ಮೆಲ್ಲಮೆಲ್ಲನೆ ಇಂತೆಂದನು. "ಮಹಾರಾಜ, ಈ ವಿಷಯದಲ್ಲಿ ಅಧರ್ಮವು ಗಂಟುಬೀಳುವುದೆಂದು ನಾನು ತಿಳಿಯುತ್ತೇನೆ ಹಿರಿಯರಾದ ಅಣ್ಣಂದಿರಿರುವಾಗ ತಮ್ಮನಿಗೆ ಪಟ್ಟಾಭಿಷೇಕವೆಂದರೇನು? (೧-೨) ಹೇ ಪುರುಷೋತ್ತಮ, ನಿನ್ನ ಆಜ್ಞೆಯನ್ನಾದರೋ ಅವಶ್ಯವಾಗಿ ಪಾಲಿಸಬೇಕು ನಿನ್ನ ಅಪ್ಪಣೆಯನ್ನು ಮೀರಲು ಶಕ್ಯವಲ್ಲ ಈ ವಿಷಯವನ್ನು ನಿನ್ನಿಂದಲೂ ಶಾಸ್ತ್ರವಚನಗಳಿಂದಲೂ ತಿಳಿದಿದ್ದೇನೆ ಅಣ್ಣನಾದ ಭರತನು ಲವಣಾಸುರನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡುತ್ತಿರುವಾಗ, ನಡುವೆ ನಾನು ಬಾಯಿಹಾಕಬಾರದಾಗಿತ್ತು! (೩-೪)

ವ್ಯಾಹೃತಂ ದುರ್ವಚೋ ಘೋರಂ ಹಂತಾಸ್ಮಿ ಲವಣಂ ಮೃಧೇ ।
ತಸ್ಯೇಯಂ ಮೇ ದುರುಕ್ತಸ್ಯ ದುರ್ಗತಿಃ ಪುರುಷರ್ಷಭ ॥ ೫
ಉತ್ತರಂ ಹಿ ನ ವಕ್ತವ್ಯಂ ಜ್ಯೇಷ್ಠೇನಾಭಿಹಿತೇ ಪುನಃ ।
ಅಧರ್ಮಸಹಿತಂ ಚೈವ ಪರಲೋಕವಿವರ್ಜಿತಮ್ ॥ ೬
ಸೋಽಹಂ ದ್ವಿತೀಯಂ ಕಾಕುತ್ಸ್ಥ ನ ವಕ್ಷ್ಯಾಮಿ ತವೋತ್ತರಮ್ ।
ಮಾ ದ್ವಿತೀಯೇನ ದಂಡೋ ವೈ ನಿಪತೇನ್ಮಯಿ ಮಾನದ ॥ ೭
ಕಾಮಕಾರೋ ಹ್ಯಹಂ ರಾಜಂಸ್ತವಾಸ್ಮಿ ಪುರುಷರ್ಷಭ ।
ಅಧರ್ಮಂ ಜಹಿ ಕಾಕುತ್ಸ್ಥ ಮತ್ಕೃತೇ ರಘುನಂದನ ॥ ೮
ಏವಮುಕ್ತೇ ತು ಶೂರೇಣ ಶತ್ರುಘ್ನೇನ ಮಹಾತ್ಮನಾ ।
ಉವಾಚ ರಾಮಃ ಸಂಹೃಷ್ಟೋ ಭರತಂ ಲಕ್ಷ್ಮಣಂ ತಥಾ ॥ ೯
ಸಂಭಾರಾನಭಿಷೇಕಸ್ಯ ಆನಯಧ್ವಂ ಸಮಾಹಿತಾಃ ।
ಅದ್ಯೈವ ಪುರುಷವ್ಯಾಘ್ರಮಭಿಷೇಕ್ಷ್ಯಾಮಿ ರಾಘವಮ್ ॥ ೧೦
ಪುರೋಹಿತಂ ಚ ಕಾಕುತ್ಸ್ಥ ನೈಗಮಾನೃತ್ವಿಜಸ್ತಥಾ ।
ಮಂತ್ರಿಣಶ್ಚೈವ ತಾನ್ ಸರ್ವಾನಾನಯಧ್ವಂ ಮಮಾಜ್ಞಯಾ ॥ ೧೧

---

ಲವಣನನ್ನು ಯುದ್ಧದಲ್ಲಿ ನಾನು ಕೊಲ್ಲುವೆನೆಂದು ಘೋರವಾದ ದುರ್ವಚನವನ್ನಾಡಿಬಿಟ್ಟೆನು ! ನನ್ನ ದುರುಕ್ತಿಗೆ ಈ ದುರ್ಗತಿಯೇ ಫಲವಾಯಿತು ! ಜ್ಯೇಷ್ಠನು ಒಂದು ಮಾತನ್ನಾಡಿದಾಗ ಅದಕ್ಕೆ ಪ್ರತಿಯಾಗಿ ಉತ್ತರವನ್ನು ಹೇಳಬಾರದು ಹಾಗೆ ಹೇಳುವುದು ಅಧರ್ಮ, ಪರಲೋಕವಿನಾಶಕಾರಿ (೫-೬) ಹೀಗಿರುವಾಗ, ಕಾಕುತ್ಸ್ಥ, ಮತ್ತೆ ನಿನಗೆ ಎದುರು ಮಾತನ್ನಾಡಲಾರೆ ಇನ್ನೊಂದು ಸಲ ಮಾತನ್ನಾಡಿ ಇನ್ನೊಂದು ಶಿಕ್ಷೆಯನ್ನನುಭವಿಸಲಾರೆ ! ಮಹಾರಾಜ, ನಿನ್ನ ಇಚ್ಛೆಯಂತೆ ನಡೆಯತಕ್ಕವನು ನಾನು ರಘುನಂದನ, ನನಗೆ ಅಧರ್ಮವು ಬರದಂತೆ ಮಾಡು" ಎಂದನು (೭-೮) ಆಗ ಸಂಪ್ರೀತನಾದ ಶ್ರೀರಾಮನು ಭರತಲಕ್ಷ್ಮಣಾದಿಗಳನ್ನು ಕುರಿತು "ಪಟ್ಟಾಭಿಷೇಕಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸಿರಿ ಈ ದಿನವೇ ಪುರುಷಸಿಂಹನಾದ ಶತ್ರುಘ್ನನಿಗೆ ಪಟ್ಟಗಟ್ಟುವೆನು ಪುರೋಹಿತರಾದ ವಸಿಷ್ಠರನ್ನೂ ಋತ್ವಿಜರನ್ನೂ ಬರಮಾಡಿರಿ. ಮಂತ್ರಿಗಳನ್ನೂ ಪೌರರನ್ನೂ ಕರೆಸಿರಿ" ಎಂದು ಆಜ್ಞೆ

ರಾಜ್ಞಃ ಶಾಸನಮಾಜ್ಞಾಯ ತಥಾಕುರ್ವನ್ ಮಹಾರಥಾಃ ।
ಅಭಿಷೇಕಸಮಾರಂಭಂ ಪುರಸ್ಕೃತ್ಯ ಪುರೋಧಸಮ್ ॥ ೧೨

ಪ್ರವಿಷ್ಟಾ ರಾಜಭವನಂ ರಾಜಾನೋ ಬ್ರಾಹ್ಮಣಾಸ್ತಥಾ ।
ತಥಾಭಿಷೇಕೋ ವವೃಧೇ ಶತ್ರುಘ್ನಸ್ಯ ಮಹಾತ್ಮನಃ ॥ ೧೩

ಸಂಪ್ರಹರ್ಷಕರಃ ಶ್ರೀಮಾನ್ ರಾಘವಸ್ಯ ಪುರಸ್ಯ ಚ ।
ಅಭಿಷಿಕ್ತಸ್ತು ಶತ್ರುಘ್ನೋ ಬಭೌ ಚಾದಿತ್ಯಸಂನಿಭಃ ॥ ೧೪

ಅಭಿಷಿಕ್ತಃ ಪುರಾ ಸ್ಕಂದಃ ಸೇಂದ್ರೈರಿವ ಮರುದ್ಗಣೈಃ ।
ಅಭಿಷಿಕ್ತೇ ತು ಶತ್ರುಘ್ನೇ ರಾಮೇಣಾಕ್ಲಿಷ್ಟಕರ್ಮಣಾ ॥ ೧೫

ಪೌರಾಃ ಪ್ರಮುದಿತಾಶ್ಚಾಸನ್ ಬ್ರಾಹ್ಮಣಾಶ್ಚ ಬಹುಶ್ರುತಾಃ ।
ಕೌಸಲ್ಯಾ ಚ ಸುಮಿತ್ರಾ ಚ ಮಂಗಲಂ ಕೇಕಯೀ ತಥಾ ॥ ೧೬

ಚಕ್ರುಸ್ತಾ ರಾಜಭವನೇ ಯಾಶ್ಚಾನ್ಯಾ ರಾಜಯೋಷಿತಃ ।
ಋಷಯಶ್ಚ ಮಹಾತ್ಮಾನೋ ಯಮುನಾತೀರವಾಸಿನಃ ॥ ೧೭

---

ಮಾಡಿದನು (೯-೧೧) ರಾಜಾಜ್ಞೆಯಂತೆ ಭರತಾದಿಗಳು ಮುಂದಿನ ಸಿದ್ಧತೆಗಳನ್ನು ನಡೆಸಿದರು ಬ್ರಾಹ್ಮಣರೂ ಸಾಮಂತರಾಜರೂ ಅಭಿಷೇಕ ಸಾಮಗ್ರಿಗಳನ್ನು ತೆಗೆದುಕೊಂಡು ಪುರೋಹಿತರೊಡನೆ ರಾಜಭವನವನ್ನು ಪ್ರವೇಶಿಸಿದರು. ಮಹಾತ್ಮನಾದ ಶತ್ರುಘ್ನನ ಪಟ್ಟಾಭಿಷೇಕವು ವೈಭವದಿಂದ ನೆರವೇರಿತು (೧೨-೧೩) ಅದರಿಂದ ರಾಘವನೂ ಪೌರರೂ ಆನಂದಿಸಿದರು ಇಂದ್ರನೇ ಮೊದಲಾದ ದೇವತೆಗಳಿಂದ ತಾರಕಾಸುರನ ವಧೆಯ ಸಂದರ್ಭದಲ್ಲಿ ಪಟ್ಟಾಭಿಷಿಕ್ತನಾದ ಸ್ಕಂದಸ್ವಾಮಿಯಂತೆ, ಸೂರ್ಯಸಂಕಾಶನಾದ ಶತ್ರುಘ್ನನು ವಿರಾಜಿಸಿದನು ರಾಘವನು ಅವನಿಗೆ ಪಟ್ಟಗಟ್ಟಲಾಗಿ ಪೌರರೂ ದ್ವಿಜರೂ ಸಂತೋಷಪಟ್ಟರು ಕೌಸಲ್ಯೆ, ಸುಮಿತ್ರೆ, ಕೈಕೇಯಿ ಮತ್ತು ಅರಮನೆಯಲ್ಲಿದ್ದ ರಾಜಸ್ತ್ರೀಯರು ಶತ್ರುಘ್ನನಿಗೆ ಮಂಗಳವನ್ನು ಕೋರಿದರು (೧೪-೧೬) ಯಮುನಾತೀರವಾಸಿಗಳಾದ ಋಷಿಗಳು ಶತ್ರುಘ್ನನ ಅಭಿಷೇಕವಾದ್ದರಿಂದ ಲವಣಾಸುರನು ಹತನಾದನೆಂದೇ ತಿಳಿದರು ಹೀಗೆ ಅಭಿಷಿಕ್ತ

ಹತಂ ಲವಣಮಾಶಂಸುಃ ಶತ್ರುಘ್ನಸ್ಯಾಭಿಷೇಚನಾತ್ ।
ತತೋಽಭಿಷಿಕ್ತಂ ಶತ್ರುಘ್ನಮಂಕಮಾರೋಪ್ಯ ರಾಘವಃ ॥ ೧೮

ಉವಾಚ ಮಧುರಾಂ ವಾಣೀಂ ತೇಜಸ್ತಸ್ಯಾಭಿಪೂರಯನ್ ।
ಅಯಂ ಶರಸ್ತ್ವಮೋಘಸ್ತೇ ದಿವ್ಯಃ ಪರಪುರಂಜಯಃ ॥ ೧೯

ಅನೇನ ಲವಣಂ ಸೌಮ್ಯ ಹಂತಾಸಿ ರಘುನಂದನ ।
ಸೃಷ್ಟಃ ಶರೋಽಯಂ ಕಾಕುತ್ಸ್ಥ ಯದಾ ಶೇತೇ ಮಹಾರ್ಣವೇ ॥

ಸ್ವಯಂಭೂರಜಿತೋ ದೇವೋ ಯಂ ನಾಪಶ್ಯನ್ ಸುರಾಸುರಾಃ ।
ಅದೃಶ್ಯಃ ಸರ್ವಭೂತಾನಾಂ ತೇನಾಯಂ ತು ಶರೋತ್ತಮಃ ॥ ೨೧

ಸೃಷ್ಟಃ ಕ್ರೋಧಾಭಿಭೂತೇನ ವಿನಾಶಾರ್ಥಂ ದುರಾತ್ಮನೋಃ ।
ಮಧುಕೈಟಭಯೋರ್ವೀರ ವಿಘಾತೇ ವರ್ತಮಾನಯೋಃ ॥ ೨೨

ಸ್ರಷ್ಟುಕಾಮೇನ ಲೋಕಾಂಸ್ತ್ರೀಂಸ್ತೌ ಚಾನೇನ ಹತೌ ಯುಧಿ ।
ತೌ ಹತ್ವಾ ಜನಭೋಗಾರ್ಥಂ ಕೈಟಭಂ ತು ಮಧುಂ ತಥಾ ॥ ೨೩

ಅನೇನ ಶರಮುಖ್ಯೇನ ತತೋ ಲೋಕಾಂಶ್ಚಕಾರ ಸಃ ।
ನಾಯಂ ಮಯಾ ಶರಃ ಪೂರ್ವಂ ರಾವಣಸ್ಯ ವಧಾರ್ಥಿನಾ ॥ ೨೪

---

ನಾದ ಶತ್ರುಘ್ನನನ್ನು ಶ್ರೀರಾಮನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು, ಆತನಲ್ಲಿ ತೇಜೋವಿಶೇಷವನ್ನು ತುಂಬುತ್ತ, ಮಧುರವಾಗಿ ಇಂತೆಂದನು. "ಶತ್ರುಘ್ನ, ಇಲ್ಲಿ ನೋಡು ಇದು ಅಮೋಘವಾದ ದಿವ್ಯಾಸ್ತ್ರ (೧೭-೧೯) ಇದರಿಂದ ನೀನು ಲವಣಾಸುರನನ್ನು ಸಂಹರಿಸಬಲ್ಲೆ ಹಿಂದೆ ಸ್ವಯಂಭುವಾದ ಮಹಾವಿಷ್ಣುವು ಸುರಾಸುರರಿಗೆ ಅದೃಶ್ಯನಾಗಿ ಸಮುದ್ರದಲ್ಲಿ ಪವಡಿಸಿದ್ದನು ಆತನು ಈ ದಿವ್ಯಶರವನ್ನು ನಿರ್ಮಿಸಿದನು (೨೦-೨೧) ಸೃಷ್ಟಿಗೆ ವಿಘ್ನಕಾರಕರೂ ದುರಾತ್ಮರೂ ಆದ ಮಧುಕೈಟಭರನ್ನು ಸಂಹರಿಸುವುದಕ್ಕಾಗಿ ಕ್ರುದ್ಧನಾದ ವಿಷ್ಣುವು ಈ ಶರವನ್ನು ಸೃಜಿಸಿದನು ಪ್ರಾಣಿಗಳಿಗೆ ಸುಖದುಃಖ ಭೋಗಗಳನ್ನು ಸಂಪಾದಿಸುವುದಕ್ಕಾಗಿ ಮೂರುಲೋಕಗಳನ್ನು ಸೃಜಿಸಲಿಚ್ಛಿಸಿದ ವಿಷ್ಣುವು ಈ ಶರದಿಂದ ಮಧುಕೈಟಭರನ್ನು ಸಂಹರಿಸಿ ಲೋಕತ್ರಯವನ್ನು ಸೃಷ್ಟಿಸಿದನು (೨೨-೨೩) ಶತ್ರುಘ್ನ, ರಾವಣನನ್ನು ವಧಿಸುವಾಗ ನಾನು

ಮುಕ್ತಃ ಶತ್ರುಘ್ನ ಭೂತಾನಾಂ ಮಹಾಂಸ್ತ್ರಾಸೋ ಭವೇದಿತಿ ।
ಯಚ್ಚ ತಸ್ಯ ಮಹಚ್ಛೂಲಂ ತ್ರ್ಯಂಬಕೇಣ ಮಹಾತ್ಮನಾ ॥ ೨೫

ದತ್ತಂ ಶತ್ರುವಿನಾಶಾಯ ಮಧೋರಾಯುಧಮುತ್ತಮಮ್ ।
ಸ ತಂ ನಿಕ್ಷಿಪ್ಯ ಭವನೇ ಪೂಜ್ಯಮಾನಂ ಪುನಃ ಪುನಃ ॥ ೨೬

ದಿಶಃ ಸರ್ವಾಃ ಸಮಾಸಾದ್ಯ ಪ್ರಾಪ್ನೋತ್ಯಾಹಾರಮುತ್ತಮಮ್ ।
ಯದಾ ತು ಯುದ್ಧಮಾಕಾಂಕ್ಷನ್ ಕಶ್ಚಿದೇನಂ ಸಮಾಹ್ವಯೇತ್ ॥

ತದಾ ಶೂಲಂ ಗೃಹೀತ್ವಾ ತಂ ಭಸ್ಮ ರಕ್ಷಃ ಕರೋತಿ ಹಿ ।
ಸ ತ್ವಂ ಪುರುಷಶಾರ್ದೂಲ ತಮಾಯುಧವಿನಾಕೃತಮ್ ॥ ೨೮

ಅಪ್ರವಿಷ್ಟಂ ಪುರಂ ಪೂರ್ವಂ ದ್ವಾರಿ ತಿಷ್ಠ ಧೃತಾಯುಧಃ ।
ಅಪ್ರವಿಷ್ಟಂ ಚ ಭವನಂ ಯುದ್ಧಾಯ ಪುರುಷರ್ಷಭ ॥ ೨೯

ಆಹ್ವಯೇಥಾ ಮಹಾಬಾಹೋ ತತೋ ಹಂತಾಸಿ ರಾಕ್ಷಸಮ್ ।
ಅನ್ಯಥಾ ಕ್ರಿಯಮಾಣೇ ತು ಅವಧ್ಯಃ ಸ ಭವಿಷ್ಯತಿ ॥ ೩೦

---

ಈ ಶರವನ್ನು ಬಳಸಲಿಲ್ಲ ಜನರಿಗೆ ಮಹತ್ತರವಾದ ಹಾನಿಯಾದೀತೆಂದು ಭೂತದಯೆಯಿಂದ ಇದನ್ನು ಪ್ರಯೋಗಿಸಲಿಲ್ಲ ಮಹಾತ್ಮನಾದ ತ್ರಿಯಂಬಕನು ಮಧುವಿಗೆ ಶೂಲವೆಂಬ ಮಹಾಯುಧವನ್ನು ಕೊಟ್ಟಿರುವನಷ್ಟೆ (೨೪-೨೫) ಲವಣಾಸುರನು ಆ ಶೂಲವನ್ನು ಮನೆಯಲ್ಲಿಟ್ಟು ಆಹಾರಾರ್ಥವಾಗಿ ವಿವಿಧ ದಿಕ್ಕುಗಳಲ್ಲಿ ಸಂಚರಿಸುತ್ತಾನೆ ಯಾರಾದರೂ ಅವನನ್ನು ಯುದ್ಧಕ್ಕೆ ಕರೆದರೆ, ಆಗ ಶೂಲವನ್ನು ತಂದು ಶತ್ರುವನ್ನು ವಧಿಸುತ್ತಾನೆ (೨೬-೨೭) ಆದ್ದರಿಂದ, ವೀರಾಗ್ರಣಿ, ಲವಣನು ಶೂಲವನ್ನು ಧರಿಸದೆ ನಗರದಿಂದ ಹೊರಗೆ ಹೋಗಿದ್ದಾಗ ಅವನನ್ನೆದುರಿಸು ನಗರದೊಳಗೆ ಅವನು ಪ್ರವೇಶಿಸುವುದಕ್ಕೆ ಮೊದಲೇ ಪುರದ್ವಾರದಲ್ಲಿ ಆಯುಧಧಾರಿಯಾಗಿ ನಿಂತು ಅಡ್ಡಗಟ್ಟು (೨೮-೨೯) ಹೀಗೆ ಮಾಡಿದಲ್ಲಿ ಆ ರಾಕ್ಷಸನನ್ನು ನೀನು ಕೊಲ್ಲಬಹುದು ಇಲ್ಲದಿದ್ದರೆ ಕೊಲ್ಲಲು ಸಾಧ್ಯವಿಲ್ಲ ಶತ್ರುಘ್ನ, ನಾನು

ಯದಿ ತ್ವೇವಂ ಕೃತಂ ವೀರ ವಿನಾಶಮುಪಯಾಸ್ಯತಿ ।
ಏತತ್ತೇ ಸರ್ವಮಾಖ್ಯಾತಂ ಶೂಲಸ್ಯ ಚ ವಿಪರ್ಯಯಃ ॥ ೩೧
ಶ್ರೀಮತಃ ಶಿತಿಕಂಠಸ್ಯ ಕೃತ್ಯಂ ಹಿ ದುರತಿಕ್ರಮಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರಿಷಷ್ಟಿತಮಃ ಸರ್ಗಃ

---

## ಚತುಃಷಷ್ಟಿತಮಃ ಸರ್ಗಃ

### ಶತ್ರುಘ್ನಪ್ರಸ್ಥಾನಮ್

ಏವಮುಕ್ತ್ವಾ ಚ ಕಾಕುತ್ಸ್ಥಂ ಪ್ರಶಸ್ಯ ಚ ಪುನಃ ಪುನಃ ।
ಪುನರೇವಾಪರಂ ವಾಕ್ಯಮುವಾಚ ರಘುನಂದನಃ ॥ ೧

ಇಮಾನ್ಯಶ್ವಸಹಸ್ರಾಣಿ ಚತ್ವಾರಿ ಪುರುಷರ್ಷಭ ।
ರಥಾನಾಂ ದ್ವೇ ಸಹಸ್ರೇ ಚ ಗಜಾನಾಂ ಶತಮುತ್ತಮಮ್ ॥ ೨

---

ಹೇಳಿದಂತೆ ನಡೆದರೆ ಲವಣನು ಹತನಾಗುವನು ಈಶ್ವರನ ಶೂಲಾಯುಧಕ್ಕೆ ಪರಿಹಾರವೇನೆಂಬುದನ್ನು ಹೇಳಿದ್ದೇನೆ (ಬೇರೆ ದಾರಿ ಇಲ್ಲ) ಶ್ರೀರುದ್ರನ ಕೃತ್ಯವು ದುರ್ಲಂಘ್ಯವಾದುದು" ಎಂದು ಬೋಧಿಸಿದನು (೩೦-೩೧)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರುವತ್ತು ಮೂರನೆಯ ಸರ್ಗ

---

## ಸರ್ಗ ೬೪

### ಲವಣಾಸುರನ ಸಂಹಾರಕ್ಕಾಗಿ ಶತ್ರುಘ್ನನ ಪ್ರಯಾಣ

ರಘುನಂದನನು ಶತ್ರುಘ್ನನಿಗೆ ಹೀಗೆ ಹೇಳಿ ಅವನನ್ನು ಕೊಂಡಾಡಿ ಮತ್ತೆ ಇಂತೆಂದನು. "ಶತ್ರುಘ್ನ, ನಿನ್ನೊಡನೆ ನಾಲ್ಕು ಸಾವಿರ ಅಶ್ವಗಳೂ ಎರಡು ಸಾವಿರ ರಥಗಳೂ ಒಂದು ನೂರು ಆನೆಗಳೂ ಹೋಗಲಿ (೧-೨)

ಅಂತರಾಪಣವೀಥ್ಯಶ್ಚ ನಾನಾಪಣ್ಯೋಪಶೋಭಿತಾಃ ।
ಅನುಗಚ್ಛಂತು ಕಾಕುತ್ಸ್ಥಂ ತಥೈವ ನಟನರ್ತಕಾಃ ॥ ೩

ಹಿರಣ್ಯಸ್ಯ ಸುವರ್ಣಸ್ಯ ನಿಯುತಂ ಪುರುಷರ್ಷಭ ।
ಆದಾಯ ಗಚ್ಛ ಶತ್ರುಘ್ನ ಪರ್ಯಾಪ್ತಧನವಾಹನಃ ॥ ೪

ಬಲಂ ಚ ಸುಭೃತಂ ವೀರ ಹೃಷ್ಟಪುಷ್ಟಮನುತ್ತಮಮ್ ।
ಸಂಭಾಷಾಸಂಪ್ರದಾನೇನ ರಂಜಯಸ್ವ ನರೋತ್ತಮ ॥ ೫

ನ ಹ್ಯರ್ಥಾಸ್ತತ್ರ ತಿಷ್ಠಂತಿ ನ ದಾರಾ ನ ಚ ಬಾಂಧವಾಃ ।
ಸುಪ್ರೀತೋ ಭೃತ್ಯವರ್ಗಶ್ಚ ಯತ್ರ ತಿಷ್ಠಸಿ ರಾಘವ ॥ ೬

ತತೋ ಹೃಷ್ಟಜನಾಕೀರ್ಣಾಂ ಪ್ರಸ್ಥಾಪ್ಯ ಮಹತೀಂ ಚಮೂಮ್ ।
ಏಕ ಏವ ಧನುಷ್ಪಾಣಿರ್ಗಚ್ಛ ತ್ವಂ ಮಧುನೋ ವನಮ್ ॥ ೭

ಯಥಾ ತ್ವಾಂ ನ ಪ್ರಜಾನಾತಿ ಗಚ್ಛಂತಂ ಯುದ್ಧಕಾಂಕ್ಷಿಣಮ್ ।
ಲವಣಸ್ತು ಮಧೋಃ ಪುತ್ರಸ್ತಥಾ ಗಚ್ಛೇರಶಂಕಿತಮ್ ॥ ೮

---

ದಾರಿಯ ಮಧ್ಯದಲ್ಲಿ ಆವಶ್ಯಕವಾದ್ದರಿಂದ ಮಾರಾಟದ ನಾನಾ ಸರಕುಗಳೊಡನೆ ವರ್ತಕರೂ ಹೋಗಲಿ ಜೊತೆಯಲ್ಲಿ ಮನೋರಂಜನೆಗಾಗಿ ನಟವರ್ತಕರೂ ಪ್ರಯಾಣಮಾಡಲಿ ಶತ್ರುಘ್ನ, ಉತ್ತಮವಾದ ಒಂದು ಲಕ್ಷ ಸುವರ್ಣ ನಾಣ್ಯಗಳನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗು. ನಿನಗೆ ಬೇಕಾದಷ್ಟು ಧನವಾಹನಗಳು ಬಳಿಯಲ್ಲಿರಲಿ (೩-೪) ಸೈನಿಕರಿಗೆ ಚೆನ್ನಾಗಿ ಸಂಬಳ ನಾರಿಗೆಗಳನ್ನು ಕೊಟ್ಟು ಅವರೆಲ್ಲರೂ ಹೃಷ್ಟಪುಷ್ಟರಾಗಿರುವಂತೆ ನೋಡಿಕೊ ಒಳ್ಳೆಯ ಮಾತುಗಳಿಂದ ಅವರನ್ನು ಸಂತೋಷಪಡಿಸುತ್ತಿರು. ನೀನು ಹೋಗಿ ನೆಲೆಸುವ ವನಪ್ರದೇಶದಲ್ಲಿ ಧನ ಮಡದಿ ಬಾಂಧವರು ಭೃತ್ಯವರ್ಗ—ಮೊದಲಾದವರು ಯಾರೂ ಇಲ್ಲ (ಆದ್ದರಿಂದ ಸಕಲ ಸಾಮಗ್ರೀ ಸಹಿತನಾಗಿ ಹೋಗು) (೫-೬) ಹೃಷ್ಟಜನರಿಂದ ತುಂಬಿದ ದೊಡ್ಡ ಸೇನೆಯನ್ನು ಮೊದಲು ಮುಂದೆ ಕಳಿಸು ಆಮೇಲೆ ನೀನೊಬ್ಬನೇ ಧನುಷ್ಪಾಣಿಯಾಗಿ ಮಧುವನಕ್ಕೆ ಹೋಗು ನೀನು ಯುದ್ಧಾಪೇಕ್ಷೆಯಿಂದ ಬರುತ್ತಿರುವೆಯೆಂದು ಮಧುಪುತ್ರನಾದ ಲವಣನಿಗೆ ಸಂದೇಹ ಬರಬಾರದು ಆ ರೀತಿ

ನ ತಸ್ಯ ಮೃತ್ಯುರನ್ಯೋಽಸ್ತಿ ಕಶ್ಚಿದ್ಧಿ ಪುರುಷರ್ಷಭ ।
ದರ್ಶನಂ ಯೋಽಭಿಗಚ್ಛೇತ ಸ ವಧ್ಯೋ ಲವಣೇನ ಹಿ ॥ ೯

ಸ ಗ್ರೀಷ್ಮೇ ಅಪಯಾತೇ ತು ವರ್ಷಾರಾತ್ರ ಉಪಾಗತೇ ।
ಹನ್ಯಾಸ್ತ್ವಂ ಲವಣಂ ಸೌಮ್ಯ ಸ ಹಿ ಕಾಲೋಽಸ್ಯ ದುರ್ಮತೇಃ ॥ ೧೦

ಮಹರ್ಷೀಂಸ್ತು ಪುರಸ್ಕೃತ್ಯ ಪ್ರಯಾಂತು ತವ ಸೈನಿಕಾಃ ।
ಯಥಾ ಗ್ರೀಷ್ಮಾವಶೇಷೇಣ ತರೇಯುರ್ಜಾಹ್ನವೀಜಲಮ್ ॥ ೧೧

ತತ್ರ ಸ್ಥಾಪ್ಯ ಬಲಂ ಸರ್ವಂ ನದೀತೀರೇ ಸಮಾಹಿತಃ ।
ಅಗ್ರತೋ ಧನುಷಾ ಸಾರ್ಧಂ ಗಚ್ಛ ತ್ವಂ ಲಘುವಿಕ್ರಮಃ ॥ ೧೨

ಏವಮುಕ್ತಸ್ತು ರಾಮೇಣ ಶತ್ರುಘ್ನಸ್ತಾನ್ ಮಹಾಬಲಾನ್ ।
ಸೇನಾಮುಖ್ಯಾನ್ ಸಮಾನೀಯ ತತೋ ವಾಕ್ಯಮುವಾಚ ಹ ॥ ೧೩

ಏತೇ ವೋ ಗಣಿತಾ ವಾಸಾ ಯತ್ರ ತತ್ರ ನಿವತ್ಸ್ಯಥ ।
ಸ್ಥಾತವ್ಯಂ ಚಾವಿರೋಧೇನ ಯಥಾ ಬಾಧಾ ನ ಕಸ್ಯಚಿತ್ ॥ ೧೪

---

ಯಲ್ಲಿ ಹೋಗು (೭-೮) ಆತನಿಗೆ ಶಂಕೆಯುಂಟಾಗದಂತೆ ಹೋಗಿ ಎದುರಿಸ ತಕ್ಕವನಲ್ಲದೆ ಇನ್ನೊಬ್ಬನು ಆತನನ್ನು ಕೊಲ್ಲಲಾರ ಶೂಲಸಹಿತನಾದ ಲವಣನಿಗೆ ಯಾವನು ಗೋಚರಿಸುವನೋ ಆತನನ್ನು ಲವಣನು ಕೊಂದೇ ತೀರುವನು (೯) ಸೌಮ್ಯ–ಶತ್ರುಘ್ನ, ಗ್ರೀಷ್ಮಕಾಲವು ಕಳೆದು ವರ್ಷಾ ಕಾಲವು ಬಂದಾಗ ಆತನನ್ನು ವಧಿಸು ಅದೇ ಆ ದುರುಳನಿಗೆ ಮೃತ್ಯುಕಾಲ ಮಹರ್ಷಿಗಳನ್ನು ಮುಂದೆ ಮಾಡಿಕೊಂಡು ನಿನ್ನ ಸೈನಿಕರು ಪ್ರಯಾಣ ಮಾಡಲಿ ಗ್ರೀಷ್ಮಋತುವಿನಲ್ಲಿ ಅವರು ಗಂಗಾನದಿಯನ್ನು ದಾಟಲಿ (೧೦-೧೧) ದಾಟಿದಮೇಲೆ ಸೈನಿಕರನ್ನು ಅಲ್ಲಿಯೇ ನಿಲ್ಲಿಸಿ, ನೀನು ಎಚ್ಚರಿಕೆಯಿಂದ ಧನುರ್ಧಾರಿಯಾಗಿ ತ್ವರೆಯಿಂದ ಹೋಗು" ಎಂದು ಹಿತವಚನವನ್ನಾಡಿದನು (೧೨) ಅನಂತರ ಶತ್ರುಘ್ನನು ಬಲಾಢ್ಯರಾದ ಸೇನಾಪತಿಗಳನ್ನು ಕರೆಸಿ, "ಸೇನಾಪತಿಗಳೆ, ನೀವು ಎಲ್ಲೆಲ್ಲಿ ಶಿಬಿರಗಳನ್ನು ಹಾಕಿ ವಾಸಿಸಬೇಕೋ ಅದು ಕ್ಲೃಪ್ತವಾಗಿದೆ ನೀವು ಸುತ್ತಲಿರುವ ಜನರಲ್ಲಿ ಯಾರಿಗೂ ತೊಂದರೆಯಾಗ ದಂತೆ ವಿರೋಧವನ್ನೆಬ್ಬಿಸದೆ ನೆಲೆಸಬೇಕು" ಎಂದು ಆಜ್ಞಾಪಿಸಿದನು

ತಥಾ ತಾಂಸ್ತು ಸಮಾಜ್ಞಾಪ್ಯ ಪ್ರಸ್ಥಾಪ್ಯ ಚ ಮಹದ್ಬಲಮ್ ।
ಕೌಸಲ್ಯಾಂ ಚ ಸುಮಿತ್ರಾಂ ಚ ಕೈಕೇಯೀಂ ಚಾಭ್ಯವಾದಯತ್ ॥

ರಾಮಂ ಪ್ರದಕ್ಷಿಣೀಕೃತ್ಯ ಶಿರಸಾಭಿಪ್ರಣಮ್ಯ ಚ ।
ರಾಮೇಣ ಚಾಭ್ಯನುಜ್ಞಾತಃ ಶತ್ರುಘ್ನಃ ಶತ್ರುತಾಪನಃ ॥ ೧೬

ಲಕ್ಷ್ಮಣಂ ಭರತಂ ಚೈವ ಪ್ರಣಿಪತ್ಯ ಕೃತಾಂಜಲಿಃ ।
ಪುರೋಹಿತಂ ವಸಿಷ್ಠಂ ಚ ಶತ್ರುಘ್ನಃ ಪ್ರಯತಾತ್ಮವಾನ್ ॥ ೧೭

ಪ್ರದಕ್ಷಿಣಮಥೋ ಕೃತ್ವಾ ನಿರ್ಜಗಾಮ ಮಹಾಬಲಃ ॥

ಪ್ರಸ್ಥಾಪ್ಯ ಸೇನಾಮಥ ಸೋऽಗ್ರತಸ್ತದಾ
ಗಜೇಂದ್ರವಾಜಿಪ್ರವರೌಘಸಂಕುಲಾಮ್ ।
ಉವಾಸ ಮಾಸಂ ತು ನರೇಂದ್ರಪಾರ್ಶ್ವತ-
ಸ್ತ್ವಥ ಪ್ರಯಾತೋ ರಘುವಂಶವರ್ಧನಃ ॥ ೧೮

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುಃಷಷ್ಟಿತಮಃ ಸರ್ಗಃ



(೧೩-೧೪) ಹೀಗೆ ಆಜ್ಞಾಪಿಸಿ ದೊಡ್ಡ ಸೈನ್ಯವನ್ನು ಕಳಿಸಿ ಕೌಸಲ್ಯಾ ಸುಮಿತ್ರಾ ಕೈಕೇಯಿಯರಿಗೆ ಅಭಿವಾದನೆಮಾಡಿದನು (೧೫) ಆಮೇಲೆ ಶತ್ರುತಾಪನನಾದ ಶತ್ರುಘ್ನನು ಶ್ರೀರಾಮನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಅನುಜ್ಞೆಯನ್ನು ಪಡೆದು, ಭರತಲಕ್ಷ್ಮಣರಿಗೆ ವಂದಿಸಿ, ಪುರೋಹಿತರಾದ ವಸಿಷ್ಠರಿಗೆ ಬಲವಂದು ಪ್ರಯಾಣಮಾಡಿದನು (೧೬-೧೭) ಶತ್ರುಘ್ನನು ಗಜಾಶ್ವಗಳಿಂದ ಸಂಕುಲವಾದ ಸೇನೆಯನ್ನು ಮುಂದೆ ಕಳಿಸಿ, ನರೇಂದ್ರನಾದ ಶ್ರೀರಾಮನ ಜೊತೆಗೆ ಒಂದು ತಿಂಗಳಿದ್ದು ಅನಂತರ ಪ್ರಯಾಣಮಾಡಿದನು (೧೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರವತ್ತುನಾಲ್ಕನೆಯ ಸರ್ಗ



## ಪಂಚಷಷ್ಟಿತಮಃ ಸರ್ಗಃ

### ಸೌದಾಸಕಥಾ

ಪ್ರಸ್ಥಾಪ್ಯ ತು ಬಲಂ ಸರ್ವಂ ಮಾಸಮಾತ್ರೋಷಿತಃ ಪಥಿ ।
ಏಕ ಏವಾಶು ಶತ್ರುಘ್ನೋ ಜಗಾಮ ತ್ವರಿತಂ ತದಾ ॥ ೧

ದ್ವಿರಾತ್ರಮಂತರೇ ಶೂರ ಉಷ್ಯ ರಾಘವನಂದನಃ ।
ವಾಲ್ಮೀಕೇರಾಶ್ರಮಂ ಪುಣ್ಯಮಗಚ್ಛದ್ವಾಸಮುತ್ತಮಮ್ ॥ ೨

ಸೋಽಭಿವಾದ್ಯ ಮಹಾತ್ಮಾನಂ ವಾಲ್ಮೀಕಿಂ ಮುನಿಸತ್ತಮಮ್ ।
ಕೃತಾಂಜಲಿರಥೋ ಭೂತ್ವಾ ವಾಕ್ಯಮೇತದುವಾಚ ಹ ॥ ೩

ಭಗವನ್ ವಸ್ತುಮಿಚ್ಛಾಮಿ ಗುರೋಃ ಕೃತ್ಯಾದಿಹಾಗತಃ ।
ಶ್ವಃ ಪ್ರಭಾತೇ ಗಮಿಷ್ಯಾಮಿ ಪ್ರತೀಚೀಂ ವಾರುಣೀಂ ದಿಶಮ್ ॥ ೪

ಶತ್ರುಘ್ನಸ್ಯ ವಚಃ ಶ್ರುತ್ವಾ ಪ್ರಹಸ್ಯ ಮುನಿಪುಂಗವಃ ।
ಪ್ರತ್ಯುವಾಚ ಮಹಾತ್ಮಾನಂ ಸ್ವಾಗತಂ ತೇ ಮಹಾಯಶಃ ॥ ೫

### ಸರ್ಗ ೬೫

ಶತ್ರುಘ್ನನು ದಾರಿಯಲ್ಲಿ ವಾಲ್ಮೀಕಿಮುನಿಗಳ ಆಶ್ರಮಕ್ಕೆ ಹೋಗುವುದು
ಆ ಮುನಿಗಳು ಶತ್ರುಘ್ನನಿಗೆ ಸೌದಾಸನ ವೃತ್ತಾಂತವನ್ನು ಹೇಳುವುದು.

ಶತ್ರುಘ್ನನು ತನ್ನ ಸೇನೆಯನ್ನು ಮುಂದೆ ಕಳಿಸಿ ಅಯೋಧ್ಯೆಯಲ್ಲಿ ಒಂದು ತಿಂಗಳಿದ್ದು, ಅನಂತರ ತಾನೊಬ್ಬನೇ ಏಕಾಕಿಯಾಗಿ ತ್ವರೆಯಿಂದ ದಾರಿಯನ್ನು ಹಿಡಿದು ಹೊರಟನು (೧) ದಾರಿಯಲ್ಲಿ ಎರಡು ರಾತ್ರಿಗಳನ್ನು ಕಳೆದು ಮೂರನೆಯ ದಿನ ತಂಗುವುದಕ್ಕಾಗಿ ವಾಲ್ಮೀಕಿಮುನಿಗಳ ಪುಣ್ಯಾಶ್ರಮಕ್ಕೆ ಹೋದನು. ಅಲ್ಲಿ ವಾಲ್ಮೀಕಿಮಹರ್ಷಿಗಳನ್ನು ಕಂಡು ಅಭಿವಾದನೆಮಾಡಿ ಕೃತಾಂಜಲಿಯಾಗಿ "ಭಗವನ್, ಈ ದಿನ ಇಲ್ಲಿ ಇಳಿದುಕೊಳ್ಳಲು ಬಯಸುತ್ತೇನೆ ನನ್ನ ಅಣ್ಣನ ಒಂದು ಕಾರ್ಯಕ್ಕಾಗಿ ಇತ್ತ ಬಂದಿದ್ದೇನೆ ನಾಳೆ ಪ್ರಾತಃಕಾಲ ವರುಣಪಾಲಿತವಾದ ಪಶ್ಚಿಮ ದಿಕ್ಕಿಗೆ ಹೋಗತಕ್ಕವನಾಗಿದ್ದೇನೆ" ಎಂದನು (೨-೪) ಶತ್ರುಘ್ನನ ಮಾತನ್ನು ಕೇಳಿ

*

ಸ್ವಮಾಶ್ರಮಮಿದಂ ಸೌಮ್ಯ ರಾಘವಾಣಾಂ ಕುಲಸ್ಯ ಹಿ ।
ಆಸನಂ ಪಾದ್ಯಮರ್ಘ್ಯಂ ಚ ನಿರ್ವಿಶಂಕಃ ಪ್ರತೀಚ್ಛ ಮೇ ॥ ೬

ಪ್ರತಿಗೃಹ್ಯ ತದಾ ಪೂಜಾಂ ಫಲಮೂಲಂ ಚ ಭೋಜನಮ್ ।
ಭಕ್ಷಯಾಮಾಸ ಕಾಕುತ್ಸ್ಥಸ್ತೃಪ್ತಿಂ ಚ ಪರಮಾಂ ಗತಃ ॥ ೭

ಸ ಭುಕ್ತ್ವಾ ಫಲಮೂಲಂ ಚ ಮಹರ್ಷಿಂ ತಮುವಾಚ ಹ ।
ಪೂರ್ವಾ ಯಜ್ಞವಿಭೂತೀಯಂ ಕಸ್ಯಾಶ್ರಮಸಮೀಪತಃ ॥ ೮

ತತ್ತಸ್ಯ ಭಾಷಿತಂ ಶ್ರುತ್ವಾ ವಾಲ್ಮೀಕಿರ್ವಾಕ್ಯಮಬ್ರವೀತ್ ।
ಶತ್ರುಘ್ನ ಶೃಣು ಯಸ್ಯೇದಂ ಬಭೂವಾಯತನಂ ಪುರಾ ॥ ೯

ಯುಷ್ಮಾಕಂ ಪೂರ್ವಕೋ ರಾಜಾ ಸುದಾಸಸ್ತಸ್ಯ ಭೂಪತೇಃ ।
ಪುತ್ರೋ ವೀರಸಹೋ ನಾಮ ವೀರ್ಯವಾನತಿಧಾರ್ಮಿಕಃ ॥ ೧೦

ಸ ಬಾಲ ಏವ ಸೌದಾಸೋ ಮೃಗಯಾಮುಪಚಕ್ರಮೇ ।
ಚಂಚೂರ್ಯಮಾಣಂ ದದೃಶೇ ಸ ಶೂರೋ ರಾಕ್ಷಸದ್ವಯಮ್ ॥

---

ಆ ಮುನಿಪುಂಗವರು ನಕ್ಕು* "ಕೀರ್ತಿಶಾಲಿಯೆ, ನಿನಗೆ ಸ್ವಾಗತ. ಈ ಆಶ್ರಮವು ರಘುಕುಲದವರಿಗೆ ಸೇರಿದ್ದು! ಯಾವ ಸಂಕೋಚವನ್ನೂ ಪಡದೆ ಆಸನವನ್ನೂ ಅರ್ಘ್ಯಪಾದ್ಯಾದಿಸತ್ಕಾರಗಳನ್ನೂ ಸ್ವೀಕರಿಸು" ಎಂದರು (೫-೬) ಶತ್ರುಘ್ನನು ಮುನಿಗಳ ಸತ್ಕಾರವನ್ನು ಸ್ವೀಕರಿಸಿ ಫಲಮೂಲಗಳನ್ನು ಭುಂಜಿಸಿ ಸಂತೃಪ್ತನಾದನು ಆಮೇಲೆ ವಾಲ್ಮೀಕಿಮುನಿಗಳನ್ನು ಕುರಿತು "ಮಹಾತ್ಮರೆ, ನಿಮ್ಮ ಆಶ್ರಮದ ಸಮೀಪದಲ್ಲಿ ಪೂರ್ವದಿಕ್ಕಿಗೆ ಯೂಪಾದಿಯಜ್ಞೋಪಕರಣಗಳ ಸಮೃದ್ಧಚಿಹ್ನೆಯು ಕಾಣಿಸುವುದಲ್ಲ, ಆ ಯಜ್ಞವು ಯಾರದು?" ಎಂದು ಕೇಳಿದನು (೭-೮) ಆಗ ವಾಲ್ಮೀಕಿ ಮುನಿಗಳು ಇಂತೆಂದರು "ಶತ್ರುಘ್ನ, ಇದು ಯಾರ ಯಜ್ಞಭೂಮಿಯಾಗಿತ್ತೆಂಬುದನ್ನು ಹೇಳುವೆನು, ಕೇಳು ನಿಮ್ಮ ವಂಶದಲ್ಲಿ ಹಿಂದೆ ಸುದಾಸನೆಂಬ ಒಬ್ಬ ಭೂಪತಿ ಇದ್ದನು ಅವನ ಮಗ ವೀರಸಹ ಅವನು ವೀರನೂ ಧಾರ್ಮಿಕನೂ ಆಗಿದ್ದನು (೯-೧೦) ಸುದಾಸಪುತ್ರನಾದ ವೀರಸಹನು

---

* ವಾಲ್ಮೀಕಿಮುನಿಗಳು ನಕ್ಕದ್ದೇಕೆ? ಸೀತೆ ಆಶ್ರಮದಲ್ಲಿರುವಳೆಂದೆ? ಶತ್ರುಘ್ನನು ಆಶ್ರಯವನ್ನು ಬೇಡುವನೆಂದೆ? ಬಂದ ನಿಮಿತ್ತವನ್ನು ಸ್ಪಷ್ಟವಾಗಿ ತಿಳಿಸಲಿಲ್ಲವೆಂದೆ? ಯಥೋಚಿತವಾಗಿ ಊಹಿಸಿಕೊಳ್ಳಬಹುದು.

ಶಾರ್ದೂಲರೂಪಿಣೌ ಘೋರೌ ಮೃಗಾನ್ ಬಹುಸಹಸ್ರಶಃ ।
ಭಕ್ಷಮಾಣಾವಸಂತುಷ್ಟೌ ಪರ್ಯಾಪ್ತಿಂ ನೈವ ಜಗ್ಮತುಃ ॥ ೧೨

ಸ ತು ತೌ ರಾಕ್ಷಸೌ ದೃಷ್ಟ್ವಾ ನಿರ್ಮೃಗಂ ಚ ವನಂ ಕೃತಮ್ ।
ಕ್ರೋಧೇನ ಮಹತಾವಿಷ್ಟೋ ಜಘಾನೈಕಂ ಮಹೇಷುಣಾ ॥ ೧೩

ವಿನಿಪಾತ್ಯ ತಮೇಕಂ ತು ಸೌದಾಸಃ ಪುರುಷರ್ಷಭಃ ।
ವಿಜ್ವರೋ ವಿಗತಾಮರ್ಷೋ ಹತಂ ರಕ್ಷೋ ಹ್ಯುದೈಕ್ಷತ ॥ ೧೪

ನಿರೀಕ್ಷಮಾಣಂ ತಂ ದೃಷ್ಟ್ವಾ ಸಹಾಯಂ ತಸ್ಯ ರಕ್ಷಸಃ ।
ಸಂತಾಪಮಕರೋದ್ಘೋರಂ ಸೌದಾಸಂ ಚೇದಮಬ್ರವೀತ್ ॥ ೧೫

ಯಸ್ಮಾದನಪರಾಧಂ ತ್ವಂ ಸಹಾಯಂ ಮಮ ಜಘ್ನಿವಾನ್ ।
ತಸ್ಮಾತ್ತವಾಪಿ ಪಾಪಿಷ್ಠ ಪ್ರದಾಸ್ಯಾಮಿ ಪ್ರತಿಕ್ರಿಯಾಮ್ ॥ ೧೬

ಏವಮುಕ್ತ್ವಾ ತು ತದ್ರಕ್ಷಸ್ತತ್ರೈವಾಂತರಧೀಯತ ।
ಕಾಲಪರ್ಯಾಯಯೋಗೇನ ರಾಜಾ ಮಿತ್ರಸಹೋಽಭವತ್ ॥ ೧೭

---

ಬಾಲಕನಾಗಿರುವಾಗಲೇ ಬೇಟೆಯಾಡಲು ಆರಂಭಿಸಿದನು ಒಂದು ಸಲ ಆತನು ಅಡವಿಯಲ್ಲಿ ಅಲೆದಾಡುತ್ತಿದ್ದ ಇಬ್ಬರು ರಾಕ್ಷಸರನ್ನು ಕಂಡನು. ಆ ರಾಕ್ಷಸರು ಭಯಂಕರವಾದ ಹುಲಿಗಳ ರೂಪವನ್ನು ಧರಿಸಿ ವನದಲ್ಲಿದ್ದ ಮೃಗಗಳೆಲ್ಲವನ್ನೂ ಸಾವಿರಗಟ್ಟಲೆ ತಿಂದುಹಾಕಿದ್ದರು ಆದರೂ ಅವರಿಗೆ ತೃಪ್ತಿಯಾಗಿರಲಿಲ್ಲ (೧೧-೧೨) ಅವರಿಬ್ಬರೂ ಸೇರಿ ಅಡವಿಯನ್ನು ಮೃಗಶೂನ್ಯವಾಗಿ ಮಾಡಿದ್ದರಿಂದ ವೀರಸಹನು ಕ್ರುದ್ಧನಾಗಿ ಮಹಾಶರದಿಂದ ಒಬ್ಬ ರಾಕ್ಷಸನಿಗೆ ಗುರಿಯಿಟ್ಟು ಹೊಡೆದು ಕೊಂದನು ಕೊಂದಮೇಲೆ ನಿರಾತಂಕನಾಗಿ ನೋಡಲಾಗಿ ಸತ್ತವನು ರಾಕ್ಷಸನಾಗಿದ್ದನು! (೧೩-೧೪) ಇನ್ನೊಬ್ಬ ರಾಕ್ಷಸನು ತನ್ನ ಜೊತೆಗಾರನಾದ ರಾಕ್ಷಸನನ್ನು ವೀರಸಹನು ಸಂಹರಿಸಿ ನಿಶ್ಚಿಂತೆಯಿಂದ ನೋಡುತ್ತಿರುವುದನ್ನು ಕಂಡು ಸಿಟ್ಟಿನಿಂದ ಉರಿದೆದ್ದನು ಅವನು ಸುದಾಸಪುತ್ರನಿಗೆ "ಎಲೈ ಪಾಪಿಷ್ಠ! ಯಾವ ಅಪರಾಧವನ್ನು ಮಾಡದಿದ್ದರೂ ನನ್ನ ಗೆಳೆಯನನ್ನು ಸಂಹರಿಸಿದೆಯಲ್ಲವೆ? ಇದಕ್ಕೆ ತಕ್ಕ ರೀತಿಯಲ್ಲಿ ಮುಯ್ಯಿ ತೀರಿಸಿಕೊಳ್ಳುವೆನು!" ಎಂದು ಹೇಳಿ ಅಂತರ್ಧಾನಹೊಂದಿದನು (೧೫-೧೬) ಕಾಲವು ಕಳೆಯಿತು. ಮಿತ್ರಸಹನು *

---

* ವೀರಸಹನಿಗೆ ಮಿತ್ರಸಹನೆಂಬ ಇನ್ನೊಂದು ಹೆಸರಿತ್ತು ಸೌದಾಸನೆಂದರೂ ಈತನೇ

ರಾಜಾ ತು ಯಜತೇ ಯಜ್ಞಮಸ್ಯಾಶ್ರಮಸಮೀಪತಃ ।
ಅಶ್ವಮೇಧಂ ಮಹಾಯಜ್ಞಂ ತಂ ವಸಿಷ್ಠೋಽಭ್ಯಪಾಲಯತ್ ॥ ೧೮

ತತ್ರ ಯಜ್ಞೋ ಮಹಾನಾಸೀದ್ಬಹುವರ್ಷಗಣಾಯುತಃ ।
ಸಮೃದ್ಧಃ ಪರಯಾ ಲಕ್ಷ್ಮ್ಯಾ ದೇವಯಜ್ಞಸಮೋಽಭವತ್ ॥ ೧೯

ಅಥಾವಸಾನೇ ಯಜ್ಞಸ್ಯ ಪೂರ್ವವೈರಮನುಸ್ಮರನ್ ।
ವಸಿಷ್ಠರೂಪೀ ರಾಜಾನಮಿತಿ ಹೋವಾಚ ರಾಕ್ಷಸಃ ॥ ೨೦

ಅಸ್ಯ ಯಜ್ಞಸ್ಯ ಜಾತೋಽಂತಃ ಸಾಮಿಷಂ ಭೋಜನಂ ಮಮ ।
ದೀಯತಾಮಿಹ ಶೀಘ್ರಂ ವೈ ನಾತ್ರ ಕಾರ್ಯಾ ವಿಚಾರಣಾ ॥ ೨೧

ತಚ್ಛ್ರುತ್ವಾ ವ್ಯಾಹೃತಂ ವಾಕ್ಯಂ ರಕ್ಷಸಾ ಬ್ರಹ್ಮರೂಪಿಣಾ ।
ಭಕ್ಷ್ಯಸಂಸ್ಕಾರಕುಶಲಮುವಾಚ ಪೃಥಿವೀಪತಿಃ ॥ ೨೨

ಹವಿಷ್ಯಂ ಸಾಮಿಷಂ ಸ್ವಾದು ಯಥಾ ಭವತಿ ಭೋಜನಮ್ ।
ತಥಾ ಕುರುಷ್ವ ಶೀಘ್ರಂ ವೈ ಪರಿತುಷ್ಯೇದ್ಯಥಾ ಗುರುಃ ॥ ೨೩

---

ರಾಜನಾದನು ಆತನು ಈ ಆಶ್ರಮದ ಸಮೀಪದಲ್ಲಿ ಅಶ್ವಮೇಧವೆಂಬ ಮಹಾಯಜ್ಞವನ್ನಾರಂಭಿಸಿದನು ವಸಿಷ್ಠರು ಯಜ್ಞದ ವಿಚಾರಣಕರ್ತ ರಾಗಿದ್ದರು ಬಹುವರ್ಷಗಳವರೆಗೆ ಯಜ್ಞವು ನಾಗಿತು ಸಕಲ ಸಂಪತ್ತು ಗಳಿಂದಲೂ ಸಮೃದ್ಧವಾದ ಆ ಯಜ್ಞವು ದೇವಯಜ್ಞಕ್ಕೆ ಸಮಾನವಾಗಿತ್ತು (೧೭-೧೯) ಯಜ್ಞವು ಮುಗಿಯಲಾಗಿ ಆ ರಾಕ್ಷಸನು ಪೂರ್ವವೈರವನ್ನು ಸ್ಮರಿಸಿಕೊಂಡು ವಸಿಷ್ಠಮುನಿಗಳ ರೂಪವನ್ನು ಧರಿಸಿ ಬಂದು "ರಾಜ-ಸೌದಾಸ, ಯಜ್ಞವು ಸಮಾಪ್ತವಾಯಿತು ನನಗೆ ಮಾಂಸಸಹಿತವಾದ ಭೋಜನವನ್ನು ಹಾಕು! ಶೀಘ್ರವಾಗಿ ನಡೆಯಲಿ ಇದರಲ್ಲಿ ವಿಚಾರಿಸ ಬೇಕಾದ್ದೇನೂ ಇಲ್ಲ!" ಎಂದು ಹೇಳಿದನು (೨೦-೨೧) ಹೀಗೆ ವಸಿಷ್ಠ ಮುನಿಗಳ ವೇಷದಲ್ಲಿ ಬಂದು ರಾಕ್ಷಸನು ಹೇಳಲಾಗಿ, ರಾಜನು ಅಡಿಗೆ ಮಾಡುವುದರಲ್ಲಿ ನಿಪುಣನಾದ ಪಾಚಕನನ್ನು ಕರೆಸಿ "ಒಳ್ಳೆಯ ಮಾಂಸ ವನ್ನು ಸೇರಿಸಿ ರುಚಿಕರವಾದ ಅಡಿಗೆಯನ್ನು ಮಾಡು ನಮ್ಮ ಗುರುಗಳಿಗೆ ಸಂತೋಷವಾಗುವಂತೆ ಪಾಕವನ್ನು ಕೂಡಲೆ ಸಿದ್ಧಪಡಿಸು" ಎಂದು

ಶಾಸನಾತ್ ಪಾರ್ಥಿವೇಂದ್ರಸ್ಯ ಸೂದಃ ಸಂಭ್ರಾಂತಮಾನಸಃ ।
ಸ ರಾಕ್ಷಸಃ ಪುನಸ್ತತ್ರ ಸೂದವೇಷಮಥಾಕರೋತ್ ॥ ೨೪

ಸ ಮಾನುಷಮಥೋ ಮಾಂಸಂ ಪಾರ್ಥಿವಾಯ ನ್ಯವೇದಯತ್ ।
ಇದಂ ಸ್ವಾದು ಹವಿಷ್ಯಂ ಚ ಸಾಮಿಷಂ ಚಾನ್ನಮಾಹೃತಮ್ ॥ ೨೫

ಸ ಭೋಜನಂ ವಸಿಷ್ಠಾಯ ಪತ್ನ್ಯಾ ಸಾರ್ಧಮುಪಾಹರತ್ ।
ಮದಯಂತ್ಯಾ ನರವ್ಯಾಘ್ರ ಸಾಮಿಷಂ ರಕ್ಷಸಾಹೃತಮ್ ॥ ೨೬

ಜ್ಞಾತ್ವಾ ತದಾಮಿಷಂ ವಿಪ್ರೋ ಮಾನುಷಂ ಭಾಜನಂ ಗತಮ್ ।
ಕ್ರೋಧೇನ ಮಹತಾವಿಷ್ಟೋ ವ್ಯಾಹರ್ತುಮುಪಚಕ್ರಮೇ ॥ ೨೭

ಯಸ್ಮಾತ್ತ್ವಂ ಭೋಜನಂ ರಾಜನ್ ಮಮೈತದ್ದಾತುಮಿಚ್ಛಸಿ ।
ತಸ್ಮಾದ್ಭೋಜನಮೇತತ್ತೇ ಭವಿಷ್ಯತಿ ನ ಸಂಶಯಃ ॥ ೨೮

ತತಃ ಕ್ರುದ್ಧಸ್ತು ಸೌದಾಸಸ್ತೋಯಂ ಜಗ್ರಾಹ ಪಾಣಿನಾ ।
ವಸಿಷ್ಠಂ ಶಪ್ತುಮಾರೇಭೇ ಭಾರ್ಯಾ ಚೈನಮವಾರಯತ್ ॥ ೨೯

---

ಆಜ್ಞಾಪಿಸಿದನು (೨೨-೨೩) ರಾಜಾಜ್ಞೆಯನ್ನು ಕೇಳಿ ಪಾಚಕನು ದಿಗ್ಭ್ರಾಂತನಾದನು ಅಷ್ಟರಲ್ಲಿ ರಾಕ್ಷಸನು ಇನ್ನೊಬ್ಬ ಅಡಿಗೆಯವನ ವೇಷವನ್ನು ಧರಿಸಿ ಮನುಷ್ಯಮಾಂಸವನ್ನು ಸೇರಿಸಿದ ಪಾಕವನ್ನು ಸಿದ್ಧಪಡಿಸಿ "ಮಹಾರಾಜ, ರುಚಿಕರವೂ ಮಾಂಸಮಿಶ್ರವೂ ಆದ ಹವಿಷ್ಯಾನ್ನವು ಸಿದ್ಧವಾಗಿವೆ" ಎಂದು ಸೌದಾಸನಿಗೆ ನಿವೇದಿಸಿದನು (೨೪-೨೫) ರಾಜನು ಪತ್ನಿಯಾದ ಮದಯಂತಿಯೊಡನೆ ಬಂದು ರಾಕ್ಷಸನು ಸಿದ್ಧಪಡಿಸಿದ ಅಡಿಗೆಯನ್ನು ವಸಿಷ್ಠಮುನಿಗಳಿಗೆ ಬಡಿಸಿದನು ಶತ್ರುಘ್ನ, ಆಗ ಊಟದ ಪಾತ್ರೆಯಲ್ಲಿ ಮನುಷ್ಯಮಾಂಸವನ್ನು ಕಂಡು ವಸಿಷ್ಠಮುನಿಗಳು ಕ್ರೋಧಾವಿಷ್ಟರಾದರು (೨೬-೨೭). ಅವರು ಕೋಪಾವೇಶದಿಂದ "ಎಲೈ ರಾಜ, ನನಗೆ ಈ ಬಗೆಯ ಭೋಜನವನ್ನು ಹಾಕಲಿಚ್ಛಿಸುವೆಯಾ? ನಿನಗೆ ಈ ನರಮಾಂಸವೇ ಇನ್ನು ಮೇಲೆ ಭೋಜನವಾಗಲಿ!" ಎಂದು ಶಪಿಸಿದರು (೨೮) ಸೌದಾಸನೂ ಕೋಪಾವಿಷ್ಟನಾದನು ಪ್ರತಿಯಾಗಿ ವಸಿಷ್ಠರನ್ನು ಶಪಿಸಬೇಕೆಂದು ಅವನು ಕೈಯಲ್ಲಿ ನೀರು ತೆಗೆದುಕೊಂಡನು. ಅಷ್ಟರಲ್ಲಿ ಪತ್ನಿಯಾದ

ರಾಜನ್ ಪ್ರಭುರ್ಯತೋಽಸ್ಮಾಕಂ ವಸಿಷ್ಠೋ ಭಗವಾನೃಷಿಃ ।
ಪ್ರತಿಶಪ್ತುಂ ನ ಶಕ್ತಸ್ತ್ವಂ ದೇವತುಲ್ಯಂ ಪುರೋಧಸಮ್ ॥ ೩೦
ತತಃ ಕ್ರೋಧಮಯಂ ತೋಯಂ ತೇಜೋಬಲಸಮನ್ವಿತಮ್ ।
ವ್ಯಸರ್ಜಯತ ಧರ್ಮಾತ್ಮಾ ತತಃ ಪಾದೌ ಸಿಷೇಚ ಚ ॥ ೩೧
ತೇನಾಸ್ಯ ರಾಜ್ಞಸ್ತೌ ಪಾದೌ ತದಾ ಕಲ್ಮಾಷತಾಂ ಗತೌ ।
ತದಾಪ್ರಭೃತಿ ರಾಜಾಸೌ ಸೌದಾಸಃ ಸುಮಹಾಯಶಾಃ ॥ ೩೨
ಕಲ್ಮಾಷಪಾದಃ ಸಂವೃತ್ತಃ ಖ್ಯಾತಶ್ಚೈವ ತಥಾ ನೃಪಃ ।
ಸ ರಾಜಾ ಸಹ ಪತ್ನ್ಯಾ ವೈ ಪ್ರಣಿಪತ್ಯ ಮುಹುರ್ಮುಹುಃ ॥ ೩೩
ಪುನರ್ವಸಿಷ್ಠಂ ಪ್ರೋವಾಚ ಯದುಕ್ತಂ ಬ್ರಹ್ಮರೂಪಿಣಾ ।
ತಚ್ಛ್ರುತ್ವಾ ಪಾರ್ಥಿವೇಂದ್ರಸ್ಯ ರಕ್ಷಸಾಧಿಕೃತಂ ಚ ತತ್ ॥ ೩೪
ಪುನಃ ಪ್ರೋವಾಚ ರಾಜಾನಂ ವಸಿಷ್ಠಃ ಪುರುಷರ್ಷಭಮ್ ।
ಮಯಾ ರೋಷಪರೀತೇನ ಯದಿದಂ ವ್ಯಾಹೃತಂ ವಚಃ ॥ ೩೫
ನೈತಚ್ಛಕ್ಯಂ ವೃಥಾ ಕರ್ತುಂ ಪ್ರದಾಸ್ಯಾಮಿ ಚ ತೇ ವರಮ್ ।
ಕಾಲೋ ದ್ವಾದಶವರ್ಷಾಣಿ ಶಾಪಸ್ಯಾಂತೋ ಭವಿಷ್ಯತಿ ॥ ೩೬

---

ಮದಯಂತಿಯು ಆತನನ್ನು ತಡೆದು "ಮಹಾರಾಜ, ಭಗವಾನ್ ವಸಿಷ್ಠಮುನಿಗಳು ನಮಗೆ ಪ್ರಭುಗಳು ದೇವತಾಸದೃಶರಾದ ಈ ಪುರೋಹಿತರಿಗೆ ಪ್ರತಿಶಾಪವನ್ನೀಯುವುದು ಯೋಗ್ಯವಲ್ಲ" ಎಂದಳು (೨೯-೩೦). ಆಗ ಧರ್ಮಾತ್ಮನಾದ ಸೌದಾಸನು ತೇಜೋಬಲಸಮನ್ವಿತವೂ ಕ್ರೋಧೋದ್ದೀಪ್ತವೂ ಆದ ಶಾಪಜಲವನ್ನು ತನ್ನ ಕಾಲಮೇಲೆ ಸುರುವಿಕೊಂಡನು ರಾಜನ ಪಾದಗಳು ಕಪ್ಪಾದವು ಹೀಗೆ ಸೌದಾಸನ ಪಾದಗಳು ಕಲ್ಮಾಷವಾದ್ದರಿಂದ ಆತನು ಕಲ್ಮಾಷಪಾದನೆಂದು ಪ್ರಸಿದ್ಧನಾದನು (೩೧-೩೨) ಅನಂತರ ರಾಜನು ತನ್ನ ಪತ್ನಿಯೊಡನೆ ವಸಿಷ್ಠರಿಗೆ ಅಡ್ಡಬಿದ್ದು ನಮಸ್ಕರಿಸಿ, ರಾಕ್ಷಸನು ವಸಿಷ್ಠರೂಪದಿಂದ ಬಂದು ಹೇಳಿದ ಸಂಗತಿಯನ್ನು ತಿಳಿಸಿದನು ರಾಕ್ಷಸನ ಚೇಷ್ಟೆಯನ್ನು ಕೇಳಿ ವಸಿಷ್ಠರು "ಓಹೊ ! ಇದೆಲ್ಲವೂ ರಾಕ್ಷಸನ ಮಾಯೆ !" ಎಂದು ತಿಳಿಸಿ, "ರಾಜೇಂದ್ರ, ರೋಷವಶನಾಗಿ ನಾನು ಏನನ್ನೋ ಹೇಳಿಬಿಟ್ಟೆನು ! (೩೪-೩೫) ಅದನ್ನು ಪರಿಹರಿಸುವುದು ಶಕ್ಯವಲ್ಲ ಇರಲಿ, ನಿನಗೆ ಒಂದು ವರವನ್ನು ಕೊಡುವೆನು ಹನ್ನೆರಡು ವರ್ಷಗಳಲ್ಲಿ

ಮತ್ಪ್ರಸಾದಾಚ್ಚ ರಾಜೇಂದ್ರ ವ್ಯತೀತಂ ನ ಸ್ಮರಿಷ್ಯಸಿ ।
ಏವಂ ಸ ರಾಜಾ ತಂ ಶಾಪಮುಪಭುಜ್ಯಾರಿಸೂದನಃ ॥ ೩೭

ಪ್ರತಿಲೇಭೇ ಪುನಾ ರಾಜ್ಯಂ ಪ್ರಜಾಶ್ಚೈವಾನ್ವಪಾಲಯತ್ ।
ತಸ್ಯ ಕಲ್ಮಾಷಪಾದಸ್ಯ ಯಜ್ಞಸ್ಯಾಯತನಂ ಶುಭಮ್ ॥ ೩೮

ಆಶ್ರಮಸ್ಯ ಸಮೀಪೇಽಸ್ಯ ಯನ್ಮಾಂ ಪೃಚ್ಛಸಿ ರಾಘವ ।
ತಸ್ಯ ತಾಂ ಪಾರ್ಥಿವೇಂದ್ರಸ್ಯ ಕಥಾಂ ಶ್ರುತ್ವಾ ಸುದಾರುಣಾಮ್ ॥

ವಿವೇಶ ಪರ್ಣಶಾಲಾಯಾಂ ಮಹರ್ಷಿಮಭಿವಾದ್ಯ ಚ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚಷಷ್ಟಿತಮಃ ಸರ್ಗಃ



ಈ ಶಾಪವು ಕೊನೆಗೊಳ್ಳುವುದು (೩೬) ಮಹಾರಾಜ, ನನ್ನ ಅನುಗ್ರಹದಿಂದ ನಿನಗೆ ಪೂರ್ವವೃತ್ತಾಂತದ ಸ್ಮರಣೆ ಇರುವುದಿಲ್ಲ" ಎಂದರು ಶತ್ರುಘ್ನ, ಸೌದಾಸನು ಆ ಶಾಪವನ್ನನುಭವಿಸಿದಮೇಲೆ ಮತ್ತೆ ರಾಜ್ಯಕ್ಕೆ ಹಿಂದಿರುಗಿ ಪ್ರಜೆಗಳನ್ನು ಪಾಲಿಸಿದನು ಆ ಕಲ್ಮಾಷಪಾದನ ಯಜ್ಞಭೂಮಿ ಇದು. ನಮ್ಮ ಆಶ್ರಮದ ಸಮೀಪದಲ್ಲಿದೆ ನೀನು ಕೇಳಿದ್ದು ಅದರ ವಿಷಯವನ್ನು" ಎಂದರು ಶತ್ರುಘ್ನನು ರಾಜೇಂದ್ರನಾದ ಕಲ್ಮಾಷಪಾದನ ದಾರುಣಕಥೆಯನ್ನು ಕೇಳಿ ವಾಲ್ಮೀಕಿಮುನಿಗಳಿಗೆ ವಂದಿಸಿ ವಿಶ್ರಾಂತಿಗಾಗಿ ಪರ್ಣಶಾಲೆಯೊಳಗೆ ಹೋದನು (೩೭-೩೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರುವತ್ತೈದನೆಯ ಸರ್ಗ



# ಷಟ್‌ಷಷ್ಟಿತಮಃ ಸರ್ಗಃ

## ಕುಶಲವಜನನಮ್

ಯಾಮೇವ ರಾತ್ರಿಂ ಶತ್ರುಘ್ನಃ ಪರ್ಣಶಾಲಾಮುಪಾವಿಶತ್ ।
ತಾಮೇವ ರಾತ್ರಿಂ ಸೀತಾಪಿ ಪ್ರಸೂತಾ ದಾರಕದ್ವಯಮ್ ॥ ೧

ತತೋಽರ್ಧರಾತ್ರಸಮಯೇ ಬಾಲಕಾ ಮುನಿದಾರಕಾಃ ।
ವಾಲ್ಮೀಕೇಃ ಪ್ರಿಯಮಾಚಖ್ಯುಃ ಸೀತಾಯಾಃ ಪ್ರಸವಂ ಶುಭಮ್ ॥

ಭಗವನ್ ರಾಮಪತ್ನೀ ಸಾ ಪ್ರಸೂತಾ ದಾರಕದ್ವಯಮ್ ।
ತತೋ ರಕ್ಷಾಂ ಮಹಾತೇಜಃ ಕುರು ಭೂತವಿನಾಶಿನೀಮ್ ॥ ೩

ತೇಷಾಂ ತದ್ವಚನಂ ಶ್ರುತ್ವಾ ಮಹರ್ಷಿಃ ಸಮುಪಾಗಮತ್ ।
ಬಾಲಚಂದ್ರಪ್ರತೀಕಾಶೌ ದೇವಪುತ್ರೌ ಮಹೌಜಸೌ ॥ ೪

## ಸರ್ಗ ೬೬

### ಕುಶಲವರ ಜನ್ಮ  ಶತ್ರುಘ್ನನು ಪ್ರಯಾಣಮಾಡಿ ಯಮುನಾತೀರ ವಾಸಿಗಳಾದ ಮುನಿಗಳ ಆಶ್ರಮವನ್ನು ಸೇರುವುದು

ಶತ್ರುಘ್ನನು ಯಾವ ರಾತ್ರಿ ವಾಲ್ಮೀಕಿಮುನಿಗಳ ಪರ್ಣಶಾಲೆಯಲ್ಲಿ ತಂಗಿದನೋ ಅದೇ ರಾತ್ರಿಯಲ್ಲಿ ಸೀತಾದೇವಿಯು ಇಬ್ಬರು ಗಂಡುಮಕ್ಕಳಿಗೆ ಜನ್ಮವಿತ್ತಳು (೧) ಅರ್ಧರಾತ್ರಿಯ ಸಮಯದಲ್ಲಿ ಮುನಿಪುತ್ರರಾದ ಬಾಲಕರು ಬಂದು ಸೀತೆಯು ಪ್ರಸವಿಸಿದಳೆಂಬ ಶುಭಕರವಾದ ಪ್ರಿಯವಾರ್ತೆಯನ್ನು ವಾಲ್ಮೀಕಿಮುನಿಗಳಿಗೆ ಅರುಹಿದರು: "ಭಗವನ್, ಶ್ರೀರಾಮನ ಪತ್ನಿ ಇರುವಳಲ್ಲ, ಅವಳು ಇಬ್ಬರು ಗಂಡುಮಕ್ಕಳನ್ನು ಪ್ರಸವಿಸಿದ್ದಾಳೆ ಮಹರ್ಷಿಗಳೆ, ಬಾಲಗ್ರಹನಿವಾರಕವಾದ ರಕ್ಷೆಯನ್ನು ಮಾಡಬೇಕು" ಎಂದು ವಿಜ್ಞಾಪಿಸಿದರು (೨-೩) ಒಡನೆಯೇ ವಾಲ್ಮೀಕಿಮಹರ್ಷಿಗಳು ಹೋಗಿ,

ಜಗಾಮ ತತ್ರ ಹೃಷ್ಟಾತ್ಮಾ ದದರ್ಶ ಚ ಕುಮಾರಕೌ ।
ಭೂತಘ್ನೀಂ ಚಾಕರೋತ್ತಾಭ್ಯಾಂ ರಕ್ಷಾಂ ರಕ್ಷೋವಿನಾಶಿನೀಮ್ ॥

ಕುಶಮುಷ್ಟಿಮುಪಾದಾಯ ಲವಂ ಚೈವ ತು ಸ ದ್ವಿಜಃ ।
ವಾಲ್ಮೀಕಿಃ ಪ್ರದದೌ ತಾಭ್ಯಾಂ ರಕ್ಷಾಂ ಭೂತವಿನಾಶಿನೀಮ್ ॥ ೬

ಯಸ್ತಯೋಃ ಪೂರ್ವಜೋ ಜಾತಃ ಸ ಕುಶೈರ್ಮಂತ್ರಸತ್ಕೃತೈಃ ।
ನಿರ್ಮಾರ್ಜನೀಯಸ್ತು ತದಾ ಕುಶ ಇತ್ಯಸ್ಯ ನಾಮ ತತ್ ॥ ೭

ಯಶ್ಚಾವರೋ ಭವೇತ್ತಾಭ್ಯಾಂ ಲವೇನ ಸ ಸಮಾಹಿತಃ ।
ನಿರ್ಮಾರ್ಜನೀಯೋ ವೃದ್ಧಾಭಿರ್ಲವ ಇತ್ಯೇವ ನಾಮತಃ ॥ ೮

ಏವಂ ಕುಶಲವೌ ನಾಮ್ನಾ ತಾವುಭೌ ಯಮಜಾತಕೌ ।
ಮತ್ಕೃತಾಭ್ಯಾಂ ಚ ನಾಮಭ್ಯಾಂ ಖ್ಯಾತಿಯುಕ್ತೌ ಭವಿಷ್ಯತಃ ॥ ೯

ತಾಂ ರಕ್ಷಾಂ ಜಗೃಹುಸ್ತಾಶ್ಚ ಮುನಿಹಸ್ತಾತ್ ಸಮಾಹಿತಾಃ ।
ಅಕುರ್ವಂಶ್ಚ ತತೋ ರಕ್ಷಾಂ ತಯೋರ್ವಿಗತಕಲ್ಮಷಾಃ ॥ ೧೦

---

ಬಾಲಚಂದ್ರನಂತೆ ಬೆಳಗುತ್ತ ರಾಜಪುತ್ರರೂ ತೇಜಸ್ವಿಗಳೂ ಆದ ಆ ಶಿಶುಗಳನ್ನು ನೋಡಿ ಆನಂದಿಸಿದರು ಭೂತಬಾಧೆಯನ್ನೂ ರಕ್ಷೋಬಾಧೆಯನ್ನೂ ನಿವಾರಿಸುವ ರಕ್ಷೆಯನ್ನು ಮಾಡಿದರು (೪-೫) ವಾಲ್ಮೀಕಿಮುನಿಗಳು ಒಂದು ಹಿಡಿ ಕುಶವನ್ನೂ ಲವವನ್ನೂ ಮಂತ್ರಗಳಿಂದ ಅಭಿಮಂತ್ರಿಸಿ ವೃದ್ಧಸ್ತ್ರೀಯರ ಕೈಯಿಂದ ಆ ಯಮಳರಿಗೆ ಮಾರ್ಜನಮಾಡಿಸಲು ಕೊಟ್ಟರು ಅವರಲ್ಲಿ ಮೊದಲು ಜನಿಸಿದ ಮಗುವನ್ನು ಕುಶದಿಂದಲೂ ಎರಡನೆಯ ಮಗುವನ್ನು ಲವದಿಂದಲೂ ಮಾರ್ಜನಮಾಡಿಸಿದ್ದರಿಂದ, 'ಈ ಬಾಲಕರು ಕ್ರಮವಾಗಿ ಕುಶ, ಲವ–ಎಂಬ ಹೆಸರಿನಿಂದ ವಿಖ್ಯಾತರಾಗಲಿ' ಎಂದು ವಾಲ್ಮೀಕಿಮುನಿಗಳು ಹರಸಿದರು * (೬–೯). ಪುಣ್ಯವತಿಯರಾದ ವೃದ್ಧಸ್ತ್ರೀಯರು ಮುನಿಗಳ ಕೈಯಿಂದ ದರ್ಭೆ

---

* ಒಂದು ಹಿಡಿ ದರ್ಭೆಗಳನ್ನು ಮಧ್ಯದಲ್ಲಿ ಕತ್ತರಿಸಿದಾಗ ಅಗ್ರಭಾಗಕ್ಕೆ ಕುಶವೆಂದೂ ಅಧೋಭಾಗಕ್ಕೆ ಲವವೆಂದೂ ಹೆಸರು. ಸೂತಿಕಾಗೃಹಕ್ಕೆ ತಾವು ಪ್ರವೇಶಿಸುವುದು ಅನುಚಿತವೆಂದು ವಾಲ್ಮೀಕಿಮುನಿಗಳು ವೃದ್ಧಸ್ತ್ರೀಯರಿಂದ ಮಾರ್ಜನಮಾಡಿಸಿದರು ಮಾರ್ಜನವೇ ರಕ್ಷೆ

ತಥಾ ತಾಂ ಕ್ರಿಯಮಾಣಾಂ ಚ ವೃದ್ಧಾಭಿರ್ಗೋತ್ರನಾಮ ಚ ।
ಸಂಕೀರ್ತನಂ ಚ ರಾಮಸ್ಯ ಸೀತಾಯಾಃ ಪ್ರಸವೌ ಶುಭೌ ॥ ೧೧

ಅರ್ಧರಾತ್ರೇ ತು ಶತ್ರುಘ್ನಃ ಶುಶ್ರಾವ ಸುಮಹತ್ ಪ್ರಿಯಮ್ ।
ಪರ್ಣಶಾಲಾಂ ತತೋ ಗತ್ವಾ ಮಾತರ್ದಿಷ್ಟ್ಯೇತಿ ಚಾಬ್ರವೀತ್ ॥

ತಥಾ ತಸ್ಯ ಪ್ರಹೃಷ್ಟಸ್ಯ ಶತ್ರುಘ್ನಸ್ಯ ಮಹಾತ್ಮನಃ ।
ವ್ಯತೀತಾ ವಾರ್ಷಿಕೀ ರಾತ್ರಿಃ ಶ್ರಾವಣೀ ಲಘುವಿಕ್ರಮಾ ॥ ೧೩

ಪ್ರಭಾತೇ ಸುಮಹಾವೀರ್ಯಃ ಕೃತ್ವಾ ಪೌರ್ವಾಹ್ಣಿಕೀಂ ಕ್ರಿಯಾಮ್
ಮುನಿಂ ಪ್ರಾಂಜಲಿರಾಮಂತ್ರ್ಯ ಯಯೌ ಪಶ್ಚಾನ್ಮುಖಃ ಪುನಃ ॥

ಸ ಗತ್ವಾ ಯಮುನಾತೀರಂ ಸಪ್ತರಾತ್ರೋಷಿತಃ ಪಥಿ ।
ಋಷೀಣಾಂ ಪುಣ್ಯಕೀರ್ತೀನಾಮಾಶ್ರಮೇ ವಾಸಮಭ್ಯಯಾತ್ ॥

ಸ ತತ್ರ ಮುನಿಭಿಃ ಸಾರ್ಧಂ ಭಾರ್ಗವಪ್ರಮುಖೈರ್ನೃಪಃ ।
ಕಥಾಭಿರಭಿರೂಪಾಭಿರ್ವಾಸಂ ಚಕ್ರೇ ಮಹಾಯಶಾಃ ॥ ೧೬

---

ಗಳನ್ನು ತೆಗೆದುಕೊಂಡು ಶಿಶುಗಳಿಗೆ ರಕ್ಷೆಯನ್ನು ಮಾಡಿದರು ವೃದ್ಧೆಯರು ರಕ್ಷೆಹಾಕುವ ಸಡಗರ, ಗೋತ್ರದ ಹೆಸರು, ಕುಶಲವರೆಂಬ ನಾಮಕರಣ, ಶ್ರೀರಾಮನ ಹೆಸರು, ಸೀತೆಗೆ ಪುತ್ರರು ಜನಿಸಿದರೆಂಬ ಶುಭವಾರ್ತೆ–ಇವೆಲ್ಲವನ್ನೂ ಅರ್ಧರಾತ್ರಿಯಲ್ಲಿ ಶತ್ರುಘ್ನನು ಕೇಳಿದನು ಅವನಿಗೆ ಅತ್ಯಾನಂದವಾಯಿತು ಆತನು ಸೀತೆಯಿದ್ದ ಪರ್ಣಶಾಲೆಯ ಬಳಿಗೆ ಹೋಗಿ "ಅಮ್ಮ, ಇದು ನಮ್ಮ ಭಾಗ್ಯ!" ಎಂದು ಉದ್ಗರಿಸಿದನು (೧೦-೧೨) ಮಹಾತ್ಮನಾದ ಶತ್ರುಘ್ನನು ಹರ್ಷದ ಸಂಭ್ರಮದಿಂದಿರುವಾಗಲೇ ಮಳೆಗಾಲದ ಶ್ರಾವಣ ಮಾಸದ ಆ ರಾತ್ರಿಯು ಕಳೆದುಹೋಯಿತು. ಬೆಳಗಾದಮೇಲೆ ಆ ವೀರನು ಪೂರ್ವಾಹ್ಣದ ವಿಧಿಯನ್ನು ನೆರವೇರಿಸಿ ವಾಲ್ಮೀಕಿಮುನಿಗಳಿಗೆ ನಮಸ್ಕರಿಸಿ ಬೀಳ್ಕೊಂಡು ಪಶ್ಚಿಮಾಭಿಮುಖವಾಗಿ ಪ್ರಯಾಣಮಾಡಿದನು (೧೩-೧೪) ದಾರಿಯಲ್ಲಿ ಏಳು ರಾತ್ರಿಗಳು ಕಳೆದವು ಆಮೇಲೆ ಯಮುನಾತೀರವನ್ನು ಸೇರಿ ಪುಣ್ಯಕೀರ್ತಿಗಳಾದ ಋಷಿಗಳ ಆಶ್ರಮದಲ್ಲಿ ಇಳಿದುಕೊಂಡನು. ಆ ನೃಪಾಲನು ಭಾರ್ಗವರೇ ಮೊದಲಾದ ಮುನಿಗಳೊಡನೆ ಅನುರೂಪವಾದ

ಸ ಕಾಂಚನಾದ್ಯೈರ್ಮುನಿಭಿಃ ಸಮೇತೋ
ರಘುಪ್ರವೀರೋ ರಜನೀಂ ತದಾನೀಮ್ ।
ಕಥಾಪ್ರಕಾರೈರ್ಬಹುಭಿರ್ಮಹಾತ್ಮಾ
ವಿರಾಮಯಾಮಾಸ ನರೇಂದ್ರಸೂನುಃ ॥ ೧೭

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಟ್‌ಷಷ್ಟಿತಮಃ ಸರ್ಗಃ



ಮಾತುಕಥೆಗಳನ್ನು ನಡೆಸಿದನು (೧೫-೧೬). ದಶರಥ ರಾಜತನಯನೂ ರಘುವೀರನೂ ಆದ ಶತ್ರುಘ್ನನು ಚ್ಯವನರೇ * ಮೊದಲಾದ ಮುನಿಗಳೊಡನೆ ವಿವಿಧ ವಿಷಯಗಳನ್ನು ಕುರಿತು ಸಂಭಾಷಿಸುತ್ತ ರಾತ್ರಿಯನ್ನು ಕಳೆದನು (೧೭)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರುವತ್ತಾರನೆಯ ಸರ್ಗ



---

* ಮೂಲದಲ್ಲಿ ಕಾಂಚನ ಎಂಬ ಶಬ್ದವಿದೆ ಚ್ಯವನರಿಗೆ ಕಾಂಚನ ಎಂಬ ಇನ್ನೊಂದು ಹೆಸರಿತ್ತೆಂದು ವ್ಯಾಖ್ಯಾನಕಾರರು ಹೇಳುತ್ತಾರೆ 'ಸ ಕಾಂಚನಾದ್ಯೈಃ' ಎಂಬ ಸ್ಥಳದಲ್ಲಿ 'ಸ ಭಾರ್ಗವಾದ್ಯೈಃ' ಎಂಬ ಪಾಠಾಂತರ ಉಂಟು ಭಾರ್ಗವರೆಂದರೂ ಚ್ಯವನರೇ.

## ಸಪ್ತಷಷ್ಟಿತಮಃ ಸರ್ಗಃ

### ಮಾಂಧಾತೃವಧಃ

ಅಥ ರಾತ್ರ್ಯಾಂ ಪ್ರವೃತ್ತಾಯಾಂ ಶತ್ರುಘ್ನೋ ಭೃಗುನಂದನಮ್ ।
ಪಪ್ರಚ್ಛ ಚ್ಯವನಂ ವಿಪ್ರಂ ಲವಣಸ್ಯ ಯಥಾ ಬಲಮ್ ॥ ೧

ಶೂಲಸ್ಯ ಚ ಬಲಂ ಬ್ರಹ್ಮನ್ ಕೇ ಚ ಪೂರ್ವಂ ವಿನಾಶಿತಾಃ ।
ಅನೇನ ಶೂಲಮುಖ್ಯೇನ ದ್ವಂದ್ವಯುದ್ಧಮುಪಾಗತಾಃ ॥ ೨

ತಸ್ಯ ತದ್ವಚನಂ ಶ್ರುತ್ವಾ ಶತ್ರುಘ್ನಸ್ಯ ಮಹಾತ್ಮನಃ ।
ಪ್ರತ್ಯುವಾಚ ಮಹಾತೇಜಾಶ್ಚ್ಯವನೋ ರಘುನಂದನಮ್ ॥ ೩

ಅಸಂಖ್ಯೇಯಾನಿ ಕರ್ಮಾಣಿ ಯಾನ್ಯಸ್ಯ ರಘುನಂದನ ।
ಇಕ್ಷ್ವಾಕುವಂಶಪ್ರಭವೇ ಯದ್ವೃತ್ತಂ ತಚ್ಛೃಣುಷ್ವ ಮೇ ॥ ೪

### ಸರ್ಗ ೬೭

ಶತ್ರುಘ್ನನು ಚ್ಯವನರೊಡನೆ ಲವಣಾಸುರನ ಶೂಲದ ಪ್ರಭಾವವನ್ನು ಕೇಳುವುದು
ಚ್ಯವನರು ಅದನ್ನು ವರ್ಣಿಸುತ್ತ ಮಾಂಧಾತನನ್ನು ಲವಣಾಸುರನು
ಸಂಹರಿಸಿದ ಕಥೆಯನ್ನು ಹೇಳುವುದು

ಆ ರಾತ್ರಿಯಲ್ಲಿ ಶತ್ರುಘ್ನನು ಭೃಗುನಂದನರಾದ ಚ್ಯವನರನ್ನು ಕುರಿತು "ಮಹರ್ಷಿಗಳೆ, ಲವಣಾಸುರನ ಬಲವೆಷ್ಟು? ಅವನ ಶೂಲದ ಪ್ರಭಾವವೇನು? ಆತನೊಡನೆ ದ್ವಂದ್ವಕ್ಕೆ ಬಂದ ಯಾರನ್ನು ಲವಣನು ಶೂಲದಿಂದ ಸಂಹರಿಸಿದ್ದಾನೆ?" ಎಂದು ಪ್ರಶ್ನಮಾಡಿದನು (೧-೨) ತೇಜಸ್ವಿಗಳಾದ ಚ್ಯವನರು ರಘುನಂದನನನ್ನು ಕುರಿತು ಹೀಗೆಂದರು. "ರಘುನಂದನ-ಶತ್ರುಘ್ನ, ಲವಣಾಸುರನು ಅಸಂಖ್ಯಾತವಾದ ಕೃತ್ಯಗಳನ್ನೆಸಗಿದ್ದಾನೆ ಅವುಗಳಲ್ಲಿ ನಿಮ್ಮ ಇಕ್ಷ್ವಾಕುವಂಶಕ್ಕೆ ಸಂಬಂಧಿಸಿದ ಒಂದು

ಅಯೋಧ್ಯಾಯಾಂ ಪುರಾ ರಾಜಾ ಯುವನಾಶ್ವಸುತೋ ಬಲೀ ।
ಮಾಂಧಾತೇತಿ ಸ ವಿಖ್ಯಾತಸ್ತ್ರಿಷು ಲೋಕೇಷು ವೀರ್ಯವಾನ್ ॥ ೫

ಸ ಕೃತ್ವಾ ಪೃಥಿವೀಂ ಕೃತ್ಸ್ನಾಂ ಶಾಸನೇ ಪೃಥಿವೀಪತಿಃ ।
ಸುರಲೋಕಮಿತೋ ಜೇತುಮುದ್ಯೋಗಮಕರೋನ್ನೃಪಃ ॥ ೬

ಇಂದ್ರಸ್ಯ ಚ ಭಯಂ ತೀವ್ರಂ ಸುರಾಣಾಂ ಚ ಮಹಾತ್ಮನಾಮ್ ।
ಮಾಂಧಾತರಿ ಕೃತೋದ್ಯೋಗೇ ದೇವಲೋಕಜಿಗೀಷಯಾ ॥ ೭

ಅರ್ಧಾಸನೇನ ಶಕ್ರಸ್ಯ ರಾಜ್ಯಾರ್ಧೇನ ಚ ಪಾರ್ಥಿವಃ ।
ವಂದ್ಯಮಾನಃ ಸುರಗಣೈಃ ಪ್ರತಿಜ್ಞಾಮಧ್ಯರೋಹತ ॥ ೮

ತಸ್ಯ ಪಾಪಮಭಿಪ್ರಾಯಂ ವಿದಿತ್ವಾ ಪಾಕಶಾಸನಃ ।
ಸಾಂತ್ವಪೂರ್ವಮಿದಂ ವಾಕ್ಯಮುವಾಚ ಯುವನಾಶ್ವಜಮ್ ॥ ೯

ರಾಜಾ ತ್ವಂ ಮಾನುಷೇ ಲೋಕೇ ನ ತಾವತ್ ಪುರುಷರ್ಷಭ ।
ಅಕೃತ್ವಾ ಪೃಥಿವೀಂ ವಶ್ಯಾಂ ದೇವರಾಜ್ಯಮಿಹೇಚ್ಛಸಿ ॥ ೧೦

---

ವೃತ್ತಾಂತವನ್ನು ಹೇಳುವೆನು, ಕೇಳು. (೩-೪) ಅಯೋಧ್ಯೆಯಲ್ಲಿ ಹಿಂದೆ ಯುವನಾಶ್ವನ ಪುತ್ರನಾದ ಮಾಂಧಾತನೆಂಬ ವೀರನಾದ ರಾಜನಿದ್ದನು ಅವನ ಯಶಸ್ಸು ಮೂರು ಲೋಕಗಳಲ್ಲಿ ಹರಡಿತ್ತು. ಅವನು ಈ ಪೃಥ್ವಿಯೆಲ್ಲವನ್ನೂ ವಶಪಡಿಸಿಕೊಂಡು ದೇವಲೋಕವನ್ನು ಗೆಲ್ಲಲು ಸನ್ನಾಹ ಮಾಡಿದನು (೫-೬) ಮಾಂಧಾತನು ದೇವಲೋಕವನ್ನು ಜಯಿಸಲು ಉದ್ಯುಕ್ತನಾದಾಗ ಇಂದ್ರನಿಗೂ ದೇವತೆಗಳಿಗೂ ತೀವ್ರವಾದ ಭೀತಿಯುಂಟಾಯಿತು "ದೇವೇಂದ್ರನ ಅರ್ಧರಾಜ್ಯವನ್ನು ಕಿತ್ತುಕೊಂಡು ಅವನ ಅರ್ಧಾಸನದಲ್ಲಿ ಕುಳಿತು ದೇವತೆಗಳಿಂದ ವಂದಿತನಾಗಿ ಮೆರೆಯುವೆನು!" ಎಂದು ನಿಶ್ಚಯಿಸಿ ಮಾಂಧಾತನು ದೇವಲೋಕಕ್ಕೆ ಹೋದನು (೭-೮) ಆತನ ದುರಭಿಪ್ರಾಯವನ್ನು ತಿಳಿದು ದೇವೇಂದ್ರನು "ಎಲೈ ಮಾಂಧಾತ, ನೀನು ಇನ್ನೂ ಭೂಲೋಕವೆಲ್ಲವನ್ನೂ ಗೆದ್ದು ಅಧಿಪತಿಯಾಗಿಲ್ಲ! ಭೂಲೋಕವೇ ವಶವಾಗದಿರುವಾಗ ದೇವಲೋಕವನ್ನು ಬಯಸುವೆಯಲ್ಲ!

ಯದಿ ವೀರ ಸಮಗ್ರಾ ತೇ ಮೇದಿನೀ ನಿಖಿಲಾ ವಶೇ ।
ದೇವರಾಜ್ಯಂ ಕುರುಷ್ವೇಹ ಸಭೃತ್ಯಬಲವಾಹನಃ ॥ ೧೧
ಇಂದ್ರಮೇವಂ ಬ್ರುವಾಣಂ ತಂ ಮಾಂಧಾತಾ ವಾಕ್ಯಮಬ್ರವೀತ್ ।
ಕ್ವ ಮೇ ಶಕ್ರ ಪ್ರತಿಹತಂ ಶಾಸನಂ ಪೃಥಿವೀತಲೇ ॥ ೧೨
ತಮುವಾಚ ಸಹಸ್ರಾಕ್ಷೋ ಲವಣೋ ನಾಮ ರಾಕ್ಷಸಃ ।
ಮಧುಪುತ್ರೋ ಮಧುವನೇ ನಾಜ್ಞಾಂ ತೇ ಕುರುತೇಽನಘ । ೧೩
ತಚ್ಛ್ರುತ್ವಾ ವಿಪ್ರಿಯಂ ಘೋರಂ ಸಹಸ್ರಾಕ್ಷೇಣ ಭಾಷಿತಮ್ ।
ವ್ರೀಡಿತೋಽವಾಙ್ಮುಖೋ ರಾಜಾ ವ್ಯಾಹರ್ತುಂ ನ ಶಶಾಕ ಹ ॥ ೧೪
ಆಮಂತ್ರ್ಯ ತು ಸಹಸ್ರಾಕ್ಷಂ ಹ್ರಿಯಾ ಕಿಂಚಿದವಾಙ್ಮುಖಃ ।
ಪುನರೇವಾಗಮಚ್ಛ್ರೀಮಾನಿಮಂ ಲೋಕಂ ನರೇಶ್ವರಃ ॥ ೧೫
ಸ ಕೃತ್ವಾ ಹೃದಯೇಽಮರ್ಷಂ ಸಭೃತ್ಯಬಲವಾಹನಃ ।
ಆಜಗಾಮ ಮಧೋಃ ಪುತ್ರಂ ವಶೇ ಕರ್ತುಮರಿಂದಮಃ ॥ ೧೬
ಸ ಕಾಂಕ್ಷಮಾಣೋ ಲವಣಂ ಯುದ್ಧಾಯ ಪುರುಷರ್ಷಭಃ ।
ದೂತಂ ಸಂಪ್ರೇಷಯಾಮಾಸ ಸಕಾಶಂ ಲವಣಸ್ಯ ಹಿ ॥ ೧೭

---

ಎಲೈ ವೀರನೆ, ಸಮಸ್ತ ಭೂಮಂಡಲವೂ ನಿನಗೆ ಅಧೀನವಾದಮೇಲೆ, ಪರಿವಾರಸಮೇತನಾಗಿ ದೇವರಾಜ್ಯವನ್ನಾಳಬಹುದು" ಎಂದನು (೯-೧೧) ಇಂದ್ರನು ಹೀಗೆನ್ನಲು ಮಾಂಧಾತನು "ಎಲೈ ಇಂದ್ರ, ಭೂಮಂಡಲದಲ್ಲಿ ನನ್ನ ಆಜ್ಞೆ ಎಲ್ಲಿ ನಡೆಯುವುದಿಲ್ಲ, ಹೇಳು!" ಎಂದು ಕೇಳಿದನು ಆಗ ಇಂದ್ರನು "ಮಧುವನದಲ್ಲಿ ಮಧುಪುತ್ರನಾದ ಲವಣನೆಂಬ ರಾಕ್ಷಸನಿದ್ದಾನೆ ಅವನು ನಿನ್ನ ಆಜ್ಞೆಯನ್ನು ನಡೆಸುವುದಿಲ್ಲ!" ಎಂದು ಉತ್ತರಿಸಿದನು (೧೨-೧೩) ಘೋರವಾದ ಈ ಅಪ್ರಿಯವಾರ್ತೆಯನ್ನು ಕೇಳಿ ಮಾಂಧಾತರಾಜನಿಗೆ ನಾಚಿಕೆಯಾಯಿತು ತಲೆ ತಗ್ಗಿಸಿದನು ಮಾತಾಡಲು ಅವನಿಗೆ ಶಕ್ತಿಯುಳಿಯಲಿಲ್ಲ (೧೪) ಒಡನೆಯೇ ಲಜ್ಜೆಯಿಂದ ದೇವೇಂದ್ರನನ್ನು ಬೀಳ್ಕೊಂಡು ಮತ್ತೆ ಈ ಲೋಕಕ್ಕೆ ಬಂದನು ಆ ವೀರಾಗ್ರಣಿಯು ಈರ್ಷ್ಯೆಯಿಂದ ಕನಲಿ ಲವಣಾಸುರನನ್ನು ವಶಪಡಿಸಿಕೊಳ್ಳುವ ಉದ್ದೇಶದಿಂದ ಸೇನಾಸಮೇತನಾಗಿ ಬಂದನು (೧೫-೧೬) ಯುದ್ಧಾಪೇಕ್ಷೆಯಿಂದ ಮಾಂಧಾತನು ಲವಣನ ಬಳಿಗೆ

ಸ ಗತ್ವಾ ವಿಪ್ರಿಯಾಣ್ಯಾಹ ಬಹೂನಿ ಮಧುನಃ ಸುತಮ್ ।
ವದಂತಮೇವಂ ತಂ ದೂತಂ ಭಕ್ಷಯಾಮಾಸ ರಾಕ್ಷಸಃ ॥ ೧೮

ಚಿರಾಯಮಾಣೇ ದೂತೇ ತು ರಾಜಾ ಕ್ರೋಧಸಮನ್ವಿತಃ ।
ಅರ್ದಯಾಮಾಸ ತದ್ರಕ್ಷಃ ಶರವೃಷ್ಟ್ಯಾ ಸಮಂತತಃ ॥ ೧೯

ತತಃ ಪ್ರಹಸ್ಯ ತದ್ರಕ್ಷಃ ಶೂಲಂ ಜಗ್ರಾಹ ಪಾಣಿನಾ ।
ವಧಾಯ ಸಾನುಬಂಧಸ್ಯ ಮುಮೋಚಾಯುಧಮುತ್ತಮಮ್ ॥ ೨೦

ತಚ್ಛೂಲಂ ದೀಪ್ಯಮಾನಂ ತು ಸಭೃತ್ಯಬಲವಾಹನಮ್ ।
ಭಸ್ಮೀಕೃತ್ವಾ ನೃಪಂ ಭೂಯೋ ಲವಣಸ್ಯಾಗಮತ್ ಕರಮ್ ॥ ೨೧

ಏವಂ ಸ ರಾಜಾ ಸುಮಹಾನ್ ಹತಃ ಸಬಲವಾಹನಃ ।
ಶೂಲಸ್ಯ ತು ಬಲಂ ಸೌಮ್ಯ ಅಪ್ರಮೇಯಮನುತ್ತಮಮ್ ॥ ೨೨

ಶ್ವಃ ಪ್ರಭಾತೇ ತು ಲವಣಂ ವಧಿಷ್ಯಸಿ ನ ಸಂಶಯಃ ।
ಅಗೃಹೀತಾಯುಧಂ ಕ್ಷಿಪ್ರಂ ಧ್ರುವೋ ಹಿ ವಿಜಯಸ್ತವ ॥ ೨೩

---

ಒಬ್ಬ ದೂತನನ್ನು ಕಳಿಸಿದನು ಆ ದೂತನು ಹೋಗಿ ಲವಣನಿಗೆ ಅಪ್ರಿಯವಾದ ವಚಗಳನ್ನಾಡಿದನು ದೂತನು ಹಾಗೆ ಮಾತಾಡುತ್ತಿರುವಾಗಲೇ ಆ ರಾಕ್ಷಸನು ದೂತನನ್ನು ಹಿಡಿದು ಭಕ್ಷಿಸಿಬಿಟ್ಟನು! (೧೭-೧೮). ದೂತನು ಹಿಂದಿರುಗಿಬರುವುದು ತಡವಾಯಿತೆಂದು ಮಾಂಧಾತನು ಕ್ರುದ್ಧನಾಗಿ ನುಗ್ಗಿ ಬಂದು ಶರವೃಷ್ಟಿಗಳಿಂದ ರಾಕ್ಷಸನನ್ನು ತರುಬಿದನು ಲವಣಾಸುರನು ಒಂದು ಸಲ ನಕ್ಕು ಶೂಲವನ್ನು ಕೈಗೆ ತೆಗೆದುಕೊಂಡು ಸೇನಾಸಮೇತನಾದ ರಾಜನನ್ನು ವಧಿಸಬೇಕೆಂದು ಆ ಶೂಲವನ್ನು ಬೀಸಿದನು (೧೯-೨೦). ದೇದೀಪ್ಯಮಾನವಾದ ಶೂಲವು ಮಾಂಧಾತನನ್ನು ಸೇನಾಸಮೇತವಾಗಿ ಭಸ್ಮಮಾಡಿ ಪುನಃ ಲವಣನ ಕೈಸೇರಿತು ಸೌಮ್ಯ-ಶತ್ರುಘ್ನ, ಅಂಥ ವೀರಾಗ್ರಗಣ್ಯನಾದ ಮಾಂಧಾತನು ಪರಿವಾರಸಹಿತವಾಗಿ ಹತನಾದನು ಶೂಲದ ಪ್ರಭಾವವು ಊಹಾತೀತವಾದದ್ದು ಅದಕ್ಕಿಂತ ಪ್ರಬಲವಾದ ಆಯುಧವಿಲ್ಲ (೨೧-೨೨). ಆದರೆ ನಾಳೆ ಪ್ರಾತಃಕಾಲದಲ್ಲಿ ಶೂಲಾಯುಧವನ್ನು ಲವಣನು ಹಿಡಿಯದಿದ್ದಾಗ ನಿಸ್ಸಂಶಯವಾಗಿಯೂ ಅವನನ್ನು ಕೊಲ್ಲುತ್ತೀಯೆ. ನಿನಗೆ

ಲೋಕಾನಾಂ ಸ್ವಸ್ತಿ ಚೈವ ಸ್ಯಾತ್ ಕೃತೇ ಕರ್ಮಣಿ ಚ ತ್ವಯಾ ।
ಏತತ್ತೇ ಸರ್ವಮಾಖ್ಯಾತಂ ಲವಣಸ್ಯ ದುರಾತ್ಮನಃ ॥ ೨೪

ಶೂಲಸ್ಯ ಚ ಬಲಂ ಘೋರಮಪ್ರಮೇಯಂ ನರರ್ಷಭ ।
ವಿನಾಶಶ್ಚೈವ ಮಾಂಧಾತುರ್ಯತ್ತೇನಾಭೂಚ್ಚ ಪಾರ್ಥಿವ ॥ ೨೫

ತ್ವಂ ಶ್ವಃ ಪ್ರಭಾತೇ ಲವಣಂ ಮಹಾತ್ಮನ್
ವಧಿಷ್ಯಸೇ ನಾತ್ರ ತು ಸಂಶಯೋ ಮೇ ।
ಶೂಲಂ ವಿನಾ ನಿರ್ಗತಮಾಮಿಷಾರ್ಥೇ
ಧ್ರುವೋ ಜಯಸ್ತೇ ಭವಿತಾ ನರೇಂದ್ರ ॥ ೨೬

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತಷಷ್ಟಿತಮಃ ಸರ್ಗಃ



ವಿಜಯವಾಗುವುದು ನಿಶ್ಚಯ ನೀನು ಆ ಕಾರ್ಯವನ್ನು ಸಾಧಿಸಿದರೆ ಲೋಕಕ್ಕೆ ಮಂಗಳವಾಗುವುದು ದುರಾತ್ಮನಾದ ಲವಣನ ವಿಷಯವೆಲ್ಲ ವನ್ನೂ ಹೇಳಿದ್ದೇನೆ (೨೩-೨೪) ಶೂಲಾಯುಧದ ಅಪ್ರಮೇಯವಾದ ಘೋರಬಲವನ್ನು ತಿಳಿಸಿದ್ದೇನೆ ಮಾಂಧಾತನ ವಿನಾಶವಾದ ಬಗೆಯನ್ನು ವರ್ಣಿಸಿದ್ದೇನೆ. ಮಹಾತ್ಮ-ಶತ್ರುಘ್ನ, ನಾಳೆ ಪ್ರಭಾತದಲ್ಲಿ ಲವಣಾಸುರ ನನ್ನು ಸಂಹರಿಸುತ್ತೀಯೆ ನನಗೆ ಸ್ವಲ್ಪವೂ ಸಂದೇಹವಿಲ್ಲ. ಮಹಾರಾಜ, ಆಹಾರಕ್ಕಾಗಿ ಶೂಲವಿಲ್ಲದೆ ಅವನು ಹೊರಟುಬಂದಾಗ ಕೊಲ್ಲಲು ಯತ್ನಿಸು ನಿಶ್ಚಯವಾಗಿಯೂ ನಿನಗೆ ಜಯವು ಲಭಿಸುವುದು" ಎಂದರು (೨೫-೨೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರುವತ್ತೇಳನೆಯ ಸರ್ಗ



## ಅಷ್ಟಷಷ್ಟಿತಮಃ ಸರ್ಗಃ

### ಲವಣಶತ್ರುಘ್ನವಿವಾದಃ

ಕಥಾಂ ಕಥಯತಾಂ ತೇಷಾಂ ಜಯಂ ಚಾಕಾಂಕ್ಷತಾಂ ಶುಭಮ್ ।
ವ್ಯತೀತಾ ರಜನೀ ಶೀಘ್ರಂ ಶತ್ರುಘ್ನಸ್ಯ ಮಹಾತ್ಮನಃ ॥ ೧

ತತಃ ಪ್ರಭಾತೇ ವಿಮಲೇ ತಸ್ಮಿನ್ ಕಾಲೇ ಸ ರಾಕ್ಷಸಃ ।
ನಿರ್ಗತಸ್ತು ಪುರಾದ್ವೀರೋ ಭಕ್ಷ್ಯಾಹಾರಪ್ರಚೋದಿತಃ ॥ ೨

ಏತಸ್ಮಿನ್ನಂತರೇ ವೀರಃ ಶತ್ರುಘ್ನೋ ಯಮುನಾಂ ನದೀಮ್ ।
ತೀರ್ತ್ವಾ ಮಧುಪುರದ್ವಾರಿ ಧನುಷ್ಪಾಣಿರತಿಷ್ಠತ ॥ ೩

ತತೋಽರ್ಧದಿವಸೇ ಪ್ರಾಪ್ತೇ ಕ್ರೂರಕರ್ಮಾ ಸ ರಾಕ್ಷಸಃ ।
ಆಗಚ್ಛದ್ಬಹುಸಾಹಸ್ರಂ ಪ್ರಾಣಿನಾಂ ಭಾರಮುದ್ವಹನ್ ॥ ೪

ತತೋ ದದರ್ಶ ಶತ್ರುಘ್ನಂ ಸ್ಥಿತಂ ದ್ವಾರಿ ಧೃತಾಯುಧಮ್ ।
ತಮುವಾಚ ತತೋ ರಕ್ಷಃ ಕಿಮನೇನ ಕರಿಷ್ಯಸಿ ॥ ೫

## ಸರ್ಗ ೬೮

### ಲವಣ-ಶತ್ರುಘ್ನರ ವಿವಾದ

ಹೀಗೆ ಋಷಿಗಳು ಶತ್ರುಘ್ನನಿಗೆ ಕಥೆಯನ್ನು ಹೇಳುತ್ತ ಶುಭವನ್ನು ಹಾರೈಸುತ್ತಿರಲು ರಾತ್ರಿ ಕಳೆಯಿತು ಬೆಳಗಾದಮೇಲೆ ಇತ್ತಲಾಗಿ ಲವಣಾಸುರನು ಆಹಾರವನ್ನು ತರಲು ಮನಸ್ಸಿಗೆ ಪ್ರೇರಣೆಯಾದ್ದರಿಂದ ಮಧುಪುರಿಯಿಂದ ಹೊರಗೆ ಹೋದನು (೧-೨) ಆ ಸಮಯದಲ್ಲಿ ವೀರನಾದ ಶತ್ರುಘ್ನನು ಯಮುನಾ ನದಿಯನ್ನು ದಾಟಿಹೋಗಿ ಮಧುಪುರಿಯ ದ್ವಾರದಲ್ಲಿ ಧನುಷ್ಪಾಣಿಯಾಗಿ ನಿಂತನು ಮಧ್ಯಾಹ್ನದ ಸಮಯದಲ್ಲಿ ಕ್ರೂರಕರ್ಮನಾದ ಆ ರಾಕ್ಷಸನು ಸಾವಿರಾರು ಪ್ರಾಣಿಗಳನ್ನು ಹೊತ್ತುಕೊಂಡು ಆಗಮಿಸಿದನು (೩-೪) ಪುರದ್ವಾರದಲ್ಲಿ ಆಯುಧಧಾರಿಯಾಗಿ ನಿಂತಿದ್ದ ಶತ್ರುಘ್ನನನ್ನು

*

ಈದೃಶಾನಾಂ ಸಹಸ್ರಾಣಿ ಸಾಯುಧಾನಾಂ ನರಾಧಮ ।
ಭಕ್ಷಿತಾನಿ ಮಯಾ ರೋಷಾತ್ ಕಾಲಮಾಕಾಂಕ್ಷಸೇ ನು ಕಿಮ್ ॥ ೬

ಆಹಾರಶ್ಚಾಸ್ಯ ಸಂಪೂರ್ಣೋ ಮಯಾಯಂ ಪುರುಷಾಧಮ ।
ಸ್ವಯಂ ಪ್ರವಿಷ್ಟೋಽದ್ಯ ಮುಖಂ ಕಥಮಾಸಾದ್ಯ ದುರ್ಮತೇ ॥ ೭

ತಸ್ಯೈವಂ ಭಾಷಮಾಣಸ್ಯ ಹಸತಶ್ಚ ಮುಹುರ್ಮುಹುಃ ।
ಶತ್ರುಘ್ನೋ ವೀರ್ಯಸಂಪನ್ನೋ ರೋಷಾದಶ್ರೂಣ್ಯವಾಸೃಜತ್ ॥

ತಸ್ಯ ರೋಷಾಭಿಭೂತಸ್ಯ ಶತ್ರುಘ್ನಸ್ಯ ಮಹಾತ್ಮನಃ ।
ತೇಜೋಮಯಾ ಮರೀಚ್ಯಸ್ತು ಸರ್ವಗಾತ್ರೈರ್ವಿನಿಷ್ಪತನ್ ॥ ೯

ಉವಾಚ ಚ ಸುಸಂಕ್ರುದ್ಧಃ ಶತ್ರುಘ್ನಸ್ತಂ ನಿಶಾಚರಮ್ ।
ಯೋದ್ಧುಮಿಚ್ಛಾಮಿ ದುರ್ಬುದ್ಧೇ ದ್ವಂದ್ವಯುದ್ಧಂ ತ್ವಯಾ ಸಹ ॥

ಪುತ್ರೋ ದಶರಥಸ್ಯಾಹಂ ಭ್ರಾತಾ ರಾಮಸ್ಯ ಧೀಮತಃ ।
ಶತ್ರುಘ್ನೋ ನಿತ್ಯಶತ್ರುಘ್ನೋ ವಧಾಕಾಂಕ್ಷೀ ತವಾಗತಃ ॥ ೧೧

---

ನೋಡಿ ಆ ರಾಕ್ಷಸನು “ ಎಲೈ, ಈ ಆಯುಧದಿಂದ ಏನು ಮಾಡುವೆ ? ಹೀಗೆ ಆಯುಧಗಳನ್ನು ಹಿಡಿದುಬಂದ ಸಹಸ್ರಾರು ಜನರನ್ನು ರೋಷದಿಂದ ತಿಂದು ಬಿಟ್ಟಿದ್ದೇನೆ! ನರಾಧಮ! ಮೃತ್ಯುವನ್ನು ನಿರೀಕ್ಷಿಸುತ್ತಿರುವೆಯೋ ಹೇಗೆ? (೫-೬) ಈಗ ತಂದಿರುವ ಈ ಆಹಾರವು ನನಗೆ ತೃಪ್ತಿಯಾಗುವಷ್ಟಿಲ್ಲ! ಎಲೋ ಬುದ್ಧಿಹೀನ, ನೀನಾಗಿ ಬಂದು ಏಕೆ ನನ್ನ ಬಾಯಲ್ಲಿ ಬೀಳುತ್ತಿರುವೆ?” ಎಂದು ಹೇಳುತ್ತ ಮತ್ತೆ ಮತ್ತೆ ಅಟ್ಟಹಾಸದಿಂದ ನಕ್ಕನು ಅದನ್ನು ಕೇಳಿ ರುಷ್ಟನಾದ ಶತ್ರುಘ್ನನ ಕಣ್ಣುಗಳಿಂದ ಸಿಟ್ಟಿನ ಹನಿಗಳು ಸಿಡಿದವು (೭-೮) ಕ್ರೋಧಾವಿಷ್ಟನಾದ ಆ ವೀರನ ಸರ್ವಗಾತ್ರಗಳಿಂದಲೂ ತೇಜೋಮಯವಾದ ಕಿರಣಗಳು ಹೊಮ್ಮಿದವು ಶತ್ರುಘ್ನನು ಆ ನಿಶಾಚರನನ್ನು ಸಂಬೋಧಿಸಿ “ಎಲೈ ದುರ್ಬುದ್ಧಿಯವನೆ, ನಿನ್ನೊಡನೆ ದ್ವಂದ್ವಯುದ್ಧಮಾಡಲು ಇಚ್ಛಿಸಿದ್ದೇನೆ (೯-೧೦) ನಾನು ದಶರಥಮಹಾರಾಜನ ಪುತ್ರ ಧೀಮಂತನಾದ ಶ್ರೀರಾಮನ ಸೋದರ ನನ್ನ ಹೆಸರು ಶತ್ರುಘ್ನ.

ತಸ್ಯ ಮೇ ಯುದ್ಧಕಾಮಸ್ಯ ದ್ವಂದ್ವಯುದ್ಧಂ ಪ್ರದೀಯತಾಮ್ ।
ಶತ್ರುಸ್ತ್ವಂ ಸರ್ವಜೀವಾನಾಂ ನ ಮೇ ಜೀವನ್ ಗಮಿಷ್ಯಸಿ ॥ ೧೨

ತಸ್ಮಿಂಸ್ತಥಾ ಬ್ರುವಾಣೇ ತು ರಾಕ್ಷಸಃ ಪ್ರಹಸನ್ನಿವ ।
ಪ್ರತ್ಯುವಾಚ ನರಶ್ರೇಷ್ಠಂ ದಿಷ್ಟ್ಯಾ ಪ್ರಾಪ್ತೋಽಸಿ ದುರ್ಮತೇ ॥ ೧೩

ಮಮ ಮಾತೃಷ್ವಸುರ್ಭ್ರಾತಾ ರಾವಣೋ ರಾಕ್ಷಸಾಧಿಪಃ ।
ಹತೋ ರಾಮೇಣ ದುರ್ಬುದ್ಧೇ ಸ್ತ್ರೀಹೇತೋಃ ಪುರುಷಾಧಮ ॥ ೧೪

ತಚ್ಚ ಸರ್ವಂ ಮಯಾ ಕ್ಷಾಂತಂ ರಾವಣಸ್ಯ ಕುಲಕ್ಷಯಮ್ ।
ಅವಜ್ಞಾಂ ಪುರತಃ ಕೃತ್ವಾ ಮಯಾ ಯೂಯಂ ವಿಶೇಷತಃ ॥ ೧೫

ನಿಹತಾಶ್ಚ ಹಿ ಮೇ ಸರ್ವೇ ಪರಿಭೂತಾಸ್ತೃಣಂ ಯಥಾ ।
ಭೂತಾಶ್ಚೈವ ಭವಿಷ್ಯಾಶ್ಚ ಯೂಯಂ ಚ ಪುರುಷಾಧಮಾಃ ॥ ೧೬

---

ಶತ್ರುಗಳನ್ನು ಸದಾ ಮರ್ದಿಸತಕ್ಕವನು ನಿನ್ನನ್ನು ಕೊಲ್ಲುವುದಕ್ಕಾಗಿ ಬಂದಿದ್ದೇನೆ ಆದ್ದರಿಂದ ನನ್ನೊಡನೆ ದ್ವಂದ್ವಯುದ್ಧಕ್ಕೆ ಸಿದ್ಧನಾಗು ಸಕಲ ಜೀವರಾಶಿಗಳಿಗೂ ನೀನು ಶತ್ರುವಾಗಿದ್ದೀಯೆ ಇನ್ನು ನೀನು ಬದುಕಲಾರೆ" ಎಂದನು (೧೧-೧೨) ಶತ್ರುಘ್ನನು ಹೀಗೆ ನುಡಿಯುತ್ತಿರಲು, ಲವಣಾಸುರನು ಅಟ್ಟಹಾಸಮಾಡಿ "ಆಹಾ! ದೈವವೇ ನಿನ್ನನ್ನು ಇಲ್ಲಿಗೆ ಕರೆತಂದಿತು! ರಾಕ್ಷಸೇಶ್ವರನಾದ ರಾವಣನು ನನ್ನ ತಾಯಿಯ ಸೋದರಿಯ ಅಣ್ಣ* ಎಲೈ ಪುರುಷಾಧಮ, ಒಬ್ಬ ಹೆಂಗಸಿನ ನಿಮಿತ್ತದಿಂದ ರಾಮನು ರಾವಣನನ್ನು ವಧಿಸಿದ್ದಾನೆ (೧೩-೧೪) ರಾವಣನ ಕುಲಕ್ಷಯವನ್ನೂ ಸಹ ನಾನು ಸಹಿಸಿಕೊಂಡೆನು ಮುಖ್ಯವಾಗಿ ನಿಮ್ಮೆಲ್ಲರ ವಿಷಯದಲ್ಲಿ ನನ್ನ ಅನಡ್ಡೆಯೇ ಇದಕ್ಕೆ ಕಾರಣ ಆದ್ದರಿಂದಲೇ ನಿಮ್ಮನ್ನು ಕ್ಷಮಿಸಿದೆನು. ನಿಮ್ಮ ವಂಶದವರನ್ನು ಹುಲ್ಲುಕಡ್ಡಿಯೆಂದು ತಿಳಿದಿದ್ದೇನೆ! ನಿಮ್ಮಲ್ಲಿ ಎಷ್ಟೋ ಜನರನ್ನು ಹಿಂದೆ ಕೊಂದಿದ್ದೇನೆ ಹಿಂದೆ ಇದ್ದವರು ಮುಂದೆ ಬಂದವರು ನೀವೆಲ್ಲರೂ

---

* ಲವಣಾಸುರನ ತಾಯಿ ಕುಂಭೀನಸಿ ಅವಳು ಮಾಲ್ಯವಂತನ ಮಗಳಾದ ಅನಲೆಯ ಮಗಳು ಸುಮಾಲಿಯ ಮಗಳಾದ ಕೈಕಸಿಯ ಮಗಳು ಶೂರ್ಪಣಖಿ ಮಾಲ್ಯವಂತನೂ ಸುಮಾಲಿಯೂ ಅಣ್ಣತಮ್ಮಂದಿರು ಹೀಗೆ ದಾಯಾದಿ ಸಂಬಂಧದಿಂದ ಕುಂಭೀನಸಿಯೂ ಶೂರ್ಪಣಖಿಯೂ ಅಕ್ಕತಂಗಿಯರಾದರು ತಾಯಿಯ ಸೋದರಿಯ ಅಣ್ಣ = ಕುಂಭೀನಸಿಯ ಸೋದರಿಯಾದ ಶೂರ್ಪಣಖಿಯ ಅಣ್ಣ

ತಸ್ಯ ತೇ ಯುದ್ಧಕಾಮಸ್ಯ ಯುದ್ಧಂ ದಾಸ್ಯಾಮಿ ದುರ್ಮತೇ ।
ತಿಷ್ಠ ತ್ವಂ ಚ ಮುಹೂರ್ತಂ ತು ಯಾವದಾಯುಧಮಾನಯೇ ॥ ೧೭

ಈಪ್ಸಿತಂ ಯಾದೃಶಂ ತುಭ್ಯಂ ಸಜ್ಜಯೇ ಯಾವದಾಯುಧಮ್ ।
ತಮುವಾಚಾಥ ಶತ್ರುಘ್ನಃ ಕ್ವ ಮೇ ಜೀವನ್ ಗಮಿಷ್ಯಸಿ ॥ ೧೮

ಶತ್ರುರ್ಯದೃಚ್ಛಯಾ ದೃಷ್ಟೋ ನ ಮೋಕ್ತವ್ಯಃ ಕೃತಾತ್ಮನಾ ।
ಯೋ ಹಿ ವಿಕ್ಲವಯಾ ಬುದ್ಧ್ಯಾ ಪ್ರಸರಂ ಶತ್ರವೇ ದಿಶೇತ್ ॥ ೧೯

ಸ ಹತೋ ಮಂದಬುದ್ಧಿತ್ವಾದ್ಯಥಾ ಕಾಪುರುಷಸ್ತಥಾ ॥

ತಸ್ಮಾತ್ ಸುದೃಷ್ಟಂ ಕುರು ಜೀವಲೋಕಂ
ಶರೈಃ ಶಿತೈಸ್ತ್ವಾಂ ವಿವಿಧೈರ್ನಯಾಮಿ ।
ಯಮಸ್ಯ ಗೇಹಾಭಿಮುಖಂ ಹಿ ಪಾಪಂ
ರಿಪುಂ ತ್ರಿಲೋಕಸ್ಯ ಚ ರಾಘವಸ್ಯ ॥ ೨೦

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟಷಷ್ಟಿತಮಃ ಸರ್ಗಃ

---

ಪುರುಷಾಧಮರು! (೧೫-೧೬) ಎಲೈ ದುರ್ಬುದ್ಧಿಯವನೆ, ಯುದ್ಧಾಪೇಕ್ಷೆಯಿಂದ ಬಂದಿರುವೆಯಾ? ಇದೋ, ಯುದ್ಧಕ್ಕೆ ಬರುವೆನು ಒಂದು ಮುಹೂರ್ತ ಕಾದಿರು ಆ ಯುಧವನ್ನು ತರುವೆನು! ಆಯುಧವನ್ನು ತಂದೊಡನೆ ನಿನಗೆ ಬೇಕಾದ ಬಗೆಯ ಯುದ್ಧವನ್ನು ನೀಡುವೆನು" ಎಂದನು ಆಗ ಶತ್ರುಘ್ನನು "ಎಲೈ, ನೀನು ಜೀವಂತನಾಗಿ ಎಲ್ಲಿಗೆ ಹೋಗುವೆ? (೧೭-೧೮) ವೈರಿಯು ಕಣ್ಣಿಗೆ ಬಿದ್ದಮೇಲೆ ವಿವೇಕಿಯಾದ ಯೋಧನು ಅವನನ್ನೆಂದಿಗೂ ಬಿಡುವುದಿಲ್ಲ ಯಾವನು ಅವಿವೇಕದಿಂದ ವೈರಿಗೆ ಅವಕಾಶವನ್ನೀಯುವನೋ ಆ ಮಂದಬುದ್ಧಿಯು ಹೇಡಿಯಾದ ಕಾಪುರುಷನಂತೆ ಹತನಾಗುವನು (೧೯). ಆದ್ದರಿಂದ, ಎಲೈ ರಾಕ್ಷಸ, ಈ ಜೀವಲೋಕವನ್ನು ಒಮ್ಮೆ ಚೆನ್ನಾಗಿ ನೋಡಿಬಿಡು! ತ್ರಿಲೋಕಗಳಿಗೂ ಶ್ರೀರಾಮನಿಗೂ ಶತ್ರುವೂ ಪಾಪಿಯೂ ಆದ ನಿನ್ನನ್ನು ಶಿತಶರಗಳಿಂದ ಯಮನ ಮನೆಗೆ ದಬ್ಬುವೆನು!" ಎಂದನು (೨೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರುವತ್ತೆಂಟನೆಯ ಸರ್ಗ

## ಏಕೋನಸಪ್ತತಿತಮಃ ಸರ್ಗ

ಲವಣವಧಃ

ತಚ್ಛ್ರುತ್ವಾ ಭಾಷಿತಂ ತಸ್ಯ ಶತ್ರುಘ್ನಸ್ಯ ಮಹಾತ್ಮನಃ ।
ಕ್ರೋಧಮಾಹಾರಯತ್ತೀವ್ರಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ ೧

ಪಾಣೌ ಪಾಣಿಂ ವಿನಿಷ್ಪಿಷ್ಯ ದಂತಾನ್ ಕಟಕಟಾಯ್ಯ ಚ ।
ಲವಣೋ ರಘುಶಾರ್ದೂಲಮಾಹ್ವಯಾಮಾಸ ಚಾಸಕೃತ್ ॥ ೨

ತಮಾಹ್ವಯಂತಂ ಸೌಮಿತ್ರಿರ್ಲವಣಂ ಘೋರದರ್ಶನಮ್ ।
ಶತ್ರುಘ್ನೋ ದೇವಶತ್ರುಘ್ನ ಇದಂ ವಚನಮಬ್ರವೀತ್ ॥ ೩

ನ ಶತ್ರುಘ್ನಸ್ತಥಾ ಜಾತೋ ಯಥಾನ್ಯೇ ನಿರ್ಜಿತಾಸ್ತ್ವಯಾ ।
ತದದ್ಯ ಬಾಣಾಭಿಹತೋ ವ್ರಜ ತ್ವಂ ಯಮಸಾದನಮ್ ॥ ೪

ಋಷಯೋಽಪ್ಯದ್ಯ ಪಾಪಾತ್ಮನ್ ಮಯಾ ತ್ವಾಂ ನಿಹತಂ ರಣೇ ।
ಪಶ್ಯಂತು ವಿಪ್ರಾ ವಿದ್ವಾಂಸಸ್ತ್ರಿದಶಾ ಇವ ರಾವಣಮ್ ॥ ೫

## ಸರ್ಗ ೬೯

ಲವಣಾಸುರನ ವಧೆ

ಶತ್ರುಘ್ನನ ನುಡಿಯನ್ನು ಕೇಳಿ ಲವಣನು ರೋಷಾವಿಷ್ಟನಾದನು. ಅವನು ನಿಲ್ಲು ನಿಲ್ಲೆಂದು ಗರ್ಜಿಸಿ ಕೈ ಕೈ ಹಿಸುಕಿ ಹಲ್ಲುಗಳನ್ನು ಕಟಕಟನೆ ಕಡಿದು, ಯುದ್ಧಕ್ಕೆ ಸಜ್ಜಾಗುವಂತೆ ಶತ್ರುಘ್ನನನ್ನು ಆಹ್ವಾನಿಸಿದನು (೧-೨) ಹಾಗೆ ಆಹ್ವಾನಿಸುತ್ತಿದ್ದ ಘೋರರೂಪನಾದ ರಾಕ್ಷಸನನ್ನು ನೋಡಿ ಶತ್ರುಘ್ನನು "ಎಲೈ ರಾಕ್ಷಸ, ಈ ಶತ್ರುಘ್ನನು ನಿನ್ನಿಂದ ಜಿತರಾದ ಇತರ ಯೋಧರಂತಲ್ಲವೆಂಬುದನ್ನರಿತುಕೊ! ನನ್ನ ಶರದಿಂದ ಹತನಾಗಿ ಯಮ ಸದನಕ್ಕೆ ಹೊರಡಬೇಕಾಗುವುದು (೩-೪) ಎಲೈ ದುರಾತ್ಮ, ರಾವಣನು ಹತನಾದಾಗ ದೇವತೆಗಳು ನೋಡಿದಂತೆ, ನೀನು ಹತನಾಗುವುದನ್ನು

ತ್ವಯಿ ಮದ್ಬಾಣನಿರ್ದಗ್ಧೇ ಪತಿತೇಽದ್ಯ ನಿಶಾಚರ ।
ಪುರೇ ಜನಪದೇ ಚಾಪಿ ಕ್ಷೇಮಮೇವ ಭವಿಷ್ಯತಿ ॥ ೬

ಅದ್ಯ ಮದ್ಬಾಹುನಿಷ್ಕ್ರಾಂತಃ ಶರೋ ವಜ್ರನಿಭಾನನಃ ।
ಪ್ರವೇಕ್ಷ್ಯತೇ ತೇ ಹೃದಯಂ ಪದ್ಮಮಂಶುರಿವಾರ್ಕಜಃ ॥ ೭

ಏವಮುಕ್ತೋ ಮಹಾವೃಕ್ಷಂ ಲವಣಃ ಕ್ರೋಧಮೂರ್ಛಿತಃ ।
ಶತ್ರುಘ್ನೋರಸಿ ಚಿಕ್ಷೇಪ ಸ ಚ ತಂ ಶತಧಾಚ್ಛಿನತ್ ॥ ೮

ತದ್ದೃಷ್ಟ್ವಾ ವಿಫಲಂ ಕರ್ಮ ರಾಕ್ಷಸಃ ಪುನರೇವ ತು ।
ಪಾದಪಾನ್ ಸುಬಹೂನ್ ಗೃಹ್ಯ ಶತ್ರುಘ್ನಾಯಾಸೃಜದ್ಬಲೀ ॥ ೯

ಶತ್ರುಘ್ನಶ್ಚಾಪಿ ತೇಜಸ್ವೀ ವೃಕ್ಷಾನಾಪತತೋ ಬಹೂನ್ ।
ತ್ರಿಭಿಶ್ಚತುರ್ಭಿರೇಕೈಕಂ ಚಿಚ್ಛೇದ ನತಪರ್ವಭಿಃ ॥ ೧೦

ತತೋ ಬಾಣಮಯಂ ವರ್ಷಂ ವ್ಯಸೃಜದ್ರಾಕ್ಷಸೋರಸಿ ।
ಶತ್ರುಘ್ನೋ ವೀರ್ಯಸಂಪನ್ನೋ ವಿವ್ಯಥೇ ನ ಸ ರಾಕ್ಷಸಃ ॥ ೧೧

---

ವಿದ್ವಾಂಸರಾದ ಋಷಿಗಳು ನೋಡುತ್ತಿರಲಿ ನನ್ನ ಶರಾಘಾತದಿಂದ ಸೀಳಿ ಹೋದ ನೀನು ನೆಲದಮೇಲುರುಳಿದರೆ, ಈ ನಗರದಲ್ಲಿಯೂ ರಾಷ್ಟ್ರದಲ್ಲಿಯೂ ಕ್ಷೇಮವು ನೆಲಸುವುದು (೫-೬). ನನ್ನ ತೋಳ್ಬಲದಿಂದ ಸಿಡಿದು ಹಾರುವ ವಜ್ರಸದೃಶವಾದ ಸರಳು, ಸೂರ್ಯಕಿರಣವು ಕಮಲದೊಳಗೆ ಹೊಗುವಂತೆ, ನಿನ್ನ ಎದೆಯೊಳಗೆ ನುಗ್ಗುವುದು" ಎಂದನು ಒಡನೆಯೇ ಲವಣಾಸುರನು ಸಿಟ್ಟಿನಿಂದ ಮೈಮರೆತು ಮರವೊಂದನ್ನು ಕಿತ್ತು ಶತ್ರುಘ್ನನ ಎದೆಗೆ ಬೀಸಿದನು ಶತ್ರುಘ್ನನು ಅದನ್ನು ಚೂರುಚೂರಾಗಿ ಕತ್ತರಿಸಿದನು (೭-೮) ತನ್ನ ಯತ್ನವು ವಿಫಲವಾದ್ದನ್ನು ಕಂಡು ಬಲಾಢ್ಯನಾದ ಆ ರಾಕ್ಷಸನು ಇನ್ನೂ ಕೆಲವು ಮರಗಳನ್ನು ಎತ್ತಿ ಎತ್ತಿ ಶತ್ರುಘ್ನನನ್ನು ಅಪ್ಪಳಿಸುತ್ತ ಹೋದನು ತೇಜಸ್ವಿಯಾದ ಶತ್ರುಘ್ನನು ಮೂರು ನಾಲ್ಕು ಕೊಂಕುಬಾಣಗಳನ್ನು ಹೊಡೆದು ಹೊಡೆದು ಒಂದೊಂದಾಗಿ ಕತ್ತರಿಸಿ ಕೆಡವಿದನು (೯-೧೦) ಆ ವೀರನು ರಾಕ್ಷಸನ ಎದೆಗೆ ಗುರಿಯಿಟ್ಟು ಬಾಣವೃಷ್ಟಿಯನ್ನೇ ಸುರಿಸಿದನು ರಾಕ್ಷಸನು

ತತಃ ಪ್ರಹಸ್ಯ ಲವಣೋ ವೃಕ್ಷಮುದ್ಯಮ್ಯ ವೀರ್ಯವಾನ್ ।
ಶಿರಸ್ಯಭ್ಯಹನಚ್ಛೂರಂ ಸ್ರಸ್ತಾಂಗಃ ಸ ಮುಮೋಹ ವೈ ॥ ೧೨

ತಸ್ಮಿನ್ನಿಪತಿತೇ ವೀರೇ ಹಾಹಾಕಾರೋ ಮಹಾನಭೂತ್ ।
ಋಷೀಣಾಂ ದೇವಸಂಘಾನಾಂ ಗಂಧರ್ವಾಪ್ಸರಸಾಂ ತಥಾ ॥ ೧೩

ತಮವಜ್ಞಾಯ ತು ಹತಂ ಶತ್ರುಘ್ನಂ ಭುವಿ ಪಾತಿತಮ್ ।
ರಕ್ಷೋ ಲಬ್ಧಾಂತರಮಪಿ ನ ವಿವೇಶ ಸ್ವಮಾಲಯಮ್ ॥ ೧೪

ನಾಪಿ ಶೂಲಂ ಪ್ರಜಗ್ರಾಹ ತಂ ದೃಷ್ಟ್ವಾ ಭುವಿ ಪಾತಿತಮ್ ।
ತತೋ ಹತ ಇತಿ ಜ್ಞಾತ್ವಾ ತಾನ್ ಭಕ್ಷ್ಯಾನ್ ಸಮುದಾವಹತ್ ॥ ೧೫

ಮುಹೂರ್ತಾಲ್ಲಬ್ಧಸಂಜ್ಞಸ್ತು ಪುನಸ್ತಸ್ಥೌ ಧೃತಾಯುಧಃ ।
ಶತ್ರುಘ್ನೋ ವೈ ಪುರದ್ವಾರಿ ಋಷಿಭಿಃ ಸಂಪ್ರಪೂಜಿತಃ ॥ ೧೬

ತತೋ ದಿವ್ಯಮಮೋಘಂ ತಂ ಜಗ್ರಾಹ ಶರಮುತ್ತಮಮ್ ।
ಜ್ವಲಂತಂ ತೇಜಸಾ ಘೋರಂ ಪೂರಯಂತಂ ದಿಶೋ ದಶ ॥ ೧೭

---

ಜಗ್ಗಲಿಲ್ಲ ಕಡೆಗೆ ಆ ಲವಣನು ಗಟ್ಟಿಯಾಗಿ ನಕ್ಕು, ಒಂದು ವೃಕ್ಷವನ್ನು ಹಿಡಿದೆತ್ತಿ ಶತ್ರುಘ್ನನ ತಲೆಯಮೇಲೆ ಬಡಿದನು. ಆ ಬಡಿತಕ್ಕೆ ಶತ್ರುಘ್ನನು ಕುಸಿದುಬಿದ್ದು ಮೂರ್ಛೆಹೋದನು (೧೧-೧೨) ಋಷಿಗಳೂ ದೇವ ಗಂಧರ್ವರೂ ಅಪ್ಸರೆಯರೂ ಹಾಹಾಕಾರಮಾಡಿದರು ನೆಲದಮೇಲೆ ಬಿದ್ದ ಶತ್ರುಘ್ನನು ಹತನಾದನೆಂದೇ ತಿಳಿದ ಲವಣಾಸುರನು, ಅವನನ್ನುವೇಕ್ಷಿಸಿ ಸುಮ್ಮನಾದನು ಅವಕಾಶ ದೊರಕಿದರೂ ಆ ರಾಕ್ಷಸನು ತನ್ನ ಮನೆಗೆ ತೆರಳ ಲಿಲ್ಲ (೧೩-೧೪) ಶೂಲವನ್ನು ತರಲಿಲ್ಲ ಶತ್ರುಘ್ನನು ಮೃತನಾದನೆಂದು ಭ್ರಮಿಸಿ, ತನ್ನ ಆಹಾರವಸ್ತುಗಳನ್ನು ಒಟ್ಟುಮಾಡಿ ಹೊರಲು ಏರ್ಪಡಿಸಿ ಕೊಳ್ಳುತ್ತಿದ್ದನು ಅಷ್ಟರಲ್ಲಿ ಶತ್ರುಘ್ನನು ಮೂರ್ಛೆಯಿಂದ ತಿಳಿದೆದ್ದು ತನ್ನ ಆಯುಧಗಳನ್ನು ಹಿಡಿದು ಪುರದ್ವಾರದಲ್ಲಿ ಅಡ್ಡಲಾಗಿ ನಿಂತನು. ಋಷಿಗಳು 'ಭಲಾ!' ಎಂದು ಹೊಗಳಿದರು (೧೫-೧೬) ಆಗ ಶತ್ರುಘ್ನನು ದಿವ್ಯವೂ ಅಮೋಘವೂ ಆದ ಶರೋತ್ತಮವನ್ನು ಕೈಗೆತ್ತಿಕೊಂಡನು (ಶ್ರೀರಾಮನು ಕೊಟ್ಟಿದ್ದ) ಆ ಶರವು ತೇಜಸ್ಸಿನಿಂದ ದಶದಿಶೆಗಳನ್ನೂ ಬೆಳಗುತ್ತ ಘೋರವಾಗಿ

ವಜ್ರಾನನಂ ವಜ್ರವೇಗಂ ಮೇರುಮಂದರಸಂನಿಭಮ್ ।
ನತಂ ಪರ್ವಸು ಸರ್ವೇಷು ಸಂಯುಗೇಷ್ವಪರಾಜಿತಮ್ ॥ ೧೮

ಅಸೃಕ್‌ಚಂದನದಿಗ್ಧಾಂಗಂ ಚಾರುಪತ್ರಂ ಪತತ್ರಿಣಮ್ ।
ದಾನವೇಂದ್ರಾಚಲೇಂದ್ರಾಣಾಮಸುರಾಣಾಂ ಚ ದಾರಣಮ್ ॥ ೧೯

ತಂ ದೀಪ್ತಮಿವ ಕಾಲಾಗ್ನಿಂ ಯುಗಾಂತೇ ಸಮುಪಸ್ಥಿತೇ ।
ದೃಷ್ಟ್ವಾ ಸರ್ವಾಣಿ ಭೂತಾನಿ ಪರಿತ್ರಾಸಮುಪಾಗಮನ್ ॥ ೨೦

ಸದೇವಾಸುರಗಂಧರ್ವಂ ಮುನಿಭಿಃ ಸಾಪ್ಸರೋಗಣಮ್ ।
ಜಗದ್ಧಿ ಸರ್ವಮಸ್ವಸ್ಥಂ ಪಿತಾಮಹಮುಪಸ್ಥಿತಮ್ ॥ ೨೧

ಊಚುಶ್ಚ ದೇವಾ ದೇವೇಶಂ ವರದಂ ಪ್ರಪಿತಾಮಹಮ್ ।
ಕಚ್ಚಿಲ್ಲೋಕಕ್ಷಯೋ ದೇವ ಸಂಪ್ರಾಪ್ತೋ ವಾ ಯುಗಕ್ಷಯಃ ॥ ೨೨

ನೇದೃಶಂ ದೃಷ್ಟಪೂರ್ವಂ ಚ ನ ಶ್ರುತಂ ಪ್ರಪಿತಾಮಹ ।
ದೇವಾನಾಂ ಭಯಸಂಮೋಹೋ ಲೋಕಾನಾಂ ಸಂಕ್ಷಯಂ ಪ್ರತಿ ॥

---

ಕಂಗೊಳಿಸಿತು ಅದು ವಜ್ರಾಯುಧದಂತೆ ತೀಕ್ಷ್ಣಾಗ್ರವೂ ಸಿಡಿಲಿನಂತೆ ವೇಗಶಾಲಿಯೂ ಮೇರುಮಂದರಗಿರಿಗಳಂತೆ ದುರ್ಧರ್ಷವೂ ಆಗಿತ್ತು ಅದರ ಗಿಣ್ಣುಗಳು ಕೊಂಕಿದ್ದವು ಆ ಶರವು ಯುದ್ಧಗಳಲ್ಲಿ ಅಜೇಯವಾಗಿತ್ತು (೧೭-೧೮) ಆ ಬಾಣವನ್ನು ರಕ್ತದಂತಹ ಕೆಂಪುಚಂದನದಿಂದ ಲೇಪಿಸಲಾಗಿತ್ತು ಗರಿಗಳು ಸುಂದರವಾಗಿದ್ದವು ದಾನವೇಂದ್ರರನ್ನಾಗಲಿ ಪರ್ವತೇಂದ್ರಗಳನ್ನಾಗಲಿ ಅಸುರೇಂದ್ರರನ್ನಾಗಲಿ ಸೀಳಿಬಿಸುಡುವ ಸಾಮರ್ಥ್ಯವನ್ನು ಪಡೆದಿತ್ತು (೧೯) ಪ್ರಳಯದ ಕಾಲಾಗ್ನಿಯಂತೆ ಪ್ರಜ್ವಲಿಸುತ್ತಿದ್ದ ಆ ಶರವನ್ನು ನೋಡಿ ಸಕಲಭೂತಗಳೂ ಹೆದರಿದವು ಹೆದರಿ ಕಂಗೆಟ್ಟ ದೇವಾಸುರಗಂಧರ್ವರೂ ಅಪ್ಸರೆಯರೂ ಸಕಲರೂ ಮುನಿಗಳೊಡನೆ ಬ್ರಹ್ಮನ ಬಳಿಗೆ ಹೋಗಿ "ಹೇ ದೇವ, ಪ್ರಳಯಕಾಲವು ಸಮೀಪಿಸಿತೋ ಹೇಗೆ? ಈ ಬಗೆಯಲ್ಲಿ ಲೋಕದ ದುರವಸ್ಥೆಯನ್ನು ನಾವು ನೋಡಿಲ್ಲ, ಕೇಳಿಲ್ಲ!" ಲೋಕಗಳೆಲ್ಲವೂ ಲಯಿಸಿಹೋಗುತ್ತವೆಯೆಂದು ದೇವತೆಗಳೂ ಭಯದಿಂದ

ತೇಷಾಂ ತದ್ವಚನಂ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಭಯಕಾರಣಮಾಚಷ್ಟ ಲೋಕಾನಾಮಭಯಂಕರಃ ॥ ೨೪

ಉವಾಚ ಮಧುರಾಂ ವಾಣೀಂ ಶೃಣುಧ್ವಂ ಸರ್ವದೇವತಾಃ ।
ವಧಾಯ ಲವಣಸ್ಯಾಜೌ ಶರಃ ಶತ್ರುಘ್ನಧಾರಿತಃ ॥ ೨೫

ತೇಜಸಾ ತಸ್ಯ ಸಂಮೂಢಾಃ ಸರ್ವೇ ಸ್ಮಃ ಸುರಸತ್ತಮಾಃ ।
ಏಷ ಪೂರ್ವಸ್ಯ ದೇವಸ್ಯ ಲೋಕಕರ್ತುಃ ಸನಾತನಃ ॥ ೨೬

ಶರಸ್ತೇಜೋಮಯೋ ವತ್ಸಾಸ್ತೇನ ವೋ ಭಯಮಾಗತಮ್ ।
ಏಷ ವೈ ಕೈಟಭಸ್ಯಾರ್ಥೇ ಮಧುನಶ್ಚ ಮಹಾಶರಃ ॥ ೨೭

ಸೃಷ್ಟೋ ಮಹಾತ್ಮನಾ ಯೇನ ವಧಾರ್ಥೇ ದೈತ್ಯಯೋಸ್ತಯೋಃ ।
ಏಕ ಏವ ಪ್ರಜಾನಾತಿ ವಿಷ್ಣುಸ್ತೇಜೋಮಯಂ ಶರಮ್ ॥ ೨೮

ಏಷಾ ಏವ ತನುಃ ಪೂರ್ವಾ ವಿಷ್ಣೋಸ್ತಸ್ಯ ಮಹಾತ್ಮನಃ ।
ಇತೋ ಗಚ್ಛತ ಪಶ್ಯಧ್ವಂ ವಧ್ಯಮಾನಂ ಮಹಾತ್ಮನಾ ॥ ೨೯

ರಾಮಾನುಜೇನ ವೀರೇಣ ಲವಣಂ ರಾಕ್ಷಸೋತ್ತಮಮ್ ।
ತಸ್ಯ ತೇ ದೇವದೇವಸ್ಯ ನಿಶಮ್ಯ ವಚನಂ ಸುರಾಃ ॥ ೩೦

---

ಕಂಗೆಟ್ಟಿದ್ದಾರೆ!" ಎಂದು ನಿವೇದಿಸಿದರು (೨೦-೨೩) ಆಗ ಸಕಲರ ಭಯವನ್ನೂ ನಿವಾರಿಸತಕ್ಕ ಪಿತಾಮಹನು ಮೃದುಸ್ವರದಿಂದ "ಸಕಲ ದೇವತೆಗಳೂ ಕೇಳಬೇಕು ಯುದ್ಧದಲ್ಲಿ ಲವಣಾಸುರನನ್ನು ಕೊಲ್ಲುವುದಕ್ಕಾಗಿ ಶತ್ರುಘ್ನನು ಶರವನ್ನು ಕೈಯಲ್ಲಿ ಹಿಡಿದಿದ್ದಾನೆ (೨೪-೨೫) ಅದರ ತೇಜಸ್ಸಿನಿಂದ ನಾವೆಲ್ಲರೂ ಸಂಮೂಢರಾಗಿಬಿಟ್ಟಿದ್ದೇವೆ! ಅದು ಆದಿದೇವನಾದ ವಿಷ್ಣುವಿನ ಸನಾತನವಾದ ಅಸ್ತ್ರ ತೇಜೋಮಯವಾದ ಶರದಿಂದ ನಿಮಗೆ ಭಯ ಉಂಟಾಗಿದೆ ಮಧುಕೈಟಭರ ಸಂಹಾರಕ್ಕಾಗಿ ಮಹಾತ್ಮನಾದ ವಿಷ್ಣುವು ಅದನ್ನು ಸೃಜಿಸಿದ್ದಾನೆ ಆತನೊಬ್ಬನಿಗೆ ಮಾತ್ರ ಅದರ ಸ್ವರೂಪವು ತಿಳಿದಿದೆ ಆ ಶರವೇ ವಿಷ್ಣುವಿನ ಪ್ರಾಚೀನ ಮೂರ್ತಿ ರಾಮಾನುಜನಾದ ಶತ್ರುಘ್ನನು ಲವಣಾಸುರನನ್ನು ವಧಿಸುವ ಬಗೆಯನ್ನು ಹೋಗಿ ನೋಡಿರಿ" ಎಂದನು (೨೬-೨೯) ದೇವದೇವನಾದ ಬ್ರಹ್ಮನ ವಚನವನ್ನು ಕೇಳಿ, ದೇವತೆಗಳು

ಆಜಗ್ಮುರ್ಯತ್ರ ಯುಧ್ಯೇತೇ ಶತ್ರುಘ್ನಲವಣಾವುಭೌ ।
ತಂ ಶರಂ ದಿವ್ಯಸಂಕಾಶಂ ಶತ್ರುಘ್ನಕರಧಾರಿತಮ್ ॥ ೩೧

ದದೃಶುಃ ಸರ್ವಭೂತಾನಿ ಯುಗಾಂತಾಗ್ನಿಮಿವೋತ್ಥಿತಮ್ ।
ಆಕಾಶಮಾವೃತಂ ದೃಷ್ಟ್ವಾ ದೇವೈರ್ಹಿ ರಘುನಂದನಃ ॥ ೩೨

ಸಿಂಹನಾದಂ ಭೃಶಂ ಕೃತ್ವಾ ದದರ್ಶ ಲವಣಂ ಪುನಃ ।
ಆಹೂತಶ್ಚ ಪುನಸ್ತೇನ ಶತ್ರುಘ್ನೇನ ಮಹಾತ್ಮನಾ ॥ ೩೩

ಲವಣಃ ಕ್ರೋಧಸಂಯುಕ್ತೋ ಯುದ್ಧಾಯ ಸಮುಪಸ್ಥಿತಃ ।
ಆಕರ್ಣಾತ್ ಸ ವಿಕೃಷ್ಯಾಥ ತದ್ಧನುರ್ಧನ್ವಿನಾಂ ವರಃ ॥ ೩೪

ತಂ ಮುಮೋಚ ಮಹಾಬಾಣಂ ಲವಣಸ್ಯ ಮಹೋರಸಿ ।
ಉರಸ್ತಸ್ಯ ವಿದಾರ್ಯಾಶು ಪ್ರವಿವೇಶ ರಸಾತಲಮ್ ॥ ೩೫

ಗತ್ವಾ ರಸಾತಲಂ ದಿವ್ಯಃ ಶರೋ ವಿಬುಧಪೂಜಿತಃ ।
ಪುನರೇವಾಗಮತ್ತೂರ್ಣಮಿಕ್ಷ್ವಾಕುಕುಲನಂದನಮ್ ॥ ೩೬

ಶತ್ರುಘ್ನಶರನಿರ್ಭಿನ್ನೋ ಲವಣಃ ಸ ನಿಶಾಚರಃ ।
ಪಪಾತ ಸಹಸಾ ಭೂಮೌ ವಜ್ರಾಹತ ಇವಾಚಲಃ ॥ ೩೭

---

ಶತ್ರುಘ್ನ-ಲವಣರು ಯುದ್ಧಮಾಡುತ್ತಿದ್ದ ಸ್ಥಳಕ್ಕೆ ಬಂದರು. ಅಲ್ಲಿ ಶತ್ರುಘ್ನನು ಧರಿಸಿದ್ದ ಪ್ರಳಯಕಾಲಾಗ್ನಿಸದೃಶವಾದ ಶರವನ್ನು ಕಂಡರು ಗಗನವನ್ನಾವರಿಸಿ ನಿಂತ ದೇವತೆಗಳನ್ನು ನೋಡಿದ ಶತ್ರುಘ್ನನು ಸಿಂಹನಾದ ಮಾಡಿ ಲವಣಾಸುರನನ್ನು ಮತ್ತೆ ಯುದ್ಧಕ್ಕೆ ಆಹ್ವಾನಿಸಿದನು (೩೦-೩೩) ಕ್ರೋಧೋದ್ರಿಕ್ತನಾದ ಲವಣನು ಮತ್ತೆ ಯುದ್ಧಕ್ಕೆ ನಿಂತನು ಧನುರ್ಧಾರಿಗಳಲ್ಲಿ ಅಗ್ರಗಣ್ಯನಾದ ಶತ್ರುಘ್ನನು ಬಿಲ್ಲನ್ನು ಕಿವಿಯವರೆಗೆಳೆದು ಲವಣಾಸುರನ ಎದೆಗೆ ಗುರಿಯಿಟ್ಟು ಆ ಮಹಾಶರವನ್ನು ಹೊಡೆದನು ಶರವು ಲವಣಾಸುರನ ಎದೆಯನ್ನು ಸೀಳಿ ರಸಾತಲಕ್ಕೆ ನುಗ್ಗಿತು! (೩೪-೩೫) ದೇವಪೂಜಿತವಾದ ಆ ದಿವ್ಯಾಸ್ತ್ರವು ರಸಾತಳದವರೆಗೆ ನುಗ್ಗಿ, ಮತ್ತೆ ಶತ್ರುಘ್ನನ ಸಮೀಪಕ್ಕೆ ಬಂದು ಸೇರಿತು ವಜ್ರಾಹತವಾದ ಗಿರಿಯಂತೆ ಲವಣಾಸುರನು ದೊಪ್ಪನೆ ಭೂಮಿಯಲ್ಲಿ ಬಿದ್ದನು ಆಗ ಲವಣನ ವಶದಲ್ಲಿದ್ದ

ತಚ್ಚ ಶೂಲಂ ಮಹತ್ತ್ರೀನ ಹತೇ ಲವಣರಾಕ್ಷಸೇ ।
ಪಶ್ಯತಾಂ ಸರ್ವದೇವಾನಾಂ ರುದ್ರಸ್ಯ ವಶಮನ್ವಗಾತ್ ॥ ೩೮

ಏಕೇಷುಪಾತೇನ ಭಯಂ ನಿಪಾತ್ಯ
ಲೋಕತ್ರಯಸ್ಯಾಪಿ ರಘುಪ್ರವೀರಃ ।
ವಿನಿರ್ಬಭಾವುತ್ತಮಚಾಪಬಾಣ-
ಸ್ತಮಃ ಪ್ರಣುದ್ಯೇವ ಸಹಸ್ರರಶ್ಮಿಃ ॥ ೩೯

ತತೋ ಹಿ ದೇವಾ ಋಷಿಪನ್ನಗಾಶ್ಚ
ಪ್ರಪೂಜಿರೇ ಹ್ಯಪ್ಸರಸಶ್ಚ ಸರ್ವಾಃ ।
ದಿಷ್ಟ್ಯಾ ಜಯೋ ದಾಶರಥೇರವಾಪ್ತ-
ಸ್ತ್ಯಕ್ತ್ವಾ ಭಯಂ ಸರ್ಪ ಇವ ಪ್ರಶಾಂತಃ ॥ ೪೦

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋನಸಪ್ತತಿತಮಃ ಸರ್ಗಃ



ದಿವ್ಯಶೂಲವು, ದೇವತೆಗಳು ನೋಡುತ್ತಿರುವಂತೆಯೇ ಮೇಲೆ ಹಾರಿ ರುದ್ರದೇವನ ಬಳಿಗೆ ಸಾರಿತು (೩೬-೩೮) ಹೀಗೆ ರಘುವೀರನಾದ ಶತ್ರುಘ್ನನು ಒಂದು ಬಾಣವನ್ನು ಪ್ರಯೋಗಿಸಿ ಮೂರು ಲೋಕದ ಭಯವನ್ನೂ ನಿವಾರಿಸಿದನು ಉತ್ತಮವಾದ ಚಾಪಬಾಣಗಳನ್ನು ಧರಿಸಿದ್ದ ಆ ವೀರನು ಕತ್ತಲೆಯನ್ನು ತೊಡೆದುಹಾಕಿದ ಭಾಸ್ಕರನಂತೆ ಬೆಳಗಿದನು (೩೯) ಸಕಲ ದೇವತೆಗಳೂ ಋಷಿಗಳೂ ಪನ್ನಗರೂ ಅಪ್ಸರೆಯರೂ "ಆಹಾ! ಭಲಾ! ದಶರಥಪುತ್ರನು ನಿರ್ಭಯದಿಂದ ಜಯವನ್ನು ಗಳಿಸಿದನು ಸರ್ಪದಂತಿದ್ದ ಲವಣಾಸುರನು ತಣ್ಣಗಾದನು!" ಎಂದು ಉದ್ಗರಿಸಿದರು (೪೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಅರುವತ್ತೊಂಬತ್ತನೆಯ ಸರ್ಗ



## ಸಪ್ತತಿತಮಃ ಸರ್ಗಃ

### ಮಧುಪುರೀನಿವೇಶಃ

ಹತೇ ತು ಲವಣೇ ದೇವಾಃ ಸೇಂದ್ರಾಃ ಸಾಗ್ನಿಪುರೋಗಮಾಃ ।
ಊಚುಃ ಸುಮಧುರಾಂ ವಾಣೀಂ ಶತ್ರುಘ್ನಂ ಶತ್ರುತಾಪನಮ್ । ೧

ದಿಷ್ಟ್ಯಾ ತೇ ವಿಜಯೋ ವತ್ಸ ದಿಷ್ಟ್ಯಾ ಲವಣರಾಕ್ಷಸಃ ।
ಹತಃ ಪುರುಷಶಾರ್ದೂಲ ವರಂ ವರಯ ಸುವ್ರತ ॥ ೨

ವರದಾಸ್ತು ಮಹಾಬಾಹೋ ಸರ್ವ ಏವ ಸಮಾಗತಾಃ ।
ವಿಜಯಾಕಾಂಕ್ಷಿಣಸ್ತುಭ್ಯಮಮೋಘಂ ದರ್ಶನಂ ಹಿ ನಃ ॥ ೩

ದೇವಾನಾಂ ಭಾಷಿತಂ ಶ್ರುತ್ವಾ ಶೂರೋ ಮೂರ್ಧ್ನಿ ಕೃತಾಂಜಲಿಃ ।
ಪ್ರತ್ಯುವಾಚ ಮಹಾಬಾಹುಃ ಶತ್ರುಘ್ನಃ ಪ್ರಯತಾತ್ಮವಾನ್ ॥ ೪

ಇಯಂ ಮಧುಪುರೀ ರಮ್ಯಾ ಮಧುರಾ ದೇವನಿರ್ಮಿತಾ ।
ನಿವೇಶಂ ಪ್ರಾಪ್ನುಯಾಚ್ಛೀಘ್ರಮೇಷ ಮೇಽಸ್ತು ವರಃ ಪರಃ ॥ ೫

### ಸರ್ಗ ೭೦

ದೇವತೆಗಳಿಂದ ಶತ್ರುಘ್ನನ ಅಭಿನಂದನೆ ಮಧುಪುರೀ ಸ್ಥಾಪನೆ
ಹನ್ನೆರಡು ವರ್ಷ ಶತ್ರುಘ್ನನ ರಾಜ್ಯಭಾರ

ಲವಣಾಸುರನು ಹತನಾಗಲು ಇಂದ್ರಾಗ್ನಿಗಳೇ ಮೊದಲಾದ ದೇವತೆಗಳು ಶತ್ರುಘ್ನನ ಬಳಿಗೆ ಆಗಮಿಸಿ "ವತ್ಸ, ಬಹಳ ಸಂತೋಷವಾಯಿತು ನಿನಗೆ ವಿಜಯವಾಯಿತು ಲವಣನು ಹತನಾದನು ಎಲೈ ಮಹಾಬಾಹು, ನಿನಗೆ ವರವನ್ನೀಯುವುದಕ್ಕಾಗಿ ಬಂದಿದ್ದೇವೆ ನಿನಗೆ ಸರ್ವದಾ ವಿಜಯವನ್ನು ಹಾರೈಸುತ್ತೇವೆ ನಮ್ಮ ದರ್ಶನವು ಫಲಕಾರಿಯಾಗಬೇಕು (ವರವನ್ನು ಕೇಳಿಕೊ)" ಎಂದರು (೧-೩) ದೇವತೆಗಳ ನುಡಿಯನ್ನು ಕೇಳಿ ಶತ್ರುಘ್ನನು ಅವರಿಗೆ ವಂದಿಸಿ "ದೇವತೆಗಳೆ, ಈ ಮಧುಪುರಿಯು ದೇವನಿರ್ಮಿತವೆನಿಸಿ ರಮ್ಯವೂ ಮಧುರವೂ ಆಗಲಿ ರಾಜಧಾನಿಗೆ ಯೋಗ್ಯವಾದ ಸ್ಥಿತಿಯನ್ನು ಶೀಘ್ರದಲ್ಲಿ ಪಡೆಯಲಿ ಇದೇ ನಾನು ಬೇಡುವ ವರ"

ತೇ ದೇವಾಃ ಪ್ರೀತಮನಸೋ ಬಾಢಮಿತ್ಯೇವ ರಾಘವಮ್ ।
ಭವಿಷ್ಯತಿ ಪುರೀ ರಮ್ಯಾ ಶೂರಸೇನಾ ನ ಸಂಶಯಃ ॥ ೬

ತೇ ತಥೋಕ್ತ್ವಾ ಮಹಾತ್ಮಾನೋ ದಿವಮಾರುರುಹುಸ್ತದಾ ।
ಶತ್ರುಘ್ನೋಽಪಿ ಮಹಾತೇಜಾಸ್ತಾಂ ಸೇನಾಂ ಸಮುಪಾನಯತ್ ॥

ಸಾ ಸೇನಾ ಶೀಘ್ರಮಾಗಚ್ಛಚ್ಛ್ರುತ್ವಾ ಶತ್ರುಘ್ನಶಾಸನಮ್ ।
ನಿವೇಶನಂ ಚ ಶತ್ರುಘ್ನಃ ಶ್ರಾವಣೇನ ಸಮಾರಭತ್ ॥ ೮

ಸಾ ಪುರಾ ದಿವ್ಯಸಂಕಾಶಾ ವರ್ಷೇ ದ್ವಾದಶಮೇ ಶುಭೇ ।
ನಿವಿಷ್ಟಾ ಶೂರಸೇನಾನಾಂ ವಿಷಯಶ್ಚಾಕುತೋಭಯಃ ॥ ೯

ಕ್ಷೇತ್ರಾಣಿ ಸಸ್ಯಯುಕ್ತಾನಿ ಕಾಲೇ ವರ್ಷತಿ ವಾಸವಃ ।
ಅರೋಗವೀರಪುರುಷಾ ಶತ್ರುಘ್ನಭುಜಪಾಲಿತಾ ॥ ೧೦

ಅರ್ಧಚಂದ್ರಪ್ರತೀಕಾಶಾ ಯಮುನಾತೀರಶೋಭಿತಾ ।
ಶೋಭಿತಾ ಗೃಹಮುಖ್ಯೈಶ್ಚ ಚತ್ವರಾಪಣವೀಥಿಕೈಃ ॥ ೧೧

---

ಎಂದು ನಿವೇದಿಸಿದನು (೪-೫) ಸಂತುಷ್ಟರಾದ ದೇವತೆಗಳು "ಹಾಗೆಯೇ ಆಗಲಿ ಈ ಮಧುಪುರಿಯು ರಮ್ಯವೂ ಶೂರಸೇನೆಯುಳ್ಳ ರಾಜಧಾನಿಯೂ ಆಗುವುದು, ಸಂದೇಹವಿಲ್ಲ" ಎಂದು ವರವನ್ನಿತ್ತು ಸ್ವರ್ಗಕ್ಕೆ ಹೊರಟು ಹೋದರು ಅನಂತರ ಶತ್ರುಘ್ನನು ತನ್ನ ಸೇನೆಯನ್ನು ಅಲ್ಲಿಗೆ ಕರೆಸಿದನು (೬-೭) ಶತ್ರುಘ್ನನ ಆಜ್ಞೆಯಂತೆ ಸೈನ್ಯವು ಬಂದಿತು ಶತ್ರುಘ್ನನು ಶ್ರಾವಣಮಾಸದಲ್ಲಿ ನಗರದ ಪುನರ್ನಿರ್ಮಾಣವನ್ನಾರಂಭಿಸಿದನು ಮೊದಲನೆಯ ಹನ್ನೆರಡು ವರ್ಷಗಳಲ್ಲಿ ಶತ್ರುಘ್ನನ ಪರಿಶ್ರಮದಿಂದ ಮಧುಪುರಿಯು ದಿವ್ಯಮನೋಹರವಾಯಿತು ರಾಜ್ಯವಾದ ಶೂರಸೇನ ದೇಶವು ಭಯರಹಿತವಾಯಿತು (೮-೯) ಹೊಲ ಗದ್ದೆಗಳು ಸಸ್ಯಗಳಿಂದ ಕಂಗೊಳಿಸಿದವು ಸರಿಯಾದ ಕಾಲದಲ್ಲಿ ಇಂದ್ರನು ಮಳೆಗರೆಯುತ್ತಿದ್ದನು ಶತ್ರುಘ್ನನ ಭುಜಬಲದಿಂದ ಪಾಲಿತವಾದ ಮಧುಪುರಿಯಲ್ಲಿ ಪ್ರಜೆಗಳು ರೋಗರಹಿತರಾಗಿಯೂ ವೀರರಾಗಿಯೂ ಬಾಳತೊಡಗಿದರು ಯಮುನಾತೀರದಲ್ಲಿ ಆ ನಗರಿಯು ಅರ್ಧಚಂದ್ರಾಕಾರವಾಗಿ ಬೆಳೆಯಿತು ಉತ್ತಮಗೃಹಗಳಿಂದಲೂ ಚೌಕಗಳಿಂದಲೂ ಅಂಗಡಿಬೀದಿಗಳಿಂದಲೂ ಶೋಭಿಸಿತು (೧೦-೧೧)

ಚಾತುರ್ವರ್ಣ್ಯಸಮಾಯುಕ್ತಾ ನಾನಾವಾಣಿಜ್ಯಶೋಭಿತಾ ।
ಯಚ್ಚ ತೇನ ಪುರಾ ಶುಭ್ರಂ ಲವಣೇನ ಕೃತಂ ಮಹತ್ ॥ ೧೨

ತಚ್ಛೋಭಯತಿ ಶತ್ರುಘ್ನೋ ನಾನಾವರ್ಣೋಪಶೋಭಿತಮ್ ।
ಆರಾಮೈಶ್ಚ ವಿಹಾರೈಶ್ಚ ಶೋಭಮಾನಾಂ ಸಮಂತತಃ ॥ ೧೩

ಶೋಭಿತಾಂ ಶೋಭನೀಯೈಶ್ಚ ತಥಾನ್ಯೈರ್ದೇವಮಾನುಷೈಃ ।
ತಾಂ ಪುರೀಂ ದಿವ್ಯಸಂಕಾಶಾಂ ನಾನಾಪಣ್ಯೋಪಶೋಭಿತಾಮ್ ॥

ನಾನಾದೇಶಾಗತೈಶ್ಚಾಪಿ ವಣಿಗ್ಭಿರುಪಶೋಭಿತಾಮ್ ।
ತಾಂ ಸಮೃದ್ಧಾಂ ಸಮೃದ್ಧಾರ್ಥಃ ಶತ್ರುಘ್ನೋ ಭರತಾನುಜಃ ॥ ೧೪

ನಿರೀಕ್ಷ್ಯ ಪರಮಪ್ರೀತಃ ಪರಂ ಹರ್ಷಮುಪಾಗಮತ್ ।
ತಸ್ಯ ಬುದ್ಧಿಃ ಸಮುತ್ಪನ್ನಾ ನಿವೇಶ್ಯ ಮಧುರಾಂ ಪುರೀಮ್ ॥ ೧೬

ರಾಮಪಾದೌ ನಿರೀಕ್ಷೇಽಹಂ ವರ್ಷೇ ದ್ವಾದಶ ಆಗತೇ ॥

ತತಃ ಸ ತಾಮಮರಪುರೋಪಮಾಂ ಪುರೀಂ
ನಿವೇಶ್ಯ ವೈ ವಿವಿಧಜನಾಭಿಸಂವೃತಾಮ್ ।

---

ಚಾತುರ್ವರ್ಣ್ಯದ ಪ್ರಜೆಗಳು ನೆಲೆಸಿದರು ನಾನಾಪ್ರಕಾರದ ವಾಣಿಜ್ಯ ವ್ಯವಹಾರಗಳು ನಡೆಯಲಾರಂಭಿಸಿದವು ಹಿಂದೆ ಲವಣಾಸುರನು ಕಟ್ಟಿದ ಅರಮನೆಯನ್ನು ಶತ್ರುಘ್ನನು ನಿರ್ಮಲಗೊಳಿಸಿ ವಿವಿಧ ಬಣ್ಣಗಳನ್ನು ಹಚ್ಚಿಸಿ ಉತ್ತಮಪಡಿಸಿದನು ಎಲ್ಲೆಲ್ಲಿಯೂ ಹೂದೋಟಗಳೂ ಕ್ರೀಡಾಂಗಣಗಳೂ ನಿರ್ಮಿತವಾದವು (೧೨-೧೩) ವಿವಿಧ ರಾಷ್ಟ್ರಗಳಿಂದ ವಣಿಜರು ಆಗಮಿಸಿದರು ಹೀಗೆ ಸರ್ವಸಮೃದ್ಧವಾದ ಮಧುಪುರಿಯನ್ನು ಕಂಡು ಶತ್ರುಘ್ನನಿಗೆ ಪರಮಾನಂದವಾಯಿತು ಈ ಪ್ರಕಾರದಲ್ಲಿ ಮಧುರಾಪುರಿಯನ್ನು ನಿರ್ಮಿಸಲು ಹನ್ನೆರಡು ವರ್ಷಗಳು ಕಳೆದವು ಆಗ ಶತ್ರುಘ್ನನಿಗೆ ಶ್ರೀರಾಮನ ಪಾದಗಳನ್ನು ಸಂದರ್ಶಿಸಬೇಕೆಂದು ಮನಸ್ಸಾಯಿತು (೧೪-೧೬) ವಿವಿಧ ಪ್ರಜೆಗಳಿಂದ ತುಂಬಿತುಳುಕುವ ಮಧುಪುರಿಯು ಅಮರಾವತಿಯಂತೆ ಶೋಭಿಸುವುದನ್ನು ಕಂಡಮೇಲೆ, ರಘುವಂಶವರ್ಧನನೂ ಮಹಾರಾಜನೂ ಆದ

ನರಾಧಿಪೋ ರಘುಪತಿಪಾದದರ್ಶನೇ
ದಧೇ ಮತಿಂ ರಘುಕುಲವಂಶವರ್ಧನಃ ॥ ೧೭

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತತಿತಮಃ ಸರ್ಗಃ

---

## ಏಕಸಪ್ತತಿತಮಃ ಸರ್ಗಃ

### ಶತ್ರುಘ್ನಪ್ರಶಂಸಾ

ತತೋ ದ್ವಾದಶಮೇ ವರ್ಷೇ ಶತ್ರುಘ್ನೋ ರಾಮಪಾಲಿತಾಮ್ ।
ಅಯೋಧ್ಯಾಂ ಚಕಮೇ ಗಂತುಮಲ್ಪಭೃತ್ಯಬಲಾನುಗಃ ॥ ೧

ತತೋ ಮಂತ್ರಿಪುರೋಗಾಂಶ್ಚ ಬಲಮುಖ್ಯಾನ್ನಿವರ್ತ್ಯ ಚ ।
ಜಗಾಮ ಹಯಮುಖ್ಯೈಶ್ಚ ರಥಾನಾಂ ಚ ಶತೇನ ಸಃ ॥ ೨

---

ಶತ್ರುಘ್ನನಿಗೆ ರಘುನಾಥನ ಪಾದಗಳನ್ನು ಸಂದರ್ಶಿಸಬೇಕೆಂಬ ಹಂಬಲ ವಾಯಿತು (೧೭)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತನೆಯ ಸರ್ಗ

---

## ಸರ್ಗ ೭೧

ಶತ್ರುಘ್ನನು ಅಯೋಧ್ಯೆಗೆ ಬರುವಾಗ ವಾಲ್ಮೀಕಿಮುನಿಗಳ ಆಶ್ರಮದಲ್ಲಿ
ವಿಶ್ರಮಿಸುವುದು ಶತ್ರುಘ್ನನ ಪ್ರಶಂಸೆ ರಾಮಾಯಣಶ್ರವಣ

ಅನಂತರ ಹನ್ನೆರಡನೆಯ ವರ್ಷದಲ್ಲಿ ಶತ್ರುಘ್ನನು ಶ್ರೀರಾಮಪಾಲಿತವಾದ ಅಯೋಧ್ಯೆಗೆ ಹೋಗಬೇಕೆಂದು ಬಯಸಿ, ಮಂತ್ರಿಪುರೋಹಿತರಿಗೂ ಸೇನಾನಿಗಳಿಗೂ ತಿಳಿಸಿ ಬೀಳ್ಕೊಂಡನು ಅವನು ತನ್ನೊಂದಿಗೆ ಕೆಲವೇ ಜನ ಸೇವಕರನ್ನೂ ಸೈನಿಕರನ್ನೂ ಕರೆದೊಯ್ದನು ಒಂದು ನೂರು ಕುದುರೆಗಳೂ

ಸ ಗತ್ವಾ ಗಣಿತಾನ್ ವಾಸಾನ್ ಸಪ್ತಾಷ್ಟೌ ರಘುನಂದನಃ ।
ವಾಲ್ಮೀಕ್ಯಾಶ್ರಮಮಾಗತ್ಯ ವಾಸಂ ಚಕ್ರೇ ಮಹಾಯಶಾಃ ॥ ೩

ಸೋಽಭಿವಾದ್ಯ ತತಃ ಪಾದೌ ವಾಲ್ಮೀಕೇಃ ಪುರುಷರ್ಷಭಃ ।
ಪಾದ್ಯಮರ್ಘ್ಯಂ ತಥಾತಿಥ್ಯಂ ಜಗ್ರಾಹ ಮುನಿಹಸ್ತತಃ ॥ ೪

ಬಹುರೂಪಾಃ ಸುಮಧುರಾಃ ಕಥಾಸ್ತತ್ರ ಸಹಸ್ರಶಃ ।
ಕಥಯಾಮಾಸ ಸ ಮುನಿಃ ಶತ್ರುಘ್ನಾಯ ಮಹಾತ್ಮನೇ ॥ ೫

ಉವಾಚ ಚ ಮುನಿರ್ವಾಕ್ಯಂ ಲವಣಸ್ಯ ವಧಾಶ್ರಿತಮ್ ।
ಸುದುಷ್ಕರಂ ಕೃತಂ ಕರ್ಮ ಲವಣಂ ನಿಘ್ನತಾ ತ್ವಯಾ ॥ ೬

ಬಹವಃ ಪಾರ್ಥಿವಾಃ ಸೌಮ್ಯ ಹತಾಃ ಸಬಲವಾಹನಾಃ ।
ಲವಣೇನ ಮಹಾಬಾಹೋ ಯುಧ್ಯಮಾನಾ ಮಹಾಬಲಾಃ ॥ ೭

ಸ ತ್ವಯಾ ನಿಹತಃ ಪಾಪೋ ಲೀಲಯಾ ಪುರುಷರ್ಷಭ ।
ಜಗತಶ್ಚ ಭಯಂ ತತ್ರ ಪ್ರಶಾಂತಂ ತವ ತೇಜಸಾ ॥ ೮

ರಾವಣಸ್ಯ ವಧೋ ಘೋರೋ ಯತ್ನೇನ ಮಹತಾ ಕೃತಃ ।
ಇದಂ ತು ಸುಮಹತ್ ಕರ್ಮ ತ್ವಯಾ ಕೃತಮಯತ್ನತಃ ॥ ೯

---

ರಥಗಳೂ ಹೋದವು (೧-೨) ಆ ರಘುನಂದನನು ಪ್ರಯಾಣ ಮಾಡುವಾಗ ಏಳೆಂಟು ಕಡೆಗಳಲ್ಲಿ ತಂಗಿ, ವಾಲ್ಮೀಕಿಮುನಿಗಳ ಆಶ್ರಮಕ್ಕೆ ಆಗಮಿಸಿದನು ಆ ನರಶ್ರೇಷ್ಠನು ವಾಲ್ಮೀಕಿಮಹರ್ಷಿಗಳ ಪಾದಗಳಿಗೆ ಅಭಿವಂದಿಸಿ, ಅವರಿತ್ತ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಸ್ವೀಕರಿಸಿದನು (೩-೪). ಆ ಮಹರ್ಷಿಗಳು ಶತ್ರುಘ್ನನಿಗೆ ಇಂಪಾದ ನಾನಾಬಗೆಯ ಕಥೆಗಳನ್ನು ವರ್ಣಿಸಿ ಹೇಳಿದರು ಆಮೇಲೆ ಲವಣಾಸುರನ ವಧೆಯನ್ನು ಪ್ರಸ್ತಾಪಿಸಿ ಹೀಗೆಂದರು. "ಶತ್ರುಘ್ನ, ಲವಣನನ್ನು ವಧಿಸಿದ್ದು ದುಷ್ಕರವಾದ ಒಂದು ಕಾರ್ಯ (೫-೬) ಲವಣನು ಬಹುಮಂದಿ ಬಲಾಢ್ಯರಾದ ರಾಜರನ್ನು ಬಲವಾಹನಸಹಿತವಾಗಿ ಸಂಹರಿಸಿದ್ದಾನೆ ಹೇ ಮಹಾಬಾಹು, ನೀನು ಅಂತಹ ಪಾಪಿಯನ್ನು ಲೀಲೆಯಿಂದ ಕೊಂದುಹಾಕಿರುವೆ ನಿನ್ನ ಶೌರ್ಯದಿಂದ ಜಗತ್ತಿನ ಒಂದು ಭಯವೇ ಶಾಂತವಾಯಿತು (೭-೮) ದುಷ್ಕರವಾದ

ಪ್ರೀತಿಶ್ಚಾಸ್ಮಿನ್ ಪರಾ ಜಾತಾ ದೇವಾನಾಂ ಲವಣೇ ಹತೇ ।
ಭೂತಾನಾಂ ಚೈವ ಸರ್ವೇಷಾಂ ಜಗತಶ್ಚ ಪ್ರಿಯಂ ಕೃತಮ್ ॥ ೧೦

ತಚ್ಚ ಯುದ್ಧಂ ಮಯಾ ದೃಷ್ಟಂ ಯಥಾವತ್ ಪುರುಷರ್ಷಭ ।
ಸಭಾಯಾಂ ವಾಸವಸ್ಯಾಥ ಉಪವಿಷ್ಟೇನ ರಾಘವ ॥ ೧೧

ಮಮಾಪಿ ಪರಮಾ ಪ್ರೀತಿರ್ಹೃದಿ ಶತ್ರುಘ್ನ ವರ್ತತೇ ।
ಉಪಾಘ್ರಾಸ್ಯಾಮಿ ತೇ ಮೂರ್ಧ್ನಿ ಸ್ನೇಹಸ್ಯೈಷಾ ಪರಾಗತಿಃ ॥ ೧೨

ಇತ್ಯುಕ್ತ್ವಾ ಮೂರ್ಧ್ನಿ ಶತ್ರುಘ್ನಮುಪಾಘ್ರಾಯ ಮಹಾಮುನಿಃ ।
ಆತಿಥ್ಯಮಕರೋತ್ತಸ್ಯ ಯೇ ಚ ತಸ್ಯ ಪದಾನುಗಾಃ ॥ ೧೩

ಸ ಭುಕ್ತವಾನ್ನರಶ್ರೇಷ್ಠೋ ಗೀತಮಾಧುರ್ಯಮುತ್ತಮಮ್ ।
ಶುಶ್ರಾವ ರಾಮಚರಿತಂ ತಸ್ಮಿನ್ ಕಾಲೇ ಯಥಾಕ್ರಮಮ್ ॥ ೧೪

ತಂತ್ರೀಲಯಸಮಾಯುಕ್ತಂ ತ್ರಿಸ್ಥಾನಕರಣಾನ್ವಿತಮ್ ।
ಸಂಸ್ಕೃತಂ ಲಕ್ಷಣೋಪೇತಂ ಸಮತಾಲಸಮನ್ವಿತಮ್ ॥ ೧೫

---

ರಾವಣನ ವಧೆಯೂ ಹಿಂದೆ ನಡೆಯಿತು ಆದರೆ ಬಹುಪ್ರಯತ್ನದಿಂದ ಅದು ಸಾಧ್ಯವಾಯಿತು ಈ ಅದ್ಭುತಕೃತ್ಯವನ್ನು ಶ್ರಮವಿಲ್ಲದೆ ಸುಲಭವಾಗಿ ಸಾಧಿಸಿದೆ ಲವಣಾಸುರನು ಹತನಾದ್ದರಿಂದ ದೇವತೆಗಳಿಗೆ ಹೇಳಲಾರದಷ್ಟು ಸಂತೋಷವಾಗಿದೆ. ಸಕಲ ಪ್ರಾಣಿಗಳಿಗೂ ಜಗತ್ತಿಗೂ ಒಳ್ಳೆಯದನ್ನು ಮಾಡಿದೆ (೯-೧೦) ಶತ್ರುಘ್ನ, ನಾನು ದೇವೇಂದ್ರನ ಸಭೆಯಲ್ಲಿ ಕುಳಿತು ನಿಮ್ಮಿಬ್ಬರಿಗೆ ನಡೆದ ಯುದ್ಧವನ್ನು ಯಥಾವತ್ತಾಗಿ ಸ್ವತಃ ನೋಡಿದ್ದೇನೆ! ವತ್ಸ, ನನ್ನ ಮನಸ್ಸಿಗೆ ಅತ್ಯಾನಂದವಾಗಿದೆ ಇದೋ, ನಿನ್ನ ಶಿರಸ್ಸನ್ನು ಆಘ್ರಾಣಿಸುವೆನು! ಇದು ಪ್ರೀತಿಯ ಪರಾಕಾಷ್ಠೆ!" ಎಂದು ನುಡಿದು ವಾಲ್ಮೀಕಿಮುನಿಗಳು ಶತ್ರುಘ್ನನ ಶಿರಸ್ಸನ್ನು ಆಘ್ರಾಣಿಸಿದರು ಶತ್ರುಘ್ನನಿಗೂ ಅವನ ಪರಿವಾರದವರಿಗೂ ಆತಿಥ್ಯವನ್ನಿತ್ತು ಉಪಚರಿಸಿದರು (೧೧-೧೩) ಶತ್ರುಘ್ನನು ಭೋಜನವನ್ನು ಮಾಡಿ ಕುಳಿತನು ಆಗ ಅತ್ಯುತ್ತಮವೂ ಮಧುರವೂ ಆದ ಸಂಗೀತವು ಕೇಳಿಸಿತು! ಗೀತರೂಪವಾಗಿ ಕ್ರಮವರಿತು ಹಾಡಲ್ಪಡುವ ಶ್ರೀರಾಮಚರಿತೆಯನ್ನು ಶತ್ರುಘ್ನನು ಆಲಿಸಿದನು! (೧೪) ಗೀತವು ವೀಣಾಧ್ವನಿಯೊಡನೆ ಕೂಡಿ ಮಧುರವಾಗಿ ಲಯಸಮನ್ವಿತ

*

ಶುಶ್ರಾವ ರಾಮಚರಿತಂ ತಸ್ಮಿನ್ ಕಾಲೇ ಪುರಾಕೃತಮ್ ।
ತಾನ್ಯಕ್ಷರಾಣಿ ಸತ್ಯಾನಿ ಯಥಾವೃತ್ತಾನಿ ಪೂರ್ವಶಃ ॥ ೧೬
ಶ್ರುತ್ವಾ ಪುರುಷಶಾರ್ದೂಲೋ ವಿಸಂಜ್ಞೋ ಬಾಷ್ಪಲೋಚನಃ ।
ಸ ಮುಹೂರ್ತಮಿವಾಸಂಜ್ಞೋ ವಿನಿಶ್ವಸ್ಯ ಮುಹುರ್ಮುಹುಃ ॥ ೧೭
ತಸ್ಮಿನ್ ಗೀತೇ ಯಥಾವೃತ್ತಂ ವರ್ತಮಾನಮಿವಾಶೃಣೋತ್ ।
ಪದಾನುಗಾಶ್ಚ ಯೇ ರಾಜ್ಞಸ್ತಾಂ ಶ್ರುತ್ವಾ ಗೀತಿಸಂಪದಮ್ ॥ ೧೮
ಅವಾಙ್ಮುಖಾಶ್ಚ ದೀನಾಶ್ಚ ಆಶ್ಚರ್ಯಮಿತಿ ಚಾಬ್ರುವನ್ ।
ಪರಸ್ಪರಂ ಚ ಯೇ ತತ್ರ ಸೈನಿಕಾಃ ಸಂಬಭಾಷಿರೇ ॥ ೧೯
ಕಿಮಿದಂ ಕ್ವ ಚ ವರ್ತಾಮಃ ಕಿಮೇತತ್ ಸ್ವಪ್ನದರ್ಶನಮ್ ।
ಅರ್ಥೋ ಯೋ ನಃ ಪುರಾ ದೃಷ್ಟಸ್ತಮಾಶ್ರಮಪದೇ ಪುನಃ ॥ ೨೦
ಶೃಣುಮಃ ಕಿಮಿದಂ ಸ್ವಪ್ನೋ ಗೀತಬಂಧಂ ಶ್ರಿತೋ ಭವೇತ್ ।
ವಿಸ್ಮಯಂ ತೇ ಪರಂ ಗತ್ವಾ ಶತ್ರುಘ್ನಮಿದಮಬ್ರುವನ್ ॥ ೨೧

---

ವಾಗಿತ್ತು ಉರಸ್ಸು ಕಂಠಶಿರಸ್ಸು—ಎಂಬ ಸ್ಥಾನಗಳಲ್ಲಿ ಜನಿಸುವ ಮಂದ್ರ-ಮಧ್ಯ-ತಾರ ಸ್ವರಗಳಿಂದ ಕೂಡಿತ್ತು ಆ ಗೀತವು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿ ಕಾವ್ಯಾದಿ ಸಲ್ಲಕ್ಷಣಗಳಿಂದ ಯುಕ್ತವಾಗಿತ್ತು ಹಾಡಿಗೆ ಉಚಿತವಾದ ತಾಳವು ಜೊತೆಗೂಡಿತ್ತು (೧೫) ಹಿಂದೆ ಶ್ರೀರಾಮಚರಿತೆಯು ಹೇಗೆ ನಡೆಯಿತೋ ಹಾಗೆ ಅಕ್ಷರಶಃ ಸತ್ಯವಾಗಿ ವರ್ಣಿಸಿರುವ ಶ್ಲೋಕಬದ್ಧವಾದ ಗೀತವನ್ನು ಶತ್ರುಘ್ನನು ಕೇಳಿದನು ಕೇಳುತ್ತ ಕೇಳುತ್ತ ಅವನ ಕಣ್ಣುಗಳಿಂದ ನೀರು ಒಸರಿತು ಅವನು ಮೈಮರೆತನು ಸ್ವಲ್ಪಕಾಲ ಮೈಮರೆತು ಮತ್ತೆ ಮತ್ತೆ ನಿಟ್ಟುಸಿರುಬಿಟ್ಟನು (೧೬-೧೭) ಹಿಂದೆ ನಡೆದುದು ಈಗ ವರ್ತಮಾನವಾಗಿವೆಯೋ ಎಂಬಂತೆ ಅವನಿಗೆ ಕಾಣಿಸಿತು. ಶತ್ರುಘ್ನನ ಪರಿವಾರದವರೂ ಸಹ ಮಧುರವಾದ ಗಾನವನ್ನು ಕೇಳುತ್ತ ತಲೆತಗ್ಗಿಸಿ ದೀನವದನರಾಗಿ 'ಅಚ್ಚರಿ! ಅಚ್ಚರಿ!' ಎಂದು ಉದ್ಗರಿಸಿದರು (೧೮-೧೯) ಗೀತವನ್ನಾಲಿಸುತ್ತಿದ್ದ ಸೈನಿಕರು ತಮ್ಮೊಳಗೆ "ಏನಿದು? ನಾವಿರುವುದೆಲ್ಲಿ! ಕನಸು ಕಾಣುತ್ತಿದ್ದೇವೆಯೆ! ಹಿಂದೆ ಕಂಡುದೆಲ್ಲವನ್ನೂ ಈ ಆಶ್ರಮದಲ್ಲಿ ಮತ್ತೆ ಕೇಳುತ್ತಿದ್ದೇವೆ! ಏನಿದು! ಗಾನರೂಪವಾಗಿ ಸ್ವಪ್ನವು ಕಾಣಿಸುತ್ತಿರ

ಸಾಧು ಪೃಚ್ಛ ನರಶ್ರೇಷ್ಠ ವಾಲ್ಮೀಕಿಂ ಮುನಿಪುಂಗವಮ್ ।
ಶತ್ರುಘ್ನಸ್ತ್ವಬ್ರವೀತ್ ಸರ್ವಾನ್ ಕೌತೂಹಲಸಮನ್ವಿತಾನ್ ॥ ೨೨

ಸೈನಿಕಾನಕ್ಷಮೋಽಸ್ಮಾಕಂ ಪರಿಪ್ರಷ್ಟುಮಿಹೇದೃಶಃ ।
ಆಶ್ಚರ್ಯಾಣಿ ಬಹೂನೀಹ ಭವಂತ್ಯಸ್ಯಾಶ್ರಮೇ ಮುನೇಃ ॥ ೨೩

ನ ತು ಕೌತೂಹಲಾದ್ಯುಕ್ತಮನ್ವೇಷ್ಟುಂ ತಂ ಮಹಾಮುನಿಮ್ ।
ಏವಂ ತದ್ವಾಕ್ಯಮುಕ್ತ್ವಾ ಚ ಸೈನಿಕಾನ್ ರಘುನಂದನಃ ॥ ೨೪

ಅಭಿವಾದ್ಯ ಮಹರ್ಷಿಂ ತಂ ಸ್ವಂ ನಿವೇಶಂ ಯಯೌ ತದಾ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕಸಪ್ತತಿತಮಃ ಸರ್ಗಃ



ಬಹುದೆ!" ಎಂದು ಹೇಳಿಕೊಂಡರು (೨೦-೨೧) ಅವರು ಪರಮಾಶ್ಚರ್ಯಗೊಂಡು ಶತ್ರುಘ್ನನನ್ನು ನೋಡಿ "ಮಹಾಭಾಗ, ಇದೇನೆಂದು ವಾಲ್ಮೀಕಿ ಮುನಿಗಳನ್ನು ಕೇಳುವುದೇ ಸರಿ!" ಎಂದರು ಕುತೂಹಲಗೊಂಡಿದ್ದ ಆ ಸೈನಿಕರನ್ನು ಕುರಿತು ಶತ್ರುಘ್ನನು "ಇಂತಹ ವಿಷಯವನ್ನು ನಾವು ಕೇಳುವುದು ಯುಕ್ತವಲ್ಲ ಮುನಿಗಳ ಈ ಆಶ್ರಮದಲ್ಲಿ ಬಹು ಬಗೆಯ ಆಶ್ಚರ್ಯಗಳುಂಟು! ಆ ಮಹರ್ಷಿಗಳನ್ನು ಕುತೂಹಲದಿಂದ ಕೇಳುವುದಾಗಲಿ ತಿಳಿಯಲು ಯತ್ನಿಸುವುದಾಗಲಿ ಸರಿಯಲ್ಲ" ಎಂದು ನುಡಿದನು ಹೀಗೆ ನುಡಿದು ಶತ್ರುಘ್ನನು ವಾಲ್ಮೀಕಿಮುನಿಗಳಿಗೆ ವಂದಿಸಿ ಬಿಡಾರಕ್ಕೆ ತೆರಳಿದನು (೨೨-೨೪)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತೊಂದನೆಯ ಸರ್ಗ



## ದ್ವಿಸಪ್ತತಿತಮಃ ಸರ್ಗಃ

### ಶತ್ರುಘ್ನರಾಮಸಮಾಗಮಃ

ತಂ ಶಯಾನಂ ನರವ್ಯಾಘ್ರಂ ನಿದ್ರಾ ನಾಭ್ಯಾಗಮತ್ತದಾ ।
ಚಿಂತಯಂತಮನೇಕಾರ್ಥಂ ರಾಮಗೀತಮನುತ್ತಮಮ್ ॥ ೧

ತಸ್ಯ ಶಬ್ದಂ ಸುಮಧುರಂ ತಂತ್ರೀಲಯಸಮನ್ವಿತಮ್ ।
ಶ್ರುತ್ವಾ ರಾತ್ರಿರ್ಜಗಾಮಾಶು ಶತ್ರುಘ್ನಸ್ಯ ಮಹಾತ್ಮನಃ ॥ ೨

ತಸ್ಯಾಂ ನಿಶಾಯಾಂ ವ್ಯುಷ್ಟಾಯಾಂ ಕೃತ್ವಾ ಪೌರ್ವಾಹ್ಣಿಕಂ ಕ್ರಮಮ್ ।
ಉವಾಚ ಪ್ರಾಂಜಲಿರ್ವಾಕ್ಯಂ ಶತ್ರುಘ್ನೋ ಮುನಿಪುಂಗವಮ್ ॥

ಭಗವನ್ ದ್ರಷ್ಟುಮಿಚ್ಛಾಮಿ ರಾಘವಂ ರಘುನಂದನಮ್ ।
ತ್ವಯಾನುಜ್ಞಾತಮಿಚ್ಛಾಮಿ ಸಹೈಭಿಃ ಸಂಶಿತವ್ರತೈಃ ॥ ೪

### ಸರ್ಗ ೭೨

ಶತ್ರುಘ್ನನು ಅಯೋಧ್ಯೆಗೆ ಹೋಗಿ ಶ್ರೀರಾಮನನ್ನು ಸಂದರ್ಶಿಸುವುದು ಅಲ್ಲಿ ಏಳು ರಾತ್ರಿಗಳವರೆಗಿದ್ದು ಪುನಃ ಮಧುಪುರಿಗೆ ತೆರಳುವುದು

ಶತ್ರುಘ್ನನು ಬಿಡಾರಕ್ಕೆ ಹೋಗಿ ಮಲಗಿದನು ನಿದ್ರೆ ಬರಲಿಲ್ಲ ವಿವಿಧ ಘಟನಾವಳಿಯಿಂದ ಯುಕ್ತವೂ ಅತ್ಯುತ್ತಮವೂ ಆದ ಶ್ರೀರಾಮ ಚರಿತೆಯನ್ನೇ ಚಿಂತಿಸುತ್ತ ಮಲಗಿದ್ದನು ತಂತ್ರೀಲಯಸಮನ್ವಿತವೂ ಮಧುರವೂ ಆದ ಗೀತವೇ ಅವನ ಕಿವಿಯಲ್ಲಿ ಸುಳಿಯುತ್ತಿತ್ತು ಮಹಾತ್ಮನಾದ ಶತ್ರುಘ್ನನಿಗೆ ಹಾಗೆಯೇ ನಿದ್ರೆಯಿಲ್ಲದ ರಾತ್ರಿ ಕಳೆಯಿತು (೧-೨) ಬೆಳಗಾಗಲು ಶತ್ರುಘ್ನನು ಪ್ರಾತರ್ವಿಧಿಗಳನ್ನು ಮುಗಿಸಿ ಬಂದು ವಾಲ್ಮೀಕಿ ಮುನಿಗಳನ್ನು ವಂದಿಸಿ "ಭಗವನ್, ರಘುನಂದನನಾದ ಶ್ರೀರಾಮನನ್ನು ಸಂದರ್ಶಿಸಲು ಬಯಸಿದ್ದೇನೆ ನೀವೂ ವ್ರತನಿಷ್ಠರಾದ ಈ ಮುನಿಗಳೂ ನನಗೆ ಅನುಮತಿಯನ್ನು ಕೊಡಬೇಕು" ಎಂದು ಪ್ರಾರ್ಥಿಸಿದನು (೩-೪)

ಇತ್ಯೇವಂವಾದಿನಂ ತಂ ತು ಶತ್ರುಘ್ನಂ ಶತ್ರುತಾಪನಮ್ ।
ವಾಲ್ಮೀಕಿಃ ಸಂಪರಿಷ್ವಜ್ಯ ವಿಸಸರ್ಜ ಚ ರಾಘವಮ್ ॥ ೫

ಸೋಽಭಿವಾದ್ಯ ಮುನಿಶ್ರೇಷ್ಠಂ ರಥಮಾರುಹ್ಯ ಸುಪ್ರಭಮ್ ।
ಅಯೋಧ್ಯಾಮಗಮತ್ತೂರ್ಣಂ ರಾಘವೋತ್ಸುಕದರ್ಶನಃ ॥ ೬

ಸ ಪ್ರವಿಷ್ಟಃ ಪುರೀಂ ರಮ್ಯಾಂ ಶ್ರೀಮಾನಿಕ್ಷ್ವಾಕುನಂದನಃ ।
ಪ್ರವಿವೇಶ ಮಹಾಬಾಹುರ್ಯತ್ರ ರಾಮೋ ಮಹಾದ್ಯುತಿಃ ॥ ೭

ಸ ರಾಮಂ ಮಂತ್ರಿಮಧ್ಯಸ್ಥಂ ಪೂರ್ಣಚಂದ್ರನಿಭಾನನಮ್ ।
ಪಶ್ಯನ್ನಮರಮಧ್ಯಸ್ಥಂ ಸಹಸ್ರನಯನಂ ಯಥಾ ॥ ೮

ಅಭಿವಾದ್ಯ ಮಹಾತ್ಮಾನಂ ಜ್ವಲಂತಮಿವ ತೇಜಸಾ ।
ಉವಾಚ ಪ್ರಾಂಜಲಿರ್ವಾಕ್ಯಂ ರಾಮಂ ಸತ್ಯಪರಾಕ್ರಮಮ್ ॥ ೯

ಯಥಾಜ್ಞಪ್ತಂ ಮಹಾರಾಜ ಸರ್ವಂ ತತ್ ಕೃತವಾನಹಮ್ ।
ಹತಃ ಸ ಲವಣಃ ಪಾಪಃ ಪುರೀ ಚಾಸ್ಯ ನಿವೇಶಿತಾ ॥ ೧೦

ದ್ವಾದಶೈತಾನಿ ವರ್ಷಾಣಿ ತ್ವಾಂ ವಿನಾ ರಘುನಂದನ ।
ನೋತ್ಸಹೇಯಮಹಂ ವಸ್ತುಂ ತ್ವಯಾ ವಿರಹಿತೋ ನೃಪ ॥ ೧೧

---

ವಾಲ್ಮೀಕಿಮುನಿಗಳು ಆತನನ್ನು ಪ್ರೀತಿಯಿಂದ ಆಲಿಂಗಿಸಿ ಕಳಿಸಿಕೊಟ್ಟರು ಶತ್ರುಘ್ನನು ಮುನಿಗಳಿಗೆ ನಮಸ್ಕರಿಸಿ ರಥವನ್ನೇರಿ ರಾಘವನನ್ನು ಕಾಣುವ ಬಯಕೆಯಿಂದ ಅಯೋಧ್ಯೆಯ ಕಡೆಗೆ ಪ್ರಯಾಣಮಾಡಿದನು (೫-೬) ಅವನು ರಮ್ಯವಾದ ಅಯೋಧ್ಯಾಪುರಿಯನ್ನು ಪ್ರವೇಶಿಸಿ ಶ್ರೀರಾಮನಿದ್ದಲ್ಲಿಗೆ ಹೋದನು ದೇವತೆಗಳೊಡನೆ ಕುಳಿತಿರುವ ದೇವೇಂದ್ರನಂತೆ, ಮಂತ್ರಿಗಳೊಡನೆ ಮಂಡಿಸಿದ್ದ ಪೂರ್ಣಚಂದ್ರಾನನನಾದ ಶ್ರೀರಾಮನನ್ನು ಕಂಡನು (೭-೮) ತೇಜಸ್ವಿಯೂ ಸತ್ಯಪರಾಕ್ರಮನೂ ಆದ ರಾಘವನಿಗೆ ವಂದಿಸಿ ಶತ್ರುಘ್ನನು ಹೀಗೆಂದನು. "ಮಹಾರಾಜ, ನಿನ್ನ ಆಜ್ಞೆಯಂತೆ ಸಕಲ ಕಾರ್ಯಗಳನ್ನೂ ನೆರವೇರಿಸಿದ್ದೇನೆ ದುರುಳನಾದ ಲವಣಾಸುರನನ್ನು ಸಂಹರಿಸಿದ್ದಾಯಿತು ಮಧುಪುರಿಯನ್ನು ವಾಸಯೋಗ್ಯವಾಗಿ ವ್ಯವಸ್ಥೆಗೊಳಿಸಿದ್ದಾಯಿತು (೯-೧೦) ರಘುನಂದನ, ಹನ್ನೆರಡು ವರ್ಷಗಳವರೆಗೆ ನಿನ್ನನ್ನು

ಸ ಮೇ ಪ್ರಸಾದಂ ಕಾಕುತ್ಸ್ಥ ಕುರುಷ್ವಾಮಿತವಿಕ್ರಮ ।
ಮಾತೃಹೀನೋ ಯಥಾ ವತ್ಸೋ ನ ಚಿರಂ ಪ್ರವಸಾಮ್ಯಹಮ್ ॥

ಏವಂ ಬ್ರುವಾಣಂ ಶತ್ರುಘ್ನಂ ಪರಿಷ್ವಜ್ಯೇದಮಬ್ರವೀತ್ ।
ಮಾ ವಿಷಾದಂ ಕೃಥಾಃ ಶೂರ ನೈತತ್ ಕ್ಷತ್ರಿಯಚೇಷ್ಟಿತಮ್ ॥ ೧೩

ನಾವಸೀದಂತಿ ರಾಜಾನೋ ವಿಪ್ರವಾಸೇಷು ರಾಘವ ।
ಪ್ರಜಾ ನಃ ಪರಿಪಾಲ್ಯಾ ಹಿ ಕ್ಷತ್ರಧರ್ಮೇಣ ರಾಘವ ॥ ೧೪

ಕಾಲೇ ಕಾಲೇ ಚ ಮಾಂ ವೀರ ಹ್ಯಯೋಧ್ಯಾಮವಲೋಕಿತುಮ್ ।
ಆಗಚ್ಛ ತ್ವಂ ನರಶ್ರೇಷ್ಠ ಗಂತಾಸಿ ಚ ಪುರಂ ತವ ॥ ೧೫

ಮಮಾಪಿ ತ್ವಂ ಸುದಯಿತಃ ಪ್ರಾಣೈರಪಿ ನ ಸಂಶಯಃ ।
ಅವಶ್ಯಂ ಕರಣೀಯಂ ಚ ರಾಜ್ಯಸ್ಯ ಪರಿಪಾಲನಮ್ ॥ ೧೬

ತಸ್ಮಾತ್ತ್ವಂ ವತ್ಸ ಕಾಕುತ್ಸ್ಥ ಸಪ್ತರಾತ್ರಮಿಹಾವಸ ।
ಊರ್ಧ್ವಂ ಗಂತಾಸಿ ಮಧುರಾಂ ಸಭೃತ್ಯಬಲವಾಹನಃ ॥ ೧೭

---

ಅಗಲಿದ್ದೆನು! ನಿನ್ನನ್ನು ಬಿಟ್ಟಿರಲು ನನಗೆ ಮನಸ್ಸಾಗದು ಶ್ರೀರಾಮ, ಪ್ರಸನ್ನನಾಗು ತಾಯಿಯನ್ನಗಲಿದ ಕರುವಿನಂತಾಗಿದ್ದೇನೆ ಬಹಳ ಕಾಲ ದೂರದಲ್ಲಿರಲಾರೆ" (೧೧-೧೨) ಈ ರೀತಿಯಲ್ಲಿ ಕೈಮುಗಿದು ಬೇಡುತ್ತಿದ್ದ ಶತ್ರುಘ್ನನನ್ನು ಶ್ರೀರಾಮನು ಆಲಿಂಗಿಸಿಕೊಂಡು "ಶತ್ರುಘ್ನ, ವಿಷಾದಿಸಬೇಡ ಇದು ಕ್ಷತ್ರಿಯೋಚಿತವಾದ ನಡವಳಿಕೆಯಲ್ಲ ರಾಜರಾದವರು ವಿರಹ-ಪರಸ್ಥಳವಾಸಾದಿಗಳಿಗೆ ಹಿಂಜರಿಯಬಾರದು ಕ್ಷತ್ರಧರ್ಮದಿಂದ ಪ್ರಜೆಗಳನ್ನು ಪರಿಪಾಲಿಸುವುದೊಂದೇ ನಮ್ಮ ಗುರಿಯಾಗಿರಬೇಕು (೧೩-೧೪) ರಘುಕುಲೋತ್ಪನ್ನನಾದ ವೀರನೆ, ಆಗಾಗ ನನ್ನನ್ನು ಕಾಣಲು ಅಯೋಧ್ಯೆಗೆ ಬರುತ್ತಿರು ನೀನು ನಿನ್ನ ರಾಜಧಾನಿಗೆ ಹೋಗಬೇಕಾಗುವುದು ನನ್ನ ಪ್ರಾಣಕ್ಕಿಂತಲೂ ಪ್ರಿಯನಾದ ತಮ್ಮ ನೀನು (ನಿನ್ನನ್ನು ಅಗಲಿರಲು ನನಗೂ ದುಃಖವಾಗುವುದು) ಆದರೆ ರಾಜ್ಯಪಾಲನೆ ಅವಶ್ಯವಾದ ಕರ್ತವ್ಯ ಸಂದೇಹವಿಲ್ಲ (೧೫-೧೬) ಆದ್ದರಿಂದ, ವತ್ಸ, ಏಳು ರಾತ್ರಿಗಳವರೆಗೆ ಇಲ್ಲಿರು ಅನಂತರ ಪರಿವಾರದೊಂದಿಗೆ ಮಧುರೆಗೆ ಹೋಗು" ಎಂದು ತಿಳಿಸಿದನು.

ರಾಮಸ್ಯೈತದ್ವಚಃ ಶ್ರುತ್ವಾ ಧರ್ಮಯುಕ್ತಂ ಮನೋಗತಮ್ ।
ಶತ್ರುಘ್ನೋ ದೀನಯಾ ವಾಚಾ ಬಾಢಮಿತ್ಯೇವ ಚಾಬ್ರವೀತ್ ॥

ಸಪ್ತರಾತ್ರಂ ಚ ಕಾಕುತ್ಸ್ಥೋ ರಾಘವಸ್ಯ ಯಥಾಜ್ಞಯಾ ।
ಉಷ್ಯ ತತ್ರ ಮಹೇಷ್ವಾಸೋ ಗಮನಾಯೋಪಚಕ್ರಮೇ ॥ ೧೯

ಆಮಂತ್ರ್ಯ ತು ಮಹಾತ್ಮಾನಂ ರಾಮಂ ಸತ್ಯಪರಾಕ್ರಮಮ್ ।
ಭರತಂ ಲಕ್ಷ್ಮಣಂ ಚೈವ ಮಹಾರಥಮುಪಾರುಹತ್ ॥ ೨೦

ದೂರಮಾಭ್ಯಾಮನುಗತೋ ಲಕ್ಷ್ಮಣೇನ ಮಹಾತ್ಮನಾ ।
ಭರತೇನ ಚ ಶತ್ರುಘ್ನೋ ಜಗಾಮಾಶು ಪುರಂ ತತಃ ॥ ೨೧

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವಿಸಪ್ತತಿತಮಃ ಸರ್ಗಃ



ಹೃದಯಾಂತರಾಳದಿಂದ ಬಂದುದೂ ಧರ್ಮಯುಕ್ತವೂ ಆದ ಶ್ರೀರಾಮನ ನುಡಿಯನ್ನು ಕೇಳಿ ಶತ್ರುಘ್ನನು ದೀನವಾಣಿಯಿಂದ "ಆಗಲಿ" ಎಂದನು (೧೭-೧೮) ಅನಂತರ ಶತ್ರುಘ್ನನು ಏಳು ರಾತ್ರಿಗಳ ಕಾಲ ಅಯೋಧ್ಯೆಯಲ್ಲಿದ್ದು ಮತ್ತೆ ಪ್ರಯಾಣಮಾಡಲು ಸಿದ್ಧನಾದನು ಸತ್ಯಪರಾಕ್ರಮನಾದ ರಾಘವನನ್ನೂ ಭರತಲಕ್ಷ್ಮಣರನ್ನೂ ಬೀಳ್ಕೊಂಡು ರಥವನ್ನೇರಿದನು ಭರತ ಲಕ್ಷ್ಮಣರು ಬಹುದೂರದವರೆಗೆ ಬಂದು ಅವನನ್ನು ಕಳಿಸಿಕೊಟ್ಟರು. ಶತ್ರುಘ್ನನು ತ್ವರೆಯಿಂದ ಮಧುರೆಗೆ ತೆರಳಿದನು (೧೯-೨೧)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತೆರಡನೆಯ ಸರ್ಗ



## ತ್ರಿಸಪ್ತತಿತಮಃ ಸರ್ಗಃ

### ಬ್ರಾಹ್ಮಣಪರಿದೇವನಮ್

ಪ್ರಸ್ಥಾಪ್ಯ ತು ಸ ಶತ್ರುಘ್ನಂ ಭ್ರಾತೃಭ್ಯಾಂ ಸಹ ರಾಘವಃ ।
ಪ್ರಮುಮೋದ ಸುಖೀ ರಾಜ್ಯಂ ಧರ್ಮೇಣ ಪರಿಪಾಲಯನ್ ॥ ೧

ತತಃ ಕತಿಪಯಾಹಸ್ಸು ವೃದ್ಧೋ ಜಾನಪದೋ ದ್ವಿಜಃ ।
ಮೃತಂ ಬಾಲಮುಪಾದಾಯ ರಾಜದ್ವಾರಮುಪಾಗಮತ್ ॥ ೨

ರುದನ್ ಬಹುವಿಧಾ ವಾಚಃ ಸ್ನೇಹದುಃಖಸಮನ್ವಿತಃ ।
ಅಸಕೃತ್ ಪುತ್ರ ಪುತ್ರೇತಿ ವಾಕ್ಯಮೇತದುವಾಚ ಹ ॥ ೩

ಕಿಂ ನು ಮೇ ದುಷ್ಕೃತಂ ಕರ್ಮ ಪುರಾ ದೇಹಾಂತರೇ ಕೃತಮ್ ।
ಯದಹಂ ಪುತ್ರಮೇಕಂ ತ್ವಾಂ ಪಶ್ಯಾಮಿ ನಿಧನಂ ಗತಮ್ ॥ ೪

ಅಪ್ರಾಪ್ತಯೌವನಂ ಬಾಲಂ ಪಂಚವರ್ಷಸಹಸ್ರಕಮ್ ।
ಅಕಾಲೇ ಕಾಲಮಾಪನ್ನಂ ಮಮ ದುಃಖಾಯ ಪುತ್ರಕ ॥ ೫

## ಸರ್ಗ ೭೩

### ಬ್ರಾಹ್ಮಣನೊಬ್ಬನು ಅಕಾಲಮೃತ್ಯುವಿಗೆ ತುತ್ತಾದ ಮಗನನ್ನು ರಾಜದ್ವಾರಕ್ಕೆ ತಂದು ವಿಲಪಿಸುವುದು

ಶ್ರೀರಾಮನು ಶತ್ರುಘ್ನನನ್ನು ಕಳಿಸಿಕೊಟ್ಟು ಸೋದರರಾದ ಭರತ ಲಕ್ಷ್ಮಣರೊಡನೆ ಧರ್ಮದಿಂದ ರಾಜ್ಯವನ್ನು ಪಾಲಿಸುತ್ತ ಸುಖದಿಂದಿದ್ದನು ಕೆಲವು ದಿನಗಳು ಕಳೆದವು ಒಂದು ದಿನ ಆ ರಾಷ್ಟ್ರದ ಪ್ರಜೆಯೂ ವೃದ್ಧನೂ ಆದ ಬ್ರಾಹ್ಮಣನೊಬ್ಬನು ಮೃತನಾದ ಬಾಲಕನನ್ನು ಎತ್ತಿಕೊಂಡು ಅರಮನೆಯ ಬಾಗಿಲಿಗೆ ಬಂದನು (೧-೨) ಶೋಕಾವಿಷ್ಟನಾದ ಆ ವೃದ್ಧನು ಪುತ್ರವಾತ್ಸಲ್ಯದಿಂದ ಅಳುತ್ತ 'ಮಗನೆ! ಮಗನೆ!' ಎಂದು ಹಲುಬುತ್ತ ಹೀಗೆ ವಿಲಪಿಸಿದನು "ಅಯ್ಯೋ! ಜನ್ಮಾಂತರದಲ್ಲಿ ನಾನು ಯಾವ ದುಷ್ಕೃತ್ಯವನ್ನು ಮಾಡಿದೆನೊ! ಒಬ್ಬನೇ ಮಗನಾದ ನೀನು ಮೃತನಾದುದನ್ನು ನೋಡುತ್ತಿರುವೆನಲ್ಲ! (೩-೪) ಇನ್ನೂ ಯೌವನವನ್ನು ಪಡೆಯದಿರುವ

ಅಲ್ಪೈರಹೋಭಿರ್ನಿಧನಂ ಗಮಿಷ್ಯಾಮಿ ನ ಸಂಶಯಃ ।
ಅಹಂ ಚ ಜನನೀ ಚೈವ ತವ ಶೋಕೇನ ಪುತ್ರಕ ॥ ೬

ನ ಸ್ಮರಾಮ್ಯನೃತಂ ಹ್ಯುಕ್ತಂ ನ ಚ ಹಿಂಸಾಂ ಸ್ಮರಾಮ್ಯಹಮ್ ।
ಸರ್ವೇಷಾಂ ಪ್ರಾಣಿನಾಂ ಪಾಪಂ ಕೃತಂ ನೈವ ಸ್ಮರಾಮ್ಯಹಮ್ ॥ ೭

ಕೇನಾದ್ಯ ದುಷ್ಕೃತೇನಾಯಂ ಬಾಲ ಏವ ಮಮಾತ್ಮಜಃ ।
ಅಕೃತ್ವಾ ಪಿತೃಕಾರ್ಯಾಣಿ ಗತೋ ವೈವಸ್ವತಕ್ಷಯಮ್ ॥ ೮

ನೇದೃಶಂ ದೃಷ್ಟಪೂರ್ವಂ ಮೇ ಶ್ರುತಂ ವಾ ಘೋರದರ್ಶನಮ್ ।
ಮೃತ್ಯುರಪ್ರಾಪ್ತಕಾಲಾನಾಂ ರಾಮಸ್ಯ ವಿಷಯೇ ಯಥಾ ॥ ೯

ರಾಮಸ್ಯ ದುಷ್ಕೃತಂ ಕಿಂಚಿನ್ಮಹದಸ್ತಿ ನ ಸಂಶಯಃ ।
ಯಥಾ ಹಿ ವಿಷಯಸ್ಥಾನಾಂ ಬಾಲಾನಾಂ ಮೃತ್ಯುರಾಗತಃ ॥ ೧೦

ನ ಹ್ಯನ್ಯವಿಷಯಸ್ಥಾನಾಂ ಬಾಲಾನಾಂ ಮೃತ್ಯುತೋ ಭಯಮ್ ।
ತ್ವಂ ರಾಜನ್ ಜೀವಯಸ್ವೈನಂ ಬಾಲಂ ಮೃತ್ಯುವಶಂ ಗತಮ್ ॥

---

ಹದಿನಾಲ್ಕು ವರ್ಷದ* ಬಾಲಕ ನೀನು ಮಗು, ಅಕಾಲ ಮೃತ್ಯುವಿಗೆ ತುತ್ತಾಗಿ ನನಗೆ ದುಃಖವನ್ನು ತಂದೊಡ್ಡಿದೆ ಮಗು, ಇನ್ನು ಸ್ವಲ್ಪದಿನಗಳಲ್ಲಿಯೇ ಪುತ್ರಶೋಕದಿಂದ ನಾನು ಸಾಯುವೆನು ನಿನ್ನ ತಾಯಿಯೂ ಸಾಯುವಳು ಇದು ನಿಶ್ಚಯ (೫-೬) ನಾನು ಒಂದು ಸುಳ್ಳನ್ನೂ ಹೇಳಿದವನಲ್ಲ, ಒಬ್ಬರಿಗೂ ಹಿಂಸೆಮಾಡಿದವನಲ್ಲ, ಯಾವ ಒಂದು ಪ್ರಾಣಿಗೂ ನನ್ನಿಂದ ಅಪಚಾರವಾದುದು ನೆನಪಿಲ್ಲ ಹೀಗಿದ್ದರೂ ಯಾವ ದುಷ್ಕೃತ್ಯದಿಂದ ಬಾಲಕನಾದ ನನ್ನ ಮಗನು ಸತ್ತುಹೋದನು? ಪಿತೃಕಾರ್ಯಗಳನ್ನು ಮಾಡದೆ ಮೊದಲೇ ಯಮಲೋಕವನ್ನು ನೇರಿದನು (೭-೮) ರಾಮನ ರಾಜ್ಯದಲ್ಲಿ ಅಕಾಲಮೃತ್ಯು ಬಂದುಬಿಟ್ಟಿತು! ಈ ಬಗೆಯ ಘೋರದೃಶ್ಯವನ್ನು ನಾನು ಕಂಡಿರಲಿಲ್ಲ, ಕೇಳಿರಲಿಲ್ಲ ಈ ವಿಷಯದಲ್ಲಿ ಮಹತ್ತರವಾದ

---

* ಮೂಲದಲ್ಲಿ 'ಪಂಚವರ್ಷಸಹಸ್ರಕಂ' ಎಂದಿದೆ ವರ್ಷ ಶಬ್ದಕ್ಕೆ ದಿನವೆಂದು ಅರ್ಥವಿದೆ 'ಸಹಸ್ರಸಂವತ್ಸರಂ ಸತ್ರಮಾಸತ' ಎಂಬಲ್ಲಿ ಸಂವತ್ಸರವೆಂದರೆ ದಿನ ೫೦೦೦ ದಿನಗಳು = ಸುಮಾರು ೧೪ ವರ್ಷ ಮೂಲದಲ್ಲಿ 'ಪಂಚವರ್ಷಸಮನ್ವಿತಂ' ಎಂದು ಪಾಠಾಂತರವಿದೆ

ರಾಜದ್ವಾರಿ ಮರಿಷ್ಯಾಮಿ ಪತ್ನ್ಯಾ ಸಾರ್ಧಮನಾಥವತ್ ।
ಬ್ರಹ್ಮಹತ್ಯಾಂ ತತೋ ರಾಮ ಸಮುಪೇತ್ಯ ಸುಖೀ ಭವ ॥ ೧೨

ಭ್ರಾತೃಭಿಃ ಸಹಿತೋ ರಾಜನ್ ದೀರ್ಘಮಾಯುರವಾಪ್ಸ್ಯಸಿ ।
ಉಷಿತಾಃ ಸ್ಮ ಸುಖಂ ರಾಜ್ಯೇ ತವಾಸ್ಮಿನ್ ಸುಮಹಾಬಲ ॥ ೧೩

ಇದಂ ತು ಪತಿತಂ ಹ್ಯಸ್ಮಾತ್ತ್ವ ರಾಮ ವಶೇ ಸ್ಥಿತಾಃ ।
ಕಾಲಸ್ಯ ವಶಮಾಪನ್ನಾಃ ಸ್ವಲ್ಪಂ ಹಿ ನ ಹಿ ನಃ ಸುಖಮ್ ॥ ೧೪

ಸಂಪ್ರತ್ಯನಾಥೋ ವಿಷಯ ಇಕ್ಷ್ವಾಕೂಣಾಂ ಮಹಾತ್ಮನಾಮ್ ।
ರಾಮಂ ನಾಥಮಿಹಾಸಾದ್ಯ ಬಾಲಾಂತಕರಣಂ ಧ್ರುವಮ್ ॥ ೧೫

ರಾಜದೋಷೈರ್ವಿಪದ್ಯಂತೇ ಪ್ರಜಾ ಹ್ಯವಿಧಿಪಾಲಿತಾಃ ।
ಅಸದ್ವೃತ್ತೇ ತು ನೃಪತಾವಕಾಲೇ ಮ್ರಿಯತೇ ಜನಃ ॥ ೧೬

---

ಯಾವುದೋ ರಾಮನ ದುಷ್ಕೃತ್ಯವೇ ಇದೆ! ಈತನ ರಾಜ್ಯದಲ್ಲಿರುವ ಚಿಕ್ಕ ಹುಡುಗರಿಗೆ ಸಾವು ಬಂದಿತಲ್ಲ (೯-೧೦) ಇತರ ರಾಜ್ಯದಲ್ಲಿರುವ ಹುಡುಗರಿಗೆ ಸಾವಿನ ಭಯ ಎಲ್ಲಿದೆ? ಎಲೈ ರಾಜನೆ, ನಾವನ್ನಪ್ಪಿರುವ ಈ ಬಾಲಕನನ್ನು ಬದುಕಿಸು! ಇಲ್ಲದಿದ್ದರೆ, ಈ ರಾಜದ್ವಾರದಲ್ಲಿಯೇ ನನ್ನ ಹೆಂಡತಿಯೊಡನೆ ಅನಾಥನಂತೆ ಪ್ರಾಣಬಿಡುವೆನು! ಬ್ರಹ್ಮಹತ್ಯೆ ನಿನಗೆ ಗಂಟುಬೀಳುವುದು ಆಮೇಲೆ, ರಾಮ, ಸುಖಿಯಾಗಿ ಬಾಳಬಹುದು! (೧೧-೧೨) ರಾಜ, ತಮ್ಮಂದಿರೊಡನೆ ದೀರ್ಘಾಯುಸ್ಸನ್ನು ಪಡೆದು ಜೀವಿಸಬಹುದು! ಬಲಾಢ್ಯನಾದ ನಿನ್ನ ದೇಶದಲ್ಲಿ ಇದುವರೆಗೆ ನಾವು ಸುಖವಾಗಿದ್ದೆವು ಆದರೆ, ಈಗ ಈ ಘೋರದುಃಖವು ಒದಗಿ ಬಂದಿತು ರಾಮ, ನಿನ್ನ ವಶದಲ್ಲಿರುವ ನಾವು ಈ ಕಾಲನ ವಶಕ್ಕೆ ಸಿಕ್ಕಿಬಿದ್ದೆವು ಇನ್ನು ನಮಗೆ ಸುಖಲೇಶವೂ ಇರುವುದಿಲ್ಲ (೧೩-೧೪) ಮಹಾತ್ಮರಾದ ಇಕ್ಷ್ವಾಕುಗಳ ರಾಜ್ಯವು ಈಗ ದಿಟವಾಗಿಯೂ ದಿಕ್ಕಿಲ್ಲದೆ ಅನಾಥವಾಯಿತು! ಬಾಲಕನಿಗೆ ಮೃತ್ಯುವನ್ನು ತಂದಿಕ್ಕಿದ ರಾಮನು ಇದಕ್ಕೆ ಅಧಿಪತಿಯೆನಿಸಿಕೊಂಡಿದ್ದಾನೆ! (೧೫) ವಿಧಿಪೂರ್ವಕವಾಗಿ ಪಾಲಿಸದಿದ್ದರೆ ರಾಜನ ತಪ್ಪುಗಳಿಂದ ಪ್ರಜೆಗಳು ವಿಪತ್ತಿಗೆ ಸಿಕ್ಕಿ ತೊಳಲುತ್ತಾರೆ ಭೂಪತಿಯು ದುರ್ಮಾರ್ಗಿಯಾದರೆ ಜನರು ಅಕಾಲ

ಯದ್ವಾ ಪುರೇಷ್ವಯುಕ್ತಾನಿ ಜನಾ ಜನಪದೇಷು ಚ ।
ಕುರ್ವತೇ ನ ಚ ರಕ್ಷಾಸ್ತಿ ತದಾ ಕಾಲಕೃತಂ ಭಯಮ್ ॥ ೧೭

ಸುವ್ಯಕ್ತಂ ರಾಜದೋಷೋ ಹಿ ಭವಿಷ್ಯತಿ ನ ಸಂಶಯಃ ।
ಪುರೇ ಜನಪದೇ ಚಾಪಿ ತತೋ ಬಾಲವಧೋ ಹ್ಯಯಮ್ ॥ ೧೮

ಏವಂ ಬಹುವಿಧೈರ್ವಾಕ್ಯೈರುಪರುಧ್ಯ ಮುಹುರ್ಮುಹುಃ ।
ರಾಜಾನಂ ದುಃಖಸಂತಪ್ತಃ ಸುತಂ ತಮುಪಗೂಹತೇ ॥ ೧೯

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರಿಸಪ್ತತಿತಮಃ ಸರ್ಗಃ



ಮರಣಕ್ಕೆ ಈಡಾಗುತ್ತಾರೆ (೧೬) ಅಥವಾ ನಗರದಲ್ಲಿಯೋ ರಾಷ್ಟ್ರದ ಯಾವುದೊಂದು ಸ್ಥಳದಲ್ಲಿಯೋ ಜನರು ಅಕಾರ್ಯವನ್ನೆಸಗುತ್ತಾರೆ, ಅದಕ್ಕೆ ತಡೆ ಇಲ್ಲ—ಹೀಗಾದರೂ ಈ ಬಗೆಯ ಮರಣದ ಭಯ ಉಂಟು (೧೭) ನಗರದಲ್ಲಾಗಲಿ ರಾಷ್ಟ್ರದಲ್ಲಾಗಲಿ ಯಾವ ಅಕಾರ್ಯವಾದರೂ ನಡೆದಿರ ಬಹುದು ಹೇಗಿದ್ದರೂ ಅದು ರಾಜನ ಅಪರಾಧವೆಂಬುದು ಸ್ಪಷ್ಟವಾಗಿದೆ ಆದ್ದರಿಂದಲೇ ಈ ಬಾಲಕನಿಗೆ ಸಾವು ಬಂದಿತು" ಈ ಪ್ರಕಾರವಾಗಿ ಆ ಬ್ರಾಹ್ಮಣನು ಬಗೆಬಗೆಯಲ್ಲಿ ರಾಜನನ್ನು ನಿಂದಿಸುತ್ತ ದುಃಖಸಂತಪ್ತನಾಗಿ ಮಗನನ್ನು ಆಲಿಂಗಿಸಿಕೊಳ್ಳುತ್ತಿದ್ದನು (೧೮-೧೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತುಮೂರನೆಯ ಸರ್ಗ



## ಚತುಃಸಪ್ತತಿತಮಃ ಸರ್ಗಃ

### ನಾರದವಚನಮ್

ತಥಾ ತು ಕರುಣಂ ತಸ್ಯ ದ್ವಿಜಸ್ಯ ಪರಿದೇವನಮ್ ।
ಶುಶ್ರಾವ ರಾಘವಃ ಸರ್ವಂ ದುಃಖಶೋಕಸಮನ್ವಿತಮ್ ॥ ೧

ಸ ದುಃಖೇನ ಚ ಸಂತಪ್ತೋ ಮಂತ್ರಿಣಸ್ತಾನುಪಾಹ್ವಯತ್ ।
ವಸಿಷ್ಠಂ ವಾಮದೇವಂ ಚ ಭ್ರಾತರೌ ಸಹನೈಗಮಾನ್ ॥ ೨

ತತೋ ದ್ವಿಜಾ ವಸಿಷ್ಠೇನ ಸಾರ್ಧಮಷ್ಟೌ ಪ್ರವೇಶಿತಾಃ ।
ರಾಜಾನಂ ದೇವಸಂಕಾಶಂ ವರ್ಧಸ್ವೇತಿ ತತೋಽಬ್ರುವನ್ ॥ ೩

ಮಾರ್ಕಂಡೇಯೋಽಥ ಮೌದ್ಗಲ್ಯೋ ವಾಮದೇವಶ್ಚ ಕಾಶ್ಯಪಃ ।
ಕಾತ್ಯಾಯನೋಽಥ ಜಾಬಾಲಿರ್ಗೌತಮೋ ನಾರದಸ್ತಥಾ ॥ ೪

ಏತೇ ದ್ವಿಜರ್ಷಭಾಃ ಸರ್ವ ಆಸನೇಷೂಪವೇಶಿತಾಃ ।
ಮಹರ್ಷೀನ್ ಸಮನುಪ್ರಾಪ್ತಾನಭಿವಾದ್ಯ ಕೃತಾಂಜಲಿಃ ॥ ೫

## ಸರ್ಗ ೭೪

ಶ್ರೀರಾಮನು ವಸಿಷ್ಠಾದಿಗಳಿಗೆ ವೃದ್ಧಬ್ರಾಹ್ಮಣನ ಆಕ್ಷೇಪವನ್ನು ತಿಳಿಸುವುದು
ನಾರದರು ಬಾಲಕನ ಮರಣಕ್ಕೆ ಕಾರಣವನ್ನು ಹೇಳುವುದು

ಈ ರೀತಿಯಲ್ಲಿ ಆ ಬ್ರಾಹ್ಮಣನು ತನ್ನ ಕಷ್ಟಶೋಕಗಳನ್ನು ತೋಡಿಕೊಂಡು ಕರುಣಸ್ವರದಿಂದ ಗೋಳಾಡುವುದು ಶ್ರೀರಾಮನಿಗೆ ಕೇಳಿಸಿತು ಅವನು ಶೋಕಸಂತಪ್ತನಾಗಿ ಮಂತ್ರಿಗಳನ್ನೂ ವಸಿಷ್ಠವಾಮದೇವರನ್ನೂ ಪೌರಪ್ರಮುಖರನ್ನೂ ಕರೆಸಿದನು (೧-೨) ಆಗ ವಸಿಷ್ಠರೊಡನೆ ಮಾರ್ಕಾಂಡೇಯನೇ ಮೊದಲಾದ ಎಂಟು ಮಂದಿ ದ್ವಿಜರು ಆಗಮಿಸಿ ಮಹಾರಾಜನನ್ನು ಕಂಡು "ಜಯ ಜಯ" ಎಂದು ಆಶೀರ್ವದಿಸಿದರು ಮಾರ್ಕಾಂಡೇಯ, ಮೌದ್ಗಲ್ಯ, ವಾಮದೇವ, ಕಾಶ್ಯಪ, ಕಾತ್ಯಾಯನ, ಜಾಬಾಲಿ, ಗೌತಮ ಮತ್ತು ನಾರದರು—ಹೀಗೆ ಎಂಟು ಜನ ದ್ವಿಜೋತ್ತಮರು ವಸಿಷ್ಠರೊಡನೆ ಬಂದು ಆಸನಗಳಲ್ಲಿ ಮಂಡಿಸಿದರು ಅವರೆಲ್ಲರಿಗೂ

ಮಂತ್ರಿಣೋ ನೈಗಮಾಂಶ್ಚೈವ ಯಥಾರ್ಹಮನುಕೂಲತಃ ।
ತೇಷಾಂ ಸಮುಪವಿಷ್ಟಾನಾಂ ಸರ್ವೇಷಾಂ ದೀಪ್ತತೇಜಸಾಮ್ ॥ ೬

ರಾಘವಃ ಸರ್ವಮಾಚಷ್ಟೇ ದ್ವಿಜೋಽಯಮುಪರೋಧತೇ ।
ತಸ್ಯ ತದ್ವಚನಂ ಶ್ರುತ್ವಾ ರಾಜ್ಞೋ ದೀನಸ್ಯ ನಾರದಃ ॥ ೭

ಪ್ರತ್ಯುವಾಚ ಶುಭಂ ವಾಕ್ಯಮೃಷೀಣಾಂ ಸಂನಿಧೌ ನೃಪಮ್ ।
ಶ್ರೃಣು ರಾಜನ್ ಯಥಾಕಾಲಂ ಪ್ರಾಪ್ತೋ ಬಾಲಸ್ಯ ಸಂಕ್ಷಯಃ ॥ ೮

ಶ್ರುತ್ವಾ ಕರ್ತವ್ಯತಾಂ ರಾಜನ್ ಕುರುಷ್ವ ರಘುನಂದನ ।
ಪುರಾ ಕೃತಯುಗೇ ರಾಜನ್ ಬ್ರಾಹ್ಮಣಾ ವೈ ತಪಸ್ವಿನಃ ॥ ೯

ಅಬ್ರಾಹ್ಮಣಸ್ತದಾ ರಾಜನ್ನ ತಪಸ್ವೀ ಕಥಂಚನ ।
ತಸ್ಮಿನ್ ಯುಗೇ ಪ್ರಜ್ವಲಿತೇ ಬ್ರಹ್ಮಭೂತೇ ತ್ವನಾವೃತೇ ॥ ೧೦

ಅಮೃತ್ಯವಸ್ತದಾ ಸರ್ವೇ ಜಜ್ಞಿರೇ ದೀರ್ಘದರ್ಶಿನಃ ।
ತತಸ್ತ್ರೇತಾಯುಗಂ ನಾಮ ಮಾನವಾನಾಂ ವಪುಷ್ಮತಾಮ್ ॥ ೧೧

---

ರಾಘವನು ಅಭಿವಾದನೆಮಾಡಿದನು (೩-೫) ಹಾಗೆಯೇ ಮಂತ್ರಿಗಳನ್ನೂ ಪೌರಪ್ರಮುಖರನ್ನೂ ಯಥಾರ್ಹವಾಗಿ ಗೌರವಿಸಿ ಪೀಠಗಳಲ್ಲಿ ಕುಳ್ಳಿರಿಸಿದನು. ಎಲ್ಲರೂ ಕುಳಿತುಕೊಳ್ಳಲಾಗಿ ಶ್ರೀರಾಮನು ವೃದ್ಧಬ್ರಾಹ್ಮಣನ ಆಕ್ಷೇಪಣೆಗಳನ್ನು ಆ ತೇಜಸ್ವಿಗಳಿಗೆ ವಿವರಿಸಿದನು ರಾಜನು ದೈನ್ಯದಿಂದ ನುಡಿದ ಆ ಮಾತುಗಳನ್ನು ಕೇಳಿ ನಾರದರು ಹೀಗೆಂದರು (೬-೭) "ಮಹಾರಾಜ, ಬಾಲಕನಿಗೆ ಅಕಾಲದಲ್ಲಿ ಮರಣವೇಕಾಯಿತೆಂಬುದನ್ನು ಕೇಳು ಅದನ್ನು ಕೇಳಿದಮೇಲೆ ಮುಂದಿನ ಕರ್ತವ್ಯವೇನೆಂಬುದನ್ನು ಮಾಡು ರಘುನಂದನ, ಹಿಂದೆ ಕೃತಯುಗದಲ್ಲಿ ಬ್ರಾಹ್ಮಣರು ಮಾತ್ರವೇ ತಪಸ್ಸನ್ನಾಚರಿಸುತ್ತಿದ್ದರು (೮-೯) ಆಗ ಬ್ರಾಹ್ಮಣನಲ್ಲದವನು ಎಂದಿಗೂ ತಪಸ್ವಿಯಾಗುತ್ತಿರಲಿಲ್ಲ ಕೃತಯುಗವು ತಪಸ್ಸಿನಿಂದ ದೀಪ್ತವಾಗಿತ್ತು ಜನರು ಬ್ರಹ್ಮಜ್ಞಾನಿಗಳಾಗಿದ್ದರು ಅಜ್ಞಾನದ ಆವರಣವಿರಲಿಲ್ಲ ಮೃತ್ಯುವಿನ ಭಯವಿರಲಿಲ್ಲ. ಎಲ್ಲರೂ ಭೂತಭವಿಷ್ಯತ್ತುಗಳನ್ನರಿತ ದೀರ್ಘದರ್ಶಿಗಳಾಗಿದ್ದರು ಅನಂತರ

ಕ್ಷತ್ರಿಯಾಸ್ತತ್ರ ಜಾಯಂತೇ ಪೂರ್ವೇಣ ತಪಸಾನ್ವಿತಾಃ ।
ವೀರ್ಯೇಣ ತಪಸಾ ಚೈವ ತೇಽಧಿಕಾಃ ಪೂರ್ವಜನ್ಮನಿ ॥ ೧೨

ಮಾನವಾ ಯೇ ಮಹಾತ್ಮಾನಸ್ತ್ವತ್ರ ತ್ರೇತಾಯುಗೇ ಯುಗೇ ।
ಬ್ರಹ್ಮಕ್ಷತ್ರಂ ಚ ತತ್ ಸರ್ವಂ ಯತ್ಪೂರ್ವಮಪರಂ ಚ ಯತ್ ॥

ಯುಗಯೋರುಭಯೋರಾಸೀತ್ ಸಮವೀರ್ಯಸಮನ್ವಿತಮ್ ।
ಅಪಶ್ಯಂಸ್ತು ನ ತೇ ಸರ್ವೇ ವಿಶೇಷಮಧಿಕಂ ತತಃ ॥ ೧೪

ಸ್ಥಾಪನಂ ಚಕ್ರಿರೇ ತತ್ರ ಚಾತುರ್ವರ್ಣ್ಯಸ್ಯ ಸಂಮತಮ್ ।
ತಸ್ಮಿನ್ ಯುಗೇ ಪ್ರಜ್ವಲಿತೇ ಧರ್ಮಭೂತೇಹ್ಯನಾವೃತೇ ॥ ೧೫

ಅಧರ್ಮಃ ಪಾದಮೇಕಂ ತು ಪಾತಯತ್ ಪೃಥಿವೀತಲೇ ।
ಅಧರ್ಮೇಣ ಹಿ ಸಂಯುಕ್ತಸ್ತೇಜೋ ಮಂದಂ ಭವಿಷ್ಯತಿ ॥ ೧೬

---

ಸ್ವಲ್ಪ ದೇಹಾತ್ಮಬುದ್ಧಿಯುಳ್ಳ* ಮಾನವರಿರುವ ತ್ರೇತಾಯುಗವು ಪ್ರವರ್ತಿಸಿತು (೧೦-೧೧) ತ್ರೇತಾಯುಗದಲ್ಲಿ ಕ್ಷತ್ರಿಯರೂ ಸಹ ಹಿಂದೆ ಬ್ರಾಹ್ಮಣರು ಮಾಡುತ್ತಿದ್ದ ತಪಸ್ಸನ್ನಾಚರಿಸುತ್ತಿದ್ದರು ಹಿಂದಿನ ಕೃತಯುಗದಲ್ಲಿದ್ದವರು ತ್ರೇತಾಯುಗದ ಬ್ರಾಹ್ಮಣಕ್ಷತ್ರಿಯರಿಗಿಂತಲೂ ತಪೋವೀರ್ಯಗಳಿಂದ ಮಿಗಿಲಾಗಿದ್ದರು ಕೃತಯುಗದಲ್ಲಿ ಬ್ರಾಹ್ಮಣರು ಅಧಿಕರಾಗಿಯೂ ಕ್ಷತ್ರಿಯರು ನ್ಯೂನರಾಗಿಯೂ ಇದ್ದರಷ್ಟೆ ಅವರೆಲ್ಲರೂ ತ್ರೇತಾಯುಗದಲ್ಲಿ ಸಮಬಲರಾದರು ಆ ಸಮಯದಲ್ಲಿ ಕ್ಷತ್ರಿಯರಿಗಿಂತ ಬ್ರಾಹ್ಮಣರಲ್ಲಿ ಅಧಿಕವಾದ ವಿಶೇಷವೇನನ್ನೂ ಜನರು ಕಾಣಲಿಲ್ಲ (೧೨-೧೪) ಆಗ ಮನುಪ್ರಭೃತಿಗಳು ವಿಶೇಷವನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ಚಾತುರ್ವರ್ಣ್ಯಪ್ರಯುಕ್ತವೂ ವೇದಸಂಮತವೂ ಆದ ಆಚಾರಭೇದವನ್ನು ಗೊತ್ತುಮಾಡಿದರು ತ್ರೇತಾಯುಗವು ಚಾತುರ್ವರ್ಣ್ಯಪ್ರಯುಕ್ತವಾದ ಧರ್ಮಾಚರಣೆಯಿಂದ ತುಂಬಿತ್ತು. ಅಧರ್ಮದ ಆವರಣವಿರಲಿಲ್ಲ ಹೀಗಿರುವಾಗ ಅಧರ್ಮವು ಪೃಥ್ವಿಯಲ್ಲಿ ಒಂದು ಪಾದವನ್ನೂರಿತು! ಅಧರ್ಮವು ಸೇರಿದಾಗ ಜನರ ತೇಜಸ್ಸು ಮಂದ

---

* ವಪುಷ್ಮತಾಂ = ದೇಹಾತ್ಮಬುದ್ಧಿಯುಳ್ಳ, ದೃಢಕಾಯರಾದ.

ಆಮಿಷಂ ಯಚ್ಚ ಪೂರ್ವೇಷಾಂ ರಾಜಸಂ ಚ ಮಲಂ ಭೃಶಮ್ ।
ಅನೃತಂ ನಾಮ ತದ್ಭೂತಂ ಪಾದೇನ ಪೃಥಿವೀತಲೇ ॥ ೧೭

ಅನೃತಂ ಪಾತಯಿತ್ವಾ ತು ಪಾದಮೇಕಮಧರ್ಮತಃ ।
ತತಃ ಪ್ರಾದುಷ್ಕೃತಂ ಪೂರ್ವಮಾಯುಷಃ ಪರಿನಿಷ್ಠಿತಮ್ ॥ ೧೮

ಪಾತಿತೇ ತ್ವನೃತೇ ತಸ್ಮಿನ್ನಧರ್ಮೇ ಚ ಮಹೀತಲೇ ।
ಶುಭಾನ್ಯೇವಾಚರಲ್ಲೋಕಃ ಸತ್ಯಧರ್ಮಪರಾಯಣಃ ॥ ೧೯

ತ್ರೇತಾಯುಗೇ ಚ ವರ್ತಂತೇ ಬ್ರಾಹ್ಮಣಾಃ ಕ್ಷತ್ರಿಯಾಶ್ಚ ಯೇ ।
ತಪೋಽತಪ್ಯಂತ ತೇ ಸರ್ವೇ ಶುಶ್ರೂಷಾಮಪರೇ ಜನಾಃ ॥ ೨೦

ಸ ಧರ್ಮಃ ಪರಮಸ್ತೇಷಾಂ ವೈಶ್ಯಶೂದ್ರಂ ಸಮಾಗಮತ್ ।
ಪೂಜಾಂ ಚ ಸರ್ವವರ್ಣಾನಾಂ ಶೂದ್ರಾಶ್ಚಕ್ರುರ್ವಿಶೇಷತಃ ॥ ೨೧

---

ವಾಗುವುದು ಸಹಜ (೧೫-೧೭) ಅಧರ್ಮದ ಒಂದು ಪಾದವು ಪೃಥ್ವಿಯಲ್ಲಿಳಿದುದರಿಂದ ತ್ರೇತಾಯುಗದಲ್ಲಿ ಅನೃತವೆಂಬ* ಕೃಷ್ಯಾದಿ ಜೀವನೋಪಾಯವುಂಟಾಯಿತು ಇದು ಕೃತಯುಗದವರಿಗೆ ರಜೋಗುಣ ಸಮನ್ವಿತವೆನಿಸಿ ಮಲದಂತೆ ತ್ಯಾಜ್ಯವಾಗಿತ್ತು (೧೭) ಹೀಗೆ ಅಧರ್ಮದಿಂದ ಅನೃತವೆಂಬ ಜೀವನೋಪಾಯವುಂಟಾಗಲು, ಹಿಂದೆ ಅಪರಿಮಿತವಾಗಿದ್ದ ಜನರ ಆಯುಸ್ಸು ಪರಿಮಿತವಾಯಿತು ಅನೃತವೂ ಅಧರ್ಮವೂ ಜಗತ್ತಿನಲ್ಲಿ ಪ್ರಾಪ್ತವಾಗಲು, ಶ್ರೇಯಃಕಾಮಿಗಳಾದ ಜನರು ಸತ್ಯಧರ್ಮಪರಾಯಣರಾಗಿ ಶುಭಕಾರ್ಯಗಳನ್ನು ಪ್ರಯತ್ನಪೂರ್ವಕವಾಗಿ ಮಾಡುತ್ತ ಬಂದರು ತ್ರೇತಾಯುಗದಲ್ಲಿ ಬ್ರಾಹ್ಮಣರೂ ಕ್ಷತ್ರಿಯರೂ ತಪಸ್ಸನ್ನಾಚರಿಸುತ್ತಿದ್ದರು ವೈಶ್ಯಶೂದ್ರರು ಶುಶ್ರೂಷಾದಿವೃತ್ತಿಯಲ್ಲಿ ನಿರತರಾದರು (೧೮-೨೦) ಅದು ಅವರಿಗೆ ಪರಮಧರ್ಮವಾಯಿತು ಶೂದ್ರರು ವಿಶೇಷವಾಗಿ ಇತರ

---

* 'ಸೇವಾ ಶ್ವವೃತ್ತಿರನೃತಂ ಕೃಷಿರುಂಛಶಿಲಂ ತ್ವೃತಮ್'—ಅಮರಕೋಶ ಕೃತಯುಗದಲ್ಲಿ ಕೃಷ್ಯಾದಿಗಳಿರಲಿಲ್ಲ ಕೃಷಿಯಿಲ್ಲದೆ ಭೂಮಿಯು ಫಲಿಸುತ್ತಿತ್ತು ಜನರು ಉಂಛಶಿಲಾದಿವೃತ್ತಿಗಳಿಂದಲೂ ಸತ್ಯಸಂಕಲ್ಪಾದಿಗಳಿಂದಲೂ ಜೀವಿಸುತ್ತಿದ್ದರು

ಏತಸ್ಮಿನ್ನಂತರೇ ತೇಷಾಮಧರ್ಮೋ ಚಾನೃತೇ ಚ ಹ ।
ತತಃ ಪೂರ್ವೇ ಭೃಶಂ ಹ್ರಾಸಮಗಮನ್ನೃಪಸತ್ತಮ ॥ ೨೨

ತತಃ ಪಾದಮಧರ್ಮಃ ಸ ದ್ವಿತೀಯಮವತಾರಯತ್ ।
ತತೋ ದ್ವಾಪರಸಂಜ್ಞಾಸ್ಯ ಯುಗಸ್ಯ ಸಮಜಾಯತ ॥ ೨೩

ತಸ್ಮಿನ್ ದ್ವಾಪರಸಂಜ್ಞೇ ತು ವರ್ತಮಾನೇ ಯುಗಕ್ಷಯೇ ।
ಅಧರ್ಮಶ್ಚಾನೃತಂ ಚೈವ ವವೃಧೇ ಪುರುಷರ್ಷಭ ॥ ೨೪

ತಸ್ಮಿನ್ ದ್ವಾಪರಸಂಖ್ಯಾತೇ ತಪೋ ವೈಶ್ಯಾನ್ ಸಮಾವಿಶತ್ ।
ತ್ರಿಭ್ಯೋ ಯುಗೇಭ್ಯಸ್ತ್ರೀನ್ ವರ್ಣಾನ್ ಕ್ರಮಾದ್ವೈ ತಪ ಆವಿಶತ್ ॥

ತ್ರಿಭ್ಯೋ ಯುಗೇಭ್ಯಸ್ತ್ರೀನ್ ವರ್ಣಾನ್ ಧರ್ಮಶ್ಚ ಪರಿನಿಷ್ಠಿತಃ ।
ನ ಶೂದ್ರೋ ಲಭತೇ ಧರ್ಮಂ ಯುಗತಸ್ತು ನರರ್ಷಭ ॥ ೨೬

ಹೀನವರ್ಣೋ ನೃಪಶ್ರೇಷ್ಠ ತಪ್ಯತೇ ಸುಮಹತ್ತಪಃ ।
ಭವಿಷ್ಯಚ್ಛೂದ್ರಯೋನ್ಯಾಂ ವೈ ತಪಶ್ಚರ್ಯಾ ಕಲೌ ಯುಗೇ ॥ ೨೭

---

ವರ್ಣದವರನ್ನು ಗೌರವಿಸುತ್ತಿದ್ದರು ತ್ರೇತಾಯುಗದ ಕಡೆಯಲ್ಲಿ ಅಧರ್ಮವೂ ಅನೃತವೂ ಬೆಳೆಯಲಾಗಿ ಆ ಯುಗದವರು ಕ್ಷೀಣದಶೆಯನ್ನು ಪಡೆದರು (೨೧-೨೨) ಮಹಾರಾಜ, ಅನಂತರ ಅಧರ್ಮವು ತನ್ನ ಎರಡನೆಯ ಪಾದವನ್ನು ಭೂಮಿಯಲ್ಲಿಟ್ಟಿತು ! ಆ ಯುಗಕ್ಕೆ ದ್ವಾಪರವೆಂದು ಹೆಸರಾಯಿತು ಕೆಳವಟ್ಟದ* ಆ ದ್ವಾಪರಯುಗದಲ್ಲಿ ಅಧರ್ಮವೂ ಅನೃತವೂ ವರ್ಧಿಸಿದವು ದ್ವಾಪರಯುಗದಲ್ಲಿ ತಪಸ್ಸು ವೈಶ್ಯರಿಗೂ ಪ್ರಾಪ್ತವಾಯಿತು ಹೀಗೆ ಮೂರು ಯುಗಗಳಲ್ಲಿ ತಪಸ್ಸು ಕ್ರಮವಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ವಿಹಿತವಾಯಿತು (೨೩-೨೫) ಈ ಪ್ರಕಾರವಾಗಿ ಮೂರು ಯುಗಗಳಿಂದ ಮೂರು ವರ್ಣದವರಿಗೆ ತಪಸ್ಸು ಪ್ರಾಪ್ತವಾಗಿ ಸ್ವಧರ್ಮವೆಂದು ವ್ಯವಸ್ಥಿತವಾಯಿತು ಈ ಯುಗಗಳಲ್ಲಿ ಶೂದ್ರನು ತಪಸ್ಸನ್ನು ಸ್ವಧರ್ಮವಾಗಿ ಪಡೆಯಲಿಲ್ಲ (೨೬). ನೃಪಶ್ರೇಷ್ಠ, ಈಗ ಶೂದ್ರನೊಬ್ಬನು ಮಹತ್ತರವಾದ ತಪಸ್ಸನ್ನಾಚರಿಸುತ್ತಿದ್ದಾನೆ ಕಲಿಯುಗದಲ್ಲಿ ಮಾತ್ರವೇ ಮುಂದೆ ಜನಿಸುವ ಶೂದ್ರಜಾತಿ

---

* ಯುಗಕ್ಷಯ = ಕ್ಷೀಣವಾದ ಯುಗ, ಕೀಳಾದ ಯುಗ , ಯುಗ = ಅಧರ್ಮ ಮತ್ತು ಅನೃತಗಳ ದ್ವಯಕ್ಕೆ, ಕ್ಷಯ = ಆಶ್ರಯವಾದ ಯುಗ

ಅಧರ್ಮಃ ಪರಮೋ ರಾಜನ್ ದ್ವಾಪರೇ ಶೂದ್ರಜನ್ಮನಃ ।
ಸ ವೈ ವಿಷಯಪರ್ಯಂತೇ ತವ ರಾಜನ್ ಮಹಾತಪಾಃ ॥ ೨೮

ಅದ್ಯ ತಪ್ಯತಿ ದುರ್ಬುದ್ಧಿಸ್ತೇನ ಬಾಲವಧೋ ಹ್ಯಯಮ್ ।
ಯೋ ಹ್ಯಧರ್ಮಮಕಾರ್ಯಂ ವಾ ವಿಷಯೇ ಪಾರ್ಥಿವಸ್ಯ ತು ॥ ೨೯

ಕರೋತಿ ಚಾಶ್ರೀಮೂಲಂ ತತ್ ಪರೇ ವಾ ದುರ್ಮತಿರ್ನರಃ ।
ಕ್ಷಿಪ್ರಂ ಚ ನರಕಂ ಯಾತಿ ಸ ಚ ರಾಜಾ ನ ಸಂಶಯಃ ॥ ೩೦

ಅಧೀತಸ್ಯ ಚ ತಪ್ತಸ್ಯ ಕರ್ಮಣಃ ಸುಕೃತಸ್ಯ ಚ ।
ಷಷ್ಠಂ ಭಜತಿ ಭಾಗಂ ತು ಪ್ರಜಾ ಧರ್ಮೇಣ ಪಾಲಯನ್ ॥ ೩೧

ಷಡ್ಭಾಗಸ್ಯ ನ ಭೋಕ್ತಾಸೌ ರಕ್ಷತೇ ನ ಪ್ರಜಾಃ ಕಥಮ್ ।
ಸ ತ್ವಂ ಪುರುಷಶಾರ್ದೂಲ ಮಾರ್ಗಸ್ವ ವಿಷಯಂ ಸ್ವಕಮ್ ॥ ೩೨

---

ಯವರಿಗೆ ತಪಶ್ಚರ್ಯೆಯು ಧರ್ಮವೆಂದು ವಿಹಿತವಾಗುವುದು ದ್ವಾಪರ ಯುಗದಲ್ಲಿ* ಶೂದ್ರನಿಗೆ ತಪಸ್ಸು ಅತ್ಯಂತ ಅಧರ್ಮವೆನಿಸುತ್ತದೆ ನಿನ್ನ ರಾಜ್ಯದ ಎಲ್ಲೆಯ ಬಳಿ ಒಬ್ಬ ಶೂದ್ರನು ಮಹತ್ತರವಾದ ತಪಸ್ಸಿನಲ್ಲಿ ನಿರತನಾಗಿದ್ದಾನೆ (೨೭-೨೮) ಆ ದುರ್ಬುದ್ಧಿಯು ತಪಸ್ಸುಮಾಡುತ್ತಿರುವುದರಿಂದ ಈ ಬಾಲಕನಿಗೆ ಮೃತ್ಯು ಉಂಟಾಗಿದೆ ಯಾವನಾದರೂ ಮನುಷ್ಯನು ದುರ್ಬುದ್ಧಿಗೊಳಗಾಗಿ ದೇಶದಲ್ಲಿಯೋ ನಗರದಲ್ಲಿಯೋ ಧರ್ಮಲೋಪವನ್ನು ಮಾಡಿದರೆ ಅಥವಾ ನಿಷಿದ್ಧಕಾರ್ಯವನ್ನೆಸಗಿದರೆ, ಅದು ಅಲ್ಲಿಯ ಜನರಿಗೆ ಕೆಡಕನ್ನುಂಟುಮಾಡುವುದು (ಅದನ್ನು ತಡೆಯದ) ರಾಜನು ನರಕವನ್ನೈದುವನು, ಸಂದೇಹವಿಲ್ಲ (೨೯-೩೦) ರಾಜನು ಧರ್ಮದಿಂದ ಪ್ರಜೆಗಳನ್ನು ಪಾಲಿಸುತ್ತಿದ್ದರೆ, ದೇಶದಲ್ಲಿ ನಡೆಯುವ ವೇದಾಧ್ಯಯನ ತಪಸ್ಸು ಪುಣ್ಯಕಾರ್ಯ—ಇವುಗಳ ಆರನೆಯ ಒಂದಂಶವು ರಾಜನಿಗೆ ಸೇರುತ್ತದೆ ಹೀಗೆ ಆರನೆಯ ಒಂದು ಭಾಗವನ್ನು ಪಡೆದುಕೊಳ್ಳುವ ರಾಜನು ಪ್ರಜಗಳನ್ನು ರಕ್ಷಿಸುವುದಿಲ್ಲವೆಂದರೇನು? ಆದ್ದರಿಂದ, ಹೇ ಪುರುಷೋತ್ತಮ, ನಿನ್ನ ರಾಷ್ಟ್ರ

* ದ್ವಾಪರಯುಗದಲ್ಲಿಯೇ ಶೂದ್ರನಿಗೆ ತಪಸ್ಸು ಅತ್ಯಂತ ಅಧರ್ಮವಾಗಿರುವಾಗ ತ್ರೇತಾಯುಗದಲ್ಲಿ ಎಷ್ಟು ಅಧರ್ಮವಾಗಿರಬೇಡ—ಎಂದು ಅಭಿಪ್ರಾಯ

ದುಷ್ಕೃತಂ ಯತ್ರ ಪಶ್ಯೇಥಾಸ್ತತ್ರ ಯತ್ನಂ ಸಮಾಚರ ।
ಏವಂ ಚೇದ್ಧರ್ಮವೃದ್ಧಿಶ್ಚ ನೃಣಾಂ ಚಾಯುರ್ವಿವರ್ಧನಮ್ ॥ ೩೩
ಭವಿಷ್ಯತಿ ನರಶ್ರೇಷ್ಠ ಬಾಲಸ್ಯಾಸ್ಯ ಚ ಜೀವಿತಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುಃಸಪ್ತತಿತಮಃ ಸರ್ಗಃ



ದಲ್ಲಿ ಹುಡುಕಿ ನೋಡು (೩೧-೩೨) ಎಲ್ಲಿ ದುಷ್ಕೃತ್ಯವು ಕಂಡುಬರುವುದೋ ಅಲ್ಲಿ ಅದನ್ನು ತಡೆಯಲು ಯತ್ನಿಸು ಆ ದುಷ್ಕೃತ್ಯವನ್ನು ತಡೆದರೆ ಧರ್ಮ ವೃದ್ಧಿಯಾಗುವುದು, ಜನರ ಆಯುಸ್ಸೂ ವರ್ಧಿಸುವುದು, ಈ ಬಾಲಕನೂ ಮತ್ತೆ ಜೀವಂತನಾಗುವನು" ಎಂದರು (೩೩)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತುನಾಲ್ಕನೆಯ ಸರ್ಗ



# ಪಂಚಸಪ್ತತಿತಮಃ ಸರ್ಗಃ

## ಶಂಬೂಕವಿಚಯಃ

ನಾರದಸ್ಯ ತು ತದ್ವಾಕ್ಯಂ ಶ್ರುತ್ವಾಮೃತಮಯಂ ತದಾ ।
ಪ್ರಹರ್ಷಮತುಲಂ ಲೇಭೇ ಲಕ್ಷ್ಮಣಂ ಚೇದಮಬ್ರವೀತ್ ॥ ೧

ಗಚ್ಛ ಸೌಮ್ಯ ದ್ವಿಜಶ್ರೇಷ್ಠಂ ಸಮಾಶ್ವಾಸಯ ಸುವ್ರತಮ್ ।
ಬಾಲಸ್ಯ ತು ಶರೀರಂ ತತ್ತೈಲದ್ರೋಣ್ಯಾಂ ನಿಧಾಪಯ ॥ ೨

ಗಂಧೈಶ್ಚ ಪರಮೋದಾರೈಸ್ತೈಲೈಶ್ಚಾಪಿ ಸುಗಂಧಿಭಿಃ ।
ಯಥಾ ನ ಕ್ಷೀಯತೇ ಬಾಲಸ್ತಥಾ ಸೌಮ್ಯ ವಿಧೀಯತಾಮ್ ॥ ೩

ಯಥಾ ಶರೀರೋ ಬಾಲಸ್ಯ ಗುಪ್ತಃ ಸನ್ ಶಿಷ್ಟಕರ್ಮಣಃ ।
ವಿಪತ್ತಿಃ ಪರಿಭೇದೋ ವಾ ನ ಭವೇಚ್ಚ ತಥಾ ಕುರು ॥ ೪

ಏವಮಾದಿಶ್ಯ ಕಾಕುತ್ಸ್ಥೋ ಲಕ್ಷ್ಮಣಂ ಶುಭಲಕ್ಷಣಮ್ ।
ಮನಸಾ ಪುಷ್ಪಕಂ ದಧ್ಯಾವಾಗಚ್ಛೇತಿ ಮಹಾಯಶಾಃ ॥ ೫

# ಸರ್ಗ ೭೫

## ಶ್ರೀರಾಮನು ಪುಷ್ಪಕವನ್ನೇರಿ ತಪಸ್ಸುಮಾಡುತ್ತಿದ್ದ ಶಂಬೂಕನನ್ನು ಅನ್ವೇಷಿಸುವುದು

ನಾರದರ ನುಡಿ ರಾಘವನಿಗೆ ಅಮೃತಮಯವಾಗಿ ಗೋಚರಿಸಿತು ಅವನು ಸಂಹೃಷ್ಟನಾಗಿ ಲಕ್ಷ್ಮಣನನ್ನು ನೋಡಿ "ಸೌಮ್ಯ, ಹೋಗು, ಸುಶೀಲನಾದ ಆ ದ್ವಿಜಶ್ರೇಷ್ಠನಿಗೆ ಸಮಾಧಾನವನ್ನು ಹೇಳು ಬಾಲಕನ ದೇಹವನ್ನು ತೈಲದ್ರೋಣಿಯಲ್ಲಿ ಇರಿಸುವಂತೆ ಏರ್ಪಡಿಸು (೧-೨) ಉತ್ತಮ ಗಂಧವನ್ನೂ ಸುಗಂಧಿತೈಲವನ್ನೂ ಬಳಸಿ, ಸದ್ವೃತ್ತನಾದ ಆ ಬಾಲಕನ ದೇಹವು ಕೆಡದಂತೆ ನೋಡಿಕೊ ಅವನ ಶರೀರವು ನಾಶವಾಗದಂತೆಯೂ ಸಂಧಿಬಂಧಗಳು ಶಿಥಿಲವಾಗದಂತೆಯೂ ವ್ಯವಸ್ಥೆಮಾಡು" ಎಂದು ತಿಳಿಸಿದನು (೩-೪). ಹೀಗೆ ಲಕ್ಷ್ಮಣನಿಗೆ ತಿಳಿಸಿ ಕೀರ್ತಿಶಾಲಿಯಾದ ಕಾಕುತ್ಸ್ಥನು

ಇಂಗಿತಂ ಸ ತು ವಿಜ್ಞಾಯ ಪುಷ್ಪಕೋ ಹೇಮಭೂಷಿತಃ ।
ಆಜಗಾಮ ಮುಹೂರ್ತೇನ ಸಮೀಪಂ ರಾಘವಸ್ಯ ವೈ ॥ ೬

ಸೋಽಬ್ರವೀತ್ ಪ್ರಣತೋ ಭೂತ್ವಾ ಅಯಮಸ್ಮಿ ನರಾಧಿಪ ।
ವಶ್ಯಸ್ತವ ಮಹಾಬಾಹೋ ಕಿಂಕರಃ ಸಮುಪಸ್ಥಿತಃ ॥ ೭

ಭಾಷಿತಂ ರುಚಿರಂ ಶ್ರುತ್ವಾ ಪುಷ್ಪಕಸ್ಯ ನರಾಧಿಪಃ ।
ಅಭಿವಾದ್ಯ ಮಹರ್ಷೀಂಸ್ತಾನ್ ವಿಮಾನಂ ಸೋಽಧ್ಯರೋಹತ ॥ ೮

ಧನುರ್ಗೃಹೀತ್ವಾ ತೂಣೀ ಚ ಖಡ್ಗಂ ಚ ರುಚಿರಪ್ರಭಮ್ ।
ನಿಕ್ಷಿಪ್ಯ ನಗರೇ ವೀರೌ ಸೌಮಿತ್ರಿಭರತಾವುಭೌ ॥ ೯

ಪ್ರಾಯಾತ್ ಪ್ರತೀಚೀಂ ಹರಿತಂ ವಿಚಿನ್ವಂಶ್ಚ ತತಸ್ತತಃ ।
ಉತ್ತರಾಮಗಮಚ್ಛ್ರೀಮಾನ್ ದಿಶಂ ಹಿಮವತಾ ವೃತಾಮ್ ॥ ೧೦

ಅಪಶ್ಯಮಾನಸ್ತತ್ರಾಪಿ ಸ್ವಲ್ಪಮಪ್ಯಥ ದುಷ್ಕೃತಮ್ ।
ಪೂರ್ವಾಮಪಿ ದಿಶಂ ಸರ್ವಾಮಥಾಪಶ್ಯನ್ನರಾಧಿಪಃ ॥ ೧೧

---

ಪುಷ್ಪಕವಿಮಾನವು ಬರಲೆಂದು ಅದನ್ನು ಮನಸ್ಸಿನಲ್ಲಿ ಸ್ಮರಿಸಿದನು ಅವನ ಇಂಗಿತವನ್ನರಿತು ಹೇಮಭೂಷಿತವಾದ ಪುಷ್ಪಕವಿಮಾನವು ಒಂದು ಕ್ಷಣದಲ್ಲಿ ರಾಘವನ ಬಳಿಗೆ ಆಗಮಿಸಿತು (೫-೬) ಅದು ರಾಘವನನ್ನು ಕುರಿತು "ನರಾಧಿಪ, ಇದೋ ಬಂದಿರುವೆನು! ನಿನಗೆ ವಶ್ಯನೂ ಕಿಂಕರನೂ ಆದ ನಾನು ಉಪಸ್ಥಿತನಾಗಿರುವೆನು" ಎಂದು ಹೇಳಿತು ರಾಘವನು ವಿಮಾನದ ಮಧುರವಾಣಿಯನ್ನು ಕೇಳಿ, ಮಹರ್ಷಿಗಳಿಗೆ ಅಭಿವಂದಿಸಿ, ಧನುಸ್ಸನ್ನೂ ಬತ್ತಳಿಕೆಗಳನ್ನೂ ಧರಿಸಿ ಹೊಳೆಯುವ ಖಡ್ಗವನ್ನು ಹಿಡಿದು ಪುಷ್ಪಕವನ್ನೇರಿದನು ವೀರರಾದ ಭರತಲಕ್ಷ್ಮಣರನ್ನು ರಾಜಧಾನಿಯ ರಕ್ಷಣೆಗಾಗಿ ನಿಯಮಿಸಿದನು (೭-೯) (ಶ್ರೀರಾಮನು ವಿಮಾನದಲ್ಲಿ ಕುಳಿತು, ಶೂದ್ರತಪಸ್ವಿಯನ್ನು) ಹುಡುಕುತ್ತ ಮೊದಲು ಪಶ್ಚಿಮದಿಕ್ಕಿಗೆ ಹೋದನು ಅನಂತರ ಹಿಮಾಲಯದಿಂದ ಆವೃತವಾದ ಉತ್ತರದಿಕ್ಕಿಗೆ ಹೋಗಿ ಎಲ್ಲಿಯೂ ಸ್ವಲ್ಪ ದುಷ್ಕೃತ್ಯವನ್ನೂ ಕಾಣದೆ, ಪೂರ್ವದಿಕ್ಕನ್ನು ಶೋಧಿಸುತ್ತ ಹೋದನು (೧೦-೧೧)

ಪ್ರವಿಶುದ್ಧಸಮಾಚಾರಾಮಾದರ್ಶತಲನಿರ್ಮಲಾಮ್ ।
ಪುಷ್ಪಕಸ್ಥೋ ಮಹಾಬಾಹುಸ್ತದಾ ಪಶ್ಯನ್ನರಾಧಿಪಃ ॥ ೧೨

ದಕ್ಷಿಣಾಂ ದಿಶಮಾಕ್ರಾಮತ್ತತೋ ರಾಜರ್ಷಿನಂದನಃ ।
ಶೈವಲಸ್ಯೋತ್ತರೇ ಪಾರ್ಶ್ವೇ ದದರ್ಶ ಸುಮಹತ್ ಸರಃ ॥ ೧೩

ತಸ್ಮಿನ್ ಸರಸಿ ತಪ್ಯಂತಂ ತಾಪಸಂ ಸುಮಹತ್ತಪಃ ।
ದದರ್ಶ ರಾಘವಃ ಶ್ರೀಮಾನ್ ಲಂಬಮಾನಮಧೋಮುಖಮ್ ॥೧೪

ರಾಘವಸ್ತಮುಪಾಗಮ್ಯ ತಪ್ಯಂತಂ ತಪ ಉತ್ತಮಮ್ ।
ಉವಾಚ ಸ ತದಾ ವಾಕ್ಯಂ ಧನ್ಯಸ್ತ್ವಮಸಿ ಸುವ್ರತ ॥ ೧೫

ಕಸ್ಯಾಂ ಯೋನ್ಯಾಂ ತಪೋವೃದ್ಧ ವರ್ತಸೇ ದೃಢವಿಕ್ರಮಃ ।
ಕೌತೂಹಲಾತ್ತ್ವಾಂ ಪೃಚ್ಛಾಮಿ ರಾಮೋ ದಾಶರಥಿರ್ಹ್ಯಹಮ್ ॥

ಕೋಽರ್ಥೋ ಮನೀಷಿತಸ್ತುಭ್ಯಂ ಸ್ವರ್ಗಲಾಭಃ ಪರೋಽಥವಾ ।
ವರಾಶ್ರಯೋ ಯದರ್ಥಂ ತ್ವಂ ತಪಸ್ಯಸಿ ಸುದುಷ್ಕರಮ್ ॥ ೧೭

---

ಎಲ್ಲೆಡೆಯೂ ಕನ್ನಡಿಯಂತೆ ನಿರ್ಮಲವಾಗಿ ಶುದ್ಧಾಚಾರಸಮನ್ವಿತವಾಗಿತ್ತು. ಪುಷ್ಪಕದಲ್ಲಿ ಮಂಡಿಸಿದ್ದ ಆ ವೀರನು ಅದೆಲ್ಲವನ್ನೂ ನೋಡುತ್ತ ದಕ್ಷಿಣದಿಕ್ಕಿಗೆ ತೆರಳಿದನು ಅಲ್ಲಿ ಶೈವಲವೆಂಬ ಪರ್ವತದ ಉತ್ತರಪಾರ್ಶ್ವದಲ್ಲಿ ಒಂದು ದೊಡ್ಡ ಸರಸ್ಸು ಕಾಣಿಸಿತು (೧೨-೧೩) ಆ ಸರಸ್ಸಿನ ತೀರದಲ್ಲಿ ತಲೆಕೆಳಗಾಗಿ ನೇತಾಡುತ್ತ ಮಹತ್ತರವಾದ ತಪಸ್ಸಿನಲ್ಲಿ ನಿರತನಾದ ಒಬ್ಬ ತಾಪಸನನ್ನು ರಾಘವನು ಕಂಡನು ಅವನು ತಪಸ್ವಿಯ ಸಮೀಪಕ್ಕೆ ಹೋಗಿ "ಎಲೈ ಸುವ್ರತ, ಧನ್ಯ ನೀನು! ದೃಢನಿಷ್ಠೆಯಿಂದಿರುವ ತಪೋವೃದ್ಧನೆ, ನೀನು ಯಾವ ಜಾತಿಯಲ್ಲಿ ಜನಿಸಿದ್ದೀಯೆ? ಕೌತುಕದಿಂದ ಪ್ರಶ್ನಿಸುತ್ತಿದ್ದೇನೆ. ನಾನು ದಶರಥಪುತ್ರನಾದ ರಾಮ (೧೪-೧೬) ನಿನ್ನ ಬಯಕೆ ಯಾವುದು? ಸ್ವರ್ಗವೊ ಅಥವಾ ಬೇರೊಂದು ವರದ ಅಪೇಕ್ಷೆಯೊ? ಯಾವುದಕ್ಕಾಗಿ ಈ ದುಷ್ಕರವಾದ ತಪಸ್ಸನ್ನಾಚರಿಸುತ್ತಿದ್ದೀಯೆ? ಎಲೈ ತಾಪಸನೆ, ನಿನ್ನ

ಯಮಾಶ್ರಿತ್ಯ ತಪಸ್ತಪ್ತಂ ಶ್ರೋತುಮಿಚ್ಛಾಮಿ ತಾಪಸ ।
ಬ್ರಾಹ್ಮಣೋ ವಾಸಿ ಭದ್ರಂ ತೇ ಕ್ಷತ್ರಿಯೋ ವಾಸಿ ದುರ್ಜಯಃ ॥೧೮
ವೈಶ್ಯಸ್ತೃತೀಯವರ್ಣೋ ವಾ ಶೂದ್ರೋ ವಾ ಸತ್ಯವಾಗ್ಭವ ॥

ಇತ್ಯೇವಮುಕ್ತಃ ಸ ನರಾಧಿಪೇನ
ಹ್ಯವಾಕ್ಶಿರಾ ದಾಶರಥಾಯ ತಸ್ಮೈ ।
ಉವಾಚ ಜಾತಿಂ ನೃಪಪುಂಗವಾಯ
ಯತ್ಕಾರಣೇ ಚೈವ ತಪಃಪ್ರಯತ್ನಃ ॥ ೧೯

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚಸಪ್ತತಿತಮಃ ಸರ್ಗಃ



ತಪಸ್ಸಿನ ಉದ್ದೇಶವನ್ನು ಕೇಳಲು ಇಚ್ಛಿಸಿದ್ದೇನೆ ನೀನು ಬ್ರಾಹ್ಮಣನೊ? ಕ್ಷತ್ರಿಯನೊ? ವೈಶ್ಯನೊ? ಅಥವಾ ಶೂದ್ರನೊ? ಸತ್ಯವನ್ನು ಹೇಳು" ಎಂದು ಕೇಳಿದನು (೧೭-೧೮) ಈ ರೀತಿಯಲ್ಲಿ ಮಹಾರಾಜನಾದ ದಾಶರಥಿಯು ಕೇಳಲಾಗಿ, ತಲೆಕೆಳಗಾಗಿ ತಪಸ್ಸುಮಾಡುತ್ತಿದ್ದ ಆ ಪುರುಷನು ತನ್ನ ಜಾತಿಯನ್ನೂ ತಪಸ್ಸಿನ ಉದ್ದೇಶವನ್ನೂ ಆ ನೃಪಶ್ರೇಷ್ಠನಿಗೆ ತಿಳಿಸಿದನು (೧೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತೈದನೆಯ ಸರ್ಗ



## ಷಟ್‌ಸಪ್ತತಿತಮಃ ಸರ್ಗಃ

### ಶಂಬೂಕವಧಃ

ತಸ್ಯ ತದ್ವಚನಂ ಶ್ರುತ್ವಾ ರಾಮಸ್ಯಾಕ್ಲಿಷ್ಟಕರ್ಮಣಃ ।
ಅವಾಕ್ಶಿರಾಸ್ತಥಾ ಭೂತ್ವಾ ವಾಕ್ಯಮೇತದುವಾಚ ಹ ॥ ೧

ಶೂದ್ರಯೋನ್ಯಾಂ ಪ್ರಸೂತೋಽಸ್ಮಿ ಶಂಬೂಕೋ ನಾಮ ನಾಮತಃ ।
ದೇವತ್ವಂ ಪ್ರಾರ್ಥಯೇ ರಾಮ ಸಶರೀರೋ ಮಹಾಯಶಃ ॥ ೨

ನ ಮಿಥ್ಯಾಹಂ ವದೇ ರಾಮ ದೇವಲೋಕಜಿಗೀಷಯಾ ।
ಶೂದ್ರಂ ಮಾಂ ವಿದ್ಧಿ ಕಾಕುತ್ಸ್ಥ ತಪ ಉಗ್ರಂ ಸಮಾಸ್ಥಿತಮ್ ॥ ೩

ಭಾಷತಸ್ತಸ್ಯ ಶೂದ್ರಸ್ಯ ಖಡ್ಗಂ ಸುರುಚಿರಪ್ರಭಮ್ ।
ನಿಷ್ಕೃಷ್ಯ ಕೋಶಾದ್ವಿಮಲಂ ಶಿರಶ್ಚಿಚ್ಛೇದ ರಾಘವಃ ॥ ೪

ತಸ್ಮಿನ್ ಶೂದ್ರೇ ಹತೇ ದೇವಾಃ ಸೇಂದ್ರಾಃ ಸಾಗ್ನಿಪುರೋಗಮಾಃ ।
ಸಾಧು ಸಾಧ್ವಿತಿ ಕಾಕುತ್ಸ್ಥಂ ಪ್ರಶಶಂಸುರ್ಮುಹುರ್ಮುಹುಃ ॥ ೫

## ಸರ್ಗ ೭೬

### ಶ್ರೀರಾಮನಿಂದ ಶಂಬೂಕನ ವಧೆ ಅಗಸ್ತ್ಯದರ್ಶನ. ಆಭರಣ ಸ್ವೀಕಾರ

ಧರ್ಮನಿಷ್ಠನಾದ ಶ್ರೀರಾಮನ ಪ್ರಶ್ನೆಯನ್ನು ಕೇಳಿ, ತಲೆಕೆಳಗಾಗಿಯೇ ಇದ್ದ ಆ ಪುರುಷನು "ನಾನು ಶೂದ್ರಯೋನಿಯಲ್ಲಿ ಜನಿಸಿದವನು ನನ್ನ ಹೆಸರು ಶಂಬೂಕ ರಾಮ, ಈ ಶರೀರಸಹಿತವಾಗಿ ದೇವತ್ವವನ್ನು ಬಯಸುತ್ತಿದ್ದೇನೆ ನಾನು ಸುಳ್ಳು ಹೇಳುತ್ತಿಲ್ಲ ದೇವಲೋಕವನ್ನು ಬಯಸಿ ಉಗ್ರ ತಪಸ್ಸನ್ನಾಚರಿಸುತ್ತಿರುವ ನನ್ನನ್ನು ಶೂದ್ರನೆಂದು ತಿಳಿ" ಎಂದು ಹೇಳಿದನು (೧-೩) ಆತನು ಹಾಗೆ ಹೇಳುತ್ತಿರುವಾಗಲೇ ರಾಘವನು ಒರೆಯಿಂದ ಹೊಳೆಯುವ ಖಡ್ಗವನ್ನು ಹಿರಿದು ಶಂಬೂಕನ ಶಿರಸ್ಸನ್ನು ಕತ್ತರಿಸಿಬಿಟ್ಟನು. ಆ ಶೂದ್ರನು ಹತನಾಗಲು ಇಂದ್ರ ಅಗ್ನಿ—ಮುಂತಾದ ದೇವತೆಗಳು "ಸಾಧು ಸಾಧು!" ಎಂದು ಕಾಕುತ್ಸ್ಥನನ್ನು ಹೊಗಳಿದರು (೪-೫).

ಪುಷ್ಪವೃಷ್ಟಿರ್ಮಹತ್ಯಾಸೀದ್ದಿವ್ಯಾನಾಂ ಸುಸುಗಂಧಿನಾಮ್ ।
ಪುಷ್ಪಾಣಾಂ ವಾಯುಮುಕ್ತಾನಾಂ ಸರ್ವತಃ ಪ್ರಪಪಾತ ಹ ॥ ೬
ಸುಪ್ರೀತಾಶ್ಚಾಬ್ರುವನ್ ರಾಮಂ ದೇವಾಃ ಸತ್ಯಪರಾಕ್ರಮಮ್ ।
ಸುರಕಾರ್ಯಮಿದಂ ಸೌಮ್ಯ ಸುಕೃತಂ ತೇ ಮಹಾಮತೇ ॥ ೭
ಗೃಹಾಣ ಚ ವರಂ ಸೌಮ್ಯ ಯತ್ತ್ವಮಿಚ್ಛಸ್ಯರಿಂದಮ ।
ಸ್ವರ್ಗಭಾಜ್‌ನ ಹಿ ಶೂದ್ರೋಽಯಂ ತ್ವತ್ಕೃತೇ ರಘುನಂದನಮ್ ॥ ೮
ದೇವಾನಾಂ ಭಾಷಿತಂ ಶ್ರುತ್ವಾ ರಾಘವಃ ಸುಸಮಾಹಿತಃ ।
ಉವಾಚ ಪ್ರಾಂಜಲಿರ್ವಾಕ್ಯಂ ಸಹಸ್ರಾಕ್ಷಂ ಪುರಂದರಮ್ ॥ ೯
ಯದಿ ದೇವಾಃ ಪ್ರಸನ್ನಾ ಮೇ ದ್ವಿಜಪುತ್ರಃ ಸ ಜೀವತು ।
ದಿಶಂತು ವರಮೇತನ್ಮ ಈಪ್ಸಿತಂ ಪರಮಂ ಮಮ ॥ ೧೦
ಮಮಾಪಚಾರಾದ್ಯಾತೋಽಸೌ ಬ್ರಾಹ್ಮಣಸ್ಯೈಕಪುತ್ರಕಃ ।
ಅಪ್ರಾಪ್ತಕಾಲಃ ಕಾಲೇನ ನೀತೋ ವೈವಸ್ವತಕ್ಷಯಮ್ ॥ ೧೧
ತಂ ಜೀವಯತ ಭದ್ರಂ ವೋ ನಾನೃತಂ ಕರ್ತುಮರ್ಹಥ ।
ದ್ವಿಜಸ್ಯ ಸಂಶ್ರುತೋಽರ್ಥೋ ಮೇ ಜೀವಯಿಷ್ಯಾಮಿ ತೇ ಸುತಮ್ ॥

---

ವಾಯುದೇವನು ತಂದೆರಚಿದ ಸುಗಂಧಿಯಾದ ದಿವ್ಯಪುಷ್ಪಗಳ ಮಹಾವೃಷ್ಟಿಯಾಯಿತು ಸುಪ್ರೀತರಾದ ದೇವತೆಗಳು ಸತ್ಯಪರಾಕ್ರಮನಾದ ಕಾಕುತ್ಸ್ಥನನ್ನು ನೋಡಿ "ಸೌಮ್ಯ, ದೇವಕಾರ್ಯವನ್ನು ನೀನು ಮಾಡಿದೆ ನಿನಗೆ ಅಪೇಕ್ಷಿತವಾದ ವರವನ್ನು ಕೇಳಿಕೊ ಈ ಶೂದ್ರನು ತಪೋಬಲದಿಂದ ಸ್ವರ್ಗವನ್ನೇರಲು ಅನರ್ಹನು ನಿನ್ನಿಂದ ಈ ಕಾರ್ಯ ಸಾಧ್ಯವಾಯಿತು" ಎಂದರು (೬-೮). ಆಗ ರಾಘವನು ಶಾಂತಚಿತ್ತನಾಗಿ ಕೈಮುಗಿದು ಇಂದ್ರನನ್ನು ನೋಡಿ "ದೇವತೆಗಳು ಪ್ರಸನ್ನರಾದರೆ, ಆ ಬ್ರಾಹ್ಮಣಕುಮಾರನು ಬದುಕಲಿ. ನನಗೆ ಈ ವರವನ್ನು ಅನುಗ್ರಹಿಸಿರಿ ಇದೇ ನನಗೆ ಈಪ್ಸಿತವಾದದ್ದು ಆ ಬ್ರಾಹ್ಮಣನ ಒಬ್ಬನೇ ಪುತ್ರನು ನನ್ನ ಅಪಚಾರದಿಂದ ಗತಿಸಿಹೋಗಿದ್ದಾನೆ. ಮರಣಕಾಲವು ಬರದಿದ್ದರೂ ಮೃತ್ಯುವು ಅವನನ್ನು ಯಮನ ಮನೆಗೆ ಕರದೊಯ್ದಿದೆ (೯-೧೧) ದೇವತೆಗಳೆ, ಆ ಬಾಲಕನನ್ನು ಬದುಕಿಸಿರಿ ನಿಮಗೆ ಶುಭವಾಗಲಿ! ನನ್ನ ಮಾತು ಸುಳ್ಳಾಗದಿರಲಿ ನಿನ್ನ ಮಗನನ್ನು

ರಾಘವಸ್ಯ ತು ತದ್ವಾಕ್ಯಂ ಶ್ರುತ್ವಾ ವಿಬುಧಸತ್ತಮಾಃ ।
ಪ್ರತ್ಯೂಚುೂ ರಾಘವಂ ಪ್ರೀತಾ ದೇವಾಃ ಪ್ರೀತಿಸಮನ್ವಿತಮ್ ॥
ನಿರ್ವೃತೋ ಭವ ಕಾಕುತ್ಸ್ಥ ಸೋಽಸ್ಮಿನ್ನಹನಿ ಬಾಲಕಃ ।
ಜೀವಿತಂ ಪ್ರಾಪ್ತವಾನ್ ಭೂಯಃ ಸಮೇತಶ್ಚಾಪಿ ಬಂಧುಭಿಃ ॥ ೧೪
ಯಸ್ಮಿನ್ ಮುಹೂರ್ತೇ ಕಾಕುತ್ಸ್ಥ ಶೂದ್ರೋಽಯಂ ವಿನಿಪಾತಿತಃ ।
ತಸ್ಮಿನ್ ಮುಹೂರ್ತೇ ಬಾಲೋಽಸೌ ಜೀವೇನ ಸಮಯುಜ್ಯತ ॥ ೧೫
ಸ್ವಸ್ತಿ ಪ್ರಾಪ್ನುಹಿ ಭದ್ರಂ ತೇ ಸಾಧು ಯಾಮ ನರರ್ಷಭ ।
ಅಗಸ್ತ್ಯಸ್ಯಾಶ್ರಮಪದಂ ದ್ರಷ್ಟುಮಿಚ್ಛಾಮ ರಾಘವ ॥ ೧೬
ತಸ್ಯ ದೀಕ್ಷಾ ಸಮಾಪ್ತಾ ಹಿ ಬ್ರಹ್ಮರ್ಷೇಃ ಸುಮಹಾದ್ಯುತೇಃ ।
ದ್ವಾದಶಂ ಹಿ ಗತಂ ವರ್ಷಂ ಜಲಶಯ್ಯಾಂ ಸಮಾಸತಃ ॥ ೧೭
ಕಾಕುತ್ಸ್ಥ ತದ್ಗಮಿಷ್ಯಾಮೋ ಮುನಿಂ ಸಮಭಿನಂದಿತುಮ್ ।
ತ್ವಂ ಚಾಪ್ಯಾಗಚ್ಛ ಭದ್ರಂ ತೇ ದ್ರಷ್ಟುಂ ತಮೃಷಿಸತ್ತಮಮ್ ॥ ೧೮
ಸ ತಥೇತಿ ಪ್ರತಿಜ್ಞಾಯ ದೇವಾನಾಂ ರಘುನಂದನಃ ।
ಆರುರೋಹ ವಿಮಾನಂ ತಂ ಪುಷ್ಪಕಂ ಹೇಮಭೂಷಿತಮ್ ॥ ೧೯

---

ಬದುಕಿಸುವೆನೆಂದು ಆ ದ್ವಿಜನಿಗೆ ಮಾತು ಕೊಟ್ಟಿದ್ದೇನೆ” ಎಂದನು (೧೩). ರಾಘವನ ನುಡಿಯನ್ನು ಕೇಳಿ ದೇವಶ್ರೇಷ್ಠರು ಸಂಪ್ರೀತರಾಗಿ “ಕಾಕುತ್ಸ್ಥ, ಸಮಾಧಾನಗೊಂಡು ಸಂತುಷ್ಟನಾಗು ಆ ಬಾಲಕನು ಈ ದಿನವೇ ಜೀವಂತನಾದನು! ಮತ್ತೆ ತನ್ನ ಬಂಧುಗಳೊಡನೆ ಕೂಡಿಕೊಂಡಿರುವನು ಯಾವ ನಿಮಿಷದಲ್ಲಿ ಈ ಶೂದ್ರತಪಸ್ವಿಯು ಹತನಾದನೋ ಆ ನಿಮಿಷದಲ್ಲಿಯೇ ಬಾಲಕನಿಗೆ ಜೀವ ಬಂದಿತು (೧೪-೧೫) ನಿನಗೆ ಶುಭವಾಗಲಿ ನಾವು ಅಗಸ್ತ್ಯರ ಆಶ್ರಮಕ್ಕೆ ಹೋಗಬೇಕೆಂದಿದ್ದೇವೆ ಆ ಮುನಿಗಳನ್ನು ನೋಡಲು ಬಯಸಿದ್ದೇವೆ ತೇಜಸ್ವಿಗಳಾದ ಆ ಬ್ರಹ್ಮರ್ಷಿಗಳು ಹನ್ನೆರಡು ವರ್ಷಗಳ ಕಾಲ ಜಲಶಯ್ಯೆಯ ದೀಕ್ಷೆಯನ್ನು ವಹಿಸಿದ್ದರು ಆ ದೀಕ್ಷೆಯು ಈಗ ಮುಗಿದಿದೆ (೧೬-೧೭) ರಾಘವ, ಆ ಮುನಿಗಳನ್ನು ಅಭಿನಂದಿಸುವುದಕ್ಕಾಗಿ ಹೋಗುತ್ತೇವೆ ಅವರನ್ನು ಸಂದರ್ಶಿಸಲು ನೀನೂ ಆಗಮಿಸು” ಎಂದರು ರಘುನಂದನನು ಹಾಗೆಯೇ ಆಗಲೆಂದು ಒಪ್ಪಿ ಪುಷ್ಪಕವಿಮಾನವನ್ನು

ತತೋ ದೇವಾಃ ಪ್ರಯಾತಾಸ್ತೇ ವಿಮಾನೈರ್ಬಹುವಿಸ್ತರೈಃ ।
ರಾಮೋಽಪ್ಯನುಜಗಾಮಾಶು ಕುಂಭಯೋನೇಸ್ತಪೋವನಮ್ ॥ ೨೦

ದೃಷ್ಟ್ವಾ ತು ದೇವಾನ್ ಸಂಪ್ರಾಪ್ತಾನಗಸ್ತ್ಯಸ್ತಪಸಾಂ ನಿಧಿಃ ।
ಅರ್ಚಯಾಮಾಸ ಧರ್ಮಾತ್ಮಾ ಸರ್ವಾಂಸ್ತಾನವಿಶೇಷತಃ ॥ ೨೧

ಪ್ರತಿಗೃಹ್ಯ ತತಃ ಪೂಜಾಂ ಸಂಪೂಜ್ಯ ಚ ಮಹಾಮುನಿಮ್ ।
ಜಗ್ಮುಸ್ತೇ ತ್ರಿದಶಾ ಹೃಷ್ಟಾ ನಾಕಪೃಷ್ಠಂ ಸಹಾನುಗೈಃ ॥ ೨೨

ಗತೇಷು ತೇಷು ಕಾಕುತ್ಸ್ಥಃ ಪುಷ್ಪಕಾದವರುಹ್ಯ ಚ ।
ತತೋಽಭಿವಾದಯಾಮಾಸ ಹ್ಯಗಸ್ತ್ಯಮೃಷಿಸತ್ತಮಮ್ ॥ ೨೩

ಸೋಽಭಿವಾದ್ಯ ಮಹಾತ್ಮಾನಂ ಜ್ವಲಂತಮಿವ ತೇಜಸಾ ।
ಆತಿಥ್ಯಂ ಪರಮಂ ಪ್ರಾಪ್ಯ ನಿಷಸಾದ ನರಾಧಿಪಃ ॥ ೨೪

ತಮುವಾಚ ಮಹಾತೇಜಾಃ ಕುಂಭಯೋನಿರ್ಮಹಾತಪಾಃ ।
ಸ್ವಾಗತಂ ತೇ ನರಶ್ರೇಷ್ಠ ದಿಷ್ಟ್ಯಾ ಪ್ರಾಪ್ತೋಽಸಿ ರಾಘವ ॥ ೨೫

ತ್ವಂ ಮೇ ಬಹುಮತೋ ರಾಮ ಗುಣೈರ್ಬಹುಭಿರುತ್ತಮೈಃ ।
ಅತಿಥಿಃ ಪೂಜನೀಯಶ್ಚ ಮಮ ನಿತ್ಯಂ ಹೃದಿ ಸ್ಥಿತಃ ॥ ೨೬

---

ಹತ್ತಿದನು (೧೮-೧೯) ದೇವತೆಗಳು ತಮ್ಮ ವಿಮಾನಗಳಲ್ಲಿ ಕುಳಿತು ಅಗಸ್ತ್ಯರ ತಪೋವನದ ಕಡೆಗೆ ಹೋದರು ರಾಘವನು ಅವರನ್ನು ಹಿಂಬಾಲಿಸಿದನು ತಪೋನಿಧಿಗಳಾದ ಅಗಸ್ತ್ಯರು ಅಲ್ಲಿಗೆ ಬಂದ ದೇವತೆಗಳನ್ನು ನೋಡಿ ಅವರೆಲ್ಲರನ್ನೂ ಸತ್ಕರಿಸಿದರು ದೇವತೆಗಳು ಆ ಮಹರ್ಷಿಗಳನ್ನು ಅರ್ಚಿಸಿ ತಮ್ಮ ಪರಿವಾರದೊಂದಿಗೆ ದೇವಲೋಕಕ್ಕೆ ಹೋದರು (೨೦-೨೨). ಅನಂತರ ಶ್ರೀರಾಮನು ಪುಷ್ಪಕವಿಮಾನದಿಂದ ಇಳಿದುಬಂದು ಅಗಸ್ತ್ಯ ಮಹರ್ಷಿಗಳಿಗೆ ಅಭಿವಾದನೆ ಮಾಡಿದನು ಅವರಿಂದ ಆತಿಥ್ಯವನ್ನು ಸ್ವೀಕರಿಸಿ ಸಮೀಪದಲ್ಲಿ ಕುಳಿತುಕೊಂಡನು (೨೩-೨೪) ಅಗಸ್ತ್ಯಮುನಿಗಳು ಹೀಗೆಂದರು. "ಪುರುಷೋತ್ತಮ, ನಿನಗೆ ಸ್ವಾಗತ ನೀನು ಬಂದದ್ದು ಬಹಳ ಸಂತೋಷಕರವಾಗಿದೆ ಉತ್ತಮವಾದ ಸದ್ಗುಣಗಳಿಂದ ನನಗೆ ಬಹುಮತನಾಗಿರುವೆ. ಅತಿಥಿಯೂ ಸಮ್ಮಾನ್ಯನೂ ಆಗಿರುವೆ ಸದಾ ನನ್ನ

ಸುರಾ ಹಿ ಕಥಯಂತಿ ತ್ವಾಮಾಗತಂ ಶೂದ್ರಘಾತಿನಮ್ ।
ಬ್ರಾಹ್ಮಣಸ್ಯ ತು ಧರ್ಮೇಣ ತ್ವಯಾ ಜೀವಾಪಿತಃ ಸುತಃ ॥ ೨೭

ಉಷ್ಯತಾಂ ಚೇಹ ರಜನೀ ಸಕಾಶೇ ಮಮ ರಾಘವ ।
ಪ್ರಭಾತೇ ಪುಷ್ಪಕೇಣ ತ್ವಂ ಗಂತಾಸಿ ಪುರಮೇವ ಹಿ ॥ ೨೮

ತ್ವಂ ಹಿ ನಾರಾಯಣಃ ಶ್ರೀಮಾಂಸ್ತ್ವಯಿ ಸರ್ವಂ ಪ್ರತಿಷ್ಠಿತಮ್ ।
ತ್ವಂ ಪ್ರಭುಃ ಸರ್ವಭೂತಾನಾಂ ಪುರುಷಸ್ತ್ವಂ ಸನಾತನಃ ॥ ೨೯

ಇದಂ ಚಾಭರಣಂ ಸೌಮ್ಯ ನಿರ್ಮಿತಂ ವಿಶ್ವಕರ್ಮಣಾ ।
ದಿವ್ಯಂ ದಿವ್ಯೇನ ವಪುಷಾ ದೀಪ್ಯಮಾನಂ ಸ್ವತೇಜಸಾ ॥ ೩೦

ಪ್ರತಿಗೃಹ್ಣೀಷ್ವ ಕಾಕುತ್ಸ್ಥ ಮತ್ಪ್ರಿಯಂ ಕುರು ರಾಘವ ।
ದತ್ತಸ್ಯ ಹಿ ಪುನರ್ದಾನೇ ಸುಮಹತ್ ಫಲಮುಚ್ಯತೇ ॥ ೩೧

ಭರಣೇ ಹಿ ಭವಾನ್ ಶಕ್ತಃ ಸೇಂದ್ರಾಣಾಂ ಮರುತಾಮಪಿ ।
ತ್ವಂ ಹಿ ಶಕ್ತಸ್ತಾರಯಿತುಂ ಸೇಂದ್ರಾನಪಿ ದಿವೌಕಸಃ ॥ ೩೨

---

ಹೃದಯದಲ್ಲಿ ನೆಲೆಸಿಬಿಟ್ಟಿದ್ದೀಯೆ! (೨೫-೨೬) ಶೂದ್ರನ ಸಂಹಾರಮಾಡಿ ನೀನು ಬಂದೆಯೆಂಬುದನ್ನು ದೇವತೆಗಳು ನನಗೆ ಹೇಳಿದರು ಬ್ರಾಹ್ಮಣನ ಪುತ್ರನನ್ನು ಧರ್ಮನಿಷ್ಠೆಯಿಂದಲೇ ಬದುಕಿಸಿದ್ದೀಯೆ ಈ ರಾತ್ರಿ ನನ್ನೊಡನೆ ಇಲ್ಲಿ ಉಳಿದುಕೊ ಪ್ರಾತಃಕಾಲ ಪುಷ್ಪಕವಿಮಾನವನ್ನೇರಿ ರಾಜಧಾನಿಗೆ ಹೋಗಬಹುದು (೨೭-೨೮) ರಾಘವ, ನೀನು ಶ್ರೀಮನ್ನಾರಾಯಣನೇ! ಎಲ್ಲವೂ ನಿನ್ನಲ್ಲಿ ನೆಲೆಸಿದೆ ಸಕಲಭೂತಗಳಿಗೂ ಸ್ವಾಮಿಯಾಗಿದ್ದೀಯೆ ಸನಾತನನಾದ ಆದಿಪುರುಷ ನೀನು ಸೌಮ್ಯ, ಈ ಆಭರಣವನ್ನು ಸ್ವೀಕರಿಸು ಈ ದಿವ್ಯಾಭರಣವು ವಿಶ್ವಕರ್ಮನಿಂದ ನಿರ್ಮಿತವಾಗಿದೆ ದಿವ್ಯದೀಪ್ತಿಯಿಂದ ಹೇಗೆ ಹೊಳೆಯುತ್ತಿದೆ! (೨೯-೩೦) ಕಾಕುತ್ಸ್ಥ, ಇದನ್ನು ಸ್ವೀಕರಿಸಿ ನನಗೆ ಸಂತೋಷವನ್ನುಂಟುಮಾಡು ತನಗೆ ದತ್ತವಾದ್ದನ್ನು ಇನ್ನೊಬ್ಬನಿಗೆ ಅರ್ಪಿಸಿದರೆ ಮಹಾಫಲ ಉಂಟು ಇಂದ್ರಾದಿ ದೇವತೆಗಳನ್ನು ಪಾಲಿಸುವ ಸಾಮರ್ಥ್ಯ ನಿನಗುಂಟು ಅವರನ್ನು ವಿಪತ್ತಿನಿಂದ ರಕ್ಷಿಸಲು ಶಕ್ತನಾಗಿ

ತಸ್ಮಾತ್ ಪ್ರದಾಸ್ಯೇ ವಿಧಿವತ್ತತ್ ಪ್ರತೀಚ್ಛ ನರಾಧಿಪ ।
ದಿವ್ಯಮಾಭರಣಂ ಚಿತ್ರಂ ಪ್ರದೀಪ್ತಮಿವ ಭಾಸ್ಕರಮ್ ॥ ೩೩
ಪ್ರತಿಗೃಹ್ಯ ತತೋ ರಾಮಸ್ತದಾಭರಣಮುತ್ತಮಮ್ ।
ಆಗಮಂ ತಸ್ಯ ದೀಪ್ತಸ್ಯ ಪ್ರಷ್ಟುಮೇವೋಪಚಕ್ರಮೇ ॥ ೩೪
ಅತ್ಯದ್ಭುತಮಿದಂ ದಿವ್ಯವಪುಷಾ ಯುಕ್ತಮುತ್ತಮಮ್ ।
ಕಥಂ ಭಗವತಾ ಪ್ರಾಪ್ತಂ ಕುತೋ ವಾ ಕೇನ ವಾಹೃತಮ್ ॥ ೩೫
ಕುತೂಹಲಿತಯಾ ಬ್ರಹ್ಮನ್ ಪೃಚ್ಛಾಮಿ ತ್ವಾಂ ಮಹಾಯಶಃ ।
ಆಶ್ಚರ್ಯಾಣಾಂ ಬಹೂನಾಂ ಹಿ ನಿಧಿಃ ಪರಮಕೋ ಭವಾನ್ ॥ ೩೬
ಏವಂ ಬ್ರುವತಿ ಕಾಕುತ್ಸ್ಥೇ ಮುನಿರ್ವಾಕ್ಯಮಥಾಬ್ರವೀತ್ ।
ಶೃಣು ರಾಮ ಯಥಾ ವೃತ್ತಂ ಪುರಾ ತ್ರೇತಾಯುಗೇ ಯುಗೇ ॥ ೩೭
ರಮಣೀಯಪ್ರದೇಶೇಽಸ್ಮಿನ್ ವನೇ ಯದ್ದೃಷ್ಟವಾನಹಮ್ ।
ಆಶ್ಚರ್ಯಂ ಮೇ ಮಹಾಬಾಹೋ ದಾನಮಾಶ್ರಿತ್ಯ ಕೇವಲಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಟ್ಸಪ್ತತಿತಮಃ ಸರ್ಗಃ

---

ದ್ದೀಯೆ ಆದ್ದರಿಂದ, ಮಹಾರಾಜ, ಈ ಆಭರಣವನ್ನು ವಿಧಿಪೂರ್ವಕವಾಗಿ ಕೊಡುವೆನು, ಸ್ವೀಕರಿಸು ಸೂರ್ಯನಂತೆ ಬೆಳಗುವ ಈ ಅದ್ಭುತವಾದ ಈ ಆಭರಣವನ್ನು ತೆಗೆದುಕೊ" ಎಂದರು (೩೧-೩೩) ಶ್ರೀರಾಮನು ಆಭರಣವನ್ನು ಸ್ವೀಕರಿಸಿ, ಅದು ಅಗಸ್ತ್ಯರಿಗೆ ದೊರಕಿದ ಬಗೆಯನ್ನು ತಿಳಿಯಲಪೇಕ್ಷಿಸಿ "ಮಹರ್ಷಿಗಳೇ, ಈ ಆಭರಣವು ಅತ್ಯದ್ಭುತವಾಗಿದೆ ಇದು ತಮ್ಮ ವಶಕ್ಕೆ ಹೇಗೆ ಬಂದಿತು? ಯಾರು ಏತಕ್ಕಾಗಿ ತಂದು ಕೊಟ್ಟರು? ಕೇವಲ ಕುತೂಹಲದಿಂದ ಕೇಳುತ್ತಿದ್ದೇನೆ ನೀವು ಆಶ್ಚರ್ಯಗಳ ನಿಧಿಯಾಗಿದ್ದೀರಿ" ಎಂದನು (೩೪-೩೬). ಅಗಸ್ತ್ಯರು "ರಾಮ, ಹಿಂದಿನ ತ್ರೇತಾಯುಗದಲ್ಲಿ ನಡೆದ ಒಂದು ವೃತ್ತಾಂತವನ್ನು ಕೇಳು ರಮಣೀಯವಾದ ಈ ವನದಲ್ಲಿ ನಾನು ನೋಡಿದ ವಿಷಯವಿದು ಆಭರಣವನ್ನು ನನಗೆ ಕೊಟ್ಟ ಬಗೆ ಕುತೂಹಲಕರವಾಗಿದೆ" ಎಂದರು (೩೭-೩೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತಾರನೆಯ ಸರ್ಗ

## ಸಪ್ತಸಪ್ತತಿತಮಃ ಸರ್ಗಃ

### ಸ್ವರ್ಗಿಪ್ರಶ್ನಃ

ಪುರಾ ತ್ರೇತಾಯುಗೇ ರಾಮ ಹ್ಯರಣ್ಯಂ ಬಹುವಿಸ್ತರಮ್ ।
ಸಮಂತಾದ್ಯೋಜನಶತಂ ನಿರ್ಮೃಗಂ ಪಕ್ಷಿವರ್ಜಿತಮ್ ॥ ೧

ತಸ್ಮಿನ್ನಿರ್ಮಾನುಷೇಽರಣ್ಯೇ ಕುರ್ವಾಣಸ್ತಪ ಉತ್ತಮಮ್ ।
ಅಹಮಾಕ್ರಮಿತುಂ ಸೌಮ್ಯ ತದರಣ್ಯಮುಪಾಗಮಮ್ ॥ ೨

ತಸ್ಯ ರೂಪಮರಣ್ಯಸ್ಯ ನಿರ್ದೇಷ್ಟುಂ ನ ಶಶಾಕ ಹ ।
ಫಲೈರ್ಮೂಲೈಃ ಸುಖಾಸ್ವಾದೈರ್ಬಹುರೂಪೈಶ್ಚ ಪಾದಪೈಃ ॥ ೩

ತಸ್ಯಾರಣ್ಯಸ್ಯ ಮಧ್ಯೇ ತು ಸರೋ ಯೋಜನಮಾಯತಮ್ ।
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಮ್ ॥ ೪

## ಸರ್ಗ ೭೭

### ಸ್ವರ್ಗದಿಂದ ಇಳಿದುಬಂದು ಶವವನ್ನು ಭಕ್ಷಿಸುತ್ತಿದ್ದ ಒಬ್ಬ ಪುರುಷನನ್ನು ಕಂಡು ಅಗಸ್ತ್ಯರ ಪ್ರಶ್ನೆ

ಅಗಸ್ತ್ಯಮುನಿಗಳು ಹೇಳಿದರು "ಶ್ರೀರಾಮ, ಹಿಂದಿನ ತ್ರೇತಾಯುಗದಲ್ಲಿ ನೂರಾರು ಯೋಜನಗಳವರೆಗೆ ಹರಡಿದ ಬಹುವಿಸ್ತಾರವಾದ ಒಂದು ಅರಣ್ಯವಿತ್ತು ಅಲ್ಲಿ ಮೃಗಗಳಾಗಲಿ ಪಕ್ಷಿಗಳಾಗಲಿ ಇರಲಿಲ್ಲ ಮನುಷ್ಯರ ಸುಳಿವೂ ಇರಲಿಲ್ಲ ಆ ವನದ ಒಂದು ಪಾರ್ಶ್ವದಲ್ಲಿ ತಪಸ್ಸನ್ನಾಚರಿಸುತ್ತಿದ್ದ ನಾನು ಒಂದುಸಲ ವನವನ್ನು ಪೂರ್ಣವಾಗಿ ನೋಡಬೇಕೆಂದು ಸಂಚರಿಸುತ್ತ ಹೊರಟೆನು (೧-೨) ರುಚಿಕರವಾದ ಫಲಮೂಲಗಳಿಂದಲೂ ವಿವಿಧವೃಕ್ಷಗಳಿಂದಲೂ ಶೋಭಿಸುತ್ತಿದ್ದ ಆ ಅಡವಿಯನ್ನು ವರ್ಣಿಸಲು ಶಕ್ಯವಿಲ್ಲ ಅಡವಿಯ ನಡುವೆ ಒಂದು ಯೋಜನ ವಿಸ್ತೀರ್ಣವಾದ ಕೊಳವಿತ್ತು ಅದರಲ್ಲಿ ಹಂಸ, ಕಾರಂಡವ, ಚಕ್ರವಾಕಪಕ್ಷಿಗಳು ನೆಲೆಸಿದ್ದವು ! (೩-೪)

ಪದ್ಮೋತ್ಪಲಸಮಾಕೀರ್ಣಂ ಸಮತಿಕ್ರಾಂತಶೈವಲಮ್ ।
ತದಾಶ್ಚರ್ಯಮಿವಾತ್ಯರ್ಥಂ ಸುಖಾಸ್ವಾದಮನುತ್ತಮಮ್ ॥ ೫

ಅರಜಸ್ಕಂ ತಥಾಕ್ಷೋಭ್ಯಂ ಶ್ರೀಮತ್ಪಕ್ಷಿಗಣಾಯುತಮ್ ।
ಸಮೀಪೇ ತಸ್ಯ ಸರಸೋ ಮಹದದ್ಭುತಮಾಶ್ರಮಮ್ ॥ ೬

ಪುರಾಣಂ ಪುಣ್ಯಮತ್ಯರ್ಥಂ ತಪಸ್ವಿಜನವರ್ಜಿತಮ್ ।
ತತ್ರಾಹಮವಸಂ ರಾತ್ರಿಂ ನೈದಾಘೀಂ ಪುರುಷರ್ಷಭ ॥ ೭

ಪ್ರಭಾತೇ ಕಾಲ್ಯಮುತ್ಥಾಯ ಸರಸ್ತದುಪಚಕ್ರಮೇ ।
ಅಥಾಪಶ್ಯಂ ಶವಂ ತತ್ರ ಸುಪುಷ್ಟಮಜರಂ ಕ್ವಚಿತ್ ॥ ೮

ಪಂಕ್ತಿಭೇದೇನ ಪುಷ್ಟಾಂಗಂ ಸಮಾಶ್ರಿತಸರೋವರಮ್ ।
ತಿಷ್ಠಂತಂ ಪರಯಾ ಲಕ್ಷ್ಮ್ಯಾ ತಸ್ಮಿಂಸ್ತೋಯಾಶಯೇ ನೃಪ ॥ ೯

ತಮರ್ಥಂ ಚಿಂತಯಾನೋಽಹಂ ಮುಹೂರ್ತಂ ತತ್ರ ರಾಘವ ।
ಉಷಿತೋಽಸ್ಮಿ ಸರಸ್ತೀರೇ ಕಿಂ ನ್ವಿದಂ ಸ್ಯಾದಿತಿ ಪ್ರಭೋ ॥ ೧೦

---

ತಾವರೆ ನೈದಿಲೆಗಳು ತುಂಬಿದ್ದವು ಕೊಳದಲ್ಲಿ ಪಾಚಿ ಇರಲಿಲ್ಲ ಸುಖವಾಗಿ ನೀರನ್ನು ಕುಡಿಯಬಹುದಾಗಿತ್ತು ನೋಡಿದರೆ ಅಚ್ಚರಿಯಾಗುತ್ತಿತ್ತು ನೀರು ನಿರ್ಮಲವಾಗಿಯೂ ಅಪಾರವಾಗಿಯೂ ಇದ್ದು ಸುಂದರ ಪಕ್ಷಿಗಳಿಂದ ಯುಕ್ತವಾಗಿತ್ತು ಆ ಸರಸ್ಸಿನ ಸನಿಹದಲ್ಲಿ ಅದ್ಭುತವಾದ ಒಂದು ದೊಡ್ಡ ಆಶ್ರಮವಿತ್ತು (೫–೬) ಅದು ಪ್ರಾಚೀನವೂ ಪವಿತ್ರವೂ ಆಗಿ ಕಂಗೊಳಿಸಿದರೂ ಅದರಲ್ಲಿ ಯಾವ ತಪಸ್ವಿಗಳೂ ಇರಲಿಲ್ಲ! ಅಲ್ಲಿ ನಾನು ಬೇಸಿಗೆಯ ಒಂದು ರಾತ್ರಿಯನ್ನು ಕಳೆದೆನು ಬೆಳಗಿನ ಜಾವದಲ್ಲಿ ಪ್ರಾತರ್ವಿಧಿಗೋಸ್ಕರ ಕೊಳದ ಬಳಿಗೆ ಹೋದೆನು ಅಲ್ಲಿ ಪುಷ್ಟವೂ ನಿರ್ಮಲವೂ ಆದ ಒಂದು ಶವವು ಕಾಣಿಸಿತು (೭–೮) ರಾಘವ, ಅದರ ಅಂಗಗಳೆಲ್ಲವೂ ಕ್ರಮಾನುಗುಣವಾಗಿ ಪುಷ್ಟವಾಗಿದ್ದವು ಅತ್ಯಂತ ಕಾಂತಿಯುಕ್ತವಾಗಿ ಕೊಳದಲ್ಲಿ ತೇಲುತ್ತಿದ್ದ ಆ ಶವವನ್ನು ನೋಡಿ "ಆಹಾ! ಏನಿದು!" ಎಂದು ಚಿಂತಿಸುತ್ತ ಸರಸ್ತೀರ

ಅಥಾಪಶ್ಯಂ ಮುಹೂರ್ತೇನ ದಿವ್ಯಮದ್ಭುತದರ್ಶನಮ್ ।
ವಿಮಾನಂ ಪರಮೋದಾರಂ ಹಂಸಯುಕ್ತಂ ಮನೋಜವಮ್ ॥ ೧೧
ಅತ್ಯರ್ಥಂ ಸ್ವರ್ಗಿಣಂ ತತ್ರ ವಿಮಾನೇ ರಘುನಂದನ ।
ಉಪಾಸ್ತೇಽಪ್ಸರಸಾಂ ವೀರ ಸಹಸ್ರಂ ದಿವ್ಯಭೂಷಣಮ್ ॥ ೧೨
ಗಾಯಂತಿ ದಿವ್ಯಗೇಯಾನಿ ವಾದಯಂತಿ ತಥಾಪರಾಃ ।
ಕ್ಷ್ವೇಲಯಂತಿ ತಥಾ ಚಾನ್ಯಾ ನೃತ್ಯಂತಿ ಚ ತಥಾಪರಾಃ ॥ ೧೩
ಅಪರಾಶ್ಚಂದ್ರರಶ್ಮ್ಯಾಭೈರ್ಹೇಮದಂಡೈಶ್ಚ ಚಾಮರೈಃ ।
ದೋಧೂಯುರ್ವದನಂ ತಸ್ಯ ಪುಂಡರೀಕನಿಭೇಕ್ಷಣಮ್ ॥ ೧೪
ತತಃ ಸಿಂಹಾಸನಂ ತ್ಯಕ್ತ್ವಾ ಮೇರುಕೂಟಮಿವಾಂಶುಮಾನ್ ।
ಪಶ್ಯತೋ ಮೇ ತದಾ ರಾಮ ವಿಮಾನಾದವರುಹ್ಯ ಚ ॥ ೧೫
ತಂ ಶವಂ ಭಕ್ಷಯಾಮಾಸ ಸ ಸ್ವರ್ಗೀ ರಘುನಂದನ ।
ತಥಾ ಭುಕ್ತ್ವಾ ಯಥಾಕಾಮಂ ಮಾಂಸಂ ಬಹುಸುಪೀವರಮ್ ॥

---

ದಲ್ಲಿ ಸ್ವಲ್ಪ ಹೊತ್ತು ನಿಂತುಕೊಂಡೆನು (೯-೧೦) ಅಷ್ಟರಲ್ಲಿ ಆಶ್ಚರ್ಯ ಕರವೂ ಭವ್ಯವೂ ಆದ ದಿವ್ಯವಿಮಾನವೊಂದು ಅಲ್ಲಿಗೆ ಬಂದಿತು ಅದು ಹಂಸಯುಕ್ತವಾಗಿತ್ತು ಮನೋವೇಗದಲ್ಲಿ ಸಂಚರಿಸುತ್ತಿತ್ತು ಆ ವಿಮಾನ ದಲ್ಲಿ, ರಘುನಂದನ, ಅತ್ಯಂತರೂಪಶಾಲಿಯೂ ಸ್ವರ್ಗನಿವಾಸಿಯೂ ಆದ ಒಬ್ಬ ಪುರುಷನನ್ನು ನೋಡಿದೆನು ದಿವ್ಯಭೂಷಣಗಳನ್ನು ಧರಿಸಿದ ಸಾವಿರಾರು ಅಪ್ಸರೆಯರು ಆತನನ್ನು ಸೇವಿಸುತ್ತಿದ್ದರು (೧೧-೧೨) ಅಪ್ಸರೆಯರಲ್ಲಿ ಕೆಲವರು ದಿವ್ಯಗಾನಗಳನ್ನು ಹಾಡುತ್ತಲೂ ಕೆಲವರು ವಾದ್ಯಗಳನ್ನು ನುಡಿ ಸುತ್ತಲೂ ಆಡುತ್ತಲೂ ಕುಣಿಯುತ್ತಲೂ ಇದ್ದರು ಇನ್ನು ಕೆಲವರು ಪುಂಡರೀಕಾಕ್ಷನಾದ ಆ ಪುರುಷನ ಮುಖದ ಬಳಿ, ಸುವರ್ಣದಂಡಯುಕ್ತ ವಾಗಿ ಚಂದ್ರಕಿರಣಗಳಂತಿರುವ ಚಾಮರಗಳನ್ನು ಬೀಸುತ್ತಿದ್ದರು (೧೩-೧೪) ರಾಮ, ಆ ದಿವ್ಯಪುರುಷನು ಸಿಂಹಾಸನವನ್ನು ಬಿಟ್ಟು ಮೇಲೆದ್ದನು ಆಗ ಮೇರುಶೃಂಗವನ್ನು ತ್ಯಜಿಸಿ ಸೂರ್ಯನು ಮೇಲೆದ್ದಂತೆ ಕಾಣಿಸಿತು! ರಾಘವ, ಆತನು ವಿಮಾನದಿಂದಿಳಿದು ಬಂದು, ನಾನು ನೋಡುತ್ತಿರು ವಾಗಲೇ, ಕೊಳದಲ್ಲಿದ್ದ ಹೆಣವನ್ನು ತಿನ್ನಲಾರಂಭಿಸಿದನು! (೧೫-೧೬)

ಅವತೀರ್ಯ ಸರಃ ಸ್ವರ್ಗೀ ಸಂಸ್ಪೃಷ್ಟ್ವಮುಪಚಕ್ರಮೇ ।
ಉಪಸ್ಪೃಶ್ಯ ಯಥಾನ್ಯಾಯಂ ಸ ಸ್ವರ್ಗೀ ರಘುಪುಂಗವ ॥ ೧೭

ಆರೋಢುಮುಪಚಕ್ರಾಮ ವಿಮಾನವರಮುತ್ತಮಮ್ ।
ತಮಹಂ ದೇವಸಂಕಾಶಮಾರೋಹಂತಮುದೀಕ್ಷ್ಯ ವೈ ॥ ೧೮

ವಿಮಾನಮಬ್ರವಂ ವಾಕ್ಯಂ ಸ್ವರ್ಗಿಣಂ ಪುರುಷರ್ಷಭ ।
ಕೋ ಭವಾನ್ ದೇವಸಂಕಾಶ ಆಹಾರಶ್ಚ ವಿಗರ್ಹಿತಃ ॥ ೧೯

ತ್ವಯೇದಂ ಭುಜ್ಯತೇ ಸೌಮ್ಯ ಕಿಮರ್ಥಂ ವಕ್ತುಮರ್ಹಸಿ ।
ಕಸ್ಯ ಸ್ಯಾದೀದೃಶೋ ಭಾವ ಆಹಾರೋ ದೇವ ಸಂಮತಃ ॥ ೨೦

ಆಶ್ಚರ್ಯಂ ವರ್ತತೇ ಸೌಮ್ಯ ಶ್ರೋತುಮಿಚ್ಛಾಮಿ ತತ್ತ್ವತಃ ।
ನಾಹಮೌಪಯಿಕಂ ಮನ್ಯೇ ತವ ಭಕ್ಷ್ಯಮಿದಂ ಶವಮ್ ॥ ೨೧

ಇತ್ಯೇವಮುಕ್ತಃ ಸ ನರೇಂದ್ರ ನಾಕೀ
ಕೌತೂಹಲಾತ್ ಸೂನೃತಯಾ ಗಿರಾ ಚ ।

---

ಸುಪುಷ್ಟವಾದ ಮಾಂಸವನ್ನು ಆತನು ಯಥೇಷ್ಟವಾಗಿ ಕಿತ್ತು ತಿಂದು, ಸರಸ್ಸಿನಲ್ಲಿಳಿದು ಕೈತೊಳೆದು ಆಚಮನಮಾಡಿದನು ಅನಂತರ ದಿವ್ಯವಿಮಾನವನ್ನೇರಲು ಹೊರಟನು ರಘುನಾಥ, ದೇವಸಂಕಾಶನಾದ ಆ ಪುರುಷನು ವಿಮಾನವನ್ನು ಹತ್ತಲು ತೊಡಗಿದಾಗ, ನಾನು ಹೀಗೆ ಕೇಳಿದೆನು. "ದೇವತೆಯಂತೆ ತೋರುವ ಎಲೈ ಪುರುಷನೆ, ಯಾರು ನೀನು? ನಿನ್ನ ಆಹಾರವು ನಿಂದ್ಯವಾಗಿದೆಯಲ್ಲ! (೧೭-೧೯) ಸೌಮ್ಯ, ಇಂತಹ ಆಹಾರವನ್ನೇಕೆ ಭಕ್ಷಿಸುವೆ? ಹೇಳು ಎಲೈ ದಿವ್ಯಪುರುಷನೆ, ಈ ಬಗೆಯ ಅಭಿರುಚಿಯೂ ಈ ಬಗೆಯ ಆಹಾರವೂ ಯಾರಿಗೆ ಸಮ್ಮತವಾದೀತು? ಇದು ವಿಸ್ಮಯಕಾರಿಯಾಗಿದೆ ಯಥಾರ್ಥವೇನೆಂದು ತಿಳಿಯಲು ಬಯಸುತ್ತೇನೆ ಈ ಹೆಣವು ನಿನಗೆ ಆಹಾರವಾಗಿರುವುದು ಸಹಜವಲ್ಲವೆಂದೇ ನಾನು ತಿಳಿಯುತ್ತೇನೆ" ಎಂದು ಕೇಳಿದೆನು (೨೦-೨೧) ಮಹಾರಾಜ, ಹೀಗೆ ನಾನು ಯುಕ್ತವೂ

ಶ್ರುತ್ವಾ ಚ ವಾಕ್ಯಂ ಮಮ ಸರ್ವಮೇತತ್
ಸರ್ವಂ ತಥಾ ಚಾಕಥಯನ್ಮಮೇತಿ ॥ ೨೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತಸಪ್ತತಿತಮಃ ಸರ್ಗಃ

---

## ಅಷ್ಟಸಪ್ತತಿತಮಃ ಸರ್ಗಃ

### ಆಭರಣಾಗಮಃ

ಶ್ರುತ್ವಾ ತು ಭಾಷಿತಂ ವಾಕ್ಯಂ ಮಮ ರಾಮ ಶುಭಾಕ್ಷರಮ್ ।
ಪ್ರಾಂಜಲಿಃ ಪ್ರತ್ಯುವಾಚೇದಂ ಸ ಸ್ವರ್ಗೀ ರಘುನಂದನ ॥ ೧

ಶೃಣು ಬ್ರಹ್ಮನ್ ಪುರಾ ವೃತ್ತಂ ಮಮೈತತ್ ಸುಖದುಃಖಯೋಃ ।
ಅನತಿಕ್ರಮಣೀಯಂ ಹಿ ಯಥಾ ಪೃಚ್ಛಸಿ ಮಾಂ ದ್ವಿಜ ॥ ೨

---

ಮಧುರವೂ ಆದ ಮಾತಿನಿಂದ ಪ್ರಶ್ನೆಮಾಡಲು, ಅದನ್ನು ಕೇಳಿ ಆ ದಿವ್ಯ ಪುರುಷನು ತನ್ನ ವೃತ್ತಾಂತವೆಲ್ಲವನ್ನೂ ನನಗೆ ಈ ರೀತಿಯಲ್ಲಿ ಹೇಳಿದನು" (೨೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತೇಳನೆಯ ಸರ್ಗ

---

## ಸರ್ಗ ೭೮

ದಿವ್ಯಪುರುಷನ ಹೇಳಿಕೆ　ಅಗಸ್ತ್ಯದರ್ಶನದಿಂದ ಉದ್ಧಾರ　ಆಭರಣ ದಾನ

ಅಗಸ್ತ್ಯರು ಮುಂದುವರಿಸಿದರು. "ರಘುನಾಥ, ಶುಭಕರವಾದ ನನ್ನ ಪ್ರಶ್ನೆಯನ್ನಾಲಿಸಿ ಆ ಸ್ವರ್ಗನಿವಾಸಿಯು ಪ್ರಾಂಜಲಿಯಾಗಿ ಹೀಗೆಂದನು. 'ಓ ಬ್ರಹ್ಮರ್ಷಿಗಳೇ, ನನ್ನ ಸುಖದುಃಖಗಳ ವೃತ್ತಾಂತವನ್ನು ಕೇಳಿರಿ ಶವಭಕ್ಷಣದ ಕಾರಣವನ್ನು ಕೇಳುತ್ತಿದ್ದೀರಿ ಅದು ದುರ್ಲಂಘ್ಯ

*

ಪುರಾ ವೈದರ್ಭಕೋ ರಾಜಾ ಪಿತಾ ಮಮ ಮಹಾಯಶಾಃ ।
ಸುದೇವ ಇತಿ ವಿಖ್ಯಾತಸ್ತ್ರಿಷು ಲೋಕೇಷು ವೀರ್ಯವಾನ್ ॥ ೩

ತಸ್ಯ ಪುತ್ರದ್ವಯಂ ಬ್ರಹ್ಮನ್ ದ್ವಾಭ್ಯಾಂ ಸ್ತ್ರೀಭ್ಯಾಮಜಾಯತ ।
ಅಹಂ ಶ್ವೇತ ಇತಿ ಖ್ಯಾತೋ ಯವೀಯಾನ್ ಸುರಥೋಽಭವತ್ ॥ ೪

ತತಃ ಪಿತರಿ ಸ್ವರ್ಯಾತೇ ಪೌರಾ ಮಾಮಭ್ಯಷೇಚಯನ್ ।
ತತ್ರಾಹಂ ಕೃತವಾನ್ ರಾಜ್ಯಂ ಧರ್ಮ್ಯಂ ಚ ಸುಸಮಾಹಿತಃ ॥ ೫

ಏವಂ ವರ್ಷಸಹಸ್ರಾಣಿ ಸಮತೀತಾನಿ ಸುವ್ರತ ।
ರಾಜ್ಯಂ ಕಾರಯತೋ ಬ್ರಹ್ಮನ್ ಪ್ರಜಾ ಧರ್ಮೇಣ ರಕ್ಷತಃ ॥ ೬

ಸೋಽಹಂ ನಿಮಿತ್ತೇ ಕಸ್ಮಿಂಶ್ಚಿದ್ವಿಜ್ಞಾತಾಯುರ್ದ್ವಿಜೋತ್ತಮ ।
ಕಾಲಧರ್ಮಂ ಹೃದಿ ನ್ಯಸ್ಯ ತತೋ ವನಮುಪಾಗಮಮ್ ॥ ೭

ಸೋಽಹಂ ವನಮಿದಂ ದುರ್ಗಂ ಮೃಗಪಕ್ಷಿವಿವರ್ಜಿತಮ್ ।
ತಪಶ್ಚರ್ತುಂ ಪ್ರವಿಷ್ಟೋಽಸ್ಮಿ ಸಮೀಪೇ ಸರಸಃ ಶುಭೇ ॥ ೮

---

ವಾಗಿ ಪರಿಣಮಿಸಿತು (೧-೨) ಹಿಂದೆ ಸುದೇವನೆಂಬ ವಿದರ್ಭರಾಜನು ನನ್ನ ತಂದೆಯಾಗಿದ್ದನು ಆ ವೀರನು ಮೂರು ಲೋಕಗಳಲ್ಲಿಯೂ ವಿಖ್ಯಾತನಾಗಿದ್ದನು ಅವನಿಗೆ ಇಬ್ಬರು ಪತ್ನಿಯರಲ್ಲಿ ಇಬ್ಬರು ಪುತ್ರರು ಜನಿಸಿದರು. ನನಗೆ ಶ್ವೇತನೆಂದೂ ನನ್ನ ತಮ್ಮನಿಗೆ ಸುರಥನೆಂದೂ ಹೆಸರಿತ್ತು (೩-೪) ತಂದೆಯು ಸ್ವರ್ಗಸ್ಥನಾಗಲು ಪೌರರು ನನಗೆ ಪಟ್ಟಾಭಿಷೇಕಮಾಡಿದರು. ನಾನು ಸದಾ ಜಾಗ್ರತನಾಗಿ ಧರ್ಮನಿಷ್ಠೆಯಿಂದ ರಾಜ್ಯವನ್ನು ಪರಿಪಾಲಿಸಿದೆನು ಪ್ರಜಗಳನ್ನು ಧರ್ಮಪೂರ್ವಕವಾಗಿ ಸಂರಕ್ಷಿಸುತ್ತ ರಾಜ್ಯವನ್ನು ನಡೆಸುತ್ತಿರಲು ಅನೇಕ ಸಾವಿರ ವರ್ಷಗಳು ಕಳೆದವು (೫-೬) ಹೇ ಬ್ರಾಹ್ಮಣೋತ್ತಮರೆ, ಹೀಗಿರಲು ಒಂದಾನೊಂದು ನಿಮಿತ್ತದಿಂದ ನನ್ನ ಆಯುಸ್ಸಿನ ಅವಧಿ ಎಷ್ಟೆಂದು ನನಗೆ ತಿಳಿಯಿತು ಕಾಲಧರ್ಮಕ್ಕೆ ನಾನು ಸಿಗುವೆನೆಂದು ನಿಶ್ಚಯಿಸಿ ಈ ವನಕ್ಕೆ ಬಂದೆನು ದುರ್ಗಮವೂ ಮೃಗಪಕ್ಷಿಶೂನ್ಯವೂ ಆದ ಈ ಅರಣ್ಯಕ್ಕೆ ಬಂದು ಸರಸ್ಸಿನ ತೀರದಲ್ಲಿ ತಪಸ್ಸು ಮಾಡ

ಭ್ರಾತರಂ ಸುರಥಂ ರಾಜ್ಯೇ ಹ್ಯಭಿಷಿಚ್ಯ ಮಹೀಪತಿಮ್ ।
ಇದಂ ಸರಃ ಸಮಾಸಾದ್ಯ ತಪಸ್ತಪ್ತಂ ಮಯಾ ಚಿರಮ್ ॥ ೯

ಸೋಽಹಂ ವರ್ಷಸಹಸ್ರಾಣಿ ತಪಸ್ತ್ರೀಣಿ ಮಹಾವನೇ ।
ತಪ್ತ್ವಾ ಸುದುಷ್ಕರಂ ಪ್ರಾಪ್ತೋ ಬ್ರಹ್ಮಲೋಕಮನುತ್ತಮಮ್ ॥

ತಸ್ಯ ಮೇ ಸ್ವರ್ಗಭೂತಸ್ಯ ಕ್ಷುತ್ಪಿಪಾಸೇ ದ್ವಿಜೋತ್ತಮ ।
ಬಾಧೇತೇ ಪರಮೋದಾರ ತತೋಽಹಂ ವ್ಯಥಿತೇಂದ್ರಿಯಃ ॥ ೧೧

ಗತ್ವಾ ತ್ರಿಭುವನಶ್ರೇಷ್ಠಂ ಪಿತಾಮಹಮುವಾಚ ಹ ।
ಭಗವನ್ ಬ್ರಹ್ಮಲೋಕೋಽಯಂ ಕ್ಷುತ್ಪಿಪಾಸಾವಿವರ್ಜಿತಃ ॥ ೧೨

ಕಸ್ಯಾಯಂ ಕರ್ಮಣಃ ಪಾಕಃ ಕ್ಷುತ್ಪಿಪಾಸಾನುಗೋ ಹ್ಯಹಮ್ ।
ಆಹಾರಃ ಕಶ್ಚ ಮೇ ದೇವ ತನ್ಮೇ ಬ್ರೂಹಿ ಪಿತಾಮಹ ॥ ೧೩

ಪಿತಾಮಹಸ್ತು ಮಾಮಾಹ ತವಾಹಾರಃ ಸುದೇವಜ ।
ಸ್ವಾದೂನಿ ಸ್ವಾನಿ ಮಾಂಸಾನಿ ತಾನಿ ಭಕ್ಷಯ ನಿತ್ಯಶಃ ॥ ೧೪

---

ಲಾರಂಭಿಸಿದೆನು (೭-೮) ತಮ್ಮನಾದ ಸುರಥನಿಗೆ ರಾಜ್ಯವನ್ನಿತ್ತು ಪಟ್ಟಾಭಿಷೇಕಮಾಡಿ, ಈ ಸರಸ್ಸಿನ ಬಳಿ ದೀರ್ಘಕಾಲ ತಪಸ್ಸನ್ನಾಚರಿಸಿದೆನು ಈ ಗೊಂಡಾರಣ್ಯದಲ್ಲಿ ಮೂರು ಸಾವಿರ ವರ್ಷಗಳವರೆಗೆ ದುಷ್ಕರವಾದ ತಪಸ್ಸನ್ನಾಚರಿಸಿ ಶ್ರೇಷ್ಠವಾದ ಬ್ರಹ್ಮಲೋಕವನ್ನು ಪಡೆದೆನು (೯-೧೦) ಹೀಗೆ ಬ್ರಹ್ಮಲೋಕವನ್ನು ನೇರಿದರೂ ನನಗೆ ಹಸಿವು ಬಾಯಾರಿಕೆಗಳ ಬಾಧೆ ತಪ್ಪಲಿಲ್ಲ ಅದರಿಂದ ನನ್ನ ಮನಸ್ಸಿಗೆ ಬಹಳ ಯಾತನೆಯಾಯಿತು ಆಗ ನಾನು ಲೋಕೇಶ್ವರನಾದ ಬ್ರಹ್ಮದೇವನನ್ನು ಕಂಡು "ಸ್ವಾಮಿ, ಬ್ರಹ್ಮಲೋಕದಲ್ಲಿ ಕ್ಷುತ್‌ಪಿಪಾಸೆಗಳಿಲ್ಲ ಆದರೆ ನನ್ನ ಕರ್ಮವಿಪಾಕವೇನಿದ್ದೀತು? ಸದಾ ಹಸಿವು ಬಾಯಾರಿಕೆಗಳು ನನ್ನನ್ನು ಕಾಡುತ್ತಿವೆ ಹೇ ದೇವ, ನನಗೆ ಆಹಾರವೇನು? ಹೇಳಬೇಕು" ಎಂದು ಕೇಳಿದೆನು (೧೧-೧೩) ಆಗ ಪಿತಾಮಹನು "ಎಲೈ ಸುದೇವಪುತ್ರನೆ, ನಿನ್ನ ಮಾನುಷದೇಹದಲ್ಲಿರುವ ಮಾಂಸಖಂಡಗಳು ನಿನಗೆ ರುಚಿಕರವಾಗಿರುತ್ತವೆ ನಿತ್ಯವೂ ಹೋಗಿ ಅವನ್ನು ತಿನ್ನು! ಉತ್ತಮ

ಸ್ವಶರೀರಂ ತ್ವಯಾ ಪುಷ್ಟಂ ಕುರ್ವತಾ ತಪ ಉತ್ತಮಮ್ ।
ಅನುಪ್ತಂ ರೋಹತೇ ಶ್ವೇತ ನ ಕದಾಚಿನ್ಮಹಾಮತೇ ॥ ೧೫

ತೃಪ್ತಿರ್ನ ತೇಽಸ್ತಿ ಸೂಕ್ಷ್ಮಾಪಿ ವನೇ ಸತ್ತ್ವನಿಷೇವಿತೇ ।
ಪುರಾ ತ್ವಾಂ ಭಿಕ್ಷಮಾಣಾಯ ಭಿಕ್ಷಾ ವೈ ಯತಯೇ ನೃಪ ॥ ೧೬

ನ ಹಿ ದತ್ತಾ ತ್ವಯೇಂದ್ರಾಭ ಯಸ್ಮಾದತಿಥಯೇಽಪಿ ವಾ ।
ದತ್ತಂ ನ ತೇಽಸ್ತಿ ಸೂಕ್ಷ್ಮೋಽಪಿ ತಪ ಏವ ನಿಷೇವಸೇ ॥ ೧೭

ತೇನ ಸ್ವರ್ಗಗತೋ ವತ್ಸ ಬಾಧ್ಯಸೇ ಕ್ಷುತ್ಪಿಪಾಸಯಾ ।
ಸ ತ್ವಂ ಸುಪುಷ್ಟಮಾಹಾರೈಃ ಸ್ವಶರೀರಮನುತ್ತಮಮ್ ॥ ೧೮

ಭಕ್ಷಯಿತ್ವಾಮೃತರಸಂ ತೇನ ತೃಪ್ತಿರ್ಭವಿಷ್ಯತಿ ।
ಯದಾ ತು ತದ್ವನಂ ಶ್ವೇತ ಅಗಸ್ತ್ಯಃ ಸುಮಹಾನೃಷಿಃ ॥ ೧೯

ಆಗಮಿಷ್ಯತಿ ದುರ್ಧರ್ಷಸ್ತದಾ ಕೃಚ್ಛ್ರಾದ್ವಿಮೋಕ್ಷ್ಯಸೇ ।
ಸ ಹಿ ತಾರಯಿತುಂ ಸೌಮ್ಯ ಶಕ್ತಃ ಸುರಗಣಾನಪಿ ॥ ೨೦

---

ವಾದ ತಪಸ್ಸನ್ನಾಚರಿಸುವಾಗ ನಿನ್ನ ದೇಹವನ್ನು ಚೆನ್ನಾಗಿ ಬೆಳೆಸಿದ್ದೀಯೆ ಎಲೈ ಶ್ವೇತ, ಬೀಜವನ್ನು ಬಿತ್ತದಿದ್ದರೆ ಎಂದಿಗಾದರೂ ಬೆಳೆಯುವುದುಂಟೆ ? (೧೪-೧೫). ಪ್ರಾಣಿಗಳು ಜೀವಿಸಬಲ್ಲ ಅರಣ್ಯದಲ್ಲಿ ನಿನಗೆ ಸ್ವಲ್ಪವೂ ತೃಪ್ತಿಯಾಗಲಿಲ್ಲ ಭಿಕ್ಷೆಯನ್ನು ಬೇಡಲು ಬಂದ ಯತಿಯೊಬ್ಬನಿಗೆ ನೀನು ಭಿಕ್ಷೆಯನ್ನು ನೀಡಲಿಲ್ಲ ಯಾವ ಅತಿಥಿಗೂ ಏನನ್ನೂ ಕೊಡಲಿಲ್ಲ ಬರಿಯ ತಪಸ್ಸನ್ನು ಮಾತ್ರ ಆಚರಿಸಿದೆ (೧೬-೧೭) ಆದ್ದರಿಂದ, ವತ್ಸ, ಪರಮಸ್ವರ್ಗವೆನಿಸಿದ ಈ ಬ್ರಹ್ಮಲೋಕಕ್ಕೆ ಬಂದರೂ ಕ್ಷುತ್‌ಪಿಪಾಸೆಗಳು ನಿನಗೆ ತಪ್ಪಲಿಲ್ಲ ಒಳ್ಳೆಯ ಆಹಾರದಿಂದ ಚೆನ್ನಾಗಿ ಕೊಬ್ಬಿಸಿ ಬೆಳೆಸಿರುವ ನಿನ್ನ ಶರೀರವೇ ನಿನಗೆ ಅಮೃತರಸದಂತಿರುವುದು ! ಅದನ್ನು ತಿಂದರೆ ನಿನಗೆ ತೃಪ್ತಿಯಾಗುವುದು ! ಶ್ವೇತ, ಮುಂದೊಮ್ಮೆ ಅಗಸ್ತ್ಯಮಹರ್ಷಿಯು ಅಲ್ಲಿಗೆ ಆಗಮಿಸುವನು (೧೮-೧೯) ದುರ್ಧರ್ಷನಾದ ಈ ಮುನಿಯ ದೆಸೆಯಿಂದ ಈ ಕಷ್ಟವು ನೀಗುವುದು ಆ ಮುನಿಯು ದೇವಗಣಗಳನ್ನೂ ಉದ್ಧರಿಸಲು ಸಮರ್ಥನು

ಕಿಂ ಪುನಸ್ತ್ವಾಂ ಮಹಾಬಾಹೋ ಕ್ಷುತ್ಪಿಪಾಸಾವಶಂ ಗತಮ್ ।
ಸೋಽಹಂ ಭಗವತಃ ಶ್ರುತ್ವಾ ದೇವದೇವಸ್ಯ ನಿಶ್ಚಯಮ್ ॥　　೨೧

ಆಹಾರಂ ಗರ್ಹಿತಂ ಕುರ್ಮಿ ಸ್ವಶರೀರಂ ದ್ವಿಜೋತ್ತಮ ।
ಬಹೂನ್ ವರ್ಷಗಣಾನ್ ಬ್ರಹ್ಮನ್ ಭುಜ್ಯಮಾನಮಿದಂ ಮಯಾ ॥

ಕ್ಷಯಂ ನಾಭ್ಯೇತಿ ಬ್ರಹ್ಮರ್ಷೇ ತೃಪ್ತಿಶ್ಚಾಪಿ ಮಮೋತ್ತಮಾ ।
ತಸ್ಯ ಮೇ ಕೃಚ್ಛ್ರಭೂತಸ್ಯ ಕೃಚ್ಛ್ರಾದಸ್ಮಾದ್ವಿಮೋಕ್ಷಯ ॥　　೨೩

ಅನ್ಯೇಷಾಂ ನ ಗತಿರ್ಹ್ಯತ್ರ ಕುಂಭಯೋನಿಮೃತೇ ದ್ವಿಜಮ್ ।
ಇದಮಾಭರಣಂ ಸೌಮ್ಯ ತಾರಣಾರ್ಥಂ ದ್ವಿಜೋತ್ತಮ ॥　　೨೪

ಪ್ರತಿಗೃಹ್ಣೀಷ್ವ ಭದ್ರಂ ತೇ ಪ್ರಸಾದಂ ಕರ್ತುಮರ್ಹಸಿ ।
ಇದಂ ತಾವತ್ ಸುವರ್ಣಂ ಚ ಧನಂ ವಸ್ತ್ರಾಣಿ ಚ ದ್ವಿಜ ॥　　೨೫

ಭಕ್ಷ್ಯಂ ಭೋಜ್ಯಂ ಚ ಬ್ರಹ್ಮರ್ಷೇ ದದಾಮ್ಯಾಭರಣಾನಿ ಚ ।
ಸರ್ವಾನ್ ಕಾಮಾನ್ ಪ್ರಯಚ್ಛಾಮಿ ಭೋಗಾಂಶ್ಚ ಮುನಿಪುಂಗವ ॥

---

ಕೇವಲ ಹಸಿವು ಬಾಯಾರಿಕೆಗಳಿಂದ ತೊಳಲುವ ನಿನ್ನನ್ನು ಆತನು ಸುಲಭವಾಗಿ ಉದ್ಧರಿಸುವನು" ಎಂದು ತಿಳಿಸಿದನು (೨೦-೨೧). ಮುನಿಗಳೆ, ದೇವದೇವನ ಆ ನಿಶ್ಚಯವಾಣಿಯನ್ನು ಕೇಳಿ, ನಿಂದಿತವಾದ ಈ ಸ್ವದೇಹವನ್ನು ಆಹಾರವಾಗಿ ಭಕ್ಷಿಸುತ್ತಿದ್ದೇನೆ ಇದನ್ನು ಭಕ್ಷಿಸುತ್ತ ಬಹಳ ವರ್ಷಗಳಾದವು ಈ ದೇಹವೂ ಕ್ಷಯಿಸುತ್ತಿಲ್ಲ ನನಗೆ ತೃಪ್ತಿಯಾಗಿ ಹಸಿವೂ ನೀಗುತ್ತಿಲ್ಲ ಬ್ರಹ್ಮರ್ಷಿಗಳೆ, ಈ ಕಷ್ಟದಲ್ಲಿ ಸಿಕ್ಕಿರುವ ನನ್ನನ್ನು ಉದ್ಧರಿಸಿರಿ (೨೨-೨೩) ಅಗಸ್ತ್ಯಮುನಿಗಳ ಹೊರತಾಗಿ ಇತರರು ಇಲ್ಲಿಗೆ ಬರಲು ಶಕ್ಯವಿಲ್ಲ. ಅವರಲ್ಲದೆ ನನಗೆ ಬೇರೆ ಗತಿಯೂ ಇಲ್ಲ. ಈ ಆಭರಣವನ್ನು ಸ್ವೀಕರಿಸಿ ನನ್ನನ್ನು ಪಾಲಿಸಿರಿ. ಅನುಗ್ರಹ ಮಾಡಬೇಕು ಈ ಆಭರಣವಲ್ಲದೆ ಬೇಕಾದಷ್ಟು ಸುವರ್ಣಧನವಸ್ತ್ರಗಳನ್ನು ಕೊಡಬಲ್ಲೆನು (೨೪-೨೫) ಭಕ್ಷ್ಯಭೋಜ್ಯಗಳನ್ನೂ ಇತರ ಆಭರಣಗಳನ್ನೂ ಬೇಕುಬೇಕಾದ ಭೋಗಗಳನ್ನೂ ಕೊಡಬಲ್ಲೆನು ಹೇ ಭಗವನ್, ನನ್ನ ಉದ್ಧಾರಕ್ಕಾಗಿ ಪ್ರಸನ್ನ

ತಾರಣೇ ಭಗವನ್ ಮಹ್ಯಂ ಪ್ರಸಾದಂ ಕರ್ತುಮರ್ಹಸಿ ।
ತಸ್ಯಾಹಂ ಸ್ವರ್ಗಿಣೋ ವಾಕ್ಯಂ ಶ್ರುತ್ವಾ ದುಃಖಸಮನ್ವಿತಮ್ ॥ ೨೭

ತಾರಣಾಯೋಪಜಗ್ರಾಹ ತದಾಭರಣಮುತ್ತಮಮ್ ।
ಮಯಾ ಪ್ರತಿಗೃಹೀತೇ ತು ತಸ್ಮಿನ್ನಾಭರಣೇ ಶುಭೇ ॥ ೨೮

ಮಾನುಷಃ ಪೂರ್ವಕೋ ದೇಹೋ ರಾಜರ್ಷೇರ್ವಿನನಾಶ ಹ ।
ಪ್ರನಷ್ಟೇ ತು ಶರೀರೇಽಸೌ ರಾಜರ್ಷಿಃ ಪರಯಾ ಮುದಾ ॥ ೨೯

ತೃಪ್ತಃ ಪ್ರಮುದಿತೋ ರಾಜಾ ಜಗಾಮ ತ್ರಿದಿವಂ ಸುಖಮ್ ।
ತೇನೇದಂ ಶಕ್ರತುಲ್ಯೇನ ದಿವ್ಯಮಾಭರಣಂ ಮಮ ॥ ೩೦

ತಸ್ಮಿನ್ನಿಮಿತ್ತೇ ಕಾಕುತ್ಸ್ಥ ದತ್ತಮದ್ಭುತದರ್ಶನಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟಸಪ್ತತಿತಮಃ ಸರ್ಗಃ



ರಾಗಿರಿ" ಎಂದು ತಿಳಿಸಿದನು ರಾಘವ, ಹೀಗೆ ಆ ದಿವ್ಯಪುರುಷನ ಶೋಕ ಸಂತಪ್ತವಾದ ನುಡಿಯನ್ನು ಕೇಳಿ, ಆ ಕಷ್ಟದಿಂದ ಆತನ ತಾರಣೆಯಾಗಲೆಂದು ನಾನು ಆಭರಣವನ್ನು ಸ್ವೀಕರಿಸಲು ಒಪ್ಪಿದೆನು (೨೬-೨೭) ಶ್ರೀರಾಮ, ನಾನು ಆಭರಣವನ್ನು ಸ್ವೀಕರಿಸಿದೊಡನೆ ಆ ರಾಜರ್ಷಿಯ ಪೂರ್ವದೇಹವು ಅದೃಶ್ಯವಾಯಿತು ಆ ದೇಹವು ಅದೃಶ್ಯವಾದೊಡನೆ ಶ್ವೇತನಿಗೆ ಪರಮಾನಂದವಾಯಿತು. ಅವನು ಸಂತೃಪ್ತನಾಗಿ ನಲಿಯುತ್ತ ಸ್ವರ್ಗಕ್ಕೆ ಹೊರಟುಹೋದನು ಕಾಕುತ್ಸ್ಥ, ದೇವೇಂದ್ರನಿಗೆ ಸಮಾನನಾದ ಆ ದಿವ್ಯಪುರುಷನು ಆ ನಿಮಿತ್ತದಿಂದ ಅದ್ಭುತವಾದ ಈ ದಿವ್ಯಾಭರಣವನ್ನು ನನಗೆ ಕೊಟ್ಟನು" (೨೮-೩೦).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತೆಂಟನೆಯ ಸರ್ಗ



## ಏಕೋನಾಶೀತಿತಮಃ ಸರ್ಗ

### ದಂಡರಾಜ್ಯನಿವೇಶಃ

ತದದ್ಭುತತಮಂ ವಾಕ್ಯಂ ಶ್ರುತ್ವಾಗಸ್ತ್ಯಸ್ಯ ರಾಘವಃ ।
ಗೌರವಾದ್ವಿಸ್ಮಯಾಚ್ಚೈವ ಪುನಃ ಪ್ರಷ್ಟುಂ ಪ್ರಚಕ್ರಮೇ ॥ ೧

ಭಗವಂಸ್ತದ್ವನಂ ಘೋರಂ ತಪಸ್ತಪ್ಯತಿ ಯತ್ರ ಸಃ ।
ಶ್ವೇತೋ ವೈದರ್ಭಕೋ ರಾಜಾ ಕಥಂ ಸ್ಯಾದಮೃಗದ್ವಿಜಮ್ ॥ ೨

ತದ್ವನಂ ಸ ಕಥಂ ರಾಜಾ ಶೂನ್ಯಂ ಮನುಜವರ್ಜಿತಮ್ ।
ತಪಶ್ಚರ್ತುಂ ಪ್ರವಿಷ್ಟಃ ಸ ಶ್ರೋತುಮಿಚ್ಛಾಮಿ ತತ್ತ್ವತಃ ॥ ೩

ರಾಮಸ್ಯ ವಚನಂ ಶ್ರುತ್ವಾ ಕೌತೂಹಲಸಮನ್ವಿತಮ್ ।
ವಾಕ್ಯಂ ಪರಮತೇಜಸ್ವೀ ವಕ್ತುಮೇವೋಪಚಕ್ರಮೇ ॥ ೪

### ಸರ್ಗ ೭೯

ಇಕ್ಷ್ವಾಕುರಾಜನು ತನ್ನ ಮೂರ್ಖಪುತ್ರನಾದ ದಂಡನಿಗೆ ವಿಂಧ್ಯಶೈವಲಗಳ ಮಧ್ಯದಲ್ಲಿದ್ದ ರಾಜ್ಯವನ್ನು ಪಾಲಿಸುವಂತೆ ಗೊತ್ತುಮಾಡುವುದು.

ಅಗಸ್ತ್ಯಮುನಿಗಳು ಹೇಳಿದ ಆಶ್ಚರ್ಯಕರವಾದ ವೃತ್ತಾಂತವನ್ನು ಕೇಳಿ ಅವರು ಸರ್ವಜ್ಞರೂ ಸರ್ವಶಕ್ತರೂ ಎಂಬ ಗೌರವಬುದ್ಧಿಯಿಂದಲೂ ಕೌತುಕದಿಂದಲೂ ಶ್ರೀರಾಮನು ಮತ್ತೆ ಕೇಳಿದನು (೧): "ಭಗವನ್, ವಿದರ್ಭರಾಜನಾದ ಶ್ವೇತನು ತಪಸ್ಸನ್ನಾಚರಿಸುತ್ತಿದ್ದ ಘೋರಾರಣ್ಯವು ಮೃಗಪಕ್ಷಿಗಳಿಂದ ಶೂನ್ಯವಾದದ್ದು ಹೇಗೆ? ನಿರ್ಮಾನುಷವಾದ ಶೂನ್ಯಾರಣ್ಯಕ್ಕೆ ಆತನು ತಪಸ್ಸಿಗಾಗಿ ಏಕೆ ಹೋದನು? ಅದನ್ನು ತಿಳಿಯಲಿಚ್ಛಿಸುತ್ತೇನೆ" ಎಂದನು (೨-೩) ಹೀಗೆ ಕುತೂಹಲದಿಂದ ಮಾಡಿದ ಶ್ರೀರಾಮನ ಪ್ರಶ್ನೆಯನ್ನು ಕೇಳಿ ತೇಜೋನಿಧಿಗಳಾದ ಅಗಸ್ತ್ಯರು ಹೀಗೆಂದರು. "ರಾಮ, ಹಿಂದೆ ಕೃತಯುಗ

ಪುರಾ ಕೃತಯುಗೇ ರಾಮ ಮನುರ್ದಂಡಧರಃ ಪ್ರಭುಃ ।
ತಸ್ಯ ಪುತ್ರೋ ಮಹಾನಾಸೀದಿಕ್ಷ್ವಾಕುಃ ಕುಲನಂದನಃ ॥ ೫

ತಂ ಪುತ್ರಂ ಪೂರ್ವಕೇ ರಾಜ್ಯೇ ನಿಕ್ಷಿಪ್ಯ ಭುವಿ ದುರ್ಜಯಮ್ ।
ಪೃಥಿವ್ಯಾಂ ರಾಜವಂಶಾನಾಂ ಭವ ಕರ್ತೇತ್ಯುವಾಚ ಹ ॥ ೬

ತಥೇತಿ ಚ ಪ್ರತಿಜ್ಞಾತಂ ಪಿತುಃ ಪುತ್ರೇಣ ರಾಘವ ।
ತತಃ ಪರಮಸಂತುಷ್ಟೋ ಮನುಃ ಪುತ್ರಮುವಾಚ ಹ ॥ ೭

ಪ್ರೀತೋಽಸ್ಮಿ ಪರಮೋದಾರ ತ್ವಂ ಕರ್ತಾಸಿ ನ ಸಂಶಯಃ ।
ದಂಡೇನ ಚ ಪ್ರಜಾ ರಕ್ಷ ಮಾ ಚ ದಂಡಮಕಾರಣೇ ॥ ೮

ಅಪರಾಧಿಷು ಯೋ ದಂಡಃ ಪಾತ್ಯತೇ ಮಾನವೇಷು ವೈ ।
ಸ ದಂಡೋ ವಿಧಿವನ್ಮುಕ್ತಃ ಸ್ವರ್ಗಂ ನಯತಿ ಪಾರ್ಥಿವಮ್ ॥ ೯

ತಸ್ಮಾದ್ದಂಡೇ ಮಹಾಬಾಹೋ ಯತ್ನವಾನ್ ಭವ ಪುತ್ರಕ ।
ಧರ್ಮೋ ಹಿ ಪರಮೋ ಲೋಕೇ ಕುರ್ವತಸ್ತೇ ಭವಿಷ್ಯತಿ ॥ ೧೦

---

ದಲ್ಲಿ ಧರ್ಮಪ್ರವರ್ತನೆಗಾಗಿ ಪ್ರಭುವಾದ ಮನುವು ದಂಡಧಾರಿಯಾಗಿದ್ದನು ಆತನಿಗೆ ಇಕ್ಷ್ವಾಕುವೆಂಬ ವಿಖ್ಯಾತನೂ ಕುಲದೀಪಕನೂ ಆದ ಪುತ್ರನಿದ್ದನು (೪-೫) ಮನುರಾಜನು ತನ್ನ ಜ್ಯೇಷ್ಠ ಪುತ್ರನೂ ದುರ್ಜಯನೂ ಆದ ಇಕ್ಷ್ವಾಕುವನ್ನು ತನ್ನ ರಾಜ್ಯದಲ್ಲಿ ಸ್ಥಾಪಿಸಿ 'ವತ್ಸ, ಪೃಥ್ವಿಯಲ್ಲಿ ರಾಜವಂಶಗಳ ವೃದ್ಧಿಗೆ ಕರ್ತನಾಗು' ಎಂದು ತಿಳಿಸಿದನು (೬) ಇಕ್ಷ್ವಾಕುವು ಹಾಗೆಯೇ ಆಗಲೆಂದು ತಂದೆಗೆ ಮಾತುಕೊಟ್ಟನು ಆದರಿಂದ ಸಂತುಷ್ಟನಾದ ಮನುರಾಜನು ಮಗನನ್ನು ಕುರಿತು "ವತ್ಸ—ಉದಾರಶೀಲ, ಸಂಪ್ರೀತನಾದೆನು ನಾನು ಹೇಳಿದಂತೆ ಸೃಷ್ಟಿಯನ್ನಾಗಿಯೂ ನೀನು ಮಾಡುತ್ತೀಯೆ ದಂಡಧಾರಿಯಾಗಿ ಪ್ರಜೆಗಳನ್ನು ರಕ್ಷಿಸು ಆದರೆ ಸರಿಯಾದ ಕಾರಣವಿಲ್ಲದೆ ದಂಡಪ್ರಯೋಗವನ್ನು ಮಾಡಬೇಡ (೭-೮) ಅಪರಾಧಿಗಳಾದ ಜನರಲ್ಲಿ ವಿಧಿವತ್ತಾಗಿ ದಂಡಪ್ರಯೋಗವನ್ನು ಮಾಡಿದರೆ, ರಾಜನಿಗೆ ಸ್ವರ್ಗವು ಲಭಿಸುತ್ತದೆ ಆದ್ದರಿಂದ, ಪುತ್ರ, ಪ್ರಜೆಗಳನ್ನು ದಂಡಿಸುವ ವಿಷಯದಲ್ಲಿ ಬಹಳ ಎಚ್ಚರದಿಂದಿರು ಸರಿಯಾಗಿ ದಂಡವಿಧಾನವನ್ನನುಸರಿಸುವ ನಿನಗೆ ಪರಮಧರ್ಮವು

ಇತಿ ತಂ ಬಹು ಸಂದಿಶ್ಯ ಮನುಃ ಪುತ್ರಂ ಸಮಾಧಿನಾ ।
ಜಗಾಮ ತ್ರಿದಿವಂ ಹೃಷ್ಟೋ ಬ್ರಹ್ಮಲೋಕಂ ಸನಾತನಮ್ ॥ ೧೧

ಪ್ರಯಾತೇ ತ್ರಿದಿವಂ ತಸ್ಮಿನ್ನಿಕ್ಷ್ವಾಕುರಮಿತಪ್ರಭಃ ।
ಜನಯಿಷ್ಯೇ ಕಥಂ ಪುತ್ರಾನಿತಿ ಚಿಂತಾಪರೋಽಭವತ್ ॥ ೧೨

ಕರ್ಮಭಿರ್ಬಹುರೂಪೈಶ್ಚ ತೈಸ್ತೈರ್ಮನುಸುತಃ ಸುತಾನ್ ।
ಜನಯಾಮಾಸ ಧರ್ಮಾತ್ಮಾ ಶತಂ ದೇವಸುತೋಪಮಾನ್ ॥ ೧೩

ತೇಷಾಮವರಜಸ್ತಾತ ಸರ್ವೇಷಾಂ ರಘುನಂದನ ।
ಮೂಢಶ್ಚಾಕೃತವಿದ್ಯಶ್ಚ ನ ಶುಶ್ರೂಷತಿ ಪೂರ್ವಜಾನ್ ॥ ೧೪

ನಾಮ ತಸ್ಯ ಚ ದಂಡೇತಿ ಪಿತಾ ಚಕ್ರೇಽಲ್ಪಮೇಧಸಃ ।
ಅವಶ್ಯಂ ದಂಡಪತನಂ ಶರೀರೇಽಸ್ಯ ಭವಿಷ್ಯತಿ ॥ ೧೫

ಅಪಶ್ಯಮಾನಸ್ತಂ ದೇಶಂ ಘೋರಂ ಪುತ್ರಸ್ಯ ರಾಘವ ।
ವಿಂಧ್ಯಶೈವಲಯೋರ್ಮಧ್ಯೇ ರಾಜ್ಯಂ ಪ್ರಾದಾದರಿಂದಮ ॥ ೧೬

---

ಲಭಿಸುವುದು" ಎಂದು ಉಪದೇಶಿಸಿದನು (೯-೧೦) ಈ ಪ್ರಕಾರವಾಗಿ ಮನುರಾಜನು ಮಗನಿಗೆ ವಿವಿಧರೀತಿಯಲ್ಲಿ ಬುದ್ಧಿವಾದವನ್ನು ಹೇಳಿ, ಪ್ರಣವಾನುಸಂಧಾನಪೂರ್ವಕವಾದ ಚಿತ್ತೈಕಾಗ್ರ್ಯದಿಂದ ಸನಾತನವಾದ ಬ್ರಹ್ಮಲೋಕವನ್ನೈದಿದನು (೧೧) ಅನಂತರ ತೇಜಸ್ವಿಯಾದ ಇಕ್ಷ್ವಾಕು ರಾಜನು ಪುತ್ರರನ್ನು ಪಡೆಯುವುದು ಹೇಗೆಂದು ಚಿಂತಾಪರನಾದನು ಆ ಧರ್ಮಾತ್ಮನು ಯಜ್ಞದಾನತಪೋರೂಪವಾದ ವಿವಿಧಕರ್ಮಗಳನ್ನಾಚರಿಸಿ ದೇವತೆಗಳಂತಿರುವ ನೂರು ಪುತ್ರರನ್ನು ಪಡೆದನು (೧೨-೧೩) ರಘುನಂದನ, ಅವರಲ್ಲಿ ಕಿರಿಯ ಮಗನು ಮೂರ್ಖನೂ ವಿದ್ಯಾವಿಹೀನನೂ ಆಗಿ ತನ್ನ ಅಣ್ಣಂದಿರನ್ನು ವಿನಯದಿಂದ ಸೇವಿಸುತ್ತಿರಲಿಲ್ಲ ತಂದೆಯು ಆ ಬುದ್ಧಿಹೀನನಿಗೆ 'ದಂಡ' ಎಂದು ನಾಮಕರಣಮಾಡಿದನು! ಅವಶ್ಯವಾಗಿ ಆತನ ದೇಹದ ಮೇಲೆ ದಂಡಪತನವಾಗುವುದೆಂದು ಇಕ್ಷ್ವಾಕುರಾಜನು ತಿಳಿದಿದ್ದನು! (೧೪-೧೫) ರಾಘವ, ದಂಡನಿಗೆ ಯೋಗ್ಯವಾದ ದೇಶವು ಯಾವುದೆಂಬು

ಸ ದಂಡಸ್ತತ್ರ ರಾಜಾಭೂದ್ರಮ್ಯೇ ಪರ್ವತರೋಧಸಿ ।
ಪುರಂ ಚಾಪ್ರತಿಮಂ ರಾಮ ನ್ಯವೇಶಯದನುತ್ತಮಮ್ ॥ ೧೭

ಪುರಸ್ಯ ಚಾಕರೋನ್ನಾಮ ಮಧುಮಂತಮಿತಿ ಪ್ರಭೋ ।
ಪುರೋಹಿತಂ ತೂಶನಸಂ ವರಯಾಮಾಸ ಸುವ್ರತಮ್ ॥ ೧೮

ಏವಂ ಸ ರಾಜಾ ತದ್ರಾಜ್ಯಮಕರೋತ್ ಸಪುರೋಹಿತಃ ।
ಪ್ರಹೃಷ್ಟಮನುಜಾಕೀರ್ಣಂ ದೇವರಾಜ್ಯಂ ಯಥಾ ವೃಷಾ ॥ ೧೯

ತತಃ ಸ ರಾಜಾ ಮನುಜೇಂದ್ರಪುತ್ರಃ
ಸಾರ್ಧಂ ಚ ತೇನೋಶನಸಾ ತದಾನೀಮ್ ।

---

ದನ್ನರಿಯಲಾರದೆ, ತಂದೆಯು ಆತನಿಗೆ ವಿಂಧ್ಯಶೈವಲಗಳ* ಮಧ್ಯವರ್ತಿಯಾದ ಭೀಕರದೇಶವನ್ನು ಆಳುವುದಕ್ಕಾಗಿ ಕೊಟ್ಟನು (೧೬) ದಂಡನು ಅದಕ್ಕೆ ಅಧಿಪತಿಯಾಗಿ ಪರ್ವತದ ಪಾರ್ಶ್ವದಲ್ಲಿ ಅತ್ಯುತ್ತಮವಾದ ಒಂದು ನಗರವನ್ನು ಕಟ್ಟಿದನು ಅದಕ್ಕೆ ಮಧುಮಂತ ಎಂದು ಹೆಸರಿಟ್ಟನು ವ್ರತನಿಷ್ಠನಾದ ಶುಕ್ರಾಚಾರ್ಯನನ್ನು ಪುರೋಹಿತನನ್ನಾಗಿ ವರಿಸಿದನು (೧೭-೧೮) ಸಂತುಷ್ಟರಾದ ಪ್ರಜೆಗಳಿಂದ ತುಂಬಿದ ಆ ರಾಜ್ಯವನ್ನು ದಂಡರಾಜನು ಪುರೋಹಿತಸಹಿತನಾಗಿ, ದೇವರಾಜ್ಯವನ್ನು ಇಂದ್ರನು ಆಳುವಂತೆ ಆಳುತ್ತಿದ್ದನು (೧೯) ಈ ಪ್ರಕಾರವಾಗಿ ಇಕ್ಷ್ವಾಕುರಾಜಪುತ್ರನಾದ ದಂಡನು ಶುಕ್ರಾಚಾರ್ಯನಿಂದ ಸಮೇತನಾಗಿ, ಸ್ವರ್ಗಲೋಕದಲ್ಲಿ ಶುಕ್ರಸಮೇತನಾದ ಶಕ್ರನು‡ ರಾಜ್ಯಭಾರಮಾಡುವಂತೆ ರಾಜ್ಯವನ್ನು ಪಾಲಿಸುತ್ತಿದ್ದನು" ಎಂದರು (೨೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಪ್ಪತ್ತೊಂಬತ್ತನೆಯ ಸರ್ಗ



---

* ಶೈವಲವೆಂಬುದು ಒಂದು ಜನಪದ 'ಅಭಿಸಾರಾ ಉಲೂತಾಶ್ಚ ಶೈವಲಾಬಾಹ್ಲಿಕಾಸ್ತಥಾ'–ಮ ಭಾ ಭೀಷ್ಮ ೯–೫೪ ಪ್ರಕೃತದಲ್ಲಿ ಒಂದು ಪರ್ವತವಾಗಿರಬಹುದು

‡ ಶಕ್ರ=ಇಂದ್ರ ಇಂದ್ರನ ಪುರೋಹಿತ ಬೃಹಸ್ಪತಿ, ಶುಕ್ರನಲ್ಲ ಆದ್ದರಿಂದ

ಚಕಾರ ರಾಜ್ಯಂ ಸುಮಹನ್ಮಹಾತ್ಮಾ
ಶಕ್ರೋ ದಿವೀವೋಶನಸಾ ಸಮೇತಃ ॥ ೨೦

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋನಾಶೀತಿತಮಃ ಸರ್ಗಃ



ಶಕ್ರನೆಂದರೆ ಬಲಿಚಕ್ರವರ್ತಿಯೆಂದು ಕೆಲವರು ಹೇಳುತ್ತಾರೆ ಇದು ಅಭೂತೋಪಮೆಯೆಂದು ಇನ್ನು ಕೆಲವರ ಅಭಿಪ್ರಾಯ ಆದರೆ,

"ಯೋಗಾಚಾರ್ಯೋ ಮಹಾಬುದ್ಧಿಃ ದೈತ್ಯಾನಾಮಭವದ್ಗುರುಃ ।
ಸುರಾಣಾಂ ಚಾಪಿ ಮೇಧಾವೀ ಬ್ರಹ್ಮಚಾರೀ ಯತವ್ರತಃ ॥

ಮ ಭಾ ಆದಿ ೬೬-೪೩.

ಬೃಹಸ್ಪತಿರ್ಹಿ ಶುಕ್ರೋ ಭೂತ್ವಾ ಇಂದ್ರಸ್ಯಾಭಯಾಯ ಅಸುರೇಭ್ಯಃ
ಕ್ಷಯಾಯೇಮಾಮವಿದ್ಯಾಮಸೃಜತ್—"ಮೈತ್ರಾಯಣೀಯಬ್ರಾಹ್ಮಣ"

ಈ ಪ್ರಮಾಣದಿಂದ ಒಬ್ಬನೇ ಬೃಹಸ್ಪತಿಯೂ ಶುಕ್ರನೂ ಆಗಿದ್ದನೆಂದು ತಿಳಿದುಬರುತ್ತದೆ ಪ್ರಕೃತದಲ್ಲಿ ಶುಕ್ರ=ಬೃಹಸ್ಪತಿ ಎಂದು ಅರ್ಥಮಾಡುವುದು ಯುಕ್ತವೆನಿಸುತ್ತದೆ.

## ಅಶೀತಿತಮಃ ಸರ್ಗಃ

### ಅರಜಾಸಂಗಮಃ

ಏತದಾಖ್ಯಾಯ ರಾಮಾಯ ಮಹರ್ಷಿಃ ಕುಂಭಸಂಭವಃ ।
ಅಸ್ಯಾಮೇವಾಪರಂ ವಾಕ್ಯಂ ಕಥಾಯಾಮುಪಚಕ್ರಮೇ ॥ ೧

ತತಃ ಸ ದಂಡಃ ಕಾಕುತ್ಸ್ಥ ಬಹುವರ್ಷಗಣಾಯುತಮ್ ।
ಅಕರೋತ್ತತ್ರ ದಾಂತಾತ್ಮಾ ರಾಜ್ಯಂ ನಿಹತಕಂಟಕಮ್ ॥ ೨

ಅಥ ಕಾಲೇ ತು ಕಸ್ಮಿಂಶ್ಚಿದ್ರಾಜಾ ಭಾರ್ಗವಮಾಶ್ರಮಮ್ ।
ರಮಣೀಯಮುಪಾಕ್ರಾಮಚ್ಚೈತ್ರೇ ಮಾಸಿ ಮನೋಹರೇ ॥ ೩

ತತ್ರ ಭಾರ್ಗವಕನ್ಯಾಂ ಸ ರೂಪೇಣಾಪ್ರತಿಮಾಂ ಭುವಿ ।
ವಿಚರಂತೀಂ ವನೋದ್ದೇಶೇ ದಂಡೋಽಪಶ್ಯದನುತ್ತಮಾಮ್ ॥ ೪

ಸ ದೃಷ್ಟ್ವಾ ತಾಂ ಸುದುರ್ಮೇಧಾ ಅನಂಗಶರಪೀಡಿತಃ ।
ಅಭಿಗಮ್ಯ ಸುಸಂವಿಗ್ನಾಂ ಕನ್ಯಾಂ ವಚನಮಬ್ರವೀತ್ ॥ ೫

## ಸರ್ಗ ೮೦

### ಶುಕ್ರಾಚಾರ್ಯನ ಮಗಳಾದ ಅರಜಾ ಎಂಬ ಕನ್ಯೆಯನ್ನು ದಂಡನು ಬಲಾತ್ಕರಿಸಿ ಭೋಗಿಸುವುದು

ಅಗಸ್ತ್ಯಮುನಿಗಳು ಶ್ರೀರಾಮನಿಗೆ ಈ ಪ್ರಕಾರವಾಗಿ ದಂಡನ ಕಥೆಯನ್ನು ಹೇಳಿ, ಅದಕ್ಕೆ ಸಂಬಂಧಿಸಿದ ಮುಂದಿನ ಪ್ರಸಂಗವನ್ನು ಹೇಳಿದರು. "ಕಾಕುತ್ಸ್ಥ, ದಂಡನು ಜಿತೇಂದ್ರಿಯನಾಗಿದ್ದುಕೊಂಡು ರಾಜ್ಯದ ಶತ್ರುಗಳನ್ನು ಸಂಹರಿಸಿ ಬಹುವರ್ಷಗಳವರೆಗೆ ರಾಜ್ಯಭಾರವನ್ನು ನಡೆಸಿದನು (೧-೨) ಹೀಗಿರಲು ಒಂದು ಸಲ ಮನೋಹರವಾದ ಚೈತ್ರಮಾಸವು ಪ್ರಾಪ್ತವಾಗಲು, ಒಂದು ದಿನ ದಂಡನು ಶುಕ್ರಾಚಾರ್ಯರ ರಮಣೀಯವಾದ ಆಶ್ರಮಕ್ಕೆ ಹೋದನು ಶುಕ್ರಾಚಾರ್ಯರ ಸುಂದರಿಯಾದ ಪುತ್ರಿಯು ವನದಲ್ಲಿ ವಿಹರಿಸುತ್ತಿರುವುದನ್ನು ಅವನು ಕಂಡನು (೩-೪) ಅವಳನ್ನು ಕಂಡು ದಂಡನು ಮನ್ಮಥಬಾಧೆಗೆ ಒಳಗಾದನು ಆ ಬುದ್ಧಿಗೇಡಿಯು ಆ ಕನ್ಯೆಯ

ಕುತಸ್ತ್ವಮಸಿ ಸುಶ್ರೋಣಿ ಕಸ್ಯ ವಾಸಿ ಸುತಾ ಶುಭೇ ।
ಪೀಡಿತೋಽಹಮನಂಗೇನ ಪೃಚ್ಛಾಮಿ ತ್ವಾಂ ಶುಭಾನನೇ ॥ ೬

ತಸ್ಯ ಚೈವಂ ಬ್ರುವಾಣಸ್ಯ ಮೋಹೋನ್ಮತ್ತಸ್ಯ ಕಾಮಿನಃ ।
ಭಾರ್ಗವೀ ಪ್ರತ್ಯುವಾಚೇದಂ ವಚಃ ಸಾನುನಯಂ ನೃಪಮ್ ॥ ೭

ಭಾರ್ಗವಸ್ಯ ಸುತಾಂ ವಿದ್ಧಿ ದೇವಸ್ಯಾಕ್ಲಿಷ್ಟಕರ್ಮಣಃ ।
ಅರಜಾಂ ನಾಮ ರಾಜೇಂದ್ರ ಜ್ಯೇಷ್ಠಾಮಾಶ್ರಮವಾಸಿನೀಮ್ ॥ ೮

ಮಾ ಮಾಂ ಸ್ಪೃಶ ಬಲಾದ್ರಾಜನ್ ಕನ್ಯಾ ಪಿತೃವಶಾ ಹ್ಯಹಮ್ ।
ಗುರುಃ ಪಿತಾ ಮೇ ರಾಜೇಂದ್ರ ತ್ವಂ ಚ ಶಿಷ್ಯೋ ಮಹಾತ್ಮನಃ ॥ ೯

ವ್ಯಸನಂ ಸುಮಹತ್ ಕ್ರುದ್ಧಃ ಸ ತೇ ದದ್ಯಾನ್ಮಹಾತಪಾಃ ।
ಯದಿ ವಾನ್ಯನ್ಮಯಾ ಕಾರ್ಯಂ ಧರ್ಮದೃಷ್ಟೇನ ಸತ್ಪಥಾ ॥ ೧೦

ವರಯಸ್ವ ನೃಪಶ್ರೇಷ್ಠ ಪಿತರಂ ಮೇ ಮಹಾದ್ಯುತಿಮ್ ।
ಅನ್ಯಥಾ ತು ಫಲಂ ತುಭ್ಯಂ ಭವೇದ್ಘೋರಾಭಿಸಂಹಿತಮ್ ॥ ೧೧

---

ಬಳಿಗೆ ಹೋಗಿ ಭೀತಳಾದ ಅವಳನ್ನು ಕುರಿತು "ಎಲೌ ಸುಂದರಿ, ನೀನು ಎಲ್ಲಿಂದ ಬಂದಿರುವೆ? ಯಾರ ಮಗಳು? ಹೇ ಕಲ್ಯಾಣಿ, ಮದನಬಾಧೆಗೊಳಗಾಗಿ ನಿನ್ನನ್ನು ಕೇಳುತ್ತಿರುವೆನು" ಎಂದನು (೫-೬) ಚಿತ್ತವೈಕಲ್ಯದಿಂದ ಉನ್ಮತ್ತನಾಗಿದ್ದ ಆ ಕಾಮಿಯ ನುಡಿಯನ್ನು ಕೇಳಿ ಭಾರ್ಗವಕನ್ಯೆಯು ಸಾಂತ್ವನಪೂರ್ವಕವಾಗಿ ಹೀಗೆಂದಳು "ರಾಜೇಂದ್ರ, ನಾನು ಧರ್ಮಾತ್ಮನಾದ ಭಾರ್ಗವನ ಜ್ಯೇಷ್ಠಪುತ್ರಿಯೆಂದು ತಿಳಿ ನನ್ನ ಹೆಸರು ಅರಜೆ. ಆಶ್ರಮದಲ್ಲಿ ವಾಸವಾಗಿದ್ದೇನೆ (೭-೮) ರಾಜ, ಬಲಾತ್ಕರಿಸಿ ನನ್ನನ್ನು ಮುಟ್ಟಬೇಡ ನಾನು ತಂದೆಗೆ ಅಧೀನಳಾದ ಕನ್ಯೆ ನನ್ನ ತಂದೆ ನಿನ್ನ ಗುರು ನೀನು ಆ ಮಹಾತ್ಮನ ಶಿಷ್ಯ ಆ ಮಹಾತಪಸ್ವಿಯು ಕ್ರುದ್ಧನಾಗಿ ನಿನಗೆ ಮಹತ್ತರವಾದ ವಿಪತ್ತನ್ನು ತಂದಾನು ನಾನು ಅನುಕೂಲಳಾಗಬೇಕಾದರೆ ಧರ್ಮಯುಕ್ತವಾದ ಸನ್ಮಾರ್ಗದಿಂದ ನನ್ನ ತಂದೆಯನ್ನು ಕೇಳಿಕೊ ಹಾಗಿಲ್ಲದಿದ್ದರೆ ಘೋರವಾದ ಅನರ್ಥವು ಸಂಭವಿಸುವುದು

ಕ್ರೋಧೇನ ಹಿ ಪಿತಾ ಮೇಽಸೌ ತ್ರೈಲೋಕ್ಯಮಪಿ ನಿರ್ದಹೇತ್ ।
ದಾಸ್ಯತೇ ಚಾನವದ್ಯಾಂಗ ತವ ಮಾಂ ಯಾಚಿತಃ ಪಿತಾ ॥ ೧೨

ಏವಂ ಬ್ರುವಾಣಾಮರಜಾಂ ದಂಡಃ ಕಾಮವಶಂ ಗತಃ ।
ಪ್ರತ್ಯುವಾಚ ಮದೋನ್ಮತ್ತಃ ಶಿರಸ್ಯಾಧಾಯ ಚಾಂಜಲಿಮ್ ॥ ೧೩

ಪ್ರಸಾದಂ ಕುರು ಸುಶ್ರೋಣಿ ನ ಕಾಲಂ ಕ್ಷೇಪ್ತುಮರ್ಹಸಿ ।
ತ್ವತ್ಕೃತೇ ಹಿ ಮಮ ಪ್ರಾಣಾ ವಿದೀರ್ಯಂತೇ ವರಾನನೇ ॥ ೧೪

ತ್ವಾಂ ಪ್ರಾಪ್ಯ ಮೇ ವಧೋ ವಾ ಸ್ಯಾಚ್ಛಾಪೋ ವಾ ಯದಿ ದಾರುಣಃ
ಭಕ್ತಂ ಭಜಸ್ವ ಮಾಂ ಭೀರು ಭಜಮಾನಂ ಸುವಿಹ್ವಲಮ್ ॥ ೧೫

ಏವಮುಕ್ತ್ವಾ ತು ತಾಂ ಕನ್ಯಾಂ ದೋರ್ಭ್ಯಾಂ ಗೃಹ್ಯ ಬಲಾದ್ಬಲೀ ।
ವಿಸ್ಫುರಂತೀಂ ಯಥಾಕಾಮಂ ಮೈಥುನಾಯೋಪಚಕ್ರಮೇ ॥ ೧೬

ಏತಮರ್ಥಂ ಮಹಾಘೋರಂ ದಂಡಃ ಕೃತ್ವಾ ಸುದಾರುಣಮ್ ।
ನಗರಂ ಪ್ರಯಯಾವಾಶು ಮಧುಮಂತಮನುತ್ತಮಮ್ ॥ ೧೭

---

(೯-೧೧) ನನ್ನ ತಂದೆಯು ಕುಪಿತನಾದರೆ ಮೂರುಲೋಕಗಳನ್ನೂ ಸುಟ್ಟು ಬೂದಿಮಾಡಿಯಾನು! ಎಲೈ ಸುಂದರ, ನೀನು ಯಾಚಿಸಿದರೆ ತಂದೆಯು ನನ್ನನ್ನು ನಿನಗೆ ಮದುವೆಮಾಡಿಕೊಡುವನು" ಎಂದಳು (೧೨) ಕಾಮವಶನಾದ ದಂಡನು ಮದೋನ್ಮತ್ತನಾಗಿದ್ದನು ಅವನು ತನ್ನ ಶಿರಸ್ಸಿನಲ್ಲಿ ಕೈಗಳನ್ನು ಜೋಡಿಸಿ "ಮನೋಹರೆ, ಪ್ರಸನ್ನಳಾಗು ವ್ಯರ್ಥವಾಗಿ ಕಾಲಹರಣ ಬೇಡ ಎಲೌ ವರಾನನೆ, ನಿನಗಾಗಿ ನನ್ನ ಪ್ರಾಣವು ಹಾರಿಹೋಗುತ್ತದೆ! (೧೩-೧೪) ನಿನ್ನ ಸಂಗವಾದಮೇಲೆ ನನಗೆ ಮರಣವಾದರೂ ಬರಲಿ! ಘೋರವಾದ ಶಾಪವಾದರೂ ಬರಲಿ! ಹೆದರುಬುರುಕಿ! ದಿಕ್ಕುಗಾಣದೆ ಕಂಗೆಟ್ಟಿರುವ ಈ ಭಕ್ತನನ್ನು ವರಿಸು" ಎಂದನು (೧೫). ಹೀಗೆ ಹೇಳಿ ಆ ಬಲಶಾಲಿಯು ಎರಡು ಕೈಗಳಿಂದಲೂ ಅರಜೆಯನ್ನು ಬಲಾತ್ಕಾರವಾಗಿ ಹಿಡಿದನು ತೊಳಲಾಡುತ್ತಿದ್ದ ಆ ಕನ್ಯೆಯನ್ನು ಭೋಗಿಸಿದನು ರಾಘವ, ದಂಡನು ಘೋರವಾದ ದುಷ್ಕೃತ್ಯವನ್ನು ನಡೆಸಿ ತನ್ನ ಮಧುಮಂತನಗರಕ್ಕೆ ಬೇಗಬೇಗನೆ ಹೊರಟುಹೋದನು (೧೬-೧೭)

ಅರಜಾಪಿ ರುದಂತೀ ಸಾ ಆಶ್ರಮಸ್ಯಾವಿದೂರತಃ ।
ಪ್ರತೀಕ್ಷಂತೀ ಸುಸಂತ್ರಸ್ತಾ ಪಿತರಂ ದೇವಸಂನಿಭಮ್ ॥ ೧೮

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಶೀತಿತಮಃ ಸರ್ಗಃ

---

## ಏಕಾಶೀತಿತಮಃ ಸರ್ಗಃ

### ದಂಡಶಾಪಃ

ಸ ಮುಹೂರ್ತಾದುಪಶ್ರುತ್ಯ ದೇವರ್ಷಿರಮಿತಪ್ರಭಃ ।
ಸ್ವಮಾಶ್ರಮಂ ಶಿಷ್ಯವೃತಃ ಕ್ಷುಧಾರ್ತಃ ಸಂನ್ಯವರ್ತತ ॥ ೧

ಸೋಽಪಶ್ಯದರಜಾಂ ದೀನಾಂ ರಜಸಾ ಸಮಭಿಪ್ಲುತಾಮ್ ।
ಜ್ಯೋತ್ಸ್ನಾಮಿವಾರುಣಗ್ರಸ್ತಾಂ ಪ್ರತ್ಯೂಷೇ ನ ವಿರಾಜತೀಮ್ ॥ ೨

---

ಇತ್ತಲಾಗಿ ಅರಜೆಯು ಹೆದರಿ ಕಂಗಾಲಾದಳು ದೇವಸಂಕಾಶನಾದ ತಂದೆಯನ್ನು ಪ್ರತೀಕ್ಷಿಸುತ್ತ ಆಶ್ರಮದ ಸಮೀಪದಲ್ಲಿ ಅಳತೊಡಗಿದಳು (೧೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತನೆಯ ಸರ್ಗ

---

## ಸರ್ಗ ೮೧

### ಕುಪಿತನಾದ ಶುಕ್ರಾಚಾರ್ಯನಿಂದ ದಂಡನಿಗೆ ಶಾಪ ದಂಡಕಾರಣ್ಯವೆಂದು ಹೆಸರಾಗಲು ನಿಮಿತ್ತ

ಅಗಸ್ತ್ಯರು ಮುಂದುವರಿಸಿ ಹೇಳಿದರು. "ರಘುನಾಥ, ಮಹಾತೇಜಸ್ವಿಯೂ ದೇವರ್ಷಿಯೂ ಆದ ಶುಕ್ರಾಚಾರ್ಯನಿಗೆ ಶಿಷ್ಯರಿಂದ ಈ ವೃತ್ತಾಂತವು ತಿಳಿಯಿತು ಆತನು ಕ್ಷುಧಾರ್ತನಾಗಿ ಶಿಷ್ಯರೊಡನೆ ತನ್ನ ಆಶ್ರಮಕ್ಕೆ ಹಿಂದಿರುಗಿದನು (೧) ಆಶ್ರಮದ ಬಳಿ ದೀನಳಾಗಿಯೂ ಧೂಳಿಯಿಂದ ಮಲಿನಳಾಗಿಯೂ ಇದ್ದ ಅರಜೆಯನ್ನು ಕಂಡನು. ಅವಳು ಪ್ರಾತಃಕಾಲದಲ್ಲಿ ಅರುಣಕಿರಣದಿಂದ ಆಕ್ರಾಂತವಾದ ಬೆಳದಿಂಗಳಂತೆ ಶೋಭಾಹೀನ

ತಸ್ಯ ರೋಷಃ ಸಮಭವತ್ ಕ್ಷುಧಾರ್ತಸ್ಯ ವಿಶೇಷತಃ ।
ನಿರ್ದಹನ್ನಿವ ಲೋಕಾಂಸ್ತ್ರೀನ್ ಶಿಷ್ಯಾಂಶ್ಚೈತದುವಾಚ ಹ ॥ ೩

ಪಶ್ಯಧ್ವಂ ವಿಪರೀತಸ್ಯ ದಂಡಸ್ಯಾವಿಜಿತಾತ್ಮನಃ ।
ವಿಪತ್ತಿಂ ಘೋರಸಂಕಾಶಾಂ ಕ್ರುದ್ಧಾಮಗ್ನಿಶಿಖಾಮಿವ ॥ ೪

ಕ್ಷಯೋಽಸ್ಯ ದುರ್ಮತೇಃ ಪ್ರಾಪ್ತಃ ಸಾನುಗಸ್ಯ ದುರಾತ್ಮನಃ ।
ಯಃ ಪ್ರದೀಪ್ತಾಂ ಹುತಾಶಸ್ಯ ಶಿಖಾಂ ವೈ ಸ್ಪ್ರಷ್ಟುಮಿಚ್ಛತಿ ॥ ೫

ಯಸ್ಮಾತ್ ಸ ಕೃತವಾನ್ ಪಾಪಮೀದೃಶಂ ಘೋರಸಂಹಿತಮ್ ।
ತಸ್ಮಾತ್ ಪ್ರಾಪ್ಸ್ಯಸಿ ದುರ್ಮೇಧಾಃ ಫಲಂ ಪಾಪಸ್ಯ ಕರ್ಮಣಃ ॥ ೬

ಸಪ್ತರಾತ್ರೇಣ ರಾಜಾಸೌ ಸಭೃತ್ಯಬಲವಾಹನಃ ।
ಪಾಪಕರ್ಮಸಮಾಚಾರೋ ವಧಂ ಪ್ರಾಪ್ಸ್ಯತಿ ದುರ್ಮತಿಃ ॥ ೭

ಸಮಂತಾದ್ಯೋಜನಶತಂ ವಿಷಯಂ ಚಾಸ್ಯ ದುರ್ಮತೇಃ ।
ಧಕ್ಷ್ಯತೇ ಪಾಂಸುವರ್ಷೇಣ ಮಹತಾ ಪಾಕಶಾಸನಃ ॥ ೮

---

ಳಾಗಿದ್ದಳು (೨) ಮಗಳನ್ನು ನೋಡಿದೊಡನೆ, ಅದರಲ್ಲಿಯೂ ಹಸಿವಿನಿಂದ ಬಳಲಿದ್ದ ಶುಕ್ರಾಚಾರ್ಯನಿಗೆ ಕೋಪವು ಉಕ್ಕಿತು ಮೂರು ಲೋಕಗಳನ್ನೂ ಸುಡುವನೋ ಎಂಬಂತೆ ನೋಡುತ್ತ ಶಿಷ್ಯರ ಕಡೆಗೆ ತಿರುಗಿ ಹೀಗೆಂದನು. "ನೋಡಿರಿ ! ಮನೋನಿಗ್ರಹವಿಲ್ಲದೆ ವಿಪರೀತವಾಗಿ ದಂಡನು ವರ್ತಿಸಿದ್ದಾನೆ ಸಿಡಿದೇಳುವ ಅಗ್ನಿಜ್ವಾಲೆಯಂತೆ ಆತನಿಗೆ ಒದಗುವ ವಿಪತ್ತಿಯನ್ನು ಕಾಣಿರಿ ! (೩-೪) ದುರ್ಬುದ್ಧಿಯೂ ದುರಾತ್ಮನೂ ಆದ ದಂಡನಿಗೆ ಅವನ ಪರಿವಾರ ಸಹಿತವಾಗಿ ವಿನಾಶವು ಪ್ರಾಪ್ತವಾಯಿತು. ಭುಗಿಲ್ ಎಂದು ಉರಿಯುವ ಅಗ್ನಿಜ್ವಾಲೆಯನ್ನು ಮುಟ್ಟಲು ಅವನಿಗೆ ಇಚ್ಛೆಯಾಯಿತು ! ಇಂತಹ ಘೋರ ವಾದ ಪಾಪಕೃತ್ಯವನ್ನು ಅವನು ಮಾಡಿದನಲ್ಲವೆ ? ಆದ್ದರಿಂದ ಆ ದುರ್ಬುದ್ಧಿಗೆ ಪಾಪಕರ್ಮದ ಫಲವು ಅವಶ್ಯವಾಗಿ ದೊರೆಯಬೇಕು (೫-೬) ಪಾಪಿಯಾದ ಆ ರಾಜನು ಇಂದಿಗೆ ಏಳು ರಾತ್ರಿಗಳೊಳಗೆ ಪರಿವಾರಸಮೇತನಾಗಿ ಸಾಯಲಿ ! ನೂರು ಯೋಜನ ವಿಸ್ತಾರವಾದ ಅವನ ರಾಜ್ಯದಲ್ಲಿ ಇಂದ್ರನು ಸುಡುಮಣ್ಣನ್ನು

ಸರ್ವಸತ್ತ್ವಾನಿ ಯಾನೀಹ ಸ್ಥಾವರಾಣಿ ಚರಾಣಿ ಚ ।
ಮಹತಾ ಪಾಂಸುವರ್ಷೇಣ ವಿಲಯಂ ಸರ್ವತೋಽಗಮನ್ ॥ ೯

ದಂಡಸ್ಯ ವಿಷಯೋ ಯಾವತ್ತಾವತ್ ಸರ್ವಸಮುಚ್ಛ್ರಯಮ್ ।
ಪಾಂಸುವರ್ಷಮಿವಾಲಕ್ಷ್ಯಂ ಸಪ್ತರಾತ್ರಂ ಭವಿಷ್ಯತಿ ॥ ೧೦

ಇತ್ಯುಕ್ತ್ವಾ ಕ್ರೋಧತಾಮ್ರಾಕ್ಷಸ್ತದಾಶ್ರಮನಿವಾಸಿನಮ್ ।
ಜನಂ ಜನಪದಾಂತೇಷು ಸ್ಥೀಯತಾಮಿತಿ ಚಾಬ್ರವೀತ್ ॥ ೧೧

ಶ್ರುತ್ವಾ ತೂಶನಸೋ ವಾಕ್ಯಂ ಸೋಽಶ್ರಮಾವಸಥೋ ಜನಃ ।
ನಿಷ್ಕ್ರಾಂತೋ ವಿಷಯಾತ್ತಸ್ಮಾತ್ ಸ್ಥಾನಂ ಚಕ್ರೇಽಥ ಬಾಹ್ಯತಃ ॥

ಸ ತಥೋಕ್ತ್ವಾ ಮುನಿಜನಮರಜಾಮಿದಮಬ್ರವೀತ್ ।
ಇಹೈವ ವಸ ದುರ್ಮೇಧೇ ಆಶ್ರಮೇ ಸುಸಮಾಹಿತಾ ॥ ೧೩

ಇದಂ ಯೋಜನಪರ್ಯಂತಂ ಸರಃ ಸುರುಚಿರಪ್ರಭಮ್ ।
ಅರಜೇ ವಿಜ್ವರಾ ಭುಂಕ್ಷ್ವ ಕಾಲಶ್ಚಾತ್ರ ಪ್ರತೀಕ್ಷ್ಯತಾಮ್ ॥ ೧೪

---

ಸುರಿಸಿ ಸುಟ್ಟುಹಾಕಲಿ! (೭-೮) ಅವನ ರಾಜ್ಯದಲ್ಲಿರುವ ಸ್ಥಾವರ ಜಂಗಮಾತ್ಮಕವಾದ ಸಕಲಜೀವವರ್ಗವೂ ಸುಡುಮಣ್ಣಿನ ವೃಷ್ಟಿಯಿಂದ ಲಯಿಸಲಿ! ದಂಡನ ದೇಶದಲ್ಲಿ ಸಕಲ ಪ್ರಾಣಿವರ್ಗವೂ ಏಳು ರಾತ್ರಿಗಳವರೆಗೆ ಸುಡುಮಣ್ಣಿನ ರಾಶಿಯಿಂದ ಮುಚ್ಚಿಹೋದಂತಾಗುವುದು" ಎಂದು ಶಪಿಸಿದನು (೯-೧೦) ಕ್ರೋಧತಾಮ್ರಾಕ್ಷನಾದ ಭಾರ್ಗವನು ಈ ರೀತಿಯಲ್ಲಿ ಹೇಳಿ ಆಶ್ರಮವಾಸಿಗಳಾದ ಜನರನ್ನು ಕುರಿತು "ನೀವೆಲ್ಲರೂ ಈ ಆಶ್ರಮವನ್ನು ಬಿಟ್ಟು ರಾಜ್ಯದ ಹೊರಗೆ ಹೋಗಿರಿ" ಎಂದು ಆಜ್ಞಾಪಿಸಿದನು (೧೧). ಶುಕ್ರಾಚಾರ್ಯನ ಆಜ್ಞೆಯಂತೆ ಆಶ್ರಮವಾಸಿಗಳು ಅಲ್ಲಿಂದ ಹೊರಟು ದಂಡರಾಜನ ದೇಶದ ಹೊರಗೆ ಹೋಗಿ ನೆಲೆಸಿದರು. ಈ ರೀತಿಯಲ್ಲಿ ಶಿಷ್ಯರಿಗೆ ಹೇಳಿ ಶುಕ್ರನು ಅರಜೆಯ ಕಡೆಗೆ ತಿರುಗಿ "ಎಲೌ ಬುದ್ಧಿಹೀನಳೆ, ನೀನು ತಪಸ್ಸನ್ನಾಚರಿಸುತ್ತ ಏಕಾಗ್ರಚಿತ್ತಳಾಗಿ ಈ ಆಶ್ರಮದಲ್ಲಿಯೇ ವಾಸವಾಗಿರು (೧೨-೧೩) ಎಲೌ ಅರಜೆ, ವಿಶಾಲವೂ ರಮಣೀಯವೂ ಆದ ಈ ಸರಸ್ಸಿನ ಬಳಿಯಲ್ಲಿದ್ದು ಇದನ್ನು ನೀನು ನಿಶ್ಚಿಂತೆಯಿಂದ ಉಪಯೋಗಿಸಬಹುದು.

*

ತ್ವತ್ಸಮೀಪೇ ಚ ಯೇ ಸತ್ತ್ವಾ ವಾಸಮೇಷ್ಯಂತಿ ತಾಂ ನಿಶಾಮ್ ।
ಅವಧ್ಯಾಃ ಪಾಂಸುವರ್ಷೇಣ ತೇ ಭವಿಷ್ಯಂತಿ ನಿತ್ಯದಾ ॥ ೧೫

ಶ್ರುತ್ವಾ ನಿಯೋಗಂ ಬ್ರಹ್ಮರ್ಷೇಃ ಸಾರಜಾ ಭಾರ್ಗವೀ ತದಾ ।
ತಥೇತಿ ಪಿತರಂ ಪ್ರಾಹ ಭಾರ್ಗವಂ ಭೃಶದುಃಖಿತಾ ॥ ೧೬

ಇತ್ಯುಕ್ತ್ವಾ ಭಾರ್ಗವೋ ವಾಸಮನ್ಯತ್ರ ಸಮಕಾರಯತ್ ।
ತಚ್ಚ ರಾಜ್ಯಂ ನರೇಂದ್ರಸ್ಯ ಸಭೃತ್ಯಬಲವಾಹನಮ್ ॥ ೧೭

ಸಪ್ತಾಹಾದ್ಭಸ್ಮಸಾದ್ಭೂತಂ ಯಥೋಕ್ತಂ ಬ್ರಹ್ಮವಾದಿನಾ ।
ತಸ್ಯಾಸೌ ದಂಡವಿಷಯೋ ವಿಂಧ್ಯಶೈವಲಯೋರ್ನೃಪ ॥ ೧೮

ಶಪ್ತೋ ಬ್ರಹ್ಮರ್ಷಿಣಾ ತೇನ ವೈಧರ್ಮ್ಯೇ ಸಹಿತೇ ಕೃತೇ ।
ತತಃ ಪ್ರಭೃತಿ ಕಾಕುತ್ಸ್ಥ ದಂಡಕಾರಣ್ಯಮುಚ್ಯತೇ ॥ ೧೯

ತಪಸ್ವಿನಃ ಸ್ಥಿತಾ ಹ್ಯತ್ರ ಜನಸ್ಥಾನಮತೋಽಭವತ್ ।
ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ಪೃಚ್ಛಸಿ ರಾಘವ ॥ ೨೦

---

ಒಳ್ಳೆಯ ಕಾಲವನ್ನು ನಿರೀಕ್ಷಿಸುತ್ತಿರು ನಿನ್ನ ಸಮೀಪದಲ್ಲಿ ನೆಲೆಸಿರುವ ಪ್ರಾಣಿವರ್ಗಕ್ಕೆ ಸುಡುಮಣ್ಣಿನಿಂದ ಯಾವ ವಿಪತ್ತೂ ಬರುವುದಿಲ್ಲ" ಎಂದು ತಿಳಿಸಿದನು (೧೪-೧೫) ಬ್ರಹ್ಮರ್ಷಿಯ ಆಜ್ಞೆಯನ್ನು ಕೇಳಿ ಅರಜೆಯು ದುಃಖಸಂತಪ್ತಳಾಗಿ ಹಾಗೆಯೇ ಆಗಲೆಂದು ತಂದೆಗೆ ಹೇಳಿದಳು. ರಾಘವ, ಅನಂತರ ಭಾರ್ಗವನು ಬೇರೊಂದೆಡೆಗೆ ಹೋಗಿ ನೆಲೆಸಿದನು ಆ ಬ್ರಹ್ಮರ್ಷಿಯು ಹೇಳಿದಂತೆ ದಂಡರಾಜನ ರಾಜ್ಯವು ಅವನ ಪರಿವಾರಸಹಿತವಾಗಿ ಏಳು ದಿನಗಳಲ್ಲಿ ಸುಟ್ಟು ಬೂದಿಯಾಯಿತು (೧೬-೧೭) ಮಹಾರಾಜ-ಶ್ರೀರಾಮ, ವಿಂಧ್ಯಶೈವಲಗಳ ಮಧ್ಯದಲ್ಲಿರುವ ಈ ಪ್ರದೇಶವು ದಂಡನ ರಾಜ್ಯವಾಗಿತ್ತು ರಾಜನ ಅಧರ್ಮದಿಂದ ಬ್ರಹ್ಮರ್ಷಿಯ ಶಾಪಕ್ಕೆ ಈಡಾಯಿತು ಅನಂತರ, ಕಾಕುತ್ಸ್ಥ, ದಂಡಕಾರಣ್ಯವೆಂಬ ಹೆಸರನ್ನು ಪಡೆಯಿತು (೧೮-೧೯) ಆಮೇಲೆ ಇಲ್ಲಿ ತಪಸ್ವಿ ಜನರು ಬಂದು ನೆಲಸಿದ್ದರಿಂದ ಜನಸ್ಥಾನವೆನಿಸಿತು. ರಾಘವ, ನೀನು ಕೇಳಿದ ವಿಷಯವೆಲ್ಲವನ್ನೂ ಹೇಳಿ

ಸಂಧ್ಯಾಮುಪಾಸಿತುಂ ವೀರ ಸಮಯೋ ಹ್ಯತಿವರ್ತತೇ ।
ಏತೇ ಮಹರ್ಷಯಃ ಸರ್ವೇ ಪೂರ್ಣಕುಂಭಾಃ ಸಮಂತತಃ ॥ ೨೧

ಕೃತೋದಕಾ ನರವ್ಯಾಘ್ರ ಆದಿತ್ಯಂ ಪರ್ಯುಪಾಸತೇ ।
ಸ ತೈರ್ಬ್ರಾಹ್ಮಣಮುಖ್ಯೈಸ್ತಂ ಸಹಿತೈರ್ಬ್ರಹ್ಮವಿತ್ತಮೈಃ ॥ ೨೨

ರವಿರಸ್ತಂ ಗತೋ ರಾಮ ಗಚ್ಛೋದಕಮುಪಸ್ಪೃಶ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕಾಶೀತಿತಮಃ ಸರ್ಗಃ



ದ್ದೇನೆ ಇನ್ನು ಸಂಧ್ಯೋಪಾಸನೆಯ ಸಮಯವು ಮೀರುತ್ತದೆ ಮಹರ್ಷಿಗಳು ಸ್ನಾನಮಾಡಿ ಕುಂಭಗಳಲ್ಲಿ ಜಲವನ್ನು ತುಂಬಿ ತಂದು ಸೂರ್ಯೋಪಾಸನೆಯನ್ನು ಮಾಡುತ್ತಿದ್ದಾರೆ ಬ್ರಹ್ಮಜ್ಞಾನಿಗಳು ಪರಿಸುವ ಬ್ರಹ್ಮಮಂತ್ರದ ಪೂಜೆಯನ್ನು ಸ್ವೀಕರಿಸಿ ಸೂರ್ಯನು ಅಸ್ತಂಗತನಾಗುತ್ತಿರುವನು ನೀನು ಹೋಗಿ ಸ್ನಾನಾದಿ ಕೃತ್ಯಗಳನ್ನು ಮಾಡು" ಎಂದರು (೨೦-೨೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತೊಂದನೆಯ ಸರ್ಗ



## ದ್ವ್ಯಶೀತಿತಮಃ ಸರ್ಗಃ

### ರಾಮನಿವರ್ತನಮ್

ಋಷೇರ್ವಚನಮಾಜ್ಞಾಯ ರಾಮಃ ಸಂಧ್ಯಾಮುಪಾಸಿತುಮ್ ।
ಉಪಾಕ್ರಮತ್ ಸರಃ ಪುಣ್ಯಮಪ್ಸರೋಗಣಸೇವಿತಮ್ ॥ ೧

ತತೋದಕಮುಪಸ್ಪೃಶ್ಯ ಸಂಧ್ಯಾಮನ್ವಾಸ್ಯ ಪಶ್ಚಿಮಾಮ್ ।
ಆಶ್ರಮಂ ಪ್ರಾವಿಶದ್ರಾಮಃ ಕುಂಭಯೋನೇರ್ಮಹಾತ್ಮನಃ ॥ ೨

ತಸ್ಯಾಗಸ್ತ್ಯೋ ಬಹುಗುಣಂ ಕಂದಮೂಲಂ ತಥೌಷಧಿಮ್ ।
ಶಾಲ್ಯಾದೀನಿ ಪವಿತ್ರಾಣಿ ಭೋಜನಾರ್ಥಮಕಲ್ಪಯತ್ ॥ ೩

ಸ ಭುಕ್ತವಾನ್ನರಶ್ರೇಷ್ಠಸ್ತದನ್ನಮಮೃತೋಪಮಮ್ ।
ಪ್ರೀತಶ್ಚ ಪರಿತುಷ್ಟಶ್ಚ ತಾಂ ರಾತ್ರಿಂ ಸಮುಪಾವಿಶತ್ ॥ ೪

ಪ್ರಭಾತೇ ಕಲ್ಯಮುತ್ಥಾಯ ಕೃತ್ವಾಹ್ನಿಕಮರಿಂದಮಃ ।
ಋಷಿಂ ಸಮುಪಚಕ್ರಾಮ ಗಮನಾಯ ರಘೂತ್ತಮಃ ॥ ೫

## ಸರ್ಗ ೮೨

### ಶ್ರೀರಾಮನು ಅಗಸ್ತ್ಯಮುನಿಗಳನ್ನು ವಂದಿಸಿ ಅಯೋಧ್ಯೆಗೆ ಹಿಂದಿರುಗುವುದು

ಶ್ರೀರಾಮನು ಅಗಸ್ತ್ಯಮಹರ್ಷಿಗಳ ಆದೇಶವನ್ನನುಸರಿಸಿ ಸಂಧ್ಯೋಪಾಸನೆಗಾಗಿ ಅಪ್ಸರೋಗಣಸೇವಿತವಾದ ಆ ಪುಣ್ಯಸರಸ್ಸಿಗೆ ಹೋದನು. ಅಲ್ಲಿ ಜಲೋಪಸ್ಪರ್ಶದಿಂದ ಶುಚಿಯಾಗಿ ಸಾಯಂಸಂಧ್ಯಾವಂದನೆಯನ್ನು ಮಾಡಿ ಮಹಾತ್ಮರಾದ ಅಗಸ್ತ್ಯರ ಆಶ್ರಮಕ್ಕೆ ಬಂದನು (೧-೨). ಆತನಿಗೆ ಅಗಸ್ತ್ಯರು ಆರೋಗ್ಯಕರವಾದ ಓಷಧಿಯನ್ನು ಕೊಟ್ಟು ಭೋಜನಕ್ಕಾಗಿ ಕಂದಮೂಲಗಳನ್ನೂ ಪರಿಶುದ್ಧವಾದ ಅಕ್ಕಿಯ ಅನ್ನ ಮುಂತಾದವುಗಳನ್ನೂ ಒದಗಿಸಿದರು ಆ ನರಶ್ರೇಷ್ಠನು ಅಮೃತಸಮಾನವಾದ ಅನ್ನವನ್ನು ಭುಂಜಿಸಿ ಸಂತೃಪ್ತನಾಗಿ ಸಂತೋಷಗೊಂಡು ಆ ರಾತ್ರಿ ಆಶ್ರಮದಲ್ಲಿ ಉಳಿದನು (೩-೪). ಬೆಳಗಾಗಲು ಕಾಲೋಚಿತವಾದ ಪ್ರಾತರಾಹ್ನಿಕವನ್ನು ಮುಗಿಸಿ ಅಯೋಧ್ಯೆಗೆ

ಅಭಿವಾದ್ಯಾಬ್ರವೀದ್ರಾಮೋ ಮಹರ್ಷಿಂ ಕುಂಭಸಂಭವಮ್ ।
ಆಪೃಚ್ಛೇ ಸ್ವಾಂ ಪುರೀಂ ಗಂತುಂ ಮಾಮನುಜ್ಞಾತುಮರ್ಹಸಿ ॥ ೬

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ದರ್ಶನೇನ ಮಹಾತ್ಮನಃ ।
ದ್ರಷ್ಟುಂ ಚೈವಾಗಮಿಷ್ಯಾಮಿ ಪಾವನಾರ್ಥಮಿಹಾತ್ಮನಃ ॥ ೭

ತಥಾ ವದತಿ ಕಾಕುತ್ಸ್ಥೇ ವಾಕ್ಯಮದ್ಭುತದರ್ಶನಮ್ ।
ಉವಾಚ ಪರಮಪ್ರೀತೋ ಧರ್ಮನೇತ್ರಸ್ತಪೋಧನಃ ॥ ೮

ಅತ್ಯದ್ಭುತಮಿದಂ ವಾಕ್ಯಂ ತವ ರಾಮ ಶುಭಾಕ್ಷರಮ್ ।
ಪಾವನಃ ಸರ್ವಭೂತಾನಾಂ ತ್ವಮೇವ ರಘುನಂದನ ॥ ೯

ಮುಹೂರ್ತಮಪಿ ರಾಮ ತ್ವಾಂ ಯೇ ಚ ಪಶ್ಯಂತಿ ಕೇಚನ ।
ಪಾವಿತಾಃ ಸ್ವರ್ಗಭೂತಾಶ್ಚ ಪೂಜ್ಯಾಸ್ತೇ ಸರ್ವದೈವತೈಃ ॥ ೧೦

ಯೇ ಚ ತ್ವಾಂ ಘೋರಚಕ್ಷುರ್ಭಿಃ ಪಶ್ಯಂತಿ ಪ್ರಾಣಿನೋ ಭುವಿ ।
ಹತಾಸ್ತೇ ಯಮದಂಡೇನ ಸದ್ಯೋ ನಿರಯಗಾಮಿನಃ ॥ ೧೧

---

ಹೋಗುವ ಉದ್ದೇಶದಿಂದ ಅಗಸ್ತ್ಯಮುನಿಗಳ ಸಂದರ್ಶನಕ್ಕಾಗಿ ಹೋದನು. ಆ ರಘೂತ್ತಮನು ಮಹರ್ಷಿಗಳಿಗೆ ವಂದಿಸಿ "ಮಹಾತ್ಮರೆ, ನನ್ನ ರಾಜಧಾನಿಗೆ ಹೋಗುವುದಕ್ಕಾಗಿ ತಮ್ಮನ್ನು ಬೀಳ್ಕೊಡುತ್ತಿದ್ದೇನೆ ಅನುಜ್ಞೆಯನ್ನು ಕೊಡಬೇಕು (೫-೬). ತಮ್ಮ ದರ್ಶನದಿಂದ ಧನ್ಯನಾದೆನು ; ಅನುಗೃಹೀತನಾದೆನು. ನಾನು ಪಾವನನಾಗುವುದಕ್ಕಾಗಿ ಇಲ್ಲಿಗೆ ಮತ್ತೆ ತಮ್ಮ ದರ್ಶನಕ್ಕೆ ಬರುವೆನು" ಎಂದು ನಿವೇದಿಸಿದನು. ಶ್ರೀರಾಮನ ವಿಸ್ಮಯಾವಹವಾದ ವಿನಯವಚನವನ್ನು ಕೇಳಿ, ಧರ್ಮನೇತ್ರರಾದ ಆ ತಪೋಧನರು ಪರಮಪ್ರೀತರಾಗಿ ಹೀಗೆಂದರು (೭-೮) : "ರಘುನಂದನ, ಶುಭಾಕ್ಷರವುಳ್ಳ ನಿನ್ನ ಮಾತು ವಿಸ್ಮಯಕರವಾಗಿದೆ. ಸರ್ವಭೂತಗಳನ್ನೂ ಪಾವನಗೊಳಿಸತಕ್ಕವನು ನೀನೇ ! ಒಂದು ಕ್ಷಣಕಾಲ ನಿನ್ನನ್ನು ನೋಡಿದವರು ಪವಿತ್ರರಾಗಿ ಸ್ವರ್ಗವನ್ನು ಪಡೆಯುವರು ಸರ್ವದೇವತೆಗಳಿಂದಲೂ ಪೂಜ್ಯರಾಗುವರು (೯-೧೦) ಯಾರು ನಿನ್ನನ್ನು ಕೆಟ್ಟ ಕಣ್ಣುಗಳಿಂದ ಕಾಣುವರೋ ಅವರು ಯಮದಂಡದಿಂದ ಹತರಾಗಿ ನರಕ

ಈದೃಶಸ್ತ್ವಂ ರಘುಶ್ರೇಷ್ಠ ಪಾವನಃ ಸರ್ವದೇಹಿನಾಮ್ ।
ಭುವಿ ತ್ವಾಂ ಕಥಯಂತೋಽಪಿ ಸಿದ್ಧಿಮೇಷ್ಯಂತಿ ರಾಘವ ॥ ೧೨
ಗಚ್ಛ ಚಾರಿಷ್ಟಮವ್ಯಗ್ರಃ ಪಂಥಾನಮಕುತೋಭಯಮ್ ।
ಪ್ರಶಾಧಿ ರಾಜ್ಯಂ ಧರ್ಮೇಣ ಗತಿರ್ಹಿ ಜಗತೋ ಭವಾನ್ ॥ ೧೩
ಏವಮುಕ್ತಸ್ತು ಮುನಿನಾ ಪ್ರಾಂಜಲಿಃ ಪ್ರಗ್ರಹೋ ನೃಪಃ ।
ಅಭ್ಯವಾದಯತ ಪ್ರಾಜ್ಞಸ್ತಮೃಷಿಂ ಸತ್ಯಶೀಲಿನಮ್ ॥ ೧೪
ಅಭಿವಾದ್ಯ ಮುನಿಶ್ರೇಷ್ಠಂ ತಾಂಶ್ಚ ಸರ್ವಾಂಸ್ತಪೋಧನಾನ್ ।
ಅಧ್ಯಾರೋಹತ್ತದವ್ಯಗ್ರಃ ಪುಷ್ಪಕಂ ಹೇಮಭೂಷಿತಮ್ ॥ ೧೫
ತಂ ಪ್ರಯಾಂತಂ ಮುನಿಗಣಾ ಹ್ಯಾಶೀರ್ವಾದೈಃ ಸಮಂತತಃ ।
ಅಪೂಜಯನ್ ಮಹೇಂದ್ರಾಭಂ ಸಹಸ್ರಾಕ್ಷಮಿವಾಮರಾಃ ॥ ೧೬
ಸ್ವಸ್ಥಃ ಸ ದದೃಶೇ ರಾಮಃ ಪುಷ್ಪಕೇ ಹೇಮಭೂಷಿತೇ ।
ಶಶೀ ಮೇಘಸಮೀಪಸ್ಥೋ ಯಥಾ ಜಲಧರಾಗಮೇ ॥ ೧೭
ತತೋಽರ್ಧದಿವಸೇ ಪ್ರಾಪ್ತೇ ಪೂಜ್ಯಮಾನಸ್ತತಸ್ತತಃ ।
ಅಯೋಧ್ಯಾಂ ಪ್ರಾಪ್ಯ ಕಾಕುತ್ಸ್ಥೋ ಮಧ್ಯಕಕ್ಷ್ಯಾಮವಾರುಹತ್

---

ವನ್ನಪ್ಪವರು ಇಂತಹ ಮಾಹಾತ್ಮ್ಯವುಳ್ಳ ನೀನು ಸರ್ವದೇಹಿಗಳಿಗೂ ಪಾವನನಾಗಿದ್ದೀಯೆ. ನಿನ್ನ ಚರಿತೆಯನ್ನು ಹೇಳತಕ್ಕವರೂ ಸಹ ಮೋಕ್ಷವನ್ನು ಪಡೆಯುವರು (೧೧-೧೨) ಶ್ರೀರಾಮ, ನಿಶ್ಚಿಂತನಾಗಿ ನಿರ್ಭಯವೂ ಸುಖಕರವೂ ಆದ ಮಾರ್ಗವನ್ನವಲಂಬಿಸು. ಧರ್ಮದಿಂದ ರಾಜ್ಯವನ್ನು ಪಾಲಿಸು ಜಗತ್ತಿಗೆ ನೀನೇ ಗತಿ" ಎಂದರು ಆಗ ಪ್ರಾಜ್ಞನಾದ ನೃಪಾಲನು ಸತ್ಯಶೀಲರಾದ ಅಗಸ್ತ್ಯರಿಗೆ ಕೈನೀಡಿ ದೀರ್ಘದಂಡ ನಮಸ್ಕಾರವನ್ನು ಮಾಡಿ, ಇತರ ತಪೋಧನರಿಗೂ ವಂದಿಸಿ, ನಿಶ್ಚಿಂತೆಯಿಂದ ಹೇಮಭೂಷಿತವಾದ ಪುಷ್ಪಕವನ್ನೇರಿದನು (೧೩-೧೫) ಹೀಗೆ ಪ್ರಯಾಣಸನ್ನದ್ಧನಾದ ಶ್ರೀರಾಮನನ್ನು, ದೇವತೆಗಳು ದೇವೇಂದ್ರನನ್ನು ಅಭಿನಂದಿಸುವಂತೆ, ಮುನಿಗಳೆಲ್ಲರೂ ಆಶೀರ್ವಾದಗಳಿಂದ ಅಭಿನಂದಿಸಿದರು ಹೇಮಭೂಷಿತವಾದ ಪುಷ್ಪಕದಲ್ಲಿ ಮಂಡಿಸಿದ ಶ್ರೀರಾಮನು, ವರ್ಷಾಕಾಲದಲ್ಲಿ ಮೇಘದ ಬಳಿ ಕಾಣಿಸುವ ಚಂದ್ರನಂತೆ ಕಂಗೊಳಿಸಿದನು (೧೬-೧೭) ಹೀಗೆ ಸಂಪೂಜ್ಯ

ತತೋ ವಿಸೃಜ್ಯ ರುಚಿರಂ ಪುಷ್ಪಕಂ ಕಾಮಗಾಮಿ ತತ್ ।
ವಿಸರ್ಜಯಿತ್ವಾ ಗಚ್ಛೇತಿ ಸ್ವಸ್ತಿ ತೇಽಸ್ತ್ವಿತಿ ಚ ಪ್ರಭುಃ ॥ ೧೯

ಕಕ್ಷ್ಯಾಂತರವಿನಿಕ್ಷಿಪ್ತಂ ದ್ವಾಃಸ್ಥಂ ರಾಮೋಽಬ್ರವೀದ್ವಚಃ ।
ಲಕ್ಷ್ಮಣಂ ಭರತಂ ಚೈವ ಗತ್ವಾ ತೌ ಲಘುವಿಕ್ರಮೌ ॥ ೨೦

ಮಮಾಗಮನಮಾಖ್ಯಾತ ಶಬ್ದಾಪಯತ ಮಾ ಚಿರಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವ್ಯಶೀತಿತಮಃ ಸರ್ಗಃ



ನಾದ ರಾಘವನು ಮಧ್ಯಾಹ್ನದ ಸಮಯದಲ್ಲಿ ಅಯೋಧ್ಯೆಗೆ ಬಂದು, ಅರಮನೆಯ ಮಧ್ಯಕಕ್ಷ್ಯೆಯಲ್ಲಿ ಇಳಿದನು ಆಮೇಲೆ ಕಾಮಚಾರಿಯಾದ ವಿಮಾನವನ್ನು ಕುರಿತು "ಪುಷ್ಪಕ, ನಿನಗೆ ಶುಭವಾಗಲಿ ಹೋಗು" ಎಂದು ಅದನ್ನು ಕಳಿಸಿದನು ಅನಂತರ ಇನ್ನೊಂದು ಕಕ್ಷ್ಯೆಯ ಬಳಿಯಲ್ಲಿದ್ದ ದ್ವಾರಪಾಲಕನನ್ನು ಕರೆದು "ಎಲೈ, ನಾನು ಬಂದಿರುವೆನೆಂದು ಭರತ ಲಕ್ಷ್ಮಣರಿಗೆ ತಿಳಿಸಿ, ಅವರನ್ನು ಶೀಘ್ರವಾಗಿ ಬರಮಾಡು" ಎಂದು ಆಜ್ಞಾಪಿಸಿದನು (೧೮-೨೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತೆರಡನೆಯ ಸರ್ಗ



## ತ್ರ್ಯಶೀತಿತಮಃ ಸರ್ಗಃ

ರಾಜಸೂಯಾಜಿಹೀರ್ಷಾ

ತಚ್ಛ್ರುತ್ವಾ ಭಾಷಿತಂ ತಸ್ಯ ರಾಮಸ್ಯಾಕ್ಲಿಷ್ಟಕರ್ಮಣಃ ।
ದ್ವಾಃಸ್ಥಃ ಕುಮಾರಾವಾಹೂಯ ರಾಘವಾಯ ನ್ಯವೇದಯತ್ ॥ ೧

ದೃಷ್ಟ್ವಾ ತು ರಾಘವಃ ಪ್ರಾಪ್ತೌ ಪ್ರಿಯೌ ಭರತಲಕ್ಷ್ಮಣೌ ।
ಪರಿಷ್ವಜ್ಯ ತದಾ ರಾಮೋ ವಾಕ್ಯಮೇತದುವಾಚ ಹ ॥ ೨

ಕೃತಂ ಮಯಾ ಯಥಾತಥ್ಯಂ ದ್ವಿಜಕಾರ್ಯಮನುತ್ತಮಮ್ ।
ಧರ್ಮಸೇತುಮತೋ ಭೂಯಃ ಕರ್ತುಮಿಚ್ಛಾಮಿ ರಾಘವೌ ॥ ೩

ಅಕ್ಷಯ್ಯಶ್ಚಾವ್ಯಯಶ್ಚೈವ ಧರ್ಮಸೇತುರ್ಮತೋ ಮಮ ।
ಧರ್ಮಪ್ರಸಾಧಕಂ ಹ್ಯೇತತ್ ಸರ್ವಪಾಪಪ್ರಣಾಶನಮ್ ॥ ೪

### ಸರ್ಗ ೮೩

ರಾಜಸೂಯಯಾಗವನ್ನು ಕೈಗೊಳ್ಳಲು ಶ್ರೀರಾಮನ ಅಪೇಕ್ಷೆ ಅದರಿಂದ
ರಾಜರ ಕ್ಷಯವಾಗುವುದೆಂದು ಭರತನ ಹೇಳಿಕೆ

ಶ್ರೀರಾಮನ ಆಜ್ಞೆಯನ್ನು ಕೇಳಿ ದ್ವಾರಪಾಲನು ಆ ರಾಜಪುತ್ರರನ್ನು ಕರೆತಂದು ಅವರು ಬಂದ ಸಂಗತಿಯನ್ನು ರಾಘವನಿಗೆ ಅರಿಕೆಮಾಡಿದನು ಶ್ರೀರಾಮನು ತನಗೆ ಪ್ರಿಯರಾದ ಭರತಲಕ್ಷ್ಮಣರನ್ನು ಕಂಡು ಆಲಿಂಗಿಸಿಕೊಂಡು ಹೀಗೆಂದನು (೧-೨). "ರಘುನಂದನರೆ, ನಾನು ಪ್ರತಿಜ್ಞೆಮಾಡಿದಂತೆ ಆ ದ್ವಿಜಕಾರ್ಯವನ್ನು ನೆರವೇರಿಸಿ ಬಾಲಕನನ್ನು ಬದುಕಿಸಿದ್ದಾಯಿತು. ಈಗ ರಾಜಧರ್ಮಕ್ಕೆ ಮರ್ಯಾದಾಸ್ವರೂಪವಾದ ಇನ್ನೊಂದು ಕಾರ್ಯವನ್ನು ಮಾಡಬೇಕೆಂದಿದ್ದೇನೆ (೩). ಆ ಧರ್ಮಸೇತುವು ಬಹುಕಾಲದವರೆಗೆ ಫಲಕಾರಿಯಾಗಿ ಅಕ್ಷಯವೂ ಧರ್ಮಾಂತರಹೇತುವಾಗಿ ಅವ್ಯಯವೂ ಆದ

ಯುವಾಭ್ಯಾಮಾತ್ಮಭೂತಾಭ್ಯಾಂ ರಾಜಸೂಯಮನುತ್ತಮಮ್ ।
ಸಹಿತೋ ಯಷ್ಟುಮಿಚ್ಛಾಮಿ ತತ್ರ ಧರ್ಮೋ ಹಿ ಶಾಶ್ವತಃ ॥ ೫

ಇಷ್ಟ್ವಾ ತು ರಾಜಸೂಯೇನ ಮಿತ್ರಃ ಶತ್ರುನಿಬರ್ಹಣಃ ।
ಸುಹುತೇನ ಸುಯಜ್ಞೇನ ವರುಣತ್ವಮುಪಾಗಮತ್ ॥ ೬

ಸೋಮಶ್ಚ ರಾಜಸೂಯೇನ ಇಷ್ಟ್ವಾ ಧರ್ಮೇಣ ಧರ್ಮವಿತ್ ।
ಪ್ರಾಪ್ತಶ್ಚ ಸರ್ವಲೋಕೇಷು ಕೀರ್ತಿಂ ಸ್ಥಾನಂ ಚ ಶಾಶ್ವತಮ್ ॥ ೭

ಅಸ್ಮಿನ್ನಹನಿ ಯಚ್ಛ್ರೇಯಶ್ಚಿಂತ್ಯತಾಂ ತನ್ಮಯಾ ಸಹ ।
ಹಿತಂ ಚಾಯತಿಯುಕ್ತಂ ಚ ಪ್ರಯತೌ ವಕ್ತುಮರ್ಹಥಃ ॥ ೮

ಶ್ರುತ್ವಾ ತು ರಾಘವಸ್ಯೈತದ್ವಾಕ್ಯಂ ವಾಕ್ಯವಿಶಾರದಃ ।
ಭರತಃ ಪ್ರಾಂಜಲಿರ್ಭೂತ್ವಾ ವಾಕ್ಯಮೇತದುವಾಚ ಹ ॥ ೯

ತ್ವಯಿ ಧರ್ಮಃ ಪರಃ ಸಾಧೋ ತ್ವಯಿ ಸರ್ವಾ ವಸುಂಧರಾ ।
ಪ್ರತಿಷ್ಠಿತಾ ಮಹಾಬಾಹೋ ಯಶಶ್ಚಾಮಿತವಿಕ್ರಮ ॥ ೧೦

---

ದ್ದೆಂದು ನನ್ನ ಮತವಾಗಿದೆ. ಧರ್ಮವರ್ಧಕವೂ ಸರ್ವಪಾಪಪ್ರಣಾಶನವೂ ಆಗಿದೆ ಏನೆಂದರೆ, ನನ್ನ ಅಂಗವಾಗಿರುವ ನಿಮ್ಮ ನೆರವಿನಿಂದ ಕೂಡಿ ರಾಜಸೂಯಯಾಗವನ್ನು ನೆರವೇರಿಸಬೇಕೆಂದಿದ್ದೇನೆ. ರಾಜಸೂಯದಲ್ಲಿ ಶಾಶ್ವತವಾದ ಧರ್ಮವು ನೆಲೆಸಿದೆ (೪-೫) ಮಿತ್ರನು ಈ ರಾಜಸೂಯವನ್ನು ವಿಧಿವತ್ತಾಗಿ ಮಾಡಿ ವರುಣಪದವಿಯನ್ನು ಪಡೆದಿದ್ದಾನೆ ಸೋಮನು ಧರ್ಮಪೂರ್ವಕವಾಗಿ ಇದನ್ನಾಚರಿಸಿ ಸರ್ವಲೋಕಗಳಲ್ಲಿಯೂ ಕೀರ್ತಿಯನ್ನೂ ಉತ್ತಮ ಸ್ಥಾನವನ್ನೂ ಗಳಿಸಿದ್ದಾನೆ (೬-೭) ಆದ್ದರಿಂದ ಯಾವುದು ಶ್ರೇಯಸ್ಕರವೆಂಬುದನ್ನು ನೀವಿಬ್ಬರೂ ನನ್ನೊಡನೆ ಈ ದಿನ ಆಲೋಚಿಸಬೇಕಾಗಿದೆ. ಈಗಲೂ ಭವಿಷ್ಯತ್ಕಾಲದಲ್ಲಿಯೂ ಹಿತವಾದುದನ್ನು ಸಿಧಾನವಾಗಿ ಚಿಂತಿಸಿ ನೀವು ಹೇಳಬೇಕು" ಎಂದನು (೮). ರಾಘವನ ನುಡಿಯನ್ನಾಲಿಸಿ ವಾಕ್ಯವಿಶಾರದನಾದ ಭರತನು ಕೈಮುಗಿದು ಇಂತೆಂದನು : "ಹೇ ಮಹಾಬಾಹು, ಧರ್ಮವು ನಿನ್ನಲ್ಲಿ ನೆಲೆಸಿದೆ ಪೃಥ್ವಿಯು ನಿನಗೆ ಅಧೀನವಾಗಿದೆ. ಕೀರ್ತಿ ಸ್ಥಿರವಾಗಿದೆ (೯-೧೦).

ಮಹೀಪಾಲಾಶ್ಚ ಸರ್ವೇ ತ್ವಾಂ ಪ್ರಜಾಪತಿಮಿವಾಮರಾಃ ।
ನಿರೀಕ್ಷಂತೇ ಮಹಾತ್ಮಾನಂ ಲೋಕನಾಥಂ ಯಥಾ ವಯಮ್ ॥ ೧೧

ಪ್ರಜಾಶ್ಚ ಪಿತೃವದ್ರಾಜನ್ ಪಶ್ಯಂತಿ ತ್ವಾಂ ಮಹಾಬಲ ।
ಪೃಥಿವ್ಯಾ ಗತಿಭೂತೋಽಸಿ ಪ್ರಾಣಿನಾಮಪಿ ರಾಘವ ॥ ೧೨

ಸ ತ್ವಮೇವಂವಿಧಂ ಯಜ್ಞಮಾಹರ್ತಾಸಿ ಕಥಂ ನೃಪ ।
ಪೃಥಿವ್ಯಾಂ ರಾಜವಂಶಾನಾಂ ವಿನಾಶೋ ಯತ್ರ ದೃಶ್ಯತೇ ॥ ೧೩

ಪೃಥಿವ್ಯಾಂ ಯೇ ಚ ಪುರುಷಾ ರಾಜನ್ ಪೌರುಷಮಾಗತಾಃ ।
ಸರ್ವೇಷಾಂ ಭವಿತಾ ತತ್ರ ಸಂಕ್ಷಯಃ ಸರ್ವಕೋಪಜಃ ॥ ೧೪

ಸ ತ್ವಂ ಪುರುಷಶಾರ್ದೂಲ ಗುಣೈರತುಲವಿಕ್ರಮ ।
ಪೃಥಿವೀಂ ನಾರ್ಹಸೇ ಹಂತುಂ ವಶೇ ಹಿ ತವ ವರ್ತತೇ ॥ ೧೫

ಭರತಸ್ಯ ತು ತದ್ವಾಕ್ಯಂ ಶ್ರುತ್ವಾಮೃತಮಯಂ ತದಾ ।
ಪ್ರಹರ್ಷಮತುಲಂ ಲೇಭೇ ರಾಮಃ ಸತ್ಯಪರಾಕ್ರಮಃ ॥ ೧೬

---

ನಮ್ಮಂತೆಯೇ ಸಕಲ ಮಹೀಪಾಲರೂ ಲೋಕನಾಥನಾದ ನಿನ್ನನ್ನು, ದೇವತೆಗಳು ಬ್ರಹ್ಮದೇವನನ್ನು ಹೇಗೋ ಹಾಗೆ ಗೌರವದಿಂದ ಕಾಣುತ್ತಿದ್ದಾರೆ. ಮಹಾರಾಜ, ಪ್ರಜೆಗಳು ನಿನ್ನನ್ನು ತಂದೆಯಂತೆ ಭಾವಿಸಿದ್ದಾರೆ. ಈ ಪೃಥ್ವಿಗೂ ಸಕಲ ಪ್ರಾಣಿಗಳಿಗೂ ಗತಿಯಾಗಿದ್ದೀಯೆ (೧೧-೧೨). ಹೀಗೆ ಪ್ರೀತಿಪಾತ್ರನಾಗಿರುವ ನೀನು ಈ ಬಗೆಯ ರಾಜಸೂಯವನ್ನು ನಡೆಸುವುದು ಹೇಗೆ? ಏಕೆಂದರೆ, ಈ ಯಜ್ಞದಲ್ಲಿ ಜಗತ್ತಿನಲ್ಲಿರುವ ರಾಜವಂಶದವರ ವಿನಾಶವೇ ಸಂಭವಿಸುವುದು (೧೩) ವೀರರಾದ ಸಮಸ್ತ ಪುರುಷರಿಗೂ ಕೋಪದಿಂದ ಘರ್ಷಣೆಯುಂಟಾಗಿ ಎಲ್ಲರ ನಾಶವು ಪ್ರಾಪ್ತವಾಗುವುದು. ಆದ್ದರಿಂದ, ಪುರುಷೋತ್ತಮ, ಗುಣನಿಧಿಯಾದ ನೀನು ಜಗತ್ತನ್ನು ನಾಶಗೊಳಿಸುವುದು ಯುಕ್ತವಲ್ಲ. ಜಗತ್ತು ನಿನ್ನ ವಶದಲ್ಲಿಯೇ ಇದೆ" ಎಂದನು (೧೪-೧೫). ಭರತನಾಡಿದ ಮಾತು ಶ್ರೀರಾಮನಿಗೆ ಅಮೃತಮಯವಾಯಿತು.

ಉವಾಚ ಚ ಶುಭಂ ವಾಕ್ಯಂ ಕೈಕೇಯ್ಯಾನಂದವರ್ಧನಮ್ ।
ಪ್ರೀತೋಽಸ್ಮಿ ಪರಿತುಷ್ಟೋಽಸ್ಮಿ ತವಾದ್ಯ ವಚನೇಽನಘ ॥ ೧೭

ಇದಂ ವಚನಮಕ್ಲೀಬಂ ತ್ವಯಾ ಧರ್ಮಸಮಾಹಿತಮ್ ।
ವ್ಯಾಹೃತಂ ಪುರುಷವ್ಯಾಘ್ರ ಪೃಥಿವ್ಯಾಃ ಪರಿಪಾಲನಮ್ ॥ ೧೮

ಏಷ್ಯದಸ್ಮದಭಿಪ್ರಾಯಾದ್ರಾಜಸೂಯಾತ್ ಕ್ರತೂತ್ತಮಾತ್ ।
ನಿವರ್ತಯಾಮಿ ಧರ್ಮಜ್ಞ ತವ ಸುವ್ಯಾಹೃತೇನ ಚ ॥ ೧೯

ಲೋಕಪೀಡಾಕರಂ ಕರ್ಮ ನ ಕರ್ತವ್ಯಂ ವಿಚಕ್ಷಣೈಃ ।
ಬಾಲಾನಾಂ ತು ಶುಭಂ ವಾಕ್ಯಂ ಗ್ರಾಹ್ಯಂ ಲಕ್ಷ್ಮಣಪೂರ್ವಜ ॥ ೨೦

ತಸ್ಮಾಚ್ಛೃಣೋಮಿ ತೇ ವಾಕ್ಯಂ ಸಾಧು ಯುಕ್ತಂ ಮಹಾಮತೇ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರ್ಯಶೀತಿತಮಃ ಸರ್ಗಃ



ಆ ಸತ್ಯಪರಾಕ್ರಮನು ಅಮಿತಾನಂದಯುಕ್ತನಾಗಿ ಕೈಕೇಯೀಸುತನನ್ನು ಕುರಿತು ಇಂತೆಂದನು: "ಭರತ, ಆನಂದವಾಯಿತು ಸಂತುಷ್ಟನಾದೆನು. ನಿನ್ನ ನುಡಿ ಸಾರವತ್ತಾಗಿಯೂ ಧರ್ಮಯುಕ್ತವಾಗಿಯೂ ಇದೆ ಪೃಥ್ವಿಯ ಪರಿಪಾಲನೆಗೆ ಸಾಧನವಾಗಿದೆ (೧೭-೧೮) ಹೇ ಧರ್ಮಜ್ಞ, ನಾನು ಮಾಡ ಬೇಕೆಂದು ಉದ್ದೇಶಿಸಿರುವ ರಾಜಸೂಯಯಾಗದಿಂದ ನಿವೃತ್ತನಾಗುವೆನು. ನೀನು ಹೀಗೆ ಹೇಳಿದ್ದು ಉತ್ತಮವಾಯಿತು. ಲೋಕಕ್ಕೆ ಹಿಂಸೆಯಾಗುವ ಕೃತ್ಯವನ್ನು ವಿವೇಕಿಗಳು ಮಾಡಬಾರದು. ಶುಭವಾಕ್ಯವನ್ನು ಕಿರಿಯರು ಹೇಳಿದರೂ ಗ್ರಹಿಸಬೇಕು ಆದ್ದರಿಂದ ಯುಕ್ತವಾದ ನಿನ್ನ ಮಾತನ್ನು ಕೇಳು ತ್ತೇನೆ" ಎಂದನು (೧೯-೨೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತುಮೂರನೆಯ ಸರ್ಗ



## ಚತುರಶೀತಿತಮಃ ಸರ್ಗಃ

### ವೃತ್ರತಪೋವರ್ಣನಮ್

ತಥೋಕ್ತವತಿ ರಾಮೇ ತು ಭರತೇ ಚ ಮಹಾತ್ಮನಿ ।
ಲಕ್ಷ್ಮಣೋಽಥ ಶುಭಂ ವಾಕ್ಯಮುವಾಚ ರಘುನಂದನಮ್ ॥ ೧

ಅಶ್ವಮೇಧೋ ಮಹಾಯಜ್ಞಃ ಪಾವನಃ ಸರ್ವಪಾಪ್ಮನಾಮ್ ।
ಪಾವನಸ್ತವ ದುರ್ಧರ್ಷೋ ರೋಚತಾಂ ರಘುನಂದನ ॥ ೨

ಶ್ರೂಯತೇ ಹಿ ಪುರಾ ವೃತ್ತಂ ವಾಸವೇ ಸುಮಹಾತ್ಮನಿ ।
ಬ್ರಹ್ಮಹತ್ಯಾವೃತಃ ಶಕ್ರೋ ಹಯಮೇಧೇನ ಪಾವಿತಃ ॥ ೩

ಪುರಾ ಕಿಲ ಮಹಾಬಾಹೋ ದೇವಾಸುರಸಮಾಗಮೇ ।
ವೃತ್ರೋ ನಾಮ ಮಹಾನಾಸೀದ್ದೈತೇಯೋ ಲೋಕಸಂಮತಃ ॥ ೪

ವಿಸ್ತೀರ್ಣೋ ಯೋಜನಶತಮುಚ್ಛ್ರಿತಸ್ತ್ರಿಗುಣಂ ತತಃ ।
ಅನುರಾಗೇಣ ಲೋಕಾಂಸ್ತ್ರೀನ್ ಸ್ನೇಹಾತ್ ಪಶ್ಯತಿ ಸರ್ವತಃ ॥ ೫

## ಸರ್ಗ ೮೪

ಲಕ್ಷ್ಮಣನು ಅಶ್ವಮೇಧಯಾಗವನ್ನಾಚರಿಸಬೇಕೆಂದು ಸೂಚಿಸುತ್ತ
ವೃತ್ರಾಸುರನ ಕಥೆಯನ್ನು ಹೇಳುವುದು

ಶ್ರೀರಾಮನೂ ಭರತನೂ ಈ ಪ್ರಕಾರವಾಗಿ ಹೇಳಲಾಗಿ, ಲಕ್ಷ್ಮಣನು ಇಂತೆಂದನು . "ರಘುನಂದನ, ಅಶ್ವಮೇಧವೆಂಬ ಮಹಾಯಜ್ಞವು ಸರ್ವಪಾಪಗಳನ್ನೂ ಪರಿಹರಿಸುತ್ತದೆ. ಶ್ರೇಷ್ಠವಾದ ಆ ಯಜ್ಞವು ಪಾವನವೆನಿಸಿದೆ ಶ್ರೀರಾಮ, ಅದು ನಿನಗೆ ಪ್ರಿಯವಾಗಲಿ (೧-೨) ಹಿಂದೆ ಬ್ರಹ್ಮಹತ್ಯಾದೋಷಕ್ಕೆ ಒಳಗಾದ ಇಂದ್ರನು ಅಶ್ವಮೇಧವನ್ನಾಚರಿಸಿ ಪರಿಶುದ್ಧನಾದನೆಂದು ಕೇಳಿದ್ದೇವೆ ಒಮ್ಮೆ ದೇವಾಸುರರು ಸ್ನೇಹದಿಂದಿರುವ ಕಾಲದಲ್ಲಿ ವೃತ್ರನೆಂಬ ಮಹಾದೈತ್ಯನು ಲೋಕಪ್ರಿಯನಾಗಿದ್ದನು (೩-೪) ಅವನು ನೂರು ಯೋಜನದಷ್ಟು ಸುತ್ತಳತೆಯುಳ್ಳವನೂ ಮುನ್ನೂರು ಯೋಜನದಷ್ಟು ಎತ್ತರದವನೂ ಆಗಿದ್ದನಂತೆ ! ತನ್ನದೆಂಬ ಅಭಿಮಾನದಿಂದ ಮೂರು ಲೋಕಗಳನ್ನೂ ಪ್ರೀತಿ

ಧರ್ಮಜ್ಞಶ್ಚ ಕೃತಜ್ಞಶ್ಚ ಬುದ್ಧ್ಯಾ ಚ ಪರಿನಿಷ್ಠಿತಃ ।
ಶಶಾಸ ಪೃಥಿವೀಂ ಸ್ಫೀತಾಂ ಧರ್ಮೇಣ ಸುಸಮಾಹಿತಃ ॥ ೬

ತಸ್ಮಿನ್ ಪ್ರಶಾಸತಿ ತದಾ ಸರ್ವಕಾಮದುಘಾ ಮಹೀ ।
ರಸವಂತಿ ಪ್ರಸೂನಾನಿ ಮೂಲಾನಿ ಚ ಫಲಾನಿ ಚ ॥ ೭

ಅಕೃಷ್ಟಪಚ್ಯಾ ಪೃಥಿವೀ ಸುಸಂಪನ್ನಾ ಮಹಾತ್ಮನಃ ।
ಸ ರಾಜ್ಯಂ ತಾದೃಶಂ ಭುಂಕ್ತೇ ಸ್ಫೀತಮದ್ಭುತದರ್ಶನಮ್ ॥ ೮

ತಸ್ಯ ಬುದ್ಧಿಃ ಸಮುತ್ಪನ್ನಾ ತಪಃ ಕುರ್ಯಾಮನುತ್ತಮಮ್ ।
ತಪೋ ಹಿ ಪರಮಂ ಶ್ರೇಯಃ ಸಂಮೋಹಮಿತರತ್ ಸುಖಮ್ ॥ ೯

ಸ ನಿಕ್ಷಿಪ್ಯ ಸುತಂ ಜ್ಯೇಷ್ಠಂ ಪೌರೇಷು ಮಧುರೇಶ್ವರಮ್ ।
ತಪ ಉಗ್ರಂ ಸಮಾತಿಷ್ಠತ್ತಾಪಯನ್ ಸರ್ವದೇವತಾಃ ॥ ೧೦

ತಪಸ್ತಪ್ಯತಿ ವೃತ್ರೇ ತು ವಾಸವಃ ಪರಮಾರ್ತವತ್ ।
ವಿಷ್ಣುಂ ಸಮುಪಸಂಕ್ರಮ್ಯ ವಾಕ್ಯಮೇತದುವಾಚ ಹ ॥ ೧೧

---

ಯಿಂದ ನೋಡಿಕೊಳ್ಳುತ್ತಿದ್ದನು (೫) ಧರ್ಮಜ್ಞನೂ ಕೃತಜ್ಞನೂ ಪರಿಷ್ಕೃತ ಬುದ್ಧಿಯುಳ್ಳವನೂ ಆಗಿ ವೃತ್ರಾಸುರನು ಧರ್ಮನಿಷ್ಠೆಯಿಂದ ವಿಶಾಲವಾದ ಈ ಪೃಥ್ವಿಯನ್ನು ಆಳುತ್ತಿದ್ದನು ಆತನ ರಾಜ್ಯಭಾರದಲ್ಲಿ ಭೂಮಿಯು ಕಾಮಧೇನುವಾಗಿತ್ತು ಬೇರು ಹೂ ಹಣ್ಣುಗಳು ರಸವತ್ತರವಾಗಿದ್ದವು (೬-೭). ಆ ಮಹಾತ್ಮನ ಕಾಲದಲ್ಲಿ ಕೃಷಿಯಿಲ್ಲದೆಯೇ ಭೂಮಿಯು ಫಲಿಸುತ್ತಿತ್ತು ಅಂತಹ ವಿಸ್ಮಯಾವಹವಾದ ರಾಜ್ಯವನ್ನು ವೃತ್ರನು ಪಾಲಿಸುತ್ತಿದ್ದನು (೮) ಹೀಗಿರುವಾಗ ಆತನಿಗೆ "ನಾನು ಉತ್ತಮವಾದ ತಪಸ್ಸನ್ನಾಚರಿಸಬೇಕು. ತಪಸ್ಸು ಶ್ರೇಯಸ್ಕರವಾದುದು ಇತರ ವಿಷಯಸುಖವು ಮೋಹಕಾರಿ" ಎಂದು ಬುದ್ಧಿಯುಂಟಾಯಿತು ಅವನು ತನ್ನ ಜ್ಯೇಷ್ಠಪುತ್ರನಾದ ಮಧುರ ಎಂಬವನನ್ನು ಪೌರರ ರಕ್ಷಣೆಗಾಗಿ ನಿಯಮಿಸಿ ಉಗ್ರವಾದ ತಪಸ್ಸಿನಲ್ಲಿ ತೊಡಗಿದನು ಆ ತಪಸ್ಸು ಸಕಲ ದೇವತೆಗಳಿಗೂ ತಾಪಕಾರಿಯಾಯಿತು (೯-೧೦). ಈ ರೀತಿಯಲ್ಲಿ ವೃತ್ರನು ತಪೋನಿರತನಾಗಲು ಖಿನ್ನನಾದ ಇಂದ್ರನು ವಿಷ್ಣುವಿನ ಬಳಿಗೆ ಹೋಗಿ "ಮಹಾಬಾಹು, ತಪಸ್ಸ

ತಪಸ್ಯತಾ ಮಹಾಬಾಹೋ ಲೋಕಾ ವೃತ್ರೇಣ ನಿರ್ಜಿತಾಃ ।
ಬಲವಾನ್ ಸ ಹಿ ಧರ್ಮಾತ್ಮಾ ನೈನಂ ಶಕ್ಷ್ಯಾಮಿ ಶಾಸಿತುಮ್ ॥

ಯದ್ಯಸೌ ತಪ ಆತಿಷ್ಠೇದ್ಭೂಯ ಏವಾಸುರೇಶ್ವರಃ ।
ಯಾವಲ್ಲೋಕಾ ಧರಿಷ್ಯಂತಿ ತಾವದಸ್ಯ ವಶಾನುಗಾಃ ॥ ೧೩

ತಂ ಚೈನಂ ಪರಮೋದಾರಮುಪೇಕ್ಷಸಿ ಮಹಾಬಲ ।
ಕ್ಷಣಂ ಹಿ ನ ಭವೇದ್ವೃತ್ರಃ ಕ್ರುದ್ಧೇ ತ್ವಯಿ ಸುರೇಶ್ವರ ॥ ೧೪

ಯದಾ ಹಿ ಪ್ರೀತಿಸಂಯೋಗಂ ತ್ವಯಾ ವಿಷ್ಣೋ ಸಮಾಗತಃ ।
ತದಾಪ್ರಭೃತಿ ಲೋಕಾನಾಂ ನಾಥತ್ವಮುಪಲಬ್ಧವಾನ್ ॥ ೧೫

ಸ ತ್ವಂ ಪ್ರಸಾದಂ ದೇವಾನಾಂ ಕುರುಷ್ವ ಸುಸಮಾಹಿತಃ ।
ತ್ವತ್ಕೃತೇನ ಹಿ ಸರ್ವಂ ಸ್ಯಾತ್ ಪ್ರಶಾಂತಮರುಜಂ ಜಗತ್ ॥ ೧೬

ಇಮೇ ಹಿ ಸರ್ವೇ ವಿಷ್ಣೋ ತ್ವಾಂ ನಿರೀಕ್ಷಂತೇ ದಿವೌಕಸಃ ।
ವೃತ್ರಘಾತೇನ ಮಹತಾ ತ್ವೇಷಾಂ ಸಾಹ್ಯಂ ಕುರುಷ್ವ ಹ ॥ ೧೭

---

ನ್ನಾಚರಿಸಿದ ವೃತ್ರನು ಸಕಲಲೋಕಗಳನ್ನೂ ಜಯಿಸಿದ್ದಾನೆ. ಅವನು ಧರ್ಮಾತ್ಮನೂ ಬಲಾಢ್ಯನೂ ಆಗಿದ್ದಾನೆ ಅವನನ್ನು ನಿಯಮಿಸಲು ನನಗೆ ಶಕ್ತಿ ಇಲ್ಲ (೧೧-೧೨) ಈ ಅಸುರೇಶ್ವರನು ಇನ್ನೂ ಅಧಿಕವಾಗಿ ಮತ್ತೆ ತಪಸ್ಸನ್ನಾಚರಿಸಿದರೆ ಈ ಲೋಕಗಳು ಇರುವವರೆಗೂ ಸದಾ ಈತನ ವಶದಲ್ಲಿಯೇ ಇರುತ್ತವೆ. ಇಂತಹ ವೃತ್ರನನ್ನು ನೀನು ಉಪೇಕ್ಷಿಸಿ ಸುಮ್ಮನಿದ್ದೀಯೆ ನೀನು ಕ್ರುದ್ಧನಾದಲ್ಲಿ ವೃತ್ರನು ಒಂದು ಕ್ಷಣವೂ ಬದುಕಿರಲಾರ (೧೩-೧೪) ಮಹಾವಿಷ್ಣುವೆ, ನೀನು ಯಾವಾಗ ಈತನಲ್ಲಿ ಸಂಪ್ರೀತನಾದೆಯೋ ಅಲ್ಲಿಂದ ಸಮಸ್ತಲೋಕಗಳ ಒಡೆತನವನ್ನು ಪಡೆದು ನಡೆಸುತ್ತಿದ್ದಾನೆ ಸ್ವಾಮಿ, ನೀನು ಎಚ್ಚರಿಕೆಯನ್ನು ವಹಿಸಿ ದೇವತೆಗಳ ವಿಷಯದಲ್ಲಿ ಪ್ರಸನ್ನನಾಗು ನಿನ್ನ ರಕ್ಷಣೆಯಿಂದ ಜಗತ್ತೆಲ್ಲವೂ ಪೀಡಾರಹಿತವಾಗಿ ಶಾಂತಿಯಿಂದ ನೆಲಸುತ್ತದೆ (೧೫-೧೬). ಈ ದೇವತೆಗಳೆಲ್ಲರೂ ನಿನ್ನ ಒಲುಮೆಗಾಗಿ ನಿನ್ನನ್ನೇ ನಿರೀಕ್ಷಿಸುತ್ತಿದ್ದಾರೆ. ವೃತ್ರನನ್ನು ಸಂಹರಿಸಿ ಇವರಿಗೆ ಸಹಾಯವನ್ನು

ತ್ವಯಾ ಹಿ ನಿತ್ಯಶಃ ಸಾಹ್ಯಂ ಕೃತಮೇಷಾಂ ಮಹಾತ್ಮನಾಮ್ ।
ಅಸಹ್ಯಮಿದಮನ್ಯೇಷಾಮಗತೀನಾಂ ಗತಿರ್ಭವಾನ್ ॥ ೧೮

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುರಶೀತಿತಮಃ ಸರ್ಗಃ

---

## ಪಂಚಾಶೀತಿತಮಃ ಸರ್ಗಃ

### ವೃತ್ರವಧಃ

ಲಕ್ಷ್ಮಣಸ್ಯ ತು ತದ್ವಾಕ್ಯಂ ಶ್ರುತ್ವಾ ಶತ್ರುನಿಬರ್ಹಣಃ ।
ವೃತ್ರಘಾತಮಶೇಷೇಣ ಕಥಯೇತ್ಯಾಹ ಸುವ್ರತಃ ॥ ೧
ರಾಘವೇಣೈವಮುಕ್ತಸ್ತು ಸುಮಿತ್ರಾನಂದವರ್ಧನಃ ।
ಭೂಯ ಏವ ಕಥಾಂ ದಿವ್ಯಾಂ ಕಥಯಾಮಾಸ ಸುವ್ರತಃ ॥ ೨

---

ಮಾಡು. ಈ ಮಹಾತ್ಮರಿಗೆ ನೀನು ಮೊದಲಿನಿಂದಲೂ ನೆರವನ್ನು ನೀಡುತ್ತ ಬಂದಿದ್ದೀಯೆ. ಈ ಕಾರ್ಯವು ಅಸುರರಿಗೆ ಸಹ್ಯವಾಗದಿರಬಹುದು. ದಿಕ್ಕಿಲ್ಲದ ನಮಗೆ ನೀನೇ ಗತಿ" ಎಂದು ನಿವೇದಿಸಿದನು (೧೭-೧೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತುನಾಲ್ಕನೆಯ ಸರ್ಗ

---

## ಸರ್ಗ ೮೫

ಇಂದ್ರನು ವಜ್ರಾಯುಧದಿಂದ ವೃತ್ರಾಸುರನನ್ನು ಸಂಹರಿಸುವುದು
ಬ್ರಹ್ಮಹತ್ಯೆಯ ಪ್ರಾಪ್ತಿ. ಅಶ್ವಮೇಧವನ್ನು ಮಾಡುವಂತೆ
ವಿಷ್ಣುವಿನ ಉಪದೇಶ

ಲಕ್ಷ್ಮಣನು ಹೇಳಿದ ಕಥೆಯನ್ನು ಕೇಳಿ ಶ್ರೀರಾಮನು "ಲಕ್ಷ್ಮಣ, ವೃತ್ರಸಂಹಾರವೆಲ್ಲವನ್ನೂ ಪೂರ್ಣವಾಗಿ ಹೇಳು" ಎಂದು ತಿಳಿಸಿದನು. ಆಗ ಲಕ್ಷ್ಮಣನು ಆ ದಿವ್ಯಕಥೆಯನ್ನು ಹೀಗೆ ಮುಂದುವರಿಸಿದನು (೧-೨):

ಸಹಸ್ರಾಕ್ಷವಚಃ ಶ್ರುತ್ವಾ ಸರ್ವೇಷಾಂ ಚ ದಿವೌಕಸಾಮ್ ।
ವಿಷ್ಣುರ್ದೇವಾನುವಾಚೇದಂ ಸರ್ವಾನಿಂದ್ರಪುರೋಗಮಾನ್ ॥ ೩

ಪೂರ್ವಂ ಸೌಹೃದಬದ್ಧೋಽಸ್ಮಿ ವೃತ್ರಸ್ಯ ತು ಮಹಾತ್ಮನಃ ।
ತೇನ ಯುಷ್ಮತ್ಪ್ರಿಯಾರ್ಥಂ ಹಿ ನಾಹಂ ಹನ್ಮಿ ಮಹಾಸುರಮ್ ॥ ೪

ಅವಶ್ಯಂ ಕರಣೀಯಂ ಚ ಭವತಾಂ ಸುಖಮುತ್ತಮಮ್ ।
ತಸ್ಮಾದುಪಾಯಮಾಖ್ಯಾಸ್ಯೇ ಯೇನ ವೃತ್ರೋ ನಿಹನ್ಯತೇ ॥ ೫

ತ್ರಿಧಾಭೂತಂ ಕರಿಷ್ಯಾಮಿ ಹ್ಯಾತ್ಮಾನಂ ಸುರಸತ್ತಮಾಃ ।
ತೇನ ವೃತ್ರಂ ಸಹಸ್ರಾಕ್ಷೋ ವಧಿಷ್ಯತಿ ನ ಸಂಶಯಃ ॥ ೬

ಏಕಾಂಶೋ ವಾಸವಂ ಯಾತು ದ್ವಿತೀಯೋ ವಜ್ರಮೇವ ತು ।
ತೃತೀಯೋ ಭೂತಲಂ ಶಕ್ರಸ್ತದಾ ವೃತ್ರಂ ವಧಿಷ್ಯತಿ ॥ ೭

---

"ದೇವೇಂದ್ರನು ದೇವತೆಗಳೊಡನೆ ಬಂದು ಈ ಪ್ರಕಾರವಾಗಿ ನಿವೇದಿಸಲು, ವಿಷ್ಣುವು ಅವರೆಲ್ಲರನ್ನು ಕುರಿತು ಹೇಳಿದನು. "ಎಲೈ ದೇವತೆಗಳೆ, ಮಹಾತ್ಮನಾದ ವೃತ್ರನಿಗೆ ನಾನು ಮೊದಲೇ ಸ್ನೇಹಹಸ್ತವನ್ನು ನೀಡಿದ್ದೇನೆ ಆದ್ದರಿಂದ ನಿಮ್ಮ ಸಂತೋಷಕ್ಕಾಗಿ ಆತನನ್ನು ಸಂಹರಿಸಲಾರೆ(೩-೪) ಆದರೆ ನಿಮಗೆ ಸುಖಕರವಾದುದನ್ನು ಅವಶ್ಯವಾಗಿ ನಾನು ಮಾಡಲೇಬೇಕು ಆದ್ದರಿಂದ ವೃತ್ರಾಸುರನನ್ನು ಕೊಲ್ಲುವ ಒಂದು ಉಪಾಯವನ್ನು ಹೇಳುವೆನು (೫). ನನ್ನ ತೇಜೋಮೂರ್ತಿಯನ್ನು ಮೂರು ಅಂಶಗಳಾಗಿ ವಿಂಗಡಿಸುತ್ತೇನೆ ಅದರಿಂದ ಇಂದ್ರನು ನಿಶ್ಚಯವಾಗಿಯೂ ವೃತ್ರನನ್ನು ವಧಿಸುತ್ತಾನೆ. ಒಂದನೆಯ ಅಂಶವು ಇಂದ್ರನನ್ನೂ ಎರಡನೆಯ ಅಂಶವು ವಜ್ರಾಯುಧವನ್ನೂ ಸೇರಲಿ ಮೂರನೆಯದು ಭೂತಳವನ್ನು* ಸೇರಲಿ ಆಗ ಇಂದ್ರನು ವೃತ್ರನನ್ನು ಕೊಲ್ಲಲು ಸಮರ್ಥನಾಗುತ್ತಾನೆ" ಎಂದನು (೬-೭)

---

* ಭೂತಳವನ್ನು ಸೇರಬೇಕಾದ್ದು ಏಕೆಂದರೆ, ವೃತ್ರನ ದೇಹವನ್ನು ಹೊರುವ ಸಾಮರ್ಥ್ಯವನ್ನು ಭೂತಳಕ್ಕೆ ಕೊಡುವುದಕ್ಕಾಗಿ ಮತ್ತು ಬ್ರಹ್ಮಹತ್ಯಾದೋಷವು ನಿವೃತ್ತಿಯಾಗುವವರೆಗೂ ಭೂಮಿಯನ್ನು ರಕ್ಷಿಸುವುದಕ್ಕಾಗಿ

ತಥಾ ಬ್ರುವತಿ ದೇವೇಶೇ ದೇವಾ ವಾಕ್ಯಮಥಾಬ್ರುವನ್ ।
ಏವಮೇತನ್ನ ಸಂದೇಹೋ ಯಥಾ ವದಸಿ ದೈತ್ಯಹನ್ ॥ ೮

ಭದ್ರಂ ತೇಽಸ್ತು ಗಮಿಷ್ಯಾಮೋ ವೃತ್ರಾಸುರವಧೈಷಿಣಃ ।
ಭಜಸ್ವ ಪರಮೋದಾರ ವಾಸವಂ ಸ್ವೇನ ತೇಜಸಾ ॥ ೯

ತತಃ ಸರ್ವೇ ಮಹಾತ್ಮಾನಃ ಸಹಸ್ರಾಕ್ಷಪುರೋಗಮಾಃ ।
ತದರಣ್ಯಮುಪಾಕ್ರಾಮನ್ ಯತ್ರ ವೃತ್ರೋ ಮಹಾಸುರಃ ॥ ೧೦

ತೇಽಪಶ್ಯಂಸ್ತೇಜಸಾ ಭೂತಂ ತಪ್ಯಂತಮಸುರೋತ್ತಮಮ್ ।
ಪಿಬಂತಮಿವ ಲೋಕಾಂಸ್ತ್ರೀನ್ನಿರ್ದಹಂತಮಿವಾಂಬರಮ್ ॥ ೧೧

ದೃಷ್ಟ್ವೈವ ಚಾಸುರಶ್ರೇಷ್ಠಂ ದೇವಾಸ್ತ್ರಾಸಮುಪಾಗಮನ್ ।
ಕಥಮೇನಂ ವಧಿಷ್ಯಾಮಃ ಕಥಂ ನ ಸ್ಯಾತ್ ಪರಾಜಯಃ ॥ ೧೨

ತೇಷಾಂ ಚಿಂತಯತಾಂ ತತ್ರ ಸಹಸ್ರಾಕ್ಷಃ ಪುರಂದರಃ ।
ವಜ್ರಂ ಪ್ರಗೃಹ್ಯ ಪಾಣಿಭ್ಯಾಂ ಪ್ರಾಹಿಣೋದ್ವೃತ್ರಮೂರ್ಧನಿ ॥ ೧೩

---

ದೇವೇಶ್ವರನಾದ ವಿಷ್ಣುವು ಹೀಗೆ ನುಡಿಯಲು ದೇವತೆಗಳು "ಹಾಗೆಯೇ ಆಗಲಿ. ಓ ದೈತ್ಯಾರಿ, ನೀನು ಹೇಳುವುದರಲ್ಲಿ ಸಂದೇಹವಿಲ್ಲ ನಿನಗೆ ಮಂಗಳವಾಗಲಿ! ವೃತ್ರಾಸುರನ ಸಂಹಾರಕ್ಕಾಗಿ ಹೋಗುವೆವು ಉದಾರ ಶೀಲನೆ, ನಿನ್ನ ತೇಜೋಂಶದಿಂದ ಇಂದ್ರನಲ್ಲಿ ಆವಿಷ್ಟನಾಗು" ಎಂದರು (೮-೯) ಅನಂತರ ಇಂದ್ರಾದಿ ದೇವತೆಗಳೆಲ್ಲರೂ ವೃತ್ರಾಸುರನು ತಪಸ್ಸು ಮಾಡುತ್ತಿದ್ದ ಅರಣ್ಯಕ್ಕೆ ಬಂದರು ಅಲ್ಲಿ ತೇಜಸ್ಸಿನಿಂದ ವ್ಯಾಪ್ತನಾದ ವೃತ್ರಾಸುರನು ತಪೋಬಲದಿಂದ ಮೂರು ಲೋಕಗಳನ್ನೂ ಕುಡಿಯುವನೋ ಅಂಬರವನ್ನು ಸುಟ್ಟುಬಿಡುವನೋ ಎಂಬಂತೆ ತಪೋಮಗ್ನನಾಗಿರುವುದನ್ನು ಕಂಡರು (೧೦-೧೧) ಅಸುರೋತ್ತಮನನ್ನು ಕಂಡು ದೇವತೆಗಳು ಹೆದರಿ ಹೋದರು "ಅಬ್ಬಾ! ಇವನನ್ನು ಹೇಗೆ ಕೊಲ್ಲುವುದು! ನಮಗೆ ಸೋಲಾಗದಿದ್ದೀತೆ!" ಎಂದು ಚಿಂತಾಕ್ರಾಂತರಾದರು ಅಷ್ಟರಲ್ಲಿ ದೇವೇಂದ್ರನು ಎರಡು ಕೈಗಳಿಂದಲೂ ವಜ್ರಾಯುಧವನ್ನೆತ್ತಿ ವೃತ್ರನ ಶಿರಸ್ಸಿನ

*

ಕಾಲಾಗ್ನಿನೇವ ಘೋರೇಣ ತಪ್ತೇನೇವ ಮಹಾರ್ಚಿಷಾ ।
ಪತತಾ ವೃತ್ರಶಿರಸಾ ಜಗತ್ ತ್ರಾಸಮುಪಾಗಮತ್ ॥ ೧೪

ಅಸಂಭಾವ್ಯಂ ವಧಂ ತಸ್ಯ ವೃತ್ರಸ್ಯ ವಿಬುಧಾಧಿಪಃ ।
ಚಿಂತಯಾನೋ ಜಗಾಮಾಶು ಲೋಕಸ್ಯಾಂತಂ ಮಹಾಯಶಾಃ ॥

ತಮಿಂದ್ರಂ ಬ್ರಹ್ಮಹತ್ಯಾಶು ಗಚ್ಛಂತಮನುಗಚ್ಛತಿ ।
ಅಪತಚ್ಚಾಸ್ಯ ಗಾತ್ರೇಷು ತಮಿಂದ್ರಂ ದುಃಖಮಾವಿಶತ್ ॥ ೧೬

ಹತಾರಯಃ ಪ್ರನಷ್ಟೇಂದ್ರಾ ದೇವಾಃ ಸಾಗ್ನಿಪುರೋಗಮಾಃ ।
ವಿಷ್ಣುಂ ತ್ರಿಭುವನೇಶಾನಂ ಮುಹುರ್ಮುಹುರಪೂಜಯನ್ ॥ ೧೭

ತ್ವಂ ಗತಿಃ ಪರಮೇಶಾನ ಪೂರ್ವಜೋ ಜಗತಃ ಪಿತಾ ।
ರಕ್ಷಾರ್ಥಂ ಸರ್ವಭೂತಾನಾಂ ವಿಷ್ಣುತ್ವಮುಪಜಗ್ಮಿವಾನ್ ॥ ೧೮

ಹತಶ್ಚಾಯಂ ತ್ವಯಾ ವೃತ್ರೋ ಬ್ರಹ್ಮಹತ್ಯಾ ಚ ವಾಸವಮ್ ।
ಬಾಧತೇ ಸುರಶಾರ್ದೂಲ ಮೋಕ್ಷಂ ತಸ್ಯಾ ವಿನಿರ್ದಿಶ ॥ ೧೯

---

ಮೇಲೆ ಹೊಡೆದನು (೧೨-೧೩) ಘೋರವಾದ ಕಾಲಾಗ್ನಿಯೋ ಉರಿಯುವ ಮಹಾಜ್ವಾಲೆಯೋ ಎಂಬಂತೆ ವೃತ್ರನ ಶಿರಸ್ಸು ಕತ್ತರಿಸಿ ಉರುಳಿತು ಜಗತ್ತು ಭಯದಿಂದ ತತ್ತರಿಸಿತು ಊಹಾತೀತವಾದ ವೃತ್ರವಧೆಯು ಅನುಚಿತವಾಯಿತೆಂದು ಚಿಂತೆಗೊಳಗಾಗಿ ದೇವೇಂದ್ರನು ಜಗತ್ತಿನ ತುದಿಯ ವರೆಗೆ ಓಡಿಹೋದನು! (೧೪-೧೫) ಅವನ ಹಿಂದೆ ಬ್ರಹ್ಮಹತ್ಯೆ* ಧಾವಿಸುತ್ತ ಹೋಯಿತು! ಕಡೆಗೆ ಇಂದ್ರನ ದೇಹವನ್ನಾಕ್ರಮಿಸಿತು. ಇಂದ್ರನು ದುಃಖಕ್ಕೆ ಒಳಗಾದನು ದೇವತೆಗಳ ಶತ್ರುವೇನೋ ಹತನಾದನು ಆದರೆ ಇಂದ್ರನು ಕಾಣೆಯಾದನು ಆಗ ಅಗ್ನಿಯೇ ಮೊದಲಾದ ದೇವತೆಗಳು ತ್ರಿಭುವನೇಶ್ವರನಾದ ವಿಷ್ಣುವನ್ನು ಮರೆಹೊಕ್ಕು ಪೂಜಿಸಿದರು ಮತ್ತೆ ಮತ್ತೆ ಸ್ತುತಿಸಿದರು (೧೬-೧೭) ಅವರು "ಹೇ ಪರಮೇಶ್ವರ, ನೀನೇ ನಮಗೆ ಗತಿ ಜಗತ್ತಿನ ತಂದೆ ನೀನು. ಸಮಸ್ತ ಪ್ರಾಣಿಗಳ ಸಂರಕ್ಷಣೆ ಗಾಗಿ ವಿಷ್ಣುರೂಪವನ್ನು ತಳೆದಿದಿದ್ದೀಯೆ. ವೃತ್ರನನ್ನು ನೀನು ಇಂದ್ರನ

* ತ್ವಷ್ಟೃವೆಂಬ ಮುನಿಯು ಹೋಮಮಾಡಿದಾಗ ಆಹವನೀಯಾಗ್ನಿಯಿಂದ ವೃತ್ರನು ಹುಟ್ಟಿದನು. ಆದ್ದರಿಂದ ವೃತ್ರನು ಬ್ರಾಹ್ಮಣನೆಂದು ಅಭಿಪ್ರಾಯ,

ತೇಷಾಂ ತದ್ವಚನಂ ಶ್ರುತ್ವಾ ದೇವಾನಾಂ ವಿಷ್ಣುರಬ್ರವೀತ್ ।
ಮಾಮೇವ ಯಜತಾಂ ಶಕ್ರಃ ಪಾವಯಿಷ್ಯಾಮಿ ವಜ್ರಿಣಮ್ ॥ ೨೦

ಪುಣ್ಯೇನ ಹಯಮೇಧೇನ ಮಾಮಿಷ್ಟ್ವಾ ಪಾಕಶಾಸನಃ ।
ಪುನರೇಷ್ಯತಿ ದೇವಾನಾಮಿಂದ್ರತ್ವಮಕುತೋಭಯಮ್ ॥ ೨೧

ಏವಂ ಸಂದಿಶ್ಯ ತಾಂ ವಾಣೀಂ ದೇವಾನಾಮಮೃತೋಪಮಾಮ್ ।
ಜಗಾಮ ವಿಷ್ಣುರ್ದೇವೇಶಃ ಸ್ತೂಯಮಾನಸ್ತ್ರಿವಿಷ್ಟಪಮ್ ॥ ೨೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚಾಶೀತಿತಮಃ ಸರ್ಗಃ



ಮೂಲಕ ಕೊಲ್ಲಿಸಿದ್ದೀಯೆ ಬ್ರಹ್ಮಹತ್ಯೆಯು ಇಂದ್ರನನ್ನಾಕ್ರಮಿಸಿ ಬಾಧಿಸುತ್ತಿದೆ. ಹೇ ದೇವೇಶ್ವರ, ಅದರಿಂದ ಬಿಡುಗಡೆ ಮಾಡಿಸು" ಎಂದು ಪ್ರಾರ್ಥಿಸಿದರು (೧೮-೧೯) ದೇವತೆಗಳ ಪ್ರಾರ್ಥನೆಯನ್ನು ಕೇಳಿ ವಿಷ್ಣುವು "ಎಲೈ ದೇವತೆಗಳೆ, ಇಂದ್ರನು ನನ್ನನ್ನು ಪೂಜಿಸಲಿ ಬ್ರಹ್ಮಹತ್ಯಾದೋಷವನ್ನು ತೊಲಗಿಸಿ ಅವನನ್ನು ಪಾವನಗೊಳಿಸುವೆನು. ಪುಣ್ಯಕರವಾದ ಅಶ್ವಮೇಧ ಯಾಗದಿಂದ ನನ್ನನ್ನು ಅರ್ಚಿಸಿ ಆತನು ನಿರ್ಭಯವಾದ ಇಂದ್ರಪದವಿಯನ್ನು ಮತ್ತೆ ಗಳಿಸುವನು" ಎಂದು ಉಪದೇಶಿಸಿದನು (೨೦-೨೧). ದೇವತೆಗಳಿಗೆ ವಿಷ್ಣುವಿನ ವಾಣಿಯು ಅಮೃತದಂತೆ ಹಿತಕರವೆನಿಸಿತು ದೇವತೆಗಳು ವಿಷ್ಣುವನ್ನು ಸ್ತುತಿಸುತ್ತಿರಲು ಆ ದೇವೇಶನು ವೈಕುಂಠಕ್ಕೆ ತೆರಳಿದನು (೨೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತೈದನೆಯ ಸರ್ಗ



## ಷಡಶೀತಿತಮಃ ಸರ್ಗಃ

### ಬ್ರಹ್ಮಹತ್ಯಾತರಣಮ್

ತದಾ ವೃತ್ರವಧಂ ಸರ್ವಮಖಿಲೇನ ಸ ಲಕ್ಷ್ಮಣಃ ।
ಕಥಯಿತ್ವಾ ನರಶ್ರೇಷ್ಠಃ ಕಥಾಶೇಷಂ ಪ್ರಚಕ್ರಮೇ ॥ ೧

ತತೋ ಹತೇ ಮಹಾವೀರ್ಯೇ ವೃತ್ರೇ ದೇವಭಯಂಕರೇ ।
ಬ್ರಹ್ಮಹತ್ಯಾವೃತಃ ಶಕ್ರಃ ಸಂಜ್ಞಾಂ ಲೇಭೇ ನ ವೃತ್ರಹಾ ॥ ೨

ಸೋಽಂತಮಾಶ್ರಿತ್ಯ ಲೋಕಾನಾಂ ನಷ್ಟಸಂಜ್ಞೋ ವಿಚೇತನಃ ।
ಕಾಲಂ ತತ್ರಾವಸತ್ ಕಂಚಿದ್ವೇಷ್ಟಮಾನ ಇವೋರಗಃ ॥ ೩

ಅಥ ನಷ್ಟೇ ಸಹಸ್ರಾಕ್ಷೇ ಉದ್ವಿಗ್ನಮಭವಜ್ಜಗತ್ ।
ಭೂಮಿಶ್ಚ ಧ್ವಸ್ತಸಂಕಾಶಾ ನಿಃಸ್ನೇಹಾ ಶುಷ್ಕಕಾನನಾ ॥ ೪

ನಿಃಸ್ರೋತಸಶ್ಚ ತೇ ಸರ್ವೇ ಹ್ರದಾಶ್ಚ ಸರಿತಸ್ತಥಾ ।
ಸಂಕ್ಷೋಭಶ್ಚೈವ ಸತ್ತ್ವಾನಾಮನಾವೃಷ್ಟಿಕೃತೋಽಭವತ್ ॥ ೫

## ಸರ್ಗ ೮೬

### ಇಂದ್ರನು ಅಶ್ವಮೇಧಯಾಗವನ್ನು ಮಾಡಿ ಬ್ರಹ್ಮಹತ್ಯೆಯಿಂದ ಮುಕ್ತನಾಗುವುದು

ಈ ರೀತಿಯಲ್ಲಿ ಸೌಮಿತ್ರಿಯು ವೃತವಧಪ್ರಸಂಗವನ್ನು ವಿವರವಾಗಿ ಹೇಳಿ ಉಳಿದ ಕಥಾಭಾಗವನ್ನು ಹೀಗೆ ತಿಳಿಸಿದನು : "ಮಹಾವೀರನೂ ದೇವ ಭಯಂಕರನೂ ಆದ ವೃತ್ರಾಸುರನು ಹತನಾಗಲು, ಬ್ರಹ್ಮಹತ್ಯೆಯಿಂದ ಆಕ್ರಾಂತನಾದ ಇಂದ್ರನು ಚೈತನ್ಯಗುಂದಿ ತಳಮಳಿಸಿದನು (೧-೨). ಅವನು ಈ ಲೋಕದ ಅಂತ್ಯದೇಶಕ್ಕೆ ಹೋಗಿ ದಿಕ್ಕುಗಾಣದೆ ಚೈತನ್ಯಶೂನ್ಯನಾಗಿ ಹೊರಳಾಡುವ ಹಾವಿನಂತೆ ತಳಮಳಕ್ಕೊಳಗಾದನು ಇಂದ್ರನು ಕಾಣದಂತೆ ಹೊರಟುಹೋಗಲು ಜಗತ್ತು ಅರಾಜಕವಾಗಿ ಗೊಂದಲಕ್ಕೆ ಸಿಕ್ಕಿತು. ಭೂಮಿಯು ಕಾಂತಿಹೀನವಾಯಿತು ಎಲ್ಲಿಯೂ ಆರ್ದ್ರತೆ ಇರಲಿಲ್ಲ ಕಾಡು ಗಳು ಒಣಗಿದವು (೩-೪) ಕೆರೆಗಳೂ ಹೊಳೆಗಳೂ ನೀರಿಲ್ಲದೆ ಬತ್ತಿದವು

ಕ್ಷೀಯಮಾಣೇ ತು ಲೋಕೇಽಸ್ಮಿನ್ ಸಂಭ್ರಾಂತಮನಸಃ ಸುರಾಃ ।
ಯದುಕ್ತಂ ವಿಷ್ಣುನಾ ಪೂರ್ವಂ ತಂ ಯಜ್ಞಂ ಸಮುಪಾನಯನ್ ॥

ತತಃ ಸರ್ವೇ ಸುರಗಣಾಃ ಸೋಪಾಧ್ಯಾಯಾಃ ಸಹರ್ಷಿಭಿಃ ।
ತಂ ದೇಶಂ ಸಮುಪಾಜಗ್ಮುರ್ಯತ್ರೇಂದ್ರೋ ಭಯಮೋಹಿತಃ ॥ ೭

ತೇ ತು ದೃಷ್ಟ್ವಾ ಸಹಸ್ರಾಕ್ಷಮಾವೃತಂ ಬ್ರಹ್ಮಹತ್ಯಯಾ ।
ತಂ ಪುರಸ್ಕೃತ್ಯ ದೇವೇಶಮಶ್ವಮೇಧಮುಪಾಕ್ರಮನ್ ॥ ೮

ತತೋಽಶ್ವಮೇಧಃ ಸುಮಹಾನ್ ಮಹೇಂದ್ರಸ್ಯ ಮಹಾತ್ಮನಃ ।
ವವೃಧೇ ಬ್ರಹ್ಮಹತ್ಯಾಯಾಃ ಪಾವನಾರ್ಥಂ ನರೇಶ್ವರ ॥ ೯

ತತೋ ಯಜ್ಞೇ ಸಮಾಪ್ತೇ ತು ಬ್ರಹ್ಮಹತ್ಯಾ ಮಹಾತ್ಮನಃ ।
ಅಭಿಗಮ್ಯಾಬ್ರವೀದ್ವಾಕ್ಯಂ ಕ್ವ ಮೇ ಸ್ಥಾನಂ ವಿಧಾಸ್ಯಥ ॥ ೧೦

ತೇ ತಾಮೂಚುಸ್ತದಾ ದೇವಾಸ್ತುಷ್ಟಾಃ ಪ್ರೀತಿಸಮನ್ವಿತಾಃ ।
ಚತುರ್ಧಾ ವಿಭಜಾತ್ಮಾನಮಾತ್ಮನೈವ ದುರಾಸದೇ ॥ ೧೧

---

ಮಳೆಯಿಲ್ಲದೆ ಪ್ರಾಣಿಗಳಲ್ಲಿ ಕ್ಷೋಭೆ ಎದ್ದಿತು ಲೋಕವು ದುಃಸ್ಥಿತಿಗೊಳಗಾಗಲು ಭೀತರಾದ ಸುರರು, ಹಿಂದೆ ವಿಷ್ಣುವು ಹೇಳಿದ್ದ ಅಶ್ವಮೇಧಯಾಗವನ್ನಾಚರಿಸುವುದಕ್ಕೆ ಏರ್ಪಡಿಸಿದರು (೫-೬) ಆ ದೇವತೆಗಳು ಪುರೋಹಿತರಾದ ಬೃಹಸ್ಪತ್ಯಾಚಾರ್ಯರನ್ನೂ ಇತರ ಮಹರ್ಷಿಗಳನ್ನೂ ಕರೆದುಕೊಂಡು ಇಂದ್ರನು ಭಯಮೋಹಿತನಾಗಿ ನೆಲೆಸಿದ್ದ ಸ್ಥಳಕ್ಕೆ ಹೋದರು ಅವರು ಬ್ರಹ್ಮಹತ್ಯೆಯಿಂದ ಆವೃತನಾದ ಇಂದ್ರನನ್ನು ನೋಡಿ, ಅವನ ನೇತೃತ್ವದಲ್ಲಿ ಅಶ್ವಮೇಧಯಾಗವನ್ನಾರಂಭಿಸಿದರು (೭-೮) ಶ್ರೀರಾಮ, ಮಹಾತ್ಮನಾದ ಮಹೇಂದ್ರನನ್ನು ಬ್ರಹ್ಮಹತ್ಯೆಯಿಂದ ವಿಮೋಚನೆಗೊಳಿಸುವುದಕ್ಕಾಗಿ ವೈಭವದ ಅಶ್ವಮೇಧಯಾಗವು ನಡೆಯಿತು ಯಾಗವು ಸಮಾಪ್ತವಾಗಲು, ಬ್ರಹ್ಮಹತ್ಯೆಯು ಎದುರಿಗೆ ಬಂದು ದೇವತೆಗಳನ್ನು ಕುರಿತು "ಇನ್ನುಮೇಲೆ ಇರಲು ನನಗೆ ಯಾವ ಸ್ಥಳವನ್ನು ಕಲ್ಪಿಸುವಿರಿ ?" ಎಂದು ಕೇಳಿದಳು (೯-೧೦) ಆಗ ದೇವತೆಗಳು ಸಂಪ್ರೀತರಾಗಿ "ಎಲೌ ದುರಾಸದೆ–ಬ್ರಹ್ಮಹತ್ಯೆ, ನಿನ್ನನ್ನು

ದೇವಾನಾಂ ಭಾಷಿತಂ ಶ್ರುತ್ವಾ ಬ್ರಹ್ಮಹತ್ಯಾ ಮಹಾತ್ಮನಾಮ್ ।
ಸಂದಧೌ ಸ್ಥಾನಮನ್ಯತ್ರ ವರಯಾಮಾಸ ದುರ್ವಸಾ ॥ ೧೨

ಏಕೇನಾಂಶೇನ ವತ್ಸ್ಯಾಮಿ ಪೂರ್ಣೋದಾಸು ನದೀಷು ವೈ ।
ಚತುರೋ ವಾರ್ಷಿಕಾನ್ ಮಾಸಾನ್ ದರ್ಪಘ್ನೀ ಕಾಮಚಾರಿಣೀ ॥

ಭೂಮ್ಯಾಮಹಂ ಸರ್ವಕಾಲಮೇಕೇನಾಂಶೇನ ದುರ್ವಸಾ ।
ವಸಿಷ್ಯಾಮಿ ನ ಸಂದೇಹಃ ಸತ್ಯೇನೈತದ್ಬ್ರವೀಮಿ ವಃ ॥ ೧೪

ಯೋಽಯಮಂಶಸ್ತೃತೀಯೋ ಮೇ ಸ್ತ್ರೀಷು ಯೌವನಶಾಲಿಷು ।
ತ್ರಿರಾತ್ರಂ ದರ್ಪಪೂರ್ಣಾಸು ವಸಿಷ್ಯೇ ದರ್ಪಘಾತಿನೀ ॥ ೧೫

ಹಂತಾರೋ ಬ್ರಾಹ್ಮಣಾನ್ ಯೇ ತು ಮೃಷಾಪೂರ್ವಮದೂಷಕಾನ್
ತಾಂಶ್ಚತುರ್ಥೇನ ಭಾಗೇನ ಸಂಶ್ರಯಿಷ್ಯೇ ಸುರರ್ಷಭಾಃ ॥ ೧೬

---

ನಾಲ್ಕು ವಿಭಾಗ ಮಾಡಿಕೊ!" ಎಂದರು ದೇವತೆಗಳ ನುಡಿಯನ್ನು ಕೇಳಿ ಇಂದ್ರನಲ್ಲಿ ನೆಲೆಸಲು ಅಶಕ್ತಳಾದ ಬ್ರಹ್ಮಹತ್ಯೆಯು ತನ್ನನ್ನು ನಾಲ್ಕು ವಿಭಾಗ ಮಾಡಿಕೊಂಡು ಬೇರೆಕಡೆಯಲ್ಲಿರಲು ಅನುಕೂಲವಾದ ವರವನ್ನು ಬೇಡಿದಳು (೧೧-೧೨) ಆ ಬ್ರಹ್ಮಹತ್ಯೆಯು "ನಾನು ಮಳೆಗಾಲದ ನಾಲ್ಕುಮಾಸಗಳ ವರೆಗೆ* ನೆರೆಬಂದ ನದಿಗಳಲ್ಲಿ ಏಕಾಂಶದಿಂದ ನೆಲೆಸುವೆನು! ವಾಪಿಗಳ ದರ್ಪವನ್ನು ಹೋಗಲಾಡಿಸುತ್ತ ಸ್ನಾನಮಾಡಲು ಬಯಸುವವರನ್ನು ತಡೆಯುತ್ತ ಇರುವೆನು! (೧೩). ಎರಡನೆಯ ಅಂಶದಿಂದ ಭೂಮಿಯಲ್ಲಿ (ಮರಳುಗಾಡಿನ ರೂಪದಲ್ಲಿ) ನೆಲೆಸುವೆನು ಸಂದೇಹವಿಲ್ಲ. ಸತ್ಯವನ್ನೇ ನಿಮಗೆ ಹೇಳುತ್ತಿದ್ದೇನೆ ಇನ್ನು ನನ್ನ ಮೂರನೆಯ ಅಂಶವೇನುಂಟೋ ಅದರಿಂದ ದರ್ಪಶಾಲಿಗಳೂ ಯುವತಿಯರೂ ಆದ ಸ್ತ್ರೀಯರಲ್ಲಿ ಅವರ ದರ್ಪವನ್ನು ಮುರಿಯುತ್ತ ಮೂರು ರಾತ್ರಿಗಳವರೆಗೆ ಇರುವೆನು! (೧೪-೧೫) ಎಲೈ ದೇವತೆಗಳೆ, ದೋಷರಹಿತರಾದ ಬ್ರಾಹ್ಮಣರನ್ನು ಯಾರು ಮೋಸದಿಂದ

---

* 'ಸಿಂಹಕರ್ಕಟಯೋರ್ಮಧ್ಯೇ ಸರ್ವಾ ನದ್ಯೋ ರಜಸ್ವಲಾಃ' ಎಂಬ ಸ್ಮೃತಿ ವಚನದಂತೆ ಕರ್ಕಾಟಕ ಸಿಂಹ ಮಾಸಗಳಲ್ಲಿ ನದೀಸ್ನಾನವು ನಿಷಿದ್ಧವಾಗಿದೆ 'ಪಕ್ಷಾ ವೈ ಮಾಸಾಃ' ಎಂಬ ವಚನದಂತೆ ನಾಲ್ಕು ಪಕ್ಷಗಳನ್ನು ಮೂಲದಲ್ಲಿ ಮಾಸಗಳೆಂದು ಕರೆಯಲಾಗಿದೆ ಅಥವಾ ನಾಲ್ಕು ತಿಂಗಳು ನೆಲೆಸಿದರೂ ನಿಷಿದ್ಧವಾದ ಕಾಲ ಎರಡು ತಿಂಗಳು ಮಾತ್ರ

ಪ್ರತ್ಯೂಚುಸ್ತಾಂ ತತೋ ದೇವಾ ಯಥಾ ವದಸಿ ದುರ್ವಸೇ ।
ತಥಾ ಭವತು ತತ್ ಸರ್ವಂ ಸಾಧಯಸ್ವ ಯದೀಪ್ಸಿತಮ್ ॥ ೧೭

ತತಃ ಪ್ರೀತ್ಯಾನ್ವಿತಾ ದೇವಾಃ ಸಹಸ್ರಾಕ್ಷಂ ವವಂದಿರೇ ।
ವಿಜ್ವರಃ ಸ ಚ ಪೂತಾತ್ಮಾ ವಾಸವಃ ಸಮಪದ್ಯತ ॥ ೧೮

ಪ್ರಶಾಂತಂ ಚ ಜಗತ್ ಸರ್ವಂ ಸಹಸ್ರಾಕ್ಷೇ ಪ್ರತಿಷ್ಠಿತೇ ।
ಯಜ್ಞಂ ಚಾದ್ಭುತಸಂಕಾಶಂ ತದಾ ಶಕ್ರೋಽಭ್ಯಪೂಜಯತ್ ॥ ೧೯

ಈದೃಶೋ ಹ್ಯಶ್ವಮೇಧಸ್ಯ ಪ್ರಭಾವೋ ರಘುನಂದನ ।
ಯಜಸ್ವ ಸುಮಹಾಭಾಗ ಹಯಮೇಧೇನ ಪಾರ್ಥಿವ ॥ ೨೦

ಇತಿ ಲಕ್ಷ್ಮಣವಾಕ್ಯಮುತ್ತಮಂ
ನೃಪತಿರತೀವ ಮನೋಹರಂ ಮಹಾತ್ಮಾ ।
ಪರಿತೋಷಮವಾಪ ಹೃಷ್ಟಚೇತಾ
ನಿಶಮಯ್ಯೇಂದ್ರಸಮಾನವಿಕ್ರಮೌಜಾಃ ॥ ೨೧

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಡಶೀತಿತಮಃ ಸರ್ಗಃ

---

ಹಿಂಸಿಸುವರೋ, ಅವರಲ್ಲಿ ನಾಲ್ಕನೆಯ ಅಂಶದಿಂದ ನೆಲೆಸುವೆನು" ಎಂದಳು (೧೬) ಆಗ ದೇವತೆಗಳು "ಹಾಗೆಯೇ ಆಗಲಿ ನಿನಗೆ ಇಷ್ಟವಾದಂತೆ ಆಯಾ ಸ್ಥಳಗಳಲ್ಲಿ ನೆಲೆಸು" ಎಂದು ಹೇಳಿದರು (೧೭) ಆಮೇಲೆ ಸಂಪ್ರೀತರಾದ ದೇವತೆಗಳು ಇಂದ್ರನನ್ನು ವಂದಿಸಿದರು ಇಂದ್ರನು ಪರಿಶುದ್ಧನಾಗಿ ನಿಶ್ಚಿಂತನಾದನು ಹೀಗೆ ದೇವೇಂದ್ರನು ತನ್ನ ಸ್ಥಾನದಲ್ಲಿ ಪ್ರತಿಷ್ಠಿತನಾಗಲು, ಜಗತ್ತಿಗೆ ಶಾಂತಿ ಲಭಿಸಿತು ಅದ್ಭುತವಾದ ಆ ಯಾಗವನ್ನು ದೇವೇಂದ್ರನು ಕೊಂಡಾಡಿದನು (೧೮-೧೯) ಶ್ರೀರಾಮ, ಅಶ್ವಮೇಧದ ಮಹಿಮೆ ಈ ಪ್ರಕಾರವಾಗಿದೆ ಮಹಾರಾಜ, ಈ ಯಾಗವನ್ನು ಮಾಡು." ಹೀಗೆ ಲಕ್ಷ್ಮಣನಾಡಿದ ಪ್ರಶಂಸನೀಯವಾದ ಮಾತನ್ನು ಕೇಳಿ, ಮಹಾತ್ಮನೂ ಇಂದ್ರಸಮಾನ ವಿಕ್ರಮನೂ ಆದ ರಘುನಾಥನಿಗೆ ಹರ್ಷವಾಯಿತು ಅವನು ಸಂಪ್ರೀತನಾದನು (೨೦-೨೧)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತಾರನೆಯ ಸರ್ಗ

## ಸಪ್ತಾಶೀತಿತಮಃ ಸರ್ಗಃ

### ಇಲಸ್ತ್ರೀತ್ವಪ್ರಾಪ್ತಿಃ

ತಚ್ಛ್ರುತ್ವಾ ಲಕ್ಷ್ಮಣೇನೋಕ್ತಂ ವಾಕ್ಯಂ ವಾಕ್ಯವಿಶಾರದಃ ।
ಪ್ರತ್ಯುವಾಚ ಮಹಾತೇಜಾಃ ಪ್ರಹಸನ್ ರಾಘವೋ ವಚಃ ॥ ೧

ಏವಮೇವ ನರಶ್ರೇಷ್ಠ ಯಥಾ ವದಸಿ ಲಕ್ಷ್ಮಣ ।
ವೃತ್ರಘಾತಮಶೇಷೇಣ ವಾಜಿಮೇಧಫಲಂ ಚ ಯತ್ ॥ ೨

ಶ್ರೂಯತೇ ಹಿ ಪುರಾ ಸೌಮ್ಯ ಕರ್ದಮಸ್ಯ ಪ್ರಜಾಪತೇಃ ।
ಪುತ್ರೋ ಬಾಹ್ಲೀಶ್ವರಃ ಶ್ರೀಮಾನಿಲೋ ನಾಮ ಮಹಾಯಶಾಃ ॥ ೩

ಸ ರಾಜಾ ಪೃಥಿವೀಂ ಸರ್ವಾಂ ವಶೇ ಕೃತ್ವಾ ಸುಧಾರ್ಮಿಕಃ ।
ರಾಜ್ಯಂ ಚೈವ ನರವ್ಯಾಘ್ರ ಪುತ್ರವತ್ ಪರ್ಯಪಾಲಯತ್ ॥ ೪

ಸುರೈಶ್ಚ ಪರಮೋದಾರೈರ್ದೈತೇಯೈಶ್ಚ ಮಹಾಧನೈಃ ।
ನಾಗರಾಕ್ಷಸಗಂಧರ್ವೈರ್ಯಕ್ಷೈಶ್ಚ ಸುಮಹಾತ್ಮಭಿಃ ॥ ೫

### ಸರ್ಗ ೮೭

ಇಲನೆಂಬ ರಾಜನು ಕುಮಾರಸ್ವಾಮಿಯ ಜನ್ಮಸ್ಥಾನಕ್ಕೆ ಹೋಗಿ ಸ್ತ್ರೀರೂಪ
ವನ್ನು ಪಡೆಯುವುದು ಅನಂತರ ಒಂದು ತಿಂಗಳು ಸ್ತ್ರೀತ್ವ
ಒಂದು ತಿಂಗಳು ಪುಂಸ್ತ್ವ–ಈ ಪ್ರಕಾರವಾಗಿ ಆಗಲೆಂದು
ಉಮಾದೇವಿಯ ಅನುಗ್ರಹ

ಲಕ್ಷ್ಮಣನ ಹೇಳಿಕೆಯನ್ನು ಕೇಳಿ ವಾಗ್ವಿಶಾರದನಾದ ರಾಘವನು ನಗುತ್ತ ಹೀಗೆಂದನು: "ಲಕ್ಷ್ಮಣ, ನೀನು ಹೇಳುವುದು ಸರಿ. ವೃತ್ರವಧೆಯ ವೃತ್ತಾಂತವೂ ಅಶ್ವಮೇಧದ ಫಲವೂ ಸಂಗತವಾಗಿವೆ (೧–೨) ಹಿಂದೆ ಕರ್ದಮ ಪ್ರಜಾಪತಿಯ ಪುತ್ರನಾದ ಇಲನೆಂಬ ವಿಖ್ಯಾತನಾದ ದೊರೆಯು ಬಾಹ್ಲಿಕ ದೇಶಕ್ಕೆ ಅಧಿಪತಿಯಾಗಿದ್ದನು. ಧಾರ್ಮಿಕನಾದ ಆ ರಾಜನು ಸಕಲ ಪೃಥ್ವಿಯನ್ನು ವಶಪಡಿಸಿಕೊಂಡು ಮಕ್ಕಳನ್ನು ಪಾಲಿಸಿದಂತೆ ರಾಜ್ಯದ ಪ್ರಜೆಗಳನ್ನು ಪಾಲಿಸುತ್ತಿದ್ದನು (೩–೪). ಸೌಮ್ಯ, ಮಹಾತ್ಮರಾದ ದೇವದಾನವ

ಪೂಜ್ಯತೇ ನಿತ್ಯಶಃ ಸೌಮ್ಯ ಭಯಾರ್ತೈ ರಘುನಂದನ ।
ಅಬಿಭ್ಯಂಶ್ಚ ತ್ರಯೋ ಲೋಕಾಃ ಸರೋಷಸ್ಯ ಮಹಾತ್ಮನಃ ॥ ೬
ಸ ರಾಜಾ ತಾದೃಶೋ ಹ್ಯಾಸೀದ್ಧರ್ಮೇ ವೀರ್ಯೇ ಚ ನಿಶ್ಚಿತಃ ।
ಬುದ್ಧ್ಯಾ ಚ ಪರಮೋದಾರೋ ಬಾಹ್ಲೀಕೇಶೋ ಮಹಾಯಶಾಃ ॥
ಸ ಪ್ರಚಕ್ರೇ ಮಹಾಬಾಹುರ್ಮೃಗಯಾಂ ರುಚಿರೇ ವನೇ ।
ಚೈತ್ರೇ ಮನೋರಮೇ ಮಾಸಿ ಸಭೃತ್ಯಬಲವಾಹನಃ ॥ ೮
ಪ್ರಜಘ್ನೇ ಚ ನೃಪೋಽರಣ್ಯೇ ಮೃಗಾನ್ ಶತಸಹಸ್ರಶಃ ।
ಹತ್ವೈವ ತೃಪ್ತಿರ್ನಾಭೂಚ್ಚ ರಾಜ್ಞಸ್ತಸ್ಯ ಮಹಾತ್ಮನಃ ॥ ೯
ನಾನಾಮೃಗಾಣಾಮಯುತಂ ವಧ್ಯಮಾನಂ ಮಹಾತ್ಮನಾ ।
ಯತ್ರ ಜಾತೋ ಮಹಾಸೇನಸ್ತಂ ದೇಶಮುಪಚಕ್ರಮೇ ॥ ೧೦
ತಸ್ಮಿನ್ ಪ್ರದೇಶೇ ದೇವೇಶಃ ಶೈಲರಾಜಸುತಾಂ ಹರಃ ।
ರಮಯಾಮಾಸ ದುರ್ಧರ್ಷಃ ಸರ್ವೈರನುಚರೈಃ ಸಹ ॥ ೧೧
ಕೃತ್ವಾ ಸ್ತ್ರೀರೂಪಮಾತ್ಮಾನಮುಮೇಶೋ ಗೋಪತಿಧ್ವಜಃ ।
ದೇವ್ಯಾಃ ಪ್ರಿಯಚಿಕೀರ್ಷುಃ ಸಂಸ್ತಸ್ಮಿನ್ ಪರ್ವತನಿರ್ಝರೇ ॥ ೧೨

---

ನಾಗರಾಕ್ಷಸರೂ ಯಕ್ಷಗಂಧರ್ವರೂ ಭಯದಿಂದ ಆತನನ್ನು ಗೌರವಿಸುತ್ತಿದ್ದರು ಇಲರಾಜನು ಕುಪಿತನಾದರೆ ಮೂರು ಲೋಕಗಳೂ ಹೆದರುತ್ತಿದ್ದವು (೫-೬) ಕೀರ್ತಿಶಾಲಿಯಾದ ಆ ಬಾಹ್ಲೀಕೇಶ್ವರನು ಧರ್ಮ ಪರಾಕ್ರಮ ಬುದ್ಧಿಗಳಲ್ಲಿ ಅಂತಹ ಧೀರೋದಾತ್ತನೆನಿಸಿದ್ದನು. ಹೀಗಿರುವಾಗ ಇಲರಾಜನು ಒಂದು ಚೈತ್ರಮಾಸದಲ್ಲಿ ಪರಿವಾರಸಹಿತನಾಗಿ ಅರಣ್ಯಕ್ಕೆ ಹೋಗಿ ಬೇಟೆಯಲ್ಲಿ ತೊಡಗಿದನು (೭-೮) ವನದಲ್ಲಿ ಸಾವಿರಾರು ಮೃಗಗಳನ್ನು ಸಂಹರಿಸಿದನು ಆದರೂ ಅವನಿಗೆ ತೃಪ್ತಿಯಾಗಲಿಲ್ಲ ಅವನು ನಾನಾ ಮೃಗಗಳನ್ನು ಕೊಲ್ಲುತ್ತ, ಕಡೆಗೆ ಕುಮಾರ ಸ್ವಾಮಿಯು ಜನಿಸಿದ ಸ್ಥಳಕ್ಕೆ ಹೋದನು (೯-೧೦) ಆ ಸ್ಥಳದಲ್ಲಿ ದೇವೇಶ್ವರನಾದ ಶಿವನು ತನ್ನ ಅನುಚರರೊಂದಿಗೆ ಶೈಲರಾಜತನಯೆಯೊಡನೆ ವಿಹರಿಸುತ್ತಿದ್ದನು ವೃಷಭಧ್ವಜನಾದ ಆ ಉಮೇಶ್ವರನು ದೇವಿಗೆ ಸಂತೋಷವಾಗಲೆಂದು ಸ್ತ್ರೀ ರೂಪವನ್ನು ಧರಿಸಿ ಗಿರಿನಿರ್ಝರದಲ್ಲಿ ಅವಳನ್ನು ನಲಿಸುತ್ತಿದ್ದನು (೧೧-೧೨)

ಯೇ ತು ತತ್ರ ವನೋದ್ದೇಶೇ ಸತ್ತ್ವಾಃ ಪುರುಷವಾದಿನಃ ।
ವೃಕ್ಷಾಃ ಪುರುಷನಾಮಾನಸ್ತೇಽಭವಂಸ್ತ್ರೀಜನಾಸ್ತದಾ ॥ ೧೩
ಯಚ್ಚ ಕಿಂಚನ ತತ್ ಸರ್ವಂ ನಾರೀಸಂಜ್ಞಂ ಬಭೂವ ಹ ।
ಏತಸ್ಮಿನ್ನಂತರೇ ರಾಜಾ ಸ ಇಲಃ ಕರ್ದಮಾತ್ಮಜಃ ॥ ೧೪
ನಿಘ್ನನ್ ಮೃಗಸಹಸ್ರಾಣಿ ತಂ ದೇಶಮುಪಚಕ್ರಮೇ ।
ಸ ದೃಷ್ಟ್ವಾ ಸ್ತ್ರೀಕೃತಂ ಸರ್ವಂ ಸವ್ಯಾಲಮೃಗಪಕ್ಷಿಕಮ್ ॥ ೧೫
ಆತ್ಮಾನಂ ಸ್ತ್ರೀಕೃತಂ ಚೈವ ಸಾನುಗಂ ರಘುನಂದನ ।
ತಸ್ಯ ದುಃಖಂ ಮಹಚ್ಚಾಸೀದ್ದೃಷ್ಟ್ವಾತ್ಮಾನಂ ತಥಾಗತಮ್ ॥
ಉಮಾಪತೇಶ್ಚ ತತ್ ಕರ್ಮ ಜ್ಞಾತ್ವಾ ತ್ರಾಸಮುಪಾಗಮತ್ ।
ತತೋ ದೇವಂ ಮಹಾತ್ಮಾನಂ ಶಿತಿಕಂಠಂ ಕಪರ್ದಿನಮ್ ॥ ೧೭
ಜಗಾಮ ಶರಣಂ ರಾಜಾ ಸಭೃತ್ಯಬಲವಾಹನಃ ।
ತತಃ ಪ್ರಹಸ್ಯ ವರದಃ ಸಹ ದೇವ್ಯಾ ಮಹೇಶ್ವರಃ ॥ ೧೮
ಪ್ರಜಾಪತಿಸುತಂ ವಾಕ್ಯಮುವಾಚ ವರದಃ ಸ್ವಯಮ್ ।
ಉತ್ತಿಷ್ಠೋತ್ತಿಷ್ಠ ರಾಜರ್ಷೇ ಕಾರ್ದಮೇಯ ಮಹಾಬಲ ॥ ೧೯

---

ಆ ವನೋದ್ದೇಶದಲ್ಲಿ ಗಂಡುಜಾತಿಗೆ ಸೇರಿದ ಸಕಲ ಪ್ರಾಣಿಗಳೂ ಪುಲ್ಲಿಂಗದ ಮರಗಳೂ ಸ್ತ್ರೀ ರೂಪವನ್ನು ಧರಿಸಿ ಸ್ತ್ರೀಲಿಂಗವನ್ನು ಪಡೆದಿದ್ದವು! ಅಲ್ಲಿದ್ದ ಸಕಲವೂ ಸ್ತ್ರೀಮಯವಾಗಿತ್ತು ಆ ಸಮಯದಲ್ಲಿ ಕರ್ದಮ ಸುತನಾದ ಇಲನು ಮೃಗಗಳನ್ನು ಕೊಲ್ಲುತ್ತ ಅಲ್ಲಿಗೆ ಬಂದನು (೧೩-೧೪) ಲಕ್ಷ್ಮಣ, ಇಲರಾಜನು ಆ ವನದಲ್ಲಿ ಹಾವು ಮೃಗಪಕ್ಷಿಗಳೆಲ್ಲವೂ ಹೆಣ್ಣಾಗಿರುವುದನ್ನು ಕಂಡು, ತನ್ನನ್ನು ನೋಡಿಕೊಳ್ಳಲು ತಾನೂ ಹೆಣ್ಣಾಗಿಬಿಟ್ಟಿದ್ದನು! ಅವನೊಡನೆ ಬಂದ ಪರಿವಾರದವರೂ ಹೆಣ್ಣಾದರು! ತನ್ನ ಪರಿಸ್ಥಿತಿಯನ್ನು ಕಂಡು ಇಲರಾಜನಿಗೆ ಬಹಳ ದುಃಖವಾಯಿತು (೧೫-೧೬) ಅದೆಲ್ಲವೂ ಉಮೇಶ್ವರನ ಮಹಿಮೆಯೆಂದು ತಿಳಿದಾಗ ಅವನಿಗೆ ಭಯವಾಯಿತು. ಲಕ್ಷ್ಮಣ, ಆಗ ರಾಜನು ಮಹಾತ್ಮನೂ ಕಪರ್ದಿಯೂ ನೀಲಕಂಠನೂ ಆದ ಸ್ವಾಮಿಯನ್ನು ಪರಿವಾರ ಸಹಿತನಾಗಿ ಮರೆಹೊಕ್ಕನು ಮಹೇಶ್ವರನು ಉಮಾದೇವಿಯೊಡನೆ ಪ್ರಸನ್ನನಾಗಿ ನಕ್ಕು "ರಾಜರ್ಷಿ-ಕರ್ದಮಸುತ, ಮೇಲೇಳು

ಪುರುಷತ್ವಮೃತೇ ಸೌಮ್ಯ ವರಂ ವರಯ ಸುವ್ರತ ।
ತತಃ ಸ ರಾಜಾ ದುಃಖಾರ್ತಃ ಪ್ರತ್ಯಾಖ್ಯಾತೋ ಮಹಾತ್ಮನಾ ॥ ೨೦

ನ ಚ ಜಗ್ರಾಹ ಸ್ತ್ರೀಭೂತೋ ವರಮನ್ಯಂ ಸುರೋತ್ತಮಾತ್ ।
ತತಃ ಶೋಕೇನ ಮಹತಾ ಶೈಲರಾಜಸುತಾಂ ನೃಪಃ ॥ ೨೧

ಪ್ರಣಿಪತ್ಯ ಹ್ಯುಮಾಂ ದೇವೀಂ ಸರ್ವೇಣೈವಾಂತರಾತ್ಮನಾ ।
ಈಶೇ ವರಾಣಾಂ ವರದೇ ಲೋಕಾನಾಮಸಿ ಭಾಮಿನೀ ॥ ೨೨

ಅಮೋಘದರ್ಶನೇ ದೇವಿ ಭಜ ಸೌಮ್ಯೇನ ಚಕ್ಷುಷಾ ।
ಹೃದ್ಗತಂ ತಸ್ಯ ರಾಜರ್ಷೇರ್ವಿಜ್ಞಾಯ ಹರಸಂನಿಧೌ ॥ ೨೩

ಪ್ರತ್ಯುವಾಚ ಶುಭಂ ವಾಕ್ಯಂ ದೇವೀ ರುದ್ರಸ್ಯ ಸಂಮತಾ ।
ಅರ್ಧಸ್ಯ ದೇವೋ ವರದೋ ವರಾರ್ಧಸ್ಯ ತವ ಹ್ಯಹಮ್ ॥ ೨೪

ತಸ್ಮಾದರ್ಧಂ ಗೃಹಾಣ ತ್ವಂ ಸ್ತ್ರೀಪುಂಸೋರ್ಯಾವದಿಚ್ಛಸಿ ।
ತದದ್ಭುತತರಂ ಶ್ರುತ್ವಾ ದೇವ್ಯಾ ವರಮನುತ್ತಮಮ್ ॥ ೨೫

---

(೧೭-೧೯) ಪುರುಷತ್ವವೊಂದನ್ನು ಬಿಟ್ಟು ಯಾವ ವರವನ್ನಾದರೂ ಕೇಳಿಕೊ" ಎಂದನು ಪುರುಷತ್ವವನ್ನು ಶಿವನು ನಿರಾಕರಿಸಲಾಗಿ ದೊರೆಯು ದುಃಖಾರ್ತನಾದನು ಹೆಣ್ಣಾದ ಇಲನು ಬೇರೊಂದು ವರವನ್ನು ಆ ದೇವೇಶನಿಂದ ಸ್ವೀಕರಿಸಲಿಲ್ಲ (೨೦) ಆತನು ಶೋಕಾರ್ತನಾಗಿ ಪಾರ್ವತೀದೇವಿಗೆ ಅಡ್ಡಬಿದ್ದನು ತನ್ನ ಹೃದಯಾಂತರಾಳದಿಂದ ಆಕೆಯನ್ನು ಸ್ತುತಿಸುತ್ತ "ತಾಯಿ, ನೀನು ಸಕಲ ವರಗಳನ್ನು ಕೊಡಲು ಶಕ್ತಳು ಜನರಿಗೆ ವರವನ್ನನುಗ್ರಹಿಸುವ ದೇವಿಯಾಗಿರುತ್ತೀಯೆ (೨೧-೨೨) ನಿನ್ನ ದರ್ಶನವು ಎಂದಿಗೂ ನಿಷ್ಫಲವಾಗತಕ್ಕುದಲ್ಲ ಸೌಮ್ಯದೃಷ್ಟಿಯಿಂದ ನನ್ನನ್ನು ಅನುಗ್ರಹಿಸು" ಎಂದು ಬೇಡಿಕೊಂಡನು ರಾಜರ್ಷಿಯ ಹೃದ್ಗತವಾದ ಅಭಿಪ್ರಾಯವನ್ನರಿತು ರುದ್ರದೇವನಿಗೆ ಪ್ರಿಯಳಾದ ದೇವಿಯು ಹರನ ಸನ್ನಿಧಿಯಲ್ಲಿ "ಎಲೈ ರಾಜರ್ಷಿಯೆ, ವರದನಾದ ಸ್ವಾಮಿಯು ನೀನು ಕೇಳಿಕೊಂಡ ವರದಲ್ಲಿ ಅರ್ಧವನ್ನು ಸಲ್ಲಿಸಬಲ್ಲನು ನಾನು ಉಳಿದ ಅರ್ಧವನ್ನು ಕೊಡಬಲ್ಲೆ! ಸ್ತ್ರೀಪುರುಷ ರೂಪಗಳಲ್ಲಿ ಯಾವುದು ಎಷ್ಟು ಕಾಲ ಬೇಕೆಂಬುದನ್ನು ತಿಳಿಸು!" ಎಂದಳು (೨೩-೨೪) ದೇವಿಯು ಅದ್ಭುತವಾದ ಆ ವರವಿಧಾನ

ಸಂಪ್ರಹೃಷ್ಟಮನಾ ಭೂತ್ವಾ ರಾಜಾ ವಾಕ್ಯಮಥಾಬ್ರವೀತ್ ।
ಯದಿ ದೇವಿ ಪ್ರಸನ್ನಾ ಮೇ ರೂಪೇಣಾಪ್ರತಿಮಾ ಭುವಿ ॥ ೨೬

ಮಾಸಂ ಸ್ತ್ರೀತ್ವಮುಪಾಸಿತ್ವಾ ಮಾಸಂ ಸ್ಯಾಂ ಪುರುಷಃ ಪುನಃ ।
ಈಪ್ಸಿತಂ ತಸ್ಯ ವಿಜ್ಞಾಯ ದೇವೀ ಸುರುಚಿರಾನನಾ ॥ ೨೭

ಪ್ರತ್ಯುವಾಚ ಶುಭಂ ವಾಕ್ಯಮೇವಮೇವ ಭವಿಷ್ಯತಿ ।
ರಾಜನ್ ಪುರುಷಭೂತಸ್ತ್ವಂ ಸ್ತ್ರೀಭಾವಂ ನ ಸ್ಮರಿಷ್ಯಸಿ ॥ ೨೮

ಸ್ತ್ರೀಭೂತಶ್ಚ ಪರಂ ಮಾಸಂ ನ ಸ್ಮರಿಷ್ಯಸಿ ಪೌರುಷಮ್ ।
ಏವಂ ಸ ರಾಜಾ ಪುರುಷೋ ಮಾಸಂ ಭೂತ್ವಾಥ ಕಾರ್ದಮಿಃ ॥ ೨೯

ತ್ರೈಲೋಕ್ಯಸುಂದರೀ ನಾರೀ ಮಾಸಮೇಕಮಿಲಾಭವತ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತಾಶೀತಿತಮಃ ಸರ್ಗಃ



ವನ್ನು ಕೇಳಿ ರಾಜನು ಹರ್ಷದಿಂದ "ದೇವಿ, ದಿವ್ಯಸುಂದರಿಯಾಗಿರುವ ನೀನು ಪ್ರಸನ್ನಳಾದರೆ, ಒಂದು ತಿಂಗಳು ಸ್ತ್ರೀಯಾಗಿ ಇನ್ನೊಂದು ತಿಂಗಳು ಪುರುಷನಾಗುತ್ತ ಇರಬೇಕೆಂದು ಬಯಸುತ್ತೇನೆ!" ಎಂದನು (೨೫-೨೬). ಇಲರಾಜನ ಬಯಕೆಯನ್ನರಿತು ಪಾರ್ವತೀದೇವಿಯು "ರಾಜ, ಹಾಗೆಯೇ ಆಗಲಿ ನೀನು ಪುರುಷನಾದಾಗ ಸ್ತ್ರೀತ್ವದ ಸ್ಮರಣೆಯಾಗುವುದಿಲ್ಲ ಸ್ತ್ರೀಯಾದಾಗ ಪುರುಷನಾಗಿದ್ದೆನೆಂಬ ನೆನಪು ಇರುವುದಿಲ್ಲ" ಎಂದು ಶುಭ ವಾಕ್ಯವನ್ನಾಡಿದಳು ಲಕ್ಷ್ಮಣ, ಈ ಪ್ರಕಾರವಾಗಿ ಆ ರಾಜನು ಒಂದು ತಿಂಗಳವರೆಗೆ ಪುರುಷನಾಗಿದ್ದು ಇನ್ನೊಂದು ತಿಂಗಳಲ್ಲಿ ತ್ರಿಲೋಕಸುಂದರಿಯಾದ ನಾರಿಯಾಗಿ ಇಲಾ ಎಂಬ ಹೆಸರಿನಿಂದ ಸಂಚರಿಸುತ್ತಿದ್ದನು (೨೭-೨೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತೇಳನೆಯ ಸರ್ಗ



## ಅಷ್ಟಾಶೀತಿತಮಃ ಸರ್ಗಃ

### ಬುಧಸಮಾಗಮಃ

ತಾಂ ಕಥಾಮಿಲಸಂಬದ್ಧಾಂ ರಾಮೇಣ ಸಮುದೀರಿತಾಮ್ ।
ಲಕ್ಷ್ಮಣೋ ಭರತಶ್ಚೈವ ಶ್ರುತ್ವಾ ಪರಮವಿಸ್ಮಿತೌ ॥ ೧

ತೌ ರಾಮಂ ಪ್ರಾಂಜಲೀ ಭೂತ್ವಾ ತಸ್ಯ ರಾಜ್ಞೋ ಮಹಾತ್ಮನಃ ।
ವಿಸ್ತರಂ ತಸ್ಯ ಭಾವಸ್ಯ ತದಾ ಪಪ್ರಚ್ಛತುಃ ಪುರಃ ॥ ೨

ಕಥಂ ಸ ರಾಜಾ ಸ್ತ್ರೀಭೂತೋ ವರ್ತಯಾಮಾಸ ದುರ್ಗತಿಃ ।
ಪುರುಷಃ ಸ ಯದಾ ಭೂತಃ ಕಾಂ ವೃತ್ತಿಂ ವರ್ತಯತ್ಯಸೌ ॥ ೩

ತಯೋಸ್ತದ್ಭಾಷಿತಂ ಶ್ರುತ್ವಾ ಕೌತೂಹಲಸಮನ್ವಿತಮ್ ।
ಕಥಯಾಮಾಸ ಕಾಕುತ್ಸ್ಥಸ್ತಸ್ಯ ರಾಜ್ಞೋ ಯಥಾಗತಮ್ ॥ ೪

ತಮೇವ ಪ್ರಥಮಂ ಮಾಸಂ ಸ್ತ್ರೀಭೂತಾ ಲೋಕಸುಂದರೀ ।
ತಾಭಿಃ ಪರಿವೃತಾ ಸ್ತ್ರೀಭಿರ್ಯೇ ಚ ಪೂರ್ವಂ ಪದಾನುಗಾಃ ॥ ೫

## ಸರ್ಗ ೮೮

### ಬುಧನು ಇಲೆಯನ್ನು ನೋಡಿ ಕಾಮಮೋಹಿತನಾಗುವುದು

ಶ್ರೀರಾಮನು ಹೇಳಿದ ಇಲರಾಜನ ಕಥೆಯನ್ನು ಕೇಳಿ ಲಕ್ಷ್ಮಣನೂ ಭರತನೂ ಅಚ್ಚರಿಗೊಂಡರು ಅವರು ಶ್ರೀರಾಮನಿಗೆ ಕೈಮುಗಿದು ಇಲರಾಜನ ಸ್ತ್ರೀಪುರುಷಭಾವದಲ್ಲಿ ನಡೆದ ವಿಸ್ತರವನ್ನು ಕುರಿತು ಪ್ರಶ್ನೆ ಮಾಡಿದರು (೧-೨). "ಅಣ್ಣ, ಕಷ್ಟಕ್ಕೆ ಸಿಕ್ಕಿದ ಆ ರಾಜನು ಹೆಣ್ಣಾದಾಗ ಹೇಗೆ ವರ್ತಿಸಿದನು? ಮತ್ತೆ ಗಂಡಾದಾಗ ಹೇಗೆ ನಡೆದುಕೊಂಡನು?" ಎಂದು ಕೇಳಿದರು (೩) ಕೌತುಕದಿಂದ ಹಾಕಿದ ಅವರ ಪ್ರಶ್ನೆಯನ್ನು ಕೇಳಿ ಕಾಕುತ್ಸ್ಥನು ಇಲರಾಜನ ವೃತ್ತಾಂತವನ್ನು ಹೀಗೆ ತಿಳಿಸಿದನು: "ಭರತ, ಲಕ್ಷ್ಮಣ, ಕೇಳಿರಿ ಆತನು ಮೊದಲನೆಯ ತಿಂಗಳಲ್ಲಿ ತ್ರಿಲೋಕಸುಂದರಿಯಾದ ಸ್ತ್ರೀಯಾಗಿ, ಮೊದಲೇ ಸ್ತ್ರೀಯರಾಗಿದ್ದ ತನ್ನ ಅನುಚರರೊಂದಿಗೆ ಆ ಕಾನನದಲ್ಲಿ ವಿಹರಿಸತೊಡಗಿದನು (೪-೫)

ತತ್ ಕಾನನಂ ವಿಗಾಹ್ಯಾಶು ವಿಜಹ್ರೇ ಲೋಕಸುಂದರೀ ।
ದ್ರುಮಗುಲ್ಮಲತಾಕೀರ್ಣಂ ಪದ್ಭ್ಯಾಂ ಪದ್ಮದಲೇಕ್ಷಣಾ ॥ ೬

ವಾಹನಾನಿ ಚ ಸರ್ವಾಣಿ ಸಾ ತ್ಯಕ್ತ್ವಾ ವೈ ಸಮಂತತಃ ।
ಪರ್ವತಾಭೋಗವಿವರೇ ತಸ್ಮಿನ್ ರೇಮೇ ಇಲಾ ತದಾ ॥ ೭

ಅಥ ತಸ್ಮಿನ್ ವನೋದ್ದೇಶೇ ಪರ್ವತಸ್ಯಾವಿದೂರತಃ ।
ಸರಃ ಸುರುಚಿರಪ್ರಖ್ಯಂ ನಾನಾಪಕ್ಷಿಗಣೈರ್ಯುತಮ್ ॥ ೮

ದದರ್ಶ ಸಾ ತ್ವಿಲಾ ತಸ್ಮಿನ್ ಬುಧಂ ಸೋಮಸುತಂ ತತಃ ।
ಜ್ವಲಂತಂ ಸ್ವೇನ ವಪುಷಾ ಪೂರ್ಣಂ ಸೋಮಮಿವೋದಿತಮ್ ॥ ೯

ತಪಂತಂ ಚ ತಪಸ್ತೀವ್ರಮಂಭೋಮಧ್ಯೇ ದುರಾಸದಮ್ ।
ಯಶಸ್ಕರಂ ಕಾಮಕರಂ ತಾರುಣ್ಯೇ ಪರ್ಯವಸ್ಥಿತಮ್ ॥ ೧೦

ಸಾ ತಂ ಜಲಾಶಯಂ ಸರ್ವಂ ಕ್ಷೋಭಯಾಮಾಸ ವಿಸ್ಮಿತಾ ।
ಸಹಗೈಃ ಪೂರ್ವಪುರುಷೈಃ ಸ್ತ್ರೀಭೂತೈ ರಘುನಂದನ ॥ ೧೧

---

ಪದ್ಮದಳನೇತ್ರೆಯಾಗಿ ಕಂಗೊಳಿಸುತ್ತಿದ್ದ ಇಲೆಯು ಮರಬಳ್ಳಿಕುಂಜಗಳಿಂದ ಆಕೀರ್ಣವಾದ ವನದಲ್ಲಿ ಸಕಲವಾಹನಗಳನ್ನೂ ಪರಿತ್ಯಜಿಸಿ ಕಾಲ್ನಡಗೆಯಿಂದ ಸುತ್ತಾಡುತ್ತಿದ್ದಳು ಪರ್ವತಗಳ ತಪ್ಪಲಲ್ಲಿ ಕ್ರೀಡಿಸುತ್ತಿದ್ದಳು (೬-೭) ಹೀಗಿರಲು ಪರ್ವತ ಸಮೀಪದಲ್ಲಿದ್ದ ವನಪ್ರದೇಶದಲ್ಲಿ * ನಾನಾ ಪಕ್ಷಿಗಳಿಂದ ಮನೋಹರವಾದ ಒಂದು ಸರಸ್ಸನ್ನು ಕಂಡಳು ಅದರ ನಡುವೆ ನೀರಿನಲ್ಲಿ ಚಂದ್ರಪುತ್ರನಾದ ಬುಧನು ತಪಸ್ಸು ಮಾಡುತ್ತಿದ್ದನು ಬುಧನಾದರೋ ಪೂರ್ಣಚಂದ್ರನೇ ಉದಿಸಿ ಬಂದನೋ ಎಂಬಂತೆ ಸುಂದರ ದೇಹದಿಂದ ಕಂಗೊಳಿಸುತ್ತಿದ್ದನು ಕೀರ್ತಿಶಾಲಿಯೂ ತರುಣನೂ ಆದ ಬುಧನು ತನ್ನ ಇಷ್ಟಾನುಸಾರವಾಗಿ ತಪೋನಿರತನಾಗಿರುವುದನ್ನು ಇಲೆಯು ಕಂಡಳು (೮-೧೦) ಅವಳು ವಿಸ್ಮಿತಳಾಗಿ ತನ್ನ ಸಹಚರಿಯರಾದ ಸ್ತ್ರೀಯರೊಡನೆ

* ಇದು ಸರ್ವರೂ ಪ್ರಿಯರಾಗಬೇಕೆಂಬ ಈಶ್ವರಾಜ್ಞೆಯಿಂದ ಒಳಪಟ್ಟ ಪ್ರದೇಶವಲ್ಲ

ಬುಧಸ್ತು ತಾಂ ಸಮೀಕ್ಷ್ಯೈವ ಕಾಮಬಾಣವಶಂ ಗತಃ ।
ನೋಪಲೇಭೇ ತದಾತ್ಮಾನಂ ಸಂಚಚಾಲ ತದಾಂಭಸಿ ॥ ೧೨

ಇಲಾಂ ನಿರೀಕ್ಷಮಾಣಸ್ತು ತ್ರೈಲೋಕ್ಯಾಭ್ಯಧಿಕಾಂ ಶುಭಾಮ್ ।
ಚಿಂತಾಂ ಸಮಭ್ಯತಿಕ್ರಾಮತ್ ಕಾ ನ್ವಿಯಂ ದೇವತಾಧಿಕಾ ॥ ೧೩

ನ ದೇವೀಷು ನ ನಾಗೀಷು ನಾಸುರೀಷ್ವಪ್ಸರಃಸು ಚ ।
ದೃಷ್ಟಪೂರ್ವಾ ಮಯಾ ಕಾಚಿದ್ರೂಪೇಣಾನೇನ ಶೋಭಿತಾ ॥ ೧೪

ಸದೃಶೀಯಂ ಮಮ ಭವೇದ್ಯದಿ ನಾನ್ಯಪರಿಗ್ರಹಃ ।
ಇತಿ ಬುದ್ಧಿಂ ಸಮಾಸ್ಥಾಯ ಜಲಾತ್ ಕೂಲಮುಪಾಗಮತ್ ॥ ೧೫

ಆಶ್ರಮಂ ಸಮುಪಾಗಮ್ಯ ತತಸ್ತಾಃ ಪ್ರಮದೋತ್ತಮಾಃ ।
ಶಬ್ದಾಪಯತ ಧರ್ಮಾತ್ಮಾ ತಾಶ್ಚೈನಂ ಚ ವವಂದಿರೇ ॥ ೧೬

ಸ ತಾಃ ಪಪ್ರಚ್ಛ ಧರ್ಮಾತ್ಮಾ ಕಸ್ಯೈಷಾ ಲೋಕಸುಂದರೀ ।
ಕಿಮರ್ಥಮಾಗತಾ ಚೈವ ಸರ್ವಮಾಖ್ಯಾತ ಮಾ ಚಿರಮ್ ॥ ೧೭

---

ಜಲಾಶಯದಲ್ಲಿಳಿದು ಕ್ರೀಡಿಸಿ ನೀರನ್ನು ಕಲಕಿದಳು ಬುಧನು ಆಕೆಯನ್ನು ನೋಡಿ ಕಾಮಬಾಣವಶನಾದನು ಆತ್ಮಧ್ಯಾನವು ಕುಂಠಿತವಾಯಿತು. ನೀರಿನಲ್ಲಿ ಇಲ್ಲಿಂದಲ್ಲಿಗೆ ತಿರುಗಾಡತೊಡಗಿದನು (೧೧-೧೨) ತ್ರಿಲೋಕ ಸುಂದರಿಯಾದ ಇಲೆಯನ್ನೇ ನೋಡುತ್ತಿದ್ದ ಬುಧನ ಮನಸ್ಸಿನಲ್ಲಿ ಚಿಂತೆಯು ದಿಸಿತು· "ದೇವತೆಯನ್ನು ಮೀರಿಸುವ ಇವಳು ಯಾರಾಗಿರಬಹುದು? ಇಂತಹ ರೂಪವತಿಯನ್ನು ದೇವನಾಗಾಸುರಸ್ತ್ರೀಯರಲ್ಲಾಗಲಿ ಅಪ್ಸರೆಯರ ಲ್ಲಾಗಲಿ ನಾನು ಕಂಡಿಲ್ಲ! (೧೩-೧೪) ಇವಳು ಇನ್ನೊಬ್ಬನನ್ನು ವರಿಸಿಲ್ಲ ವಾದರೆ ನನಗೆ ಅನುರೂಪಳಾಗುವಳು" ಹೀಗೆ ಆಲೋಚಿಸುತ್ತ ಬುಧನು ಸರಸ್ಸಿನ ತೀರಕ್ಕೆ ಬಂದನು. ಅನಂತರ ತನ್ನ ಆಶ್ರಮಕ್ಕೆ ಹೋಗಿ ಆ ಧರ್ಮಾತ್ಮನು ಆ ಸ್ತ್ರೀಯರನ್ನು ಬಳಿಗೆ ಕರೆದನು ಅವರು ಹೋಗಿ ಬುಧನಿಗೆ ವಂದಿಸಿದರು (೧೫-೧೬) ಬುಧನು ಆ ಸ್ತ್ರೀಯರನ್ನು ಕುರಿತು "ಈ ಲೋಕಸುಂದರಿ ಯಾರ ಪತ್ನಿ? ಇಲ್ಲಿಗೆ ಏಕೆ ಬಂದಿರುವಳು? ಎಲ್ಲವನ್ನೂ

ಶುಭಂ ತು ತಸ್ಯ ತದ್ವಾಕ್ಯಂ ಮಧುರಂ ಮಧುರಾಕ್ಷರಮ್ ।
ಶ್ರುತ್ವಾ ಸ್ತ್ರಿಯಶ್ಚ ತಾಃ ಸರ್ವಾ ಊಚುರ್ಮಧುರಯಾ ಗಿರಾ ॥ ೧೮

ಅಸ್ಮಾಕಮೇಷಾ ಸುಶ್ರೋಣೀ ಪ್ರಭುತ್ವೇ ವರ್ತತೇ ಸದಾ ।
ಅಪತಿಃ ಕಾನನಾಂತೇಷು ಸಹಾಸ್ಮಾಭಿಶ್ಚರತ್ಯಸೌ ॥ ೧೯

ತದ್ವಾಕ್ಯಮವ್ಯಕ್ತಪದಂ ತಾಸಾಂ ಸ್ತ್ರೀಣಾಂ ನಿಶಮ್ಯ ಚ ।
ವಿದ್ಯಾಮಾವರ್ತಿನೀಂ ಪುಣ್ಯಾಮಾವರ್ತಯತ ಸ ದ್ವಿಜಃ ॥ ೨೦

ಸೋಽರ್ಥಂ ವಿದಿತ್ವಾ ಸಕಲಂ ತಸ್ಯ ರಾಜ್ಞೋ ಯಥಾಗತಮ್ ।
ಸರ್ವಾ ಏವ ಸ್ತ್ರಿಯಸ್ತಾಶ್ಚ ಬಭಾಷೇ ಮುನಿಪುಂಗವಃ ॥ ೨೧

ಅತ್ರ ಕಿಂಪುರುಷೀರ್ಭೂತ್ವಾ ಶೈಲರೋಧಸಿ ವತ್ಸ್ಯಥ ।
ಆವಾಸಸ್ತು ಗಿರಾವಸ್ಮಿನ್ ಶೀಘ್ರಮೇವ ವಿಧೀಯತಾಮ್ ॥ ೨೨

ಮೂಲಪತ್ರಫಲೈಃ ಸರ್ವಾ ವರ್ತಯಿಷ್ಯಥ ನಿತ್ಯದಾ ।
ಸ್ತ್ರಿಯಃ ಕಿಂಪುರುಷಾನ್ನಾಮ ಭರ್ತ್ರೄನ್ ಸಮುಪಲಪ್ಸ್ಯಥ ॥ ೨೩

---

ತಿಳಿಸಿರಿ" ಎಂದು ಕೇಳಿದನು (೧೭). ಮಧುರವಾಗಿ ಮಾತಾಡಿದ ಬುಧನ ಇನಿಮಾತನ್ನು ಕೇಳಿ ಆ ಹೆಂಗಸರು ಇಂಪಾದ ಧ್ವನಿಯಿಂದ "ಈ ತರುಣಿಯು ನಮ್ಮ ಒಡತಿ. ಇವಳಿಗೆ ಪತಿ ಇಲ್ಲ. ನಮ್ಮೊಡನೆ ವನವಿಹಾರವನ್ನು ಮಾಡುತ್ತಿರುವಳು" ಎಂದರು (೧೮-೧೯). ಆ ಸ್ತ್ರೀಯರ ಅಸ್ಪಷ್ಟವಾದ ಹೇಳಿಕೆಯನ್ನು ಕೇಳಿ ಕ್ಷತ್ರಿಯನಾದ ಬುಧನು ಆವರ್ತನಿಯೆಂಬ* ಪವಿತ್ರವಾದ ಮಂತ್ರವಿದ್ಯೆಯನ್ನು ಜಪಿಸಿದನು. ಅವನು ಯೋಗಸಿದ್ಧಿಯಿಂದ ಇಲನ ಮತ್ತು ಆ ಹಂಗಸರ ಪೂರ್ವವೃತ್ತಾಂತವನ್ನು ತಿಳಿದು ಸಹಚರಿಯರಾದ ಸ್ತ್ರೀಯರನ್ನುದ್ದೇಶಿಸಿ "ನೀವು ಕಿನ್ನರ ಸ್ತ್ರೀಯರಾಗಿ ಆ ಪರ್ವತಪ್ರಾಂತದಲ್ಲಿ ನೆಲೆಸಿರಿ. ವಾಸಕ್ಕಾಗಿ ಗೃಹಾದಿಗಳನ್ನು ನಿರ್ಮಿಸಿಕೊಳ್ಳಿರಿ (೨೦-೨೨). ಮೂಲಪತ್ರಫಲಗಳನ್ನು ಸೇವಿಸುತ್ತ ಜೀವಿಸಿರಿ. ನಿಮಗೆ ಕಿಂಪುರುಷರು

* ಈ ವಿದ್ಯೆಗೆ ಸಾಂಗ್ರಹಣಿಯೆಂದೂ ಸಂವರ್ತವಿದ್ಯೆಯೆಂದೂ ನಾಮಾಂತರಗಳಿವೆ.

ತಾಂ ಶ್ರುತ್ವಾ ಸೋಮಪುತ್ರಸ್ಯ ವಾಚಂ ಕಿಂಪುರುಷೀಕೃತಾಃ ।
ಉಪಾಸಾಂಚಕ್ರಿರೇ ಶೈಲಂ ವಧ್ವಸ್ತಾ ಬಹುಲಾಸ್ತದಾ ॥ ೨೪

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟಾಶೀತಿತಮಃ ಸರ್ಗಃ

---

## ಏಕೋನನವತಿತಮಃ ಸರ್ಗಃ

### ಪುರೂರವೋಜನನಮ್

ಶ್ರುತ್ವಾ ಕಿಂಪುರುಷೋತ್ಪತ್ತಿಂ ಲಕ್ಷ್ಮಣೋ ಭರತಸ್ತದಾ ।
ಆಶ್ಚರ್ಯಮಿತಿ ಚಾಬ್ರೂತಾಮುಭೌ ರಾಮಂ ಜನೇಶ್ವರಮ್ ॥ ೧

ಅಥ ರಾಮಃ ಕಥಾಮೇತಾಂ ಭೂಯ ಏವ ಮಹಾಯಶಾಃ ।
ಕಥಯಾಮಾಸ ಧರ್ಮಾತ್ಮಾ ಪ್ರಜಾಪತಿಸುತಸ್ಯ ವೈ ॥ ೨

ಸರ್ವಾಸ್ತಾ ವಿದ್ರುತಾ ದೃಷ್ಟ್ವಾ ಕಿಂನರೀರ್ಋಷಿಸತ್ತಮಃ ।
ಉವಾಚ ರೂಪಸಂಪನ್ನಾಂ ತಾಂ ಸ್ತ್ರಿಯಂ ಪ್ರಹಸನ್ನಿವ ॥ ೩

---

ಪತಿಗಳಾಗಿ ದೊರಕುವರು" ಎಂದು ಹೇಳಿದನು ಚಂದ್ರಪುತ್ರನಾದ ಬುಧನ ಮಾತನ್ನಾಲಿಸುತ್ತಿರುವಾಗಲೇ ಆ ಸ್ತ್ರೀಯರು ಕಿನ್ನರಿಯರಾದರು ಬುಧನು ಹೇಳಿದಂತೆ ಅವರು ಪರ್ವತಪ್ರಾಂತಕ್ಕೆ ಹೋಗಿ ನೆಲೆಸಿದರು (೨೩-೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತೆಂಟನೆಯ ಸರ್ಗ

---

## ಸರ್ಗ ೮೯

### ಬುಧನಿಗೆ ಇಲೆಯಲ್ಲಿ ಪುರೂರವನೆಂಬ ಪುತ್ರನು ಜನಿಸುವುದು

ಕಿನ್ನರಸ್ತ್ರೀಯರು ಜನಿಸಿದ ಬಗೆಯನ್ನು ಕೇಳಿ ಭರತಲಕ್ಷ್ಮಣರು 'ಆಶ್ಚರ್ಯ! ಆಶ್ಚರ್ಯ!' ಎಂದರು ಧರ್ಮಾತ್ಮನಾದ ಶ್ರೀರಾಮನು ಕರ್ದಮಸುತನಾದ ಇಲರಾಜನ ಕಥೆಯನ್ನು ಮುಂದುವರಿಸಿದನು. (೧-೨) "ಋಷಿಸತ್ತಮನಾದ ಬುಧನು ಆ ಸ್ತ್ರೀಯರೆಲ್ಲರೂ ಕಿನ್ನರಿಯರಾಗಿ ಹೊರಟು

ಸೋಮಸ್ಯಾಹಂ ಸುದಯಿತಃ ಸುತಃ ಸುರುಚಿರಾನನೇ ।
ಭಜಸ್ವ ಮಾಂ ವರಾರೋಹೇ ಭಕ್ತ್ಯಾ ಸ್ನಿಗ್ಧೇನ ಚಕ್ಷುಷಾ ॥ ೪

ತಸ್ಯ ತದ್ವಚನಂ ಶ್ರುತ್ವಾ ಶೂನ್ಯೇ ಸ್ವಜನವರ್ಜಿತಾ ।
ಇಲಾ ಸುರುಚಿರಪ್ರಖ್ಯಂ ಪ್ರತ್ಯುವಾಚ ಮಹಾಗ್ರಹಮ್ ॥ ೫

ಅಹಂ ಕಾಮಚರೀ ಸೌಮ್ಯ ತವಾಸ್ಮಿ ವಶವರ್ತಿನೀ ।
ಪ್ರಶಾಧಿ ಮಾಂ ಸೋಮಸುತ ಯಥೇಚ್ಛಸಿ ತಥಾ ಕುರು ॥ ೬

ತಸ್ಯಾಸ್ತದದ್ಭುತಪ್ರಖ್ಯಂ ಶ್ರುತ್ವಾ ಹರ್ಷಮುಪಾಗತಃ ।
ಸ ವೈ ಕಾಮೀ ಸಹ ತಯಾ ರೇಮೇ ಚಂದ್ರಮಸಃ ಸುತಃ ॥ ೭

ಬುಧಸ್ಯ ಮಾಧವೋ ಮಾಸಸ್ತಾಮಿಲಾಂ ರುಚಿರಾನನಾಮ್ ।
ಗತೋ ರಮಯತೋಽತ್ಯರ್ಥಂ ಕ್ಷಣವತ್ತಸ್ಯ ಕಾಮಿನಃ ॥ ೮

ಅಥ ಮಾಸೇ ತು ಸಂಪೂರ್ಣೇ ಪೂರ್ಣೇಂದುಸದೃಶಾನನಃ ।
ಪ್ರಜಾಪತಿಸುತಃ ಶ್ರೀಮಾನ್ ಶಯನೇ ಪ್ರತ್ಯಬುಧ್ಯತ ॥ ೯

---

ಹೋದಮೇಲೆ, ರೂಪಸಂಪನ್ನೆಯಾದ ಇಲೆಯನ್ನು ನೋಡಿ ಮಂದಹಾಸದಿಂದ "ಎಲೌ ಸುಂದರಿ, ನಾನು ಚಂದ್ರನ ಮಗ ಅವನಿಗೆ ಪ್ರಿಯನಾಗಿರುವೆನು ಪ್ರೀತಿಯಿಂದ ನನ್ನನ್ನು ವರಿಸು ಮನೋಹರೆ, ಪ್ರೇಮಮಯವಾದ ಕಣ್ಣಿಂದ ನೋಡು" ಎಂದನು (೩-೪) ಸಹಚರಿಯರು ಹೊರಟುಹೋದ್ದರಿಂದ ಏಕಾಂತವಾದ ಆ ಸ್ಥಳದಲ್ಲಿದ್ದ ಇಲೆಯು ಮನೋಜ್ಞನಾದ ಬುಧನನ್ನು ಕುರಿತು "ಸೌಮ್ಯ, ನಾನು ಯಥೇಷ್ಟವಾಗಿ ಸಂಚರಿಸುತ್ತ ಬಂದು ನಿನಗೆ ವಶಳಾಗಿರುವೆನು. ಇಂದುತನಯ, ನನಗೆ ನೀನು ಆಜ್ಞಾಪಿಸಬಹುದು ಇಷ್ಟಬಂದಂತೆ ವರ್ತಿಸು" ಎಂದು ಉತ್ತರಿಸಿದಳು (೫-೬) ಅವಳ ಅಚ್ಚರಿಯ ನುಡಿಯನ್ನು ಕೇಳಿ ಬುಧನಿಗೆ ಹರ್ಷವಾಯಿತು ಇಂದುತನಯನಾದ ಆ ಕಾಮಿಯು ಇಲೆಯೊಡನೆ ರಮಿಸಿದನು ಬುಧನು ಕಾಮವಶನಾಗಿ ಆ ಚೆಲುವೆಯೊಡನೆ ವಿಹರಿಸುತ್ತಿರಲು, ವೈಶಾಖಮಾಸವು ಒಂದು ಕ್ಷಣದಂತೆ ಕಳೆದುಹೋಯಿತು (೭-೮) ಒಂದು ತಿಂಗಳು ಪೂರ್ಣವಾಗಲು ಹಾಸಿಗೆಯಲ್ಲಿ ಮಲಗಿರುವಾಗ, ಪೂರ್ಣಚಂದ್ರಮುಖನಾದ ಪುರುಷನಾಗಿ ಇಲನು

ಸೋಽಪಶ್ಯತ್ ಸೋಮಜಂ ತತ್ರ ತಪಂತಂ ಸಲಿಲಾಶಯೇ ।
ಊರ್ಧ್ವಬಾಹುಂ ನಿರಾಲಂಬಂ ತಂ ರಾಜಾ ಪ್ರತ್ಯಭಾಷತ ॥ ೧೦

ಭಗವನ್ ಪರ್ವತಂ ದುರ್ಗಂ ಪ್ರವಿಷ್ಟೋಽಸ್ಮಿ ಸಹಾನುಗಃ ।
ನ ತು ಪಶ್ಯಾಮಿ ತತ್ ಸೈನ್ಯಂ ಕ್ವ ನು ತೇ ಮಾಮಕಾ ಗತಾಃ ॥ ೧೧

ತಚ್ಛ್ರುತ್ವಾ ತಸ್ಯ ರಾಜರ್ಷೇರ್ನಷ್ಟಸಂಜ್ಞಸ್ಯ ಭಾಷಿತಮ್ ।
ಪ್ರತ್ಯುವಾಚ ಶುಭಂ ವಾಕ್ಯಂ ಸಾಂತ್ವಯನ್ ಪರಯಾ ಗಿರಾ ॥ ೧೨

ಅಶ್ಮವರ್ಷೇಣ ಮಹತಾ ಭೃತ್ಯಾಸ್ತೇ ವಿನಿಪಾತಿತಾಃ ।
ತ್ವಂ ಚಾಶ್ರಮಪದೇ ಸುಪ್ತೋ ವಾತವರ್ಷಭಯಾರ್ದಿತಃ ॥ ೧೩

ಸಮಾಶ್ವಸಿಹಿ ಭದ್ರಂ ತೇ ನಿರ್ಭಯೋ ವಿಗತಜ್ವರಃ ।
ಫಲಮೂಲಾಶನೋ ವೀರ ನಿವಸೇಹ ಯಥಾಸುಖಮ್ ॥ ೧೪

ಸ ರಾಜಾ ತೇನ ವಾಕ್ಯೇನ ಪ್ರತ್ಯಾಶ್ವಸ್ತೋ ಮಹಾಮತಿಃ ।
ಪ್ರತ್ಯುವಾಚ ತತೋ ವಾಕ್ಯಂ ದೀನೋ ಭೃತ್ಯಕ್ಷಯಾದ್ ಭೃಶಮ್॥

---

ಎಚ್ಚೆತ್ತನು ! (೯) ಆಗ ಬುಧನು ಸರಸ್ಸಿನಲ್ಲಿ ಊರ್ಧ್ವಬಾಹುವೂ ನಿರಾಲಂಬನೂ ಆಗಿ ತಪೋಮಗ್ನನಾಗಿದ್ದನು ಇಲನು ಅವನನ್ನು ನೋಡಿ "ಭಗವನ್, ನಾನು ಅನುಚರರೊಂದಿಗೆ ದುರ್ಗಮವಾದ ಈ ಪರ್ವತ ಪ್ರದೇಶಕ್ಕೆ ಬಂದೆನು ಈಗ ನನ್ನ ಸೈನ್ಯವು ಕಾಣೆಯಾಗಿದೆ ನನ್ನ ಸೈನಿಕರು ಎಲ್ಲಿ ಹೋದರು ? " ಎಂದು ಕೇಳಿದನು (೧೦-೧೧) ಎಲ್ಲವನ್ನೂ ಮರತುಬಿಟ್ಟಿದ್ದ ಆ ರಾಜರ್ಷಿಯ ನುಡಿಯನ್ನು ಕೇಳಿ ಬುಧನು ಸೌಮ್ಯವಾಕ್ಯಗಳಿಂದ ಸಂತೈಸುತ್ತ "ಎಲೈ ರಾಜನೆ, ಭೀಕರವಾದ ಒಂದು ಕಲ್ಲುಮಳೆಯು ಸುರಿದುದರಿಂದ ನಿನ್ನ ಭೃತ್ಯರಲ್ಲರೂ ಹತರಾದರು ! ಆ ಮಳೆಗೂ ಬಿರುಗಾಳಿಗೂ ಹೆದರಿ ನೀನು ಈ ಆಶ್ರಮದಲ್ಲಿ ಮಲಗಿದ್ದೆ ! (೧೨-೧೩). ಸಮಾಧಾನದಿಂದಿರು ನಿನಗೆ ಶುಭವಾಗುವುದು ಎಲೈ ವೀರನೆ, ಭಯಾತಂಕಗಳನ್ನು ತೊರೆ. ಫಲಮೂಲಗಳನ್ನು ಭಕ್ಷಿಸುತ್ತ ಇಲ್ಲಿ ಸುಖದಿಂದಿರು" ಎಂದನು (೧೪) ಪ್ರಾಜ್ಞನಾದ ಇಲರಾಜನು ಬುಧನ ಮಾತಿನಿಂದ ಸಮಾಹಿತನಾದನು ಆದರೂ ಭೃತ್ಯರ ನಾಶದಿಂದ ಅತ್ಯಂತ ದುಃಖಿತನಾಗಿ

ತ್ಯಕ್ಷ್ಯಾಮ್ಯಹಂ ಸ್ವಕಂ ರಾಜ್ಯಂ ನಾಹಂ ಭೃತ್ಯೈರ್ವಿನಾಕೃತಃ ।
ವರ್ತಯೇಯಂ ಕ್ಷಣಂ ಬ್ರಹ್ಮನ್ ಸಮನುಜ್ಞಾತುಮರ್ಹಸಿ ॥ ೧೬

ಸುತೋ ಧರ್ಮಪರೋ ಬ್ರಹ್ಮನ್ ಜ್ಯೇಷ್ಠೋ ಮಮ ಮಹಾಯಶಾಃ
ಶಶಬಿಂದುರಿತಿ ಖ್ಯಾತಃ ಸ ಮೇ ರಾಜ್ಯಂ ಪ್ರಪತ್ಸ್ಯತೇ ॥ ೧೭

ನ ಹಿ ಶಕ್ಷ್ಯಾಮ್ಯಹಂ ಹಿತ್ವಾ ಭೃತ್ಯದಾರಾನ್ ಸುಖಾನ್ವಿತಾನ್ ।
ಪ್ರತಿವಕ್ತುಂ ಮಹಾತೇಜಃ ಕಿಂಚಿದಪ್ಯಶುಭಂ ವಚಃ ॥ ೧೮

ತಥಾ ಬ್ರುವತಿ ರಾಜೇಂದ್ರೇ ಬುಧಃ ಪರಮಮದ್ಭುತಮ್ ।
ಸಾಂತ್ವಪೂರ್ವಮಥೋವಾಚ ವಾಸಸ್ತ ಇಹ ರೋಚತಾಮ್ ॥ ೧೯

ನ ಸಂತಾಪಸ್ತ್ವಯಾ ಕಾರ್ಯಃ ಕಾರ್ದಮೇಯ ಮಹಾಬಲ ।
ಸಂವತ್ಸರೋಷಿತಸ್ಯೇಹ ಕಾರಯಿಷ್ಯಾಮಿ ತೇ ಹಿತಮ್ ॥ ೨೦

---

"ತಪಸ್ವಿಗಳೆ, ನಾನು ನನ್ನ ರಾಜ್ಯವನ್ನು ತೊರೆಯುವೆನು. ಏಕೆಂದರೆ, ಸೇವಕರನ್ನು ಕಳೆದುಕೊಂಡಿರುವ ನಾನು ಅವರನ್ನಗಲಿ ಒಂದು ಕ್ಷಣವೂ ರಾಜ್ಯಭಾರ ಮಾಡುತ್ತ ಇರಲಾರೆ. ಆದ್ದರಿಂದ ಇಲ್ಲಿಯೇ ಇರಲು ನನಗೆ ಅನುಮತಿಯನ್ನು ನೀಡಿರಿ (೧೫-೧೬). ನನ್ನ ಹಿರಿಯ ಮಗನಾದ ಶಶಬಿಂದುವು ಧರ್ಮನಿಷ್ಠನೂ ಕೀರ್ತಿಶಾಲಿಯೂ ಆಗಿದ್ದಾನೆ. ಅವನು ನನ್ನ ರಾಜ್ಯವನ್ನು ನಿರ್ವಹಿಸುವನು. ನಾನು ಈ ಸೈನಿಕರನ್ನು ತ್ಯಜಿಸಿ ಹಿಂದಿರುಗಿ, ಸುಖದಿಂದಿರುವ ಅವರ ಮಡದಿಯರಿಗೆ ನಿಮ್ಮ ಗಂಡಂದಿರು ಸತ್ತುಹೋದರೆಂಬ ಕೆಟ್ಟ ಸುದ್ದಿಯನ್ನು ಹೇಳಲಾರೆ*" ಎಂದನು (೧೭-೧೮). ವಿಸ್ಮಯಾವಹವಾದ ಭೃತ್ಯನಿಷ್ಠೆಯ ಈ ಮಾತನ್ನು ಕೇಳಿ ಬುಧನು "ರಾಜ, ಇಲ್ಲಿ ವಾಸವಾಗಿರು. ದುಃಖಿಸಬೇಡ. ಎಲೈ ಕಾರ್ದಮೇಯ, ಒಂದು ವರ್ಷದವರೆಗೆ ಇಲ್ಲಿದ್ದರೆ ನಿನಗೆ ಹಿತವನ್ನು ಮಾಡುವೆನು" ಎಂದನು (೧೯-೨೦).

---

* 16, 17, 18ನೆಯ ಶ್ಲೋಕಗಳಿಗೆ ವ್ಯಾಖ್ಯಾನಕಾರರು ಹೇಳಿದ ಅರ್ಥವೇ ಬೇರೆ. "ನಾನು ರಾಜ್ಯವನ್ನು ತ್ಯಜಿಸಲಾರೆ. ಭೃತ್ಯರನ್ನು ತೊರೆದು ಇರಲಾರೆ. ನಾನು ಹೋಗದಿದ್ದರೆ ನನ್ನ ಮಗನು ರಾಜ್ಯವನ್ನು ನಿರ್ವಹಿಸುವನು. ಸೇವಕರನ್ನೂ ಮಡದಿಯರನ್ನೂ ತ್ಯಜಿಸಿರಲು ನನಗೆ ಸಾಧ್ಯವಿಲ್ಲ. ಆದ್ದರಿಂದ 'ಇಲ್ಲಿಯೇ ಇರು' ಎಂಬ ಅಶುಭ ವಚನವನ್ನು ನೀವು ಹೇಳಬಾರದು" ಎಂಬ ತಾತ್ಪರ್ಯವನ್ನು ಹೊರಗೆಡವಿದ್ದಾರೆ. ಯಾವ ಅರ್ಥವು ಸರಿಯೆಂದು ವಾಚಕರು ವಿಮರ್ಶಿಸಬೇಕು.

ತಸ್ಯ ತದ್ವಚನಂ ಶ್ರುತ್ವಾ ಬುಧಸ್ಯಾಕ್ಲಿಷ್ಟಕರ್ಮಣಃ ।
ವಾಸಾಯ ವಿದಧೇ ಬುದ್ಧಿಂ ಯದುಕ್ತಂ ಬ್ರಹ್ಮವಾದಿನಾ ॥ ೨೧

ಮಾಸಂ ಸ ಸ್ತ್ರೀ ತಥಾ ಭೂತ್ವಾ ರಮಯತ್ಯನಿಶಂ ಶುಭಾ ।
ಮಾಸಂ ಪುರುಷಭಾವೇನ ಧರ್ಮಬುದ್ಧಿಂ ಚಕಾರ ಸಃ ॥ ೨೨

ತತಃ ಸಾ ನವಮೇ ಮಾಸಿ ಇಲಾ ಸೋಮಸುತಾತ್ ಸುತಮ್ ।
ಜನಯಾಮಾಸ ಸುಶ್ರೋಣೀ ಪುರೂರವಸಮೂರ್ಜಿತಮ್ ॥ ೨೩

ಜಾತಮಾತ್ರಂ ತು ಸುಶ್ರೋಣೀ ಪಿತೃಹಸ್ತೇ ನ್ಯವೇಶಯತ್ ।
ಬುಧಸ್ಯ ಸಮವರ್ಣಾಭಮಿಲಾಪುತ್ರಂ ಮಹಾಬಲಮ್ ॥ ೨೪

ಬುಧಸ್ತು ಪುರುಷೀಭೂತಂ ಸ ವೈ ಸಂವತ್ಸರಾಂತರಮ್ ।
ಕಥಾಭೀ ರಮಯಾಮಾಸ ಧರ್ಮಯುಕ್ತಾಭಿರಾತ್ಮವಾನ್ ॥ ೨೫

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋನನವತಿತಮಃ ಸರ್ಗಃ



ಬ್ರಹ್ಮವಾದಿಯೂ ಧರ್ಮಪರನೂ ಆದ ಆತನ ಹಿತವಚನದಂತೆ ಆಶ್ರಮದಲ್ಲಿರಲು ರಾಜನು ನಿರ್ಧರಿಸಿದನು ಒಂದು ತಿಂಗಳು ಪುರುಷನಾಗಿ ಧರ್ಮಕಾರ್ಯವನ್ನು ಮಾಡುತ್ತ ಇನ್ನೊಂದು ತಿಂಗಳು ಸ್ತ್ರೀಯಾಗಿ ಬುಧನೊಡನೆ ಕ್ರೀಡಿಸುತ್ತಿದ್ದನು (೨೧-೨೨) ಹೀಗಿರಲು ನವಮಮಾಸದಲ್ಲಿ ಇಲೆಯು ಚಂದ್ರತನಯನಿಂದ ಪುರೂರವನೆಂಬ ಪುತ್ರನನ್ನು ಪ್ರಸವಿಸಿದಳು ಬುಧನಂತೆ ಕಾಂತಿಯುಕ್ತನೂ ಬಲಾಢ್ಯನೂ ಆದ ಆ ಪುತ್ರನನ್ನು ಅವನ ತಂದೆಯ ಕೈಗೆ ಒಪ್ಪಿಸಿದಳು ಮತ್ತೆ ಇಲೆಯು ಪುರುಷನಾಗಲು ಬುಧನು ಧರ್ಮಸಂಹಿತವಾದ ಕಥೆಗಳನ್ನು ಹೇಳುತ್ತ ಆತನ ಮನಸ್ಸನ್ನು ರಂಜಿಸುತ್ತಿದ್ದನು ಹೀಗೆ ಒಂದು ವರ್ಷ ಕಳೆಯಿತು (೨೩-೨೫)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಎಂಬತ್ತೊಂಬತ್ತನೆಯ ಸರ್ಗ



## ನವತಿತಮಃ ಸರ್ಗಃ

### ಇಲಾಪುರುಷತ್ವಪ್ರಾಪ್ತಿಃ

ತಥೋಕ್ತವತಿ ರಾಮೇ ತು ತಸ್ಯ ಜನ್ಮ ತದದ್ಭುತಮ್ ।
ಉವಾಚ ಲಕ್ಷ್ಮಣೋ ಭೂಯೋ ಭರತಶ್ಚ ಮಹಾಯಶಾಃ ॥ ೧

ಇಲಾ ಸಾ ಸೋಮಪುತ್ರಸ್ಯ ಸಂವತ್ಸರಮಥೋಷಿತಾ ।
ಅಕರೋತ್ ಕಿಂ ನರಶ್ರೇಷ್ಠ ತತ್ತ್ವಂ ಶಂಸಿತುಮರ್ಹಸಿ ॥ ೨

ತಯೋಸ್ತದ್ವಾಕ್ಯಮಾಧುರ್ಯಂ ನಿಶಮ್ಯ ಪರಿಪೃಚ್ಛತೋಃ ।
ರಾಮಃ ಪುನರುವಾಚೇಮಾಂ ಪ್ರಜಾಪತಿಸುತೇ ಕಥಾಮ್ ॥ ೩

ಪುರುಷತ್ವಂ ಗತೇ ಶೂರೇ ಬುಧಃ ಪರಮಬುದ್ಧಿಮಾನ್ ।
ಸಂವರ್ತಂ ಪರಮೋದಾರಮಾಜುಹಾವ ಮಹಾಯಶಾಃ ॥ ೪

## ಸರ್ಗ ೯೦

### ಇಲನು ಸಂವರ್ತಾದಿ ಮಹರ್ಷಿಗಳ ನೆರವಿನಿಂದ ಅಶ್ವಮೇಧವನ್ನಾಚರಿಸಿ ಪುರುಷತ್ವವನ್ನು ಸಂಪಾದಿಸುವುದು

ಈ ಪ್ರಕಾರವಾಗಿ ಶ್ರೀರಾಮನು ಪುರೂರವನ ವಿಸ್ಮಯಾವಹವಾದ ಜನ್ಮವೃತ್ತಾಂತವನ್ನು ಹೇಳಲಾಗಿ ಭರತಲಕ್ಷ್ಮಣರು "ಪುರುಷೋತ್ತಮ, ಇಲೆಯು ಒಂದು ವರ್ಷದವರೆಗೆ ಆಶ್ರಮದಲ್ಲಿದ್ದಳಷ್ಟೆ? ಅನಂತರ ಏನು ಮಾಡಿದಳು? ಅದನ್ನು ಹೇಳಬೇಕು"* ಎಂದು ಕೇಳಿದರು (೧-೨) ಅವರ ವಾಙ್ಮಾಧುರ್ಯಕ್ಕೆ ಒಲಿದು ಶ್ರೀರಾಮನು ಕರ್ದಮಸುತನಾದ ಇಲನ ಕಥೆಯನ್ನು ಮುಂದುವರಿಸಿದನು "ಭರತ, ಲಕ್ಷ್ಮಣ, ಇಲನು ಪುರುಷನಾಗ ಲಾಗಿ ಬುದ್ಧಿಶಾಲಿಯಾದ ಬುಧನು ಉದಾರಸ್ವಭಾವದವನಾದ ಸಂವರ್ತ,

---

* ಇಲನಿಗೆ ಶಶಬಿಂದುವೆಂಬ ಮಗನಿದ್ದನು ಅನಂತರ ಪುರೂರವನು ಮಗನಾಗಿ ಜನಿಸಿದನು ಅವರಿಬ್ಬರಲ್ಲಿ ಯಾರಿಗೆ ರಾಜ್ಯವು ದೊರೆಯಿತು?—ಎಂಬುದು ಪ್ರಶ್ನೆಯ ಅಭಿಪ್ರಾಯ.

ಚ್ಯವನಂ ಭೃಗುಪುತ್ರಂ ಚ ಮುನಿಂ ಚಾರಿಷ್ಟನೇಮಿನಮ್ ।
ಪ್ರಮೋದನಂ ಮೋದಕರಂ ತಥಾ ದುರ್ವಾಸಸಂ ಮುನಿಮ್ ॥ ೫
ಏತಾನ್ ಸರ್ವಾನ್ ಸಮಾನೀಯ ವಾಕ್ಯಜ್ಞಸ್ತತ್ತ್ವದರ್ಶಿನಃ ।
ಉವಾಚ ಸರ್ವಾನ್ ಸುಹೃದೋ ಧೈರ್ಯೇಣ ಸುಸಮಾಹಿತಾನ್ ॥
ಅಯಂ ರಾಜಾ ಮಹಾಬಾಹುಃ ಕರ್ದಮಸ್ಯ ಇಲಃ ಸುತಃ ।
ಜಾನೀತೈನಂ ಯಥಾಭೂತಂ ಶ್ರೇಯೋ ಹ್ಯಸ್ಯ ವಿಧೀಯತಾಮ್ ॥
ತೇಷಾಂ ಸಂವದತಾಮೇವಂ ತಮಾಶ್ರಮಮುಪಾಗಮತ್ ।
ಕರ್ದಮಸ್ತು ಮಹಾತೇಜಾ ದ್ವಿಜೈಃ ಸಹ ಮಹಾತ್ಮಭಿಃ ॥ ೮
ಪುಲಸ್ತ್ಯಶ್ಚ ಕ್ರತುಶ್ಚೈವ ವಷಟ್ಕಾರಸ್ತಥೈವ ಚ ।
ಓಂಕಾರಶ್ಚ ಮಹಾತೇಜಾಸ್ತಮಾಶ್ರಮಮುಪಾಗಮನ್ ॥ ೯
ತೇ ಸರ್ವೇ ಹೃಷ್ಟಮನಸಃ ಪರಸ್ಪರಸಮಾಗಮೇ ।
ಹಿತೈಷಿಣೋ ಬಾಹ್ಲಿಪತೇಃ ಪೃಥಗ್ವಾಕ್ಯಾನ್ಯಥಾಬ್ರುವನ್ ॥ ೧೦
ಕರ್ದಮಸ್ತ್ವಬ್ರವೀದ್ವಾಕ್ಯಂ ಸುತಾರ್ಥಂ ಪರಮಂ ಹಿತಮ್ ।
ದ್ವಿಜಾಃ ಶೃಣುತ ಮದ್ವಾಕ್ಯಂ ಯಚ್ಛ್ರೇಯಃ ಪಾರ್ಥಿವಸ್ಯ ಹಿ ॥ ೧೧

---

ಭೃಗುಪುತ್ರನಾದ ಚ್ಯವನ, ಅರಿಷ್ಟನೇಮಿ, ಪ್ರಮೋದನ, ದುರ್ವಾಸ— ಎಂಬ ಮಹರ್ಷಿಗಳನ್ನು ಕರೆಸಿದನು (೩-೫) ಅನಂತರ ಆ ವಾಗ್ಮಿಯು ತತ್ತ್ವಜ್ಞರೂ ಹಿತೈಷಿಗಳೂ ಆದ ಆ ಋಷಿಗಳನ್ನು ಕುರಿತು "ಮಹಾತ್ಮರೆ, ಈ ರಾಜನು ಕರ್ದಮಪ್ರಜಾಪತಿಯ ಮಗನಾದ ಇಲನೆಂಬ ವೀರನು ಈತನ ಪರಿಸ್ಥಿತಿ ಏನಾಗಿದೆಯೆಂಬುವುದನ್ನು ನೀವೇ ತಿಳಿದುಕೊಳ್ಳಿರಿ ಮತ್ತು ಈತನಿಗೆ ಶ್ರೆಯಸ್ಸನ್ನುಂಟುಮಾಡಿರಿ" ಎಂದನು (೬-೭) ಈ ವಿಷಯವನ್ನು ಕುರಿತು ಅವರು ಚರ್ಚಿಸುತ್ತಿರುವಾಗ ತೇಜಸ್ವಿಯಾದ ಕರ್ದಮಪ್ರಜಾಪತಿಯು ಮಹಾತ್ಮರಾದ ಬ್ರಾಹ್ಮಣರೊಡನೆ ಅಲ್ಲಿಗೆ ಆಗಮಿಸಿದನು ಪುಲಸ್ತ್ಯ, ಕ್ರತು, ವಷಟ್ಕಾರ, ಓಂಕಾರರು ಬುಧನ ಆಶ್ರಮಕ್ಕೆ ಬಂದರು (೮-೯) ಅನ್ಯೋನ್ಯ ದರ್ಶನದಿಂದ ಅವರೆಲ್ಲರಿಗೂ ಆನಂದವಾಯಿತು ಅವರು ಬಾಹ್ಲೀಕಪತಿಯಾದ ಇಲನ ಹಿತವನ್ನು ಬಯಸಿ ವಿವಿಧ ಸೂಚನೆಗಳನ್ನಿತ್ತರು ಕರ್ದಮನು ತನ್ನ ಮಗನ ಶ್ರೇಯಸ್ಸಿಗಾಗಿ "ಎಲೈ ಬ್ರಾಹ್ಮಣರೆ, ಈ ರಾಜನಿಗೆ ಹಿತಕರ

ನಾನ್ಯಂ ಪಶ್ಯಾಮಿ ಭೈಷಜ್ಯಮಂತರಾ ವೃಷಭಧ್ವಜಮ್ ।
ನಾಶ್ವಮೇಧಾತ್ ಪರೋ ಯಜ್ಞಃ ಪ್ರಿಯಶ್ಚೈವ ಮಹಾತ್ಮನಃ ॥ ೧೨

ತಸ್ಮಾದ್ಯಜಾಮಹೇ ಸರ್ವೇ ಪಾರ್ಥಿವಾರ್ಥೇ ದುರಾಸದಮ್ ।
ಕರ್ದಮೇನೈವಮುಕ್ತಾಸ್ತು ಸರ್ವ ಏವ ದ್ವಿಜರ್ಷಭಾಃ ॥ ೧೩

ರೋಚಯಂತಿ ಸ್ಮ ತಂ ಯಜ್ಞಂ ರುದ್ರಸ್ಯಾರಾಧನಂ ಪ್ರತಿ ।
ಸಂವರ್ತಸ್ಯ ತು ರಾಜರ್ಷೇಃ ಶಿಷ್ಯಃ ಪರಪುರಂಜಯಃ ॥ ೧೪

ಮರುತ್ತ ಇತಿ ವಿಖ್ಯಾತಸ್ತಂ ಯಜ್ಞಂ ಸಮುಪಾಹರತ್ ।
ತತೋ ಯಜ್ಞೋ ಮಹಾನಾಸೀದ್ಬುಧಾಶ್ರಮಸಮೀಪತಃ ॥ ೧೫

ರುದ್ರಶ್ಚ ಪರಮಂ ತೋಷಂ ಜಗಾಮ ಸುಮಹಾಯಶಾಃ ।
ಅಥ ಯಜ್ಞೇ ಸಮಾಪ್ತೇ ತು ಪ್ರೀತಃ ಪರಮಯಾ ಮುದಾ ॥ ೧೬

ಉಮಾಪತಿರ್ದ್ವಿಜಾನ್ ಸರ್ವಾನುವಾಚ ಇಲಸನ್ನಿಧೌ ।
ಪ್ರೀತೋಽಸ್ಮಿ ಹಯಮೇಧೇನ ಭಕ್ತ್ಯಾ ಚ ದ್ವಿಜಸತ್ತಮಾಃ ॥ ೧೭

ವಾದ ಒಂದು ಮಾತನ್ನು ಹೇಳುತ್ತೇನೆ, ಕೇಳಿರಿ (೧೦-೧೧) ವೃಷಭಧ್ವಜನಾದ ಶಿವನ ಹೊರತಾಗಿ ಈತನಿಗೆ ಇನ್ನೊಂದು ಚಿಕಿತ್ಸೆ ಇಲ್ಲ ಅಶ್ವಮೇಧಕ್ಕಿಂತ ಉತ್ತಮವಾದ ಯಜ್ಞವಿಲ್ಲ ಅದು ಮಹಾತ್ಮನಾದ ಶಿವನಿಗೆ ಪ್ರಿಯವಾದದ್ದು ಆದ್ದರಿಂದ ಇಲರಾಜನಿಗೋಸ್ಕರ ನಾವು ದುಷ್ಕರವಾದ ಅಶ್ವಮೇಧವನ್ನಾಚರಿಸೋಣ" ಎಂದನು (೧೨-೧೩) ಆ ದ್ವಿಜೋತ್ತಮರು ಕರ್ದಮನ ನುಡಿಯನ್ನಾಲಿಸಿ ಶಿವನ ಆರಾಧನೆಗಾಗಿ ಅಶ್ವಮೇಧಯಾಗವನ್ನು ಮಾಡಲು ಸಮ್ಮತಿಸಿದರು ಸಂವರ್ತಮುನಿಯ ಶಿಷ್ಯನಾದ ಮರುತ್ತನೆಂಬ ರಾಜರ್ಷಿಯು ಯಜ್ಞಸಂಭಾರಗಳನ್ನು ಒದಗಿಸಿದನು ಆಮೇಲೆ ಬುಧನ ಆಶ್ರಮದ ಬಳಿಯಲ್ಲಿ ಮಹತ್ತರವಾದ ಯಜ್ಞವು ನಡೆಯಿತು (೧೪-೧೫) ಯಾಗದಿಂದ ರುದ್ರದೇವನು ಸಂತೃಪ್ತನಾದನು ಯಾಗವು ಮುಗಿದಮೇಲೆ ಉಮಾವಲ್ಲಭನು ಪರಮಸಂತುಷ್ಟನಾಗಿ ಇಲರಾಜನೆದುರಿಗೆ ಮುನಿಗಳನ್ನು ಕುರಿತು "ಎಲೈ ದ್ವಿಜೋತ್ತಮರೆ, ಅಶ್ವಮೇಧದಿಂದ ನಾನು ಸಂತುಷ್ಟ

ಅಸ್ಯ ಬಾಹ್ಲೀಪತೇಶ್ಚೈವ ಕಿಂ ಕರೋಮಿ ಪ್ರಿಯಂ ಶುಭಮ್ ।
ತಥಾ ವದತಿ ದೇವೇಶೇ ದ್ವಿಜಾಸ್ತೇ ಸುಸಮಾಹಿತಾಃ ॥ ೧೮

ಪ್ರಸಾದಯಂತಿ ದೇವೇಶಂ ಯಥಾ ಸ್ಯಾತ್ ಪುರುಷಸ್ತ್ವಿಲಾ ।
ತತಃ ಪ್ರೀತೋ ಮಹಾದೇವಃ ಪುರುಷತ್ವಂ ದದೌ ಪುನಃ ॥ ೧೯

ಇಲಾಯೈ ಸ ಮಹಾತೇಜಾ ದತ್ತ್ವಾ ಚಾಂತರಧೀಯತ ।
ನಿವೃತ್ತೇ ಹಯಮೇಧೇ ತು ಗತಶ್ಚಾದರ್ಶನಂ ಹರಃ ॥ ೨೦

ಯಥಾಗತಂ ದ್ವಿಜಾಃ ಸರ್ವೇ ಹ್ಯಗಚ್ಛನ್ ದೀರ್ಘದರ್ಶಿನಃ ।
ರಾಜಾ ತು ಬಾಹ್ಲಿಮುತ್ಸೃಜ್ಯ ಮಧ್ಯದೇಶೇ ಹ್ಯನುತ್ತಮಮ್ ॥

ನಿವೇಶಯಾಮಾಸ ಪುರಂ ಪ್ರತಿಷ್ಠಾನಂ ಯಶಸ್ಕರಮ್ ।
ಶಶಬಿಂದುಸ್ತು ರಾಜರ್ಷಿರ್ಬಾಹ್ಲಿಂ ಪರಪುರಂಜಯಃ ॥ ೨೨

ಪ್ರತಿಷ್ಠಾನೇ ಇಲೋ ರಾಜಾ ಪ್ರಜಾಪತಿಸುತೋ ಬಲೀ ।
ಸ ಕಾಲೇ ಪ್ರಾಪ್ತವಾನ್ ಲೋಕಮಿಲೋ ಬ್ರಾಹ್ಮಮನುತ್ತಮಮ್ ॥

---

ನಾಗಿದ್ದೇನೆ (೧೬-೧೭) ಈ ಬಾಹ್ಲೀಕರಾಜನಿಗಾಗಿ ನಾನು ಯಾವ ಪ್ರಿಯ ಕಾರ್ಯವನ್ನು ಮಾಡಲಿ?" ಎಂದು ಕೇಳಿದನು ಹೀಗೆ ದೇವೇಶ್ವರನು ಕೇಳಲಾಗಿ ಮುನಿಗಳು ಇಲನಿಗೆ ಪುರುಷತ್ವವು ಸ್ಥಿರವಾಗಿ ಬರಲೆಂದು ಪ್ರಾರ್ಥಿಸಿಕೊಂಡರು ಆಗ ಶಿವನು ಪ್ರಸನ್ನನಾಗಿ ಇಲನಿಗೆ ಪುರುಷತ್ವವನ್ನಿತ್ತು ಅಂತರ್ಹಿತನಾದನು (೧೮-೨೦) ಯಜ್ಞವು ಮುಗಿದು ಶಿವನು ಅಂತರ್ಹಿತನಾಗಲು ದೀರ್ಘದರ್ಶಿಗಳಾದ ಮುನಿಗಳೆಲ್ಲರೂ ತಮ್ಮ ಸ್ಥಳಕ್ಕೆ ತೆರಳಿದರು ಇಲರಾಜನಾದರೋ ಬಾಹ್ಲಿದೇಶವನ್ನು ತ್ಯಜಿಸಿ ಮಧ್ಯದೇಶದಲ್ಲಿದ್ದ ಪ್ರತಿಷ್ಠಾನವೆಂಬ ವಿಖ್ಯಾತವಾದ ನಗರದಲ್ಲಿ ನೆಲೆಸಿದನು ಶಶಿಬಿಂದುವು ಬಾಹ್ಲಿಯಲ್ಲಿಯೇ ಇದ್ದನು (೨೧-೨೨) ಇತ್ತಲಾಗಿ ಇಲರಾಜನು ಪ್ರತಿಷ್ಠಾನಪುರದಲ್ಲಿ ವಾಸಮಾಡುತ್ತ, ಮರಣಕಾಲವು ಪ್ರಾಪ್ತವಾಗಲು ಉತ್ತಮವಾದ ಬ್ರಹ್ಮಲೋಕವನ್ನು ಪಡೆದನು ಇಲಪುತ್ರನಾದ ಪುರೂರವನಿಗೆ ಪ್ರತಿಷ್ಠಾನ

ಐಲಃ ಪುರೂರವಾ ರಾಜಾ ಪ್ರತಿಷ್ಠಾನಮವಾಪ್ತವಾನ್ ।
ಈದೃಶೋ ಹ್ಯಶ್ವಮೇಧಸ್ಯ ಪ್ರಭಾವಃ ಪುರುಷರ್ಷಭೌ ॥ ೨೪
ಸ್ತ್ರೀಭೂತಃ ಪೌರುಷಂ ಲೇಭೇ ಯಚ್ಚಾನ್ಯದಪಿ ದುರ್ಲಭಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ನವತಿತಮಃ ಸರ್ಗಃ



ರಾಜ್ಯವು ದೊರೆಯಿತು ಭರತಲಕ್ಷ್ಮಣರೆ, ಅಶ್ವಮೇಧದ ಮಹಿಮೆ ಇಂತಹದು ಸ್ತ್ರೀಯಾದವನು ಮತ್ತೆ ಪುರುಷತ್ವವನ್ನು ಪಡೆದನು. ದುರ್ಲಭವಾದ ಬ್ರಹ್ಮಲೋಕವೂ ಅವನಿಗೆ ದೊರೆಯಿತು" (೨೩-೨೪).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತನೆಯ ಸರ್ಗ



## ಏಕನವತಿತಮಃ ಸರ್ಗಃ

### ಯಜ್ಞಸಂವಿಧಾನವ್

ಏತದಾಖ್ಯಾಯ ಕಾಕುತ್ಸ್ಥೋ ಭ್ರಾತೃಭ್ಯಾಮಮಿತಪ್ರಭಃ ।
ಲಕ್ಷ್ಮಣಂ ಪುನರೇವಾಹ ಧರ್ಮಯುಕ್ತಮಿದಂ ವಚಃ ॥ ೧

ವಸಿಷ್ಠಂ ವಾಮದೇವಂ ಚ ಜಾಬಾಲಿಮಥ ಕಾಶ್ಯಪಮ್ ।
ದ್ವಿಜಾಂಶ್ಚ ಸರ್ವಪ್ರವರಾನಶ್ವಮೇಧಪುರಸ್ಕೃತಾನ್ ॥ ೨

ಏತಾನ್ ಸರ್ವಾನ್ ಸಮಾನೀಯ ಮಂತ್ರಯಿತ್ವಾ ಚ ಲಕ್ಷ್ಮಣ ।
ಹಯಂ ಲಕ್ಷಣಸಂಪನ್ನಂ ವಿಮೋಕ್ಷ್ಯಾಮಿ ಸಮಾಧಿನಾ ॥ ೩

ತದ್ವಾಕ್ಯಂ ರಾಘವೇಣೋಕ್ತಂ ಶ್ರುತ್ವಾ ತ್ವರಿತವಿಕ್ರಮಃ ।
ದ್ವಿಜಾನ್ ಸರ್ವಾನ್ ಸಮಾಹೂಯ ದರ್ಶಯಾಮಾಸ ರಾಘವಮ್

ತೇ ದೃಷ್ಟ್ವಾ ದೇವಸಂಕಾಶಂ ಕೃತಪಾದಾಭಿವಂದನಮ್ ।
ರಾಘವಂ ಸುದುರಾಧರ್ಷಮಾಶೀರ್ಭಿಃ ಸಮಪೂಜಯನ್ ॥ ೫

### ಸರ್ಗ ೯೧

ಶ್ರೀರಾಮನು ಅಶ್ವಮೇಧವನ್ನಾಚರಿಸಲು ನಿಶ್ಚಯಿಸಿ, ಅದಕ್ಕಾಗಿ
ನೈಮಿಶಾರಣ್ಯದಲ್ಲಿ ಸಕಲ ಸಾಮಗ್ರಿಗಳನ್ನೂ ಸಿದ್ಧಪಡಿಸ
ಬೇಕೆಂದು ಲಕ್ಷ್ಮಣನಿಗೆ ಆಜ್ಞಾಪಿಸುವುದು.

ತೇಜೋನಿಧಿಯಾದ ಕಾಕುತ್ಸ್ಥನು ತಮ್ಮಂದಿರಿಗೆ ಈ ಪ್ರಕಾರವಾಗಿ ಹೇಳಿ, ಮತ್ತೆ ಲಕ್ಷ್ಮಣನನ್ನು ಕುರಿತು ಧರ್ಮಯುಕ್ತವಾದ ಈ ಮಾತನ್ನು ನುಡಿದನು "ಲಕ್ಷ್ಮಣ, ಅಶ್ವಮೇಧಯಾಗವನ್ನು ನಡೆಸುವುದರಲ್ಲಿ ನಿಪುಣರಾದ ವಸಿಷ್ಠ, ವಾಮದೇವ, ಜಾಬಾಲಿ, ಕಾಶ್ಯಪ—ಮುಂತಾದ ದ್ವಿಜೋತ್ತಮರನ್ನು ಬರಮಾಡಿಕೊಳ್ಳಬೇಕು ಅವರೊಡನೆ ಸಮಾಲೋಚಿಸಿ ನಿರ್ಣಯಮಾಡಿ ಲಕ್ಷಣಸಂಪನ್ನವಾದ ಅಶ್ವವನ್ನು ಯಾಗಾರ್ಥವಾಗಿ ಬಿಡಬೇಕೆಂದಿದ್ದೇನೆ" ಎಂದನು (೧-೩) ಒಡನೆಯೇ ಲಕ್ಷ್ಮಣನು ಆ ದ್ವಿಜರನ್ನು ಕರೆತಂದು ಶ್ರೀರಾಮನಿಗೆ ಭೇಟಿಮಾಡಿಸಿದನು ಶ್ರೀರಾಮನು ಅವರ ಪಾದಗಳಿಗೆ ವಂದಿಸಲಾಗಿ, ಅವರು ಆತನನ್ನು ಆಶೀರ್ವದಿಸಿದರು (೪-೫)

ಪ್ರಾಂಜಲಿಃ ಸ ತದಾ ಭೂತ್ವಾ ರಾಘವೋ ದ್ವಿಜಸತ್ತಮಾನ್ ।
ಉವಾಚಾಶ್ವಮೇಧಸ್ಯ ಹ್ಯಭಿಪ್ರಾಯಂ ಮಹಾಯಶಾಃ ॥ ೬

ತೇ ತು ರಾಮಸ್ಯ ತಚ್ಛ್ರುತ್ವಾ ನಮಸ್ಕೃತ್ವಾ ವೃಷಧ್ವಜಮ್ ।
ಅಶ್ವಮೇಧಂ ದ್ವಿಜಾಃ ಸರ್ವೇ ಪೂಜಯಂತಿ ಸ್ಮ ಸರ್ವಶಃ ॥ ೭

ಸ ತೇಷಾಂ ದ್ವಿಜಮುಖ್ಯಾನಾಂ ವಾಕ್ಯಮದ್ಭುತದರ್ಶನಮ್ ।
ಅಶ್ವಮೇಧಾಶ್ರಿತಂ ಶ್ರುತ್ವಾ ಭೃಶಂ ಪ್ರೀತೋಽಭವತ್ತದಾ ॥ ೮

ವಿಜ್ಞಾಯ ಕರ್ಮ ತತ್ತೇಷಾಂ ರಾಮೋ ಲಕ್ಷ್ಮಣಮಬ್ರವೀತ್ ।
ಪ್ರೇಷಯಸ್ವ ದ್ರುತಂ ದೂತಾನ್ ಸುಗ್ರೀವಾಯ ಮಹಾತ್ಮನೇ ॥ ೯

ಯಥಾ ಮಹದ್ಭಿರ್ಹರಿಭಿರ್ಬಹುಭಿಶ್ಚ ವನೌಕಸಾಮ್ ।
ಸಾರ್ಧಮಾಗಚ್ಛ ಭದ್ರಂ ತೇ ಹ್ಯನುಭೋಕ್ತುಂ ಮಹೋತ್ಸವಮ್ ॥

---

ರಾಘವನು ಬದ್ಧಾಂಜಲಿಯಾಗಿ, ತಾನು ಅಶ್ವಮೇಧಯಾಗವನ್ನು ಮಾಡಬೇಕೆಂಬ ಅಭಿಪ್ರಾಯವನ್ನು ಆ ಮುನಿಗಳಿಗೆ ನಿವೇದಿಸಿದನು ರಾಘವನ ನುಡಿಯನ್ನು ಕೇಳಿದ ಆ ದ್ವಿಜೋತ್ತಮರೆಲ್ಲರೂ ರುದ್ರದೇವನಿಗೆ ನಮಸ್ಕಾರವನ್ನರ್ಪಿಸಿ* ಅಶ್ವಮೇಧದ ಶ್ರೇಷ್ಠತೆಯನ್ನು ಹೊಗಳಿದರು (೬-೭). ಆ ದ್ವಿಜೋತ್ತಮರು ಅಶ್ವಮೇಧಯಾಗವನ್ನು ವಿಸ್ಮಯಾವಹವಾಗಿ ಕೊಂಡಾಡುವುದನ್ನು ಕೇಳಿ ಶ್ರೀರಾಮನಿಗೆ ಪರಮಾನಂದವಾಯಿತು. ಯಾಗವನ್ನು ಕೈಗೊಳ್ಳಲು ಆ ದ್ವಿಜರಿಗಿದ್ದ ಸಮ್ಮತಿಯನ್ನರಿತು ಶ್ರೀರಾಮನು ಲಕ್ಷ್ಮಣನನ್ನು ನೋಡಿ ಇಂತೆಂದನು "ಲಕ್ಷ್ಮಣ, ಮಹಾತ್ಮನಾದ ಸುಗ್ರೀವನ ಬಳಿಗೆ ದೂತರನ್ನು ಕಳಿಸು (೮-೯) 'ಸುಗ್ರೀವ, ಈ ಮಹೋತ್ಸವದಲ್ಲಿ ಭಾಗಿಯಾಗಲು ದೊಡ್ಡ ವಾನರ ಪರಿವಾರದೊಂದಿಗೆ ಆಗಮಿಸು ನಿನಗೆ

---

* ರುದ್ರನು ತ್ರೇತಾಗ್ನಿಸ್ವರೂಪನಾದ್ದರಿಂದ ಯಜ್ಞವು ನಿರ್ವಿಘ್ನವಾಗಿ ಸಾಗಲೆಂದು ಮುನಿಗಳು ಒಡನೆಯೇ ಆತನನ್ನು ನಮಸ್ಕರಿಸಿದ್ದಾರೆ ಗೋವಿಂದರಾಜರು 'ನಮಸ್ಕೃತ್ವಾ ವೃಷಧ್ವಜಂ' ಎಂಬುದಕ್ಕೆ 'ಇದು ನಿಂದಾರೂಪವಾದ ವಚನ ರುದ್ರಾರಾಧನೆಯನ್ನು ಪರಿತ್ಯಜಿಸಿ—ಎಂದರ್ಥ' ಎಂದು ಬರೆದಿದ್ದಾರೆ

ವಿಭೀಷಣಶ್ಚ ರಕ್ಷೋಭಿಃ ಕಾಮಗೈರ್ಬಹುಭಿರ್ವೃತಃ ।
ಅಶ್ವಮೇಧಂ ಮಹಾಯಜ್ಞಂ ಪ್ರಯಾತ್ವತುಲವಿಕ್ರಮಃ ॥ ೧೧
ರಾಜಾನಶ್ಚ ಮಹಾಭಾಗಾ ಯೇ ಮೇ ಪ್ರಿಯಚಿಕೀರ್ಷವಃ ।
ಸಾನುಗಾಃ ಕ್ಷಿಪ್ರಮಾಯಾಂತು ಯಜ್ಞಂ ದ್ರಷ್ಟುಮನುತ್ತಮಮ್ ॥
ದೇಶಾಂತರಗತಾ ಯೇ ಚ ದ್ವಿಜಾ ಧರ್ಮಸಮಾಹಿತಾಃ ।
ಆಮಂತ್ರಯಸ್ವ ತಾನ್ ಸರ್ವಾನಶ್ವಮೇಧಾಯ ಲಕ್ಷ್ಮಣ ॥ ೧೩
ಋಷಯಶ್ಚ ಮಹಾಬಾಹೋ ಆಹೂಯಂತಾಂ ತಪೋಧನಾಃ ।
ದೇಶಾಂತರಗತಾಃ ಸರ್ವೇ ಸದಾರಾಶ್ಚ ದ್ವಿಜಾತಯಃ ॥ ೧೪
ತಥೈವ ತಾಲಾವಚರಾಸ್ತಥೈವ ನಟನರ್ತಕಾಃ ।
ಯಜ್ಞವಾಟಶ್ಚ ಸುಮಹಾನ್ ಗೋಮತ್ಯಾ ನೈಮಿಶೇ ವನೇ ॥ ೧೫
ಆಜ್ಞಾಪ್ಯತಾಂ ಮಹಾಬಾಹೋ ತದ್ಧಿ ಪುಣ್ಯಮನುತ್ತಮಮ್ ।
ಶಾಂತಯಶ್ಚ ಮಹಾಬಾಹೋ ಪ್ರವರ್ತ್ಯಂತಾಂ ಸಮಂತತಃ ॥ ೧೬
ಶತಶಶ್ಚಾಪಿ ಧರ್ಮಜ್ಞಾಃ ಕ್ರತುಮುಖ್ಯಮನುತ್ತಮಮ್ ।
ಅನುಭೂಯ ಮಹಾಯಜ್ಞಂ ನೈಮಿಶೇ ರಘುನಂದನ ॥ ೧೭

---

ಶುಭವಾಗಲಿ’ ಎಂದು ಹೇಳಿ ಕಳಿಸು ಪರಾಕ್ರಮಿಯಾದ ವಿಭೀಷಣನು ಕಾಮಗಾಮಿಗಳಾದ ರಾಕ್ಷಸರೊಡನೆ ಅಶ್ವಮೇಧಯಾಗಕ್ಕೆ ಆಗಮಿಸಲಿ (೧೦-೧೧) ನನಗೆ ಹರ್ಷವನ್ನುಂಟುಮಾಡಬೇಕೆಂದಿರುವ ಸಕಲ ರಾಜರೂ ಶ್ರೇಷ್ಠವಾದ ಈ ಯಜ್ಞವನ್ನು ನೋಡಲು ಪರಿವಾರಸಮೇತರಾಗಿ ಬರಲಿ ಸೌಮಿತ್ರಿ, ದೇಶಾಂತರದಲ್ಲಿರುವ ಧರ್ಮನಿಷ್ಠರಾದ ದ್ವಿಜರೆಲ್ಲರಿಗೂ ಆಹ್ವಾನವನ್ನು ಕಳಿಸು (೧೨-೧೩) ತಪೋಧನರಾದ ಋಷಿಗಳೆಲ್ಲರೂ ಸಪತ್ನೀಕರಾಗಿ ಆಗಮಿಸಲಿ ಹಾಗೆಯೇ ತಾಳಗಳನ್ನು ಹಾಕುವ ಸೂತ್ರಧಾರರೂ ನಟನರ್ತಕರೂ ಬರುವಂತೆ ಮಾಡು ಗೋಮತೀತೀರದಲ್ಲಿರುವ ನೈಮಿಶಾರಣ್ಯದಲ್ಲಿ ವಿಶಾಲವಾದ ಯಜ್ಞಶಾಲೆಯು ನಿರ್ಮಿತವಾಗಲಿ (೧೪-೧೫) ಲಕ್ಷ್ಮಣ, ಈ ಕಾರ್ಯಗಳಿಗೆ ತಕ್ಕ ಆಜ್ಞೆಯನ್ನು ಹೊರಡಿಸು ಇದು ಅತ್ಯಂತ ಪುಣ್ಯಕರವಾದ ಕಾರ್ಯ ಎಲ್ಲೆಲ್ಲಿಯೂ ಶಾಂತಿಕರ್ಮಗಳು ನಡೆಯಲಿ ಧರ್ಮಜ್ಞರಾದವರು ಬಹುಸಂಖ್ಯೆಯಲ್ಲಿ ಬಂದು ಈ ಮಹಾಯಜ್ಞವನ್ನು ನೋಡಿ

ತುಷ್ಟಃ ಪುಷ್ಟಶ್ಚ ಸರ್ವೋಽಸೌ ಮಾನಿತಶ್ಚ ಯಥಾವಿಧಿ ।
ಪ್ರೀತಿಂ ಯಾಸ್ಯತಿ ಧರ್ಮಜ್ಞ ಶೀಘ್ರಮಾಮಂತ್ರ್ಯತಾಂ ಜನಃ ॥ ೧೮

ಶತಂ ವಾಹಸಹಸ್ರಾಣಾಂ ತಂಡುಲಾನಾಂ ವಪುಷ್ಮತಾಮ್ ।
ಅಯುತಂ ತಿಲಮುದ್ಗಾನಾಂ ಪ್ರಯಾತ್ವಗ್ರೇ ಮಹಾಬಲ ॥ ೧೯

ಚಣಕಾನಾಂ ಕುಲಿತ್ಥಾನಾಂ ಮಾಷಾಣಾಂ ಲವಣಸ್ಯ ಚ ।
ಅತೋಽನುರೂಪಂ ಸ್ನೇಹಂ ಚ ಗಂಧಂ ಸಂಕ್ಷಿಪ್ತಮೇವ ಚ ॥ ೨೦

ಸುವರ್ಣಕೋಟ್ಯೋ ಬಹುಲಾ ಹಿರಣ್ಯಸ್ಯ ಶತೋತ್ತರಾಃ ।
ಅಗ್ರತೋ ಭರತಃ ಕೃತ್ವಾ ಗಚ್ಛತ್ವಗ್ರೇ ಸಮಾಧಿನಾ ॥ ೨೧

ಅಂತರಾ ಪಣ್ಯವೀಥ್ಯಶ್ಚ ಸರ್ವೇ ಚ ನಟನರ್ತಕಾಃ ।
ಸೂದಾ ನಾರ್ಯಶ್ಚ ಬಹವೋ ನಿತ್ಯಂ ಯೌವನಶಾಲಿನಃ ॥ ೨೨

ಭರತೇನ ತು ಸಾರ್ಧಂ ತೇ ಯಾಂತು ಸೈನ್ಯಾನಿ ಚಾಗ್ರತಃ ।
ನೈಗಮಾ ಬಲವೃದ್ಧಾಶ್ಚ ದ್ವಿಜಾಶ್ಚ ಸುಸಮಾಹಿತಾಃ ॥ ೨೩

---

ಹರ್ಷಿಸಲಿ (೧೬-೧೭) ಎಲ್ಲರೂ ತುಷ್ಟಿಪುಷ್ಟಿಗಳನ್ನನುಭವಿಸಲಿ ಸಕಲರೂ ಯಥಾವಿಧಿಯಾಗಿ ಸಮ್ಮಾನಗೊಂಡು ಸಂತೋಷಿಸುವರು ಆದ್ದರಿಂದ, ಲಕ್ಷ್ಮಣ, ಜನರಿಗೆ ಆಮಂತ್ರಣವನ್ನು ಕೊಟ್ಟು ಬರಮಾಡು (೧೮) ಒಂದು ಲಕ್ಷ ವಾಹನಗಳು ಒಯ್ಯುವಷ್ಟು ಉತ್ತಮವಾದ ಅಕ್ಕಿಯೂ ಹತ್ತು ಸಾವಿರ ವಾಹನಗಳು ಒಯ್ಯುವಷ್ಟು ಎಳ್ಳು, ಹೆಸರು, ಕಡಲೆ, ಹುರುಳಿ, ಉದ್ದು ಮುಂತಾದ ಧಾನ್ಯಗಳೂ ಉಪ್ಪೂ ಸಹ ಮುಂದೆ ಸಾಗಲಿ! ಆ ಸಂಭಾರಕ್ಕೆ ಬೇಕಾಗುವಷ್ಟು ತುಪ್ಪ, ಎಣ್ಣೆ ಮುಂತಾದವೂ ಸುಗಂಧ ಸಾಮಗ್ರಿಯೂ ಹೋಗಲಿ! (೧೯-೨೦) ನೂರಾರು ಕೋಟಿ ಸುವರ್ಣ ನಾಣ್ಯಗಳನ್ನೂ ಬೆಳ್ಳಿಯ ನಾಣ್ಯಗಳನ್ನೂ ತೆಗೆಸಿಕೊಂಡು ಭರತನು ಎಚ್ಚರಿಕೆಯಿಂದ ಮುಂದೆ ಹೋಗಲಿ ದಾರಿಯ ನಡುವೆ ಅಲ್ಲಲ್ಲಿ ವರ್ತಕರು ಅಂಗಡಿಗಳನ್ನು ತೆರೆಯಲಿ ಯುವಕರಾದ ನಟನರ್ತಕರೂ ಅಡಿಗೆಯವರೂ ಹೆಂಗಸರೂ ಬರಲಿ (೨೧-೨೨) ಭರತನೊಡನೆ ನಮ್ಮ ಸೈನಿಕರೂ ಹೋಗತಕ್ಕದ್ದು ಬಾಲ ವೃದ್ಧರೇ ಮೊದಲಾದ ಪ್ರಜೆಗಳೂ ದ್ವಿಜರೂ ಹೋಗಲಿ ಸೇವಕರನ್ನೂ

ಕರ್ಮಾಂತಿಕಾನ್ ವರ್ಧಕಿನಃ ಕೋಶಾಧ್ಯಕ್ಷಾಂಶ್ಚ ನೈಗಮಾನ್ ।
ಮಮ ಮಾತೃಸ್ತಥಾ ಸರ್ವಾಃ ಕುಮಾರಾಂತಃಪುರಾಣಿ ಚ ॥ ೨೪

ಕಾಂಚನೀಂ ಮಮ ಪತ್ನೀಂ ಚ ದೀಕ್ಷಾಯಾಂ ಜ್ಞಾಂಶ್ಚ ಕರ್ಮಣಿ ।
ಅಗ್ರತೋ ಭರತಃ ಕೃತ್ವಾ ಗಚ್ಛತ್ವಗ್ರೇ ಮಹಾಯಶಾಃ ॥ ೨೫

ಉಪಕಾರ್ಯಾ ಮಹಾರ್ಹಾಶ್ಚ ಪಾರ್ಥಿವಾನಾಂ ಮಹೌಜಸಾಮ್ ।
ಸಾನುಗಾನಾಂ ನರಶ್ರೇಷ್ಠೋ ವ್ಯಾದಿದೇಶ ಮಹಾಬಲಃ ॥ ೨೬

ಅನ್ನಪಾನಾನಿ ವಸ್ತ್ರಾಣಿ ಅನುಗಾನಾಂ ಮಹಾತ್ಮನಾಮ್ ।
ಭರತಃ ಸ ತದಾ ಯಾತಃ ಶತ್ರುಘ್ನಸಹಿತಸ್ತದಾ ॥ ೨೭

ವಾನರಾಶ್ಚ ಮಹಾತ್ಮಾನಃ ಸುಗ್ರೀವಸಹಿತಾಸ್ತದಾ ।
ವಿಪ್ರಾಣಾಂ ಪ್ರವರಾಃ ಸರ್ವೇ ಚಕ್ರುಶ್ಚ ಪರಿವೇಷಣಮ್ ॥ ೨೮

---

ಬಡಗಿಗಳನ್ನೂ ಕೋಶಾಧ್ಯಕ್ಷರನ್ನೂ ವೈದಿಕರನ್ನೂ ಭರತನು ಕರೆದೊಯ್ಯಲಿ ಅಲ್ಲದ ನಮ್ಮ ತಾಯಂದಿರೂ ನಿಮ್ಮ ಅಂತಃಪುರಸ್ತ್ರೀಯರೂ ಆತನೊಡನೆ ಹೋಗಲಿ (೨೩-೨೪) ನನ್ನ ಯಜ್ಞದೀಕ್ಷಾನಿಮಿತ್ತವಾಗಿ ನನ್ನ ಪತ್ನಿಯಾದ ಸೀತೆಯ ಸುವರ್ಣ ಪ್ರತಿಮೆಯನ್ನು* ಭರತನು ತೆಗೆದುಕೊಂಡು ಹೋಗ ತಕ್ಕದ್ದು ಅವನೊಡನೆ ಕರ್ಮವಿದರಾದ ಋಷಿಗಳೂ ಹೋಗಲಿ" ಎಂದು ಆಜ್ಞಾಪಿಸಿದನು (೨೫) ಹಾಗೆಯೇ ರಾಜರುಗಳಿಗೂ ಅವರ ಪರಿವಾರ ದವರಿಗೂ ವಾಸಕ್ಕೆ ಉಪಯುಕ್ತವಾದ ಡೇರೆಯ ಸಾಮಗ್ರಿಗಳನ್ನೂ ತೆಗೆಸಿ ಕೊಂಡು ಹೋಗುವಂತೆ ಶ್ರೀರಾಮನು ಆದೇಶವನ್ನಿತ್ತನು ಎಲ್ಲರಿಗೂ ಬೇಕಾಗುವ ಅನ್ನಪಾನವಸ್ತ್ರಾದಿಗಳ ಏರ್ಪಾಡನ್ನು ನಡೆಸಬೇಕೆಂದು ಅವನ ಆಜ್ಞೆಯಾಯಿತು ಅನಂತರ ಭರತನು ಶತ್ರುಘ್ನಸಮೇತನಾಗಿ ಸಕಲ ಸಾಮಗ್ರಿಗಳನ್ನೂ ತೆಗೆಸಿಕೊಂಡು ಯಜ್ಞಸ್ಥಳಕ್ಕೆ ಹೋದನು (೨೬-೨೭) ವಾನರೋತ್ತಮರು ಸುಗ್ರೀವಸಹಿತರಾಗಿ ಆಗಮಿಸಿ, ಅಲ್ಲಿಗೆ ಬಂದಿದ್ದ ವಿಪ್ರರ

---

* ಅನುಬಂಧವನ್ನು ನೋಡಿ.

ವಿಭೀಷಣಶ್ಚ ರಕ್ಷೋಭಿಃ ಸ್ತ್ರೀಭಿಶ್ಚ ಬಹುಭಿರ್ವೃತಃ ।
ಋಷೀಣಾಮುಗ್ರತಪಸಾಂ ಪೂಜಾಂ ಚಕ್ರೇ ಮಹಾತ್ಮನಾಮ್ ॥ ೨೯

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕನವತಿತಮಃ ಸರ್ಗಃ



ಸೇವೆಯಲ್ಲಿ ನಿರತರಾದರು ವಿಭೀಷಣನು ರಾಕ್ಷಸರಿಂದಲೂ ರಾಕ್ಷಸ ಸ್ತ್ರೀಯರಿಂದಲೂ ಸಮೇತನಾಗಿ ಬಂದು ತಪಸ್ವಿಗಳಾದ ಋಷಿಗಳ ಪರಿಚರ್ಯೆಯಲ್ಲಿ ತೊಡಗಿದನು (೨೮-೨೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತೊಂದನೆಯ ಸರ್ಗ



## ದ್ವಿನವತಿತಮಃ ಸರ್ಗಃ

### ಹಯಚರ್ಯಾ

ತತ್ ಸರ್ವಮಖಿಲೇನಾಶು ಸಂಸ್ಥಾಪ್ಯ ಭರತಾಗ್ರಜಃ ।
ಹಯಂ ಲಕ್ಷಣಸಂಪನ್ನಂ ಕೃಷ್ಣಸಾರಂ ಮುಮೋಚ ಹ ॥ ೧

ಋತ್ವಿಗ್ಭಿರ್ಲಕ್ಷ್ಮಣಂ ಸಾರ್ಧಮಶ್ವತಂತ್ರೇ ನಿಯೋಜ್ಯ ಚ ।
ತತೋಽಭ್ಯಗಚ್ಛತ್ ಕಾಕುತ್ಸ್ಥಃ ಸಹ ಸೈನ್ಯೇನ ನೈಮಿಷಮ್ ॥ ೨

ಯಜ್ಞವಾಟಂ ಮಹಾಬಾಹುರ್ದೃಷ್ಟ್ವಾ ಪರಮಮದ್ಭುತಮ್ ।
ಪ್ರಹರ್ಷಮತುಲಂ ಲೇಭೇ ಶ್ರೀಮಾನಿತಿ ಚಾಬ್ರವೀತ್ ॥ ೩

ನೈಮಿಶೇ ವಸತಸ್ತಸ್ಯ ಸರ್ವ ಏವ ನರಾಧಿಪಾಃ ।
ಆನಿನ್ಯುರುಪಹಾರಾಂಶ್ಚ ತಾನ್ ರಾಮಃ ಪ್ರತ್ಯಪೂಜಯತ್ ॥ ೪

ಉಪಕಾರ್ಯಾ ಮಹಾರ್ಹಾಶ್ಚ ಪಾರ್ಥಿವಾನಾಂ ಮಹಾತ್ಮನಾಮ್ ।
ಸಾನುಗಾನಾಂ ನರಶ್ರೇಷ್ಠೋ ವ್ಯಾದಿದೇಶ ಮಹಾಮತಿಃ ॥ ೫

## ಸರ್ಗ ೯೨

### ಅಶ್ವವಿಸರ್ಜನೆ ವರ್ಷಪರ್ಯಂತವಾದ ಯಾಗವಿಧಾನ

ಶ್ರೀರಾಮನು ಯಾಗೋಪಕರಣಗಳೆಲ್ಲವನ್ನೂ ನ್ಯೂನತೆಯಿಲ್ಲದಂತೆ ವ್ಯವಸ್ಥೆಗೊಳಿಸಿ, ಲಕ್ಷಣಸಂಪನ್ನವೂ ಕೃಷ್ಣವರ್ಣವುಳ್ಳದ್ದೂ ಆದ ಉತ್ತಮಾಶ್ವವನ್ನು ಯಾಗಾರ್ಥವಾಗಿ ವಿಸರ್ಜಿಸಿದನು (೧) ಅಶ್ವದ ರಕ್ಷಣೆಗಾಗಿ ಋತ್ವಿಜರೊಡನೆ ಅದನ್ನು ಹಿಂಬಾಲಿಸಿ ಹೋಗುವಂತೆ ಲಕ್ಷ್ಮಣನನ್ನು ನೇಮಿಸಿ, ತಾನು ಸೇನಾಸಮೇತನಾಗಿ ನೈಮಿಶಾರಣ್ಯಕ್ಕೆ ಆಗಮಿಸಿದನು ಅಲ್ಲಿ ನಿರ್ಮಿತವಾಗಿದ್ದ ಅದ್ಭುತವಾದ ಯಜ್ಞವಾಟವನ್ನು ಕಂಡು ಆನಂದ ತುಂದಿಲನಾಗಿ 'ಆಹಾ! ಸರ್ವಸಮೃದ್ಧವಾಗಿದೆ!' ಎಂದು ಉದ್ಗರಿಸಿದನು (೨-೩) ಆತನು ನೈಮಿಶಾರಣ್ಯದ ಯಜ್ಞವಾಟದಲ್ಲಿ ವಾಸವಾಗಿರಲು ಸಕಲ ಭೂಪಾಲರೂ ಕಾಣಿಕೆಗಳನ್ನು ತಂದು ಅರ್ಪಿಸಿದರು ಶ್ರೀರಾಮನು ಅವರೆಲ್ಲರನ್ನೂ ಸತ್ಕರಿಸಿದನು (೪). ಪ್ರಾಜ್ಞನಾದ ರಾಘವನು ಆ ಪೃಥ್ವೀಪಾಲ

ಅನ್ನಪಾನಾನಿ ವಸ್ತ್ರಾಣಿ ಸಾನುಗಾನಾಂ ಮಹಾತ್ಮನಾಮ್ ।
ಭರತಃ ಸಂದದಾವಾಶು ಶತ್ರುಘ್ನಸಹಿತಸ್ತದಾ ॥ ೬

ವಾನರಾಶ್ಚ ಮಹಾತ್ಮಾನಃ ಸುಗ್ರೀವಸಹಿತಾಸ್ತದಾ ।
ವಿಪ್ರಾಣಾಂ ಪ್ರಣತಾಃ ಸರ್ವೇ ಚಕ್ರಿರೇ ಪರಿವೇಷಣಮ್ ॥ ೭

ವಿಭೀಷಣಶ್ಚ ರಕ್ಷೋಭಿರ್ಬಹುಭಿಃ ಸ್ರಗ್ವಿಭಿರ್ವೃತಃ ।
ಋಷೀಣಾಮುಗ್ರತಪಸಾಂ ಪೂಜಾಂ ಚಕ್ರೇ ಮಹಾತ್ಮನಾಮ್ ॥ ೮

ಏವಂ ಸುವಿಹಿತೋ ಯಜ್ಞೋ ಹಯಮೇಧೋಽಭ್ಯವರ್ತತ ।
ಲಕ್ಷ್ಮಣೇನಾಭಿಗುಪ್ತಾ ಚ ಹಯಚರ್ಯಾ ಪ್ರವರ್ತತ ॥ ೯

ಈದೃಶಂ ರಾಜಸಿಂಹಸ್ಯ ಯಜ್ಞಪ್ರವರಮುತ್ತಮಮ್ ।
ನಾನ್ಯಃ ಶಬ್ದೋಽಭವತ್ತತ್ರ ಹಯಮೇಧೇ ಮಹಾತ್ಮನಃ ॥ ೧೦

ಛಂದತೋ ದೇಹಿ ದೇಹೀತಿ ಯಾವತ್ತುಷ್ಯಂತಿ ಯಾಚಕಾಃ ।
ತಾವತ್ ಸರ್ವಾಣಿ ದತ್ತಾನಿ ಕ್ರತುಮಧ್ಯೇ ಮಹಾತ್ಮನಃ ॥ ೧೧

---

ರೆಲ್ಲರಿಗೂ ಪರಿವಾರಸಮೇತರಾಗಿ ನೆಲೆಸಲು ಉತ್ತಮವಾದ ಡೇರೆಗಳನ್ನು ಕೊಡಿಸಿದನು ಭರತ ಶತ್ರುಘ್ನರು ಅವರೆಲ್ಲರಿಗೂ ಅನ್ನಪಾನವಸ್ತ್ರಾದಿಗಳ ವ್ಯವಸ್ಥೆಯನ್ನೇರ್ಪಡಿಸಿದರು (೫-೬) ಸುಗ್ರೀವಾದಿ ವಾನರರು ವಿನಮ್ರರಾಗಿ ವಿಪ್ರರ ಸೇವೆಯಲ್ಲಿ ನಿರತರಾದರು ವಿಭೀಷಣನು ಮಾಲಾಧಾರಿಗಳಾದ ರಾಕ್ಷಸರೊಡನೆ ಋಷಿಗಳ ಪರಿಚರ್ಯೆಯಲ್ಲಿ ತೊಡಗಿದನು (೭-೮). ಈ ಪ್ರಕಾರವಾಗಿ ಯಜ್ಞವಾಟದಲ್ಲಿ ಅಶ್ವಮೇಧಯಾಗವು ವಿಧಿಪೂರ್ವಕವಾಗಿ ಆರಬ್ಧವಾಯಿತು ಲಕ್ಷ್ಮಣನಿಂದ ರಕ್ಷಿತವಾದ ಅಶ್ವವು ದೇಶಸಂಚಾರವನ್ನು ಮಾಡುತ್ತ ಹೊರಟಿತು (೯) ರಾಜಸಿಂಹನಾದ ರಾಘವನು ಕೈಗೊಂಡ ಆ ಮಹಾಯಜ್ಞವು ಹೇಗೆ ನಡೆಯಿತೆಂದರೆ, ಯಾಚಕರಿಗೆ ತೃಪ್ತಿಯಾಗುವಷ್ಟು ಧನಕನಕಾದಿ ವಸ್ತುಗಳನ್ನು ಯಥೇಚ್ಛವಾಗಿ 'ಕೊಡು, ಕೊಡು!' ಎಂಬ ಶಬ್ದವು ಕೇಳಿಸುತ್ತಿತ್ತೇ ಹೊರತು ಇನ್ನೊಂದು ಶಬ್ದವು ಕೇಳಿಸುತ್ತಿರಲಿಲ್ಲ! ಅದೇ ಪ್ರಕಾರವಾಗಿ ಆಯಾ ವಸ್ತುಗಳು ಕೊಡಲ್ಪಟ್ಟವು

ವಿವಿಧಾನಿ ಚ ಗೌಡಾನಿ ಖಾಂಡವಾನಿ ತಥೈವ ಚ ।
ನ ನಿಸ್ಸೃತಂ ಭವತ್ಯೋಷ್ಠಾದ್ವಚನಂ ಯಾವದರ್ಥಿನಾಮ್ ॥ ೧೨

ತಾವದ್ವಾನರರಕ್ಷೋಭಿರ್ದತ್ತಮೇವಾಭ್ಯದೃಶ್ಯತ ।
ನ ಕಶ್ಚಿನ್ಮಲಿನಸ್ತತ್ರ ದೀನೋ ವಾಪ್ಯಥ ಕರ್ಶಿತಃ ॥ ೧೩

ತಸ್ಮಿನ್ ಯಜ್ಞವರೇ ರಾಜ್ಞೋ ಹೃಷ್ಟಪುಷ್ಟಜನಾವೃತೇ ।
ಯೇ ಚ ತತ್ರ ಮಹಾತ್ಮಾನೋ ಮುನಯಶ್ಚಿರಜೀವಿನಃ ॥ ೧೪

ನಾಸ್ಮರಂಸ್ತಾದೃಶಂ ಯಜ್ಞಂ ನಾಪ್ಯಾಸೀತ್ ಸ ಕದಾಚನ ।
ಯಃ ಕೃತ್ಯವಾನ್ ಸುವರ್ಣೇನ ಸುವರ್ಣಂ ಲಭತೇ ಸ್ಮ ಸಃ ॥ ೧೫

ವಿತ್ತಾರ್ಥೀ ಲಭತೇ ವಿತ್ತಂ ರತ್ನಾರ್ಥೀ ರತ್ನಮೇವ ಚ ।
ರಜತಾನಾಂ ಸುವರ್ಣಾನಾಮಶ್ಮನಾಮಥ ವಾಸಸಾಮ್ ॥ ೧೬

ಅನಿಶಂ ದೀಯಮಾನಾನಾಂ ರಾಶಿಃ ಸಮುಪದೃಶ್ಯತೇ ।
ನ ಶಕ್ರಸ್ಯ ಧನೇಶಸ್ಯ ಯಮಸ್ಯ ವರುಣಸ್ಯ ವಾ ॥ ೧೭

---

(೧೦-೧೧) ಬೆಲ್ಲ ಸಕ್ಕರೆಗಳಿಂದ ನಿರ್ಮಿತವಾದ ವಿವಿಧ ಭಕ್ಷ್ಯಗಳನ್ನು ತೃಪ್ತಿಯಾಗುವಂತೆ ಬಡಿಸುತ್ತಿದ್ದರು ತುಟಿಯಿಂದ ಒಂದು ಶಬ್ದವು ಜನರ ಬಾಯಿಂದ ಹೊರಡುವುದೇ ತಡ, ಒಡನೆಯೇ ವಾನರರೋ ರಾಕ್ಷಸರೋ ಅದನ್ನು ತಂದುಕೊಡುತ್ತಿರುವುದೇ ಕಾಣಿಸಿತು ಆ ಯಜ್ಞಭೂಮಿಯಲ್ಲಿ ಒಬ್ಬ ಕೊಳಕನೂ ಒಬ್ಬ ದೀನನೂ ಒಬ್ಬ ಕೃಶನೂ ಕಂಡು ಬರಲಿಲ್ಲ (೧೨-೧೩) ಸಕಲರೂ ಹೃಷ್ಟಪುಷ್ಟರಾಗಿ ಕಂಗೊಳಿಸುತ್ತಿದ್ದರು ಮಹಾತ್ಮರೂ ಚಿರಜೀವಿಗಳೂ ಆದ ಮುನಿಗಳಿಗೂ ಸಹ ಆ ಬಗೆಯ ವೈಭವದ ಯಜ್ಞವು ಹಿಂದೆ ನಡೆಯಿತೆ—ಎಂಬುದು ಸ್ಮರಣೆಗೆ ಬರಲಿಲ್ಲ ಏಕೆಂದರೆ, ವಸ್ತುತಃ ಅಂತಹ ಯಜ್ಞವು ಹಿಂದೆ ಯಾವಾಗಲೂ ನಡೆದೇ ಇರಲಿಲ್ಲ! ಯಾರಿಗೆ ಚಿನ್ನ ಬೇಕೋ ಅವನಿಗೆ ಚಿನ್ನವು ದೊರೆಯಿತು (೧೪-೧೫) ಹಣವು ಬೇಕಾದವನಿಗೆ ಹಣವೂ ರತ್ನವು ಬೇಕಾದವನಿಗೆ ರತ್ನವೂ ದೊರೆಯಿತು ಬೆಳ್ಳಿ, ಚಿನ್ನ, ರತ್ನ, ಬಟ್ಟೆ—ಇವುಗಳ ರಾಶಿಯೇ ಸತತವಾಗಿ ಕೊಡಲ್ಪಡುತ್ತಿರುವುದು ಕಾಣಿಸುತ್ತಿತ್ತು (೧೬) 'ದೇವೇಂದ್ರ, ಕುಬೇರ, ಯಮ, ವರುಣರ ಯಾಗವೂ ಈ ಪ್ರಕಾರವಾಗಿ ನಡೆದದ್ದನ್ನು ನಾವು

ಈದೃಶೋ ದೃಷ್ಟಪೂರ್ವೋ ನ ಏವಮೂಚುಸ್ತಪೋಧನಾಃ ।
ಸರ್ವತ್ರ ವಾನರಾಸ್ತಸ್ಥುಃ ಸರ್ವತ್ರೈವ ಚ ರಾಕ್ಷಸಾಃ ॥ ೧೮

ವಾಸೋಧನಾನ್ನಮರ್ಥಿಭ್ಯಃ ಪೂರ್ಣಹಸ್ತಾ ದದುರ್ಭೃಶಮ್ ।
ಈದೃಶೋ ರಾಜಸಿಂಹಸ್ಯ ಯಜ್ಞಃ ಸರ್ವಗುಣಾನ್ವಿತಃ ॥ ೧೯

ಸಂವತ್ಸರಮಥೋ ಸಾಗ್ರಂ ವರ್ತತೇ ನ ಚ ಹೀಯತೇ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವಿನವತಿತಮಃ ಸರ್ಗಃ



ಕಾಣಲಿಲ್ಲ !' ಎಂದು ತಪೋಧನರು ಮಾತಾಡಿಕೊಳ್ಳುತ್ತಿದ್ದರು ಎಲ್ಲೆಲ್ಲಿಯೂ ವಾನರರೂ ರಾಕ್ಷಸರೂ ಸ್ವಯಂಸೇವಕರಾಗಿ ನಿಂತಿದ್ದರು (೧೭-೧೮). ಅರ್ಥಿಗಳಿಗೆ ಅವರು ವಸ್ತ್ರಧನಾದಿಗಳನ್ನು ಎತ್ತಿಎತ್ತಿ ಕೈತುಂಬ ಕೊಡುತ್ತಿದ್ದರು ಈ ರೀತಿಯಲ್ಲಿ ರಾಜಸಿಂಹನಾದ ರಾಘವನ ಅಶ್ವಮೇಧಯಾಗವು ಸರ್ವಗುಣಶೋಭಿತವಾಗಿ ಒಂದು ವರ್ಷಕ್ಕಿಂತಲೂ ಹೆಚ್ಚುಕಾಲ ನಡೆಯುತ್ತಲೇ ಇತ್ತು, ಕೊರತೆಯೆಂಬುದೇ ಕಾಣಲಿಲ್ಲ (೧೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತೆರಡನೆಯ ಸರ್ಗ



## ತ್ರಿನವತಿತಮಃ ಸರ್ಗಃ

### ವಾಲ್ಮೀಕಿಸಂದೇಶಃ

ವರ್ತಮಾನೇ ತಥಾಭೂತೇ ಯಜ್ಞೇ ಚ ಪರಮಾದ್ಭುತೇ ।
ಸಶಿಷ್ಯ ಆಜಗಾಮಾಶು ವಾಲ್ಮೀಕಿರ್ಮುನಿಪುಂಗವಃ ॥ ೧

ಸ ದೃಷ್ಟ್ವಾ ದಿವ್ಯಸಂಕಾಶಂ ಯಜ್ಞಮದ್ಭುತದರ್ಶನಮ್ ।
ಏಕಾಂತೇ ಋಷಿವಾಟಾನಾಂ ಚಕಾರ ಉಟಜಾನ್ ಶುಭಾನ್ ॥ ೨

ಶಕಟಾಂಶ್ಚ ಬಹೂನ್ ಪೂರ್ಣಾನ್ ಫಲಮೂಲೈಶ್ಚ ಶೋಭನಾನ್ ।
ವಾಲ್ಮೀಕಿವಾಟೇ ರುಚಿರೇಽಸ್ಥಾಪಯನ್ನವಿದೂರತಃ ॥ ೩

ಆಸೀತ್ ಸುಪೂಜಿತೋ ರಾಜ್ಞಾ ಮುನಿಭಿಶ್ಚ ಮಹಾತ್ಮಭಿಃ ।
ವಾಲ್ಮೀಕಿಃ ಸುಮಹಾತೇಜಾ ನ್ಯವಸತ್ ಪರಮಾತ್ಮವಾನ್ ॥ ೪

### ಸರ್ಗ ೯೩

ವಾಲ್ಮೀಕಿಮುನಿಗಳು ಶಿಷ್ಯಸಮೇತರಾಗಿ ಯಜ್ಞಶಾಲೆಗೆ ಆಗಮಿಸಿ,
ರಾಮಚರಿತೆಯನ್ನು ಹಾಡುವಂತೆ ಕುಶಲವರಿಗೆ ಹೇಳುವುದು.

ಈ ಬಗೆಯಲ್ಲಿ ಪರಮಾದ್ಭುತವಾದ ಅಶ್ವಮೇಧಯಾಗವು ನಡೆಯುತ್ತಿರುವಾಗ, ವಾಲ್ಮೀಕಿಮಹರ್ಷಿಗಳು ಶಿಷ್ಯಸಮೇತರಾಗಿ ಆಗಮಿಸಿದರು ಅವರು ದಿವ್ಯವಾದ ಆ ಯಜ್ಞವಿಧಾನವನ್ನು ನೋಡಿ, ಋಷಿಗಳು ವಾಸಮಾಡುತ್ತಿದ್ದ ಸ್ಥಳದ ಸಮೀಪದಲ್ಲಿ ಪರ್ಣಶಾಲೆಗಳನ್ನು ನಿರ್ಮಿಸಿಕೊಂಡರು (೧-೨) ಫಲಮೂಲಗಳಿಂದ ತುಂಬಿದ ಅನೇಕ ಬಂಡಿಗಳನ್ನು ತಂದು, ರುಚಿರವಾದ ಆ ಪರ್ಣಶಾಲೆಗಳ ಬಳಿಯಲ್ಲಿ ಸೇವಕರು* ನಿಲ್ಲಿಸಿದರು. ಮಹಾರಾಜನಾದ ಶ್ರೀರಾಮನೂ ಮಹಾತ್ಮರಾದ ಮುನಿಗಳೂ ವಾಲ್ಮೀಕಿಮುನಿಗಳನ್ನು ಆದರಿಸಿ ಸತ್ಕರಿಸಿದರು. ತೇಜಸ್ವಿಗಳಾದ ವಾಲ್ಮೀಕಿಗಳು

* ಮೂಲದಲ್ಲಿ ಬಂಡಿಗಳನ್ನು ತಂದು ನಿಲ್ಲಿಸಿದವರು ಯಾರೆಂದು ಹೇಳಿಲ್ಲ 'ವಾಲ್ಮೀಕಿ ಶಿಷ್ಯರು' ಎಂದು ಕೆಲವರು ಹೇಳುತ್ತಾರೆ

ಸ ಶಿಷ್ಯಾವಬ್ರವೀದ್ಧೃಷ್ಟೋ ಯುವಾಂ ಗತ್ವಾ ಸಮಾಹಿತೌ ।
ಕೃತ್ಸ್ನಂ ರಾಮಾಯಣಂ ಕಾವ್ಯಂ ಗಾಯೇಥಾಂ ಪರಯಾ ಮುದಾ ॥

ಋಷಿವಾಟೇಷು ಪುಣ್ಯೇಷು ಬ್ರಾಹ್ಮಣಾವಸಥೇಷು ಚ ।
ರಥ್ಯಾಸು ರಾಜಮಾರ್ಗೇಷು ಪಾರ್ಥಿವಾನಾಂ ಗೃಹೇಷು ಚ ॥ ೬

ರಾಮಸ್ಯ ಭವನದ್ವಾರಿ ಯತ್ರ ಕರ್ಮ ಪ್ರವರ್ತತೇ ।
ಋತ್ವಿಜಾಮಗ್ರತಶ್ಚೈವ ತತ್ರ ಗೇಯಂ ವಿಶೇಷತಃ ॥ ೭

ಇಮಾನಿ ಚ ಫಲಾನ್ಯತ್ರ ಸ್ವಾದೂನಿ ವಿವಿಧಾನಿ ಚ ।
ಜಾತಾನಿ ಪರ್ವತಾಗ್ರೇಷು ಚಾಸ್ವಾದ್ಯಾಸ್ವಾದ್ಯ ಗಾಯತಾಮ್ ॥ ೮

ನ ಯಾಸ್ಯಥಃ ಶ್ರಮಂ ವತ್ಸೌ ಭಕ್ಷಯಿತ್ವಾ ಫಲಾನಿ ವೈ ।
ಮೂಲಾನಿ ಚ ಸುಮೃಷ್ಟಾನಿ ನ ರಾಗಾತ್ ಪರಿಹಾಸ್ಯಥಃ ॥ ೯

ಯದಿ ಶಬ್ದಾಪಯೇದ್ರಾಮಃ ಶ್ರವಣಾಯ ಮಹೀಪತಿಃ ।
ಋಷೀಣಾಮುಪವಿಷ್ಟಾನಾಂ ತತೋ ಗೇಯಂ ಪ್ರವರ್ತತಾಮ್ ॥

---

ಪರಮಾತ್ಮನ ಧ್ಯಾನಮಾಡುತ್ತ ಅಲ್ಲಿದ್ದರು (೩-೪) ಅವರು ಸಂತೋಷದಿಂದ ತಮ್ಮ ಶಿಷ್ಯರಾದ ಕುಶಲವರನ್ನು ಕರೆದು ಹೀಗೆಂದರು. "ಕುಶಲವರೆ, ನೀವು ಸಾವಧಾನವಾಗಿ ಸಮಗ್ರವಾದ ರಾಮಾಯಣಕಾವ್ಯವನ್ನು ಹಾಡಬೇಕು (೫) ಪುಣ್ಯಕರವಾದ ಋಷಿವಾಟಗಳಲ್ಲಿ, ಬ್ರಾಹ್ಮಣ ಗೃಹಗಳಲ್ಲಿ, ರಸ್ತೆಯಲ್ಲಿ, ರಾಜಮಾರ್ಗದಲ್ಲಿ, ಇಲ್ಲಿಗೆ ಬಂದಿರುವ ರಾಜರ ಗೃಹದಲ್ಲಿ–ಹಾಡಿರಿ ರಾಮನು ವಾಸವಾಗಿರುವ ಭವನದ ಬಾಗಿಲಿನಲ್ಲಿಯೂ ಹಾಡಿರಿ ಯಜ್ಞಕಾರ್ಯವು ನಡೆಯುತ್ತಿರುವ ಸ್ಥಳದಲ್ಲಿ ಋತ್ವಿಜರೆದುರಿಗೆ ವಿಶೇಷವಾಗಿ ಹಾಡಬೇಕು (೬-೭) ಬಳಿಯಲ್ಲಿರುವ ಪರ್ವತಗಳಲ್ಲಿ ರುಚಿಕರವಾದ ಬಗೆಬಗೆಯ ಹಣ್ಣುಗಳು ದೊರೆಯುತ್ತವೆ ಹಸಿವಾದಾಗ ಅವುಗಳನ್ನು ತಿನ್ನುತ್ತ ತಿನ್ನುತ್ತ ಹಾಡುತ್ತ ಹೋಗಿರಿ. ಮಕ್ಕಳೆ, ಆ ಹಣ್ಣುಗಳನ್ನು ಭಕ್ಷಿಸುತ್ತಿದ್ದರೆ ನಿಮಗೆ ಆಯಾಸವಾಗುವುದಿಲ್ಲ ಓಷಧಿಗಳ ಬೇರನ್ನು ತೊಳೆದು ಸೇವಿಸುತ್ತಿದ್ದರೆ ನಿಮ್ಮ ಕಂಠಮಾಧುರ್ಯವು ಕೆಡುವುದಿಲ್ಲ (೮-೯) ಮಕ್ಕಳೆ, ರಾಜನಾದ ರಾಮನು ನಿಮ್ಮ ಗಾನವನ್ನು ಕೇಳಬೇಕೆಂದು ಹೇಳಿಕಳಿಸಿದರೆ, ನೀವು ಹೋಗಿ

ದಿವಸೇ ವಿಂಶತಿಃ ಸರ್ಗಾ ಗೇಯಾ ಮಧುರಯಾ ಗಿರಾ ।
ಪ್ರಮಾಣೈರ್ಬಹುಭಿಸ್ತತ್ರ ಯಥೋದ್ದಿಷ್ಟಾ ಮಯಾ ಪುರಾ ॥ ೧೧

ಲೋಭಶ್ಚಾಪಿ ನ ಕರ್ತವ್ಯಃ ಸ್ವಲ್ಪೋಽಪಿ ಧನಕಾಂಕ್ಷಯಾ ।
ಕಿಂ ಧನೇನಾಶ್ರಮಸ್ಥಾನಾಂ ಫಲಮೂಲೋಪಜೀವಿನಾಮ್ ॥ ೧೨

ಯದಿ ಪೃಚ್ಛೇತ್ ಸ ಕಾಕುತ್ಸ್ಥೋ ಯುವಾಂ ಕಸ್ಯೇತಿ ದಾರಕೌ ।
ಆವಾಂ ವಾಲ್ಮೀಕಿಶಿಷ್ಯೌ ಸ್ವೋ ಬ್ರೂತಮೇವಂ ನರಾಧಿಪಮ್ ॥

ಇಮಾಸ್ತಂತ್ರೀಃ ಸುಮಧುರಾಃ ಸ್ಥಾನಂ ವಾಪೂರ್ವದರ್ಶನಮ್ ।
ಮೂರ್ಛಯಿತ್ವಾ ಸುಮಧುರಂ ಗಾಯೇಥಾಂ ವಿಗತಜ್ವರೌ ॥ ೧೪

ಆದಿಪ್ರಭೃತಿ ಗೇಯಂ ಸ್ಯಾನ್ನ ಚಾವಜ್ಞಾಯ ಪಾರ್ಥಿವಮ್ ।
ಪಿತಾ ಹಿ ಸರ್ವಭೂತಾನಾಂ ರಾಜಾ ಭವತಿ ಧರ್ಮತಃ ॥ ೧೫

ತದ್ಯುವಾಂ ಹೃಷ್ಟಮನಸೌ ಶ್ವಃ ಪ್ರಭಾತೇ ಸಮಾಸ್ಥಿತೌ ।
ಗಾಯೇಥಾಂ ಮಧುರಂ ಗೇಯಂ ತಂತ್ರೀಲಯಸಮನ್ವಿತಮ್ ॥ ೧೬

---

ಋಷಿಗಳೆದುರಿಗೆ ರಾಮಾಯಣ ಗಾನವನ್ನು ನಡೆಸಿರಿ ಒಂದು ದಿವಸದಲ್ಲಿ ಇಪ್ಪತ್ತು ಸರ್ಗಗಳನ್ನು ಹಾಡಬಹುದು ನಾನು ಕಲಿಸಿಕೊಟ್ಟಂತೆ ತಾಳ ಲಯಬದ್ಧವಾಗಿ ಮಧುರಸ್ವರದಿಂದ ಹಾಡಿರಿ (೧೦-೧೧) ಪ್ರತಿಫಲಾಪೇಕ್ಷೆ ಯಿಂದ ಹಣದಲ್ಲಿ ಸ್ವಲ್ಪವೂ ಅಭಿರುಚಿಯನ್ನು ಇಡಬಾರದು ಫಲಮೂಲ ಗಳಿಂದ ಜೀವಿಸುವ ಆಶ್ರಮವಾಸಿಗಳಾದ ನಮಗೆ ಹಣದಿಂದ ಆಗಬೇಕಾ ದ್ದೇನು? (೧೨) ಶ್ರೀರಾಮನು 'ನೀವು ಯಾರ ಮಕ್ಕಳು?' ಎಂದು ಕೇಳಿದರೆ, 'ನಾವು ವಾಲ್ಮೀಕಿ ಶಿಷ್ಯರು' ಎಂದು ಮಾತ್ರ ರಾಜನಿಗೆ ತಿಳಿಸಿರಿ (೧೩) ಮಕ್ಕಳೆ, ವೀಣೆಯ ತಂತಿಗಳನ್ನು ಮಧುರವಾಗಿ ನುಡಿಸುತ್ತ, ಅಪೂರ್ವ ಸ್ವರವನ್ನು ಹೊರಡಿಸುವ ವೀಣಾದಂಡದ ಸ್ಥಾನವನ್ನು ಮೀಟುತ್ತ ಧೈರ್ಯದಿಂದ ಇಂಪಾಗಿ ಹಾಡಿರಿ ಈ ರಾಮಚರಿತೆಯನ್ನು ಮೊದಲಿ ನಿಂದಲೂ ಹಾಡಬೇಕು ರಾಜನನ್ನು ಅಸಡ್ಡೆಯಿಂದ ಕಾಣಬೇಡಿರಿ ಧರ್ಮ ಶಾಸ್ತ್ರದ ಪ್ರಕಾರ ರಾಜನು ಸಕಲ ಜನರಿಗೂ ತಂದೆಯೆನಿಸಿಕೊಳ್ಳುತ್ತಾನೆ (೧೪-೧೫) ಆದ್ದರಿಂದ, ಕುಶಲವರೆ, ನೀವಿಬ್ಬರೂ ನಾಳೆ ಪ್ರಾತಃಕಾಲದಿಂದ

ಇತಿ ಸಂದಿಶ್ಯ ಬಹುಶೋ ಮುನಿಃ ಪ್ರಾಚೇತಸಸ್ತದಾ ।
ವಾಲ್ಮೀಕಿಃ ಪರಮೋದಾರಸ್ತೂಷ್ಣೀಮಾಸೀನ್ಮಹಾಯಶಾಃ ॥ ೧೭

ಸಂದಿಷ್ಟೌ ಮುನಿನಾ ತೇನ ತಾವುಭೌ ಮೈಥಿಲೀಸುತೌ ।
ತಥೈವ ಕರವಾವೇತಿ ನಿರ್ಜಗ್ಮತುರರಿಂದಮೌ ॥ ೧೮

ತಾಮದ್ಭುತಾಂ ತೌ ಹೃದಯೇ ಕುಮಾರೌ
ನಿವೇಶ್ಯ ವಾಣೀಮೃಷಿಭಾಷಿತಾಂ ತದಾ ।
ಸಮುತ್ಸುಕೌ ತೌ ಸಮುಮೂಷತುರ್ನಿಶಾಂ
ಯಥಾಶ್ವಿನೌ ಭಾರ್ಗವನೀತಿಸಂಹಿತಾಮ್ ॥ ೧೯

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರಿನವತಿತಮಃ ಸರ್ಗಃ



ಈ ರಾಮಾಯಣ ಕಾವ್ಯವನ್ನು ತಂತ್ರೀಲಯಬದ್ಧವಾಗಿ ಇಂಪಾಗಿ ಹಾಡಲಾರಂಭಿಸಿರಿ" ಎಂದು ತಿಳಿಸಿದರು ಹೀಗೆ ಉದಾರಶೀಲರೂ ಪ್ರಾಚೇತಸರೂ ಆದ ವಾಲ್ಮೀಕಿಮಹರ್ಷಿಗಳು ಲವಕುಶರಿಗೆ ಆದೇಶವನ್ನಿತ್ತು ಸುಮ್ಮನಾದರು (೧೬-೧೭) ವೀರರೂ ಜಾನಕೀತನಯರೂ ಆದ ಆ ಬಾಲಕರು "ಗುರುಗಳೆ, ಹಾಗೆಯೇ ಮಾಡುವೆವು" ಎಂದು ಹೇಳಿ ನಿರ್ಗಮಿಸಿದರು (೧೮) ಭಾರ್ಗವರ ನೀತಿಸಂಹಿತೆಯನ್ನು ಅಶ್ವಿನೀದೇವತೆಗಳು ಆಲಿಸುವಂತೆ, ಆ ಕುಮಾರರು ವಾಲ್ಮೀಕಿ ಮುನಿಗಳ ವಿಸ್ಮಯಾವಹವಾದ ವಾಣಿಯನ್ನು ಶ್ರದ್ಧೆಯಿಂದ ಆಲಿಸಿ, ನಾಳೆ ಹಾಡಬೇಕೆಂಬ ಕುತೂಹಲದಿಂದ ಆ ರಾತ್ರಿಯನ್ನು ಜೊತೆಗೂಡಿ ಕಳೆದರು (೧೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತುಮೂರನೆಯ ಸರ್ಗ



## ಚತುರ್ನವತಿತಮಃ ಸರ್ಗಃ

### ರಾಮಾಯಣಗಾನಮ್

ತೌ ರಜನ್ಯಾಂ ಪ್ರಭಾತಾಯಾಂ ಸ್ನಾತೌ ಹುತಹುತಾಶನೌ ।
ಯಥೋಕ್ತಮೃಷಿಣಾ ಪೂರ್ವಂ ಸರ್ವಂ ತತ್ರೋಪಗಾಯತಾಮ್ ॥
ತಾಂ ಸ ಶುಶ್ರಾವ ಕಾಕುತ್ಸ್ಥಃ ಪೂರ್ವಾಚಾರ್ಯವಿನಿರ್ಮಿತಾಮ್ ।
ಅಪೂರ್ವಾಂ ಪಾಠ್ಯಜಾತಿಂ ಚ ಗೇಯೇನ ಸಮಲಂಕೃತಾಮ್ ॥ ೨
ಪ್ರಮಾಣೈರ್ಬಹುಭಿರ್ಯುಕ್ತಾಂ ತಂತ್ರೀಲಯಸಮನ್ವಿತಾಮ್ ।
ಬಾಲಾಭ್ಯಾಂ ರಾಘವಃ ಶ್ರುತ್ವಾ ಕೌತೂಹಲಪರೋಽಭವತ್ ॥ ೩
ಅಥ ಕರ್ಮಾಂತರೇ ರಾಜಾ ಸಮಾಹೂಯ ಮಹಾಮುನೀನ್ ।
ಪಾರ್ಥಿವಾಂಶ್ಚ ನರವ್ಯಾಘ್ರಃ ಪಂಡಿತಾನ್ನೈಗಮಾಂಸ್ತಥಾ ॥ ೪

### ಸರ್ಗ ೯೪

ಕುಶಲವರಿಂದ ರಾಮಾಯಣದ ಗಾನ ಕುತೂಹಲಾನ್ವಿತನಾದ
ಶ್ರೀರಾಮನ ಪ್ರಶ್ನೆ ಬಾಲಕರಿಂದ ಉತ್ತರ.

ರಾತ್ರಿ ಕಳೆದು ಬೆಳಗಾಯಿತು ಕುಶಲವರು ಸ್ನಾನಮಾಡಿ- ಅಗ್ನಿಕಾರ್ಯವನ್ನು ನೆರವೇರಿಸಿ, ವಾಲ್ಮೀಕಿಮುನಿಗಳು ಹೇಳಿದಂತೆ ರಾಮಚರಿತೆಯನ್ನು ಹಾಡಲಾರಂಭಿಸಿದರು (೧) ಅವರ ಗಾನವು ಪೂರ್ವದಲ್ಲಿ ಆಚಾರ್ಯನಿರ್ಮಿತವೂ * ಅಶ್ರುತಪೂರ್ವವೂ ಷಡ್ಜಾದಿಸ್ವರಸಂಪನ್ನವೂ ಗಾನಧರ್ಮವಾದ ರಾಗದಿಂದ ಸಮನ್ವಿತವೂ ಆಗಿತ್ತು ದ್ರುತ ಮಧ್ಯಮ ವಿಲಂಬಿತಗಳೆಂಬ ವೃತ್ತಿಗಳಿಂದ ಯುಕ್ತವಾಗಿ ತಂತ್ರೀಲಯಬದ್ಧವಾಗಿತ್ತು. ಬಾಲಕರು ಹಾಡುತ್ತಿದ್ದ ಆ ಗೀತಿಯು ಶ್ರೀರಾಮನ ಕಿವಿಗೆ ಬಿದ್ದಿತು. ಅವನು ಅದರಲ್ಲಿ ಕುತೂಹಲವನ್ನು ವ್ಯಕ್ತಪಡಿಸಿದನು (೨-೩) ಆತನು ಯಜ್ಞ ಕಲಾಪಗಳ ವಿರಾಮವೇಳೆಯಲ್ಲಿ ಗಾನವನ್ನು ಕೇಳುವುದಕ್ಕಾಗಿ ಮಹರ್ಷಿ

* 'ಪೂರ್ವಾಚಾರ್ಯವಿನಿರ್ಮಿತಾಂ' ಎಂದು ಮೂಲವಿದೆ. ಪೂರ್ವದಲ್ಲಿ ಆಚಾರ್ಯರಾದ ವಾಲ್ಮೀಕಿಗಳಿಂದ ರಚಿತವಾದದ್ದು ಎಂದೂ ಪೂರ್ವಾಚಾರ್ಯನಾದ ಭರತಮುನಿಯಿಂದ ರಚಿತವಾದ ಗಾನಪ್ರಕಾರ ಎಂದೂ ಕೆಲವರ ಅಭಿಪ್ರಾಯ ಭೇದವಿದೆ

ಪೌರಾಣಿಕಾನ್ ಶಬ್ದವಿದೋ ಯೇ ಚ ವೃದ್ಧಾ ದ್ವಿಜಾತಯಃ ।
ಸ್ವರಾಣಾಂ ಲಕ್ಷಣಜ್ಞಾಂಶ್ಚ ಉತ್ಸುಕಾನ್ ದ್ವಿಜಸತ್ತಮಾನ್ ॥ ೫
ಲಕ್ಷಣಜ್ಞಾಂಶ್ಚ ಗಾಂಧರ್ವಾನ್ನೈಗಮಾಂಶ್ಚ ವಿಶೇಷತಃ ।
ಪಾದಾಕ್ಷರಸಮಾಸಜ್ಞಾಂಶ್ಛಂದಸ್ಸು ಪರಿನಿಷ್ಠಿತಾನ್ ॥ ೬
ಕಲಾಮಾತ್ರಾವಿಭಾಗಜ್ಞಾನ್ ಜ್ಯೋತಿಷೇ ಚ ಪರಂ ಗತಾನ್ ।
ಕ್ರಿಯಾಕಲ್ಪವಿದಶ್ಚೈವ ತಥಾ ಕಾವ್ಯವಿದೋ ಜನಾನ್ ॥ ೭
ಭಾಷಾಜ್ಞಾನಿಂಗಿತಜ್ಞಾಂಶ್ಚ ನೈಗಮಾಂಶ್ಚಾಪ್ಯಶೇಷತಃ ।
ಹೇತೂಪಚಾರಕುಶಲಾನ್ ವಚನೇ ಚಾಪಿ ಹೈತುಕಾನ್ ॥ ೮
ಛಂದೋವಿದಃ ಪುರಾಣಜ್ಞಾನ್ ವೈದಿಕಾನ್ ದ್ವಿಜಸತ್ತಮಾನ್ ।
ಚಿತ್ರಜ್ಞಾನ್ ವೃತ್ತಸೂತ್ರಜ್ಞಾನ್ ಗೀತನೃತ್ಯವಿಶಾರದಾನ್ ॥ ೯

---

ಗಳನ್ನೂ ರಾಜರನ್ನೂ ಶಾಸ್ತ್ರಜ್ಞರಾದ ಪಂಡಿತರನ್ನೂ ಪೌರರನ್ನೂ ಬರಮಾಡಿದನು ಪೌರಾಣಿಕರನ್ನೂ ವೈಯಾಕರಣರನ್ನೂ ಹಿರಿಯರಾದ ಬ್ರಾಹ್ಮಣರನ್ನೂ ಸ್ವರಲಕ್ಷಣಗಳನ್ನು ಬಲ್ಲ ಸಂಗೀತ ಶಾಸ್ತ್ರಜ್ಞರನ್ನೂ ಕುತೂಹಲಿಗಳಾದ ದ್ವಿಜರನ್ನೂ ಕರೆಸಿದನು (೪-೫) ಸಾಮುದ್ರಿಕ ಶಾಸ್ತ್ರಾಭಿಜ್ಞರನ್ನೂ ಹಾಡುಗಾರರನ್ನೂ ಪೌರರನ್ನೂ ಬರಮಾಡಿಕೊಂಡನು ಹಾಗೆಯೇ ಅವನ ಆದೇಶದಂತೆ ಛಂದಶ್ಶಾಸ್ತ್ರದಲ್ಲಿ ಪರಿನಿಷ್ಠಿತರಾಗಿ ಶ್ಲೋಕಪಾದಗಳ ಅಕ್ಷರವಿನ್ಯಾಸವನ್ನರಿತವರೂ ಸ್ವರಗಳ ಮಾತ್ರಾನಿರ್ಣಯದಲ್ಲಿ ಕುಶಲರೂ ಆದ ಜನರು ಬಂದರು ಜ್ಯೋತಿಶ್ಶಾಸ್ತ್ರದಲ್ಲಿ ನಿಷ್ಣಾತರೂ ಕರ್ಮಪ್ರಯೋಗವನ್ನು ಪ್ರತಿಪಾದಿಸುವ ಕಲ್ಪಶಾಸ್ತ್ರವನ್ನರಿತವರೂ ಕಾವ್ಯಜ್ಞರಾದ ಸಾಹಿತಿಗಳೂ ಆಗಮಿಸಿದರು (೬-೭) ವಿವಿಧ ಭಾಷೆಗಳನ್ನು ಬಲ್ಲವರೂ ಗ್ರಂಥದ ಇಂಗಿತವನ್ನರಿಯುವ ಕುಶಲರೂ ವಾಣಿಜ್ಯೋದ್ಯಮಿಗಳೂ ಬಂದರು ವ್ಯವಹಾರದಲ್ಲಿ ಯುಕ್ತಿಯನ್ನು ಪ್ರದರ್ಶಿಸಬಲ್ಲ ವ್ಯವಹಾರಚತುರರೂ ಮಾತಿನಲ್ಲಿ ಯುಕ್ತಿಯನ್ನು ಪ್ರದರ್ಶಿಸಬಲ್ಲ ತಾರ್ಕಿಕರೂ ಬಂದು ಸೇರಿದರು (೮) ಗಾಯತ್ರ್ಯಾದಿ ಛಂದಸ್ಸುಗಳನ್ನು ಬಲ್ಲವರೂ ಪ್ರಾಚೀನಕಥೆಗಳನ್ನರಿತವರೂ ವೇದಜ್ಞರಾದ ವಿಪ್ರರೂ ಬಂದರು ಶ್ರೀರಾಮನ ಆದೇಶದಂತೆ ಚಿತ್ರಕಲಾಭಿಜ್ಞರೂ ಸದಾಚಾರ ಶಾಸ್ತ್ರಜ್ಞರೂ ಗೀತನೃತ್ಯವಿಶಾರದರೂ

ಶಾಸ್ತ್ರಜ್ಞಾನ್ನೀತಿನಿಪುಣಾನ್ ವೇದಾಂತಾರ್ಥಪ್ರಬೋಧಕಾನ್ ।
ಏತಾನ್ ಸರ್ವಾನ್ ಸಮಾನೀಯ ಗಾತಾರೌ ಸಮವೇಶಯತ್ ॥ ೧೦

ದೃಷ್ಟ್ವಾ ಮುನಿಗಣಾಃ ಸರ್ವೇ ಪಾರ್ಥಿವಾಶ್ಚ ಮಹೌಜಸಃ ।
ಪಿಬಂತ ಇವ ಚಕ್ಷುರ್ಭ್ಯಾಂ ರಾಜಾನಂ ಗಾಯಕೌ ಚ ತೌ ॥ ೧೧

ಊಚುಃ ಪರಸ್ಪರಂ ಚೇದಂ ಸರ್ವ ಏವ ಸಮಂತತಃ ।
ಉಭೌ ರಾಮಸ್ಯ ಸದೃಶೌ ಬಿಂಬಾದ್ಬಿಂಬಮಿವೋತ್ಥಿತೌ ॥ ೧೨

ಜಟಿಲೌ ಯದಿ ನ ಸ್ಯಾತಾಂ ನ ವಲ್ಕಲಧರೌ ಯದಿ ।
ವಿಶೇಷಂ ನಾಧಿಗಚ್ಛಾಮೋ ಗಾಯತೋ ರಾಘವಸ್ಯ ಚ ॥ ೧೩

ತೇಷಾಂ ಸಂವದತಾಮೇವಂ ಶ್ರೋತ್ರೃಣಾಂ ಹರ್ಷವರ್ಧನಮ್ ।
ಗೇಯಂ ಪ್ರಚಕ್ರತುಸ್ತತ್ರ ತಾವುಭೌ ಮುನಿದಾರಕೌ ॥ ೧೪

ತತಃ ಪ್ರವೃತ್ತಂ ಮಧುರಂ ಗಾಂಧರ್ವಮತಿಮಾನುಷಮ್ ।
ನ ಚ ತೃಪ್ತಿಂ ಯಯುಃ ಸರ್ವೇ ಶ್ರೋತಾರೋ ಗಾನಸಂಪದಾ ॥

---

ಶಾಸ್ತ್ರವಿದರೂ ನೀತಿಶಾಸ್ತ್ರವಿದರೂ ವೇದಾಂತಿಗಳೂ ಆಗಮಿಸಿದರು ಹೀಗೆ ಅವರೆಲ್ಲರನ್ನೂ ಬರಮಾಡಿಕೊಂಡು ಶ್ರೀರಾಮನು ಹಾಡುವ ಕುಶಲವರನ್ನು ಸಭಾಮಧ್ಯದಲ್ಲಿ ಕರೆಸಿ ಕುಳ್ಳಿರಿಸಿದನು (೯-೧೦) ಆಗ ಋಷಿಗಳೂ ರಾಜರೂ ಒಮ್ಮೆ ಶ್ರೀರಾಮನನ್ನೂ ಒಮ್ಮೆ ಗಾಯಕರನ್ನೂ ನೆಟ್ಟಕಣ್ಣುಗಳಿಂದ ಕುಡಿದುಬಿಡುವರೋ ಎಂಬಂತೆ ನೋಡತೊಡಗಿದರು ! (೧೧) ಸಕಲರೂ "ಎಲಾ ! ಏನಿದು ! ಇಬ್ಬರು ಬಾಲಕರೂ ಆಕೃತಿಯಲ್ಲಿ ಶ್ರೀರಾಮನಂತೆಯೇ ಇದ್ದಾರೆ ಮೂಲಬಿಂಬದಂತೆ ಬರೆದ ಪ್ರತಿಬಿಂಬದಂತಿದ್ದಾರೆ! ಇವರು ಜಟೆಯನ್ನೂ ನಾರು ಬಟ್ಟೆಯನ್ನೂ ಧರಿಸದಿದ್ದರ, ರಾಘವನಿಗೂ ಇವರಿಗೂ ಇರುವ ವ್ಯತ್ಯಾಸವೇ ನಮಗೆ ಗೋಚರಿಸುತ್ತಿರಲಿಲ್ಲ!" ಎಂದು ಮಾತಾಡಿಕೊಳ್ಳುತ್ತಿದ್ದರು (೧೨-೧೩) ಹೀಗೆ ಅವರೆಲ್ಲರೂ ಮಾತಾಡಿಕೊಳ್ಳುತ್ತಿರುವಾಗ, ಮುನಿಶಿಷ್ಯರಾದ ಆ ಬಾಲಕರು ಶ್ರೋತೃಗಳಿಗೆ ಆನಂದದಾಯಕವಾದ ಗೇಯವನ್ನಾರಂಭಿಸಿದರು ಮನುಷ್ಯಲೋಕದ ಮಿತಿಗೆ ಮೀರಿದ ಮಧುರವಾದ ಗಾಂಧರ್ವಗಾನವು ತೊಡಗಿತು ಗಾನಸಂಪತ್ತು ಹೇಗಿತ್ತೆಂದರೆ, ಎಷ್ಟು ಕೇಳಿದರೂ ಶ್ರೋತೃಗಳಿಗೆ ತೃಪ್ತಿಯೇ ಆಗಲಿಲ್ಲ ! (೧೪-೧೫).

ಪ್ರವೃತ್ತಮಾದಿತಃ ಪೂರ್ವಸರ್ಗಂ ನಾರದದರ್ಶಿತಮ್ ।
ತತಃ ಪ್ರಭೃತಿ ಸರ್ಗಾಂಶ್ಚ ಯಾವದ್ವಿಂಶತ್ಯಗಾಯತಾಮ್ ॥ ೧೬

ತತೋಽಪರಾಹ್ಣಸಮಯೇ ರಾಘವಃ ಸಮಭಾಷತ ।
ಶ್ರುತ್ವಾ ವಿಂಶತಿಸರ್ಗಾಂಸ್ತಾನ್ ಭ್ರಾತರಂ ಭ್ರಾತೃವತ್ಸಲಃ ॥ ೧೭

ಅಷ್ಟಾದಶಸಹಸ್ರಾಣಿ ಸುವರ್ಣಸ್ಯ ಮಹಾತ್ಮನೋಃ ।
ಪ್ರಯಚ್ಛ ಶೀಘ್ರಂ ಕಾಕುತ್ಸ್ಥ ಯದನ್ಯದಭಿಕಾಂಕ್ಷಿತಮ್ ॥ ೧೮

ದದೌ ಶೀಘ್ರಂ ಸ ಕಾಕುತ್ಸ್ಥೋ ಬಾಲಯೋರ್ವೈ ಪೃಥಕ್ ಪೃಥಕ್
ದೀಯಮಾನಂ ಸುವರ್ಣಂ ತು ನಾಗೃಹ್ಣೀತಾಂ ಕುಶೀಲವೌ ॥ ೧೯

ಊಚತುಶ್ಚ ಮಹಾತ್ಮಾನೌ ಕಿಮನೇನೇತಿ ವಿಸ್ಮಿತೌ ।
ವನ್ಯೇನ ಫಲಮೂಲೇನ ನಿರತೌ ವನವಾಸಿನೌ ॥ ೨೦

ಸುವರ್ಣೇನ ಹಿರಣ್ಯೇನ ಕಿಂ ಕರಿಷ್ಯಾವಹೇ ವನೇ ।
ತಥಾ ತಯೋಃ ಪ್ರಬ್ರುವತೋಃ ಕುತೂಹಲಸಮನ್ವಿತಾಃ ॥ ೨೧

---

ರಾಮಾಯಣದಲ್ಲಿ ನಾರದಮುನಿಗಳಿಂದ ಉಪದಿಷ್ಟವಾದ ಪ್ರಥಮ ಸರ್ಗದಿಂದ ಹಿಡಿದು ಇಪ್ಪತ್ತು ಸರ್ಗಗಳನ್ನು ಕುಶಲವರು ಹಾಡಿದರು ಅಪರಾಹ್ಣದ ಸಮಯವಾಗಿತ್ತು ರಾಘವನು ಇಪ್ಪತ್ತು ಸರ್ಗಗಳನ್ನು ಕೇಳಿ ತಮ್ಮನನ್ನು ಕುರಿತು "ಭರತ, * ಮಹಾತ್ಮರಾದ ಈ ಬಾಲಕರಿಗೆ ಹದಿನೆಂಟು ಸಾವಿರ ಚಿನ್ನದ ನಾಣ್ಯಗಳನ್ನು ಈಗಲೇ ಕೊಡು! ಅವರಿಗೆ ಇನ್ನೇನು ಬೇಕೋ ಅದನ್ನೂ ಸಲ್ಲಿಸು' ಎಂದು ತಿಳಿಸಿದನು (೧೬-೧೮) ಒಡನೆಯೇ ಭರತನು ಬಾಲಕರಲ್ಲಿ ಒಬ್ಬೊಬ್ಬನಿಗೂ ಹದಿನೆಂಟು ಸಾವಿರ ಸುವರ್ಣ ನಾಣ್ಯಗಳನ್ನು ಕೊಡುವುದಕ್ಕೆ ಬಂದನು ಆದರೆ ಕುಶಲವರು ಅದನ್ನು ಸ್ವೀಕರಿಸಲಿಲ್ಲ ಧೀರ ಚೇತನರಾದ ಆ ಬಾಲಕರು ವಿಸ್ಮಿತರಾಗಿ "ನಾವು ವನವಾಸಿಗಳು. ಕಾಡಿನಲ್ಲಿರುವ ಫಲಮೂಲಗಳನ್ನು ತಿನ್ನತಕ್ಕವರು (೧೯-೨೦) ನಾವು ಈ ಚಿನ್ನ ಬೆಳ್ಳಿಗಳನ್ನು ತೆಗೆದುಕೊಂಡು ಕಾಡಿನಲ್ಲಿ ಮಾಡತಕ್ಕದ್ದೇನು!"

* ಮೂಲದಲ್ಲಿ ಹೆಸರನ್ನು ಹೇಳಿಲ್ಲ ಭರತನಾಗಿರಬಹುದೆಂಬುದು ಊಹೆ

ಶ್ರೋತಾರಶ್ಚೈವ ರಾಮಶ್ಚ ಸರ್ವ ಏವ ಸುವಿಸ್ಮಿತಾಃ ।
ತಸ್ಯ ಚೈವಾಗಮಂ ರಾಮಃ ಕಾವ್ಯಸ್ಯ ಶ್ರೋತುಮುತ್ಸುಕಃ ॥ ೨೨

ಪಪ್ರಚ್ಛ ತೌ ಮಹಾತೇಜಾಸ್ತಾವುಭೌ ಮುನಿದಾರಕೌ ।
ಕಿಂಪ್ರಮಾಣಮಿದಂ ಕಾವ್ಯಂ ಕಾ ಪ್ರತಿಷ್ಠಾ ಮಹಾತ್ಮನಃ ॥ ೨೩

ಕರ್ತಾ ಕಾವ್ಯಸ್ಯ ಮಹತಃ ಕ್ವ ಚಾಸೌ ಮುನಿಪುಂಗವಃ ।
ಪೃಚ್ಛಂತಂ ರಾಘವಂ ವಾಕ್ಯಮೂಚತುರ್ಮುನಿದಾರಕೌ ॥ ೨೪

ವಾಲ್ಮೀಕಿರ್ಭಗವಾನ್ ಕರ್ತಾ ಸಂಪ್ರಾಪ್ತೋ ಯಜ್ಞಸಂವಿಧಾಮ್ ।
ಯೇನೇದಂ ಚರಿತಂ ತುಭ್ಯಮಶೇಷಂ ಸಂಪ್ರದರ್ಶಿತಮ್ ॥ ೨೫

ಸಂನಿಬದ್ಧಂ ಹಿ ಶ್ಲೋಕಾನಾಂ ಚತುರ್ವಿಂಶತ್ಸಹಸ್ರಕಮ್ ।
ಉಪಾಖ್ಯಾನಶತಂ ಚೈವ ಭಾರ್ಗವೇಣ ತಪಸ್ವಿನಾ ॥ ೨೬

---

ಎಂದರು ಬಾಲಕರು ಹೀಗೆ ನುಡಿಯಲಾಗಿ ಕುತೂಹಲಗೊಂಡ ಶ್ರೀರಾಮನೂ ಸಕಲ ಶ್ರೋತೃಗಳೂ ಆಶ್ಚರ್ಯಭರಿತರಾದರು ಆಗ ಶ್ರೀರಾಮನು ಅವರಿಗೆ ರಾಮಾಯಣಕಾವ್ಯವು ಹೇಗೆ ಪ್ರಾಪ್ತವಾಯಿತೆಂಬುದನ್ನು ತಿಳಿಯಲು ಉತ್ಸುಕನಾಗಿ "ಎಲೈ ಮುನಿಬಾಲಕರೆ! ಈ ಕಾವ್ಯವು ಎಷ್ಟಿದೆ? ಮಹಾತ್ಮನಾದ ಕವಿಯು ಆರಿಸಿಕೊಂಡ ವಿಷಯ ಎಲ್ಲಿಯವರೆಗೆ? (೨೧-೨೩)-ಈ ಮಹಾಕಾವ್ಯವನ್ನು ರಚಿಸಿದ ಮುನಿಪುಂಗವನು ಯಾರು? ಎಲ್ಲಿದ್ದಾನೆ?" ಎಂದು ಕೇಳಿದನು ಆಗ ಕುಶಲವರು "ಮಹಾರಾಜ, ಇದನ್ನು ರಚಿಸಿದವರು ಭಗವಾನ್ ವಾಲ್ಮೀಕಿ ಮಹರ್ಷಿಗಳು ಅವರು ಈ ಯಜ್ಞಕ್ಕೆ ದಯಮಾಡಿಸಿದ್ದಾರೆ ಅವರು ಈ ಕಾವ್ಯದಲ್ಲಿ ನಿನ್ನ ಚರಿತ್ರವೆಲ್ಲವನ್ನೂ ವರ್ಣಿಸಿದ್ದಾರೆ (೨೪-೨೫) ಇದರಲ್ಲಿ ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳುಂಟು. ಒಂದು ನೂರು ಉಪಾಖ್ಯಾನಗಳಿವೆ ಇದೆಲ್ಲವನ್ನೂ ತಪಸ್ವಿಗಳಾದ

ಆದಿಪ್ರಭೃತಿ ವೈ ರಾಜನ್ ಪಂಚ ಸರ್ಗಶತಾನಿ ಚ ।
ಕಾಂಡಾನಿ ಷಟ್ ಕೃತಾನೀಹ ಸೋತ್ತರಾಣಿ ಮಹಾತ್ಮನಾ ॥ ೨೭

ಕೃತಾನಿ ಗುರುಣಾಸ್ಮಾಕಮೃಷಿಣಾ ಚರಿತಂ ತವ ।
ಪ್ರತಿಷ್ಠಾ ಜೀವಿತಂ ಯಾವತ್ತಾವತ್ ಸರ್ವಸ್ಯ ವರ್ತತೇ ॥ ೨೮

ಯದಿ ಬುದ್ಧಿಃ ಕೃತಾ ರಾಜನ್ ಶ್ರವಣಾಯ ಮಹಾರಥ ।
ಕರ್ಮಾಂತರೇ ಕ್ಷಣೀಭೂತಸ್ತಚ್ಛೃಣುಷ್ವ ಸಹಾನುಜಃ ॥ ೨೯

ಬಾಢಮಿತ್ಯಬ್ರವೀದ್ರಾಮಸ್ತೌ ಚಾನುಜ್ಞಾಪ್ಯ ರಾಘವಮ್ ।
ಪ್ರಹೃಷ್ಟೌ ಜಗ್ಮತುಃ ಸ್ಥಾನಂ ಯತ್ರಾಸ್ತೇ ಮುನಿಪುಂಗವಃ ॥ ೩೦

ರಾಮೋಽಪಿ ಮುನಿಭಿಃ ಸಾರ್ಧಂ ಪಾರ್ಥಿವೈಶ್ಚ ಮಹಾತ್ಮಭಿಃ ।
ಶ್ರುತ್ವಾ ತದ್ಗೀತಿಮಾಧುರ್ಯಂ ಕರ್ಮಶಾಲಾಮುಪಾಗಮತ್ ॥ ೩೧

---

ಭಾರ್ಗವರು* ರಚಿಸಿದ್ದಾರೆ ಮಹಾರಾಜ, ಮೊದಲಿನಿಂದ ಒಟ್ಟು ಐನೂರು ಸರ್ಗಗಳೂ ಆರು ಕಾಂಡಗಳೂ ಇವೆ ಅಲ್ಲದೆ ಉತ್ತರಕಾಂಡವನ್ನೂ ಆ ಮಹಾತ್ಮರು ರಚಿಸಿದ್ದಾರೆ (೨೬-೨೭) ನಮ್ಮ ಗುರುಗಳಾದ ಮಹರ್ಷಿಗಳು ನಿನ್ನ ಚರಿತೆಯನ್ನು ವರ್ಣಿಸಿದ್ದಾರೆ ಕಾವ್ಯನಾಯಕನಾದ ನಿನ್ನ ಜೀವಿತಪರ್ಯಂತವೂ ನಡೆದ ಘಟನೆಯೆಲ್ಲವೂ ಇದರಲ್ಲಿ ನಿಬದ್ಧವಾಗಿದೆ (೨೮) ಇದನ್ನು ಕೇಳಲು ನಿನಗೆ ಇಚ್ಛೆಯಾಗಿದ್ದರೆ, ಯಾಗಕಾರ್ಯದ ವಿರಾಮ ವೇಳೆಯಲ್ಲಿ ಸೋದರರೊಂದಿಗೆ ಸಂತೋಷದಿಂದ ಕೇಳಬಹುದು" ಎಂದು ತಿಳಿಸಿದರು "ಒಳ್ಳೆಯದು. ಹಾಗೆಯೇ ಆಗಲಿ" ಎಂದು ರಾಘವನು ಹೇಳಿದನು ಕುಶಲವರು ರಾಘವನ ಅನುಮತಿಯನ್ನು ಪಡೆದು ವಾಲ್ಮೀಕಿ ಮಹರ್ಷಿಗಳಿದ್ದಲ್ಲಿಗೆ ಹೋದರು (೨೯-೩೦) ಇತ್ತ ಶ್ರೀರಾಮನೂ ಸಹ ಮುನಿಗಳೊಡನೆಯೂ ರಾಜರೊಡನೆಯೂ ಕುಳಿತು ಆ ಗೀತಮಾಧುರ್ಯ

---

* ಭೃಗುವಂಶೀಯನಾದ ಪ್ರಚೇತಸ್ಸಿನ ಪುತ್ರರಾದ್ದರಿಂದ ವಾಲ್ಮೀಕಿಗಳು ಭಾರ್ಗವರು. ವಸ್ತುತಃ ಪ್ರಚೇತಸ್ಸೆಂದರೆ ವರುಣ ಅವನ ಮಗ ಭೃಗು ಅವರ ವಂಶಜರಾದ್ದರಿಂದ ಪ್ರಾಚೇತಸ, ಭಾರ್ಗವ ಎಂಬ ಎರಡು ಹೆಸರುಗಳೂ ಉಂಟು.

ಶುಶ್ರಾವ ತತ್ತಾಲಲಯೋಪಪನ್ನಂ
ಸರ್ಗಾನ್ವಿತಂ ಸುಸ್ವರಶಬ್ದಯುಕ್ತಮ್ ।
ತಂತ್ರೀಲಯವ್ಯಂಜನಯೋಗಯುಕ್ತಂ
ಕುಶೀಲವಾಭ್ಯಾಂ ಪರಿಗೀಯಮಾನಮ್ ॥ ೩೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುರ್ನವತಿತಮಃ ಸರ್ಗಃ



ವನ್ನು ಆಸ್ವಾದಿಸಿದ ಮೇಲೆ, ಯಾಗಶಾಲೆಯನ್ನು ಪ್ರವೇಶಿಸಿದನು ಈ ಪ್ರಕಾರವಾಗಿ ಶ್ರೀರಾಮನು ತಾಳಲಯಬದ್ಧವಾಗಿಯೂ ಸರ್ಗವಿಭಾಗಸಹಿತವಾಗಿಯೂ ಸುಸ್ವರ ಸುಶಬ್ದಗಳಿಂದ ಕೂಡಿಯೂ ತಂತ್ರೀಲಯಾದ್ಯನ್ವಿತವಾಗಿಯೂ ಕುಶಲವರು ಹಾಡಿದ ರಾಮಾಯಣವನ್ನು ಕೇಳಿದನು (೩೧-೩೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತುನಾಲ್ಕನೆಯ ಸರ್ಗ



## ಪಂಚನವತಿತಮಃ ಸರ್ಗಃ

### ವಾಲ್ಮೀಕಿದೂತಪ್ರೇಷಣಮ್

ರಾಮೋ ಬಹೂನ್ಯಹಾನ್ಯೇವಂ ತದ್ಗೀತಂ ಪರಮಂ ಶುಭಮ್ ।
ಶುಶ್ರಾವ ಮುನಿಭಿಃ ಸಾರ್ಧಂ ಪಾರ್ಥಿವೈಃ ಸಹ ವಾನರೈಃ ॥ ೧

ತಸ್ಮಿನ್ ಗೀತೇ ತು ವಿಜ್ಞಾಯ ಸೀತಾಪುತ್ರೌ ಕುಶೀಲವೌ ।
ತಸ್ಯಾಃ ಪರಿಷದೋ ಮಧ್ಯೇ ರಾಮೋ ವಚನಮಬ್ರವೀತ್ ॥ ೨

ದೂತಾನ್ ಶುದ್ಧಸಮಾಚಾರಾನಾಹೂಯಾತ್ಮಮನೀಷಯಾ ।
ಮದ್ವಚೋ ಬ್ರೂತ ಗಚ್ಛಧ್ವಮಿತೋ ಭಗವತೋಽಂತಿಕಮ್ ॥ ೩

ಯದಿ ಶುದ್ಧಸಮಾಚಾರಾ ಯದಿ ವಾ ವೀತಕಲ್ಮಷಾ ।
ಕರೋತ್ವಿಹಾತ್ಮನಃ ಶುದ್ಧಿಮನುಮಾನ್ಯ ಮಹಾಮುನಿಮ್ ॥ ೪

### ಸರ್ಗ ೯೫

ಕುಶಲವರು ತನ್ನ ಮಕ್ಕಳೆಂಬುದನ್ನರಿತ ಶ್ರೀರಾಮನು, ಸಭಾಮಧ್ಯದಲ್ಲಿ ಸೀತೆಯು ತನ್ನ ಚಾರಿತ್ರ್ಯದ ವಿಷಯದಲ್ಲಿ ಶಪಥಮಾಡಿದರೆ ಅವಳನ್ನು ಅಂಗೀಕರಿಸುವುದಾಗಿ ವಾಲ್ಮೀಕಿಮುನಿಗಳಿಗೆ ಹೇಳಿಕಳಿಸುವುದು

ಶ್ರೀರಾಮನು ಮುನಿ ಪಾರ್ಥಿವ ವಾನರರಿಂದ ಸಮೇತನಾಗಿ ಬಹಳ ದಿನಗಳವರೆಗೆ ಪರಮ ಶುಭಕರವಾದ ರಾಮಾಯಣದ ಗಾನವನ್ನು ಕೇಳುತ್ತಿದ್ದನು ಹೀಗಿರಲಾಗಿ ಕುಶಲವರು ಸೀತಾಪುತ್ರರೆಂಬುದು ಅವನಿಗೆ ತಿಳಿಯಿತು (೧-೨) ಅನಂತರ ತನ್ನ ಇಚ್ಛಾನುಸಾರವಾಗಿ ಶುದ್ಧಚಾರಿತ್ರರಾದ ದೂತರನ್ನು ಕರೆದು ಸಭಾಮಧ್ಯದಲ್ಲಿ ಹೀಗೆಂದನು "ಎಲೈ ದೂತರೆ, ಭಗವಾನ್ ವಾಲ್ಮೀಕಿಮಹರ್ಷಿಗಳ ಬಳಿಗೆ ಹೋಗಿ ನಾನು ಹೇಳಿದ್ದೇನೆಂದು ಈ ಮಾತನ್ನು ತಿಳಿಸಿರಿ 'ಸೀತೆಯು ಶುದ್ಧಚಾರಿತ್ರಳೂ ದೋಷರಹಿತಳೂ ಆಗಿರುವುದಾದರೆ, ವಾಲ್ಮೀಕಿಮುನಿಗಳ ಅನುಜ್ಞೆಯನ್ನು ಪಡೆದು ತನ್ನ

ಛಂದಂ ಮುನೇಶ್ಚ ವಿಜ್ಞಾಯ ಸೀತಾಯಾಶ್ಚ ಮನೋಗತಮ್ ।
ಪ್ರತ್ಯಯಂ ದಾತುಕಾಮಾಯಾಸ್ತತಃ ಶಂಸತ ಮೇ ಲಘು ॥ ೫

ಶ್ವಃ ಪ್ರಭಾತೇ ತು ಶಪಥಂ ಮೈಥಿಲೀ ಜನಕಾತ್ಮಜಾ ।
ಕರೋತು ಪರಿಷನ್ಮಧ್ಯೇ ಶೋಧನಾರ್ಥಂ ಮಮೈವ ಚ ॥ ೬

ಶ್ರುತ್ವಾ ತು ರಾಘವಸ್ಯೈತದ್ವಚಃ ಪರಮಮದ್ಭುತಮ್ ।
ದೂತಾಃ ಸಂಪ್ರಯಯುರ್ವಾಟಂ ಯತ್ರಾಸ್ತೇ ಮುನಿಪುಂಗವಃ ॥ ೭

ತೇ ಪ್ರಣಮ್ಯ ಮಹಾತ್ಮಾನಂ ಜ್ವಲಂತಮಮಿತಪ್ರಭಮ್ ।
ಊಚುಸ್ತೇ ರಾಮವಾಕ್ಯಾನಿ ಮೃದೂನಿ ಮಧುರಾಣಿ ಚ ॥ ೮

ತೇಷಾಂ ತದ್ವ್ಯಾಹೃತಂ ಶ್ರುತ್ವಾ ರಾಮಸ್ಯ ಚ ಮನೋಗತಮ್ ।
ವಿಜ್ಞಾಯ ಸುಮಹಾತೇಜಾ ಮುನಿರ್ವಾಕ್ಯಮಥಾಬ್ರವೀತ್ ॥ ೯

ಏವಂ ಭವತು ಭದ್ರಂ ವೋ ಯಥಾ ವದತಿ ರಾಘವಃ ।
ತಥಾ ಕರಿಷ್ಯತೇ ಸೀತಾ ದೈವತಂ ಹಿ ಪತಿಃ ಸ್ತ್ರಿಯಾಃ ॥ ೧೦

---

ಶುದ್ಧತೆಯನ್ನು ತೋರಿಸಿಕೊಡಲಿ' ಎಂದು ಹೇಳಿರಿ (೩-೪) ಆಮೇಲೆ ಮುನಿಗಳ ಅಭಿಪ್ರಾಯವನ್ನೂ ನಂಬಿಕೆಯನ್ನು ಹುಟ್ಟಿಸಬೇಕಾದ ಸೀತೆಯ ಮನೋಗತವನ್ನೂ ತಿಳಿದು ಏನಾಯಿತೆಂಬುದನ್ನು ಶೀಘ್ರವಾಗಿ ನನಗೆ ತಿಳಿಸಿರಿ ಜನಕಾತ್ಮಜೆಯಾದ ಮೈಥಿಲಿಯು ತನ್ನ ಪರಿಶುದ್ಧತೆಯನ್ನು ತೋರಿಸುವುದಕ್ಕಾಗಿಯೂ ನನಗೆ ಬಂದ ಅಪವಾದವನ್ನು ಹೋಗಲಾಡಿಸುವುದಕ್ಕಾಗಿಯೂ ಸಭಾಮಧ್ಯದಲ್ಲಿ ನಾಳೆ ಪ್ರಾತಃಕಾಲ ಶಪಥವನ್ನು ಮಾಡಬೇಕು" ಎಂದು ಆಜ್ಞಾಪಿಸಿದನು (೫-೬) ರಾಘವನ ಆಶ್ಚರ್ಯಜನಕವಾದ ಈ ವಾಣಿಯನ್ನು ಕೇಳಿ, ದೂತರು ವಾಲ್ಮೀಕಿಗಳಿದ್ದ ಪರ್ಣಶಾಲೆಗೆ ಹೋದರು ತಪೋಬಲದಿಂದ ಉಜ್ಜ್ವಲವಾಗಿ ಬೆಳಗುತ್ತಿದ್ದ ಆ ಮಹಾತ್ಮರನ್ನು ಕಂಡು, ಶ್ರೀರಾಮನಾಡಿದ ಮಾತುಗಳನ್ನು ಮೃದುಮಧುರವಾಗಿ ನಿವೇದಿಸಿದರು (೭-೮) ಮುನಿಗಳು ದೂತರ ಮಾತನ್ನಾಲಿಸಿ ಶ್ರೀರಾಮನ ಮನೋಗತವನ್ನು ತಿಳಿದು "ದೂತರೆ, ಒಳ್ಳೆಯದು ಹಾಗೆಯೇ ಆಗಲಿ. ರಾಘವನು ಹೇಳಿದಂತೆ ಸೀತೆಯು ಮಾಡುವಳು. ಮಹಿಳೆಗೆ ಪತಿಯೇ

*

ತಥೋಕ್ತ್ವಾ ಮುನಿನಾ ಸರ್ವೇ ರಾಮದೂತಾ ಮಹೌಜಸಃ ।
ಪ್ರತ್ಯೇತ್ಯ ರಾಘವಂ ಕ್ಷಿಪ್ರಂ ಮುನಿವಾಕ್ಯಂ ಬಭಾಷಿರೇ ॥ ೧೧
ತತಃ ಪ್ರಹೃಷ್ಟಃ ಕಾಕುತ್ಸ್ಥಃ ಶ್ರುತ್ವಾ ವಾಕ್ಯಂ ಮಹಾತ್ಮನಃ ।
ಋಷೀಂಸ್ತತ್ರ ಸಮೇತಾಂಶ್ಚ ರಾಜ್ಞಶ್ಚೈವಾಭ್ಯಭಾಷತ ॥ ೧೨
ಭಗವಂತಃ ಸಶಿಷ್ಯಾ ವೈ ಸಾನುಗಾಶ್ಚ ನರಾಧಿಪಾಃ ।
ಪಶ್ಯಂತು ಸೀತಾಶಪಥಂ ಯಶ್ಚೈವಾನ್ಯೋಽಪಿ ಕಾಂಕ್ಷತೇ ॥ ೧೩
ತಸ್ಯ ತದ್ವಚನಂ ಶ್ರುತ್ವಾ ರಾಘವಸ್ಯ ಮಹಾತ್ಮನಃ ।
ಸರ್ವೇಷಾಮೃಷಿಮುಖ್ಯಾನಾಂ ಸಾಧುವಾದೋ ಮಹಾನಭೂತ್ ॥
ರಾಜಾನಶ್ಚ ಮಹಾತ್ಮಾನಂ ಪ್ರಶಂಸಂತಿ ಸ್ಮ ರಾಘವಮ್ ।
ಉಪಪನ್ನಂ ನರಶ್ರೇಷ್ಠ ತ್ವಯ್ಯೇವ ಭುವಿ ನಾನ್ಯತಃ ॥ ೧೫
ಏವಂ ವಿನಿಶ್ಚಯಂ ಕೃತ್ವಾ ಶ್ವೋಭೂತ ಇತಿ ರಾಘವಃ ।
ವಿಸರ್ಜಯಾಮಾಸ ತದಾ ಸರ್ವಾಂಸ್ತಾನ್ ಶತ್ರುಸೂದನಃ ॥ ೧೬

---

ದೇವತೆಯಲ್ಲವೆ ? " ಎಂದರು (೯-೧೦) ಒಡನೆಯೇ ದೂತರು ಹಿಂದಿರುಗಿ ಬಂದು ಮುನಿಗಳ ಮಾತನ್ನು ಶ್ರೀರಾಮನಿಗೆ ಅರಿಕೆಮಾಡಿದರು ವಾಲ್ಮೀಕಿ ಮುನಿಗಳಾಡಿದ ನುಡಿಯನ್ನು ಕೇಳಿ ಕಾಕುತ್ಸ್ಥನಿಗೆ ಹರ್ಷವಾಯಿತು ಆತನು ಅಲ್ಲಿ ನೆರೆದಿದ್ದ ಋಷಿಗಳನ್ನೂ ರಾಜರನ್ನೂ ಕುರಿತು " ಪೂಜ್ಯರಾದ ಮುನಿಗಳೆ, ನೀವು ಶಿಷ್ಯಸಮೇತರಾಗಿ ಬಂದು ಸೀತೆಯು ಶಪಥಮಾಡುವುದನ್ನು ಪ್ರತ್ಯಕ್ಷವಾಗಿ ನೋಡಿರಿ ರಾಜರೂ ಪರಿವಾರ ಸಮೇತರಾಗಿ ಬರಲಿ ಕುತೂಹಲವುಳ್ಳ ಯಾರಾದರೂ ಬಂದು ಸೀತೆಯ ಶಪಥವನ್ನು ಕಣ್ಣಾರೆ ನೋಡಬಹುದು " ಎಂದು ತಿಳಿಸಿದನು (೧೧-೧೩) ಮಹಾತ್ಮನಾದ ರಾಘವನ ನುಡಿಯನ್ನು ಕೇಳಿ ಸಕಲ ಮುನಿಸತ್ತಮರೂ ' ಸಾಧು ಸಾಧು ! ' ಎಂದು ಕೋಲಾಹಲ ಮಾಡಿದರು ಸಭೆಯಲ್ಲಿದ್ದ ಭೂಪಾಲರು ಮಹಾತ್ಮನಾದ ರಾಘವನನ್ನು ಕೊಂಡಾಡಿದರು " ನರಶ್ರೇಷ್ಠ, ಈ ಬಗೆಯ ಸನ್ಮಾರ್ಗವು ನಿನ್ನಲ್ಲಿ ಮಾತ್ರ ಕಂಡುಬರುವುದು, ಇನ್ನೊಂದೆಡೆ ಕಾಣಸಿಗದು ! " ಎಂದು ಪ್ರಶಂಸೆಮಾಡಿದರು (೧೪-೧೫) ರಾಘವನು ಮಾರನೆಯ ದಿನ ಸೀತಾಶಪಥವು ನಡೆಯಬೇಕೆಂದು ನಿಶ್ಚಯಿಸಿ, ಸಭೆಯನ್ನು ವಿಸರ್ಜಿಸಿ

ಇತಿ ಸಂಪ್ರವಿಚಾರ್ಯ ರಾಜಸಿಂಹಃ
ಶ್ವೋಭೂತೇ ಶಪಥಸ್ಯ ನಿಶ್ಚಯಂ ವೈ ।
ವಿಸಸರ್ಜ ಮುನೀನ್ನೃಪಾಂಶ್ಚ ಸರ್ವಾನ್
ಸ ಮಹಾತ್ಮಾ ಮಹತೋ ಮಹಾನುಭಾವಃ ॥ ೧೭

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚನವತಿತಮಃ ಸರ್ಗಃ



ದನು ಈ ಬಗೆಯಲ್ಲಿ ಚೆನ್ನಾಗಿ ವಿಚಾರಮಾಡಿ ರಾಜಸಿಂಹನಾದ ರಾಘವನು ಮರುದಿನ ಶಪಥವು ನಡೆಯಲೆಂದು ನಿರ್ಣಯಿಸಿದನು ಸರ್ವಾತಿಶಾಯಿಯಾದ ಮಾಹಾತ್ಮ್ಯವುಳ್ಳ ಮಹಾನುಭಾವನಾದ ಶ್ರೀರಾಮನು ಮುನಿಗಳನ್ನೂ ಭೂಪಾಲರನ್ನೂ ಕಳಿಸಿ ಸಭೆಯನ್ನು ಮುಗಿಸಿದನು (೧೬-೧೭)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತೈದನೆಯ ಸರ್ಗ



## ಷಣ್ಣವತಿತಮಃ ಸರ್ಗಃ

### ವಾಲ್ಮೀಕಿಪ್ರತ್ಯಯದಾನಮ್

ತಸ್ಯಾಂ ರಜನ್ಯಾಂ ವ್ಯುಷ್ಟಾಯಾಂ ಯಜ್ಞವಾಟಗತೋ ನೃಪಃ ।
ಋಷೀನ್ ಸರ್ವಾನ್ ಮಹಾತೇಜಾಃ ಶಬ್ದಾಪಯತಿ ರಾಘವಃ ॥ ೧

ವಸಿಷ್ಠೋ ವಾಮದೇವಶ್ಚ ಜಾಬಾಲಿರಥ ಕಾಶ್ಯಪಃ ।
ವಿಶ್ವಾಮಿತ್ರೋ ದೀರ್ಘತಪಾ ದುರ್ವಾಸಾಶ್ಚ ಮಹಾತಪಾಃ ॥ ೨

ಪುಲಸ್ತ್ಯೋಽಪಿ ತಥಾ ಶಕ್ತಿರ್ಭಾರ್ಗವಶ್ಚೈವ ವಾಮನಃ ।
ಮಾರ್ಕಂಡೇಯಶ್ಚ ದೀರ್ಘಾಯುರ್ಮೌದ್ಗಲ್ಯಶ್ಚ ಮಹಾಯಶಾಃ ॥

ಗರ್ಗಶ್ಚ ಚ್ಯವನಶ್ಚೈವ ಶತಾನಂದಶ್ಚ ಧರ್ಮವಿತ್ ।
ಭರದ್ವಾಜಶ್ಚ ತೇಜಸ್ವೀ ಹ್ಯಗ್ನಿಪುತ್ರಶ್ಚ ಸುಪ್ರಭಃ ॥ ೪

ನಾರದಃ ಪರ್ವತಶ್ಚೈವ ಗೌತಮಶ್ಚ ಮಹಾಯಶಾಃ ।
ಕಾತ್ಯಾಯನಃ ಸುಯಜ್ಞಶ್ಚ ಹ್ಯಗಸ್ತ್ಯಸ್ತಪಸಾಂ ನಿಧಿಃ ॥ ೫

## ಸರ್ಗ ೯೬

ಯಜ್ಞಶಾಲೆಯಲ್ಲಿ ವಸಿಷ್ಠಾದಿಗಳು ಬಂದು ಸೇರುವುದು ಜಾನಕಿಯೊಡನೆ
ವಾಲ್ಮೀಕಿಮುನಿಗಳ ಪ್ರವೇಶ ಜಾನಕಿಯು ಪರಿಶುದ್ಧಳೆಂದು
ವಾಲ್ಮೀಕಿಮುನಿಗಳ ಪ್ರತಿಜ್ಞೆ

ರಾತ್ರಿ ಕಳೆದು ಬೆಳಗಾಯಿತು. ಮಹಾರಾಜನಾದ ಕಾಕುತ್ಸ್ಥನು ಯಜ್ಞಶಾಲೆಗೆ ಆಗಮಿಸಿ ಸಕಲ ಮುನಿಗಳಿಗೂ ಹೇಳಿಕಳಿಸಿದನು ಅನಂತರ ವಸಿಷ್ಠ, ವಾಮದೇವ, ಜಾಬಾಲಿ, ಕಾಶ್ಯಪ, ವಿಶ್ವಾಮಿತ್ರ, ದುರ್ವಾಸ, ಪುಲಸ್ತ್ಯ, ಶಕ್ತಿ, ಭಾರ್ಗವ, ವಾಮನ, ಮಾರ್ಕಂಡೇಯ, ಮೌದ್ಗಲ್ಯ—ಎಂಬ ಮಹರ್ಷಿಗಳು ಬಂದರು.(೧-೩) ಹಾಗೆಯೇ ಗರ್ಗ, ಚ್ಯವನ, ಶತಾನಂದ, ಭರದ್ವಾಜ, ಅಗ್ನಿಪುತ್ರ, ನಾರದ, ಪರ್ವತ, ಗೌತಮ, ಕಾತ್ಯಾಯನ, ಸುಯಜ್ಞ, ಅಗಸ್ತ್ಯ—ಮುಂತಾದ ತಪೋನಿಧಿಗಳು ಆಗಮಿಸಿದರು (೪-೫)

ಏತೇ ಚಾನ್ಯೇ ಚ ಬಹವೋ ಮುನಯಃ ಸಂಶಿತವ್ರತಾಃ ।
ಕೌತೂಹಲಸಮಾವಿಷ್ಟಾಃ ಸರ್ವ ಏವ ಸಮಾಗತಾಃ ॥ ೬

ರಾಕ್ಷಸಾಶ್ಚ ಮಹಾವೀರ್ಯಾ ವಾನರಾಶ್ಚ ಮಹಾಬಲಾಃ ।
ಸರ್ವ ಏವ ಸಮಾಜಗ್ಮುರ್ಮಹಾತ್ಮಾನಃ ಕುತೂಹಲಾತ್ ॥ ೭

ಕ್ಷತ್ರಿಯಾ ಯೇ ಚ ಶೂದ್ರಾಶ್ಚ ವೈಶ್ಯಾಶ್ಚೈವ ಸಹಸ್ರಶಃ ।
ನಾನಾದೇಶಗತಾಶ್ಚೈವ ಬ್ರಾಹ್ಮಣಾಃ ಸಂಶಿತವ್ರತಾಃ ॥ ೮

ಜ್ಞಾನನಿಷ್ಠಾಃ ಕರ್ಮನಿಷ್ಠಾ ಯೋಗನಿಷ್ಠಾಸ್ತಥಾಪರೇ ।
ಸೀತಾಶಪಥವೀಕ್ಷಾರ್ಥಂ ಸರ್ವ ಏವ ಸಮಾಗತಾಃ ॥ ೯

ತದಾ ಸಮಾಗತಂ ಸರ್ವಮಶ್ಮಭೂತಮಿವಾಚಲಮ್ ।
ಶ್ರುತ್ವಾ ಮುನಿವರಸ್ತೂರ್ಣಂ ಸಸೀತಃ ಸಮುಪಾಗಮತ್ ॥ ೧೦

ತಮೃಷಿಂ ಪೃಷ್ಠತಃ ಸೀತಾ ತ್ವನ್ವಗಚ್ಛದವಾಙ್ಮುಖೀ ।
ಕೃತಾಂಜಲಿರ್ಬಾಷ್ಪಗಲಾ ಕೃತ್ವಾ ರಾಮಂ ಮನೋಗತಮ್॥ ೧೧

ದೃಷ್ಟ್ವಾ ಶ್ರುತಿಮಿವಾಯಾಂತೀಂ ಬ್ರಹ್ಮಾಣಮನುಗಾಮಿನೀಮ್ ।
ವಾಲ್ಮೀಕೇಃ ಪೃಷ್ಠತಃ ಸೀತಾಂ ಸಾಧುವಾದೋ ಮಹಾನಭೂತ್ ॥

---

ವ್ರತನಿಷ್ಠರಾದ ಇನ್ನೂ ಬಹುಮಂದಿ ಮುನಿಗಳು ಕುತೂಹಲಾನ್ವಿತರಾಗಿ ಬಂದರು ಸಕಲ ರಾಕ್ಷಸರೂ ವಾನರರೂ ಕೌತುಕದಿಂದ ಆಗಮಿಸಿದರು (೬-೭) ನಾನಾ ದೇಶಗಳಿಂದ ಆಗಮಿಸಿದ್ದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಲ್ಲರೂ ಬಂದು ನೇರಿದರು ಜ್ಞಾನಿಗಳೂ ಕರ್ಮಠರೂ ಯೋಗಿಗಳೂ ಸಹ ಸೀತೆಯು ಶಪಥ ಮಾಡುವುದನ್ನು ವೀಕ್ಷಿಸುವುದಕ್ಕಾಗಿ ಬಂದರು (೮-೯) ಎಲ್ಲರೂ ಸದ್ದು ಮಾಡದೆ ಕಲ್ಲಿನಂತೆ ಅಚಲರಾಗಿ ಕುಳಿತಿದ್ದರು ಸಭೆ ನೇರಿದುದನ್ನು ಕೇಳಿ ವಾಲ್ಮೀಕಿಮುನಿಗಳು ಸೀತಾಸಮೇತರಾಗಿ ದಯಮಾಡಿಸಿದರು ಅವರ ಹಿಂದೆ ಸೀತಾದೇವಿಯು ತಲೆ ತಗ್ಗಿಸಿ ಕೈಮುಗಿದುಕೊಂಡು ಬರುತ್ತಿದ್ದಳು ಕಣ್ಣೀರು ಹರಿಯುತ್ತಿತ್ತು ಮನಸ್ಸು ಶ್ರೀ ರಾಮನನ್ನು ನೆನೆಯುತ್ತಿತ್ತು (೧೦-೧೧) ಬ್ರಹ್ಮದೇವನನ್ನು ಹಿಂಬಾಲಿಸಿ ಬರುವ ವೇದ ಮಾತೆಯಂತೆ, ವಾಲ್ಮೀಕಿಮಹರ್ಷಿಗಳನ್ನು ಹಿಂಬಾಲಿಸಿ ಬರುತ್ತಿದ್ದ ಜಾನಕಿ

ತತೋ ಹಲಹಲಾಶಬ್ದಃ ಸರ್ವೇಷಾಮೇವಮಾಬಭೌ ।
ದುಃಖಜನ್ಮವಿಶಾಲೇನ ಶೋಕೇನಾಕುಲಿತಾತ್ಮನಾಮ್ ॥ ೧೩

ಸಾಧು ರಾಮೇತಿ ಕೇಚಿತ್ತು ಸಾಧು ಸೀತೇತಿ ಚಾಪರೇ ।
ಉಭಾವೇವ ಚ ತತ್ರಾನ್ಯೇ ಪ್ರೇಕ್ಷಕಾಃ ಸಂಪ್ರಚಕ್ರುಶುಃ ॥ ೧೪

ತತೋ ಮಧ್ಯೇ ಜನೌಘಸ್ಯ ಪ್ರವಿಶ್ಯ ಮುನಿಪುಂಗವಃ ।
ಸೀತಾಸಹಾಯೋ ವಾಲ್ಮೀಕಿರಿತಿ ಹೋವಾಚ ರಾಘವಮ್ ॥ ೧೫

ಇಯಂ ದಾಶರಥೇ ಸೀತಾ ಸುವ್ರತಾ ಧರ್ಮಚಾರಿಣೀ ।
ಅಪವಾದಾತ್ ಪರಿತ್ಯಕ್ತಾ ಮಮಾಶ್ರಮಸಮೀಪತಃ ॥ ೧೬

ಲೋಕಾಪವಾದಭೀತಸ್ಯ ತವ ರಾಮ ಮಹಾವ್ರತ ।
ಪ್ರತ್ಯಯಂ ದಾಸ್ಯತೇ ಸೀತಾ ತದನುಜ್ಞಾತುಮರ್ಹಸಿ ॥ ೧೭

ಇಮೌ ತು ಜಾನಕೀಪುತ್ರಾವುಭೌ ಚ ಯಮಜಾತಕೌ ।
ಸುತೌ ತವೈವ ದುರ್ಧರ್ಷೌ ಸತ್ಯಮೇತದ್ಬ್ರವೀಮಿ ತೇ ॥ ೧೮

---

ಯನ್ನು ಕಂಡೊಡನೆ ಸಭೆಯಲ್ಲಿ ಜಯಕಾರವು ಮೊಳಗಿತು (೧೨) ಆ ದೇವಿಯನ್ನು ನೋಡಿ ಸಭಾಸದರ ಮರುಕ ಉಕ್ಕಿತು ಶೋಕ ಉಮ್ಮಳಿಸಿತು ಮನಸ್ಸು ಕದಡಿತು 'ಅಯ್ಯೋ ಅಯ್ಯೋ' ಎಂಬ ಉದ್ಗಾರವು ಎಲ್ಲೆಲ್ಲಿಯೂ ಹೊರಟಿತು (೧೩) ರಾಮನ ವರ್ತನೆ ಸರಿಯೆಂದು ಕೆಲವು ಪ್ರೇಕ್ಷಕರೂ ಸೀತೆಯ ವರ್ತನೆ ಸರಿಯೆಂದು ಹಲವರೂ ಉಭಯರ ವರ್ತನೆಯೂ ಸರಿಯೆಂದು ಇತರರೂ ಅಂದುಕೊಂಡರು ವಾಲ್ಮೀಕಿಮುನಿಗಳು ಸೀತಾಸಮೇತರಾಗಿ ಸಭಾಮಧ್ಯಕ್ಕೆ ಬಂದು ರಾಘವನನ್ನು ಸಂಬೋಧಿಸಿ ಹೀಗೆ ನುಡಿದರು (೧೪-೧೫). "ಎಲೈ ದಶರಥನಂದನ, ಸುಶೀಲೆಯೂ ಧರ್ಮಚಾರಿಣಿಯೂ ಆದ ಸೀತೆಯು ಲೋಕಾಪವಾದ ನಿಮಿತ್ತವಾಗಿ ನನ್ನ ಆಶ್ರಮದ ಬಳಿಯಲ್ಲಿ ಪರಿತ್ಯಕ್ತಳಾದಳು (೧೬) ನೀನು ಅಪವಾದರಹಿತನಾಗಿರಬೇಕೆಂಬ ವ್ರತದಲ್ಲಿ ನಿಷ್ಠೆಯುಳ್ಳವನು ಲೋಕಾಪವಾದಕ್ಕೆ ಹೆದರಿದವನು ಈಗ ಸೀತೆಯು ನಿನಗೆ ನಂಬಿಕೆಯನ್ನುಂಟುಮಾಡಿಕೊಡುವಳು ಅದಕ್ಕೆ ನೀನು ಸಮ್ಮತಿಸಬೇಕು (೧೭) ಈ ಕುಶಲವರಿಬ್ಬರೂ ಜಾನಕಿಯ ಪುತ್ರರು ಯಮಳರಾಗಿ ಜನಿಸಿದ್ದಾರೆ ಈ ವೀರಬಾಲಕರು ನಿನ್ನ ಮಕ್ಕಳೇ ಎಂಬುದು ನಿಶ್ಚಯ

ಪ್ರಚೇತಸೋಽಹಂ ದಶಮಃ ಪುತ್ರೋ ರಾಘವನಂದನ ।
ನ ಸ್ಮರಾಮ್ಯನೃತಂ ವಾಕ್ಯಮಿಮೌ ತು ತವ ಪುತ್ರಕೌ ॥ ೧೯

ಬಹುವರ್ಷಸಹಸ್ರಾಣಿ ತಪಶ್ಚರ್ಯಾ ಮಯಾ ಕೃತಾ ।
ನೋಪಾಶ್ನೀಯಾಂ ಫಲಂ ತಸ್ಯಾ ದುಷ್ಟೇಯಂ ಯದಿ ಮೈಥಿಲೀ ॥

ಮನಸಾ ಕರ್ಮಣಾ ವಾಚಾ ಭೂತಪೂರ್ವಂ ನ ಕಿಲ್ಬಿಷಮ್ ।
ತಸ್ಯಾಹಂ ಫಲಮಶ್ನಾಮಿ ಅಪಾಪಾ ಯದಿ ಮೈಥಿಲೀ ॥ ೨೦

ಅಹಂ ಪಂಚಸು ಭೂತೇಷು ಮನಃಷಷ್ಠೇಷು ರಾಘವ ।
ವಿಚಿಂತ್ಯ ಸೀತಾ ಶುದ್ಧೇತಿ ಜಗ್ರಾಹ ವನನಿರ್ಝರೇ ॥ ೨೧

ಇಯಂ ಶುದ್ಧಸಮಾಚಾರಾ ಅಪಾಪಾ ಪತಿದೇವತಾ ।
ಲೋಕಾಪವಾದಭೀತಸ್ಯ ಪ್ರತ್ಯಯಂ ತವ ದಾಸ್ಯತಿ ॥ ೨೨

---

ನಾನು ಸತ್ಯವನ್ನೇ ಹೇಳುತ್ತಿದ್ದೇನೆ ರಾಘವ, ನಾನು ಪ್ರಚೇತಸನ ಹತ್ತನೆಯ ಮಗನೆಂದು * ತಿಳಿ ನನ್ನ ಸ್ಮರಣೆಯಲ್ಲಿ ಎಂದೂ ಅನೃತವನ್ನಾಡಿದವನಲ್ಲ ಇವರು ನಿನ್ನ ಮಕ್ಕಳು (೧೮-೧೯) ಎಷ್ಟೋ ಸಾವಿರ ವರ್ಷಗಳವರೆಗೆ ನಾನು ತಪಸ್ಸನ್ನಾಚರಿಸಿದ್ದೇನೆ ಸೀತೆಯಲ್ಲಿ ದೋಷಲೇಶವಾದರೂ ಇರುವುದಾದರೆ, ಆ ತಪಸ್ಸಿನ ಫಲವು ನನಗೆ ದೊರಕದೆ ಹೋಗಲಿ! ಮನೋವಾಕ್ಕರ್ಮಗಳಿಂದ ನಾನು ಯಾವ ಪಾಪಕೃತ್ಯವನ್ನೂ ಮಾಡಿದವನಲ್ಲ ಅಂತಹ ಸದ್ವೃತ್ತದಿಂದ ಬರುವ ಫಲವು, ಜಾನಕಿಯು ನಿರ್ದೋಷಳಾಗಿದ್ದರೆ ಮಾತ್ರ ನನಗೆ ಲಭಿಸಲಿ! (೨೦-೨೧) ಸೀತೆಯನ್ನು ವನನದೀ ಸಮೀಪದಲ್ಲಿ ಕಂಡಾಗ, ಪಂಚೇಂದ್ರಿಯಗಳಲ್ಲಿಯೂ ಮನಸ್ಸಿನಲ್ಲಿಯೂ ಇವಳು ಪರಿಶುದ್ಧಳೆಂದು ತಿಳಿದೇ ಆಶ್ರಮಕ್ಕೆ ಕರೆದೊಯ್ದೆನು ಶ್ರೀರಾಮ, ಸೀತೆಯು ಶುದ್ಧಚಾರಿತ್ರಳು ಯಾವ ಪಾಪವೂ ಇವಳಲ್ಲಿಲ್ಲ ಪತಿಯನ್ನೇ ದೇವತೆಯೆಂದು ತಿಳಿದಿರುವ ಸಾಧ್ವಿಯಾಗಿದ್ದಾಳೆ ಲೋಕಾಪವಾದಕ್ಕೆ ಅಂಜಿರುವ ನಿನಗೆ ವಿಶ್ವಾಸಕರವಾದ ಕಾರ್ಯವನ್ನು ಮಾಡಿತೋರಿಸುವಳು

---

* ಪ್ರಚೇತಸನ ವಂಶದಲ್ಲಿ ಹತ್ತನೆಯ ತಲೆ ಎಂಬ ಅಭಿಪ್ರಾಯವಿರಬಹುದು

ತಸ್ಮಾದಿಯಂ ನರವರಾತ್ಮಜ ಶುದ್ಧಭಾವಾ
ದಿವ್ಯೇನ ದೃಷ್ಟಿವಿಷಯೇಣ ತದಾ ಪ್ರವಿಷ್ಟಾ ।
ಲೋಕಾಪವಾದಕಲುಷೀಕೃತಚೇತಸಾ ಯಾ
ತ್ಯಕ್ತಾ ತ್ವಯಾ ಪ್ರಿಯತಮಾ ವಿದಿತಾಪಿ ಶುದ್ಧಾ ॥ ೨೪

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಣ್ಣವತಿತಮಃ ಸರ್ಗಃ



(೨೨-೨೩) ಮಹಾರಾಜ, ನಿನ್ನ ಪ್ರಿಯತಮೆಯು ಪರಿಶುದ್ಧಳೆಂದು ಗೊತ್ತಿದ್ದರೂ ಲೋಕಾಪವಾದ ನಿಮಿತ್ತವಾಗಿ ನಿನ್ನ ಮನಸ್ಸು ಕಲುಷಿತವಾದ್ದರಿಂದ ಇವಳನ್ನು ತ್ಯಜಿಸಿದ್ದೀಯೆ ಆಗ ನಾನು ದಿವ್ಯದೃಷ್ಟಿಯಿಂದ ಸೀತೆಯು ಶುದ್ಧಚಾರಿತ್ರಳೆಂಬುದನ್ನರಿತು ನನ್ನ ಆಶ್ರಮದಲ್ಲಿ ಇವಳಿಗೆ ಪ್ರವೇಶವನ್ನಿತ್ತೆನು" ಎಂದರು (೨೪)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತಾರನೆಯ ಸರ್ಗ



## ಸಪ್ತನವತಿತಮಃ ಸರ್ಗಃ

### ಸೀತಾರಸಾತಲಪ್ರವೇಶಃ

ವಾಲ್ಮೀಕಿನೈವಮುಕ್ತಸ್ತು ರಾಘವಃ ಪ್ರತ್ಯಭಾಷತ ।
ಪ್ರಾಂಜಲಿರ್ಜಗತೋ ಮಧ್ಯೇ ದೃಷ್ಟ್ವಾ ತಾಂ ವರವರ್ಣಿನೀಮ್ ॥

ಏವಮೇತನ್ಮಹಾಭಾಗ ಯಥಾ ವದಸಿ ಧರ್ಮವಿತ್ ।
ಪ್ರತ್ಯಯಸ್ತು ಮಮ ಬ್ರಹ್ಮಂಸ್ತವ ವಾಕ್ಯೈರಕಲ್ಮಷೈಃ ॥ ೨

ಪ್ರತ್ಯಯಸ್ತು ಪುರಾ ವೃತ್ತೋ ವೈದೇಹ್ಯಾಃ ಸುರಸಂನಿಧೌ ।
ಶಪಥಸ್ತು ಕೃತಸ್ತತ್ರ ತೇನ ವೇಶ್ಮ ಪ್ರವೇಶಿತಾ ॥ ೩

ಲೋಕಾಪವಾದೋ ಬಲವಾನ್ ಯೇನ ತ್ಯಕ್ತಾ ಹಿ ಮೈಥಿಲೀ ।
ಸೇಯಂ ಲೋಕಭಯಾದ್ಬ್ರಹ್ಮನ್ನಪಾಪೇತ್ಯಭಿಜಾನತಾ ॥ ೪

ಪರಿತ್ಯಕ್ತಾ ಮಯಾ ಸೀತಾ ತದ್ಭವಾನ್ ಕ್ಷಂತುಮರ್ಹತಿ ।
ಜಾನಾಮಿ ಚೇಮೌ ಪುತ್ರೌ ಮೇ ಯಮಜಾತೌ ಕುಶೀಲವೌ ॥ ೫

## ಸರ್ಗ ೯೭

### ಜಾನಕಿಯ ಶಪಥ ಭೂದೇವಿಯು ಮೇಲೆದ್ದು ಬಂದು ಜಾನಕಿಯೊಡನೆ ರಸಾತಳವನ್ನು ಪ್ರವೇಶಿಸುವುದು

ವಾಲ್ಮೀಕಿಮುನಿಗಳ ನುಡಿಯನ್ನು ಕೇಳಿದ ರಾಘವನು ಸಭಾಮಧ್ಯದಲ್ಲಿದ್ದ ಜಾನಕಿಯನ್ನು ನೋಡಿ ಕೈಮುಗಿದುಕೊಂಡು "ಮಹಾತ್ಮರೆ, ಧರ್ಮಜ್ಞರಾದ ನೀವು ಹೇಳುವುದು ಸತ್ಯವೇ ಪವಿತ್ರವಾದ ನಿಮ್ಮ ನುಡಿಗಳಿಂದ ನನಗೆ ವಿಶ್ವಾಸವುಂಟಾಗಿದೆ (೧-೨) ಹಿಂದೊಮ್ಮೆ ದೇವತೆಗಳ ಎದುರಿನಲ್ಲಿ ವೈದೇಹಿಯ ಚಾರಿತ್ರದ ವಿಷಯವಾಗಿ ವಿಶ್ವಾಸ ಮೂಡಿತ್ತು ಅವಳೊಂದು ಶಪಥವನ್ನೇ ಮಾಡಿದಳು ಹೀಗಾಗಿ ಆಕೆಯನ್ನು ಮನೆಗೆ ಕರೆತಂದೆನು (೩) ಮಹರ್ಷಿಗಳೆ, ಲೋಕಾಪವಾದವು ಪ್ರಬಲವಾದದ್ದು ಮೈಥಿಲಿಯು ನಿರ್ದೋಷಳೆಂಬುದು ನನಗೆ ತಿಳಿದಿದ್ದರೂ ಲೋಕಾಪವಾದಕ್ಕೆ ಅಂಜಿ ತೊರೆದೆನು ಇದಕ್ಕಾಗಿ, ಮುನಿಗಳೆ, ನನ್ನನ್ನು ಕ್ಷಮಿಸಿರಿ ಯಮಳ

ಶುದ್ಧಾಯಾಂ ಜಗತೋ ಮಧ್ಯೇ ಮೈಥಿಲ್ಯಾಂ ಪ್ರೀತಿರಸ್ತು ಮೇ ।
ಅಭಿಪ್ರಾಯಂ ತು ವಿಜ್ಞಾಯ ರಾಮಸ್ಯ ಸುರಸತ್ತಮಾಃ ॥ ೬

ಸೀತಾಯಾಃ ಶಪಥೇ ತಸ್ಮಿನ್ ಮಹೇಂದ್ರಾದ್ಯಾ ಮಹೌಜಸಃ ।
ಪಿತಾಮಹಂ ಪುರಸ್ಕೃತ್ಯ ಸರ್ವ ಏವ ಸಮಾಗತಾಃ ॥ ೭

ಆದಿತ್ಯಾ ವಸವೋ ರುದ್ರಾ ಹ್ಯಶ್ವಿನೌ ಸಮರುದ್ಗಣಾಃ ।
ಗಂಧರ್ವಾಪ್ಸರಸಶ್ಚೈವ ಸರ್ವ ಏವ ಸಮಾಗತಾಃ ॥ ೮

ಸಾಧ್ಯಾಶ್ಚ ವಿಶ್ವೇ ದೇವಾಶ್ಚ ಸರ್ವೇ ಚ ಪರಮರ್ಷಯಃ ।
ನಾಗಾಃ ಸುಪರ್ಣಾಃ ಸಿದ್ಧಾಶ್ಚ ತೇ ಸರ್ವೇ ಹೃಷ್ಟಮಾನಸಾಃ ॥ ೯

ಸೀತಾಶಪಥಸಂಭ್ರಾಂತಾಃ ಸರ್ವ ಏವ ಸಮಾಗತಾಃ ।
ದೃಷ್ಟ್ವಾ ದೇವಾನೃಷೀಂಶ್ಚೈವ ರಾಘವಃ ಪುನರಬ್ರವೀತ್ ॥ ೧೦

ಪ್ರತ್ಯಯೋ ಮೇ ಸುರಶ್ರೇಷ್ಠಾ ಋಷಿವಾಕ್ಯೈರಕಲ್ಮಷೈಃ ।
ಶುದ್ಧಾಯಾಂ ಜಗತೋ ಮಧ್ಯೇ ವೈದೇಹ್ಯಾಂ ಪ್ರೀತಿರಸ್ತು ಮೇ ॥

---

ರಾದ ಕುಶಲವರು ನನ್ನ ಪುತ್ರರೆಂದು ನಾನು ಬಲ್ಲೆನು (೪-೫) ಈ ಜನತೆಯ ಮಧ್ಯದಲ್ಲಿ ಮೈಥಿಲಿಯು ಪರಿಶುದ್ಧಳೆಂಬುದು ಸ್ಪಷ್ಟವಾದಮೇಲೆ, ಅವಳನ್ನು ಪ್ರೀತಿಯಿಂದ ಅಂಗೀಕರಿಸುವೆನು ” ಎಂದು ಹೇಳಿದನು ಶ್ರೀರಾಮನ ಇಂಗಿತವನ್ನರಿತು ಸೀತೆಯು ಶಪಥಮಾಡುವಳೆಂದು ತಿಳಿದು, ಇಂದ್ರಾದಿದೇವತೆಗಳು ಬ್ರಹ್ಮದೇವನೊಡನೆ ಆಗಮಿಸಿದರು (೬-೭) ಆದಿತ್ಯರು, ವಸುಗಳು, ರುದ್ರರು, ಅಶ್ವಿನೀದೇವತೆಗಳು, ಮರುತ್ತುಗಳು, ಗಂಧರ್ವರು, ಅಪ್ಸರೆಯರು —ಎಲ್ಲರೂ ಬಂದರು ಸಾಧ್ಯರು, ವಿಶ್ವೇದೇವರು, ಪರಮರ್ಷಿಗಳು, ನಾಗ ಸುಪರ್ಣಸಿದ್ಧರೂ—ಸರ್ವರೂ ಉತ್ಸಾಹದಿಂದ ಆಗಮಿಸಿದರು (೮-೯). ಸೀತೆಯು ಶಪಥಮಾಡುವಳೆಂದು ದಿಗ್ಭ್ರಾಂತರಾಗಿ ಸಕಲರೂ ಬಂದರು ದೇವತೆಗಳನ್ನೂ ಋಷಿಗಳನ್ನೂ ನೋಡಿ ಶ್ರೀರಾಮನು “ ಸುರಶ್ರೇಷ್ಠರೆ, ವಾಲ್ಮೀಕಿಮುನಿಗಳ ಪವಿತ್ರವಾಣಿಯಿಂದ ನನಗೆ ವಿಶ್ವಾಸವುಂಟಾಗಿದೆ ಆದರೆ ಜನಮಧ್ಯದಲ್ಲಿ ವೈದೇಹಿಯು ಪರಿಶುದ್ಧಳೆಂದು ಸ್ಫುಟವಾದಮೇಲೆ, ಅವಳನ್ನು

ತತೋ ವಾಯುಃ ಶುಭಃ ಪುಣ್ಯೋ ದಿವ್ಯಗಂಧೋ ಮನೋರಮಃ ।
ತಜ್ಜನೌಘಂ ಸುರಶ್ರೇಷ್ಠೋ ಹ್ಲಾದಯಾಮಾಸ ಸರ್ವತಃ ॥ ೧೨
ತದದ್ಭುತಮಿವಾಚಿಂತ್ಯಂ ನಿರೈಕ್ಷಂತ ಸಮಾಗತಾಃ ।
ಮಾನವಾಃ ಸರ್ವರಾಷ್ಟ್ರೇಭ್ಯಃ ಪೂರ್ವಂ ಕೃತಯುಗೇ ಯಥಾ ॥ ೧೩
ಸರ್ವಾನ್ ಸಮಾಗತಾನ್ ದೃಷ್ಟ್ವಾ ಸೀತಾ ಕಾಷಾಯವಾಸಿನೀ ।
ಅಬ್ರವೀತ್ ಪ್ರಾಂಜಲಿರ್ವಾಕ್ಯಮಧೋದೃಷ್ಟಿರವಾಙ್ಮುಖೀ ॥ ೧೪
ಯಥಾಹಂ ರಾಘವಾದನ್ಯಂ ಮನಸಾಪಿ ನ ಚಿಂತಯೇ ।
ತಥಾ ಮೇ ಮಾಧವೀ ದೇವೀ ವಿವರಂ ದಾತುಮರ್ಹತಿ ॥ ೧೫
ಮನಸಾ ಕರ್ಮಣಾ ವಾಚಾ ಯಥಾ ರಾಮಂ ಸಮರ್ಚಯೇ ।
ತಥಾ ಮೇ ಮಾಧವೀ ದೇವೀ ವಿವರಂ ದಾತುಮರ್ಹತಿ ॥ ೧೬
ಯಥೈತತ್ ಸತ್ಯಮುಕ್ತಂ ಮೇ ವೇದ್ಮಿ ರಾಮಾತ್ ಪರಂ ನ ಚ ।
ತಥಾ ಮೇ ಮಾಧವೀ ದೇವೀ ವಿವರಂ ದಾತುಮರ್ಹತಿ ॥ ೧೭

---

ಪ್ರೀತಿಯಿಂದ ಸ್ವೀಕರಿಸುವೆನು" ಎಂದನು (೧೦ ೧೧) ಆಗ ಸುರಶ್ರೇಷ್ಠನಾದ ಮಾರುತನು ದಿವ್ಯಗಂಧವನ್ನು ಬೀರುತ್ತ ಮೆಲ್ಲಗೆ ಹಿತಕರವಾಗಿ ಬೀಸಿ ಸಕಲರನ್ನೂ ಆನಂದಗೊಳಿಸಿದನು ವಾಯುವಿನ ದಿವ್ಯಪರಿಮಳವೂ ದೇವತೆಗಳ ಆಗಮನವೂ ಅದ್ಭುತವೂ ಅಚಿಂತ್ಯವೂ ಆಗಿ ತೋರಿತು ವಿವಿಧ ರಾಷ್ಟ್ರಗಳಿಂದ ಬಂದಿದ್ದ ಸಮಸ್ತ ಜನರೂ "ಆಹಾ! ಇದು ಕೃತಯುಗವಿರಬಹುದೆ!" ಎಂದುಕೊಂಡರು (೧೨-೧೩) ದೇವಾದಿಗಳೆಲ್ಲರೂ ಆಗಮಿಸಿದ್ದನ್ನು ವೀಕ್ಷಿಸಿ, ತಪಸ್ವಿನಿಗೆ ಉಚಿತವಾದ ಕಾಷಾಯ ವಸ್ತ್ರವನ್ನುಟ್ಟಿದ್ದ ಜಾನಕಿಯು ಕೈಮುಗಿದುಕೊಂಡು ತಲೆತಗ್ಗಿಸಿ ಕೆಳಗೆ ನೋಡುತ್ತ ಹೀಗೆಂದಳು (೧೪). "ಶ್ರೀರಾಮನನ್ನು ಹೊರತಾಗಿ ಇನ್ನೊಬ್ಬನನ್ನು ನಾನು ಮನಸ್ಸಿನಲ್ಲಿಯೂ ಚಿಂತಿಸುವುದಿಲ್ಲವೆಂಬುದು ಸತ್ಯ ಈ ಸತ್ಯಬಲದಿಂದ ಮಾಧವಪತ್ನಿಯಾದ ಭೂದೇವಿಯು ತನ್ನ ಗರ್ಭದಲ್ಲಿ ಸೇರಿಸಿಕೊಳ್ಳುವುದಕ್ಕಾಗಿ ನನಗೆ ರಂಧ್ರವನ್ನೀಯಲಿ! (೧೫) ಮನಸ್ಸಿನಿಂದ, ಕ್ರಿಯೆಯಿಂದ, ವಾಕ್ಕಿನಿಂದ ನಾನು ಶ್ರೀರಾಮನನ್ನೇ ಅರ್ಚಿಸುತ್ತಿರುವುದು ಸತ್ಯವಾದರೆ, ಭೂದೇವಿಯು ನನಗೆ ರಂಧ್ರವನ್ನೀಯಲಿ! (೧೬) ಶ್ರೀರಾಮನನ್ನು ಹೊರತಾಗಿ ಇನ್ನೊಬ್ಬ ಪುರುಷನನ್ನು

ತಥಾ ಶಪಂತ್ಯಾಂ ವೈದೇಹ್ಯಾಂ ಪ್ರಾದುರಾಸೀತ್ತದದ್ಭುತಮ್ ।
ಭೂತಲಾದುತ್ಥಿತಂ ದಿವ್ಯಂ ಸಿಂಹಾಸನಮನುತ್ತಮಮ್ ॥ ೧೮

ಧ್ರಿಯಮಾಣಂ ಶಿರೋಭಿಸ್ತು ನಾಗೈರಮಿತವಿಕ್ರಮೈಃ ।
ದಿವ್ಯಂ ದಿವ್ಯೇನ ವಪುಷಾ ದಿವ್ಯರತ್ನವಿಭೂಷಿತೈಃ ॥ ೧೯

ತಸ್ಮಿಂಸ್ತು ಧರಣೀ ದೇವೀ ಬಾಹುಭ್ಯಾಂ ಗೃಹ್ಯ ಮೈಥಿಲೀಮ್ ।
ಸ್ವಾಗತೇನಾಭಿನಂದ್ಯೈನಾಮಾಸನೇ ಚೋಪವೇಶಯತ್ ॥ ೨೦

ತಾಮಾಸನಗತಾಂ ದೃಷ್ಟ್ವಾ ಪ್ರವಿಶಂತೀಂ ರಸಾತಲಮ್ ।
ಪುಷ್ಪವೃಷ್ಟಿರವಿಚ್ಛಿನ್ನಾ ದಿವ್ಯಾ ಸೀತಾಮವಾಕಿರತ್ ॥ ೨೧

ಸಾಧುಕಾರಶ್ಚ ಸುಮಹಾನ್ ದೇವಾನಾಂ ಸಹಸೋತ್ಥಿತಃ ।
ಸಾಧು ಸಾಧ್ವಿತಿ ವೈ ಸೀತೇ ಯಸ್ಯಾಸ್ತೇ ಶೀಲಮೀದೃಶಮ್ ॥ ೨೨

ಏವಂ ಬಹುವಿಧಾ ವಾಚೋ ಹ್ಯಂತರಿಕ್ಷಗತಾಃ ಸುರಾಃ ।
ವ್ಯಾಜಹ್ರುರ್ಹೃಷ್ಟಮನಸೋ ದೃಷ್ಟ್ವಾ ಸೀತಾಪ್ರವೇಶನಮ್ ॥ ೨೩

---

ನಾನರಿಯನು—ಎಂಬ ನನ್ನ ನುಡಿ ಸತ್ಯವಾದರೆ, ಭೂದೇವಿಯು ನನಗೆ ರಂಧ್ರವನ್ನೀಯಲಿ!" ಎಂದು ಶಪಥ ಮಾಡಿದಳು (೧೭) ವೈದೇಹಿಯು ಹೀಗೆ ಮೂರುಸಲ ಶಪಥಮಾಡಿದೊಡನೆ ಒಂದು ಅದ್ಭುತವು ನಡೆಯಿತು ಭೂತಳವನ್ನು ಭೇದಿಸಿಕೊಂಡು ಶ್ರೇಷ್ಠವಾದ ಒಂದು ದಿವ್ಯಸಿಂಹಾಸನವು ಮೇಲೆದ್ದಿತು (೧೮) ದಿವ್ಯದೇಹಧಾರಿಗಳೂ ದಿವ್ಯರತ್ನಭೂಷಿತರೂ ಬಲಾಢ್ಯರೂ ಆದ ತಕ್ಷಕಾದಿ ನಾಗರು ತಮ್ಮ ಶಿರಸ್ಸುಗಳಿಂದ ಆ ಸಿಂಹಾಸನವನ್ನು ಹೊತ್ತಿದ್ದರು ಅದರಲ್ಲಿ ಕುಳಿತಿದ್ದ ಭೂದೇವಿಯು ಮೈಥಿಲಿಯನ್ನು ಸ್ವಾಗತದಿಂದ ಅಭಿನಂದಿಸಿ ಎರಡು ಕೈಗಳಿಂದಲೂ ಆಲಿಂಗಿಸಿ, ತನ್ನ ಸಿಂಹಾಸನದಲ್ಲಿ ಕುಳ್ಳಿರಿಸಿಕೊಂಡಳು (೧೯-೨೦) ಹಾಗೆಯೇ ಸಿಂಹಾಸನವು ಭೂಗರ್ಭದಲ್ಲಿ ರಸಾತಳಕ್ಕೆ ಇಳಿಯತೊಡಗಿತು ಸಿಂಹಾಸನದಲ್ಲಿ ಕುಳಿತು ಸೀತೆಯು ರಸಾತಳಕ್ಕೆ ಇಳಿಯುವುದನ್ನು ಕಂಡು, ಅವಳ ಮೇಲೆ ದೇವತೆಗಳು ಅವಿಚ್ಛಿನ್ನವಾಗಿ ಹೂಮಳೆಯನ್ನು ಸುರಿಸಿದರು (೨೧) ದೇವತೆಗಳು "ಸಾಧು ಸಾಧು! ಜಾನಕಿ, ನಿನ್ನ ಶೀಲವು ಎಷ್ಟು ಪರಿಶುದ್ಧವಾದುದು!" ಎಂದು ಕೋಲಾಹಲ ಮಾಡಿದರು ಹೀಗೆ ಅಂತರಿಕ್ಷದಲ್ಲಿ ನಿಂತಿದ್ದ ದೇವತೆ

ಯಜ್ಞವಾಟಗತಾಶ್ಚಾಪಿ ಮುನಯಃ ಸರ್ವ ಏವ ತೇ ।
ರಾಜಾನಶ್ಚ ನರವ್ಯಾಘ್ರಾ ವಿಸ್ಮಯಾನ್ನೋಪರೇಮಿರೇ ॥ ೨೪

ಅಂತರಿಕ್ಷೇ ಚ ಭೂಮೌ ಚ ಸರ್ವೇ ಸ್ಥಾವರಜಂಗಮಾಃ ।
ದಾನವಾಶ್ಚ ಮಹಾಕಾಯಾಃ ಪಾತಾಲೇ ಪನ್ನಗಾಧಿಪಾಃ ॥ ೨೫

ಕೇಚಿದ್ವಿನೇದುಃ ಸಂಹೃಷ್ಟಾಃ ಕೇಚಿದ್ಧ್ಯಾನಪರಾಯಣಾಃ ।
ಕೇಚಿದ್ರಾಮಂ ನಿರೀಕ್ಷಂತೇ ಕೇಚಿತ್ ಸೀತಾಮಚೇತನಾಃ ॥ ೨೬

ಸೀತಾಪ್ರವೇಶನಂ ದೃಷ್ಟ್ವಾ ತೇಷಾಮಾಸೀತ್ ಸಮಾಗಮಃ ।
ತನ್ಮುಹೂರ್ತಮಿವಾತ್ಯರ್ಥಂ ಸಮಂ ಸಂಮೋಹಿತಂ ಜಗತ್ ॥ ೨೭

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತನವತಿತಮಃ ಸರ್ಗಃ



ಗಳು ಸೀತೆಯ ಭೂಪ್ರವೇಶವನ್ನು ನೋಡಿ ಆನಂದತುಂದಿಲರಾಗಿ ನಾನಾ ಬಗೆಯಲ್ಲಿ ಹೊಗಳಿ ಹಾಡಿದರು (೨೨-೨೩) ಯಜ್ಞಶಾಲೆಯಲ್ಲಿದ್ದ ಸಮಸ್ತ ಮುನಿಗಳೂ ರಾಜರೂ ಪರಮಾಶ್ಚರ್ಯಗೊಂಡರು ಅವರ ವಿಸ್ಮಯಕ್ಕೆ ಪಾರವೇ ಕಾಣಲಿಲ್ಲ (೨೪) ಭೂಮಿಯಲ್ಲಿ, ಮೇಲೆ ಗಗನದಲ್ಲಿ, ಕೆಳಗೆ ಪಾತಾಳದಲ್ಲಿ–ಸ್ಥಾವರಜಂಗಮಗಳೂ ದಾನವರೂ ಪನ್ನಗರೂ ವಿಸ್ಮಿತರಾದರು ಕೆಲವರು ಹರ್ಷದಿಂದ ಕೋಲಾಹಲವನ್ನೆಬ್ಬಿಸಿದರು ಕೆಲವರು ಧ್ಯಾನಾಸಕ್ತರಾದರು ಹಲವರು ಶ್ರೀರಾಮನ ಮುಖವನ್ನು ನೋಡುವರು ಕೆಲವರು ದಿಗ್ಭ್ರಾಂತರಾಗಿ ಸೀತೆಯನ್ನು ನೋಡುವರು! (೨೫-೨೬) ಭೂಗರ್ಭದಲ್ಲಿ ಸೀತೆಯು ಪ್ರವೇಶಿಸಿದ್ದನ್ನು ಕಂಡು ಸಕಲರಿಗೂ ಹರ್ಷ-ವಿಸ್ಮಯಗಳಾದವು ಸ್ವಲ್ಪಕಾಲದವರೆಗೆ, ಜಗತ್ತು ಎಚ್ಚರದಪ್ಪಿ ಉನ್ಮತ್ತವಾದಂತೆ ಕಾಣಿಸಿತು (೨೭)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತೇಳನೆಯ ಸರ್ಗ



## ಅಷ್ಟನವತಿತಮಃ ಸರ್ಗಃ

ರಾಮಕೋಪೋಪಶಮಃ

ರಸಾತಲಂ ಪ್ರವಿಷ್ಟಾಯಾಂ ವೈದೇಹ್ಯಾಂ ಸರ್ವವಾನರಾಃ ।
ಚುಕ್ರುಶುಃ ಸಾಧು ಸಾಧ್ವೀತಿ ಮುನಯೋ ರಾಮಸಂನಿಧೌ ॥ ೧

ದಂಡಕಾಷ್ಠಮವಷ್ಟಭ್ಯ ಬಾಷ್ಪವ್ಯಾಕುಲಿತೇಕ್ಷಣಃ ।
ಅವಾಕ್ಶಿರಾ ದೀನಮನಾ ರಾಮೋ ಹ್ಯಾಸೀತ್ ಸುದುಃಖಿತಃ ॥ ೨

ಸ ರುದಿತ್ವಾ ಚಿರಂ ಕಾಲಂ ಬಹುಶೋ ಬಾಷ್ಪಮುತ್ಸೃಜನ್ ।
ಕ್ರೋಧಶೋಕಸಮಾವಿಷ್ಟೋ ರಾಮೋ ವಚನಮಬ್ರವೀತ್ ॥ ೩

ಅಭೂತಪೂರ್ವಂ ಶೋಕಂ ಮೇ ಮನಃ ಸ್ಪ್ರಷ್ಟುಮಿವೇಚ್ಛತಿ ।
ಪಶ್ಯತೋ ಮೇ ಯಥಾ ನಷ್ಟಾ ಸೀತಾ ಶ್ರೀರಿವ ರೂಪಿಣೀ ॥ ೪

## ಸರ್ಗ ೯೮

ಸೀತೆಯು ರಸಾತಳವನ್ನು ಪ್ರವೇಶಿಸಲಾಗಿ ಶ್ರೀರಾಮನ ಕೋಪ
ಬ್ರಹ್ಮನಿಂದ ಸಾಂತ್ವನೆ ಕುಶಲವರನ್ನು ಕರೆದುಕೊಂಡು
ಶ್ರೀರಾಮನು ಪರ್ಣಶಾಲೆಯನ್ನು ಪ್ರವೇಶಿಸುವುದು

ವೈದೇಹಿಯು ರಸಾತಳವನ್ನು ಪ್ರವೇಶಿಸಲಾಗಿ ಸಮಸ್ತ ವಾನರರೂ 'ಹೋ' ಎಂದು ಅರಚಿದರು ಮುನಿಗಳು 'ಸಾಧು ಸಾಧು' ಎಂದು ಉಗ್ಗಡಿಸಿದರು ಶ್ರೀರಾಮನಾದರೋ ಒಂದು ದೊಣ್ಣೆಯನ್ನೂರಿ, * ಅದನ್ನವಲಂಬಿಸಿಕೊಂಡು ನಿಂತಿದ್ದನು ಕಣ್ಣೀರು ಹರಿಯುತ್ತಿತ್ತು ದೀನಚಿತ್ತನಾಗಿ ತಲೆ ತಗ್ಗಿಸಿದ್ದನು (೧-೨) ಬಹಳ ಹೊತ್ತು ಕಂಬನಿಮಿಡಿಯುತ್ತ ಗಳಗಳನೆ ಅತ್ತನು ಶೋಕದೊಂದಿಗೆ ಕ್ರೋಧವೂ ಉಕ್ಕಿತು ಆಗ ಶ್ರೀರಾಮನು "ನನ್ನ ಮನಸ್ಸಿಗೆ ಹಿಂದೆಂದೂ ಸಂಭವಿಸದಷ್ಟು ಶೋಕವು ಬಂದು ಮುಸುಕುವಂತೆ ತೋರುತ್ತಿದೆ ನೋಡುತ್ತಿರುವಾಗಲೇ ಕಣ್ಣೆದುರಿಗೆ ಸಾಕ್ಷಾಲ್ಲಕ್ಷ್ಮೀ

---

* ಯಜ್ಞದೀಕ್ಷಿತನು ಸೋಮಕ್ರಯಣಪರ್ಯಂತವಾಗಿ ಔದುಂಬರದಂಡವನ್ನು ಹಿಡಿದಿರಬೇಕೆಂಬುದು ಶಾಸ್ತ್ರವಿಧಿ

ಸಾದರ್ಶನಂ ಪುರಾ ಸೀತಾ ಲಂಕಾಂ ಪಾರೇ ಮಹೋದಧೇಃ ।
ತತಶ್ಚಾಪಿ ಮಯಾನೀತಾ ಕಿಂ ಪುನರ್ವಸುಧಾತಲಾತ್ ॥ ೫

ವಸುಧೇ ದೇವಿ ಭವತಿ ಸೀತಾ ನಿರ್ಯಾತ್ಯತಾಂ ಮಮ ।
ದರ್ಶಯಿಷ್ಯಾಮಿ ವಾ ರೋಷಂ ಯಥಾ ಮಾಮವಗಚ್ಛಸಿ ॥ ೬

ಕಾಮಂ ಶ್ವಶ್ರೂರ್ಮಮೈವ ತ್ವಂ ತ್ವತ್ಸಕಾಶಾದ್ಧಿ ಮೈಥಿಲೀ ।
ಕರ್ಷತಾ ಹಲಹಸ್ತೇನ ಜನಕೇನೋದ್ಧೃತಾ ಪುರಾ ॥ ೭

ತಸ್ಮಾನ್ನಿರ್ಯಾತ್ಯತಾಂ ಸೀತಾ ವಿವರಂ ವಾ ಪ್ರಯಚ್ಛ ಮೇ ।
ಪಾತಾಲೇ ನಾಕಪೃಷ್ಠೇ ವಾ ವಸೇಯಂ ಸಹಿತಸ್ತಯಾ ॥ ೮

ಆನಯ ತ್ವಂ ಹಿ ತಾಂ ಸೀತಾಂ ಮತ್ತೋಽಹಂ ಮೈಥಿಲೀಕೃತೇ ।
ನ ಮೇ ದಾಸ್ಯಸಿ ಚೇತ್ ಸೀತಾಂ ಯಥಾರೂಪಾಂ ಮಹೀತಲೇ ॥ ೯

ಸಪರ್ವತವನಾಂ ಕೃತ್ಸ್ನಾಂ ವಿಧಮಿಷ್ಯಾಮಿ ತೇ ಸ್ಥಿತಿಮ್ ।
ನಾಶಯಿಷ್ಯಾಮ್ಯಹಂ ಭೂಮಿಂ ಸರ್ವಮಾಪೋ ಭವತ್ವಿಹ ॥ ೧೦

---

ದೇವಿಯಂತಿರುವ ಸೀತೆಯು ಕಾಣದಾದಳು (೩-೪) ಹಿಂದೆ ಸೀತೆಯು ಮಹಾಸಾಗರದ ಆಚೆಗಿರುವ ಲಂಕೆಗೆ ಕಾಣದಂತೆ ಒಯ್ಯಲ್ಪಟ್ಟಿದ್ದಳು. ಅಲ್ಲಿಂದ ಅವಳನ್ನು ಬಿಡಿಸಿಕೊಂಡು ಬಂದಿದ್ದೇನೆ ಹೀಗಿರುವಾಗ ಈ ಭೂಗರ್ಭದಿಂದ ಆಕೆಯನ್ನು ತರಲಾರೆನೆ? (೫). ಹೇ ವಸುಧೆ, ದೇವಿ, ಪೂಜ್ಯಳೆ, ನನ್ನ ಸೀತೆಯನ್ನು ನನಗೆ ಒಪ್ಪಿಸಿಬಿಡು ಅಥವಾ ನನ್ನ ರೋಷದ ಪ್ರಕಾರ ವೇನೆಂಬುದನ್ನು ತೋರಿಸಲೊ? ನನ್ನ ಸಾಮರ್ಥ್ಯವೆಂತಹದೆಂಬುದು ನಿನಗೆ ತಿಳಿದಿರಬೇಕು! (೬) ನೀನು ನನಗೆ ಅತ್ತೆಯೆಂಬುದೇನೋ ದಿಟ ಜನಕ ರಾಜನು ನೇಗಿಲನ್ನು ಹಿಡಿದು ಉಳುವಾಗ ಮೈಥಿಲಿಯು ನಿನ್ನ ಗರ್ಭದಿಂದ ಮೂಡಿಬಂದಳಲ್ಲವೆ? ಹೇ ವಸುಧೆ, ಸೀತೆಯನ್ನಾದರೂ ಒಪ್ಪಿಸು. ಇಲ್ಲವೆ, ಭೂಮಿಯಲ್ಲಿ ಇಳಿದುಹೋಗುವಂತೆ ರಂಧ್ರವನ್ನಾದರೂ ನನಗೆ ಕಲ್ಪಿಸು. ಪಾತಾಳದಲ್ಲಾಗಲಿ ಸ್ವರ್ಗದಲ್ಲಾಗಲಿ ಸೀತೆಯೊಡನೆಯೇ ಇರುವೆನು (೭-೮). ಭೂದೇವಿ, ಮೈಥಿಲಿಯನ್ನು ಕರೆದುಕೊಂಡು ಬಾ ಅವಳಿಗಾಗಿ ನಾನು ಹುಚ್ಚ ನಾಗಿದ್ದೇನೆ ಮೊದಲಿದ್ದಂತೆ ಸೀತೆಯನ್ನು ಭೂತಳಕ್ಕೆ ತಂದು ಒಪ್ಪಿಸದಿದ್ದಲ್ಲಿ, ಪರ್ವತಾರಣ್ಯಸಹಿತವಾದ ನಿನ್ನ ಸಮಸ್ತ ಭೂಭಾಗವನ್ನೂ ವಿಧ್ವಂಸಗೊಳಿಸು

ಏವಂ ಬ್ರುವಾಣೇ ಕಾಕುತ್ಸ್ಥೇ ಕ್ರೋಧಶೋಕಸಮನ್ವಿತೇ ।
ಬ್ರಹ್ಮಾ ಸುರಗಣೈಃ ಸಾರ್ಧಮುವಾಚ ರಘುನಂದನಮ್ ॥ ೧೧
ರಾಮ ರಾಮ ನ ಸಂತಾಪಂ ಕರ್ತುಮರ್ಹಸಿ ಸುವ್ರತ ।
ಸ್ಮರ ತ್ವಂ ಪೂರ್ವಕಂ ಭಾವಂ ಮಂತ್ರಂ ಚಾಮಿತ್ರಕರ್ಶನ ॥ ೧೨
ನ ಖಲು ತ್ವಾಂ ಮಹಾಬಾಹೋ ಸ್ಮಾರಯೇಯಮನುತ್ತಮಮ್ ।
ಇಮಂ ಮುಹೂರ್ತಂ ದುರ್ಧರ್ಷ ಸ್ಮರ ತ್ವಂ ಜನ್ಮ ವೈಷ್ಣವಮ್ ॥
ಸೀತಾ ಹಿ ವಿಮಲಾ ಸಾಧ್ವೀ ತವ ಪೂರ್ವಪರಾಯಣಾ ।
ನಾಗಲೋಕಂ ಸುಖಂ ಪ್ರಾಯಾತ್ತ್ವದಾಶ್ರಯತಪೋಬಲಾತ್ ॥ ೧೪
ಸ್ವರ್ಗೇ ತೇ ಸಂಗಮೋ ಭೂಯೋ ಭವಿಷ್ಯತಿ ನ ಸಂಶಯಃ ।
ಅಸ್ಯಾಸ್ತು ಪರಿಷನ್ಮಧ್ಯೇ ಯದ್ಬ್ರವೀಮಿ ನಿಬೋಧ ತತ್ ॥ ೧೫
ಏತದೇವ ಹಿ ಕಾವ್ಯಂ ತೇ ಕಾವ್ಯಾನಾಮುತ್ತಮಂ ಶ್ರುತಮ್ ।
ಸರ್ವಂ ವಿಸ್ತರತೋ ರಾಮ ವ್ಯಾಖ್ಯಾಸ್ಯತಿ ನ ಸಂಶಯಃ ॥ ೧೬

---

ವೆನು ಭೂಮಂಡಲವನ್ನು ನಾಶಮಾಡುವೆನು. ಜಗತ್ತೆಲ್ಲವೂ ಜಲಮಯವಾಗಿ ಹೋಗಲಿ!" ಎಂದು ಆರ್ಭಟಿಸಿದನು (೯-೧೦). ಈ ಪ್ರಕಾರವಾಗಿ ಕಾಕುತ್ಸ್ಥನು ಕ್ರೋಧಶೋಕಾವಿಷ್ಟನಾಗಿ ಉದ್ಗರಿಸಲು, ದೇವಗಣಗಳೊಡನೆ ನಿಂತಿದ್ದ ಬ್ರಹ್ಮದೇವನು ರಘುನಂದನನನ್ನು ಕುರಿತು ಹೀಗೆಂದನು. "ರಾಮ, ರಾಮ, ಸುಶೀಲನಾದ ನೀನು ಹೀಗೆ ಸಂತಪ್ತನಾಗಬಾರದು. ನಿನ್ನ ನಿಜ ಸ್ವರೂಪವೇನೆಂಬುದನ್ನು ಸ್ಮರಿಸಿಕೊ ಹಿಂದೆ ದೇವತೆಗಳೊಡನೆ ನಡೆದ ಮಂತ್ರಾಲೋಚನೆಯು ಸ್ಮರಣೆಗೆ ಬರಲಿ (೧೧-೧೨) ಹೇ ಮಹಾಬಾಹು, ಪುರುಷೋತ್ತಮನಾದ ನಿನಗೆ ನಾನು ನೆನಪುಮಾಡಿಕೊಡಬೇಕಾಗಿಲ್ಲ ನೀನು ವಿಷ್ಣುವಿನ ಅವತಾರವೆಂಬುದು ಈ ಸಮಯದಲ್ಲಿ ಗಮನಕ್ಕೆ ಬರಲಿ ಪರಿಶುದ್ಧಳೂ ಪತಿವ್ರತೆಯೂ ಆದ ಸೀತೆಯು ನಿನ್ನ ನಿಜಸ್ವರೂಪವನ್ನಡರಲು ಸಮುತ್ಸಕಳಾಗಿದ್ದಳು ಅವಳು ನಿನ್ನ ಆಶ್ರಯವೆಂಬ ತಪಸ್ಸಿನ ಬಲದಿಂದ ನಾಗಲೋಕಕ್ಕೆ ಸುಖವಾಗಿ ಪ್ರಯಾಣ ಮಾಡಿದಳು (೧೩-೧೪) ಮತ್ತೆ ಅವಳ ಸಂಗವು ಸ್ವರ್ಗದಲ್ಲಿ—ವಿಷ್ಣುಲೋಕದಲ್ಲಿ ನಿನಗೆ ದೊರೆಯುವುದು ಸಂದೇಹವಿಲ್ಲ. ಈ ಸಭಾಮಧ್ಯದಲ್ಲಿ ನಾನು ಹೇಳುವುದನ್ನು ಕೇಳು (೧೫). ಏನೆಂದರೆ, ನಿನ್ನ ಕಾವ್ಯವೆನಿಸಿದ ಈ ರಾಮಾಯಣವೇ ಕಾವ್ಯಗಳಲ್ಲಿ

ಜನ್ಮಪ್ರಭೃತಿ ತೇ ವೀರ ಸುಖದುಃಖೋಪಸೇವನಮ್ ।
ಭವಿಷ್ಯದುತ್ತರಂ ಚೇಹ ಸರ್ವಂ ವಾಲ್ಮೀಕಿನಾ ಕೃತಮ್ ॥ ೧೭

ಆದಿಕಾವ್ಯಮಿದಂ ರಾಮ ತ್ವಯಿ ಸರ್ವಂ ಪ್ರತಿಷ್ಠಿತಮ್ ।
ನ ಹ್ಯನ್ಯೋಽರ್ಹತಿ ಕಾವ್ಯಾನಾಂ ಯಶೋಭಾಗ್ರಾಘವಾದೃತೇ ॥ ೧೮

ಶ್ರುತಂ ತೇ ಪೂರ್ವಮೇತದ್ಧಿ ಮಯಾ ಸರ್ವಂ ಸುರೈಃ ಸಹ ।
ದಿವ್ಯಮದ್ಭುತರೂಪಂ ಚ ಸತ್ಯವಾಕ್ಯಮನಾವೃತಮ್ ॥ ೧೯

ಸ ತ್ವಂ ಪುರುಷಶಾರ್ದೂಲ ಧರ್ಮೇಣ ಸುಸಮಾಹಿತಃ ।
ಶೇಷಂ ಭವಿಷ್ಯಂ ಕಾಕುತ್ಸ್ಥ ಕಾವ್ಯಂ ರಾಮಾಯಣಂ ಶೃಣು ॥ ೨೦

ಉತ್ತರಂ ನಾಮ ಕಾವ್ಯಸ್ಯ ಶೇಷಮತ್ರ ಮಹಾಯಶಃ ।
ತಚ್ಛೃಣುಷ್ವ ಮಹಾತೇಜ ಋಷಿಭಿಃ ಸಾರ್ಧಮುತ್ತಮಮ್ ॥ ೨೧

ನ ಖಲ್ವನ್ಯೇನ ಕಾಕುತ್ಸ್ಥ ಶ್ರೋತವ್ಯಮಿದಮುತ್ತಮಮ್ ।
ಪರಮಂ ಋಷಿಣಾ ವೀರ ತ್ವಯೈವ ರಘುನಂದನ ॥ ೨೨

---

ಅತ್ಯುತ್ತಮವೆನಿಸಿದೆ ಇದು ನಿನ್ನ ಚರಿತೆಯೆಲ್ಲವನ್ನೂ ವಿಸ್ತರವಾಗಿ ತಿಳಿಸುತ್ತದೆ ವೀರಾಗ್ರಣಿ, ನಿನ್ನ ಜನನದಿಂದ ಹಿಡಿದು ಸುಖದುಃಖಗಳ ಸನ್ನಿವೇಶವೆಲ್ಲವನ್ನೂ ಇದು ಬಣ್ಣಿಸುತ್ತದೆ. ಇನ್ನು ಮುಂದೆ ನಡೆಯುವುದನ್ನೂ ಸಹ ವಾಲ್ಮೀಕಿಮುನಿಗಳು ವರ್ಣಿಸಿದ್ದಾರೆ (೧೬-೧೭) ರಾಮಾಯಣವು ಆದಿಕಾವ್ಯವೆನಿಸುತ್ತದೆ ಶ್ರೀರಾಮ, ಅವರು ಹೇಳಿದ ಸಕಲ ಗುಣಗಳೂ ನಿನ್ನಲ್ಲಿ ನೆಲಸಿವೆ ಕಾವ್ಯಗಳಲ್ಲಿ ನಾಯಕನಾಗುವ ಅರ್ಹತೆ ರಾಘವನನ್ನು ಬಿಟ್ಟು ಇನ್ನೊಬ್ಬನಿಗಿಲ್ಲ! ರಾಘವನಂತಹ ಕೀರ್ತಿಶಾಲಿ ಮತ್ತೊಬ್ಬನಿಲ್ಲ (೧೮) ಶ್ರೀರಾಮ, ನಿನ್ನ ವರ್ಣನೆಯಿರುವ ಈ ಕಾವ್ಯವನ್ನು ನಾನು ದೇವಗಣಸಹಿತನಾಗಿ ಹಿಂದೆಯೇ ಕೇಳಿದ್ದೇನೆ ಇದು ದಿವ್ಯವಾದ ಕಾವ್ಯ ಅದ್ಭುತವಾದದ್ದು. ಸತ್ಯವಾದ ವೃತ್ತಾಂತಗಳನ್ನು ಒಳಗೊಂಡಿದೆ ಅಜ್ಞಾನಮೂಲಕವಾದ ಯಾವ ಪ್ರಲಾಪವೂ ಇದರಲಿಲ್ಲ (೧೯) ಹೇ ಪುರುಷೋತ್ತಮ, ನೀನು ಧರ್ಮನಿಷ್ಠೆಯಿಂದ ಸಮಾಹಿತನಾಗಿ ಅವಶಿಷ್ಟವಾದ ರಾಮಾಯಣಕಥೆಯನ್ನು ಕೇಳು ಇನ್ನು ಮುಂದೆ ನಡೆಯುವ ಉತ್ತರಕಾಂಡದ ಕಾವ್ಯಶೇಷವನ್ನು ಋಷಿಸಮೇತನಾಗಿ ಆಲಿಸು (೨೦-೨೧). ರಘುನಂದನ, ರಾಜರ್ಷಿ

*

ಏತಾವದುಕ್ತ್ವಾ ವಚನಂ ಬ್ರಹ್ಮಾ ತ್ರಿಭುವನೇಶ್ವರಃ ।
ಜಗಾಮ ತ್ರಿದಿವಂ ದೇವೋ ದೇವೈಃ ಸಹ ಸಬಾಂಧವೈಃ ॥ ೨೩
ಯೇ ಚ ತತ್ರ ಮಹಾತ್ಮಾನ ಋಷಯೋ ಬ್ರಾಹ್ಮಲೌಕಿಕಾಃ ।
ಬ್ರಹ್ಮಣಾ ಸಮನುಜ್ಞಾತಾ ನ್ಯವರ್ತಂತ ಮಹೌಜಸಃ ॥ ೨೪
ಉತ್ತರಂ ಶ್ರೋತುಮನಸೋ ಭವಿಷ್ಯಂ ಯಚ್ಚ ರಾಘವೇ ।
ತತೋ ರಾಮಃ ಶುಭಾಂ ವಾಣೀಂ ದೇವದೇವೇನ ಭಾಷಿತಾಮ್ ॥
ಶ್ರುತ್ವಾ ಪರಮತೇಜಸ್ವೀ ವಾಲ್ಮೀಕಿಮಿದಮಬ್ರವೀತ್ ।
ಭಗವನ್ ಶ್ರೋತುಮನಸ ಋಷಯೋ ಬ್ರಾಹ್ಮಲೌಕಿಕಾಃ ॥ ೨೬
ಭವಿಷ್ಯದುತ್ತರಂ ಯನ್ಮೇ ಶ್ವೋಭೂತೇ ಸಂಪ್ರವರ್ತತಾಮ್ ।
ಏವಂ ವಿನಿಶ್ಚಯಂ ಕೃತ್ವಾ ಸಂಪ್ರಗೃಹ್ಯ ಕುಶೀಲವೌ ॥ ೨೭
ತಂ ಜನೌಘಂ ವಿಸೃಜ್ಯಾಥ ಪರ್ಣಶಾಲಾಮುಪಾಗಮತ್ ।
ತಾಮೇವ ಶೋಚತಃ ಸೀತಾಂ ಸಾ ವ್ಯತೀಯಾಯ ಶರ್ವರೀ ॥ ೨೮

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟನವತಿತಮಃ ಸರ್ಗಃ

---

ಯಾದ ನೀನೊಬ್ಬನೇ (ಋಷಿಸಮೇತನಾಗಿ) ಅದನ್ನು ಕೇಳಬೇಕೇ ಹೊರತು ಬೇರೊಬ್ಬನು ಈಗ ಕೇಳಬಾರದು ” ಹೀಗೆ ನುಡಿದು ತ್ರಿಭುವನೇಶ್ವರನಾದ ಬ್ರಹ್ಮನು ದೇವಾದಿಪರಿವಾರಗಳೊಡನೆ ಸ್ವರ್ಗಕ್ಕೆ ಹೊರಟುಹೋದನು (೨೨-೨೩) ಅವನೊಡನೆ ಬ್ರಹ್ಮಲೋಕವಾಸಿಗಳಾದ ಮಹರ್ಷಿಗಳು ಸ್ವಲ್ಪ ದೂರ ಹೋಗಿ, ಶ್ರೀರಾಮನ ಉತ್ತರಕಥಾಶೇಷವನ್ನು ಕೇಳುವುದಕ್ಕಾಗಿ ಅನುಜ್ಞೆಯನ್ನು ಪಡೆದು ಹಿಂದಿರುಗಿಬಂದರು (೨೪). ದೇವದೇವನಾದ ಬ್ರಹ್ಮನ ಶುಭವಾಣಿಯನ್ನಾಲಿಸಿದ ಶ್ರೀರಾಮನು ವಾಲ್ಮೀಕಿಮುನಿಗಳನ್ನು ನೋಡಿ “ ಭಗವನ್, ಬ್ರಹ್ಮಲೋಕವಾಸಿಗಳಾದ ಋಷಿಗಳು ನನ್ನ ಭವಿಷ್ಯ ಕಥೆಯನ್ನು ಕೇಳಲು ಅಪೇಕ್ಷಿಸಿದ್ದಾರೆ ನಾಳೆ ಅದರ ವಾಚನವು ನಡೆಯಲಿ ” ಎಂದನು (೨೫-೨೬) ಹಾಗೆ ನಿರ್ಧರಿಸಿ ಕುಶಲವರನ್ನು ವಾತ್ಸಲ್ಯದಿಂದ ಕರೆದು ಕೊಂಡು, ಜನಸಮುದಾಯವನ್ನು ವಿಸರ್ಜಿಸಿ, ತನ್ನ ಪರ್ಣಶಾಲೆಯನ್ನು ಪ್ರವೇಶಿಸಿದನು ಶೋಕಾಕುಲನಾಗಿ ಸೀತೆಯನ್ನೇ ಕುರಿತು ಚಿಂತಿಸುತ್ತಿರುವಾಗಲೇ ರಾತ್ರಿ ಕಳೆಯಿತು (೨೭-೨೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತೆಂಟನೆಯ ಸರ್ಗ

## ಏಕೋನಶತತಮಃ ಸರ್ಗಃ

### ಕೌಸಲ್ಯಾದಿಕಾಲಧರ್ಮಃ

ರಜನ್ಯಾಂ ತು ಪ್ರಭಾತಾಯಾಂ ಸಮಾನೀಯ ಮಹಾಮುನೀನ್ ।
ಗೀಯತಾಮವಿಶಂಕಾಭ್ಯಾಂ ರಾಮಃ ಪುತ್ರಾವುವಾಚ ಹ ॥ ೧

ತತಃ ಸಮುಪವಿಷ್ಟೇಷು ಬ್ರಹ್ಮರ್ಷಿಷು ಮಹಾತ್ಮಸು ।
ಭವಿಷ್ಯದುತ್ತರಂ ಕಾವ್ಯಂ ಜಗತುಸ್ತೌ ಕುಶೀಲವೌ ॥ ೨

ಪ್ರವಿಷ್ಟಾಯಾಂ ತು ಸೀತಾಯಾಂ ಭೂತಲಂ ಸತ್ಯಸಂಪದಾ ।
ತಸ್ಯಾವಸಾನೇ ಯಜ್ಞಸ್ಯ ರಾಮಃ ಪರಮದುರ್ಮನಾಃ ॥ ೩

ಅಪಶ್ಯಮಾನೋ ವೈದೇಹೀಂ ಮೇನೇ ಶೂನ್ಯಮಿದಂ ಜಗತ್ ।
ಶೋಕೇನ ಪರಮಾಯಸ್ತೋ ನ ಶಾಂತಿಂ ಮನಸಾಗಮತ್ ॥ ೪

ವಿಸೃಜ್ಯ ಪಾರ್ಥಿವಾನ್ ಸರ್ವಾನೃಕ್ಷವಾನರರಾಕ್ಷಸಾನ್ ।
ಜನೌಘಂ ವಿಪ್ರಮುಖ್ಯಾನಾಂ ವಿತ್ತಪೂರ್ವಂ ವಿಸೃಜ್ಯ ಚ ॥ ೫

## ಸರ್ಗ ೯೯

ಶ್ರೀರಾಮನು ಪ್ರಾತಃಕಾಲದಲ್ಲಿ ರಾಮಾಯಣದ ಕಥಾಶೇಷವನ್ನು ಕೇಳುವುದು.
ಯಜ್ಞಸಮಾಪ್ತಿ ಕೌಸಲ್ಯೆ ಮುಂತಾದವರ ನಿಧನ.

ರಾತ್ರಿ ಕಳೆದು ಬೆಳಗಾಯಿತು ಶ್ರೀರಾಮನು ಮಹಾಮುನಿಗಳನ್ನು ಬರಮಾಡಿಕೊಂಡು ಕುಶಲವರನ್ನು ಕುರಿತು "ಮಕ್ಕಳೆ, ನಿಶ್ಶಂಕೆಯಿಂದ ಹಾಡಿರಿ" ಎಂದು ತಿಳಿಸಿದನು ಮಹಾತ್ಮರಾದ ಬ್ರಹ್ಮರ್ಷಿಗಳು ಕುಳಿತಿರಲಾಗಿ ಕುಶಲವರು ರಾಮಾಯಣಕಾವ್ಯದ ಮುಂದಿನ ಉತ್ತರಕಾಂಡವನ್ನು ಹಾಡಿದರು (೧-೨) : ಸೀತೆಯು ತನ್ನ ಸತ್ಯಬಲದಿಂದ ಭೂಗರ್ಭವನ್ನು ಪ್ರವೇಶಿಸಲಾಗಿ, ಇತ್ತ ಅಶ್ವಮೇಧಯಾಗವು ಸಮಾಪ್ತವಾಯಿತು. ವೈದೇಹಿಯನ್ನು ಕಾಣದೆ ಶ್ರೀರಾಮನು ಅತ್ಯಂತ ದುಃಖಿತನಾಗಿ ಜಗತ್ತೆಲ್ಲವೂ ಶೂನ್ಯವಾಯಿತೆಂದು ತಿಳಿದುಕೊಂಡನು ಶೋಕಭಾರದಿಂದ ಸಂತಪ್ತನಾದ ಅವನ ಹೃದಯಕ್ಕೆ ಶಾಂತಿಯೇ ಲಭಿಸಲಿಲ್ಲ (೩-೪) ಸಕಲ ರಾಜರಿಗೂ ಭಲ್ಲೂಕ

ಏವಂ ಸಮಾಪ್ಯ ಯಜ್ಞಂ ತು ವಿಧಿವತ್ ಸ ತು ರಾಘವಃ ।
ತತೋ ವಿಸೃಜ್ಯ ತಾನ್ ಸರ್ವಾನ್ ರಾಮೋ ರಾಜೀವಲೋಚನಃ ॥

ಹೃದಿ ಕೃತ್ವಾ ತದಾ ಸೀತಾಮಯೋಧ್ಯಾಂ ಪ್ರವಿವೇಶ ಹ ।
ಇಷ್ಟಯಜ್ಞೋ ನರಪತಿಃ ಪುತ್ರದ್ವಯಸಮನ್ವಿತಃ ॥ ೭

ನ ಸೀತಾಯಾಃ ಪರಾಂ ಭಾರ್ಯಾಂ ವವ್ರೇ ಸ ರಘುನಂದನಃ ।
ಯಜ್ಞೇ ಯಜ್ಞೇ ಚ ಪತ್ನ್ಯರ್ಥಂ ಜಾನಕೀ ಕಾಂಚನೀ ಭವತ್ ॥ ೮

ದಶ ವರ್ಷಸಹಸ್ರಾಣಿ ವಾಜಿಮೇಧಾನಥಾಕರೋತ್ ।
ವಾಜಪೇಯಾನ್ ದಶಗುಣಾಂಸ್ತಥಾ ಬಹುಸುವರ್ಣಕಾನ್ ॥ ೯

ಅಗ್ನಿಷ್ಟೋಮಾತಿರಾತ್ರಾಭ್ಯಾಂ ಗೋಸವೈಶ್ಚ ಮಹಾಧನೈಃ ।
ಈಜೇ ಕ್ರತುಭಿರನ್ಯೈಶ್ಚ ಸ ಶ್ರೀಮಾನಾಪ್ತದಕ್ಷಿಣೈಃ ॥ ೧೦

ಏವಂ ಸ ಕಾಲಃ ಸುಮಹಾನ್ ರಾಜ್ಯಸ್ಥಸ್ಯ ಮಹಾತ್ಮನಃ ।
ಧರ್ಮೇ ಪ್ರಯತಮಾನಸ್ಯ ವ್ಯತೀಯಾದ್ರಾಘವಸ್ಯ ತು ॥ ೧೧

---

ವಾನರ ರಾಕ್ಷಸರಿಗೂ ಸಮ್ಮಾನವನ್ನು ಮಾಡಿ ವಿಪ್ರರಿಗೆ ದಕ್ಷಿಣೆಯನ್ನಿತ್ತು ಎಲ್ಲರನ್ನೂ ಕಳಿಸಿದನು. ಹೀಗೆ ವಿಧಿಪೂರ್ವಕವಾಗಿ ರಾಘವನು ಯಜ್ಞವನ್ನು ಮುಗಿಸಿದನು ಎಲ್ಲರನ್ನೂ ಕಳಿಸಿದ ಮೇಲೆ ಆ ರಾಜೀವಲೋಚನನು ಹೃದಯದಲ್ಲಿ ಸೀತೆಯನ್ನೇ ನೆನೆಯುತ್ತ ಇಬ್ಬರು ಪುತ್ರರನ್ನು ಕರೆದುಕೊಂಡು ಅಯೋಧ್ಯೆಗೆ ಬಂದನು (೫-೭) ರಾಘವನು ಸೀತೆಯನ್ನು ಬಿಟ್ಟು ಇನ್ನೊಬ್ಬ ಪತ್ನಿಯನ್ನು ವರಿಸಲಿಲ್ಲ ಅವನು ನಡೆಸಿದ ಪ್ರತಿಯೊಂದು ಯಜ್ಞದಲ್ಲಿಯೂ ಪತ್ನಿಯ ಸ್ಥಾನದಲ್ಲಿ ಸುವರ್ಣಮಯವಾದ ಜಾನಕಿಯ ಪ್ರತಿಮೆಯನ್ನು ಇರಿಸಿಕೊಳ್ಳುತ್ತಿದ್ದನು (೮) ಮುಂದೆ ಹತ್ತು ಸಾವಿರ ವರ್ಷಗಳವರೆಗೆ ಅನೇಕ ಅಶ್ವಮೇಧಯಾಗಗಳನ್ನೂ ಅದರ ಹತ್ತರಷ್ಟು ವಾಜಪೇಯಗಳನ್ನೂ ಅಗ್ನಿಷ್ಟೋಮ, ಅತಿರಾತ್ರ, ಗೋಸವ—ಮುಂತಾದ ವಿವಿಧ ಯಾಗಗಳನ್ನೂ ಬೇಕಾದಷ್ಟು ಸುವರ್ಣದಕ್ಷಿಣೆಗಳಿಂದ ಸಹಿತವಾಗಿ ಆಚರಿಸಿದನು (೯-೧೦) ಹೀಗೆ ಶ್ರೀರಾಮನು ರಾಜ್ಯಭಾರವನ್ನು ನಿರ್ವಹಿಸುತ್ತ ಧರ್ಮರಕ್ಷಣೆಗಾಗಿ

ಅನುರಂಜಂತಿ ರಾಜಾನಮಹನ್ಯಹನಿ ರಾಘವಮ್ ।
ಋಕ್ಷವಾನರರಕ್ಷಾಂಸಿ ಸ್ಥಿತಾ ರಾಮಸ್ಯ ಶಾಸನೇ ॥ ೧೨

ಕಾಲೇ ವರ್ಷತಿ ಪರ್ಜನ್ಯಃ ಸುಭಿಕ್ಷಂ ವಿಮಲಾ ದಿಶಃ ।
ಹೃಷ್ಟಪುಷ್ಟಜನಾಕೀರ್ಣಂ ಪುರಂ ಜನಪದಾಸ್ತಥಾ ॥ ೧೩

ನಾಕಾಲೇ ಮ್ರಿಯತೇ ಕಶ್ಚಿನ್ನ ವ್ಯಾಧಿಃ ಪ್ರಾಣಿನಾಂ ತಥಾ ।
ನಾನರ್ಥೋ ವಿದ್ಯತೇ ಕಶ್ಚಿದ್ರಾಮೇ ರಾಜ್ಯಂ ಪ್ರಶಾಸತಿ ॥ ೧೪

ಅಥ ದೀರ್ಘಸ್ಯ ಕಾಲಸ್ಯ ರಾಮಮಾತಾ ಯಶಸ್ವಿನೀ ।
ಪುತ್ರಪೌತ್ರೈಃ ಪರಿವೃತಾ ಕಾಲಧರ್ಮಮುಪಾಗಮತ್ ॥ ೧೫

ಅನ್ವಿಯಾಯ ಸುಮಿತ್ರಾ ಚ ಕೈಕೇಯೀ ಚ ಯಶಸ್ವಿನೀ ।
ಧರ್ಮಂ ಕೃತ್ವಾ ಬಹುವಿಧಂ ತ್ರಿದಿವೇ ಪರ್ಯವಸ್ಥಿತಾ ॥ ೧೬

ಸರ್ವಾಃ ಪ್ರಮುದಿತಾಃ ಸ್ವರ್ಗೇ ರಾಜ್ಞಾ ದಶರಥೇನ ಚ ।
ಸಮಾಗತಾ ಮಹಾಭಾಗಾಃ ಸರ್ವಧರ್ಮಂ ಚ ಲೇಭಿರೇ ॥ ೧೭

---

ಶ್ರಮಿಸುತ್ತಿರಲು ಬಹಳ ಕಾಲವು ಕಳೆಯಿತು ಭಲ್ಲೂಕ ವಾನರ ರಾಕ್ಷಸರು ಆ ಮಹಾತ್ಮನ ಆಜ್ಞೆಗೆ ತಲೆಬಾಗಿ ಸೇವೆಯನ್ನು ಸಲ್ಲಿಸುತ್ತಿದ್ದರು (೧೧-೧೨) ಸರಿಯಾದ ಕಾಲದಲ್ಲಿ ಮಳೆ ಬರುತ್ತಿತ್ತು ಸುಭಿಕ್ಷವು ನೆಲೆಸಿತ್ತು ದಿಕ್ಕುಗಳು ಪ್ರಸನ್ನವಾಗಿದ್ದವು ರಾಜಧಾನಿಯೂ ರಾಷ್ಟ್ರವೂ ಹೃಷ್ಟಪುಷ್ಟರಾದ ಪ್ರಜೆಗಳಿಂದ ತುಂಬಿತ್ತು ಅಕಾಲದಲ್ಲಿ ಯಾವನೂ ಸಾಯುತ್ತಿರಲಿಲ್ಲ ಜನರಿಗೆ ರೋಗಬಾಧೆ ಇರಲಿಲ್ಲ ಯಾವ ಅನರ್ಥವೂ ಸಂಭವಿಸುತ್ತಿರಲಿಲ್ಲ (೧೩-೧೪) ಹೀಗೆ ದೀರ್ಘಕಾಲವು ಕಳೆದಮೇಲೆ, ಪುತ್ರ ಪೌತ್ರರೊಡನೆ ವಿರಾಜಿಸುತ್ತಿದ್ದ ಕೀರ್ತಿಶಾಲಿನಿಯೂ ಶ್ರೀರಾಮನ ಮಾತೆಯೂ ಆದ ಕೌಸಲ್ಯೆಯು ಕಾಲಧರ್ಮವನ್ನೈದಿದಳು (೧೫) ಬಹುವಿಧವಾದ ಧರ್ಮಕಾರ್ಯಗಳನ್ನು ನೆರವೇರಿಸಿ ಸುಮಿತ್ರೆ, ಕೈಕೇಯಿಯರೂ ಸಹ ಕೌಸಲ್ಯೆಯನ್ನು ಹಿಂಬಾಲಿಸಿ ಸ್ವರ್ಗಸ್ಥರಾದರು ಆ ಭಾಗ್ಯಶಾಲಿನಿಯರೆಲ್ಲರೂ ಸ್ವರ್ಗದಲ್ಲಿ ದಶರಥ ಮಹಾರಾಜನೊಡನೆ ಮಿಳಿತರಾಗಿ ಪುಣ್ಯಫಲವನ್ನನುಭವಿಸುತ್ತ ಸುಖದಿಂದ

ತಾಸಾಂ ರಾಮೋ ಮಹಾದಾನಂ ಕಾಲೇ ಕಾಲೇ ಪ್ರಯಚ್ಛತಿ ।
ಮಾತೄಣಾಮವಿಶೇಷೇಣ ಬ್ರಾಹ್ಮಣೇಷು ತಪಸ್ವಿಷು ॥ ೧೮

ಪಿತ್ರ್ಯಾಣಿ ಬ್ರಹ್ಮರತ್ನಾನಿ ಯಜ್ಞಾನ್ ಪರಮದುಸ್ತರಾನ್ ।
ಚಕಾರ ರಾಮೋ ಧರ್ಮಾತ್ಮಾ ಪಿತೄನ್ ದೇವಾನ್ ವಿವರ್ಧಯನ್ ॥

ಏವಂ ವರ್ಷಸಹಸ್ರಾಣಿ ಬಹೂನ್ಯಥ ಯಯುಃ ಸುಖಮ್ ।
ಯಜ್ಞೈರ್ಬಹುವಿಧಂ ಧರ್ಮಂ ವರ್ಧಯಾನಸ್ಯ ಸರ್ವದಾ ॥ ೨೦

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋನಶತತಮಃ ಸರ್ಗಃ



ಇದ್ದರು (೧೬-೧೭) ಆ ಮಾತೆಯರಿಗೋಸ್ಕರ ಶ್ರೀರಾಮನು ಕಾಲ ಕಾಲಗಳಲ್ಲಿ ತಪಸ್ವಿಗಳಾದ ಬ್ರಾಹ್ಮಣರಿಗೆ ಮಹಾದಾನಗಳನ್ನು ಕೊಟ್ಟನು ಮಾತೆಯರ ಶ್ರಾದ್ಧಾದಿಕ್ರಿಯೆಗಳಲ್ಲಿ ಯಾವ ಭೇದಭಾವವನ್ನೂ ಮಾಡಲಿಲ್ಲ (೧೮) ಧರ್ಮಾತ್ಮನಾದ ಶ್ರೀರಾಮನು ಪಿತೃದೇವತಾಪ್ರೀತ್ಯರ್ಥವಾಗಿ ವಿಪ್ರರಿಗೆ ಉತ್ತಮ ದಾನಗಳನ್ನಿತ್ತು ಕಠಿಣವಾದ ಪಿಂಡಪಿತೃಯಜ್ಞಗಳನ್ನು ಸಾಂಗವಾಗಿ ನೆರವೇರಿಸುತ್ತಿದ್ದನು (೧೯) ಹೀಗೆ ಯಜ್ಞಾದಿಗಳಿಂದ ಧರ್ಮವನ್ನು ಬಹುಮುಖವಾಗಿ ಸರ್ವದಾ ಸಂರಕ್ಷಿಸುತ್ತಿರಲು, ಬಹಳ ಕಾಲವು ಶಾಂತವಾಗಿ ಕಳೆಯಿತು (೨೦)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ತೊಂಬತ್ತೊಂಬತ್ತನೆಯ ಸರ್ಗ



## ಶತತಮಃ ಸರ್ಗಃ

### ಗಂಧರ್ವವಿಷಯವಿಜಯಯಾತ್ರಾ

ಕಸ್ಯಚಿತ್ತ್ವಥ ಕಾಲಸ್ಯ ಯುಧಾಜಿತ್ ಕೇಕಯೋ ನೃಪಃ ।
ಸ್ವಗುರುಂ ಪ್ರೇಷಯಾಮಾಸ ರಾಘವಾಯ ಮಹಾತ್ಮನೇ ॥ ೧

ಗಾರ್ಗ್ಯಮಂಗಿರಸಃ ಪುತ್ರಂ ಬ್ರಹ್ಮರ್ಷಿಮಮಿತಪ್ರಭಮ್ ।
ದಶ ಚಾಶ್ವಸಹಸ್ರಾಣಿ ಪ್ರೀತಿದಾನಮನುತ್ತಮಮ್ ॥ ೨

ಕಂಬಲಾನಿ ಚ ರತ್ನಾನಿ ಚಿತ್ರವಸ್ತ್ರಮಥೋತ್ತಮಮ್ ।
ರಾಮಾಯ ಪ್ರದದೌ ರಾಜಾ ಶುಭಾನ್ಯಾಭರಣಾನಿ ಚ ॥ ೩

ಶ್ರುತ್ವಾ ತು ರಾಘವೋ ಧೀಮಾನ್ ಬ್ರಹ್ಮರ್ಷಿಂ ಗಾರ್ಗ್ಯಮಾಗತಮ್
ಮಾತುಲಸ್ಯಾಶ್ವಪತಿನಃ ಪ್ರಹಿತಂ ತನ್ಮಹದ್ಧನಮ್ ॥ ೪

## ಸರ್ಗ ೧೦೦

ಯುಧಾಜಿತನ ಸಂದೇಶವನ್ನನುಸರಿಸಿ ಗಂಧರ್ವರಾಜ್ಯವನ್ನು ಜಯಿಸಲು ಭರತನನ್ನೂ ಅವನ ಮಕ್ಕಳನ್ನೂ ಕಳಿಸುವುದು.

ಕೆಲವು ಕಾಲದ ಮೇಲೆ ಕೇಕಯರಾಜನಾದ ಯುಧಾಜಿತನು ತನ್ನ ಗುರುಗಳೂ ಅಂಗಿರಸರ ಪುತ್ರರೂ ಆದ ಗಾರ್ಗ್ಯರನ್ನು ರಾಘವನ ಬಳಿಗೆ ಕಳಿಸಿದನು ಆ ಬ್ರಹ್ಮರ್ಷಿಗಳೊಡನೆ ಪಾರಿತೋಷಿಕವಾಗಿ ಹತ್ತು ಸಾವಿರ ಕುದುರೆಗಳನ್ನೂ ಉತ್ತಮವಾದ ಕಂಬಳಿ, ಚಿತ್ರವಸ್ತ್ರಗಳನ್ನೂ, ರತ್ನ, ಸುವರ್ಣಾಭರಣಗಳನ್ನೂ ಶ್ರೀರಾಮನಿಗೆ ಕಳಿಸಿಕೊಟ್ಟನು (೧-೩). ಬ್ರಹ್ಮರ್ಷಿಗಳಾದ ಗಾರ್ಗ್ಯರು ಆಗಮಿಸುತ್ತಿರುವರೆಂದೂ ಅಶ್ವಪತಿಪುತ್ರನಾದ ಸೋದರಮಾವನು ಧನರಾಶಿಯನ್ನು ಕಳಿಸಿರುವನೆಂದೂ ರಾಘವನಿಗೆ ವಾರ್ತೆ ಬಂದಿತು. ಒಡನೆಯೇ ಕಾಕುತ್ಸ್ಥನು ಸೋದರಸಮೇತನಾಗಿ ಹೊರಟು ಬಂದು ಹರದಾರಿ ದೂರದಲ್ಲಿಯೇ ಗಾರ್ಗ್ಯರನ್ನು ಎದುರ್ಗೊಂಡು ಕರೆತಂದು, ಇಂದ್ರನು

ಪ್ರತ್ಯುದ್ಗಮ್ಯ ಚ ಕಾಕುತ್ಸ್ಥಃ ಕ್ರೋಶಮಾತ್ರಂ ಸಹಾನುಜಃ ।
ಗಾರ್ಗ್ಯಂ ಸಂಪೂಜಯಾಮಾಸ ಯಥಾ ಶಕ್ರೋ ಬೃಹಸ್ಪತಿಮ್ ॥ ೫

ತಥಾ ಸಂಪೂಜ್ಯ ತಮೃಷಿಂ ತದ್ಧನಂ ಪ್ರತಿಗೃಹ್ಯ ಚ ।
ಪೃಷ್ಟ್ವಾ ಪ್ರತಿಪದಂ ಸರ್ವಂ ಕುಶಲಂ ಮಾತುಲಸ್ಯ ಚ ॥ ೬

ಉಪವಿಷ್ಟಂ ಮಹಾಭಾಗಂ ರಾಮಃ ಪ್ರಷ್ಟುಂ ಪ್ರಚಕ್ರಮೇ ।
ಕಿಮಾಹ ಮಾತುಲೋ ವಾಕ್ಯಂ ಯದರ್ಥಂ ಭಗವಾನಿಹ ॥ ೭

ಪ್ರಾಪ್ತೋ ವಾಕ್ಯವಿದಾಂ ಶ್ರೇಷ್ಠಃ ಸಾಕ್ಷಾದಿವ ಬೃಹಸ್ಪತಿಃ ।
ರಾಮಸ್ಯ ಭಾಷಿತಂ ಶ್ರುತ್ವಾ ಮಹರ್ಷಿಃ ಕಾರ್ಯವಿಸ್ತರಮ್ ॥ ೮

ವಕ್ತುಮದ್ಭುತಸಂಕಾಶಂ ರಾಘವಾಯೋಪಚಕ್ರಮೇ ।
ಮಾತುಲಸ್ತೇ ಮಹಾಬಾಹೋ ವಾಕ್ಯಮಾಹ ನರರ್ಷಭ ॥ ೯

ಯುಧಾಜಿತ್ ಪ್ರೀತಿಸಂಯುಕ್ತಂ ಶ್ರೂಯತಾಂ ಯದಿ ರೋಚತೇ ।
ಅಯಂ ಗಂಧರ್ವವಿಷಯಃ ಫಲಮೂಲೋಪಶೋಭಿತಃ ॥ ೧೦

ಸಿಂಧೋರುಭಯತಃ ಪಾರ್ಶ್ವೇ ದೇಶಃ ಪರಮಶೋಭನಃ ।
ತಂ ಚ ರಕ್ಷಂತಿ ಗಂಧರ್ವಾಃ ಸಾಯುಧಾ ಯುದ್ಧಕೋವಿದಾಃ ॥ ೧೧

---

ಬೃಹಸ್ಪತಿಯನ್ನು ಪೂಜಿಸುವಂತೆ, ಪೂಜಿಸಿ ಸತ್ಕರಿಸಿದನು (೪-೫) ಅವರು ಒಪ್ಪಿಸಿದ ಧನವನ್ನು ಸ್ವೀಕರಿಸಿ ಸೋದರಮಾವನೇ ಮೊದಲಾದವರೆಲ್ಲರ ಕುಶಲವನ್ನು ವಿಚಾರಿಸಿ "ಭಗವನ್, ನನ್ನ ಮಾತುಲನು ಏನು ಹೇಳಿದ್ದಾನೆ? ಬೃಹಸ್ಪತಿಯಂತೆ ವಾಗ್ಮಿಗಳಾದ ತಾವು ಆಗಮಿಸಿದ ನಿಮಿತ್ತವೇನು?" ಎಂದು ಕೇಳಿದನು (೬-೭) ಆಗ ಗಾರ್ಗ್ಯಮುನಿಗಳು ವಿಸ್ಮಯಕರವಾದ ಮಾತನ್ನಾಡಿದರು ಏನೆಂದರೆ, "ಮಹಾಬಾಹು–ಶ್ರೀರಾಮ, ಯುಧಾಜಿತನು ಪ್ರೀತಿಯಿಂದ ಒಂದು ಸಂದೇಶವನ್ನು ಕಳಿಸಿದ್ದಾನೆ ನಿನಗೆ ರುಚಿಸುವುದಾದರೆ, ಆಲಿಸು. 'ಸಿಂಧು ನದಿಯ ಎರಡು ಪಾರ್ಶ್ವಗಳಲ್ಲಿಯೂ ಫಲಮೂಲ ಶೋಭಿತವಾದ ಒಂದು ಮನೋಹರ ದೇಶ ಉಂಟು. ಅದು ಗಂಧರ್ವರಿಗೆ ಸೇರಿದೆ ಯುದ್ಧಕೋವಿದರಾದ ಗಂಧರ್ವರು ಆ ದೇಶವನ್ನು ರಕ್ಷಿಸುತ್ತಿದ್ದಾರೆ

ಶೈಲೂಷಸ್ಯ ಸುತಾ ವೀರ ತ್ರಿಕೋಟ್ಯೋ ವೈ ಮಹಾಬಲಾಃ ।
ತಾನ್ ವಿನಿರ್ಜಿತ್ಯ ಕಾಕುತ್ಸ್ಥ ಗಂಧರ್ವನಗರಂ ಶುಭಮ್ ॥ ೧೨
ನಿವೇಶಯ ಮಹಾಬಾಹೋ ಸ್ವಪುರೇ ಸುಸಮಾಹಿತೇ ।
ಅನ್ಯಸ್ಯ ನ ಗತಿಸ್ತತ್ರ ದೇಶಃ ಪರಮಶೋಭನಃ ॥ ೧೩
ರೋಚತಾಂ ತೇ ಮಹಾಬಾಹೋ ನಾಹಂ ತ್ವಾಮಹಿತಂ ವದೇ ।
ತಚ್ಛ್ರುತ್ವಾ ರಾಘವಃ ಪ್ರೀತೋ ಮಹರ್ಷೇರ್ಮಾತುಲಸ್ಯ ಚ ॥ ೧೪
ಉವಾಚ ಬಾಢಮಿತ್ಯೇವ ಭರತಂ ಚಾನ್ವವೈಕ್ಷತ ।
ಸೋಽಬ್ರವೀದ್ರಾಘವಃ ಪ್ರೀತಃ ಸಾಂಜಲಿಪ್ರಗ್ರಹೋ ದ್ವಿಜಮ್ ॥
ಇಮೌ ಕುಮಾರೌ ತಂ ದೇಶಂ ಬ್ರಹ್ಮರ್ಷೇ ವಿಚರಿಷ್ಯತಃ ।
ಭರತಸ್ಯಾತ್ಮಜೌ ವೀರೌ ತಕ್ಷಃ ಪುಷ್ಕಲ ಏವ ಚ ॥ ೧೬
ಮಾತುಲೇನ ಸುಗುಪ್ತೌ ತು ಧರ್ಮೇಣ ಸುಸಮಾಹಿತೌ ।
ಭರತಂ ಚಾಗ್ರತಃ ಕೃತ್ವಾ ಕುಮಾರೌ ಸಬಲಾನುಗೌ ॥ ೧೭

---

(೮-೧೧). ಅವರು ಶೈಲೂಷನೆಂಬ ಗಂಧರ್ವರಾಜನ ಮಕ್ಕಳು ಬಲಾಢ್ಯರು. ಅವರ ಸಂಖ್ಯೆ ಮೂರು ಕೋಟಿ ಇದ ರಾಘವ, ಗಂಧರ್ವರನ್ನು ಗೆದ್ದು ಅವರ ರಾಜಧಾನಿಯನ್ನು ವಶಪಡಿಸಿಕೊಂಡು ಆ ದೇಶದಲ್ಲಿ ವ್ಯವಸ್ಥಿತವಾದ ಎರಡು ನಗರಗಳನ್ನು ನಿರ್ಮಿಸು ಆ ದೇಶವು ಪರಮ ರಮಣೀಯವಾಗಿದೆ. ನೀನಲ್ಲದೆ ಇನ್ನೊಬ್ಬನಿಗೆ ಅಲ್ಲಿ ಪ್ರವೇಶಿಸುವುದು ಶಕ್ಯವಲ್ಲ (೧೨-೧೩). ಎಲೈ ವೀರನೆ, ಈ ಸಂದೇಶವು ನಿನಗೆ ರುಚಿಸೀತೆಂದು ಆಶಿಸಿದ್ದೇನೆ ನಿನಗೆ ಅಹಿತವಾದ್ದನ್ನು ನಾನು ಹೇಳುವುದಿಲ್ಲ' ಎಂದು ಯುಧಾಜಿತನು ಹೇಳಿ ಕಳಿಸಿದ್ದಾನೆ" ಎಂದರು ಮಾತುಲನ ಸಂದೇಶವನ್ನು ಈ ಪ್ರಕಾರವಾಗಿ ಗಾರ್ಗ್ಯರು ಹೇಳಲು ರಾಘವನಿಗೆ ಸಂತೋಷವಾಯಿತು (೧೪) ಅವನು ಆಗಬಹುದೆಂದು ಹೇಳಿ ಭರತನ ಮುಖವನ್ನು ನೋಡಿದನು. ಅನಂತರ ಕೈಮುಗಿದುಕೊಂಡು "ಗಾರ್ಗ್ಯಮಹರ್ಷಿಗಳೆ, ಈ ಕುಮಾರರು ಭರತನ ವೀರಪುತ್ರರು ತಕ್ಷ, ಪುಷ್ಕಲ ಎಂದು ಇವರ ಹೆಸರು ಈ ವೀರರು ಗಂಧರ್ವರಾಜ್ಯದಲ್ಲಿ ನುಗ್ಗಬಲ್ಲರು. ಭರತನನ್ನು ಮುಂದೆ ಮಾಡಿಕೊಂಡು

ನಿಹತ್ಯ ಗಂಧರ್ವಸುತಾನ್ ದ್ವೇ ಪುರೀ ವಿಭಜಿಷ್ಯತಃ ।
ನಿವೇಶ್ಯ ತೇ ಪುರವರೇ ಆತ್ಮಜೌ ಸಂನಿವೇಶ್ಯ ಚ ॥ ೧೮

ಆಗಮಿಷ್ಯತಿ ಮೇ ಭೂಯಃ ಸಕಾಶಮತಿಧಾರ್ಮಿಕಃ ।
ಬ್ರಹ್ಮರ್ಷಿಮೇವಮುಕ್ತ್ವಾ ತು ಭರತಂ ಸ ಬಲಾನುಗಮ್ ॥ ೧೯

ಆಜ್ಞಾಪಯಾಮಾಸ ತದಾ ಕುಮಾರೌ ಚಾಭ್ಯಷೇಚಯತ್ ।
ನಕ್ಷತ್ರೇಣ ಚ ಸೌಮ್ಯೇನ ಪುರಸ್ಕೃತ್ಯಾಂಗಿರಃಸುತಮ್ ॥ ೨೦

ಭರತಃ ಸಹ ಸೈನ್ಯೇನ ಕುಮಾರಾಭ್ಯಾಂ ವಿನಿರ್ಯಯೌ ।
ಸಾ ಸೇನಾ ಶಕ್ರಯುಕ್ತೇವ ನಗರಾನ್ನಿರ್ಯಯಾವಥ ॥ ೨೧

ರಾಘವಾನುಗತಾ ದೂರಂ ದುರಾಧರ್ಷಾ ಸುರೈರಪಿ ।
ಮಾಂಸಾದಾನಿ ಚ ಸತ್ತ್ವಾನಿ ರಕ್ಷಾಂಸಿ ಸುಮಹಾಂತಿ ಚ ॥ ೨೨

ಅನುಜಗ್ಮುರ್ಹಿ ಭರತಂ ರುಧಿರಸ್ಯ ಪಿಪಾಸಯಾ ।
ಭೂತಗ್ರಾಮಾಶ್ಚ ಬಹವೋ ಮಾಂಸಭಕ್ಷಾಃ ಸುದಾರುಣಾಃ ॥ ೨೩

---

ಸೇನಾಸಮೇತರಾಗಿ ಹೋಗುವರು (೧೫-೧೭) ಗಂಧರ್ವರನ್ನು ನಿಗ್ರಹಿಸಿ ಎರಡು ನಗರಗಳನ್ನು ನಿರ್ಮಿಸುವರು ಧರ್ಮನಿಷ್ಠನಾದ ಭರತನು ಆ ನಗರಗಳಲ್ಲಿ ತನ್ನ ಪುತ್ರರನ್ನು ಸ್ಥಾಪಿಸಿ ಮುಂದಿನ ವ್ಯವಸ್ಥೆಯನ್ನು ಮಾಡಿ ನನ್ನ ಬಳಿಗೆ ಬರುವನು" ಎಂದನು ಹೀಗೆ ರಾಘವನು ಆ ಬ್ರಹ್ಮರ್ಷಿಗಳಿಗೆ ತಿಳಿಸಿ, ಸೇನಾಸಮೇತನಾಗಿ ಹೊರಡುವಂತೆ ಭರತನಿಗೆ ಆಜ್ಞೆಯನ್ನಿತ್ತನು (೧೮-೧೯) ಗಾರ್ಗ್ಯಮುನಿಗಳೆದುರಿಗೆ ಒಂದು ಶುಭನಕ್ಷತ್ರದಲ್ಲಿ ತಕ್ಷ, ಪುಷ್ಕಲರಿಗೆ ಪಟ್ಟಾಭಿಷೇಕಮಾಡಿಸಿದನು ಅನಂತರ ಭರತನು ಗಾರ್ಗ್ಯರೊಂದಿಗೆ ಪುತ್ರಸಮೇತನಾಗಿ ಸೇನೆಯನ್ನು ತೆಗೆದುಕೊಂಡು ಹೊರಟನು ದೇವೇಂದ್ರಸಹಿತವಾದ ದೇವಸೇನೆಯಂತೆ ಆ ಸೇನೆಯು ಅಯೋಧ್ಯೆಯಿಂದ ಪ್ರಯಾಣಮಾಡಿತು (೨೦-೨೧) ಶ್ರೀರಾಮನು ಸ್ವಲ್ಪದೂರದವರೆಗೆ ಸೇನೆಯನ್ನು ಕಳಿಸುತ್ತ ಹೋದನು ದುರ್ಧರ್ಷವಾದ ಸೇನೆಯೊಡನೆ ಭರತನು

ಗಂಧರ್ವಪುತ್ರಮಾಂಸಾನಿ ಭೋಕ್ತುಕಾಮಾಃ ಸಹಸ್ರಶಃ ।
ಸಿಂಹವ್ಯಾಘ್ರವರಾಹಾಣಾಂ ಖೇಚರಾಣಾಂ ಚ ಪಕ್ಷಿಣಾಮ್ ॥ ೨೪

ಬಹೂನಿ ವೈ ಸಹಸ್ರಾಣಿ ಸೇನಾಯಾ ಯಯುರಗ್ರತಃ ।
ಅಧ್ಯರ್ಧಮಾಸಮುಷಿತಾ ಪಥಿ ಸೇನಾ ನಿರಾಮಯಾ ॥ ೨೫

ಹೃಷ್ಟಪುಷ್ಟಜನಾಕೀರ್ಣಾ ಕೇಕಯಂ ಸಮುಪಾಗಮತ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಶತತಮಃ ಸರ್ಗಃ



ಹೋಗುತ್ತಿರಲು, ಮಾಂಸಾಹಾರಿಗಳಾದ ಮೃಗಗಳೂ * ಪಕ್ಷಿಗಳೂ ರಕ್ಷೋಗಣಗಳೂ ಗಂಧರ್ವರ ಮಾಂಸವನ್ನು ತಿನ್ನಬೇಕೆಂದೂ ರಕ್ತವನ್ನು ಕುಡಿಯಬೇಕೆಂದೂ ಸೈನ್ಯದ ಮುಂದೆ ಹೋಗುತ್ತಿದ್ದವು ಹೀಗೆ ಒಂದು ತಿಂಗಳಿಗಿಂತ ಹೆಚ್ಚು ಕಾಲ ಪ್ರಯಾಣಮಾಡುತ್ತ ಹೋಗಿ, ಹೃಷ್ಟಪುಷ್ಟಯೋಧಾಕೀರ್ಣವಾದ ಆ ಸೇನೆಯು ಕೇಕಯರಾಜ್ಯವನ್ನು ನೇರಿತು (೨೨-೨೫)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರನೆಯ ಸರ್ಗ



* ಮೂಲದಲ್ಲಿ 'ಸಿಂಹವ್ಯಾಘ್ರವರಾಹಾಣಾಂ' (ಶ್ಲೋ ೨೪) ಎಂದಿದೆ ವರಾಹಗಳು ಮಾಂಸಾಹಾರಿಗಳೇ ಎಂಬುದು ವಿಚಾರಣೀಯ ಅಲ್ಲವಾದರೆ 'ವರಾಹಗಳೂ ಜೊತೆಗೆ ಹೋದವು' ಎಂದಿಷ್ಟೇ ಅರ್ಥ

## ಏಕೋತ್ತರಶತತಮಃ ಸರ್ಗಃ

### ತಕ್ಷಪುಷ್ಕಲನಿವೇಶಃ

ಶ್ರುತ್ವಾ ಸೇನಾಪತಿಂ ಪ್ರಾಪ್ತಂ ಭರತಂ ಕೇಕಯಾಧಿಪಃ ।
ಯುಧಾಜಿದ್ಗಾರ್ಗ್ಯಸಹಿತಂ ಪರಾಂ ಪ್ರೀತಿಮುಪಾಗಮತ್ ॥ ೧

ಸ ನಿರ್ಯಯೌ ಜನೌಘೇನ ಮಹತಾ ಕೇಕಯಾಧಿಪಃ ।
ತ್ವರಮಾಣೋಽಭಿಚಕ್ರಾಮ ಗಂಧರ್ವಾನ್ ಕಾಮರೂಪಿಣಃ ॥ ೨

ಭರತಶ್ಚ ಯುಧಾಜಿಚ್ಚ ಸಮೇತೌ ಲಘುವಿಕ್ರಮೈಃ ।
ಗಂಧರ್ವನಗರಂ ಪ್ರಾಪ್ತೌ ಸಬಲೌ ಸಪದಾನುಗೌ ॥ ೩

ಶ್ರುತ್ವಾ ತು ಭರತಂ ಪ್ರಾಪ್ತಂ ಗಂಧರ್ವಾಸ್ತೇ ಸಮಾಗತಾಃ ।
ಯೋದ್ಧುಕಾಮಾ ಮಹಾವೀರ್ಯಾ ವ್ಯನದನ್ ವೈ ಸಮಂತತಃ ॥ ೪

ತತಃ ಸಮಭವದ್ಯುದ್ಧಂ ತುಮುಲಂ ರೋಮಹರ್ಷಣಮ್ ।
ಸಪ್ತರಾತ್ರಂ ಮಹಾಭೀಮಂ ನ ಚಾನ್ಯತರಯೋರ್ಜಯಃ ॥ ೫

## ಸರ್ಗ ೧೦೧

ಭರತನು ಸಂವರ್ತವೆಂಬ ಕಾಲಪಾಶವನ್ನು ಪ್ರಯೋಗಿಸಿ ಗಂಧರ್ವರನ್ನು ಸಂಹರಿಸುವುದು ತಕ್ಷ ಪುಷ್ಕಲರನ್ನು ಪ್ರಜಾಪಾಲನೆಗೆ ನೇಮಿಸಿ ಅಯೋಧ್ಯೆಗೆ ಬರುವುದು

ಭರತನು ಸೇನಾಸಮೇತನಾಗಿ ಗಾರ್ಗ್ಯಮುನಿಗಳೊಡನೆ ಬಂದನೆಂಬುದನ್ನು ಕೇಳಿ, ಕೇಕಯರಾಜನಾದ ಯುಧಾಜಿತನಿಗೆ ಪರಮಾನಂದವಾಯಿತು ಅವನೂ ಸಹ ಕಾಮರೂಪಿಗಳಾದ ಗಂಧರ್ವರೊಡನೆ ಯುದ್ಧಮಾಡುವುದಕ್ಕಾಗಿ ದೊಡ್ಡ ಸೈನ್ಯವನ್ನು ತೆಗೆದುಕೊಂಡು ತ್ವರೆಯಿಂದ ಹೊರಟನು (೧-೨) ಭರತ ಯುಧಾಜಿತರಿಬ್ಬರೂ ಸೇರಿ ಲಘುಗತಿಯಿಂದ ಪ್ರಯಾಣಮಾಡುವ ಯೋಧರೊಡನೆ ಗಂಧರ್ವನಗರಕ್ಕೆ ಹೋದರು ಭರತನು ಬಂದಿರುವನೆಂಬುದನ್ನು ಕೇಳಿ ಬಲಾಢ್ಯರಾದ ಗಂಧರ್ವರು ಯುದ್ಧೋತ್ಸಾಹದಿಂದ ನುಗ್ಗಿ ಬಂದು ಗರ್ಜಿಸಿದರು (೩-೪) ಅನಂತರ ರೋಮಾಂಚಕರವಾದ ಘೋರ

ಖಡ್ಗಶಕ್ತಿಧನುರ್ಗ್ರಾಹಾ ನದ್ಯಃ ಶೋಣಿತಸಂಸ್ರವಾಃ ।
ನೃಕಲೇವರವಾಹಿನ್ಯಃ ಪ್ರವೃತ್ತಾಃ ಸರ್ವತೋ ದಿಶಮ್ ॥ ೬
ತತೋ ರಾಮಾನುಜಃ ಕ್ರುದ್ಧಃ ಕಾಲಸ್ಯಾಸ್ತ್ರಂ ಸುದಾರುಣಮ್ ।
ಸಂವರ್ತಂ ನಾಮ ಭರತೋ ಗಂಧರ್ವೇಷ್ವಭ್ಯಚೋದಯತ್ ॥ ೭
ತೇ ಬದ್ಧಾಃ ಕಾಲಪಾಶೇನ ಸಂವರ್ತೇನ ವಿದಾರಿತಾಃ ।
ಕ್ಷಣೇನಾಭಿಹತಾಸ್ತೇನ ತಿಸ್ರಃ ಕೋಟ್ಯೋ ಮಹಾತ್ಮನಾಮ್ ॥ ೮
ತಂ ಘಾತಂ ಘೋರಸಂಕಾಶಂ ನ ಸ್ಮರಂತಿ ದಿವೌಕಸಃ ।
ನಿಮೇಷಾಂತರಮಾತ್ರೇಣ ತಾದೃಶಾನಾಂ ಮಹಾತ್ಮನಾಮ್ ॥ ೯
ಹತೇಷು ತೇಷು ಸರ್ವೇಷು ಭರತಃ ಕೈಕಯೀಸುತಃ ।
ನಿವೇಶಯಾಮಾಸ ತದಾ ಸಮೃದ್ಧೇ ದ್ವೇ ಪುರೋತ್ತಮೇ ॥ ೧೦
ತಕ್ಷಂ ತಕ್ಷಶಿಲಾಯಾಂ ತು ಪುಷ್ಕಲಂ ಪುಷ್ಕಲಾವತೇ ।
ಗಂಧರ್ವದೇಶೇ ರುಚಿರೇ ಗಾಂಧಾರವಿಷಯೇ ಚ ಸಃ ॥ ೧೧

---

ಯುದ್ಧವು ತೊಡಗಿತು ಭೀಕರವಾದ ಕಾಳಗವು ಏಳು ರಾತ್ರಿಗಳವರೆಗೆ ಅವ್ಯಾಹತವಾಗಿ ಸಾಗಿತು ಯಾರಿಗೂ ಜಯವು ದೊರೆಯಲಿಲ್ಲ (೫) ನೆತ್ತರಿನ ಹೊಳೆಗಳು ಖಡ್ಗ, ಶಕ್ತ್ಯಾಯುಧ, ಧನುಸ್ಸುಗಳೆಂಬ ಮೊಸಳೆಗಳೊಡನೆ ಹೆಣಗಳನ್ನು ತೇಲಿಸುತ್ತ ಎಲ್ಲೆಲ್ಲಿಯೂ ಹರಿದವು! ಅನಂತರ ರಾಮಾನುಜನಾದ ಭರತನು ಕ್ರುದ್ಧನಾಗಿ ಸಂವರ್ತವೆಂಬ ಭೀಕರವಾದ ಕಾಲಾಸ್ತ್ರವನ್ನು ಗಂಧರ್ವರ ಮೇಲೆ ಪ್ರಯೋಗಿಸಿದನು (೬-೭) ಆ ಕಾಲಪಾಶಕ್ಕೆ ಸಿಕ್ಕಿದ ಮೂರುಕೋಟಿ ಗಂಧರ್ವರೂ ಒಂದು ಕ್ಷಣದಲ್ಲಿ ಹತರಾಗಿ ಉರುಳಿದರು ಅಷ್ಟೊಂದು ಶೂರರಾದ ಗಂಧರ್ವರು ಒಂದು ನಿಮಿಷಮಾತ್ರದಲ್ಲಿ ಹತರಾಗಿ ಬಿದ್ದುದನ್ನು ಕಂಡ ದೇವತೆಗಳಿಗೆ ಆ ಬಗೆಯ ಘೋರಸಂದರ್ಭವು ಹಿಂದೆ ನಡೆದಿತ್ತೇ ಎಂಬುದೂ ಸ್ಮರಣೆಗೆ ಬರಲಿಲ್ಲ! (೮-೯). ಅನಂತರ ಕೈಕಯೀಸುತನಾದ ಭರತನು ಸರ್ವಸಮೃದ್ಧವಾದ ಎರಡು ನಗರಗಳನ್ನು ನಿರ್ಮಿಸಿದನು ಗಂಧರ್ವದೇಶದಲ್ಲಿ ತಕ್ಷಶಿಲೆಯೆಂಬ ಪಟ್ಟಣವನ್ನೂ ಗಾಂಧಾರದೇಶದಲ್ಲಿ ಪುಷ್ಕಲಾವತವೆಂಬ ಪಟ್ಟಣವನ್ನೂ ಕಟ್ಟಿಸಿ, ಅವುಗಳಲ್ಲಿ ಕ್ರಮವಾಗಿ ತಕ್ಷ, ಪುಷ್ಕಲರೆಂಬ ತನ್ನ ಮಕ್ಕಳನ್ನು ರಾಜ

ಧನರತ್ನೌಘಸಂಪೂರ್ಣೇ ಕಾನನೈರುಪಶೋಭಿತೇ ।
ಅನ್ಯೋನ್ಯಸಂಘರ್ಷಕೃತೇ ಸ್ಪರ್ಧಯಾ ಗುಣವಿಸ್ತರೈಃ ॥ ೧೨

ಉಭೇ ಸುರುಚಿರಪ್ರಖ್ಯೇ ವ್ಯವಹಾರೈರಕಿಲ್ಬಿಷೈಃ ।
ಉದ್ಯಾನಯಾನಸಂಪೂರ್ಣೇ ಸುವಿಭಕ್ತಾಂತರಾಪಣೇ ॥ ೧೩

ಉಭೇ ಪುರವರೇ ರಮ್ಯೇ ವಿಸ್ತರೈರುಪಶೋಭಿತೇ ।
ಗೃಹಮುಖ್ಯೈಃ ಸುರುಚಿರೈರ್ವಿಮಾನಸಮವರ್ಣಿಭಿಃ ॥ ೧೪

ಶೋಭಿತೇ ಶೋಭನೀಯೈಶ್ಚ ದೇವಾಯತನವಿಸ್ತರೈಃ ।
ತಾಲೈಸ್ತಮಾಲೈಸ್ತಿಲಕೈರ್ಬಕುಲೈರುಪಶೋಭಿತೇ ॥ ೧೫

ನಿವೇಶ್ಯ ಪಂಚಭಿರ್ವರ್ಷೈರ್ಭರತೋ ರಾಘವಾನುಜಃ ।
ಪುನರಾಯಾನ್ಮಹಾಬಾಹುರಯೋಧ್ಯಾಂ ಕೈಕಯೀಸುತಃ ॥ ೧೬

ಸೋಽಭಿವಾದ್ಯ ಮಹಾತ್ಮಾನಂ ಸಾಕ್ಷಾದ್ಧರ್ಮಮಿವಾಪರಮ್ ।
ರಾಘವಂ ಭರತಃ ಶ್ರೀಮಾನ್ ಬ್ರಹ್ಮಾಣಮಿವ ವಾಸವಃ ॥ ೧೭

---

ರನ್ನಾಗಿ ನಿಯಮಿಸಿದನು (೧೦-೧೧) ಆ ಪಟ್ಟಣಗಳು ಧನರತ್ನಾದಿಗಳಿಂದ ತುಂಬಿ ಉದ್ಯಾನವನಗಳಿಂದ ಶೋಭಿಸುತ್ತ ಒಂದನ್ನೊಂದು ಸ್ಪರ್ಧಿಸುತ್ತವೆಯೋ ಎಂಬಂತೆ ನಾನಾ ಬಗೆಯ ಅರ್ಹತೆಗಳನ್ನು ಪಡೆದು ರಂಜಿಸಿದವು (೧೨) ಎರಡು ನಗರಗಳೂ ಶುದ್ಧವಾದ ವಾಣಿಜ್ಯವ್ಯವಹಾರಗಳಿಂದ ಶೋಭಿಸುತ್ತ, ಉದ್ಯಾನವಾಹನಾದಿಗಳಿಂದ ಮೆರೆಯುತ್ತ, ವ್ಯವಸ್ಥಿತವಾದ ಅಂಗಡಿಗಳಿಂದ ಯುಕ್ತವಾದವು (೧೩) ನಗರಗಳೆರಡೂ ರಮ್ಯವಾಗಿ ವಿಸ್ತರಿಸಿದ್ದವು ಏಳು ಅಂತಸ್ತುಗಳಿರುವ ಸುಂದರವಾದ ಭವನಗಳಿಂದ ವಿರಾಜಿಸುತ್ತಿದ್ದವು ತಾಲ, ತಮಾಲ, ತಿಲಕ, ಬಕುಲಾದಿ ವೃಕ್ಷಗಳು ಅಲ್ಲಲ್ಲಿ ಬೆಳೆದಿದ್ದವು (೧೪-೧೫) ಈ ಕಾರ್ಯವನ್ನು ನಿರ್ವಹಿಸಲು ಭರತನಿಗೆ ಐದು ವರ್ಷಗಳು ಹಿಡಿದವು ಅನಂತರ ಆ ವೀರನು ಮತ್ತೆ ಅಯೋಧ್ಯೆಗೆ ಹಿಂದಿರುಗಿದನು ಇಂದ್ರನು ಬ್ರಹ್ಮದೇವನಿಗೆ ವಂದಿಸುವಂತೆ, ಸಾಕ್ಷಾತ್ ಧರ್ಮದೇವತೆಯಂತಿದ್ದ ಮಹಾತ್ಮನಾದ ರಾಘವನಿಗೆ ವಂದಿಸಿ, ನಡೆದ

**ಶಶಂಸ ಚ ಯಥಾವೃತ್ತಂ ಗಂಧರ್ವವಧಮುತ್ತಮಮ್ ।**
**ನಿವೇಶನಂ ಚ ದೇಶಸ್ಯ ಶ್ರುತ್ವಾ ಪ್ರೀತೋಽಸ್ಯ ರಾಘವಃ ॥** ೧೮

**ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕೋತ್ತರಶತತಮಃ ಸರ್ಗಃ**



ವೃತ್ತಾಂತವೆಲ್ಲವನ್ನೂ ಭರತನು ಅಣ್ಣನಿಗೆ ವಿವರಿಸಿದನು ಗಂಧರ್ವರ ಸಂಹಾರ, ರಾಜ್ಯದ ಪುನರ್ನಿರ್ಮಾಣ—ಮುಂತಾದ ವಿಷಯಗಳನ್ನು ತಿಳಿಸಿದನು ಅದನ್ನು ಕೇಳಿ ಶ್ರೀರಾಮನು ಸಂಪ್ರೀತನಾದನು (೧೬-೧೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರೊಂದನೆಯ ಸರ್ಗ



## ದ್ವ್ಯುತ್ತರಶತತಮಃ ಸರ್ಗಃ

### ಅಂಗದಚಂದ್ರಕೇತುನಿವೇಶಃ

ತಚ್ಛ್ರುತ್ವಾ ಹರ್ಷಮಾಪೇದೇ ರಾಘವೋ ಭ್ರಾತೃಭಿಃ ಸಹ ।
ವಾಕ್ಯಂ ಚಾದ್ಭುತಸಂಕಾಶಂ ತದಾ ಪ್ರೋವಾಚ ಲಕ್ಷ್ಮಣಮ್ ॥ ೧

ಇಮೌ ಕುಮಾರೌ ಸೌಮಿತ್ರೇ ತವ ಧರ್ಮವಿಶಾರದೌ ।
ಅಂಗದಶ್ಚಂದ್ರಕೇತುಶ್ಚ ರಾಜ್ಯಾರ್ಥೇ ದೃಢವಿಕ್ರಮೌ ॥ ೨

ಇಮೌ ರಾಜ್ಯೇಽಭಿಷೇಕ್ಷ್ಯಾಮಿ ದೇಶಃ ಸಾಧು ವಿಧೀಯತಾಮ್ ।
ರಮಣೀಯೋ ಹ್ಯಸಂಬಾಧೋ ರಮೇತಾಂ ಯತ್ರ ಧನ್ವಿನೌ ॥ ೩

ನ ರಾಜ್ಞಾಂ ಯತ್ರ ಪೀಡಾ ಸ್ಯಾನ್ನಾಶ್ರಮಾಣಾಂ ವಿನಾಶನಮ್ ।
ಸ ದೇಶೋ ದೃಶ್ಯತಾಂ ಸೌಮ್ಯ ನಾಪರಾಧ್ಯಾಮಹೇ ಯಥಾ ॥ ೪

## ಸರ್ಗ ೧೦೨

### ಲಕ್ಷ್ಮಣನ ಪುತ್ರರಾದ ಅಂಗದ ಚಂದ್ರಕೇತುಗಳಿಗಾಗಿ ನಗರ ನಿರ್ಮಾಣ

ಭರತನ ಹೇಳಿಕೆಯನ್ನಾಲಿಸಿ ಸೋದರರೊಡನೆ ಸಂತೋಷಿಸಿದ ಶ್ರೀರಾಮನು ಲಕ್ಷ್ಮಣನನ್ನು ನೋಡಿ "ಸೌಮಿತ್ರಿ, ನಿನ್ನ ಪುತ್ರರಾದ ಅಂಗದನೂ ಚಂದ್ರಕೇತುವೂ ಧರ್ಮನಿಷ್ಠರಾಗಿದ್ದಾರೆ ರಾಜ್ಯವನ್ನು ಪಾಲಿಸಲು ಸಮರ್ಥರಾಗಿದ್ದಾರೆ (೧-೨) ಇವರಿಗೆ ಪಟ್ಟಾಭಿಷೇಕವನ್ನು ಮಾಡಿ ರಾಜ್ಯದಲ್ಲಿ ವ್ಯವಸ್ಥೆಗೊಳಿಸುವೆನು ಯಾವ ದೇಶವು ಉತ್ತಮವೆಂಬುದನ್ನು ಗೊತ್ತುಮಾಡು ಅದು ರಮಣೀಯವಾಗಿಯೂ ವಿಶಾಲವಾಗಿಯೂ ಇರಲಿ ಈ ವೀರಪುತ್ರರಿಗೆ ಸಂತೋಷಕರವಾದ ಸ್ಥಳವಾಗಿರಲಿ (೩) ಎಲ್ಲಿ ಇತರ ರಾಜರರಿಗೆ ಪೀಡೆಯಾಗುವುದಿಲ್ಲವೋ ಆಶ್ರಮವಾಸಿಗಳಿಗೆ ತೊಂದರೆಯಾಗುವುದಿಲ್ಲವೋ ಅಂತಹ ದೇಶ ಯಾವುದೆಂಬುದನ್ನು ನೋಡು ಸೌಮ್ಯ, ನಮ್ಮಿಂದ ಯಾವ ತಪ್ಪೂ ನಡೆಯಬಾರದು" ಎಂದು ಹೇಳಿದನು

ತಥೋಕ್ತವತಿ ರಾಮೇ ತು ಭರತಃ ಪ್ರತ್ಯುವಾಚ ಹ ।
ಅಯಂ ಕಾರುಪಥೋ ದೇಶೋ ರಮಣೀಯೋ ನಿರಾಮಯಃ ॥ ೫

ನಿವೇಶ್ಯತಾಂ ತತ್ರ ಪುರಮಂಗದಸ್ಯ ಮಹಾತ್ಮನಃ ।
ಚಂದ್ರಕೇತೋಃ ಸುರುಚಿರಂ ಚಂದ್ರಕಾಂತಂ ನಿರಾಮಯಮ್ ॥ ೬

ತದ್ವಾಕ್ಯಂ ಭರತೇನೋಕ್ತಂ ಪ್ರತಿಜಗ್ರಾಹ ರಾಘವಃ ।
ತಂ ಚ ಕೃತ್ವಾ ವಶೇ ದೇಶಮಂಗದಸ್ಯ ನ್ಯವೇಶಯತ್ ॥ ೭

ಅಂಗದೀಯಾ ಪುರೀ ರಮ್ಯಾ ಹ್ಯಂಗದಸ್ಯ ನಿವೇಶಿತಾ ।
ರಮಣೀಯಾ ಸುಗುಪ್ತಾ ಚ ರಾಮೇಣಾಕ್ಲಿಷ್ಟಕರ್ಮಣಾ ॥ ೮

ಚಂದ್ರಕೇತೋಸ್ತು ಮಲ್ಲಸ್ಯ ಮಲ್ಲಭೂಮ್ಯಾಂ ನಿವೇಶಿತಾ ।
ಚಂದ್ರಕಾಂತೇತಿ ವಿಖ್ಯಾತಾ ದಿವ್ಯಾ ಸ್ವರ್ಗಪುರೀ ಯಥಾ ॥ ೯

ತತೋ ರಾಮಃ ಪರಾಂ ಪ್ರೀತಿಂ ಲಕ್ಷ್ಮಣೋ ಭರತಸ್ತಥಾ ।
ಯಯುರ್ಯುದ್ಧೇ ದುರಾಧರ್ಷಾ ಅಭಿಷೇಕಂ ಚ ಚಕ್ರಿರೇ ॥ ೧೦

---

(೪). ಶ್ರೀರಾಮನು ಹೀಗೆ ಹೇಳಲಾಗಿ ಭರತನು "ಅಣ್ಣಾ, ಕಾರುಪಥ ದೇಶವು* ರಮಣೀಯವಾಗಿದೆ ಯಾವ ಉಪದ್ರವವೂ ಇಲ್ಲ ಅಲ್ಲಿ ಅಂಗದನ ರಾಜಧಾನಿಯನ್ನು ಸ್ಥಾಪಿಸಬಹುದು ಚಂದ್ರಕಾಂತಪಟ್ಟಣವು ಸುಂದರವಾಗಿಯೂ ನಿರ್ಬಾಧವಾಗಿಯೂ ಇದೆ. ಅದು ಚಂದ್ರಕೇತುವಿನ ರಾಜಧಾನಿಯಾಗಬಹುದು" ಎಂದನು (೫-೬) ಭರತನ ಹೇಳಿಕೆಯನ್ನು ಶ್ರೀರಾಮನು ಒಪ್ಪಿದನು ಅನಂತರ ಕಾರುಪಥ ದೇಶವನ್ನು ವಶಪಡಿಸಿ ಕೊಂಡು ಅಂಗದೀಯವೆಂಬ ಪುರಿಯನ್ನು ಅಂಗದನಿಗೆ ವಹಿಸಿಕೊಟ್ಟನು ಆ ಪುರಿಯು ರಮಣೀಯವಾಗುವಂತೆಯೂ ಸುರಕ್ಷಿತವಾಗಿರುವಂತೆಯೂ ಏರ್ಪಡಿಸಿದನು (೭-೮) ರಣಮಲ್ಲನಾದ ಚಂದ್ರಕೇತುವಿಗೆ ಕಾರುಪಥದ ಮಲ್ಲಭೂಮಿಯೆಂಬ ಪ್ರದೇಶದಲ್ಲಿ ಚಂದ್ರಕಾಂತವೆಂಬ ನಗರವನ್ನು ವಹಿಸಿ ಕೊಟ್ಟನು ಅದು ಅಮರಾವತಿಯಂತೆ ರಂಜಿಸುತ್ತಿತ್ತು (೯) ಹೀಗೆ ವ್ಯವಸ್ಥೆ ಯಾಗಲು ಶ್ರೀರಾಮನಿಗೂ ಭರತಲಕ್ಷ್ಮಣರಿಗೂ ಆನಂದವಾಯಿತು. ಅವರು

* ಇದು ವಾಯುವ್ಯದಿಕ್ಕಿನಲ್ಲಿದ್ದ ಒಂದು ದೇಶ

*

ಅಭಿಷಿಚ್ಯ ಕುಮಾರೌ ಸ ಪ್ರಸ್ಥಾಪಯತಿ ರಾಘವಃ ।
ಅಂಗದಂ ಪಶ್ಚಿಮಾಂ ಭೂಮಿಂ ಚಂದ್ರಕೇತುಮುದಙ್ಮುಖಮ್ ॥

ಅಂಗದಂ ಚಾಪಿ ಸೌಮಿತ್ರಿರ್ಲಕ್ಷ್ಮಣೋಽನುಜಗಾಮ ಹ ।
ಚಂದ್ರಕೇತೋಸ್ತು ಭರತಃ ಪಾರ್ಷ್ಣಿಗ್ರಾಹೋ ಬಭೂವ ಹ ॥ ೧೨

ಲಕ್ಷ್ಮಣಸ್ತ್ವಂಗದೀಯಾಯಾಂ ಸಂವತ್ಸರಮುಷೋಷಿತಃ ।
ಪುತ್ರೇ ಸ್ಥಿತೇ ದುರಾಧರ್ಷೇ ಹ್ಯಯೋಧ್ಯಾಂ ಪುನರಾಗಮತ್ ॥ ೧೩

ಭರತೋಽಪಿ ತಥೈವೋಷ್ಯ ಸಂವತ್ಸರಮತೋಽಧಿಕಮ್ ।
ಅಯೋಧ್ಯಾಂ ಪುನರಾಗಮ್ಯ ರಾಮಪಾದಾವುಪಾಸ್ತ ಸಃ ॥ ೧೪

ಉಭೌ ಸೌಮಿತ್ರಿಭರತೌ ರಾಮಪಾದಾವನುವ್ರತೌ ।
ಕಾಲಂ ಗತಮಪಿ ಸ್ನೇಹಾನ್ನ ಜಜ್ಞಾತೇಽತಿಧಾರ್ಮಿಕೌ ॥ ೧೫

ಏವಂ ವರ್ಷಸಹಸ್ರಾಣಿ ದಶ ತೇಷಾಂ ಯಯುಸ್ತದಾ ।
ಧರ್ಮೇ ಪ್ರಯತಮಾನಾನಾಂ ಪೌರಕಾರ್ಯೇಷು ನಿತ್ಯದಾ ॥ ೧೬

---

ಲಕ್ಷ್ಮಣನ ಪುತ್ರರಿಗೆ ಪಟ್ಟಾಭಿಷೇಕವನ್ನು ನೆರವೇರಿಸಿದರು (೧೦) ಅಭಿಷೇಕವನ್ನು ನಡೆಸಿ ರಾಘವನು ಆ ಕುಮಾರರನ್ನು ಕಳಿಸಿಕೊಟ್ಟನು ಕಾರುಪಥದ ಪಶ್ಚಿಮರಾಜ್ಯಕ್ಕೆ ಅಂಗದನನ್ನೂ ಉತ್ತರರಾಜ್ಯಕ್ಕೆ ಚಂದ್ರಕೇತುವನ್ನೂ ಕಳಿಸಿದನು ಲಕ್ಷ್ಮಣನು ಅಂಗದನ ಜೊತೆಗೂ ಭರತನು ಚಂದ್ರಕೇತುವಿನ ಜೊತೆಗೂ ಸಹಾಯಕ್ಕಾಗಿ ಹೋದರು (೧೧-೧೨) ಲಕ್ಷ್ಮಣನು ಅಂಗದೀಯ ನಗರದಲ್ಲಿ ಒಂದು ವರ್ಷವಿದ್ದು, ಮಗನು ದುರ್ಧರ್ಷನಾಗಿ ರಾಜ್ಯಪಾಲನೆಯನ್ನು ನಡೆಸುವನೆಂಬುದನ್ನರಿತು ಅಯೋಧ್ಯೆಗೆ ಹೊರಟುಬಂದನು (೧೩). ಹಾಗೆಯೇ ಭರತನೂ ಸಹ ಚಂದ್ರಕಾಂತ ನಗರದಲ್ಲಿ ಒಂದು ವರ್ಷಕ್ಕಿಂತಲೂ ಸ್ವಲ್ಪಕಾಲ ಹೆಚ್ಚಾಗಿದ್ದು, ಅಯೋಧ್ಯೆಗೆ ಹಿಂದಿರುಗಿ ಶ್ರೀರಾಮನ ಸೇವೆಯಲ್ಲಿ ನಿರತನಾದನು ಭರತ-ಲಕ್ಷ್ಮಣರಿಬ್ಬರೂ ಶ್ರೀರಾಮನ ಶುಶ್ರೂಷೆಯಲ್ಲಿ ಆಸಕ್ತರಾಗಿದ್ದರು ಅತ್ಯಂತಧಾರ್ಮಿಕರಾದ ಅವರಿಗೆ ಭ್ರಾತೃವಾತ್ಸಲ್ಯಾತಿಶಯದಿಂದ ದೀರ್ಘಕಾಲವು ಕಳೆದರೂ ಗೊತ್ತಾಗಲೇ ಇಲ್ಲ (೧೪-೧೫). ಎಲ್ಲರೂ ಪೌರಕಾರ್ಯಗಳಲ್ಲಿ, ವ್ಯಾಪೃತರಾಗಿ ಧರ್ಮರಕ್ಷಣೆ

ವಿಹೃತ್ಯ ಕಾಲಂ ಪರಿಪೂರ್ಣಮಾನಸಾಃ
ಶ್ರಿಯಾ ವೃತಾ ಧರ್ಮಪುರೇ ಸುಸಂಸ್ಥಿತಾಃ ।
ತ್ರಯಃ ಸಮಿದ್ಧಾ ಇವ ದೀಪ್ತತೇಜಸೋ
ಮಹಾಧ್ವರೇ ಸಾಧು ಹುತಾಸ್ತ್ರಯೋಽಗ್ನಯಃ ॥ ೧೭

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದ್ವ್ಯುತ್ತರಶತತಮಃ ಸರ್ಗಃ



ಯಲ್ಲಿ ತೊಡಗಿರಲು ಹತ್ತು ಸಾವಿರ ವರ್ಷಗಳು ಕಳೆದವು ಧರ್ಮಪುರಿಯೆನಿಸಿದ ಅಯೋಧ್ಯೆಯಲ್ಲಿ ಪ್ರಸನ್ನಚಿತ್ತರಾಗಿ ನಿಷ್ಠೆಯಿಂದ ಕಾಲವನ್ನು ಕಳೆಯುತ್ತ ವಿರಾಜಿಸುತ್ತಿದ್ದ ತೇಜಸ್ವಿಗಳಾದ ಶ್ರೀರಾಮ ಲಕ್ಷ್ಮಣ ಭರತರು, ಮಹಾಯಾಗದಲ್ಲಿ ಪ್ರಜ್ವಲಿಸುವ ತ್ರೇತಾಗ್ನಿಗಳಂತೆ ಕಂಗೊಳಿಸುತ್ತಿದ್ದರು (೧೬-೧೭)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರೆರಡನೆಯ ಸರ್ಗ



## ತ್ರ್ಯುತ್ತರಶತತಮಃ ಸರ್ಗಃ

### ಕಾಲಾಗಮನಮ್

ಕಸ್ಯಚಿತ್ತ್ವಥ ಕಾಲಸ್ಯ ರಾಮೇ ಧರ್ಮಪಥೇ ಸ್ಥಿತೇ ।
ಕಾಲಸ್ತಾಪಸರೂಪೇಣ ರಾಜದ್ವಾರಮುಪಾಗಮತ್ ॥ ೧
ಸೋಽಬ್ರವೀಲ್ಲಕ್ಷ್ಮಣಂ ವಾಕ್ಯಂ ಧೃತಿಮಂತಂ ಯಶಸ್ವಿನಮ್ ।
ಮಾಂ ನಿವೇದಯ ರಾಮಾಯ ಸಂಪ್ರಾಪ್ತಂ ಕಾರ್ಯಗೌರವಾತ್ ॥
ದೂತೋಽಸ್ಮ್ಯತಿಬಲಸ್ಯಾಹಂ ಮಹರ್ಷೇರಮಿತೌಜಸಃ ।
ರಾಮಂ ದಿದೃಕ್ಷುರಾಯಾತಃ ಕಾರ್ಯೇಣ ಹಿ ಮಹಾಬಲ ॥ ೩
ತಸ್ಯ ತದ್ವಚನಂ ಶ್ರುತ್ವಾ ಸೌಮಿತ್ರಿಸ್ತ್ವರಯಾನ್ವಿತಃ ।
ನ್ಯವೇದಯತ ರಾಮಾಯ ತಾಪಸಂ ತಂ ಸಮಾಗತಮ್ ॥ ೪
ಜಯಸ್ವ ರಾಮ ಧರ್ಮೇಣ ಉಭೌ ಲೋಕೌ ಮಹಾದ್ಯುತೇ ।
ದೂತಸ್ತ್ವಾಂ ದ್ರಷ್ಟುಮಾಯಾತಸ್ತಪಸಾ ಭಾಸ್ಕರಪ್ರಭಃ ॥ ೫

### ಸರ್ಗ ೧೦೩

ಕಾಲಪುರುಷನ ಆಗಮನ  ತನಗೂ ಶ್ರೀರಾಮನಿಗೂ ರಹಸ್ಯವಾಗಿ
ಸಂಭಾಷಣೆ ನಡೆಯಬೇಕೆಂದು ಅವನ ನಿಯಮ

ಶ್ರೀರಾಮನು ಹೀಗೆ ಧರ್ಮಮಾರ್ಗದಲ್ಲಿರುವಾಗ ಕೆಲವು ಕಾಲ ಕಳೆಯಿತು  ಒಂದು ದಿನ ಕಾಲಪುರುಷನು ತಾಪಸವೇಷವನ್ನು ಧರಿಸಿ ಅರಮನೆಯ ಬಾಗಿಲಿಗೆ ಬಂದನು! ಅವನು ಧೀರನಾಗಿ ನಿಂತಿದ್ದ ಲಕ್ಷ್ಮಣನನ್ನು ನೋಡಿ "ಅಯ್ಯಾ, ನಾನು ಕಾರ್ಯಗೌರವದಿಂದ ಬಂದಿದ್ದೇನೆಂದು ಶ್ರೀರಾಮನಿಗೆ ತಿಳಿಸು (೧-೨)  ಅತ್ಯಂತ ಬಲಾಢ್ಯನೂ ತೇಜೋನಿಧಿಯೂ ಆದ ಒಬ್ಬ ಮಹರ್ಷಿಯ ದೂತ ನಾನು  ಕಾರ್ಯವಶದಿಂದ ರಾಘವನನ್ನು ನೋಡುವುದಕ್ಕಾಗಿ ಬಂದಿದ್ದೇನೆ" ಎಂದನು  ಆತನ ನುಡಿಯನ್ನು ಕೇಳಿ ಸೌಮಿತ್ರಿಯು ತ್ವರೆಯಿಂದ ಹೋಗಿ ತಾಪಸನೊಬ್ಬನು ಬಂದಿರುವನೆಂದು ಶ್ರೀರಾಮನಿಗೆ ಅರಿಕೆಮಾಡಿದನು (೩-೪). "ಶ್ರೀರಾಮ, ಧರ್ಮಮಾರ್ಗದಿಂದ ಇಹಪರಲೋಕಗಳನ್ನು ಜಯಿಸು! ತಪೋಬಲದಿಂದ ಸೂರ್ಯನಂತೆ

ತದ್ವಾಕ್ಯಂ ಲಕ್ಷ್ಮಣೇನೋಕ್ತಂ ಶ್ರುತ್ವಾ ರಾಮ ಉವಾಚ ಹ ।
ಪ್ರವೇಶ್ಯತಾಂ ಮುನಿಸ್ತಾತ ಮಹೌಜಾಸ್ತಸ್ಯ ವಾಕ್ಯಧೃತ್ ॥ ೬
ಸೌಮಿತ್ರಿಸ್ತು ತಥೇತ್ಯುಕ್ತ್ವಾ ಪ್ರಾವೇಶಯತ ತಂ ಮುನಿಮ್ ।
ಜ್ವಲಂತಮಿವ ತೇಜೋಭಿಃ ಪ್ರದಹಂತಮಿವಾಂಶುಭಿಃ ॥ ೭
ಸೋಽಭಿಗಮ್ಯ ರಘುಶ್ರೇಷ್ಠಂ ದೀಪ್ಯಮಾನಂ ಸ್ವತೇಜಸಾ ।
ಋಷಿರ್ಮಧುರಯಾ ವಾಚಾ ವರ್ಧಸ್ವೇತ್ಯಾಹ ರಾಘವಮ್ ॥ ೮
ತಸ್ಮೈ ರಾಮೋ ಮಹಾತೇಜಾಃ ಪೂಜಾಮರ್ಘ್ಯಪುರೋಗಮಾಮ್
ದದೌ ಕುಶಲಮವ್ಯಗ್ರಂ ಪ್ರಷ್ಟುಮೇವೋಪಚಕ್ರಮೇ ॥ ೯
ಪೃಷ್ಟಶ್ಚ ಕುಶಲಂ ತೇನ ರಾಮೇಣ ವದತಾಂ ವರಃ ।
ಆಸನೇ ಕಾಂಚನೇ ದಿವ್ಯೇ ನಿಷಸಾದ ಮಹಾಯಶಾಃ ॥ ೧೦
ತಮುವಾಹ ತತೋ ರಾಮಃ ಸ್ವಾಗತಂ ತೇ ಮಹಾಮುನೇ ।
ಪ್ರಾಪಯಸ್ವ ಚ ವಾಕ್ಯಾನಿ ಯತೋ ದೂತಸ್ತ್ವಮಾಗತಃ ॥ ೧೧
ಚೋದಿತೋ ರಾಜಸಿಂಹೇನ ಮುನಿರ್ವಾಕ್ಯಮಭಾಷತ ।
ದ್ವಂದ್ವಮೇತತ್ ಪ್ರವಕ್ತವ್ಯಂ ಹಿತಂ ವೈಯದ್ಯವೇಕ್ಷಸೇ ॥ ೧೨

---

ಬೆಳಗುತ್ತಿರುವ ದೂತನೊಬ್ಬನು ನಿನ್ನ ಸಂದರ್ಶನಕ್ಕಾಗಿ ಬಂದಿದ್ದಾನೆ" ಎಂದನು. ರಾಘವನು "ಸೌಮ್ಯ–ಲಕ್ಷ್ಮಣ, ಆ ಮುನಿಯನ್ನು ಒಳಗೆ ಬರಮಾಡು" ಎಂದು ತಿಳಿಸಿದನು (೫–೬) ಸೌಮಿತ್ರಿಯು ತಾಪಸನನ್ನು ಒಳಗೆ ಕರೆತಂದನು ತಾಪಸನಾದರೋ ತೇಜಸ್ಸಿನಿಂದ ಜ್ವಲಿಸುತ್ತಿರುವನೋ ಕಿರಣಗಳಿಂದ ಸುಡುತ್ತಿರುವನೋ ಎಂಬಂತೆ ಕಂಗೊಳಿಸುತ್ತಿದ್ದನು ಆತನು ರಾಜತೇಜಸ್ಸಿನಿಂದ ವಿರಾಜಿಸುತ್ತಿದ್ದ ರಘುನಾಥನ ಬಳಿಗೆ ಬಂದು ಮಧುರ ವಾಣಿಯಿಂದ "ಜಯವಾಗಲಿ!" ಎಂದು ಅಭಿನಂದಿಸಿದನು (೭–೮) ಶ್ರೀರಾಮನು ತಾಪಸನಿಗೆ ಅರ್ಘ್ಯಾದಿಗಳನ್ನಿತ್ತು ಸತ್ಕರಿಸಿ, ಕುಶಲವನ್ನು ವಿಚಾರಿಸಿದನು. ತಪಸ್ವಿಯು ದಿವ್ಯವಾದ ಕಾಂಚನಪೀಠದಲ್ಲಿ ಕುಳಿತನು ಶ್ರೀರಾಮನು "ಮಹರ್ಷಿಗಳೆ, ನಿಮಗೆ ಸ್ವಾಗತ ನೀವು ಯಾರ ದೂತರಾಗಿ ಬಂದಿರುವಿರೋ ಅವರ ಸಂದೇಶವನ್ನು ತಿಳಿಸಿರಿ" ಎಂದು ಕೇಳಿದನು (೯–೧೧) ಹೀಗೆ ರಾಜಸಿಂಹನು ಪ್ರಶ್ನೆಮಾಡಲು ಆ ತಾಪಸನು "ಅದು

ಯಃ ಶೃಣೋತಿ ನಿರೀಕ್ಷೇದ್ವಾ ಸ ವಧ್ಯೋ ಭವಿತಾ ತವ ।
ಭವೇದ್ವೈ ಮುನಿಮುಖ್ಯಸ್ಯ ವಚನಂ ಯದ್ಯಪೇಕ್ಷಸೇ ॥ ೧೩
ಸ ತಥೇತಿ ಪ್ರತಿಜ್ಞಾಯ ರಾಮೋ ಲಕ್ಷ್ಮಣಮಬ್ರವೀತ್ ।
ದ್ವಾರಿ ತಿಷ್ಠ ಮಹಾಬಾಹೋ ಪ್ರತಿಹಾರಂ ವಿಸರ್ಜಯ ॥ ೧೪
ಸ ಮೇ ವಧ್ಯಃ ಖಲು ಭವೇತ್ ಕಥಾಂ ದ್ವಂದ್ವಸಮೀರಿತಾಮ್ ।
ಋಷೇರ್ಮಮ ಚ ಸೌಮಿತ್ರೇ ಪಶ್ಯೇದ್ವಾ ಶೃಣುಯಾಚ್ಚ ಯಃ ॥
ತತೋ ನಿಕ್ಷಿಪ್ಯ ಕಾಕುತ್ಸ್ಥೋ ಲಕ್ಷ್ಮಣಂ ದ್ವಾರಿ ಸಂಗ್ರಹಮ್ ।
ತಮುವಾಚ ಮುನೇ ವಾಕ್ಯಂ ಕಥಯಸ್ವೇತಿ ರಾಘವಃ ॥ ೧೬
ಯತ್ತೇ ಮನೀಷಿತಂ ವಾಕ್ಯಂ ಯೇನ ವಾಸಿ ಸಮಾಹಿತಃ ।
ಕಥಯಸ್ವಾವಿಶಂಕಸ್ತ್ವಂ ಮಮಾಪಿ ಹೃದಿ ವರ್ತತೇ ॥ ೧೭

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ತ್ರ್ಯುತ್ತರಶತತಮಃ ಸರ್ಗಃ

---

ಏಕಾಂತದಲ್ಲಿ ಹೇಳಬೇಕಾದ ವಿಷಯ ನಿನಗೆ ಸಮ್ಮತವಾದರೆ, ಅದೇ ಹಿತಕರ ನಮ್ಮ ಸಂಭಾಷಣೆಯನ್ನು ಯಾರಾದರೂ ಕೇಳಿದರೆ ಅಥವಾ ನೋಡಿದರೆ, ಆತನನ್ನು ನೀನು ವಧಿಸಬೇಕು! ಸಂದೇಶವನ್ನು ಕಳಿಸಿದ ಮುನಿವರ್ಯನ ಆದೇಶವು ಆ ಪ್ರಕಾರವಾಗಿದೆ ನಿನಗೆ ಸಮ್ಮತವಾದರೆ, ಹೇಳುವೆನು" ಎಂದನು (೧೨-೧೩) ಆಗ ಶ್ರೀರಾಮನು ಹಾಗೆಯೇ ಆಗಲೆಂದು ಒಪ್ಪಿ ಲಕ್ಷ್ಮಣನನ್ನು ಕರೆದು "ಲಕ್ಷ್ಮಣ, ನೀನು ದ್ವಾರದಲ್ಲಿ ನಿಲ್ಲು ಕಾವಲುಗಾರನನ್ನು ಕಳಿಸಿಬಿಡು ನನಗೂ ಈ ಮುನಿಗಳಿಗೂ ನಡೆಯುವ ಸಂಭಾಷಣೆ ರಹಸ್ಯವಾದದ್ದು ಈ ಸಮಯದಲ್ಲಿ ಯಾರಾದರೂ ಒಳಗೆ ಬಂದು ನಮ್ಮ ಮಾತುಕಥೆಗಳನ್ನು ಕೇಳಿದರೆ ಅಥವಾ ನೋಡಿದರೆ ಆತನನ್ನು ನಾನು ವಧಿಸುವೆನು!" ಎಂದು ಆಜ್ಞಾಪಿಸಿದನು (೧೪-೧೫) ಅನಂತರ ಕಾಕುತ್ಸ್ಥನು ಲಕ್ಷ್ಮಣನನ್ನು ದ್ವಾರರಕ್ಷಣೆಗಾಗಿ ನಿಯಮಿಸಿ "ಮುನಿಗಳೆ, ಈಗ ನೀವು ಹೇಳಬಹುದು ನಿಮ್ಮ ಉದ್ದೇಶವನ್ನಾದರೂ ನಿಮ್ಮನ್ನು ಕಳಿಸಿದವರ ಸಂದೇಶವನ್ನಾದರೂ ನಿಶ್ಶಂಕೆಯಿಂದ ತಿಳಿಸಿರಿ ನನಗೂ ಅದನ್ನು ಕೇಳಬೇಕೆಂಬ ಅಪೇಕ್ಷೆ ಇದೆ" ಎಂದನು (೧೬-೧೭)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರಮೂರನೆಯ ಸರ್ಗ

## ಚತುರುತ್ತರಶತತಮಃ ಸರ್ಗಃ

### ಪಿತಾಮಹವಾಕ್ಯಕಥನಮ್

ಶೃಣು ರಾಜನ್ ಮಹಾಸತ್ತ್ವ ಯದರ್ಥಮಹಮಾಗತಃ ।
ಪಿತಾಮಹೇನ ದೇವೇನ ಪ್ರೇಷಿತೋಽಸ್ಮಿ ಮಹಾಬಲ ॥ ೧
ತವಾಹಂ ಪೂರ್ವಸದ್ಭಾವೇ ಪುತ್ರಃ ಪರಪುರಂಜಯ ।
ಮಾಯಾಸಂಭಾವಿತೋ ವೀರ ಕಾಲಃ ಸರ್ವಸಮಾಹರಃ ॥ ೨
ಪಿತಾಮಹಶ್ಚ ಭಗವಾನಾಹ ಲೋಕಪತಿಃ ಪ್ರಭುಃ ।
ಸಮಯಸ್ತೇ ಕೃತಃ ಸೌಮ್ಯ ನ್ಪಾನ್ ಲೋಕಾನ್ ಪರಿರಕ್ಷಿತುಮ್ ॥
ಸಂಕ್ಷಿಪ್ಯ ಹಿ ಪುರಾ ಲೋಕಾನ್ ಮಾಯಯಾ ಸ್ವಯಮೇವ ಹಿ ।
ಮಹಾರ್ಣವೇ ಶಯಾನೋಽಪ್ಸು ಮಾಂ ತ್ವಂ ಪೂರ್ವಮಜೀಜನಃ ॥

### ಸರ್ಗ ೧೦೪

ಬ್ರಹ್ಮನ ಸಂದೇಶವನ್ನು ಕಾಲಪುರುಷನು ಶ್ರೀರಾಮನಿಗೆ ತಿಳಿಸುವುದು

ತಾಪಸನು ಹೇಳಿದನು "ಮಹಾರಾಜ, ನಾನು ಏಕೆ ಬಂದಿರುವೆನೆಂದು ಹೇಳುತ್ತೇನೆ, ಕೇಳು ಬ್ರಹ್ಮದೇವನು ನನ್ನನ್ನು ಕಳಿಸಿದ್ದಾನೆ ಎಲೈ ವೀರಾಗ್ರಣಿ, ನಿನ್ನ ಪೂರ್ವಾವಸ್ಥೆಯಲ್ಲಿ—ನೀನು ಪರಬ್ರಹ್ಮವೆನಿಸಿ ಸತ್ತಾಮಾತ್ರಸ್ಥಿತಿಯಲ್ಲಿದ್ದಾಗ, ನಿನ್ನ ಮಾಯೆಯಿಂದ ಜನಿಸಿದ ನಿನ್ನ ಪುತ್ರನು ನಾನು! ಸರ್ವಕೃತ್ಯನಿರ್ವಾಹಕನಾದ ಕಾಲಪುರುಷನೇ ನಾನು * (೧-೨) ಲೋಕೇಶ್ವರನಾದ ಭಗವಾನ್ ಪಿತಾಮಹನು ಈ ಸಂದೇಶವನ್ನು ಕಳಿಸಿದ್ದಾನೆ. ಏನೆಂದರೆ. ಸೌಮ್ಯ—ರಾಘವ, ನೀನು ಈ ಹಿಂದೆ ರಾವಣಾದಿಗಳಿಂದ ಲೋಕವನ್ನು ರಕ್ಷಿಸುವುದಕ್ಕಾಗಿ 'ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ | ವತ್ಸ್ಯಾಮಿ ಮಾನುಷೇ ಲೋಕೇ ಪಾಲಯನ್ ಪೃಥಿವೀಮಿಮಾಮ್' (ಬಾಲ ೧೫-೨೮, ೨೯) ಎಂದು ಹೇಳಿದ್ದೆಯಷ್ಟೆ, ಆ ಅವಧಿಯು ಸಂಪೂರ್ಣವಾಯಿತು (೩) ಪೂರ್ವದಲ್ಲಿ ಸಕಲ ಲೋಕಗಳನ್ನೂ ಮಾಯಾಶಕ್ತಿಯಿಂದ

---

* ೨ನೆಯ ಶ್ಲೋಕದ ಆದಿಯಲ್ಲಿ 'ತವಾಹಂ ಪೂರ್ವಸದ್ಭಾವೇ' ಎಂದು ಕತಕಸಮ್ಮತವಾದ ಪಾಠ ಈ ಶ್ಲೋಕದ ವ್ಯಾಖ್ಯಾನದಲ್ಲಿ ಮತಭೇದಗಳುಂಟು

ಭೋಗವಂತಂ ತತೋ ನಾಗಮನಂತಮುದಕೇಶಯಮ್ ।
ಮಾಯಯಾ ಜನಯಿತ್ವಾ ತ್ವಂ ದ್ವೌ ಚ ಸತ್ತ್ವೌ ಮಹಾಬಲೌ ॥ ೫

ಮಧುಂ ಚ ಕೈಟಭಂ ಚೈವ ಯಯೋರಸ್ಥಿ ಚಯೈರ್ವೃತಾ ।
ಇಯಂ ಪರ್ವತಸಂಬಾಧಾ ಮೇದಿನೀ ಚಾಭವತ್ತದಾ ॥ ೬

ಪದ್ಮೇ ದಿವ್ಯೇಽರ್ಕಸಂಕಾಶೇ ನಾಭ್ಯಾಮುತ್ಪಾದ್ಯ ಮಾಮಪಿ ।
ಪ್ರಾಜಾಪತ್ಯಂ ತ್ವಯಾ ಕರ್ಮ ಮಯಿ ಸರ್ವಂ ನಿವೇಶಿತಮ್ ॥ ೭

ಸೋಽಹಂ ಸಂನ್ಯಸ್ತಭಾರೋ ಹಿ ತ್ವಾಮುಪಾಸೇ ಜಗತ್ಪತಿಮ್ ।
ರಕ್ಷಾಂ ವಿಧತ್ಸ್ವ ಭೂತೇಷು ಮಮ ತೇಜಸ್ಕರೋ ಭವಾನ್ ॥ ೮

ತತಸ್ತ್ವಮಪಿ ದುರ್ಧರ್ಷಾತ್ತಸ್ಮಾದ್ಭಾವಾತ್ ಸನಾತನಾತ್ ।
ರಕ್ಷಾರ್ಥಂ ಸರ್ವಭೂತಾನಾಂ ವಿಷ್ಣುತ್ವಮುಪಜಗ್ಮಿವಾನ್ ॥ ೯

ಅದಿತ್ಯಾಂ ವೀರ್ಯವಾನ್ ಪುತ್ರೋ ಭ್ರಾತೄಣಾಂ ವೀರ್ಯವರ್ಧನಃ
ಸಮುತ್ಪನ್ನೇಷು ಕೃತ್ಯೇಷು ತೇಷಾಂ ಸಾಹ್ಯಾಯ ಕಲ್ಪಸೇ ॥ ೧೦

---

ನೀನಾಗಿಯೇ ಉಪಸಂಹರಿಸಿ ಮಹಾಸಾಗರದ ಜಲದಲ್ಲಿ ಮಲಗಿರುವಾಗ ನನ್ನನ್ನು ಮೊದಲು ಸೃಷ್ಟಿಸಿದೆ ಅನಂತರ ಸರ್ಪದೇಹವುಳ್ಳ ಅನಂತನೆಂಬ ಜಲಶಾಯಿಯಾದ ನಾಗನನ್ನು ಮಾಯೆಯಿಂದ ಸೃಜಿಸಿ, ಮಧುಕೈಟಭರೆಂಬ ಬಲಾಢ್ಯರಾದ ಇಬ್ಬರು ಜೀವಿಗಳನ್ನು ನಿರ್ಮಿಸಿದೆ (೪-೫) (ನಿನ್ನಿಂದ ಹತರಾದ) ಅವರ ಅಸ್ಥಿಗಳಿಂದಲೂ ಮೇದಸ್ಸಿನಿಂದಲೂ ಪರ್ವತಯುಕ್ತವಾದ ಈ ಭೂಮಿಯು ಜನಿಸಿತು ಸೂರ್ಯಸದೃಶವೂ ದಿವ್ಯವೂ ಆದ ನಿನ್ನ ನಾಭಿಕಮಲದಲ್ಲಿ ನನ್ನನ್ನು ಸೃಜಿಸಿ, ಸೃಷ್ಟಿಮಾಡುವ ಪ್ರಾಜಾಪತ್ಯಕಾರ್ಯವನ್ನು ನನಗೆ ವಹಿಸಿದೆ (೬-೭) ನಿನ್ನಿಂದ ಸೃಷ್ಟಿಕಾರ್ಯದ ಭಾರವನ್ನು ವಹಿಸಿಕೊಂಡ ನಾನು "ಸೃಜಿಸಿದ ಪ್ರಾಣಿಗಳನ್ನು ರಕ್ಷಿಸು (ಸೃಷ್ಟಿಗೆ ಬೇಕಾದ ಜ್ಞಾನಕ್ರಿಯಾಶಕ್ತಿಮಯವಾದ) ತೇಜಸ್ಸನ್ನು ನನಗೆ ಕೊಟ್ಟವನು ನೀನು" ಎಂಬುದಾಗಿ ಜಗದೀಶ್ವರನಾದ ನಿನ್ನನ್ನು ಪ್ರಾರ್ಥಿಸಿದೆನು (೮). ಆದ್ದರಿಂದ ನೀನು ದುರ್ಧರ್ಷವೂ ಸನಾತನವೂ ಆದ ಪರಬ್ರಹ್ಮಭಾವದಿಂದ ಹೊರಬಂದು, ಸರ್ವಭೂತಗಳ ಪಾಲನೆಗಾಗಿ ವಿಷ್ಣುರೂಪವನ್ನು ಧರಿಸಿದೆ. ಅಲ್ಲದೆ ಅದಿತಿಯಲ್ಲಿ ವೀರ್ಯವಂತನಾದ ಪುತ್ರನಾಗಿ ಜನಿಸಿ ಉಪೇಂದ್ರನೆನಿಸಿದೆ. ಸೋದರರಾದ ದೇವತೆಗಳ ಶೌರ್ಯವನ್ನು ವರ್ಧಿಸುತ್ತ, ವಿವಿಧ

ಸ ತ್ವಂ ವಿತ್ರಾಸ್ಯಮಾನಾಸು ಪ್ರಜಾಸು ಜಗತಾಂ ವರ ।
ರಾವಣಸ್ಯ ವಧಾಕಾಂಕ್ಷೀ ಮಾನುಷೇಷು ಮನೋಽದಧಾಃ ॥ ೧೧

ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ।
ಕೃತ್ವಾ ವಾಸಸ್ಯ ನಿಯತಿಂ ಸ್ವಯಮೇವಾತ್ಮನಾ ಪುರಾ ॥ ೧೨

ಸ ತ್ವಂ ಮನೋಮಯಃ ಪುತ್ರಃ ಪೂರ್ಣಾಯುರ್ಮಾನುಷೇಷ್ವಿಹ ।
ಕಾಲೋಽಯಂ ತೇ ನರಶ್ರೇಷ್ಠ ಸಮೀಪಮುಪವರ್ತಿತುಮ್ ॥ ೧೩

ಯದಿ ಭೂಯೋ ಮಹಾರಾಜ ಪ್ರಜಾ ಇಚ್ಛಸ್ಯುಪಾಸಿತುಮ್ ।
ವಸ ವಾ ವೀರ ಭದ್ರಂ ತ ಏವಮಾಹ ಪಿತಾಮಹಃ ॥ ೧೪

ಅಥವಾ ವಿಜಿಗೀಷಾ ತೇ ಸುರಲೋಕಾಯ ರಾಘವ ।
ಸನಾಥಾ ವಿಷ್ಣುನಾ ದೇವಾ ಭವಂತು ವಿಗತಜ್ವರಾಃ ॥ ೧೫

ಶ್ರುತ್ವಾ ಪಿತಾಮಹೇನೋಕ್ತಂ ವಾಕ್ಯಂ ಕಾಲಸಮೀರಿತಮ್ ।
ರಾಘವಃ ಪ್ರಹಸನ್ ವಾಕ್ಯಂ ಸರ್ವಸಂಹಾರಮಬ್ರವೀತ್ ॥ ೧೬

---

ಕಾರ್ಯಗಳು ಒದಗಿದಾಗ ಅವರಿಗೆ ನೆರವು ನೀಡುತ್ತಿದ್ದೀಯೆ (೯-೧೦). ಹೇ ಜಗದೀಶ್ವರ, ಪ್ರಜಗಳು ರಾವಣನಿಂದ ನಾನಾ ಬಗೆಯ ಹಿಂಸೆಗೊಳಗಾಗಿ ಭೀತರಾಗಿರಲು, ರಾವಣನನ್ನು ವಧಿಸುವುದಕ್ಕಾಗಿ ನೀನು ಮನುಷ್ಯ ಜನ್ಮದಲ್ಲಿ ಅವತರಿಸಬೇಕೆಂದು ಮನಸ್ಸುಮಾಡಿದೆ (೧೧) ಹನ್ನೊಂದು ಸಾವಿರ ವರ್ಷಗಳವರೆಗೆ ಮಾನವ ರೂಪದಿಂದ ವಾಸಿಸಬೇಕೆಂದು ನೀನೇ ನಿಯಮ ವನ್ನು ಮಾಡಿಕೊಂಡಿದ್ದೀಯೆ ಇಂತಹ ನೀನು ನಿನ್ನ ಸಂಕಲ್ಪ ಮಾತ್ರ ದಿಂದಲೇ ದಶರಥನ ಪುತ್ರನಾದೆ ಮನುಷ್ಯಜನ್ಮದಲ್ಲಿ ಪೂರ್ಣಾಯು ವಾಗಿದ್ದೀಯೆ! ಹೇ ಪುರುಷೋತ್ತಮ, ಈಗ ನಮ್ಮ ಸಮೀಪಕ್ಕೆ ಬರಲು ಸಮಯವಾಗಿದೆ (೧೨-೧೩) ಮಹಾರಾಜ, ಇನ್ನೂ ಕೆಲವು ಕಾಲ ಪ್ರಜ ಗಳನ್ನು ಪಾಲಿಸುತ್ತಿರಬೇಕೆಂಬುದು ನಿನ್ನ ಇಚ್ಛೆಯಾಗಿದ್ದರೆ, ಇರಬಹುದು ನಿನಗೆ ಶುಭವಾಗಲಿ! ಅಥವಾ ದೇವಲೋಕಕ್ಕೆ ಬಿಜಯಮಾಡಿಸಬೇಕೆಂಬ ಇಚ್ಛೆಯಾದರೆ, ಉಪೇಂದ್ರನಾದ ನಿನ್ನಿಂದ ದೇವತೆಗಳು ಸನಾಥರಾಗಿ ನಿಶ್ಚಿಂತರಾಗಲಿ—ಎಂದು ಪಿತಾಮಹನು ಹೇಳಿಕಳಿಸಿದ್ದಾನೆ" (೧೪-೧೫) ಈ ಪ್ರಕಾರವಾದ ಬ್ರಹ್ಮದೇವನ ಸಂದೇಶವನ್ನು ಕಾಲಪುರುಷನು ತಿಳಿಸಲಾಗಿ,

ಶ್ರುತ್ವಾ ಮೇ ದೇವದೇವಸ್ಯ ವಾಕ್ಯಂ ಪರಮಮದ್ಭುತಮ್ ।
ಪ್ರೀತಿರ್ಹಿ ಮಹತೀ ಜಾತಾ ತವಾಗಮನಸಂಭವಾ ॥ ೧೭

ತ್ರಯಾಣಾಮಪಿ ಲೋಕಾನಾಂ ಕಾರ್ಯಾರ್ಥಂ ಮಮ ಸಂಭವಃ ।
ಭದ್ರಂ ತೇಽಸ್ತು ಗಮಿಷ್ಯಾಮಿ ಯತ ಏವಾಹಮಾಗತಃ ॥ ೧೮

ಹೃದ್ಗತೋ ಹ್ಯಸಿ ಸಂಪ್ರಾಪ್ತೋ ನ ಮೇ ತತ್ರ ವಿಚಾರಣಾ ।
ಮಯಾ ಹಿ ಸರ್ವಕೃತ್ಯೇಷು ದೇವಾನಾಂ ವಶವರ್ತಿನಾ ॥ ೧೯

ಸ್ಥಾತವ್ಯಂ ಸರ್ವಸಂಹಾರ ಯಥಾ ಹ್ಯಾಹ ಪಿತಾಮಹಃ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಚತುರುತ್ತರಶತತಮಃ ಸರ್ಗಃ



ಶ್ರೀರಾಮನು ನಗುತ್ತ "ಕಾಲ, ದೇವದೇವನಾದ ಬ್ರಹ್ಮನು ವಿಸ್ಮಯಾವಹವಾದ ಮಾತನ್ನು ಹೇಳಿಕಳಿಸಿದ್ದಾನೆ ನೀನು ಬಂದು ಇದನ್ನು ಹೇಳಿದ್ದರಿಂದ ನನಗೆ ಆನಂದವಾಗಿದೆ (೧೬-೧೭) ಈ ಲೋಕವು ಮಾತ್ರವೇ ಅಲ್ಲ, ಮೂರು ಲೋಕಗಳ ಕಾರ್ಯನಿರ್ವಾಹಕ್ಕಾಗಿ ನಾನು ಅವತರಿಸಿದ್ದು ಒಳ್ಳೆಯದು. ನಾನು ಎಲ್ಲಿಂದ ಬಂದೆನೋ ಆ ಸ್ಥಾನಕ್ಕೆ ಹೊರಡುವೆನು ನಾನು ನೆನೆಸಿದಂತೆಯೇ ನೀನು ಬಂದಿದ್ದೀಯೆ ಈ ವಿಷಯದಲ್ಲಿ ವಿಚಾರಿಸತಕ್ಕದ್ದಿಲ್ಲ ನಾನು ಸರ್ವಕೃತ್ಯಗಳಲ್ಲಿಯೂ ದೇವತೆಗಳ ಅಪೇಕ್ಷೆಯಂತೆ ನಡೆಯಬೇಕು ಎಲೈ ಸರ್ವಸಂಹಾರ—ಕಾಲ, ಪಿತಾಮಹನು ಹೇಳಿದಂತೆ ಮಾಡುವೆನು" ಎಂದನು (೧೮-೧೯)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರನಾಲ್ಕನೆಯ ಸರ್ಗ



## ಪಂಚೋತ್ತರಶತತಮಃ ಸರ್ಗಃ

### ದುರ್ವಾಸೋಽಭಿಗಮಃ

ತಥಾ ತಯೋಃ ಸಂವದತೋರ್ದುರ್ವಾಸಾ ಭಗವಾನೃಷಿಃ ।
ರಾಮಸ್ಯ ದರ್ಶನಾಕಾಂಕ್ಷೀ ರಾಜದ್ವಾರಮುಪಾಗಮತ್ ॥ ೧

ಸೋಽಭಿಗಮ್ಯ ತು ಸೌಮಿತ್ರಿಮುವಾಚ ಋಷಿಸತ್ತಮಃ ।
ರಾಮಂ ದರ್ಶಯ ಮೇ ಶೀಘ್ರಂ ಪುರಾ ಮೇಽರ್ಥೋಽತಿವರ್ತತೇ ॥

ಮುನೇಸ್ತು ಭಾಷಿತಂ ಶ್ರುತ್ವಾ ಲಕ್ಷ್ಮಣಃ ಪರವೀರಹಾ ।
ಅಭಿವಾದ್ಯ ಮಹಾತ್ಮಾನಂ ವಾಕ್ಯಮೇತದುವಾಚ ಹ ॥ ೩

ಕಿಂ ಕಾರ್ಯಂ ಬ್ರೂಹಿ ಭಗವನ್ ಕೋ ವಾರ್ಥಃ ಕಿಂ ಕರೋಮ್ಯಹಂ
ವ್ಯಗ್ರೋ ಹಿ ರಾಘವೋ ಬ್ರಹ್ಮನ್ ಮುಹೂರ್ತಂ ಪ್ರತಿಪಾಲ್ಯತಾಮ್

ತಚ್ಛ್ರುತ್ವಾ ಋಷಿಶಾರ್ದೂಲಃ ಕ್ರೋಧೇನ ಕಲುಷೀಕೃತಃ ।
ಉವಾಚ ಲಕ್ಷ್ಮಣಂ ವಾಕ್ಯಂ ನಿರ್ದಹನ್ನಿವ ಚಕ್ಷುಷಾ ॥ ೫

## ಸರ್ಗ ೧೦೫

### ದುರ್ವಾಸರ ಆಗಮನ ಸಂಭಾಷಣೆ ನಡೆಯುತ್ತಿದ್ದ ಸ್ಥಳಕ್ಕೆ ಲಕ್ಷ್ಮಣನ ಪ್ರವೇಶ ಶ್ರೀರಾಮನ ಚಿಂತೆ

ಹೀಗೆ ಶ್ರೀರಾಮನೂ ಕಾಲಪುರುಷನೂ ಸಂಭಾಷಿಸುತ್ತಿರುವಾಗ, ದುರ್ವಾಸಮುನಿಗಳು ರಾಘವನನ್ನು ಸಂದರ್ಶಿಸುವುದಕ್ಕಾಗಿ ರಾಜದ್ವಾರಕ್ಕೆ ಬಂದರು ಅವರು ಲಕ್ಷ್ಮಣನನ್ನು ನೋಡಿ "ಲಕ್ಷ್ಮಣ, ಕೂಡಲೆ ರಾಘವನ ದರ್ಶನಕ್ಕೆ ಏರ್ಪಡಿಸು ನನ್ನ ಕಾರ್ಯವು ಮೀರಿಹೋಗುತ್ತಿದೆ" ಎಂದರು (೧-೨) ಲಕ್ಷ್ಮಣನು ಮಹಾತ್ಮರಾದ ಆ ಮುನಿಗಳಿಗೆ ಅಭಿವಾದನೆ ಮಾಡಿ "ಭಗವನ್, ನಿಮ್ಮ ಕಾರ್ಯವಾವುದು? ಉದ್ದೇಶವೇನು? ಹೇಳೋಣವಾಗಲಿ ತಮ್ಮ ಕಾರ್ಯವನ್ನು ನಾನು ಮಾಡಬಹುದೆ? ಶ್ರೀರಾಮನು ಕಾರ್ಯಾಂತರದಲ್ಲಿ ವ್ಯಾಪೃತನಾಗಿದ್ದಾನೆ. ಸ್ವಲ್ಪ ಹೊತ್ತು ಕಾಯಬೇಕಾಗಿದೆ" ಎಂದನು (೩-೪) ಆ ಮಾತನ್ನು ಕೇಳಿ ಋಷಿಶಾರ್ದೂಲನ ಕೋಪವು

ಅಸ್ಮಿನ್ ಕ್ಷಣೇ ಮಾಂ ಸೌಮಿತ್ರೇ ರಾಮಾಯ ಪ್ರತಿವೇದಯ ।
ಅಸ್ಮಿನ್ ಕ್ಷಣೇ ಮಾಂ ಸೌಮಿತ್ರೇ ನ ನಿವೇದಯಸೇ ಯದಿ ॥ ೬

ವಿಷಯಂ ತ್ವಾಂ ಪುರಂ ಚೈವ ಶಪಿಷ್ಯೇ ರಾಘವಂ ತಥಾ ।
ಭರತಂ ಚೈವ ಸೌಮಿತ್ರೇ ಯುಷ್ಮಾಕಂ ಯಾ ಚ ಸಂತತಿಃ ॥ ೭

ನ ಹಿ ಶಕ್ಷ್ಯಾಮ್ಯಹಂ ಭೂಯೋ ಮನ್ಯುಂ ಧಾರಯಿತುಂ ಹೃದಿ ।
ತಚ್ಛ್ರುತ್ವಾ ಘೋರಸಂಕಾಶಂ ವಾಕ್ಯಂ ತಸ್ಯ ಮಹಾತ್ಮನಃ ॥ ೮

ಚಿಂತಯಾಮಾಸ ಮನಸಾ ತಸ್ಯ ವಾಕ್ಯಸ್ಯ ನಿಶ್ಚಯಮ್ ।
ಏಕಸ್ಯ ಮರಣಂ ಮೇಽಸ್ತು ಮಾಭೂತ್ ಸರ್ವವಿನಾಶನಮ್ ॥ ೯

ಇತಿ ಬುದ್ಧ್ಯಾ ವಿನಿಶ್ಚಿತ್ಯ ರಾಘವಾಯ ನ್ಯವೇದಯತ್ ।
ಲಕ್ಷ್ಮಣಸ್ಯ ವಚಃ ಶ್ರುತ್ವಾ ರಾಮಃ ಕಾಲಂ ವಿಸೃಜ್ಯ ಚ ॥ ೧೦

ನಿಃಸೃತ್ಯ ತ್ವರಿತಂ ರಾಜಾ ಅತ್ರೇಃ ಪುತ್ರಂ ದದರ್ಶ ಹ ।
ಸೋಽಭಿವಾದ್ಯ ಮಹಾತ್ಮಾನಂ ಜ್ವಲಂತಮಿವ ತೇಜಸಾ ॥ ೧೧

---

ನೆತ್ತಿಗೇರಿತು! ಲಕ್ಷ್ಮಣನನ್ನು ಸುಟ್ಟುಬಿಡುವ ಹಾಗೆ ಕೆಂಗಣ್ಣಿನಿಂದ ನೋಡುತ್ತ ದುರ್ವಾಸರು "ಎಲೈ ಲಕ್ಷ್ಮಣ, ಈ ಕ್ಷಣದಲ್ಲಿಯೇ ರಾಮನಿಗೆ ತಿಳಿಸು! ಈ ಕ್ಷಣದಲ್ಲಿಯೇ ಹೋಗಿ, ನಾನು ಬಂದಿದ್ದೇನೆಂದು ರಾಮನಿಗೆ ತಿಳಿಸದಿದ್ದರೆ, ಈ ರಾಜ್ಯವನ್ನು–ನಿನ್ನನ್ನು–ಈ ನಗರವನ್ನು–ರಾಮನನ್ನು–ಭರತನನ್ನು–ಶಪಿಸಿಬಿಡುವೆನು! ನಿಮ್ಮ ಕುಲಗೋತ್ರಗಳನ್ನೂ ಶಪಿಸಿ ನಾಶ ಮಾಡುವೆನು! (೫-೭) ಸಿಟ್ಟನ್ನು ತಡೆದುಕೊಳ್ಳಲು ನನಗೆ ಸಾಧ್ಯವಿಲ್ಲ!" ಎಂದು ಆರ್ಭಟಿಸಿದರು. ಆ ಘೋರವಾಕ್ಯವನ್ನು ಕೇಳಿ ಲಕ್ಷ್ಮಣನು, ಅವರು ಹಾಗೆ ಮಾಡತಕ್ಕವರೇ ಎಂದು ಮನಸ್ಸಿನಲ್ಲಿ ನಿಶ್ಚಯಿಸಿ "ನನ್ನೊಬ್ಬನಿಗೆ ಮರಣವಾದರೂ ಬರಲಿ, ಸರ್ವನಾಶವಾಗದಿರಲಿ" ಎಂದು ನಿರ್ಣಯಿಸಿ, ಒಳಗೆ ಹೋಗಿ ದುರ್ವಾಸರು ಬಂದಿರುವರೆಂದು ಶ್ರೀರಾಮನಿಗೆ ನಿವೇದಿಸಿದನು (೮-೯) ಲಕ್ಷ್ಮಣನ ನುಡಿಯನ್ನು ಕೇಳಿದೊಡನೆ ಶ್ರೀರಾಮನು ಕಾಲನನ್ನು ಕಳಿಸಿ, ಬೇಗನೆ ಹೊರಗೆ ಬಂದು ಅತ್ರಿಪುತ್ರರಾದ ದುರ್ವಾಸರನ್ನು ಸಂದರ್ಶಿಸಿದನು ಕಾಕುತ್ಸ್ಥನು ತೇಜಸ್ಸಿನಿಂದ ಜ್ವಲಿಸುತ್ತಿದ್ದ ಆ ಮಹಾತ್ಮ

ಕಿಂ ಕಾರ್ಯಮಿತಿ ಕಾಕುತ್ಸ್ಥಃ ಕೃತಾಂಜಲಿರಭಾಷತ ।
ತದ್ವಾಕ್ಯಂ ರಾಘವೇಣೋಕ್ತಂ ಶ್ರುತ್ವಾ ಮುನಿವರಃ ಪ್ರಭುಮ್ ॥

ಪ್ರತ್ಯಾಹ ರಾಮಂ ದುರ್ವಾಸಾಃ ಶ್ರೂಯತಾಂ ಧರ್ಮವತ್ಸಲ ।
ಅದ್ಯ ವರ್ಷಸಹಸ್ರಸ್ಯ ಸಮಾಪ್ತಿಸ್ತಪಸೋ ಮಮ ॥ ೧೩

ಸೋಽಹಂ ಭೋಜನಮಿಚ್ಛಾಮಿ ಯಥಾಸಿದ್ಧಂ ತವಾನಘ ।
ತಚ್ಛ್ರುತ್ವಾ ವಚನಂ ರಾಜಾ ರಾಘವಃ ಪ್ರೀತಮಾನಸಃ ॥ ೧೪

ಭೋಜನಂ ಮುನಿಮುಖ್ಯಾಯ ಯಥಾಸಿದ್ಧಮುಪಾಹರತ್ ।
ಸ ತು ಭುಕ್ತ್ವಾ ಮುನಿಶ್ರೇಷ್ಠಸ್ತದನ್ನಮಮೃತೋಪಮಮ್ ॥ ೧೫

ಸಾಧು ರಾಮೇತಿ ಸಂಭಾಷ್ಯ ಸ್ವಮಾಶ್ರಮಮುಪಾಗಮತ್ ।
ತಸ್ಮಿನ್ ಗತೇ ಮುನಿವರೇ ಸ್ವಾಶ್ರಮಂ ಲಕ್ಷ್ಮಣಾಗ್ರಜಃ ॥ ೧೬

ಸಂಸ್ಮೃತ್ಯ ಕಾಲವಾಕ್ಯಾನಿ ತತೋ ದುಃಖಮುಪಾಗಮತ್ ।
ದುಃಖೇನ ಚ ಸುಸಂತಪ್ತಃ ಸ್ಮೃತ್ವಾ ತದ್ಘೋರದರ್ಶನಮ್ ॥ ೧೭

---

ರಿಗೆ ಅಭಿವಾದನೆಮಾಡಿ ಕೈಮುಗಿದುಕೊಂಡು "ನನ್ನಿಂದ ಏನಾಗಬೇಕು?" ಎಂದು ಕೇಳಿದನು (೧೦-೧೨) ದುರ್ವಾಸರು "ಧರ್ಮವತ್ಸಲ, ಇಂದಿಗೆ ನಾನು ಕೈಗೊಂಡಿದ್ದ ಸಾವಿರ ವರ್ಷಗಳ ತಪೋನಿಯಮವು ಸಮಾಪ್ತವಾಯಿತು ನನಗೆ ಸಿದ್ಧಪಡಿಸಿದ ಭೋಜನ ಬೇಕಾಗಿದೆ" ಎಂದರು ರಾಘವನು ಸಂತುಷ್ಟನಾಗಿ ಅವರಿಗೆ ಭೋಜನ ಮಾಡಿಸಿದನು ದುರ್ವಾಸರು ಅಮೃತೋಪಮವಾದ ಅನ್ನವನ್ನು ಭುಂಜಿಸಿ "ರಾಮ, ಭೋಜನವು ಸೊಗಸಾಗಿತ್ತು ತೃಪ್ತನಾದೆನು" ಎಂದು ಹೇಳಿ ತಮ್ಮ ಆಶ್ರಮಕ್ಕೆ ನಿರ್ಗಮಿಸಿದರು (೧೩-೧೫) ಅವರು ಹೊರಟುಹೋದಮೇಲೆ ಲಕ್ಷ್ಮಣಾಗ್ರಜನಿಗೆ ಕಾಲಪುರುಷನು ಹಾಕಿದ್ದ ನಿಯಮವು ಸ್ಮರಣೆಗೆ ಬಂದು ದುಃಖವಾಯಿತು ನಿಯಮದ ಘೋರ ಪರಿಣಾಮವನ್ನು ನೆನೆಸಿಕೊಂಡು ಶ್ರೀರಾಮನು ಶೋಕತಾಪದಿಂದ ಬೆಂದುಹೋದನು ದೀನಚಿತ್ತನಾಗಿ ತಲೆತಗ್ಗಿಸಿ ಕುಳಿತನು ಒಂದು ಮಾತನ್ನಾಡಲೂ ಶಕ್ತನಾಗಲಿಲ್ಲ ಕಡೆಗೆ ಆ ಕೀರ್ತಿಶಾಲಿಯು

ಅವಾಙ್ಮುಖೋ ದೀನಮನಾ ವ್ಯಾಹರ್ತುಂ ನ ಶಶಾಕ ಹ ।
ತತೋ ಬುದ್ಧ್ಯಾ ವಿನಿಶ್ಚಿತ್ಯ ಕಾಲವಾಕ್ಯಾನಿ ರಾಘವಃ ॥ ೧೮

ನೈತದಸ್ತೀತಿ ನಿಶ್ಚಿತ್ಯ ತೂಷ್ಣೀಮಾಸೀನ್ಮಹಾಯಶಾಃ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಪಂಚೋತ್ತರಶತತಮಃ ಸರ್ಗಃ



ಕಾಲನು ಹೇಳಿದ ನುಡಿಗಳನ್ನು ಸ್ಮರಿಸಿಕೊಂಡು, "ಇನ್ನು ಯಾವುದೂ ಉಳಿಯುವುದಿಲ್ಲ" ಎಂದು ನಿಶ್ಚಯಿಸಿ ಸುಮ್ಮನಾದನು (೧೬-೧೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರೈದನೆಯ ಸರ್ಗ



## ಷಡುತ್ತರಶತತಮಃ ಸರ್ಗಃ

### ಲಕ್ಷ್ಮಣಪರಿತ್ಯಾಗಃ

ಅವಾಙ್ಮುಖಮಥೋ ದೀನಂ ದೃಷ್ಟ್ವಾ ಸೋಮಮಿವಾಪ್ಲುತಮ್ ।
ರಾಘವಂ ಲಕ್ಷ್ಮಣೋ ವಾಕ್ಯಂ ಹೃಷ್ಟೋ ಮಧುರಮಬ್ರವೀತ್ ॥ ೧

ನ ಸಂತಾಪಂ ಮಹಾಬಾಹೋ ಮದರ್ಥಂ ಕರ್ತುಮರ್ಹಸಿ ।
ಪೂರ್ವನಿರ್ಮಾಣಬದ್ಧಾ ಹಿ ಕಾಲಸ್ಯ ಗತಿರೀದೃಶೀ ॥ ೨

ಜಹಿ ಮಾಂ ಸೌಮ್ಯ ವಿಸ್ರಬ್ಧಂ ಪ್ರತಿಜ್ಞಾಂ ಪರಿಪಾಲಯ ।
ಹೀನಪ್ರತಿಜ್ಞಾಃ ಕಾಕುತ್ಸ್ಥ ಪ್ರಯಾಂತಿ ನರಕಂ ನರಾಃ ॥ ೩

ಯದಿ ಪ್ರೀತಿರ್ಮಹಾರಾಜ ಯದ್ಯನುಗ್ರಾಹ್ಯತಾ ಮಯಿ ।
ಜಹಿ ಮಾಂ ನಿರ್ವಿಶಂಕಸ್ತ್ವಂ ಧರ್ಮಂ ವರ್ಧಯ ರಾಘವ ॥ ೪

ಲಕ್ಷ್ಮಣೇನ ತಥೋಕ್ತಸ್ತು ರಾಮಃ ಪ್ರಚಲಿತೇಂದ್ರಿಯಃ ।
ಮಂತ್ರಿಣಃ ಸಮುಪಾನೀಯ ತಥೈವ ಚ ಪುರೋಧಸಮ್ ॥ ೫

## ಸರ್ಗ ೧೦೬

### ಲಕ್ಷ್ಮಣನ ಪರಿತ್ಯಾಗ

ಪೂರ್ಣಚಂದ್ರನಿಗೆ ಗ್ರಹಣ ಹಿಡಿದಂತಾಗಿ, ಶ್ರೀರಾಮನು ದೈನ್ಯದಿಂದ ತಲೆತಗ್ಗಿಸಿ ಕುಳಿತಿರುವುದನ್ನು ಕಂಡು, ಲಕ್ಷ್ಮಣನು ಉತ್ಸಾಹದಿಂದ ಮುಂದೆ ಬಂದು ಮಧುರವಾಗಿ ನುಡಿದನು "ಹೇ ಮಹಾಬಾಹು, ನನಗೋಸ್ಕರ ದುಃಖಿಸುವುದು ತರವಲ್ಲ ಪೂರ್ವಜನ್ಮದ ಕರ್ಮಫಲದಿಂದ ಕಾಲಗತಿಯು ಈ ಬಗೆಯಲ್ಲಿ ಪರಿಣಮಿಸುತ್ತದೆ (೧-೨) ಸೌಮ್ಯ, ನನ್ನನ್ನು ಸಂಹರಿಸು, ಪ್ರತಿಜ್ಞೆಯನ್ನು ಪಾಲಿಸು ಕಾಕುತ್ಸ್ಥ, ಪ್ರತಿಜ್ಞೆಯಂತೆ ನಡೆಯದ ಜನರಿಗೆ ನರಕವು ಪ್ರಾಪ್ತವಾಗುವುದು ಮಹಾರಾಜ, ನನ್ನಲ್ಲಿ ಪ್ರೀತಿ ಇರುವುದಾದರೆ, ನಾನು ಅನುಗ್ರಹಕ್ಕೆ ಪಾತ್ರನಾದರೆ, ನಿಶ್ಶಂಕೆಯಿಂದ ನನ್ನನ್ನು ವಧಿಸು ಧರ್ಮವನ್ನು ಪೋಷಿಸು" ಎಂದನು (೩-೪) ಲಕ್ಷ್ಮಣನ ನುಡಿಯನ್ನು ಕೇಳಿ ಶ್ರೀರಾಮನ ಸಕಲೇಂದ್ರಿಯಗಳೂ ಧೈರ್ಯಗುಂದಿ

ಅಬ್ರವೀಚ್ಚ ತದಾ ವೃತ್ತಂ ತೇಷಾಂ ಮಧ್ಯೇ ಸ ರಾಘವಃ ।
ದುರ್ವಾಸೋಽಭಿಗಮಂ ಚೈವ ಪ್ರತಿಜ್ಞಾಂ ತಾಪಸಸ್ಯ ಚ ॥ ೬

ತಚ್ಛ್ರುತ್ವಾ ಮಂತ್ರಿಣಃ ಸರ್ವೇ ಸೋಪಾಧ್ಯಾಯಾಃ ಸಮಾಸತ ।
ವಸಿಷ್ಠಸ್ತು ಮಹಾತೇಜಾ ವಾಕ್ಯಮೇತದುವಾಚ ಹ ॥ ೭

ದೃಷ್ಟಮೇತನ್ಮಹಾಬಾಹೋ ಕ್ಷಯಂ ತೇ ರೋಮಹರ್ಷಣಮ್ ।
ಲಕ್ಷ್ಮಣೇನ ವಿಯೋಗಶ್ಚ ತವ ರಾಮ ಮಹಾಯಶಃ ॥ ೮

ತ್ಯಜೈನಂ ಬಲವಾನ್ ಕಾಲೋ ಮಾ ಪ್ರತಿಜ್ಞಾಂ ವೃಥಾ ಕೃಥಾಃ ।
ವಿನಷ್ಟಾಯಾಂ ಪ್ರತಿಜ್ಞಾಯಾಂ ಧರ್ಮೋಽಪಿ ಚ ಲಯಂ ವ್ರಜೇತ್

ತತೋ ಧರ್ಮೇ ವಿನಷ್ಟೇ ತು ತ್ರೈಲೋಕ್ಯಂ ಸಚರಾಚರಮ್ ।
ಸದೇವರ್ಷಿಗಣಂ ಸರ್ವಂ ವಿನಶ್ಯೇತ್ತು ನ ಸಂಶಯಃ ॥ ೧೦

ಸ ತ್ವಂ ಪುರುಷಶಾರ್ದೂಲ ತ್ರೈಲೋಕ್ಯಸ್ಯಾಭಿಪಾಲನಾತ್ ।
ಲಕ್ಷ್ಮಣೇನ ವಿನಾ ಚಾದ್ಯ ಜಗತ್ ಸ್ವಸ್ಥಂ ಕುರುಷ್ವ ಹ ॥ ೧೧

---

ವಿಚಲಿತವಾದವು ಅವನು ಮಂತ್ರಿಗಳನ್ನೂ ಪುರೋಹಿತರನ್ನೂ ಕರೆಸಿ ನಡೆದುದೆಲ್ಲವನ್ನೂ ತಿಳಿಸಿದನು ದುರ್ವಾಸರ ಆಗಮನವನ್ನೂ ತಾಪಸನು ಹಾಕಿದ್ದ ನಿಯಮವನ್ನೂ ಹೇಳಿದನು (೫-೬) ಅದೆಲ್ಲವನ್ನೂ ಕೇಳಿ ಮಂತ್ರಿಗಳೂ ಇತರ ಪುರೋಹಿತರೂ ಸುಮ್ಮನಿದ್ದರು. ಆದರೆ ತೇಜಸ್ವಿಗಳಾದ ವಸಿಷ್ಠರು “ ರಾಘವ, ಮೈನವಿರೇಳಿಸುವಂತಹ ಕ್ಷೀಣಸ್ಥಿತಿಯು ನಿನಗೆ ಬರುವುದೆಂದು ನನಗೆ ತಿಳಿದಿತ್ತು ! ಲಕ್ಷ್ಮಣನ ವಿಯೋಗವು ಘಟಿಸುವುದೆಂದು ಗೊತ್ತಿತ್ತು (೭-೮) ರಾಮ, ಈತನನ್ನು ಪರಿತ್ಯಜಿಸು ಕಾಲವು ಪ್ರಬಲವಾದುದು ಪ್ರತಿಜ್ಞೆಯನ್ನು ಸುಳ್ಳಾಗಿಸಬೇಡ ಪ್ರತಿಜ್ಞೆಯು ಸುಳ್ಳಾದರೆ ಧರ್ಮವು ಲಯವಾದೀತು (೯) ಧರ್ಮವು ಲಯವಾದರೆ, ಚರಾಚರಾತ್ಮಕವಾದ ತ್ರೈಲೋಕ್ಯವು ದೇವರ್ಷಿಗಣಸಹಿತವಾಗಿ ನಾಶಹೊಂದುವುದು ಸಂದೇಹವಿಲ್ಲ ಆದ್ದರಿಂದ, ಪುರುಷಶ್ರೇಷ್ಠ, ತ್ರೈಲೋಕ್ಯದ ಪಾಲನೆಯ ದೃಷ್ಟಿಯಿಂದ ಲಕ್ಷ್ಮಣನನ್ನು ತ್ಯಜಿಸಿ ಜಗತ್ತಿಗೆ ಸ್ವಾಸ್ಥ್ಯವನ್ನುಂಟುಮಾಡು ”

ತೇಷಾಂ ತತ್ ಸಮವೇತಾನಾಂ ವಾಕ್ಯಂ ಧರ್ಮಾರ್ಥಸಂಹಿತಮ್ ।
ಶ್ರುತ್ವಾ ಪರಿಷದೋ ಮಧ್ಯೇ ರಾಮೋ ಲಕ್ಷ್ಮಣಮಬ್ರವೀತ್ ॥ ೧೨

ವಿಸರ್ಜಯೇ ತ್ವಾಂ ಸೌಮಿತ್ರೇ ಮಾ ಭೂದ್ಧರ್ಮವಿಪರ್ಯಯಃ ।
ತ್ಯಾಗೋ ವಧೋ ವಾ ವಿಹಿತಃ ಸಾಧೂನಾಂ ತೂಭಯಂ ಸಮಮ್॥

ರಾಮೇಣ ಭಾಷಿತೇ ವಾಕ್ಯೇ ಬಾಷ್ಪವ್ಯಾಕುಲಿತೇಂದ್ರಿಯಃ ।
ಲಕ್ಷ್ಮಣಸ್ತ್ವರಿತಂ ಪ್ರಾಯಾತ್ ಸ್ವಗೃಹಂ ನ ವಿವೇಶ ಹ ॥ ೧೪

ಸ ಗತ್ವಾ ಸರಯೂತೀರಮುಪಸ್ಪೃಶ್ಯ ಕೃತಾಂಜಲಿಃ ।
ನಿಗೃಹ್ಯ ಸರ್ವಸ್ರೋತಾಂಸಿ ನಿಃಶ್ವಾಸಂ ನ ಮುಮೋಚ ಹ ॥ ೧೫

ಅನಿಶ್ವಸಂತಂ ಯುಕ್ತಂ ತಂ ಸಶಕ್ರಾಃ ಸಾಪ್ಸರೋಗಣಾಃ ।
ದೇವಾಃ ಸರ್ಷಿಗಣಾಃ ಸರ್ವೇ ಪುಷ್ಪೈರಭ್ಯಕಿರಂಸ್ತದಾ ॥ ೧೬

ಅದೃಶ್ಯಂ ಸರ್ವಮನುಜೈಃ ಸಶರೀರಂ ಮಹಾಬಲಮ್ ।
ಪ್ರಗೃಹ್ಯ ಲಕ್ಷ್ಮಣಂ ಶಕ್ರಸ್ತ್ರಿದಿವಂ ಸಂವಿವೇಶ ಹ ॥ ೧೭

---

ಎಂದು ಹೇಳಿದರು (೧೦-೧೧). ಅನಂತರ ಅಲ್ಲಿ ನೆರದವರೆಲ್ಲರ ಧರ್ಮಾರ್ಥ ಯುಕ್ತವಾದ ವಚನವನ್ನಾಲಿಸಿ, ಶ್ರೀರಾಮನು ಸಭಾಮಧ್ಯದಲ್ಲಿ ಲಕ್ಷ್ಮಣ ನನ್ನು ನೋಡಿ "ಸೌಮಿತ್ರಿ, ಧರ್ಮಗ್ಲಾನಿಯಾಗಬಾರದೆಂದು ನಿನ್ನನ್ನು ಪರಿತ್ಯಜಿಸಿದ್ದೇನೆ. ಸಜ್ಜನರಿಗೆ ವಧೆ ಅಥವಾ ಪರಿತ್ಯಾಗ—ಇವೆರಡೂ ಸಮವೆಂದು ಶಾಸ್ತ್ರವಿಹಿತವಾಗಿದೆ" ಎಂದನು (೧೨-೧೩). ರಾಘವನ ನುಡಿ ಯನ್ನು ಕೇಳಿ ಲಕ್ಷ್ಮಣನ ಕಣ್ಣುಗಳಿಂದ ಕಂಬನಿ ಉಕ್ಕಿತು. ಒಡನೆಯೇ ಲಕ್ಷ್ಮಣನು ಅಲ್ಲಿಂದ ಹೊರಟುಹೋದನು. ತನ್ನ ಮನೆಯನ್ನೂ ಪ್ರವೇಶಿಸ ಲಿಲ್ಲ. ಅವನು ನೇರವಾಗಿ ಸರಯೂತೀರಕ್ಕೆ ಹೋಗಿ ಶುದ್ಧಾಚಮನಮಾಡಿ ಕೈಮುಗಿದು, ಸಕಲೇಂದ್ರಿಯ ದ್ವಾರಗಳನ್ನೂ ನಿರೋಧಿಸಿ ಶ್ವಾಸೋಚ್ಛ್ವಾಸ ಗಳನ್ನು ನಿಗ್ರಹಿಸಿದನು (೧೪-೧೫). ಲಕ್ಷ್ಮಣನು ಯೋಗಯುಕ್ತನಾಗಿ ನಿಶ್ವಾಸ ವನ್ನು ನಿಗ್ರಹಿಸಿರಲು, ಇಂದ್ರಾದಿದೇವತೆಗಳೂ ದೇವರ್ಷಿಗಳೂ ಅಪ್ಸರೆ ಯರೂ ಅವನ ಮೇಲೆ ಹೂಮಳೆಗರೆದರು (೧೬). ಅನಂತರ ದೇವೇಂದ್ರನು ಬಲಾಢ್ಯನಾದ ಲಕ್ಷ್ಮಣನನ್ನು ಯಾವ ಮನುಜರಿಗೂ ಕಾಣದಂತೆ ಶರೀರ

*

ತತೋ ವಿಷ್ಣೋಶ್ಚತುರ್ಭಾಗಮಾಗತಂ ಸುರಸತ್ತಮಾಃ ।
ದೃಷ್ಟ್ವಾ ಪ್ರಮುದಿತಾಃ ಸರ್ವೇಽಪೂಜಯನ್ ಸಮಹರ್ಷಯಃ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಷಡುತ್ತರಶತತಮಃ ಸರ್ಗಃ



ಸಹಿತವಾಗಿ ಎತ್ತಿಕೊಂಡು ಸ್ವರ್ಗಲೋಕವನ್ನಡರಿದನು ಆಗ ವಿಷ್ಣುವಿನ ಚತುರ್ಥಾಂಶವು ಸ್ವರ್ಗಕ್ಕೆ ಆಗಮಿಸಿತೆಂದು ಸಕಲ ದೇವತೆಗಳೂ ಮಹರ್ಷಿಗಳೂ ಹರ್ಷದಿಂದ ಆತನನ್ನು ಪೂಜಿಸಿದರು (೧೭-೧೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರಾರನೆಯ ಸರ್ಗ



## ಸಪ್ತೋತ್ತರಶತತಮಃ ಸರ್ಗಃ

### ಕುಶಲವಾಭಿಷೇಕಃ

ವಿಸೃಜ್ಯ ಲಕ್ಷ್ಮಣಂ ರಾಮೋ ದುಃಖಶೋಕಸಮನ್ವಿತಃ ।
ಪುರೋಧಸಂ ಮಂತ್ರಿಣಶ್ಚ ನೈಗಮಾಂಶ್ಚೇದಮಬ್ರವೀತ್ ॥ ೧

ಅದ್ಯ ರಾಜ್ಯೇಽಭಿಷೇಕ್ಷ್ಯಾಮಿ ಭರತಂ ಧರ್ಮವತ್ಸಲಮ್ ।
ಅಯೋಧ್ಯಾಯಾಃ ಪತಿಂ ವೀರಂ ತತೋ ಯಾಸ್ಯಾಮ್ಯಹಂ ವನಮ್

ಪ್ರವೇಶಯತ ಸಂಭಾರಾನ್ ಮಾ ಭೂತ್ ಕಾಲಸ್ಯ ಪರ್ಯಯಃ ।
ಅದ್ಯೈವಾಹಂ ಗಮಿಷ್ಯಾಮಿ ಲಕ್ಷ್ಮಣೇನ ಗತಾಂ ಗತಿಮ್ ॥ ೩

ತಚ್ಛ್ರುತ್ವಾ ರಾಘವೇಣೋಕ್ತಂ ಸರ್ವಾಃ ಪ್ರಕೃತಯೋ ಭೃಶಮ್ ।
ಮೂರ್ಧಭಿಃ ಪ್ರಣತಾ ಭೂಮೌ ಗತಸತ್ತ್ವಾ ಇವಾಭವನ್ ॥ ೪

ಭರತಶ್ಚ ವಿಸಂಜ್ಞೋಽಭೂಚ್ಛ್ರುತ್ವಾ ರಾಮಸ್ಯ ಭಾಷಿತಮ್ ।
ರಾಜ್ಯಂ ವಿಗರ್ಹಯಾಮಾಸ ರಾಘವಂ ಚೇದಮಬ್ರವೀತ್ ॥ ೫

## ಸರ್ಗ ೧೦೭

### ಕುಶಲವರ ಪಟ್ಟಾಭಿಷೇಕ

ಶ್ರೀರಾಮನು ಲಕ್ಷ್ಮಣನನ್ನು ವಿಸರ್ಜಿಸಿದ ಮೇಲೆ ದುಃಖಭಾರದಿಂದ ಸಂತಪ್ತನಾಗಿ ಪುರೋಹಿತರನ್ನೂ ಮಂತ್ರಿಗಳನ್ನೂ ವಣಿಜರೇ ಮುಂತಾದ ಪೌರರನ್ನೂ ನೋಡಿ “ ಈ ದಿನ ಧರ್ಮವತ್ಸಲನಾದ ಭರತನಿಗೆ ಅಯೋಧ್ಯಾ ಪತಿಯೆಂದು ಪಟ್ಟಾಭಿಷೇಕಮಾಡಿ, ನಾನು ಕಾಡಿಗೆ ಹೊರಟುಹೋಗುವೆನು (೧-೨) ತಡಮಾಡದೆ ಬೇಕಾದ ಸಾಮಗ್ರಿಗಳನ್ನು ಸಜ್ಜುಗೊಳಿಸಿರಿ ಈ ದಿನವೇ ಲಕ್ಷ್ಮಣನು ಹೋದ ದಾರಿಯನ್ನು ಹಿಡಿಯುವೆನು” ಎಂದನು (೩) ರಾಘವನ ಹೇಳಿಕೆಯನ್ನು ಕೇಳಿ ಸಕಲ ಪ್ರಜೆಗಳೂ ನೆಲದ ಕಡೆಗೆ ತಲೆ ತಗ್ಗಿಸಿದರು ಅವರಿಗೆ ಪ್ರಾಣವೇ ಹೋದಂತಾಯಿತು ಭರತನು ದಿಗ್ಭ್ರಾಂತನಾಗಿ ರಾಜ್ಯಪ್ರಾಪ್ತಿಯನ್ನೊಲ್ಲದೆ ಅದನ್ನು ನಿಂದಿಸಿ ಹೀಗೆಂದನು

ಸತ್ಯೇನಾಹಂ ಶಪೇ ರಾಜನ್ ಸ್ವರ್ಗಲೋಕೇ ನ ಚೈವ ಹಿ ।
ನ ಕಾಮಯೇ ಯಥಾ ರಾಜ್ಯಂ ತ್ವಾಂ ವಿನಾ ರಘುನಂದನ ॥ ೬

ಇಮೌ ಕುಶಲವೌ ರಾಜನ್ನಭಿಷಿಂಚ ನರಾಧಿಪ ।
ಕೋಸಲೇಷು ಕುಶಂ ವೀರಮುತ್ತರೇಷು ತಥಾ ಲವಮ್ ॥ ೭

ಶತ್ರುಘ್ನಸ್ಯ ತು ಗಚ್ಛಂತು ದೂತಾಸ್ತ್ವರಿತವಿಕ್ರಮಾಃ ।
ಇದಂ ಗಮನಮಸ್ಮಾಕಂ ಸ್ವರ್ಗಾಯಾಖ್ಯಾಂತು ಮಾ ಚಿರಮ್ ॥ ೮

ತಚ್ಛ್ರುತ್ವಾ ಭರತೇನೋಕ್ತಂ ದೃಷ್ಟ್ವಾ ಚಾಪಿ ಹ್ಯಧೋಮುಖಾನ್
ಪೌರಾನ್ ದುಃಖೇನ ಸಂತಪ್ತಾನ್ ವಸಿಷ್ಠೋ ವಾಕ್ಯಮಬ್ರವೀತ್ ॥

ವತ್ಸ ರಾಮ ಇಮಾಃ ಪಶ್ಯ ಧರಣೀಂ ಪ್ರಕೃತೀರ್ಗತಾಃ ।
ಜ್ಞಾತ್ವೈಷಾಮೀಪ್ಸಿತಂ ಕಾರ್ಯಂ ಮಾ ಚೈಷಾಂ ವಿಪ್ರಿಯಂ ಕೃಥಾಃ

ವಸಿಷ್ಠಸ್ಯ ತು ವಾಕ್ಯೇನ ಉತ್ಥಾಪ್ಯ ಪ್ರಕೃತೀಜನಮ್ ।
ಕಿಂ ಕರೋಮೀತಿ ಕಾಕುತ್ಸ್ಥಃ ಸರ್ವಾ ವಚನಮಬ್ರವೀತ್ ॥ ೧೧

(೬-೫). "ಮಹಾರಾಜ, ಸತ್ಯವಾಗಿ ಆಣೆಯಿಟ್ಟು ಹೇಳುತ್ತೇನೆ, ನೀನಿಲ್ಲದೆ ಸ್ವರ್ಗಲೋಕದ ಸುಖಭೋಗವೂ ನನಗೆ ಬೇಡ–ನೀನಿಲ್ಲದ ಈ ರಾಜ್ಯವೂ ನನಗೆ ಬೇಡ ಈ ಕುಶಲವರಿಗೆ ಪಟ್ಟಾಭಿಷೇಕ ಮಾಡು ವೀರನಾದ ಕುಶನನ್ನು ಕೋಸಲರಾಜ್ಯಕ್ಕೂ ಲವನನ್ನು ಉತ್ತರ ಕೋಸಲರಾಜ್ಯಕ್ಕೂ ಅಧಿಪತಿಗಳನ್ನಾಗಿ ಮಾಡು (೬-೭) ದೂತರು ತ್ವರೆಯಿಂದ ಶತ್ರುಘ್ನನ ಬಳಿಗೆ ಹೋಗಲಿ ಸ್ವರ್ಗಕ್ಕಾಗಿ ನಮ್ಮ ಮಹಾಪ್ರಸ್ಥಾನವು ನಡೆಯುವುದೆಂದು ಅವನಿಗೆ ತಿಳಿಸಲಿ ವಿಳಂಬ ಬೇಡ" ಎಂದನು (೮) ಹೀಗೆ ಭರತನು ಹೇಳಿದ್ದನ್ನು ಕೇಳಿ, ಮತ್ತೂ ಪೌರರೆಲ್ಲರೂ ದುಃಖಸಂತಪ್ತರಾಗಿ ತಲೆತಗ್ಗಿಸಿರುವುದನ್ನು ಕಂಡು ವಸಿಷ್ಠಮುನಿಗಳು ವತ್ಸ–ರಾಮ, ಈ ಪ್ರಜೆಗಳು ಶೋಕದಿಂದ ನೆಲದ ಮೇಲೆ ಕುಸಿದು ಹೋಗಿರುವುದನ್ನು ನೋಡು ಇವರ ಈಪ್ಸಿತವೇನೆಂಬುದನ್ನು ತಿಳಿದು ಅದರಂತೆ ಮಾಡು ಇವರಿಗೆ ಅಪ್ರಿಯವಾದುದನ್ನು ಮಾಡಬೇಡ" ಎಂದು ಹೇಳಿದರು (೯-೧೦) ಆಗ ಕಾಕುತ್ಸ್ಥನು ಕುಸಿದು ಹೋಗಿದ್ದ ಜನರನ್ನು ಮೇಲೆಬ್ಬಿಸಿ "ಏನು ಮಾಡಲಿ ?" ಎಂದು

ತತಃ ಸರ್ವಾಃ ಪ್ರಕೃತಯೋ ರಾಮಂ ವಚನಮಬ್ರುವನ್ ।
ಗಚ್ಛಂತಮನುಗಚ್ಛಾಮೋ ಯತ್ರ ರಾಮ ಗಮಿಷ್ಯಸಿ ॥ ೧೨

ಪೌರೇಷು ಯದಿ ತೇ ಪ್ರೀತಿರ್ಯದಿ ಸ್ನೇಹೋ ಹ್ಯನುತ್ತಮಃ ।
ಸಪುತ್ರದಾರಾಃ ಕಾಕುತ್ಸ್ಥ ಸಮಾಗಚ್ಛಾಮ ಸತ್ಪಥಮ್ ॥ ೧೩

ತಪೋವನಂ ವಾ ದುರ್ಗಂ ವಾ ನದೀಮಂಭೋನಿಧಿಂ ತಥಾ ।
ವಯಂ ತೇ ಯದಿ ನ ತ್ಯಾಜ್ಯಾಃ ಸರ್ವಾನ್ನೋ ನಯ ಈಶ್ವರ ॥ ೧೪

ಏಷಾ ನಃ ಪರಮಾ ಪ್ರೀತಿರೇಷ ನಃ ಪರಮೋ ವರಃ ।
ಹೃದ್ಗತಾ ನಃ ಸದಾ ಪ್ರೀತಿಸ್ತವಾನುಗಮನೇ ನೃಪ ॥ ೧೫

ಪೌರಾಣಾಂ ದೃಢಭಕ್ತಿಂ ಚ ಬಾಢಮಿತ್ಯೇವ ಸೋಽಬ್ರವೀತ್ ।
ಸ್ವಕೃತಾಂತಂ ಚಾನ್ವವೇಕ್ಷ್ಯ ತಸ್ಮಿನ್ನಹನಿ ರಾಘವಃ ॥ ೧೬

ಕೋಸಲೇಷು ಕುಶಂ ವೀರಮುತ್ತರೇಷು ತಥಾ ಲವಮ್ ।
ಅಭಿಷಿಚ್ಯ ಮಹಾತ್ಮಾನಾವುಭೌ ರಾಮಃ ಕುಶೀಲವೌ ॥ ೧೭

---

ಕೇಳಿದನು ಆಗ ಪ್ರಜೆಗಳು "ರಾಮ, ನೀನು ಎಲ್ಲಿಗೆ ಹೋಗುವೆಯೋ ಅಲ್ಲಿಗೆ ನಿನ್ನನ್ನು ಅನುಸರಿಸಿ ಬರುತ್ತೇವೆ (೧೧-೧೨) ಪೌರರಲ್ಲಿ ನಿನಗೆ ಪ್ರೀತಿಯೂ ಅತಿಶಯವಾದ ಸ್ನೇಹವೂ ಇರುವುದಾದರೆ, ಅನುಮತಿಯನ್ನು ಕೊಡು ಕಾಕುತ್ಸ್ಥ, ಪತ್ನೀಪುತ್ರಸಮೇತರಾಗಿ ನಿನ್ನ ಸನ್ಮಾರ್ಗವನ್ನು ಅನುಸರಿಸುತ್ತೇವೆ (೧೩) ತಪೋವನವಾಗಲಿ, ದುರ್ಗಮ ಪ್ರದೇಶವಾಗಲಿ, ನದಿಯಾಗಲಿ, ಸಮುದ್ರವಾಗಲಿ—ನಿನ್ನ ಹಿಂದೆ ಬರುತ್ತೇವೆ ಹೇ ಸ್ವಾಮಿ, ನಾವು ತ್ಯಾಜ್ಯರಲ್ಲವಾದರೆ ನಮ್ಮೆಲ್ಲರನ್ನೂ ಕರೆದುಕೊಂಡು ಹೋಗು (೧೪). ಇದೇ ನಮಗೆ ಪರಮಪ್ರಿಯವಾದುದು, ಇದೇ ನಾವು ಕೇಳಿಕೊಳ್ಳುವ ಶ್ರೇಷ್ಠವಾದ ವರ ನಿನ್ನೊಡನೆ ಹೋಗಬೇಕೆಂಬುದು ನಮ್ಮ ಅಂತರಂಗದಲ್ಲಿ ಸದಾ ನೆಲೆಸಿರುವ ಬಯಕೆ" ಎಂದರು (೧೫) ಪೌರರ ದೃಢಭಕ್ತಿಯನ್ನು ಕಂಡು ಶ್ರೀರಾಮನು "ಆಗಬಹುದು" ಎಂದು ತಿಳಿಸಿದನು ಅನಂತರ ತನ್ನ ಕರ್ತವ್ಯದ ಸಿದ್ಧಾಂತವನ್ನನುಸರಿಸಿ ಆ ದಿನವೇ ಕೋಸಲರಾಜ್ಯವನ್ನು ಕುಶನಿಗೂ ಉತ್ತರಕೋಸಲವನ್ನು ಲವನಿಗೂ ಕೊಟ್ಟು ಪಟ್ಟಗಟ್ಟಿದನು

ಅಭಿಷಿಕ್ತೌ ಸುತಾವಂಕೇ ಪ್ರತಿಷ್ಠಾಪ್ಯ ಪುರೇ ತತಃ ।
ಪರಿಷ್ವಜ್ಯ ಮಹಾಬಾಹುರ್ಮೂರ್ಧ್ನ್ಯುಪಾಘ್ರಾಯ ಚಾಸಕೃತ್ ॥

ರಥಾನಾಂ ತು ಸಹಸ್ರಾಣಿ ನಾಗಾನಾಮಯುತಾನಿ ಚ ।
ದಶಾಯುತಾನಿ ಚಾಶ್ವಾನಾಮೇಕೈಕಸ್ಯ ಧನಂ ದದೌ ॥ ೧೯

ಬಹುರತ್ನೌ ಬಹುಧನೌ ಹೃಷ್ಟಪುಷ್ಟಜನಾವೃತೌ ।
ಸ್ವೇ ಪುರೇ ಪ್ರೇಷಯಾಮಾಸ ಭ್ರಾತರೌ ತು ಕುಶೀಲವೌ ॥ ೨೦

ಅಭಿಷಿಚ್ಯ ಸುತೌ ವೀರೌ ಪ್ರತಿಷ್ಠಾಪ್ಯ ಪುರೇ ತದಾ ।
ದೂತಾನ್ ಸಂಪ್ರೇಷಯಾಮಾಸ ಶತ್ರುಘ್ನಾಯ ಮಹಾತ್ಮನೇ ॥ ೨೧

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಸಪ್ತೋತ್ತರಶತತಮಃ ಸರ್ಗಃ



(೧೬-೧೭) ಆಮೇಲೆ ಮಹಾವೀರರಾದ ಆ ಮಕ್ಕಳನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಲಿಂಗಿಸಿ ಮತ್ತೆ ಮತ್ತೆ ಅವರ ಶಿರಸ್ಸನ್ನು ಪ್ರೀತಿಯಿಂದ ಆಘ್ರಾಣಿಸಿದನು. ಅವರಲ್ಲಿ ಒಬ್ಬೊಬ್ಬನಿಗೂ ದಿವ್ಯವಾದ ಸಾವಿರಾರು ರಥಗಳನ್ನೂ ಹತ್ತು ಸಾವಿರ ಆನೆಗಳನ್ನೂ ಒಂದು ಲಕ್ಷ ಕುದುರೆಗಳನ್ನೂ ಕೊಟ್ಟನು (೧೮-೧೯) ಅಣ್ಣತಮ್ಮಂದಿರಾದ ಕುಶಲವರಿಗೆ ಅಸಂಖ್ಯಾತವಾಗಿ ರತ್ನಗಳನ್ನೂ ಧನಗಳನ್ನೂ ಇತ್ತು ಹೃಷ್ಟಪುಷ್ಟರಾದ ಪರಿವಾರಜನರೊಂದಿಗೆ ಅವರ ನಗರಗಳಿಗೆ ಕಳಿಸಿದನು (೨೦) ಈ ಪ್ರಕಾರವಾಗಿ ಶ್ರೀರಾಮನು ಅಯೋಧ್ಯೆಯಲ್ಲಿ ಕುಶಲವರಿಗೆ ಪಟ್ಟಾಭಿಷೇಕಮಾಡಿ, ಮಹಾತ್ಮನಾದ ಶತ್ರುಘ್ನನ ಬಳಿಗೆ ದೂತರನ್ನು ಕಳಿಸಿದನು (೨೧)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರೇಳನೆಯ ಸರ್ಗ



## ಅಷ್ಟೋತ್ತರಶತತಮಃ ಸರ್ಗಃ

### ವಿಭೀಷಣಾದ್ಯಾದೇಶಃ

ತೇ ದೂತಾ ರಾಮವಾಕ್ಯೇನ ಚೋದಿತಾ ಲಘುವಿಕ್ರಮಾಃ ।
ಪ್ರಜಗ್ಮುರ್ಮಧುರಾಂ ಶೀಘ್ರಂ ಚಕ್ರುರ್ವಾಸಂ ಚ ನಾಧ್ವನಿ ॥ ೧

ತೇ ತು ತ್ರಿಭಿರಹೋರಾತ್ರೈಃ ಸಂಪ್ರಾಪ್ಯ ಮಧುರಾಮಥ ।
ಶತ್ರುಘ್ನಾಯ ಯಥಾತತ್ತ್ವಮಾಚಖ್ಯುಃ ಸರ್ವಮೇವ ತತ್ ॥ ೨

ಲಕ್ಷ್ಮಣಸ್ಯ ಪರಿತ್ಯಾಗಂ ಪ್ರತಿಜ್ಞಾಂ ರಾಘವಸ್ಯ ಚ ।
ಪುತ್ರಯೋರಭಿಷೇಕಂ ಚ ಪೌರಾನುಗಮನಂ ತಥಾ ॥ ೩

ಕುಶಸ್ಯ ನಗರೀ ರಮ್ಯಾ ವಿಂಧ್ಯಪರ್ವತರೋಧಸಿ ।
ಕುಶಾವತೀತಿ ನಾಮ್ನಾ ಸಾ ಕೃತಾ ರಾಮೇಣ ಧೀಮತಾ ॥ ೪

ಶ್ರಾವಸ್ತೀತಿ ಪುರೀ ರಮ್ಯಾ ಶ್ರಾವಿತಾ ಚ ಲವಸ್ಯ ಚ ।
ಅಯೋಧ್ಯಾಂ ವಿಜನಾಂ ಕೃತ್ವಾ ರಾಘವೋ ಭರತಸ್ತಥಾ ॥ ೫

### ಸರ್ಗ ೧೦೮

ಶತ್ರುಘ್ನನು ಅಯೋಧ್ಯೆಗೆ ಬರುವುದು ಸುಗ್ರೀವ ವಿಭೀಷಣಾದಿಗಳ ಆಗಮನ
ಹನುಮಂತ ವಿಭೀಷಣ ಮೊದಲಾದವರಿಗೆ ಶ್ರೀರಾಮನ ಹಿತೋಕ್ತಿ

ಶ್ರೀರಾಮನಿಂದ ಪ್ರೇಷಿತರಾದ ದೂತರು ದಾರಿಯಲ್ಲೆಲ್ಲೂ ನಿಲ್ಲದೆ ತ್ವರಿತ ಗತಿಯಿಂದ ಮಧುರೆಗೆ ಪ್ರಯಾಣಮಾಡಿದರು ಮೂರು ಅಹೋರಾತ್ರಗಳಲ್ಲಿ ಅವರು ಮಧುರೆಯನ್ನು ನೇರಿ ಶತ್ರುಘ್ನನಿಗೆ ನಡೆದ ವಿಷಯವೆಲ್ಲವನ್ನೂ ತಿಳಿಸಿದರು (೧-೨). ಲಕ್ಷ್ಮಣನ ಪರಿತ್ಯಾಗ, ಶ್ರೀರಾಮನ ದೃಢನಿಶ್ಚಯ, ಪುತ್ರರಾದ ಕುಶಲವರ ಪಟ್ಟಾಭಿಷೇಕ, ಪೌರರು ಶ್ರೀರಾಮನನ್ನು ಹಿಂಬಾಲಿಸಿ ಹೋಗಬೇಕೆಂದು ನಿರ್ಣಯಿಸಿರುವುದು, ವಿಂಧ್ಯಪರ್ವತದ ತಪ್ಪಲಲ್ಲಿ ಕುಶಾವತಿಯೆಂಬ ನಗರವನ್ನು ಕುಶನಿಗಾಗಿ ಗೊತ್ತುಮಾಡಿರುವುದು, ಶ್ರಾವಸ್ತಿಯೆಂಬ ನಗರವನ್ನು ಲವನಿಗಾಗಿ ಗೊತ್ತುಮಾಡಿರುವುದು, ಶ್ರೀರಾಮನೂ ಭರತನೂ ಅಯೋಧ್ಯೆಯನ್ನು ಜನಶೂನ್ಯವಾಗಿ ಮಾಡಿ

ಸ್ವರ್ಗಸ್ಯ ಗಮನೋದ್ಯೋಗಂ ಕೃತವಂತೌ ಮಹಾರಥೌ ।
ಏವಂ ಸರ್ವಂ ನಿವೇದ್ಯಾಶು ಶತ್ರುಘ್ನಾಯ ಮಹಾತ್ಮನೇ ॥ ೬

ವಿರೇಮುಸ್ತೇ ತತೋ ದೂತಾಸ್ತ್ವರ ರಾಜೇತಿ ಚಾಬ್ರುವನ್ ।
ತಚ್ಛ್ರುತ್ವಾ ಘೋರಸಂಕಾಶಂ ಕುಲಕ್ಷಯಮುಪಸ್ಥಿತಮ್ ॥ ೭

ಪ್ರಕೃತೀಸ್ತು ಸಮಾನೀಯ ಕಾಂಚನಂ ಚ ಪುರೋಧಸಮ್ ।
ತೇಷಾಂ ಸರ್ವಂ ಯಥಾವೃತ್ತಮಬ್ರವೀದ್ರಘುನಂದನಃ ॥ ೮

ಆತ್ಮನಶ್ಚ ವಿಪರ್ಯಾಸಂ ಭವಿಷ್ಯಂ ಭ್ರಾತೃಭಿಃ ಸಹ ।
ತತಃ ಪುತ್ರದ್ವಯಂ ವೀರಃ ಸೋಽಭ್ಯಷಿಂಚನ್ನರಾಧಿಪಃ ॥ ೯

ಸುಬಾಹುರ್ಮಧುರಾಂ ಲೇಭೇ ಶತ್ರುಘಾತೀ ಚ ವೈದಿಶಮ್ ।
ದ್ವಿಧಾ ಕೃತ್ವಾ ತು ತಾಂ ಸೇನಾಂ ಮಾಧುರೀಂ ಪುತ್ರಯೋರ್ದ್ವಯೋಃ

ಧನಂ ಚ ಯುಕ್ತಂ ಕೃತ್ವಾ ವೈ ಸ್ಥಾಪಯಾಮಾಸ ಪಾರ್ಥಿವಃ ।
ಸುಬಾಹುಂ ಮಧುರಾಯಾಂ ಚ ವೈದಿಶೇ ಶತ್ರುಘಾತಿನಮ್ ॥ ೧೧

---

ಸ್ವರ್ಗಕ್ಕೆ ಮಹಾಪ್ರಸ್ಥಾನವನ್ನು ಬೆಳೆಸಲು ಉದ್ಯೋಗಿಸಿರುವುದು—ಇವೆಲ್ಲವನ್ನೂ ಶತ್ರುಘ್ನನಿಗೆ ನಿವೇದಿಸಿದರು (೩-೬) ಅನಂತರ "ಮಹಾರಾಜ, ನೀನು ತ್ವರೆಮಾಡಬೇಕು" ಎಂದರು ದೂತರ ನುಡಿಯನ್ನು ಕೇಳಿ ಶತ್ರುಘ್ನನು ಘೋರವಾದ ಕುಲಕ್ಷಯವು ಉಪಸ್ಥಿತವಾಯಿತೆಂದರಿತು, ಮಂತ್ರಿಗಳನ್ನೂ ಪ್ರಜೆಗಳನ್ನೂ ಕಾಂಚನ ಎಂಬ ಹೆಸರಿನ ಪುರೋಹಿತರನ್ನೂ ಬರಮಾಡಿ, ಅವರಿಗೆ ನಡೆದ ಸಂಗತಿಯೆಲ್ಲವನ್ನೂ ತಿಳಿಸಿದನು (೭-೮) ತನ್ನ ಸೋದರರೊಡನೆ ತನಗೆ ದೇಹವಿಯೋಗವು ಸಂಭವಿಸುವುದೆಂದೂ ಹೇಳಿದನು ಅನಂತರ ತನ್ನ ಇಬ್ಬರು ಮಕ್ಕಳಿಗೆ ಪಟ್ಟಾಭಿಷೇಕ ಮಾಡಿದನು. ಅವರಲ್ಲಿ ಸುಬಾಹುವಿಗೆ ಮಧುರೆಯೂ ಶತ್ರುಘಾತಿಗೆ ವೈದಿಶನಗರವೂ ಲಭಿಸಿದವು (೯-೧೦) ಮಧುರೆಯಲ್ಲಿದ್ದ ಸೇನೆಯನ್ನೂ ಧನವನ್ನೂ ವಿಭಜಿಸಿ ಇಬ್ಬರು ಮಕ್ಕಳಿಗೂ ಹಂಚಿಕೊಟ್ಟು, ಸುಬಾಹುವನ್ನು ಮಧುರೆಯಲ್ಲಿಯೂ ಶತ್ರುಘಾತಿಯನ್ನು ವೈದಿಶಪುರದಲ್ಲಿಯೂ ಸ್ಥಾಪಿಸಿದನು (೧೧)

ಯಯೌ ಸ್ತ್ವಾಪ್ಯ ತದಾಯೋಧ್ಯಾಂ ರಥೇನೈಕೇನ ರಾಘವಃ ।
ಸ ದದರ್ಶ ಮಹಾತ್ಮಾನಂ ಜ್ವಲಂತಮಿವ ಪಾವಕಮ್ ॥ ೧೨
ಸೂಕ್ಷ್ಮಕ್ಷೌಮಾಂಬರಧರಂ ಮುನಿಭಿಃ ಸಾರ್ಧಮಕ್ಷಯೈಃ ।
ಸೋಽಭಿವಾದ್ಯ ತತೋ ರಾಮಂ ಪ್ರಾಂಜಲಿಃ ಪ್ರಯತೇಂದ್ರಿಯಃ ॥

ಉವಾಚ ವಾಕ್ಯಂ ಧರ್ಮಜ್ಞಂ ಧರ್ಮಮೇವಾನುಚಿಂತಯನ್ ।
ಕೃತ್ವಾಭಿಷೇಕಂ ಸುತಯೋರ್ಯುಕ್ತಂ ರಾಘವನಂದನ ॥ ೧೪
ತವಾನುಗಮನೇ ರಾಜನ್ ವಿದ್ಧಿ ಮಾಂ ಕೃತನಿಶ್ಚಯಮ್ ।
ನ ಚಾನ್ಯದಪಿ ವಕ್ತವ್ಯಮತೋ ವೀರ ನ ಶಾಸನಮ್ ॥ ೧೫
ವಿಲೋಕ್ಯಮಾನಮಿಚ್ಛಾಮಿ ತ್ವದ್ವಿಧೇನ ವಿಶೇಷತಃ ।
ತಸ್ಯ ತಾಂ ಬುದ್ಧಿಮಕ್ಲೀಬಾಂ ವಿಜ್ಞಾಯ ರಘುನಂದನಃ ॥ ೧೬
ಬಾಢಮಿತ್ಯೇವ ಶತ್ರುಘ್ನಂ ರಾಮೋ ವಾಕ್ಯಮುವಾಚ ಹ ।
ತಸ್ಯ ವಾಕ್ಯಸ್ಯ ವಾಕ್ಯಾಂತೇ ವಾನರಾಃ ಕಾಮರೂಪಿಣಃ ॥ ೧೭
ಋಕ್ಷರಾಕ್ಷಸಸಂಘಾಶ್ಚ ಸಮಾಪೇತುರನೇಕಶಃ ।
ಸುಗ್ರೀವಂ ತೇ ಪುರಸ್ಕೃತ್ಯ ಸರ್ವ ಏವ ಸಮಾಗತಾಃ ॥ ೧೮

---

ಆಮೇಲೆ ಒಂದು ರಥವನ್ನೇರಿ ಅಯೋಧ್ಯೆಗೆ ಬಂದು, ಅಗ್ನಿಯಂತೆ ತೇಜೋಮೂರ್ತಿಯಾಗಿ ತೆಳುವಾದ ನಾರುಬಟ್ಟೆಯನ್ನುಟ್ಟು, ಅಸಂಖ್ಯರಾದ ಮುನಿಜನರೊಡನೆ ಮಂಡಿಸಿದ್ದ ಮಹಾತ್ಮನಾದ ಶ್ರೀರಾಮನನ್ನು ಸಂದರ್ಶಿಸಿ ಅಭಿವಾದನೆ ಮಾಡಿದನು (೧೨-೧೩) ಮನಸ್ಸಿನ ಶೋಕೋದ್ವೇಗವನ್ನು ನಿಗ್ರಹಿಸಿ ಕೈಮುಗಿದುಕೊಂಡು ಧರ್ಮವನ್ನೇ ಚಿಂತಿಸುತ್ತ ಶ್ರೀರಾಮನನ್ನು ಕುರಿತು "ರಘುನಂದನ, ನನ್ನ ಮಕ್ಕಳಿಗೆ ಅನುರೂಪವಾಗಿ ಪಟ್ಟಾಭಿಷೇಕವನ್ನು ಮಾಡಿ ಬಂದಿದ್ದೇನೆ. ನಿನ್ನನ್ನು ಹಿಂಬಾಲಿಸಲು ನಿಶ್ಚಯಿಸಿದ್ದೇನೆಂದು ತಿಳಿ ಪ್ರತಿಯಾಗಿ ಒಂದು ಮಾತನ್ನೂ ನೀನು ಹೇಳಬಾರದು ಇನ್ನೊಂದು ಆಜ್ಞೆಯನ್ನು ಕೊಡಬಾರದು (೧೪-೧೫) ಮುಖ್ಯವಾಗಿ ಅನುಗ್ರಹ ಸಮರ್ಥನಾದ ನೀನು ನನ್ನನ್ನು ಅನುಗ್ರಹಿಸಬೇಕೆಂಬುದೊಂದೇ ನನ್ನ ಬಯಕೆ" ಎಂದು ನಿವೇದಿಸಿದನು ಶತ್ರುಘ್ನನ ದೃಢನಿಶ್ಚಯವನ್ನು ಕಂಡು ರಾಘವನು "ಆಗಲಿ" ಎಂದನು ಅಷ್ಟರಲ್ಲಿ ಕಾಮರೂಪಿಗಳಾದ ವಾನರರೂ ಭಲ್ಲೂಕರೂ

ತೇ ರಾಮಂ ದ್ರಷ್ಟುಮನಸಃ ಸ್ವರ್ಗಾಯಾಭಿಮುಖಂ ಸ್ಥಿತಮ್ ।
ದೇವಪುತ್ರಾ ಋಷಿಸುತಾ ಗಂಧರ್ವಾಣಾಂ ಸುತಾಸ್ತಥಾ ॥ ೧೯
ರಾಮಕ್ಷಯಂ ವಿದಿತ್ವಾ ತೇ ಸರ್ವ ಏವ ಸಮಾಗತಾಃ ।
ತೇ ರಾಮಮಭಿವಾದ್ಯೋಚುಃ ಸರ್ವೇ ವಾನರರಾಕ್ಷಸಾಃ ॥ ೨೦
ತವಾನುಗಮನೇ ರಾಜನ್ ಸಂಪ್ರಾಪ್ತಾಃ ಕೃತನಿಶ್ಚಯಾಃ ।
ಯದಿ ರಾಮ ವಿನಾಸ್ಮಾಭಿರ್ಗಚ್ಛೇಸ್ತ್ವಂ ಪುರುಷೋತ್ತಮ ॥ ೨೧
ಯಮದಂಡಮಿವೋದ್ಯಮ್ಯ ತ್ವಯಾ ಸ್ಮ ವಿನಿಪಾತಿತಾಃ ।
ತೈರೇವಮುಕ್ತಃ ಕಾಕುತ್ಸ್ಥೋ ಬಾಢಮಿತ್ಯಬ್ರವೀತ್ ಸ್ಮಯನ್ ॥
ಏತಸ್ಮಿನ್ನಂತರೇ ರಾಮಂ ಸುಗ್ರೀವೋಽಪಿ ಮಹಾಬಲಃ ।
ಪ್ರಣಮ್ಯ ವಿಧಿವದ್ವೀರಂ ವಿಜ್ಞಾಪಯಿತುಮುದ್ಯತಃ ॥ ೨೩
ಅಭಿಷಿಚ್ಯಾಂಗದಂ ವೀರಮಾಗತೋಽಸ್ಮಿ ನರೇಶ್ವರ ।
ತವಾನುಗಮನೇ ರಾಜನ್ ವಿದ್ಧಿ ಮಾಂ ಕೃತನಿಶ್ಚಯಮ್ ॥ ೨೪
ತಸ್ಯ ತದ್ವಚನಂ ಶ್ರುತ್ವಾ ರಾಮೋ ರಮಯತಾಂ ವರಃ ।
ವಾನರೇಂದ್ರಮಥೋವಾಚ ಮೈತ್ರಂ ತಸ್ಯಾನುಚಿಂತಯನ್ ॥ ೨೫

---

ರಾಕ್ಷಸರೂ ಸುಗ್ರೀವನೊಡನೆ ಬಂದಿಳಿದರು (೧೬-೧೮) ಶ್ರೀರಾಮನು ಸ್ವರ್ಗಯಾತ್ರೆಗೆ ಅಭಿಮುಖವಾಗಿರುವನೆಂದು ಕೇಳಿ, ಅವನನ್ನು ಸಂದರ್ಶಿಸಬೇಕೆಂದು ಅವರು ಆಗಮಿಸಿದರು ಅವರೆಲ್ಲರೂ ದೇವರ್ಷಿಗಂಧರ್ವರಿಂದ ಜನಿಸಿದವರು (೧೯) ಸಕಲ ವಾನರರಾಕ್ಷಸರೂ ಶ್ರೀರಾಮನಿಗೆ ವಂದಿಸಿ "ಮಹಾರಾಜ, ನಿನ್ನನ್ನು ಹಿಂಬಾಲಿಸಬೇಕೆಂದು ನಾವು ನಿರ್ಣಯಿಸಿಕೊಂಡಿದ್ದೇವೆ ಹೇ ಪುರುಷೋತ್ತಮ, ನಮ್ಮನ್ನು ಪರಿತ್ಯಜಿಸಿ ನೀನು ಹೋಗುವುದಾದರೆ, ಯಮದಂಡವನ್ನೆತ್ತಿ ನಮ್ಮನ್ನು ಬಡಿದು ಬೀಳಿಸಿದಂತೆ ಎಂದು ತಿಳಿಯುತ್ತೇವೆ!" ಎಂದರು ಕಾಕುತ್ಸ್ಥನು ನಗುತ್ತ "ನನ್ನೊಡನೆ ಬರಬಹುದು" ಎಂದನು (೨೧-೨೨). ಸುಗ್ರೀವನು ವಿಧಿವತ್ತಾಗಿ ರಾಘವನಿಗೆ ಪ್ರಣಾಮವನ್ನರ್ಪಿಸಿ "ನರೇಶ್ವರ, ವೀರನಾದ ಅಂಗದನಿಗೆ ರಾಜ್ಯದಲ್ಲಿ ಅಭಿಷೇಕಮಾಡಿ ಬಂದಿದ್ದೇನೆ ನಿನ್ನ ಹಿಂದೆ ಬರಲು ನಿಶ್ಚಯಿಸಿದ್ದೇನೆಂದು ತಿಳಿ" ಎಂದು ವಿಜ್ಞಾಪಿಸಿದನು (೨೩-೨೪) ರಾಘವನು ಆ ವಾನರೇಂದ್ರನ

ಸಖೇ ಶೃಣುಷ್ವ ಸುಗ್ರೀವ ನ ತ್ವಯಾಹಂ ವಿನಾಕೃತಃ ।
ಗಚ್ಛೇಯಂ ದೇವಲೋಕಂ ವಾ ಪರಮಂ ವಾ ಪದಂ ಮಹತ್ ॥ ೨೬

ವಿಭೀಷಣಮಥೋವಾಚ ರಾಕ್ಷಸೇಂದ್ರಂ ಮಹಾಯಶಾಃ ।
ಯಾವತ್ ಪ್ರಜಾ ಧರಿಷ್ಯಂತಿ ತಾವತ್ತ್ವಂ ವೈ ವಿಭೀಷಣ ॥ ೨೭

ರಾಕ್ಷಸೇಂದ್ರ ಮಹಾವೀರ್ಯ ಲಂಕಾಸ್ಥಃ ಸ್ವಂ ಧರಿಷ್ಯಸಿ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ॥ ೨೮

ಯಾವಚ್ಚ ಮತ್ಕಥಾ ಲೋಕೇ ತಾವದ್ರಾಜ್ಯಂ ತವಾಸ್ತ್ವಿಹ ।
ಶಾಸಿತಸ್ತ್ವಂ ಸಖಿತ್ವೇನ ಕಾರ್ಯಂ ತೇ ಮಮ ಶಾಸನಮ್ ॥ ೨೯

ಪ್ರಜಾಃ ಸಂರಕ್ಷ ಧರ್ಮೇಣ ನೋತ್ತರಂ ವಕ್ತುಮರ್ಹಸಿ ।
ಕಿಂಚಾನ್ಯದ್ವಕ್ತುಮಿಚ್ಛಾಮಿ ರಾಕ್ಷಸೇಂದ್ರ ಮಹಾಮತೇ ॥ ೩೦

ಆರಾಧಯ ಜಗನ್ನಾಥಮಿಕ್ಷ್ವಾಕುಕುಲದೈವತಮ್ ।
ಆರಾಧನೀಯಮನಿಶಂ ಸರ್ವೈರ್ದೇವೈಃ ಸವಾಸವೈಃ ॥ ೩೧

---

ಸ್ನೇಹಾತಿಶಯವನ್ನು ಸ್ಮರಿಸಿಕೊಳ್ಳುತ್ತ "ಮಿತ್ರ-ಸುಗ್ರೀವ, ಕೇಳು ನಿನ್ನನ್ನಗಲಿ ದೇವಲೋಕಕ್ಕೂ ಹೋಗಲಾರೆ ಪರಮ ಪದವಿಯನ್ನೂ ಸೇರಲಾರೆ" ಎಂದು ತಿಳಿಸಿದನು (೨೫-೨೬) ಅನಂತರ ರಾಕ್ಷಸೇಂದ್ರನಾದ ವಿಭೀಷಣನನ್ನು ನೋಡಿ "ವಿಭೀಷಣ, ಜನರು ಈ ಲೋಕದಲ್ಲಿರುವವರೆಗೂ ನೀನು ಲಂಕೆಯಲ್ಲಿ ದೇಹವನ್ನು ಧರಿಸಿ ಬದುಕಿರುವೆ ಚಂದ್ರಸೂರ್ಯರೂ ಮೇದಿನಿಯೂ ಇರುವವರೆಗೆ, ನನ್ನ ಕಥೆಯು ಲೋಕದಲ್ಲಿ ಪ್ರಚುರವಾಗಿರುವವರೆಗೆ, ಲಂಕೆಯ ಒಡೆತನವು ನಿನಗಿರಲಿ!* ನನ್ನ ಮಿತ್ರನೆಂದು ಬಗೆದು ಹೀಗೆ ತಿಳಿಸಿದ್ದೇನೆ ನನ್ನ ಆಜ್ಞೆಯನ್ನು ನೀನು ನಡೆಸಬೇಕು (೨೭-೨೯) ಧರ್ಮದಿಂದ ಪ್ರಜೆಗಳನ್ನು ಪಾಲಿಸುತ್ತಿರು ಪ್ರತಿಯಾಗಿ ಉತ್ತರವನ್ನು ಹೇಳಬೇಡ ರಾಕ್ಷಸೇಂದ್ರ, ಇನ್ನೊಂದು ವಿಷಯವನ್ನು ನಿನಗೆ ತಿಳಿಸಬೇಕಾಗಿದೆ. ನೀನು ಪ್ರಾಜ್ಞನಾಗಿದ್ದೀಯೆ (೩೦) ಏನೆಂದರೆ, ಇಕ್ಷ್ವಾಕು ಕುಲದೇವತೆಯೂ

---

* ವಿಭೀಷಣನು ಚಿರಂಜೀವಿಯಾಗಲೆಂದು ಬ್ರಹ್ಮನು ಕೊಟ್ಟ ವರವನ್ನಿಲ್ಲಿ ಸ್ಮರಿಸಿಕೊಳ್ಳಬಹುದು

ತಥೇತಿ ಪ್ರತಿಜಗ್ರಾಹ ರಾಮವಾಕ್ಯಂ ವಿಭೀಷಣಃ ।
ರಾಜಾ ರಾಕ್ಷಸಮುಖ್ಯಾನಾಂ ರಾಘವಾಜ್ಞಾಮನುಸ್ಮರನ್ ॥ ೩೨

ತಮೇವಮುಕ್ತ್ವಾ ಕಾಕುತ್ಸ್ಥೋ ಹನೂಮಂತಮಥಾಬ್ರವೀತ್ ।
ಜೀವಿತೇ ಕೃತಬುದ್ಧಿಸ್ತ್ವಂ ಮಾ ಪ್ರತಿಜ್ಞಾಂ ವಿಲೋಪಯ ॥ ೩೩

ಮತ್ಕಥಾಃ ಪ್ರಚರಿಷ್ಯಂತಿ ಯಾವಲ್ಲೋಕೇ ಹರೀಶ್ವರ ।
ತಾವದ್ರಮಸ್ವ ಸುಪ್ರೀತೋ ಮದ್ವಾಕ್ಯಮನುಪಾಲಯನ್ ॥ ೩೪

ಏವಮುಕ್ತಸ್ತು ಹನುಮಾನ್ ರಾಘವೇಣ ಮಹಾತ್ಮನಾ ।
ವಾಕ್ಯಂ ವಿಜ್ಞಾಪಯಾಮಾಸ ಪರಂ ಹರ್ಷಮವಾಪ್ಯ ಚ ॥ ೩೫

ಯಾವತ್ತವ ಕಥಾ ಲೋಕೇ ವಿಚರಿಷ್ಯತಿ ಪಾವನೀ ।
ತಾವತ್ ಸ್ಥಾಸ್ಯಾಮಿ ಮೇದಿನ್ಯಾಂ ತವಾಜ್ಞಾಮನುಪಾಲಯನ್ ॥

---

ಜಗನ್ನಾಥನೂ ಆದ ಶ್ರೀರಂಗನಾಥನನ್ನು * ನೀನು ಆರಾಧಿಸುತ್ತಿರು ಇಂದ್ರಾದಿ ಸಮಸ್ತದೇವತೆಗಳಿಗೂ ಆತನು ಪೂಜನೀಯನಾಗಿದ್ದಾನೆ" ಎಂದು ಹೇಳಿದನು (೩೧) ವಿಭೀಷಣನು "ತಥಾಸ್ತು" ಎಂದು ಶ್ರೀರಾಮನ ಆಜ್ಞೆಯನ್ನು ಪರಿಗ್ರಹಿಸಿದನು ಆಮೇಲೆ ಕಾಕುತ್ಸ್ಥನು ಹನುಮಂತನ ಕಡೆಗೆ ತಿರುಗಿ "ಹನುಮಂತ, ನೀನು ಜೀವಿಸಲು ಬಯಸಿದ್ದೀಯ ಎಂಬುದು ನೆನಪಿರಲಿ! ಪ್ರತಿಜ್ಞೆಯನ್ನು ಅಳಿಸಬೇಡ ವಾನರೋತ್ತಮ, ನನ್ನ ಕಥೆಗಳು ಲೋಕದಲ್ಲಿ ಎಲ್ಲಿಯವರಗೆ ಪ್ರಚಾರದಲ್ಲಿರುತ್ತವೆಯೋ ಅಲ್ಲಿಯವರೆಗೆ ನನ್ನ ವಾಕ್ಯವನ್ನು ಸ್ಮರಿಸಿಕೊಳ್ಳುತ್ತ ಸಂತೃಪ್ತನಾಗಿ ಸಂತೋಷದಿಂದಿರು" ಎಂದನು (೩೨-೩೪). ಮಹಾತ್ಮನಾದ ರಾಘವನ ನುಡಿಯನ್ನಾಲಿಸಿ ಹನುಮಂತನು ಅತ್ಯಾನಂದದಿಂದ "ಶ್ರೀರಾಮ, ಪಾವನವಾದ ನಿನ್ನ ಕಥೆ ಲೋಕದಲ್ಲಿ ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೆ ನಿನ್ನ ಆಜ್ಞೆಯನ್ನು ಪಾಲಿಸುತ್ತ ಜೀವಿಸಿರುವೆನು'

* ಶ್ರೀರಂಗನಾಥಸ್ವಾಮಿಯ ವಿಗ್ರಹವನ್ನು ವಿಭೀಷಣನಿಗೆ ಶ್ರೀರಾಮನು ಕೊಟ್ಟನೆಂದು ಪದ್ಮಪುರಾಣದಲ್ಲಿ ಹೇಳಿದೆ ರಾಮಾಯಣದಲ್ಲಿ ಈ ಭಾಗವು ಪ್ರಕ್ಷಿಪ್ತವೆಂದು ಕೆಲವರು ಹೇಳುತ್ತಾರೆ

ಜಾಂಬವಂತಂ ತಥೋಕ್ತ್ವಾ ತು ವೃದ್ಧಂ ಬ್ರಹ್ಮಸುತಂ ತಥಾ ।
ಮೈಂದಂ ಚ ದ್ವಿವಿದಂ ಚೈವ ಪಂಚ ಜಾಂಬವತಾ ಸಹ ॥ ೩೭

ಯಾವತ್ ಕಲಿಶ್ಚ ಸಂಪ್ರಾಪ್ತಸ್ತಾವಜ್ಜೀವತ ಸರ್ವದಾ ।
ತಾನೇವಮುಕ್ತ್ವಾ ಕಾಕುತ್ಸ್ಥಃ ಸರ್ವಾಂಸ್ತಾನೃಕ್ಷವಾನರಾನ್ ॥ ೩೮

ಉವಾಚ ಬಾಢಂ ಗಚ್ಛಧ್ವಂ ಮಯಾ ಸಾರ್ಧಂ ಯಥೇಪ್ಸಿತಮ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಅಷ್ಟೋತ್ತರಶತತಮಃ ಸರ್ಗಃ



ಎಂದು ವಿಜ್ಞಾಪಿಸಿದನು (೩೫-೩೬) ಅನಂತರ ವೃದ್ಧನೂ ಬ್ರಹ್ಮಸುತನೂ ಆದ ಜಾಂಬವಂತನಿಗೂ ಮೈಂದ-ದ್ವಿವಿದರಿಗೂ ಅದೇ ಮಾತನ್ನು ತಿಳಿಸಿ, ಒಟ್ಟು ಐವರಿಗೆ* "ಕಲಿಯುಗವು ಬಂದು ಪ್ರಳಯವಾಗುವ ಪರ್ಯಂತ ನೀವು ಜೀವಿಸಿರಿ" ಎಂದು ಹೇಳಿ, ಉಳಿದ ಭಲ್ಲೂಕ ವಾನರಾದಿಗಳಿಗೆ "ಇಷ್ಟಾನುಸಾರವಾಗಿ ನನ್ನೊಡನೆ ನೀವು ಬರಬಹುದು" ಎಂದು ಸೂಚಿಸಿದನು (೩೭-೩೮)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರೆಂಟನೆಯ ಸರ್ಗ



* ಐವರು = ಹನುಮಂತ, ವಿಭೀಷಣ, ಜಾಂಬವಂತ, ಮೈಂದ ಮತ್ತು ದ್ವಿವಿದ ಮೈಂದ ದ್ವಿವಿದರು ಅಶ್ವಿನೀದೇವತೆಗಳ ಅನುಗ್ರಹದಿಂದ ಅಮೃತವನ್ನು ಕುಡಿದಿದ್ದರು ಇತರರು ಬ್ರಹ್ಮನಿಂದ ಚಿರಂಜೀವಿ ಪದವಿಯನ್ನು ಪಡೆದಿದ್ದರು.

## ನವೋತ್ತರಶತತಮಃ ಸರ್ಗಃ

### ಶ್ರೀರಾಮಮಹಾಪ್ರಸ್ಥಾನಮ್

ಪ್ರಭಾತಾಯಾಂ ತು ಶರ್ವರ್ಯಾಂ ಪೃಥುವಕ್ಷಾ ಮಹಾಯಶಾಃ ।
ರಾಮಃ ಕಮಲಪತ್ರಾಕ್ಷಃ ಪುರೋಧಸಮಥಾಬ್ರವೀತ್ ॥ ೧

ಅಗ್ನಿಹೋತ್ರಂ ವ್ರಜತ್ವಗ್ರೇ ದೀಪ್ಯಮಾನಂ ಸಹದ್ವಿಜೈಃ ।
ವಾಜಪೇಯಾತಪತ್ರಂ ಚ ಶೋಭಮಾನಂ ಮಹಾಪಥೇ ॥ ೨

ತತೋ ವಸಿಷ್ಠಸ್ತೇಜಸ್ವೀ ಸರ್ವಂ ನಿರವಶೇಷತಃ ।
ಚಕಾರ ವಿಧಿವದ್ಧರ್ಮಂ ಮಾಹಾಪ್ರಾಸ್ಥಾನಿಕಂ ವಿಧಿಮ್ ॥ ೩

ತತಃ ಸೂಕ್ಷ್ಮಾಂಬರಧರೋ ಬ್ರಹ್ಮಮಾವರ್ತಯನ್ ಪರಮ್ ।
ಕುಶಾನ್ ಗೃಹೀತ್ವಾ ಪಾಣಿಭ್ಯಾಂ ಪ್ರಸಜ್ಯ ಪ್ರಯಯಾವಥ ॥ ೪

### ಸರ್ಗ ೧೦೯

#### ಮಹಾಪ್ರಸ್ಥಾನ

ರಾತ್ರಿ ಕಳೆದು ಪ್ರಭಾತವಾಗಲು ವಿಶಾಲವಕ್ಷನೂ ಕಮಲದಳನೇತ್ರನೂ ಆದ ಶ್ರೀರಾಮನು ಪುರೋಹಿತರಾದ ವಸಿಷ್ಠರನ್ನು ಕುರಿತು "ದೇದೀಪ್ಯಮಾನವಾದ ಅಗ್ನಿಹೋತ್ರವೂ ವಾಜಪೇಯಚ್ಛತ್ರವೂ ಬ್ರಾಹ್ಮಣರೊಡನೆ ರಾಜವೀಧಿಯಲ್ಲಿ ಮುಂದೆ ನಾಗಲಿ" ಎಂದನು (೧-೨) ಅನಂತರ ವಸಿಷ್ಠರು ಮಹಾಪ್ರಸ್ಥಾನಕ್ಕೆ ವಿಹಿತವಾದ ಸಕಲ ಧಾರ್ಮಿಕ ಕೃತ್ಯಗಳನ್ನು ನಾಂಗವಾಗಿ ನಡೆಸಿದರು ಶ್ರೀರಾಮನು ಸೂಕ್ಷ್ಮಾಂಬರಧಾರಿಯಾಗಿ ಕೈಯಲ್ಲಿ ದರ್ಭೆಗಳನ್ನು ಹಿಡಿದು ಕೇವಲ ಓಂಕಾರವನ್ನು * ಜಪಿಸುತ್ತ ಅರಮನೆಯಿಂದ ನಿರ್ಗಮಿಸಿ

---

* ಮೂಲದಲ್ಲಿ 'ಬ್ರಹ್ಮಮಾವರ್ತಯನ್ ಪರಮ್' ಎಂದಿದೆ ಪರಂ=ಕೇವಲ, ಬ್ರಹ್ಮ=ಓಂಕಾರ 'ಓಮಿತ್ಯೇಕಾಕ್ಷರಂ ಬ್ರಹ್ಮ' ಎಂಬ ವಚನವು ಇದಕ್ಕೆ ಆಧಾರ ವ್ಯಾಖ್ಯಾನಕಾರರು ಪರಂ ಬ್ರಹ್ಮ=ಒಂದು ಮಹಾಮಂತ್ರ, ಉಪನಿಷತ್ತು, ದೇವಮಂತ್ರ-ಇತ್ಯಾದಿಯಾಗಿ ಅರ್ಥಮಾಡಿದ್ದಾರೆ

ಅವ್ಯಾಹರನ್ ಕ್ವಚಿತ್ಕಿಂಚಿನ್ನಿಶ್ಚೇಷ್ಟೋ ನಿಃಸುಖಃ ಪಥಿ ।
ನಿರ್ಜಗಾಮ ಗೃಹಾತ್ತಸ್ಮಾದ್ದೀಪ್ಯಮಾನ ಇವಾಂಶುಮಾನ್ ॥ ೫

ರಾಮಸ್ಯ ದಕ್ಷಿಣೇ ಪಾರ್ಶ್ವೇ ಸಪದ್ಮಾ ಶ್ರೀರುಪಶ್ರಿತಾ ।
ಸವ್ಯೇ ತು ಹ್ರೀರ್ಮಹಾದೇವೀ ವ್ಯವಸಾಯಸ್ತಥಾಗ್ರತಃ ॥ ೬

ಶರಾ ನಾನಾವಿಧಾಶ್ಚಾಪಿ ಧನುರಾಯತಮುತ್ತಮಮ್ ।
ತಥಾಯುಧಾನಿ ತೇ ಸರ್ವೇ ಯಯುಃ ಪುರುಷವಿಗ್ರಹಾಃ ॥ ೭

ವೇದಾ ಬ್ರಾಹ್ಮಣರೂಪೇಣ ಗಾಯತ್ರೀ ಸರ್ವರಕ್ಷಿಣೀ ।
ಓಂಕಾರೋಽಥ ವಷಟ್ಕಾರಃ ಸರ್ವೇ ರಾಮಮನುವ್ರತಾಃ ॥ ೮

ಋಷಯಶ್ಚ ಮಹಾತ್ಮಾನಃ ಸರ್ವ ಏವ ಮಹೀಸುರಾಃ ।
ಅನ್ವಗಚ್ಛನ್ ಮಹಾತ್ಮಾನಂ ಸ್ವರ್ಗದ್ವಾರಮಪಾವೃತಮ್ ॥ ೯

ತಂ ಯಾಂತಮನುಗಚ್ಛಂತಿ ಹ್ಯಂತಃಪುರಚರಾಃ ಸ್ತ್ರಿಯಃ ।
ಸವೃದ್ಧಬಾಲದಾಸೀಕಾಃ ಸವರ್ಷವರಕಿಂಕರಾಃ ॥ ೧೦

---

ದನು (೩-೪) ಎಲ್ಲಿಯೂ ಒಂದು ಮಾತನ್ನೂ ಆಡದೆ ಯಾವ ಇಂದ್ರಿಯ ವೃತ್ತಿಗೂ ಒಳಗಾಗದೆ ಸುಖನಿರಪೇಕ್ಷನಾಗಿ, ಪ್ರಜ್ವಲಿಸುವ ಭಾಸ್ಕರನಂತೆ ಬೆಳಗುತ್ತ ದಾರಿಹಿಡಿದು ಹೊರಟನು (೫) ಶ್ರೀರಾಮನ ಬಲಗಡೆಯಲ್ಲಿ ಶ್ರೀದೇವಿಯು ಪದ್ಮಹಸ್ತಳಾಗಿ ಉಪಸ್ಥಿತಳಾದಳು ಎಡಗಡೆಯಲ್ಲಿ ಹ್ರೀದೇವಿಯು ಜೊತೆಗೂಡಿದಳು ಎದುರಿಗೆ ವ್ಯವಸಾಯಶಕ್ತಿಯೂ ನಾನಾವಿಧ ಶರಗಳೂ ವಿಶಾಲವಾದ ಧನುಸ್ಸೂ ಇತರ ಆಯುಧಗಳೂ ಮೂರ್ತಿಮತ್ತಾಗಿ ನಡೆದವು (೬-೭) ವೇದಗಳು, ಸರ್ವರಕ್ಷಿಣಿಯಾದ ಗಾಯತ್ರಿ, ಓಂಕಾರ, ವಷಟ್ಕಾರ—ಇವೆಲ್ಲವೂ ಬ್ರಾಹ್ಮಣರೂಪದಿಂದ ಶ್ರೀರಾಮನನ್ನು ಹಿಂಬಾಲಿಸಿದವು ಮಹಾತ್ಮರಾದ ಋಷಿಗಳೂ ಸಕಲ ವಿಪ್ರರೂ ಆ ಮಹಾತ್ಮನ ಹಿಂದೆ ನಡೆದರು ಆ ಮಹಾಮಹಿಮನೇ ತೆರೆದಿಟ್ಟ ಸ್ವರ್ಗದ್ವಾರವಾಗಿದ್ದನು (೮-೯) ಮುಂದೆ ಹೋಗುತ್ತಿದ್ದ ಶ್ರೀರಾಮನನ್ನನು ಸರಿಸಿ ಅಂತಃಪುರಸ್ತ್ರೀಯರೂ ಮುದುಕರು ಹುಡುಗರು ದಾಸಿಯರು ನಪುಂಸಕರು—ಮುಂತಾದ ಸೇವಕರೂ ಹಿಂಬಾಲಿಸಿ ನಡೆದರು (೧೦).

ಸಾಂತಃಪುರಶ್ಚ ಭರತಃ ಶತ್ರುಘ್ನಸಹಿತೋ ಯಯೌ ।
ರಾಮಸ್ಯ ಗತಿಮುಪಾಗಮ್ಯ ಸಾಗ್ನಿಹೋತ್ರಮನುವ್ರತಃ ॥ ೧೧

ತೇ ಚ ಸರ್ವೇ ಮಹಾತ್ಮಾನಃ ಸಾಗ್ನಿಹೋತ್ರಾಃ ಸಮಾಗತಾಃ ।
ಸಪುತ್ರದಾರಾಃ ಕಾಕುತ್ಸ್ಥಮನುಜಗ್ಮುರ್ಮಹಾಮತಿಮ್ ॥ ೧೨

ಮಂತ್ರಿಣೋ ಭೃತ್ಯವರ್ಗಾಶ್ಚ ಸಪುತ್ರಪಶುಬಾಂಧವಾಃ ।
ಸರ್ವೇ ಸಹಾನುಗಾ ರಾಮಮನ್ವಗಚ್ಛನ್ ಪ್ರಹೃಷ್ಟವತ್ ॥ ೧೩

ತತಃ ಸರ್ವಾಃ ಪ್ರಕೃತಯೋ ಹೃಷ್ಟಪುಷ್ಟಜನಾವೃತಾಃ ।
ಗಚ್ಛಂತಮನ್ವಗಚ್ಛಂಸ್ತಂ ರಾಘವಂ ಗುಣರಂಜಿತಾಃ ॥ ೧೪

ತತಃ ಸಸ್ತ್ರೀಪುಮಾಂಸಸ್ತೇ ಸಪಕ್ಷಿಪಶುವಾಹನಾಃ ।
ರಾಘವಸ್ಯಾನುಗಾಃ ಸರ್ವೇ ಹೃಷ್ಟಾ ವಿಗತಕಲ್ಮಷಾಃ ॥ ೧೫

ಸ್ನಾತಾಃ ಪ್ರಮುದಿತಾಃ ಸರ್ವೇ ಹೃಷ್ಟಾಃ ಪುಷ್ಟಾಶ್ಚ ವಾನರಾಃ ।
ದೃಢಂ ಕಿಲಕಿಲಾಶಬ್ದೈಃ ಸರ್ವಂ ರಾಮಮನುವ್ರತಮ್ ॥ ೧೬

---

ಭರತನು ಶತ್ರುಘ್ನಸಮೇತನಾಗಿ ಅಂತಃಪುರ ಸ್ತ್ರೀಯರೊಡನೆ ಹೊರಟು, ಅಗ್ನಿಹೋತ್ರ ಪುರಸ್ಕೃತನಾಗಿ ಸರ್ವರಿಗೂ ಗತಿಯಾಗಿದ್ದ ಶ್ರೀರಾಮನ ಹಿಂದೆ ನಡೆದನು ಮಹಾತ್ಮರಾದ ಸಕಲ ವಿಪ್ರರೂ ಅಗ್ನಿಹೋತ್ರದೊಡನೆ ಪತ್ನೀ ಪುತ್ರಸಮೇತರಾಗಿ, ಮಹಾಪ್ರಾಜ್ಞನಾದ ಕಾಕುತ್ಸ್ಥನನ್ನು ಹಿಂಬಾಲಿಸಿದರು (೧೧-೧೨) ಮಂತ್ರಿಗಳೂ ಭೃತ್ಯವರ್ಗದವರೂ ತಮ್ಮ ಪುತ್ರಾದಿ ಬಂಧುಗಳನ್ನೂ ಸಾಕಿದ ಪಶುಗಳನ್ನೂ ಕರದುಕೊಂಡು ಸಂತೋಷದಿಂದ ರಾಘವನನ್ನು ಅನುಸರಿಸಿ ಹೋದರು ಆತನ ಗುಣಗಳಿಗೆ ಮುಗ್ಧರಾಗಿ ಹೃಷ್ಟಪುಷ್ಟರಾದ ಸಮಸ್ತ ಪ್ರಜೆಗಳೂ ಅವನ ಹಿಂದೆ ನಾಗಿದರು(೧೩-೧೪) ಹಿಂಬಾಲಿಸಿ ಹೋಗುತ್ತಿದ್ದ ಎಲ್ಲ ಸ್ತ್ರೀಪುರುಷರು ತಾವು ಸಾಕಿದ ಪಶು ಪಕ್ಷಿ ವಾಹನಗಳೊಡನೆ ಬಂದಿದ್ದರು ಎಲ್ಲರೂ ಪವಿತ್ರಾತ್ಮರಾಗಿ ಹರ್ಷದಿಂದ ನಲಿಯುತ್ತ ಹೋದರು (೧೫) ವಾನರರೆಲ್ಲರೂ ಸ್ನಾನಮಾಡಿ ಆನಂದದಿಂದ ಹಿಗ್ಗುತ್ತ ಕಿಲಕಿಲ ಶಬ್ದಮಾಡುತ್ತ ಶ್ರೀರಾಮನನ್ನು ಹಿಂಬಾಲಿಸಿ ನಡೆದರು ಆ ಜನ

ನ ತತ್ರ ಕಶ್ಚಿದ್ದೀನೋ ವಾ ವ್ರೀಡಿತೋ ವಾಪಿ ದುಃಖಿತಃ ।
ಹೃಷ್ಟಂ ಪ್ರಮುದಿತಂ ಸರ್ವಂ ಬಭೂವ ಪರಮಾದ್ಭುತಮ್ ॥ ೧೭

ದ್ರಷ್ಟುಕಾಮೋಽಥ ನಿರ್ಯಾಂತಂ ರಾಮಂ ಜಾನಪದೋ ಜನಃ ।
ಯಃ ಪ್ರಾಪ್ತಃ ಸೋಽಪಿ ದೃಷ್ಟ್ವೈವ ಸ್ವರ್ಗಾಯಾನುಗತೋ ಮುದಾ

ಋಕ್ಷವಾನರರಕ್ಷಾಂಸಿ ಜನಾಶ್ಚ ಪುರವಾಸಿನಃ ।
ಆಗಚ್ಛನ್ ಪರಯಾ ಭಕ್ತ್ಯಾ ಪೃಷ್ಠತಃ ಸುಸಮಾಹಿತಾಃ ॥ ೧೯

ಯಾನಿ ಭೂತಾನಿ ನಗರೇಽಪ್ಯಂತರ್ಧಾನಗತಾನಿ ಚ ।
ರಾಘವಂ ತಾನ್ಯನುಯಯುಃ ಸ್ವರ್ಗಾಯ ಸಮುಪಸ್ಥಿತಮ್ ॥ ೨೦

ಯಾನಿ ಪಶ್ಯಂತಿ ಕಾಕುತ್ಸ್ಥಂ ಸ್ಥಾವರಾಣಿ ಚರಾಣಿ ಚ ।
ಸರ್ವಾಣಿ ರಾಮಗಮನೇ ಹ್ಯನುಜಗ್ಮುರ್ಹಿ ತಾನ್ಯಪಿ ॥ ೨೧

---

ಸಮುದಾಯದಲ್ಲಿ ಒಬ್ಬನೂ ದೀನಚಿತ್ತನಲ್ಲ, ಒಬ್ಬನೂ ತನ್ನ ಕಾರ್ಯಕ್ಕಾಗಿ ಸಂಕೋಚಪಟ್ಟವನಲ್ಲ, ಒಬ್ಬನೂ ದುಃಖಿತನಲ್ಲ ಸರ್ವರೂ ಆನಂದದಿಂದ ನಲಿಯುತ್ತಿದ್ದರು ಆ ದೃಶ್ಯವು ಪರಮಾದ್ಭುತವಾಗಿತ್ತು (೧೬–೧೭). ಶ್ರೀರಾಮನು ಮಹಾಪ್ರಸ್ಥಾನಕ್ಕಾಗಿ ಹೊರಡುವನೆಂದು ಕೇಳಿ, ಆ ವಿಧಾನವನ್ನು ನೋಡುವುದಕ್ಕಾಗಿ ಹೊರಗಡೆಯಿಂದ ರಾಜ್ಯದ ಕೆಲವು ಪ್ರಜೆಗಳು ಬಂದಿದ್ದರು ಅವರೂ ಸಹ ಅದನ್ನು ನೋಡಿದೊಡನೆ ಸ್ವರ್ಗಾಭಿಮುಖರಾಗಿ ಸಂತೋಷದಿಂದ ಆ ಗುಂಪಿನಲ್ಲಿ ನೇರಿಕೊಂಡುಬಿಟ್ಟರು! (೧೮) ಭಲ್ಲೂಕ ವಾನರ ರಾಕ್ಷಸರೂ ಪುರವಾಸಿಗಳಾದ ಜನರೂ ದೃಢವಾದ ಭಕ್ತಿಯಿಂದ ಸಮಾಹಿತರಾಗಿ ಶ್ರೀರಾಮನ ಹಿಂದೆ ಹೋದರು ಅಯೋಧ್ಯಾನಗರದಲ್ಲಿ ಅದೃಶ್ಯರಾಗಿ ನೆಲೆಸಿದ್ದ ಭೂತಗಣಗಳೂ ಸ್ವರ್ಗಕ್ಕೆ ಪ್ರಯಾಣಮಾಡಲಿದ್ದ ರಾಘವನನ್ನು ಹಿಂಬಾಲಿಸಿದವು (೧೯–೨೦). ಕಾಕುತ್ಸ್ಥನನ್ನು ನೋಡಿದ ಸ್ಥಾವರಗಳೂ* ಜಂಗಮಗಳೂ ಸಹ ಅವನ ಹಿಂದೆ ನಡೆದವು ಅಯೋಧ್ಯೆ

* ಶ್ರೀರಾಮನ ಕೃಪಾವಲೋಕನದಿಂದ ಸ್ಥಾವರಗಳಿಗೂ ಜ್ಞಾನಕ್ರಿಯಾಶಕ್ತಿಗಳು ಉದ್ಭವಿಸಿದವೆಂದು ತಿಳಿಯಬೇಕು

ನೋಚ್ಛ್ವಸತ್ತದಯೋಧ್ಯಾಯಾಂ ಸುಸೂಕ್ಷ್ಮಮಪಿ ದೃಶ್ಯತೇ ।
ತಿರ್ಯಗ್ಯೋನಿಗತಾಶ್ಚಾಪಿ ಸರ್ವೇ ರಾಮಮನುವ್ರತಾಃ ॥ ೨೨

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ನವೋತ್ತರಶತತಮಃ ಸರ್ಗಃ



ಯಲ್ಲಿ ಉಸಿರಾಡುವ ಒಂದು ಪ್ರಾಣಿಯೂ ಉಳಿಯಲಿಲ್ಲ ಸಮಸ್ತ ತಿರ್ಯಗ್ಜಂತುಗಳೂ ಸಹ ಶ್ರೀರಾಮನ ಹಿಂದೆ ಸಾಗಿದವು (೨೧-೨೨)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರೊಂಬತ್ತನೆಯ ಸರ್ಗ



# ದಶೋತ್ತರಶತತಮಃ ಸರ್ಗಃ

## ಸಹಾನುಗಶ್ರೀರಾಮಸ್ವರ್ಗಾರೋಹಃ

ಅಧ್ಯರ್ಧಯೋಜನಂ ಗತ್ವಾ ನದೀಂ ಪಶ್ಚಾನ್ಮುಖಾಶ್ರಿತಾಮ್ ।
ಸರಯೂಂ ಪುಣ್ಯಸಲಿಲಾಂ ದದರ್ಶ ರಘುನಂದನಃ ॥ ೧

ತಾಂ ನದೀಮಾಕುಲಾವರ್ತಾಂ ಸರ್ವತ್ರಾನುಸರನ್ನೃಪಃ ।
ಆಗತಃ ಸಪ್ರಜೋ ರಾಮಸ್ತಂ ದೇಶಂ ರಘುನಂದನಃ ॥ ೨

ಅಥ ತಸ್ಮಿನ್ ಮುಹೂರ್ತೇ ತು ಬ್ರಹ್ಮಾ ಲೋಕಪಿತಾಮಹಃ ।
ಸರ್ವೈಃ ಪರಿವೃತೋ ದೇವೈರ್ಋಷಿಭಿಶ್ಚ ಮಹಾತ್ಮಭಿಃ ॥ ೩

ಆಯಯೌ ಯತ್ರ ಕಾಕುತ್ಸ್ಥಃ ಸ್ವರ್ಗಾಯ ಸಮುಪಸ್ಥಿತಃ ।
ವಿಮಾನಶತಕೋಟೀಭಿರ್ದಿವ್ಯಾಭಿರಭಿಸಂವೃತಃ ॥ ೪

ದಿವ್ಯತೇಜೋವೃತಂ ವ್ಯೋಮ ಜ್ಯೋತಿರ್ಭೂತಮನುತ್ತಮಮ್ ।
ಸ್ವಯಂಪ್ರಭೈಃ ಸ್ವತೇಜೋಭಿಃ ಸ್ವರ್ಗಿಭಿಃ ಪುಣ್ಯಕರ್ಮಭಿಃ ॥ ೫

## ಸರ್ಗ ೧೧೦

### ಪರಿವಾರಸಮೇತನಾದ ಶ್ರೀರಾಮನ ಸ್ವರ್ಗಾರೋಹಣ

ರಘುನಂದನನು ಒಂದೂವರೆ ಯೋಜನದಷ್ಟು ದೂರ ಪ್ರಯಾಣ ಮಾಡಿ, ಪಶ್ಚಿಮದ ಕಡೆಗೆ ತಿರುಗಿದ್ದ ಪುಣ್ಯಜಲಪೂರ್ಣವಾದ ಸರಯೂನದಿಯನ್ನು ವೀಕ್ಷಿಸಿದನು ಸುಳಿಗಳಿಂದ ತುಂಬಿ ಹರಿಯುತ್ತಿದ್ದ ಆ ನದಿಯನ್ನನುಸರಿಸಿ, ಶ್ರೀರಾಮನು ಪ್ರಜಾಸಹಿತನಾಗಿ ಅಲ್ಲಿಗೆ ಬಂದನು (೧-೨). ಆ ಮುಹೂರ್ತಕ್ಕೆ ಸರಿಯಾಗಿ ಲೋಕಪಿತಾಮಹನಾದ ಬ್ರಹ್ಮದೇವನು, ಕೋಟಿಗಟ್ಟಲೆ ದಿವ್ಯವಿಮಾನಗಳೊಡನೆ ಬಂದ ದೇವತೆಗಳಿಂದಲೂ ಋಷಿಗಳಿಂದಲೂ ಪರಿವೃತನಾಗಿ ಆ ಸ್ಥಳಕ್ಕೆ ಆಗಮಿಸಿದನು (೩-೪). ಸ್ವಯಂಪ್ರಭರೂ ಪುಣ್ಯಕರ್ಮಿಗಳೂ ಆದ ಸ್ವರ್ಗನಿವಾಸಿಗಳು ಆಕಾಶದಲ್ಲಿ ನೆರೆದರು ಗಗನಮಂಡಲವು ದಿವ್ಯತೇಜೋವೃತವಾಗಿ ಜ್ಯೋತಿರ್ಮಯ

*

ಪುಣ್ಯಾ ವಾತಾ ವವುಶ್ಚೈವ ಗಂಧವಂತಃ ಸುಖಪ್ರದಾಃ ।
ಪಪಾತ ಪುಷ್ಪವೃಷ್ಟಿಶ್ಚ ದೇವೈರ್ಮುಕ್ತಾ ಮಹೌಘವತ್ ॥ ೬
ತಸ್ಮಿಂಸ್ತೂರ್ಯಶತೈಃ ಕೀರ್ಣೇ ಗಂಧರ್ವಾಪ್ಸರಸಂಕುಲೇ ।
ಸರಯೂಸಲಿಲೇ ರಾಮಃ ಪದ್ಭ್ಯಾಂ ಸಮುಪಚಕ್ರಮೇ ॥ ೭
ತತಃ ಪಿತಾಮಹೋ ವಾಣೀಮಂತರಿಕ್ಷಾದಭಾಷತ ।
ಆಗಚ್ಛ ವಿಷ್ಣೋ ಭದ್ರಂ ತೇ ದಿಷ್ಟ್ಯಾ ಪ್ರಾಪ್ತೋಽಸಿ ರಾಘವ ॥ ೮
ಭ್ರಾತೃಭಿಃ ಸಹ ದೇವಾಭೈಃ ಪ್ರವಿಶಸ್ವ ಸ್ವಕಾಂ ತನುಮ್ ।
ಯಾಮಿಚ್ಛಸಿ ಮಹಾಬಾಹೋ ತಾಂ ತನುಂ ಪ್ರವಿಶ ಸ್ವಕಾಮ್ ॥ ೯
ವೈಷ್ಣವೀಂ ತಾಂ ಮಹಾತೇಜಸ್ತದ್ವಾಕಾಶಂ ಸನಾತನಮ್ ।
ತ್ವಂ ಹಿ ಲೋಕಗತಿರ್ದೇವ ನ ತ್ವಾಂ ಕೇಚಿತ್ ಪ್ರಜಾನತೇ ॥ ೧೦
ಋತೇ ಮಾಯಾಂ ವಿಶಾಲಾಕ್ಷೀಂ ತವ ಪೂರ್ವಪರಿಗ್ರಹಾಮ್ ।
ತ್ವಾಮಚಿಂತ್ಯಂ ಮಹದ್ಭೂತಮಕ್ಷಯಂ ಸರ್ವಸಂಗ್ರಹಮ್ ॥ ೧೧

---

ವಾಯಿತು (೫) ದಿವ್ಯಪರಿಮಳವನ್ನು ಬೀರುತ್ತ ಪುಣ್ಯಮಾರುತನು ಸುಖಕರವಾಗಿ ಬೀಸಿದನು ದೇವತೆಗಳು ಪುಷ್ಪವೃಷ್ಟಿಯನ್ನು ಸುರಿದರು ಗಂಧರ್ವರೂ ಅಪ್ಸರೆಯರೂ ಹಾಡುತ್ತ ದಿವ್ಯದುಂದುಭಿಗಳನ್ನು ನುಡಿಸಿದರು ಶ್ರೀರಾಮನು ಕಾಲ್ನಡಗೆಯಿಂದ ಸರಯೂ ಜಲದಲ್ಲಿಳಿದು ಹೋದನು (೬-೭) ಆಗ ಬ್ರಹ್ಮದೇವನು ಅಂತರಿಕ್ಷದಿಂದ “ರಘುಕುಲದಲ್ಲಿ ಅವತರಿಸಿದ ಹೇ ವಿಷ್ಣೋ, ಮಂಗಳವಾಗಲಿ! ನಿನಗೆ ಸ್ವಾಗತ (ನಮ್ಮ ಪ್ರಾರ್ಥನೆಯನ್ನು ಮನ್ನಿಸಿ) ಬಂದುದು ನಮ್ಮ ಭಾಗ್ಯ (೮) ದೇವಸದೃಶರಾದ ನಿನ್ನ ತಮ್ಮಂದಿರೊಡನೆ ನಿನ್ನ ನಿಜಧಾಮವನ್ನು ಪ್ರವೇಶಿಸು ನಿನಗೆ ಇಷ್ಟವಾದ ಸ್ವರೂಪವನ್ನವಲಂಬಿಸು ಹೇ ತೇಜೋನಿಧಿ, ನಿನ್ನ ವಿಷ್ಣುರೂಪವನ್ನಾದರೂ ಆಶ್ರಯಿಸು ಅಥವಾ ಸನಾತನ ಪರಬ್ರಹ್ಮಸ್ವರೂಪದಲ್ಲಾದರೂ ನಿಲ್ಲು (೯) ಹೇ ದೇವ, ಸಕಲ ಜೀವಿಗಳಿಗೂ ನೀನೇ ಗತಿಯಾಗಿದ್ದೀಯೆ ಜನರು ನಿನ್ನ ಸ್ವರೂಪವನ್ನರಿಯರು ಅನಾದಿ ಪರಿಗೃಹೀತಳೂ ವಿಶಾಲಾಕ್ಷಿಯೂ ಆದ ಮಾಯೆಯ *

---

* ವಿಶಾಲಾಕ್ಷಿ=ಸರ್ವವನ್ನೂ ಗೋಚರಿಸತಕ್ಕ, ಮಾಯೆ=ಜ್ಞಾನಶಕ್ತಿ ಇಲ್ಲಿ ಪಾಠಾಂತರಗಳೂ ಅರ್ಥಭೇದಗಳೂ ಉಂಟು

ಯಾಮಿಚ್ಛಸಿ ಮಹಾತೇಜಸ್ತಾಂ ತನುಂ ಪ್ರವಿಶ ಸ್ವಯಮ್ ।
ಪಿತಾಮಹವಚಃ ಶ್ರುತ್ವಾ ವಿನಿಶ್ಚಿತ್ಯ ಮಹಾಮತಿಃ ॥ ೧೨

ವಿವೇಶ ವೈಷ್ಣವಂ ತೇಜಃ ಸಶರೀರಃ ಸಹಾನುಜಃ ।
ತತೋ ವಿಷ್ಣುಮಯಂ ದೇವಂ ಪೂಜಯಂತಿ ಸ್ಮ ದೇವತಾಃ ॥ ೧೩

ಸಾಧ್ಯಾ ಮರುದ್ಗಣಾಶ್ಚೈವ ಸೇಂದ್ರಾಃ ಸಾಗ್ನಿಪುರೋಗಮಾಃ ।
ಯೇ ಚ ದಿವ್ಯಾ ಋಷಿಗಣಾ ಗಂಧರ್ವಾಪ್ಸರಸಶ್ಚ ಯಾಃ ॥ ೧೪

ಸುಪರ್ಣನಾಗಯಕ್ಷಾಶ್ಚ ದೈತ್ಯದಾನವರಾಕ್ಷಸಾಃ ।
ಸರ್ವಂ ಪುಷ್ಟಂ ಪ್ರಮುದಿತಂ ಸುಸಂಪೂರ್ಣಮನೋರಥಮ್ ॥ ೧೫

ಸಾಧು ಸಾಧ್ವಿತಿ ತೈರ್ದೇವೈಸ್ತ್ರಿದಿವಂ ಗತಕಲ್ಮಷಮ್ ।
ಅಥ ವಿಷ್ಣುರ್ಮಹಾತೇಜಾಃ ಪಿತಾಮಹಮುವಾಚ ಹ ॥ ೧೬

ಏಷಾಂ ಲೋಕಂ ಜನೌಘಾನಾಂ ದಾತುಮರ್ಹಸಿ ಸುವ್ರತ ।
ಇಮೇ ಹಿ ಸರ್ವೇ ಸ್ನೇಹಾನ್ಮಾಮನುಯಾತಾ ಮನಸ್ವಿನಃ ॥ ೧೭

---

ಹೊರತಾಗಿ (ಅವಳ ಅನುಗ್ರಹವಿಲ್ಲದೆ) ಯಾರೂ ನಿನ್ನನ್ನು ತಿಳಿಯಲಾರರು ನೀನು ಅಚಿಂತ್ಯನೂ ಮಹತ್ತಮನೂ ಅವ್ಯಯನೂ ಸರ್ವಾನುಗ್ರಹಕಾರಿಯೂ ಆಗಿದ್ದೀಯೆ (೧೦-೧೧) ಹೇ ತೇಜೋಮಯ, ಯಾವ ರೂಪವನ್ನಿಚ್ಛಿಸುವೆಯೋ ಅದನ್ನು ಪ್ರವೇಶಿಸು" ಎಂದು ವಿಜ್ಞಾಪಿಸಿದನು ಪಿತಾಮಹನ ವಾಣಿಯನ್ನಾಲಿಸಿ ಹೀಗೆ ಮಾಡಬೇಕೆಂದು ನಿಶ್ಚಯಿಸಿ, ಶ್ರೀರಾಮನು ತಮ್ಮಂದಿರೊಡನೆ ಸಶರೀರನಾಗಿ ವೈಷ್ಣವತೇಜಸ್ಸನ್ನು ಪ್ರವೇಶಿಸಿದನು ವಿಷ್ಣುಸ್ವರೂಪನಾಗಿ ಬಂದ ಆ ಸ್ವಾಮಿಯನ್ನು ಸಕಲ ದೇವತೆಗಳೂ ಪೂಜಿಸಿದರು (೧೨-೧೩) ಇಂದ್ರ, ಅಗ್ನಿ—ಮುಂತಾದ ದೇವತೆಗಳೂ ಸಾಧ್ಯರೂ ಗಂಧರ್ವರೂ ಅಪ್ಸರೆಯರೂ ಸುಪರ್ಣ ನಾಗ ಯಕ್ಷರೂ ದೈತ್ಯ ದಾನವ ರಾಕ್ಷಸರೂ ಸಮಸ್ತರೂ ಆತನನ್ನು ಅರ್ಚಿಸಿದರು ಮನೋರಥವು ಈಡೇರಿತೆಂದು ಸರ್ವರೂ ಆನಂದದಿಂದ ನಲಿದರು (೧೪-೧೫) 'ಸಾಧು ಸಾಧು!' ಎಂದು ದೇವತೆಗಳು ಘೋಷಿಸಿದರು ಸ್ವರ್ಗವು ಪಾವನವಾಯಿತು ಆಗ ವಿಷ್ಣುವಾದ ಶ್ರೀರಾಮನು ಬ್ರಹ್ಮನನ್ನು ನೋಡಿ "ಹೇ ಸುವ್ರತ, ಈ ಜನ ಸಮುದಾಯಕ್ಕೆ ಉತ್ತಮ ಲೋಕವನ್ನು ಕರುಣಿಸು ಶುದ್ಧಮನಸ್ಕರಾದ

ಭಕ್ತಾ ಹಿ ಭಜಿತವ್ಯಾಶ್ಚ ತ್ಯಕ್ತಾತ್ಮಾನಶ್ಚ ಮತ್ಕೃತೇ ।
ತಚ್ಛ್ರುತ್ವಾ ವಿಷ್ಣುವಚನಂ ಬ್ರಹ್ಮಾ ಲೋಕಗುರುಃ ಪ್ರಭುಃ ॥ ೧೮

ಲೋಕಾನ್ ಸಾಂತಾನಿಕಾನ್ನಾಮ ಯಾಸ್ಯಂತೀಮೇ ಸಮಾಗತಾಃ ।
ಯಚ್ಚ ತಿರ್ಯಗ್ಗತಂ ಕಿಂಚಿತ್ತ್ವಾಮೇವಮನುಚಿಂತಯತ್ ॥ ೧೯

ಪ್ರಾಣಾಂಸ್ತ್ಯಕ್ಷ್ಯತಿ ಭಕ್ತ್ಯಾ ವೈ ತತ್ಸಂತಾನೇ ನಿವತ್ಸ್ಯತಿ ।
ಸರ್ವೈರ್ಬ್ರಹ್ಮಗುಣೈರ್ಯುಕ್ತೇ ಬ್ರಹ್ಮಲೋಕಾದನಂತರೇ ॥ ೨೦

ವಾನರಾಶ್ಚ ಸ್ವಕಾಂ ಯೋನಿಮೃಕ್ಷಾಶ್ಚೈವ ತಥಾ ಯಯುಃ ।
ಯೇಭ್ಯೋ ವಿನಿಃಸೃತಾಃ ಸರ್ವೇ ಸುರೇಭ್ಯಃ ಸುರಸಂಭವಾಃ ॥ ೨೧

ತೇಷು ಪ್ರವಿವಿಶೇ ಚೈವ ಸುಗ್ರೀವಃ ಸೂರ್ಯಮಂಡಲಮ್ ।
ಪಶ್ಯತಾಂ ಸರ್ವದೇವಾನಾಂ ಸ್ವಾನ್ ಪಿತೄನ್ ಪ್ರತಿಪೇದಿರೇ ॥ ೨೨

ಅವಗಾಹ್ಯ ಜಲಂ ಯೋ ಯಃ ಪ್ರಾಣೀ ಹ್ಯಾಸೀತ್ ಪ್ರಹೃಷ್ಟವತ್ ।
ಮಾನುಷಂ ದೇಹಮುತ್ಸೃಜ್ಯ ವಿಮಾನಂ ಸೋಽಧ್ಯರೋಹತ ॥ ೨೩

---

ಇವರೆಲ್ಲರೂ ಪ್ರೀತಿಯಿಂದ ನನ್ನನ್ನು ನಂಬಿ ಬಂದರು (೧೬-೧೭) ಇವರು ನನ್ನ ಭಕ್ತರು ಭಕ್ತರನ್ನು ಆದರಿಸಬೇಕಲ್ಲವೆ? ನನಗಾಗಿ ಸರ್ವಸ್ವವನ್ನೂ ತ್ಯಜಿಸಿದ್ದಾರೆ" ಎಂದು ಹೇಳಿದನು ವಿಷ್ಣುವಿನ ವಚನವನ್ನು ಕೇಳಿ ಲೋಕಗುರುವೂ ಸರ್ವಶಕ್ತನೂ ಆದ ಬ್ರಹ್ಮನು "ನಿನ್ನೊಡನೆ ಬಂದ ಇವರೆಲ್ಲರೂ ನಾಂತಾನಿಕವೆಂಬ ಲೋಕವನ್ನು ಪಡೆಯುವರು ಯಾವುದೊಂದು ತಿರ್ಯಂಗ್ಜಂತುವಾದರೂ ಭಕ್ತಿಯಿಂದ ನಿನ್ನನ್ನೇ ಧ್ಯಾನಿಸುತ್ತ ಪ್ರಾಣವನ್ನು ತ್ಯಜಿಸುವುದೋ ಅದು ಸಾಂತಾನಿಕಲೋಕದಲ್ಲಿ ನೆಲೆಸುವುದು ಆ ಲೋಕವು ಸತ್ಯಸಂಕಲ್ಪತ್ವಾದಿ ನಿಖಿಲ ಬ್ರಹ್ಮಗುಣಗಳಿಂದ ಯುಕ್ತವಾಗಿ ಬ್ರಹ್ಮಲೋಕದ ಸಮೀಪದಲ್ಲಿದೆ" ಎಂದನು (೧೮-೨೦) ಯಾವ ಯಾವ ದೇವತೆಗಳಿಂದ ವಾನರರೂ ಭಲ್ಲೂಕರೂ ಜನಿಸಿದ್ದರೋ ಅವರು ತಮ್ಮ ತಮ್ಮ ದೇವರೂಪದಲ್ಲಿ ಐಕ್ಯವಾದರು (೨೧) ಎಲ್ಲರೂ ನೋಡುತ್ತಿರುವಾಗ ಸುಗ್ರೀವನು ಸೂರ್ಯಮಂಡಲದಲ್ಲಿ ಲೀನವಾದನು ಇತರರು ತಮ್ಮ ಪಿತೃಗಳಲ್ಲಿ ಲೀನವಾದರು. ಯಾವ ಯಾವ ಮನುಷ್ಯನು ಸರಯೂಜಲದಲ್ಲಿ ಇಳಿದನೋ ಅವನು

ತಿರ್ಯಗ್ಯೋನಿಗತಾನಾಂ ಚ ಶತಾನಿ ಸರಯೂಜಲಮ್ ।
ಸಂಪ್ರಾಪ್ಯ ತ್ರಿದಿವಂ ಜಗ್ಮುಃ ಪ್ರಭಾಸುರವಪೂಂಷಿ ಚ ॥ ೨೪
ದಿವ್ಯಾ ದಿವ್ಯೇನ ವಪುಷಾ ದೇವಾ ದೀಪ್ತಾ ಇವಾಭವನ್ ।
ಗತ್ವಾ ತು ಸರಯೂತೋಯಂ ಸ್ಥಾವರಾಣಿ ಚರಾಣಿ ಚ ॥ ೨೫
ಪ್ರಾಪ್ಯ ತತ್ತೋಯವಿಕ್ಲೇದಂ ದೇವಲೋಕಮುಪಾಗಮನ್ ।
ತಸ್ಮಿನ್ ಯೇಽಪಿ ಸಮಾಪನ್ನಾ ಋಕ್ಷವಾನರರಾಕ್ಷಸಾಃ ॥ ೨೬
ತೇಽಪಿ ಸ್ವರ್ಗಂ ಪ್ರವಿವಿಶುರ್ದೇಹಾನ್ ನಿಕ್ಷಿಪ್ಯ ಚಾಂಭಸಿ ।
ತತಃ ಸಮಾಗತಾನ್ ಸರ್ವಾನ್ ಸ್ಥಾಪ್ಯ ಲೋಕಗುರುರ್ದಿವಿ ॥ ೨೭
ಜಗಾಮ ತ್ರಿದಶೈಃ ಸಾರ್ಧಂ ಸದಾ ಹೃಷ್ಟೈರ್ದಿವಂ ಮಹತ್ ॥

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ದಶೋತ್ತರಶತತಮಃ ಸರ್ಗಃ



ನರದೇಹವನ್ನು ತೊರೆದು ದೇವವಿಮಾನವನ್ನು ಏರಿದನು. ಸರಯೂ ಜಲದಲ್ಲಿಳಿದ ಅಸಂಖ್ಯಾತವಾದ ತಿರ್ಯಗ್ಜಂತುಗಳು ದಿವ್ಯದೇಹವನ್ನು ಪಡೆದು ಸ್ವರ್ಗಲೋಕವನ್ನು ಸೇರಿದವು (೨೨-೨೪). ಎಲ್ಲರೂ ದೇವಶರೀರವನ್ನು ಹೊಂದಿ ದೇವತೆಗಳಂತೆ ಕಂಗೊಳಿಸಿದರು. ಸ್ಥಾವರ ಜಂಗಮಗಳು ಸರಯೂಜಲದಲ್ಲಿಳಿದು ಆ ಜಲದಿಂದ ಆರ್ದ್ರವಾದೊಡನೆ ದೇವಲೋಕವನ್ನು ಸೇರಿದವು (೨೫). ಆ ಜಲದಲ್ಲಿ ಮುಳುಗಿದ ಇತರ ಭಲ್ಲೂಕ ವಾನರ ರಾಕ್ಷಸರೂ ಸಹ ಶರೀರಗಳನ್ನು ಜಲದಲ್ಲಿ ತೊರೆದು ಸ್ವರ್ಗವನ್ನು ಪಡೆದರು. ಲೋಕಗುರುವಾದ ಬ್ರಹ್ಮನು, ಹೀಗೆ ಸ್ವರ್ಗಕ್ಕೆ ಬಂದ ಸಕಲರನ್ನೂ ದಿವ್ಯವಾದ ಸಾಂತಾನಿಕ ಲೋಕದಲ್ಲಿ ಸ್ಥಾಪಿಸಿ, ಸಂತುಷ್ಟರಾದ ದೇವತಗಳೊಡನೆ ಮಹತ್ತರವಾದ ತನ್ನ ತ್ರಿದಿವಲೋಕಕ್ಕೆ ಪ್ರಯಾಣಮಾಡಿದನು (೨೬-೨೭).

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರಹತ್ತನೆಯ ಸರ್ಗ



## ಏಕಾದಶೋತ್ತರಶತತಮಃ ಸರ್ಗಃ

### ಶ್ರೀಮದ್ರಾಮಾಯಣಫಲಶ್ರುತಿಃ

ಏತಾವದೇತದಾಖ್ಯಾನಂ ಸೋತ್ತರಂ ಬ್ರಹ್ಮಪೂಜಿತಮ್ ।
ರಾಮಾಯಣಮಿತಿ ಖ್ಯಾತಂ ಮುಖ್ಯಂ ವಾಲ್ಮೀಕಿನಾ ಕೃತಮ್ ॥ ೧

ತತಃ ಪ್ರತಿಷ್ಠಿತೋ ವಿಷ್ಣುಃ ಸ್ವರ್ಗಲೋಕೇ ಯಥಾಪುರಮ್ ।
ಯೇನ ವ್ಯಾಪ್ತಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಮ್ ॥ ೨

ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ನಿತ್ಯಂ ಶೃಣ್ವಂತಿ ಸಂತುಷ್ಟಾ ದಿವ್ಯಂ ರಾಮಾಯಣಂ ದಿವಿ ॥ ೩

ಇದಮಾಖ್ಯಾನಮಾಯುಷ್ಯಂ ಸೌಭಾಗ್ಯಂ ಪಾಪನಾಶನಮ್ ।
ರಾಮಾಯಣಂ ವೇದಸಮಂ ಶ್ರಾದ್ಧೇಷು ಶ್ರಾವಯೇದ್ಬುಧಃ ॥ ೪

## ಸರ್ಗ ೧೧೧

### ಶ್ರೀಮದ್ರಾಮಾಯಣದ ಫಲಶ್ರುತಿ

ಉತ್ತರಕಾಂಡಸಹಿತವಾಗಿ ಶ್ರೀಮದ್ರಾಮಾಯಣವೆಂದು ವಿಖ್ಯಾತವೂ ಪ್ರಶಸ್ತವೂ ಆದ ಇತಿಹಾಸವು ಇಷ್ಟುಪರ್ಯಂತವಾಗಿದೆ ಇದು ವಾಲ್ಮೀಕಿ ಮುನಿಗಳಿಂದ ಪ್ರಣೀತವಾಗಿದೆ. ಬ್ರಹ್ಮನಿಂದ ಪೂಜಿತವಾಗಿದೆ (೧) ಚರಾಚರಾತ್ಮಕವಾದ ಸಕಲ ತ್ರೈಲೋಕ್ಯವೂ ಯಾರಿಂದ ವ್ಯಾಪ್ತನಾಗಿದೆಯೋ ಆ ಮಹಾವಿಷ್ಣುವು ಭಕ್ತರಿಗೆ ಸದ್ಗತಿಯನ್ನು ಕರುಣಿಸಿದಮೇಲೆ, ತನ್ನ ದಿವ್ಯಲೋಕದಲ್ಲಿ ಸುಪ್ರತಿಷ್ಠಿತನಾದನು (೨) ಅನಂತರ ದೇವಗಂಧರ್ವರೂ ಸಿದ್ಧಪರಮರ್ಷಿಗಳೂ ದಿವ್ಯವಾದ ರಾಮಕಥೆಯನ್ನು ನಿತ್ಯವೂ ಕೇಳತೊಡಗಿದರು. ಶ್ರೀಮದ್ರಾಮಾಯಣವೆಂಬ ಈ ಆಖ್ಯಾನವು ಆಯುಷ್ಕರವೂ ಸೌಭಾಗ್ಯದಾಯಕವೂ ಪಾಪನಾಶಕವೂ ಆಗಿದೆ ವೇದಸಮಾನವಾದ ರಾಮಾಯಣವನ್ನು ವಿದ್ವಾಂಸನು ಶ್ರಾದ್ಧಕಾಲದಲ್ಲಿ ಶ್ರವಣಮಾಡಿಸಬೇಕು

ಅಪುತ್ರೋ ಲಭತೇ ಪುತ್ರಮಧನೋ ಲಭತೇ ಧನಮ್ ।
ಸರ್ವಪಾಪೈಃ ಪ್ರಮುಚ್ಯೇತ ಪಾದಮಪ್ಯಸ್ಯ ಯಃ ಪಠೇತ್ ॥ ೫

ಪಾಪಾನ್ಯಪಿ ಚ ಯಃ ಕುರ್ಯಾದಹನ್ಯಹನಿ ಮಾನವಃ ।
ಪಠತ್ಯೇಕಮಪಿ ಶ್ಲೋಕಂ ಪಾಪಾತ್ ಸ ಪರಿಮುಚ್ಯತೇ ॥ ೬

ವಾಚಕಾಯ ಚ ದಾತವ್ಯಂ ವಸ್ತ್ರಂ ಧೇನುಹಿರಣ್ಯಕಮ್ ।
ವಾಚಕೇ ಪರಿತುಷ್ಟೇ ತು ತುಷ್ಟಾಃ ಸ್ಯುಃ ಸರ್ವದೇವತಾಃ ॥ ೭

ಏತದಾಖ್ಯಾನಮಾಯುಷ್ಯಂ ಪಠನ್ ರಾಮಾಯಣಂ ನರಃ ।
ಸಪುತ್ರಪೌತ್ರೋ ಲೋಕೇಽಸ್ಮಿನ್ ಪ್ರೇತ್ಯ ಚೇಹ ಮಹೀಯತೇ ॥ ೮

ರಾಮಾಯಣಂ ಗೋವಿಸರ್ಗೇ ಮಧ್ಯಾಹ್ನೇ ವಾ ಸಮಾಹಿತಃ ।
ಸಾಯಾಹ್ನೇ ವಾಪರಾಹ್ಣೇ ಚ ವಾಚಯನ್ನಾವಸೀದತಿ ॥ ೯

---

(೫-೪) ಇದರ ಶ್ರವಣದಿಂದ ಪುತ್ರನಿಲ್ಲದವನು ಪುತ್ರನನ್ನೂ ಧನವಿಲ್ಲದವನು ಧನವನ್ನೂ ಪಡೆಯುತ್ತಾನೆ ಇದರಲ್ಲಿರುವ ಒಂದು ಶಬ್ದವನ್ನು ಪಠಿಸಿದರೂ ಸಮಸ್ತಪಾಪಗಳಿಂದ ಮುಕ್ತನಾಗುವನು (೫). ಪ್ರತಿ ದಿನ ಪಾಪಕಾರ್ಯಗಳನ್ನಾಚರಿಸತಕ್ಕವನಾದರೂ ಈ ಗ್ರಂಥದ ಒಂದು ಶ್ಲೋಕವನ್ನು ಪಠಿಸುತ್ತಿದ್ದರೆ ಪಾಪದೂರನಾಗುವನು ಶ್ರವಣಮಾಡಿಸತಕ್ಕ ವಾಚಕನಿಗೆ ವಸ್ತ್ರ ಧೇನು ಸುವರ್ಣಗಳನ್ನು ದಾನಮಾಡಬೇಕು ವಾಚಕನು ಪರಿತುಷ್ಟನಾದರೆ ನಿಖಿಲದೇವತೆಗಳೂ ಸಂತುಷ್ಟರಾಗುವರು (೬-೭) ಆಯುಷ್ಕರವಾದ ಈ ಆಖ್ಯಾನವನ್ನು ಮನುಷ್ಯನು ಪಠಿಸುತ್ತಿದ್ದರೆ, ಪುತ್ರಪೌತ್ರರಿಂದ ಸಹಿತನಾಗಿ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಶ್ರೇಯಸ್ಸನ್ನು ಪಡೆಯುತ್ತಾನೆ ಪ್ರಾತಃಕಾಲ, * ಮಧ್ಯಾಹ್ನ, ಅಪರಾಹ್ಣ, ಸಾಯಂಕಾಲ—ಈ ಸಮಯದಲ್ಲಿ ಓದತಕ್ಕವನು ಯಾವ ಕಷ್ಟವನ್ನೂ ಅನುಭವಿಸದೆ ಸುಖಿಯಾಗಿರುವನು

---

* ಮೂಲದಲ್ಲಿ ಗೋವಿಸರ್ಗ ಎಂದಿದೆ ಸೂರ್ಯನು ಕಿರಣಗಳನ್ನು ಹರಡುವ ಕಾಲ—ಪ್ರಾತಃಕಾಲ ಅಥವಾ ಹಸುಗಳನ್ನು ಮೇಯಿಸುವುದಕ್ಕಾಗಿ ಬಿಡುವ ಕಾಲ.

ಅಯೋಧ್ಯಾಪಿ ಪುರೀ ರಮ್ಯಾ ಶೂನ್ಯಾ ವರ್ಷಗಣಾನ್ ಬಹೂನ್ ।
ಋಷಭಂ ಪ್ರಾಪ್ಯ ರಾಜಾನಂ ನಿವಾಸಮುಪಯಾಸ್ಯತಿ ॥ ೧೦

ಏತದಾಖ್ಯಾನಮಾಯುಷ್ಯಂ ಸಭವಿಷ್ಯಂ ಸಹೋತ್ತರಮ್ ।
ಕೃತವಾನ್ ಪ್ರಚೇತಸಃ ಪುತ್ರಸ್ತದ್ಬ್ರಹ್ಮಾಪ್ಯನ್ವಮನ್ಯತ ॥ ೧೧

ಅಶ್ವಮೇಧಸಹಸ್ರಸ್ಯ ವಾಜಪೇಯಾಯುತಸ್ಯ ಚ ।
ಲಭತೇ ಶ್ರವಣಾದೇವ ಸರ್ಗಸ್ಯೈಕಸ್ಯ ಮಾನವಃ ॥ ೧೨

ಪ್ರಯಾಗಾದೀನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ನೈಮಿಷಾದೀನ್ಯರಣ್ಯಾನಿ ಕುರುಕ್ಷೇತ್ರಾದಿಕಾನ್ಯಪಿ ॥ ೧೩

ಗತಾನಿ ತೇನ ಲೋಕೇಽಸ್ಮಿನ್ ಯೇನ ರಾಮಾಯಣಂ ಶ್ರುತಮ್ ।
ಹೇಮಭಾರಂ ಕುರುಕ್ಷೇತ್ರೇ ಗ್ರಸ್ತೇ ಭಾನೌ ಪ್ರಯಚ್ಛತಿ ॥ ೧೪

ಯಶ್ಚ ರಾಮಾಯಣಂ ಲೋಕೇ ಶೃಣೋತಿ ಸದೃಶಾವುಭೌ ।
ಸಮ್ಯಕ್ ಶ್ರದ್ಧಾಸಮಾಯುಕ್ತಃ ಶೃಣುತೇ ರಾಘವೀಂ ಕಥಾಮ್ ॥

---

(೮-೯) ರಮ್ಯವಾಗಿದ್ದ ಅಯೋಧ್ಯಾನಗರಿಯು ಬಹುವರ್ಷಗಳವರೆಗೆ ಜನಶೂನ್ಯವಾಗಿದ್ದು, ಋಷಭನೆಂಬ ರಾಜನ ಕಾಲದಲ್ಲಿ ಜನನಿವಾಸಸ್ಥಾನವಾಗುವುದು ಆಯುಷ್ಕರವೂ ಭವಿಷ್ಯೋತ್ತರಕಾಂಡಸಹಿತವೂ ಆದ ಈ ಇತಿಹಾಸವನ್ನು ಪ್ರಾಚೇತಸರಾದ ವಾಲ್ಮೀಕಿಮುನಿಗಳು ರಚಿಸಿದರು ಇದಕ್ಕೆ ಬ್ರಹ್ಮನು ಒಪ್ಪಿಗೆಯನ್ನಿತ್ತನು (೧೦-೧೧) ಇದರ ಒಂದು ಸರ್ಗವನ್ನು ಶ್ರವಣ ಮಾಡಿದ ಮಾತ್ರದಿಂದ ಸಾವಿರಾರು ಅಶ್ವಮೇಧ—ವಾಜಪೇಯಯಾಗಗಳ ಫಲವು ಲಭಿಸುವುದು ಯಾವನು ಶ್ರೀಮದ್ರಾಮಾಯಣವನ್ನು ಶ್ರವಣ ಮಾಡುವನೋ ಅವನು ಪ್ರಯಾಗಾದಿ ತೀರ್ಥಕ್ಷೇತ್ರಗಳು, ಗಂಗಾದಿ ಪವಿತ್ರ ನದಿಗಳು, ನೈಮಿಷಾದಿ ಪುಣ್ಯಾರಣ್ಯಗಳು, ಕುರುಕ್ಷೇತ್ರ ಮುಂತಾದ ಪವಿತ್ರಸ್ಥಳಗಳು—ಇವುಗಳಿಗೆ ಯಾತ್ರೆಮಾಡಿದಂತೆಯೇ ಸರಿ (೧೨-೧೩) ಸೂರ್ಯಗ್ರಹಣವಾದಾಗ ಕುರುಕ್ಷೇತ್ರದಲ್ಲಿ ಯಾವನು ಒಂದು ಭಾರ ಸುವರ್ಣವನ್ನು ದಾನಮಾಡುವನೋ, ಯಾವನು ಶ್ರೀಮದ್ರಾಮಾಯಣವನ್ನು ಶ್ರವಣಮಾಡುವನೋ—ಇವರಿಬ್ಬರೂ ಪುಣ್ಯಲಾಭದಲ್ಲಿ ಸಮಾನರು.

ಸರ್ವಪಾಪಾತ್ ಪ್ರಮುಚ್ಯೇತ ವಿಷ್ಣುಲೋಕಂ ಸ ಗಚ್ಛತಿ ।
ಆದಿಕಾವ್ಯಮಿದಂ ತ್ವಾರ್ಷಂ ಪುರಾ ವಾಲ್ಮೀಕಿನಾ ಕೃತಮ್ ॥ ೧೬

ಯಃ ಶೃಣೋತಿ ಸದಾ ಭಕ್ತ್ಯಾ ಸ ಗಚ್ಛೇದ್ವೈಷ್ಣವೀಂ ತನುಮ್ ।
ಪುತ್ರದಾರಾಶ್ಚ ವರ್ಧಂತೇ ಸಂಪದಃ ಸಂತತಿಸ್ತಥಾ ॥ ೧೭

ಸತ್ಯಮೇತದ್ವಿದಿತ್ವಾ ತು ಶ್ರೋತವ್ಯಂ ನಿಯತಾತ್ಮಭಿಃ ।
ಗಾಯತ್ರ್ಯಾಶ್ಚ ಸ್ವರೂಪಂ ತದ್ರಾಮಾಯಣಮನುತ್ತಮಮ್ ॥ ೧೮

ಅಪುತ್ರೋ ಲಭತೇ ಪುತ್ರಮಧನೋ ಲಭತೇ ಧನಮ್ ।
ಸರ್ವಪಾಪೈಃ ಪ್ರಮುಚ್ಯೇತ ಪದಮಪ್ಯಸ್ಯ ಯಃ ಪಠೇತ್ ॥ ೧೯

ಯಃ ಪಠೇಚ್ಛೃಣುಯಾನ್ನಿತ್ಯಂ ಚರಿತಂ ರಾಘವಸ್ಯ ಹ ।
ಭಕ್ತ್ಯಾ ನಿಷ್ಕಲ್ಮಷೋ ಭೂತ್ವಾ ದೀರ್ಘಮಾಯುರವಾಪ್ನುಯಾತ್ ॥

---

ಶ್ರದ್ಧೆಯಿಂದ ಶ್ರೀರಾಮಕಥೆಯನ್ನು ಆಲಿಸತಕ್ಕವನು ಸರ್ವಪಾಪಗಳಿಂದಲೂ ವಿಮುಕ್ತನಾಗಿ ವಿಷ್ಣುಲೋಕವನ್ನು ನೇರುವನು ವಾಲ್ಮೀಕಿಮಹರ್ಷಿಗಳು ರಚಿಸಿದ ಆದಿಕಾವ್ಯವಿದು (೧೫-೧೬) ಇದನ್ನು ಭಕ್ತಿಯಿಂದ ಕೇಳುವವನು ವಿಷ್ಣುದೇಹದಲ್ಲಿ ಲೀನನಾಗುವನು. ಅವನ ಪುತ್ರರೂ ಪತ್ನಿಯರೂ ಏಳ್ಗೆ ಹೊಂದುವರು ಸಂಪತ್ತೂ ಸಂತತಿಯೂ ವರ್ಧಿಸುವುದು ಶ್ರೇಷ್ಠವೂ ಗಾಯತ್ರೀಸ್ವರೂಪವೂ ಆದ ಶ್ರೀಮದ್ರಾಮಾಯಣವು ಸತ್ಯವೆಂದರಿತು ಶ್ರದ್ಧಾಭಕ್ತಿಯುತರಾಗಿ ಇದನ್ನು ಆಲಿಸಬೇಕು (೧೭-೧೮) ಪುತ್ರನಿಲ್ಲದವನು ಪುತ್ರನನ್ನೂ ಧನವಿಲ್ಲದವನು ಧನವನ್ನೂ ಪಡೆಯುವನು ಇದರ ಒಂದು ಶಬ್ದವನ್ನು ಪಠಿಸಿದರೂ ಸರ್ವಪಾಪವಿಮೋಚನೆಯಾಗುವುದು (೧೯) ಯಾವನು ಭಕ್ತಿಯಿಂದ ಶ್ರೀರಾಮಚರಿತವನ್ನು ನಿತ್ಯವೂ ಆಲಿಸುವನೋ ಅವನು ಪಾಪರಹಿತನಾಗಿ ದೀರ್ಘಾಯುವನ್ನು ಪಡೆಯುವನು

ಚಿಂತಯೇದ್ರಾಘವಂ ನಿತ್ಯಂ ಶ್ರೇಯಃ ಪ್ರಾಪ್ತುಂ ಯ ಇಚ್ಛತಿ ।
ಶ್ರಾವಯೇದಿದಮಾಖ್ಯಾನಂ ಬ್ರಾಹ್ಮಣೇಭ್ಯೋ ದಿನೇ ದಿನೇ ॥ ೨೧

ಯಸ್ತ್ವಿದಂ ರಘುನಾಥಸ್ಯ ಚರಿತಂ ಸಕಲಂ ಪಠೇತ್ ।
ಸೋಽಸುಕ್ಷಯೇ ವಿಷ್ಣುಲೋಕಂ ಗಚ್ಛತ್ಯೇವ ನ ಸಂಶಯಃ ॥ ೨೨

ಪಿತಾ ಪಿತಾಮಹಸ್ತಸ್ಯ ತಥೈವ ಪ್ರಪಿತಾಮಹಃ ।
ತತ್ಪಿತಾ ತತ್ಪಿತಾ ಚೈವ ವಿಷ್ಣುಂ ಯಾಂತಿ ನ ಸಂಶಯಃ ॥ ೨೩

ಚತುರ್ವರ್ಗಪ್ರದಂ ನಿತ್ಯಂ ಚರಿತಂ ರಾಘವಸ್ಯ ತು ।
ತಸ್ಮಾದ್ಯತ್ನವತಾ ನಿತ್ಯಂ ಶ್ರೋತವ್ಯಂ ಪರಮಂ ಸದಾ ॥ ೨೪

ಶೃಣ್ವನ್ ರಾಮಾಯಣಂ ಭಕ್ತ್ಯಾ ಯಃ ಪಾದಂ ಪಾದಮೇವ ವಾ ।
ಸ ಯಾತಿ ಬ್ರಹ್ಮಣಃ ಸ್ಥಾನಂ ಬ್ರಹ್ಮಣಾ ಪೂಜ್ಯತೇ ಸದಾ ॥ ೨೫

---

ಯಾರಿಗೆ ಶ್ರೇಯಸ್ಸು ಬೇಕೋ ಅವರು ಶ್ರೀರಾಮನನ್ನು ಧ್ಯಾನಿಸುತ್ತಿರಬೇಕು ವಿಪ್ರರ ಮುಖದಿಂದ ರಾಮಾಯಣವನ್ನು ಶ್ರವಣಮಾಡಿಸಬೇಕು (೨೦-೨೧). ಯಾವನು ರಘುನಾಥನ ಸಕಲ ಚರಿತೆಯನ್ನೂ ಪಠಿಸುವನೋ ಅವನು ಮರಣಾನಂತರದಲ್ಲಿ ನಿಸ್ಸಂಶಯವಾಗಿ ವಿಷ್ಣುಸಾನ್ನಿಧ್ಯವನ್ನು ನೇರುವನು. ಅವನ ತಂದೆ, ಪಿತಾಮಹ, ಪ್ರಪಿತಾಮಹ, ಪ್ರಪಿತಾಮಹನ ತಂದೆ, ಅವನ ತಂದೆ—ಇವರೆಲ್ಲರೂ ವಿಷ್ಣುಲೋಕವನ್ನು ಸೇರುವರು, ಸಂದೇಹವಿಲ್ಲ (೨೨-೨೩) ಶ್ರೀರಾಮಚರಿತೆಯು ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವರ್ಗವನ್ನು ನೀಡುತ್ತದೆ ಆದ್ದರಿಂದ ಇದರ ವಿಷಯದಲ್ಲಿ ಯತ್ನವನ್ನು ಕೈಗೊಂಡು ನಿತ್ಯವೂ ಶ್ರವಣಮಾಡುತ್ತಿರಬೇಕು (೨೪) ಶ್ರೀಮದ್ರಾಮಾಯಣದಲ್ಲಿ ಒಂದು ಪಾದವನ್ನು ಅಥವಾ ಒಂದು ಪದವನ್ನು ಭಕ್ತಿಯಿಂದ ಕೇಳತಕ್ಕವನು ಬ್ರಹ್ಮಲೋಕವನ್ನು ಸೇರಿ ಬ್ರಹ್ಮನಿಂದ ಪೂಜಿತನಾಗುವನು (೨೫)

ಏವಮೇತತ್ ಪುರಾವೃತ್ತಮಾಖ್ಯಾನಂ ಭದ್ರಮಸ್ತು ವಃ।
ಪ್ರವ್ಯಾಹರತ ವಿಸ್ರಬ್ಧಂ ಬಲಂ ವಿಷ್ಣೋಃ ಪ್ರವರ್ಧತಾಮ್ ॥ ೨೬

ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡೇ ಏಕಾದಶೋತ್ತರಶತತಮಃ ಸರ್ಗಃ

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ ಚತುರ್ವಿಂಶತಿ ಸಹಸ್ರಿಕಾಯಾಂ ಸಂಹಿತಾಯಾಮುತ್ತರಕಾಂಡೇ ಶ್ರೀಮದ್ರಾಮಾಯಣ ಫಲಶ್ರುತಿರ್ನಾಮ ಏಕಾದಶೋತ್ತರಶತತಮಃ ಸರ್ಗಃ

## ಇತಿ ಶ್ರೀಮದ್ರಾಮಾಯಣೇ ಉತ್ತರಕಾಂಡಃ ಸಂಪೂರ್ಣಃ

## ಶ್ರೀಮದ್ರಾಮಾಯಣಂ ಸಂಪೂರ್ಣಮ್

## ಶುಭಂ ಭೂಯಾತ್

---

ಎಲೈ ಮಹಾಜನರೆ, ಈ ರೀತಿಯಲ್ಲಿ ಪುರಾತನವಾದ ಒಂದು ಪುಣ್ಯಚರಿತೆಯು ನಡೆಯಿತು ನಿಮ್ಮೆಲ್ಲರಿಗೂ ಮಂಗಳವಾಗಲಿ! ಭಗವಂತನ ಮಹಿಮೆಯು ವರ್ಧಿಸಬೇಕೆಂದು ಶ್ರದ್ಧೆಯಿಂದ ಘೋಷಿಸಿರಿ (೨೬)

ಇಲ್ಲಿಗೆ ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ನೂರಹನ್ನೊಂದನೆಯ ಸರ್ಗ

॥ ಶ್ರೀರಾಮಚಂದ್ರಾರ್ಪಣಮಸ್ತು ॥

ಅಗಸ್ತ್ಯಾದಿಮುನಿಸ್ತುತ್ಯಂ ವಾಂಛಿತಾರ್ಥಪ್ರದಾಯಕಮ್ ।
ಸರ್ವದೇವೋತ್ತಮಂ ಧ್ಯಾಯೇದುತ್ತರೇ ಕಾಂಡ ಉತ್ತಮೇ ॥



ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್ ॥

ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್ ಕಶ್ಚ ವೀರ್ಯವಾನ್ ।
ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋ ದೃಢವ್ರತಃ ॥





ಕಲ್ಯಾಣಾನಾಂ ನಿಧಾನಂ ಕಲಿಮಲಮಥನಂ ಪಾವನಂ ಪಾವನಾನಾಂ
ಪಾಥೇಯಂ ಯನ್ಮುಮುಕ್ಷೋಃ ಸಪದಿ ಪರಪದಪ್ರಾಪ್ತಯೇ ಪ್ರಸ್ಥಿತಸ್ಯ |
ವಿಶ್ರಾಮಸ್ಥಾನಮೇಕಂ ಕವಿವರವಚಸಾಂ ಜೀವನಂ ಸಜ್ಜನಾನಾಂ
ಬೀಜಂ ಧರ್ಮದ್ರುಮಸ್ಯ ಪ್ರಭವತು ಭವತಾಂ ಭೂತಯೇ ರಾಮನಾಮ ||

ವೇದವೇದಾಂತವೇದ್ಯಾಯ ಮೇಘಶ್ಯಾಮಲಮೂರ್ತಯೇ |
ಪುಂಸಾಂ ಮೋಹನರೂಪಾಯ ಪುಣ್ಯಶ್ಲೋಕಾಯ ಮಂಗಲಮ್ ||



# ಅನುಬಂಧ

## ೧

**ಏವಂ ತೇಷಾಂ ಯಯೌ ಮಾಸೋ ದ್ವಿತೀಯಃ ಶೈಶಿರಃ ಸುಖಮ್ ॥**

—ಪುಟ ೩೧೭

ಚೈತ್ರ ಶುದ್ದ ಸಪ್ತಮಿಯಂದು ಶ್ರೀರಾಮನ ಪಟ್ಟಾಭಿಷೇಕವಾಯಿತು ಶಿಶಿರ ಋತುವಿನ ಎರಡನೆಯ ತಿಂಗಳು—ಫಾಲ್ಗುಣ ಮಾಸವು ಕಳೆಯಿತೆಂದರೆ, ಸುಮಾರು ಒಂದು ವರ್ಷದವರೆಗೆ ವಾನರರು ಅಯೋಧ್ಯೆಯಲ್ಲಿದ್ದರು

ದಶರಥನು ಚೈತ್ರಮಾಸದ ಪುಷ್ಯ ನಕ್ಷತದಲ್ಲಿ ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡಲು ಸಂಕಲ್ಪಿಸಿದ್ದನೆಂಬುದೂ ಆ ದಿನವೇ ವನವಾಸವು ಪ್ರಾಪ್ತವಾಯಿತೆಂಬುದೂ ನಿರ್ವಿವಾದ ವನವಾಸವು ಕಳೆದಮೇಲೆ ಶ್ರೀರಾಮನು ಭರದ್ವಾಜಾಶ್ರಮಕ್ಕೆ ಪಂಚಮಿಯ ದಿನ ಬಂದನು ಅಲ್ಲಿಗೆ ಹದಿನಾಲ್ಕು ವರ್ಷಗಳು ಪೂರ್ಣವಾಗಿದ್ದವು

**ಪೂರ್ಣೇ ಚತುರ್ದಶೇ ವರ್ಷೇ ಪಂಚಮ್ಯಾಂ ಲಕ್ಷ್ಮಣಾಗ್ರಜಃ ।**
**ಭರದ್ವಾಜಾಶ್ರಮಂ ಪ್ರಾಪ್ಯ ವವಂದೇ ನಿಯತೋ ಮುನಿಮ್ ॥**

—ಯುದ್ಧ ೧೨೪-೧

ದಶರಥನು ಸಂಕಲ್ಪಿಸಿದ ಪುಷ್ಯನಕ್ಷತ್ರವು ಚೈತ್ರ ಶುದ್ಧ ಪಂಚಮಿಯ ದಿನ ಆಗಿದ್ದಿತೆಂದೂ ಭರದ್ವಾಜಾಶ್ರಮಕ್ಕೆ ಶ್ರೀರಾಮನು ಆಗಮಿಸಿದ ಪಂಚಮಿಗೆ ಹದಿನಾಲ್ಕು ವರ್ಷಗಳು ಕಳೆಯುತ್ತವೆಯೆಂದೂ ಕತಕ, ಮಹೇಶ್ವರತೀರ್ಥ—ಮುಂತಾದವರ ಅಭಿಪ್ರಾಯವಿದೆ ಇದಕ್ಕೆ ಅನುಗುಣವಾಗಿ ರಾಮಾಯಣದಲ್ಲಿ ಮುಖ್ಯಸಂದರ್ಭಗಳ ಕಾಲನಿರ್ಣಯವನ್ನು ಬಾಲಕಾಂಡದ ಅನುಬಂಧದಲ್ಲಿ ನಿರೂಪಿಸಲಾಗಿದೆ ತಿಲಕವ್ಯಾಖ್ಯಾನವು ಈ ನಿರ್ಣಯವನ್ನು ಒಪ್ಪುವುದಿಲ್ಲ ವಿವಿಧ ಪ್ರಮಾಣಗಳನ್ನು ಕೊಟ್ಟು ಕಾಲನಿರ್ಣಯವನ್ನು ಅನ್ಯಥಾ ಪ್ರತಿಪಾದಿಸಿದೆ ವಾಚಕರ ಅವಗಾಹನೆಗಾಗಿ ಪ್ರಕೃತವಾದ್ದನ್ನು ಇಲ್ಲಿ ಸಂಕ್ಷಿಪ್ತವಾಗಿ ಬರೆದಿದೆ:

ಚೈತ್ರಮಾಸದ ಪುಷ್ಯನಕ್ಷತ್ರದಲ್ಲಿ ಪಟ್ಟಾಭಿಷೇಕ ಮಾಡಲು ದಶರಥನು ಸಂಕಲ್ಪಿಸಿದ್ದು ನಿರ್ವಿವಾದ. ಆದರೆ ಪುಷ್ಯವು ಪಂಚಮಿಯ ದಿನ ಬರಲಾರದು. ಜ್ಯೋತಿಶ್ಶಾಸ್ತ್ರದ ಪ್ರಕಾರ ಚೈತ್ರಮಾಸದಲ್ಲಿ ಪುಷ್ಯನಕ್ಷತ್ರವು ಶುದ್ಧ ನವಮಿಗಿಂತ ಮೊದಲು ಬರಲು ಶಕ್ಯವೇ ಇಲ್ಲ. ನವಮಿಯು ರಿಕ್ತತಿಥಿಯಾದ್ದರಿಂದ ದಶಮಿಯಂದು ಪಟ್ಟಾಭಿಷೇಕ ಮಾಡಲು ದಶರಥನು ಸಂಕಲ್ಪಿಸಿರಬೇಕು. ಆ ದಿನವೇ ವನವಾಸಾರಂಭ. ವನವಾಸದ ಅವಧಿ ಹದಿನಾಲ್ಕು ವರ್ಷಗಳೆಂದರೆ—೧೪×೧೨=೧೬೮ ತಿಂಗಳು. ಈ ವರ್ಷಗಳಲ್ಲಿ ಬರುವ ಅಧಿಕಮಾಸಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು.

ಮಹಾಭಾರತದಲ್ಲಿ ಪಾಂಡವರ ವನವಾಸದ ಅವಧಿಯನ್ನು ಗಣಿಸುವಾಗ ಅಧಿಕಮಾಸಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಲಾಗಿದೆ. ಪ್ರತಿಜ್ಞಾವಿಷಯದಲ್ಲಿ ಅಧಿಕಮಾಸದ ಗಣನೆ ಧರ್ಮಸಂಮತವೆಂದು ಭೀಷ್ಮನು ವಿರಾಟಪರ್ವದಲ್ಲಿ ತಿಳಿಸಿದ್ದಾನೆ. ಪ್ರಕೃತದಲ್ಲಿಯೂ ಅದೇ ಯುಕ್ತ. ವಿರಹಾಸಹಿಷ್ಣುವಾದ ಭರತನು ಅಧಿಕಮಾಸಗಳನ್ನು ಗಣಿಸಬೇಕೆಂದು ಆಗ್ರಹಮಾಡದಿರಲಾರ. ಆದ್ದರಿಂದ ಶ್ರೀರಾಮನು ಭರದ್ವಾಜಾಶ್ರಮಕ್ಕೆ ಬಂದದ್ದು ಚೈತ್ರಶುದ್ಧ ಪಂಚಮಿಯ ದಿನವಲ್ಲ. ಅದಕ್ಕೂ ಹಿಂದಿನ ವರ್ಷದ ಆಶ್ವಯುಜ ಬಹುಳ ಪಂಚಮಿಯಂದು. ಜ್ಯೋತಿಶ್ಶಾಸ್ತ್ರದ ಪ್ರಕಾರ ಗಣನೆ ಮಾಡಿದರೆ, ಅಧಿಕಮಾಸಗಳನ್ನೂ ಸೇರಿಸಿಕೊಂಡು ಅಲ್ಲಿಗೆ ಹದಿನಾಲ್ಕು ವರ್ಷಗಳು ಕಳೆಯುತ್ತವೆ. ಆಶ್ವಯುಜ ಬಹುಳ ಸಪ್ತಮಿ ಅಥವಾ ಕಾರ್ತಿಕ ಶುದ್ಧದಲ್ಲಿ ಶ್ರೀರಾಮನ ಪಟ್ಟಾಭಿಷೇಕ. ಆದ್ದರಿಂದ ಐದು ತಿಂಗಳವರೆಗೆ ವಾನರರು ಅಯೋಧ್ಯೆಯಲ್ಲಿ ನೆಲೆಸಿರಬೇಕು.

## ೨

**ದೈತ್ಯಾಃ ಸುರೈರ್ಭರ್ತ್ಸ್ಯಮಾನಾ ಭೃಗುಪತ್ನೀಂ ಸಮಾಶ್ರಿತಾಃ ||**

—ಪುಟ ೩೭೪

ಬಲಿಚಕ್ರವರ್ತಿಯು ದೈತ್ಯರ ನಾಯಕನಾಗಿದ್ದಾಗ ದೇವತೆಗಳಿಗೂ ದೈತ್ಯರಿಗೂ ಘೋರ ಯುದ್ಧವು ಸಂಭವಿಸಿತು. ವಿಷ್ಣುವಿನ ಸಹಾಯವನ್ನು

ಪಡೆದು ದೇವತೆಗಳು ಹೋರಾಡುತ್ತಿದ್ದರು ಪರಾಜಿತರಾದ ದೈತ್ಯರು ಶುಕ್ರಾಚಾರ್ಯನಿಗೆ ಶರಣಾದರು ಶುಕ್ರನು ತನ್ನ ಮಂತ್ರೌಷಧಿಗಳ ಬಲದಿಂದ ಅವರನ್ನು ರಕ್ಷಿಸುವುದಾಗಿ ಮಾತುಕೊಟ್ಟನು ಆದರೂ ದೇವತೆಗಳು ಪ್ರಬಲರಾಗಿಯೇ ಇದ್ದು ದೈತ್ಯರನ್ನು ಸೋಲಿಸುತ್ತಿದ್ದರು ಶುಕ್ರನು ಅತ್ಯಂತ ಪ್ರಬಲವಾದ ಮಂತ್ರೋಪದೇಶವನ್ನು ಪಡೆಯಬೇಕೆಂದು ಉದ್ದೇಶಿಸಿ ಶಿವನ ಬಳಿಗೆ ಹೋದನು ಶುಕ್ರನ ಉದ್ದೇಶವು ಸರಿಯಾದ್ದಲ್ಲವೆಂದು ತಿಳಿದು, ಒಂದು ಸಾವಿರ ವರ್ಷ ತಲೆಕೆಳಗಾಗಿ ತಪಸ್ಸುಮಾಡುವಂತೆ ಶಿವನು ಆತನಿಗೆ ಹೇಳಿದನು ಶುಕ್ರನು ಛಲದಿಂದ ಹಾಗೆಯೇ ತಪಸ್ಸು ಮಾಡಲಾರಂಭಿಸಿದನು ಈ ಸಮಯದಲ್ಲಿ ದೈತ್ಯರು ತಮ್ಮ ರಕ್ಷಣೆಗಾಗಿ ಶುಕ್ರನ ತಂದೆಯಾದ ಭೃಗುವಿನ ಆಶ್ರಮದಲ್ಲಿ ನೆಲೆಸಿದ್ದರು ದೇವತೆಗಳು ಅಲ್ಲಿಗೂ ಹೋಗಿ ದೈತ್ಯರನ್ನು ಆಕ್ರಮಿಸಿದರು ದೈತ್ಯರು ನೆಲೆಗಾಣದೆ ಭೃಗುವಿನ ಪತ್ನಿಗೆ ಶರಣಾದರು ಅವಳು ತನ್ನ ತಪೋಬಲದಿಂದ ದೈತ್ಯರನ್ನು ರಕ್ಷಿಸತೊಡಗಿದಳು. ಆಗ ಇಂದ್ರಪ್ರೇರಿತನಾದ ವಿಷ್ಣುವು ಸುದರ್ಶನ ಚಕ್ರದಿಂದ ಆಕೆಯನ್ನು ಸಂಹರಿಸಿದನು ಭೃಗುವು ಕುಪಿತನಾಗಿ ವಿಷ್ಣುವನ್ನು ಶಪಿಸಿದನು.

—ದೇ ಭಾಗ ೪-೧೧

೩

**ಕಾಂಚನೀಂ ಮಮ ಪತ್ನೀಂ ಚ ದೀಕ್ಷಾಯಾಂ ಜ್ಞಾಂಶ್ಚ ಕರ್ಮಣಿ ॥**

—ಪುಟ ೫೬೧

ತಿಲಕವ್ಯಾಖ್ಯಾನದಲ್ಲಿ ಹೀಗೆ ಹೇಳಿದೆ. ಯಜ್ಞದಲ್ಲಿ ಪತಿಯಂತೆ ಪತ್ನಿಗೂ ಯಾಜಮಾನ್ಯ ಉಂಟು ‘ಸ್ವಾಮಿನೋಽಗ್ನೇರ್ದೇವತಾಯಾಶ್ಚ ಶಬ್ದಾತ್ ಕರ್ಮಣಶ್ಚ ಪ್ರತಿನಿಧಿರ್ನಿವೃತ್ತಃ’ ಎಂಬ ಆಪಸ್ತಂಬ ಸೂತ್ರದಿಂದ ಯಜಮಾನನಿಗೆ ಪ್ರತಿನಿಧಿಯು ನಿಷಿದ್ಧವಾಗಿದೆ ಆದ್ದರಿಂದ ಸೀತಾದೇವಿಗೆ ಬದಲಾಗಿ ಸುವರ್ಣ ಪ್ರತಿಮೆಯನ್ನು ಪ್ರತಿನಿಧಿಯಾಗಿ ಇಟ್ಟುಕೊಳ್ಳುವುದು ಹೇಗೆ?—ಎಂದು ಶಂಕೆ

**ಯಸ್ಯ ಭಾರ್ಯಾನ್ಯದೇಶಸ್ಥಾ ನೇಷ್ಯತೇ ಪತಿನಾಥವಾ ।**
**ಅಶಕ್ತಾ ಪ್ರತಿಕೂಲಾ ವಾ ತಸ್ಯಾಃ ಪ್ರತಿನಿಧಿಕ್ರಿಯಾ ॥**

ಅನ್ಯೇ ಕುಶಮಯೀಂ ಪತ್ನೀಂ ಕೃತ್ವಾ ತು ಗೃಹಮೇಧಿನಃ ।
ಅಗ್ನಿಹೋತ್ರಮುಪಾಸಂತೇ ಯಾವಜ್ಜೀವಮನುವ್ರತಾಃ ॥
ಸೌವರ್ಣೀಂ ವಾ ಷೋಡಶಪಲೈರ್ಮಾಷಕೈಃ ಷೋಡಶೈರಪಿ ॥

ಮೃತಾಯಾಮಪಿ ಭಾರ್ಯಾಯಾಂ ವೈದಿಕೀಂ ನ ತ್ಯಜೇದ್ಬುಧಃ ।
ಉಪಾಧಿನಾಪಿ ತತ್ಕರ್ಮ ಯಾವಜ್ಜೀವಂ ಸಮಾಪಯೇತ್ ॥

ಇತ್ಯಾದಿ ಸ್ಮೃತಿವಚನಗಳಿಂದ ಪತ್ನಿಗೆ ಪ್ರತಿನಿಧಿಯು ಉಕ್ತವಾಗಿದೆಯೆಂದು ಸಮಾಧಾನ "ಈ ಪ್ರತಿನಿಧಿಕಲ್ಪನೆ ವೈದಿಕವಾದ ನಿತ್ಯವಿಧಿಗಳಿಗೇ ಹೊರತು ಕಾಮ್ಯಕರ್ಮಕ್ಕೆ ಅಲ್ಲ ಆದ್ದರಿಂದಲೇ ಆಪಸ್ತಂಬ ಸೂತ್ರವು ಉಪಪನ್ನ ವಾಗುತ್ತದೆ ಯಜ್ಞವಾದರೋ ಕಾಮ್ಯಕರ್ಮ ಇದರಲ್ಲಿ ಪ್ರತಿನಿಧಿಕಲ್ಪನೆ ಯುಕ್ತವಲ್ಲ" ಎಂದು ಮತ್ತೆ ಶಂಕೆ ಸುವರ್ಣಪ್ರತಿಮೆ ಇಲ್ಲಿ ಪ್ರತಿನಿಧಿಯಲ್ಲ ದೇವತಾಪ್ರತಿಮೆಯಲ್ಲಿರುವಂತೆ ಅದೇ ಸೀತೆಯೆಂದು ನಿಶ್ಚಿತಬುದ್ಧಿ ಇರುತ್ತದೆ ಶ್ರೀರಾಮನ ಮತ್ತು ಋಷಿಗಳ ಸಾಮರ್ಥ್ಯದಿಂದ ಆ ಪ್ರತಿಮೆಯಲ್ಲಿ ಸೀತೆಯ ಆವಾಹನೆ ಆದ್ದರಿಂದಲೇ ಕಾಂಚನೀ ಪತ್ನಿಯೆಂದು ಮೂಲದಲ್ಲಿ ಹೇಳಿದೆ, ಕಾಂಚನೀ ಪ್ರತಿಮೆಯೆಂದು ಹೇಳಿಲ್ಲ" ಎಂದು ಉತ್ತರ

